# ಗಾಂಧೀ ಮತ್ತು ಕರ್ನಾಟಕ

ಸಂಪಾದಕರು:

ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮ



# ಗಾಂಧೀ ಮತ್ತು ಕರ್ನಾಟಕ

*ಸಂಪಾದಕರು:*

ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮ

*ಸಹಾಯಕರು:*

ಶ್ರೀ ನಾರಾಯಣ ಸಂಗಮ
ಶ್ರೀ ಟಿ. ಭೀಮಾಚಾರ್ಯ
ಶ್ರೀ ಕೆ. ಶ್ರೀನಿವಾಸರಾವ
ಶ್ರೀ ರಾಮಚಂದ್ರ ವಡವಿ



ಹಿಂದ್ ಸ್ವರಾಜ್ಯ ಶತಮಾನೋತ್ಸವ ೨೦೦೮
ಗಾಂಧೀ ಸ್ಮಾರಕ ನಿಧಿ, ಬೆಂಗಳೂರು

**GANDHI AND KARNATAKA** : Edited by Sri Siddavanahalli Krishnasharma, Published by Sri H.R. Dasegowda, Secretary, Karnataka State Gandhi Smaraka Nidhi, Gandhi Bhavana, Kumara Park (East), Bangalore-560 001.

I Edition : 1970

II Edition : 2008

Pages : xxiv + 588

Price : **Rs. 200/-**

ಪ್ರಥಮ ಮುದ್ರಣ: ೨೨-೨-೧೯೭೦

ದ್ವಿತೀಯ ಮುದ್ರಣ: ೨೦೦೮

ಪುಟಗಳು: xxiv + ೫೮೮

ಬೆಲೆ: ರೂ. ೨೦೦/-

ಪ್ರಕಾಶಕರು:

**ಶ್ರೀ ಹೆಚ್.ಆರ್. ದಾಸೇಗೌಡ**

ಕಾರ್ಯದರ್ಶಿ

ಕರ್ನಾಟಕ ರಾಜ್ಯ ಗಾಂಧೀ ಸ್ಮಾರಕ ನಿಧಿ

"ಗಾಂಧೀಭವನ" ಕುಮಾರಾಪಾರ್ಕ್(ಪೂರ್ವ)

ಬೆಂಗಳೂರು-೫೬೦ ೦೦೧



ಮುದ್ರಕರು:

ಇಳಾ ಮುದ್ರಣ

ಬೆಂಗಳೂರು - ೫೬೦ ೦೨೬

✆ : ೨೬೭೫೭೧೫೯

# ಅಧ್ಯಕ್ಷರ ಹೃದ್ಗತ

(ಮೊದಲ ಮುದ್ರಣಕ್ಕೆ)

'ಗಾಂಧೀ ಮತ್ತು ಕರ್ನಾಟಕ' ಎಂಬ ಈ ಮಹದ್‌ಗ್ರಂಥದ ಪ್ರಕಟನೆಯ ಕಾರ್ಯ ಪೂರ್ಣವಾಗಿರುವುದನ್ನು ಕಂಡು ನನಗೆ ಹಿಡಿಸಲಾರದಷ್ಟು ಆನಂದವಾಗಿದೆ. ಏಕೆಂದರೆ, ಈ ಗ್ರಂಥಯೋಜನೆಯ ಕೆಲಸದಲ್ಲಿ ಉಂಟಾದ ವಿಘ್ನಗಳು, ಸಮಸ್ಯೆಗಳು, ಹಸ್ತಾಂತರಗಳು ಇವನ್ನೆಲ್ಲ ಕಣ್ಣಾರೆ ಕಂಡ ನನಗೆ ಈ ವಿಷಯದಲ್ಲಿ ಆಗಾಗ ನಿರಾಶೆಯ ನೆರಳು ಕವಿದದ್ದೂ ಉಂಟು. ಈ ಗ್ರಂಥ ಸಂಪಾದನದ ಭಾರ ಹೊತ್ತ ಶ್ರೀ ಕೃಷ್ಣಶರ್ಮರ ಅನಾರೋಗ್ಯವನ್ನು ತಿಳಿದಂತೂ ನನ್ನ ನಿರಾಶೆ ಇನ್ನೂ ಹೆಚ್ಚಿಹೋಗಿತ್ತು. ಆದರೆ ಕೈಕೊಂಡ ಈ ಕಾರ್ಯವನ್ನು ಪೂರೈಸಲು ಮುಂದೆ ಬಂದು, ಅನೇಕ ತಿಂಗಳುಗಳ ಕಾಲ, ಅದಕ್ಕಾಗಿ ದಿನವೂ ಗಂಟೆ ಗಟ್ಟಲೆ ಮನೋನಿವೇಶನದಿಂದ, ವಿಷಯ ಪರಿಶೀಲನೆ ಮಾಡುತ್ತ ಬೆಂಗಳೂರು ಗಾಂಧಿ ಸ್ಮಾರಕ ನಿಧಿಯ ಕೆಲವು ಸಮರ್ಥ ಕಾರ್ಯಕರ್ತರು ದುಡಿಯುತ್ತಿದ್ದ ದೃಶ್ಯವನ್ನು ನೋಡಿ ನನಗೆ ಆಶಾಕಿರಣ ಪುನಃ ಮೂಡಿದಂತಾಯಿತು.

ಈ ಗ್ರಂಥಸಂಯೋಜನೆಯ ಕಾರ್ಯದಲ್ಲಿ ಸಂಪಾದಕರಷ್ಟೆ ಈ ಸಹಾಯಕ ವರ್ಗದವರೂ ಬಹಳ ಮಹತ್ವದ ಪಾತ್ರ ವಹಿಸಿದ್ದಾರೆ. ಆದ್ದರಿಂದ ಸಂಪಾದಕರೊಂದಿಗೆ ಈ ಸಹಾಯಕ ವರ್ಗವನ್ನೂ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಸಹಾಯಕ ವರ್ಗದವರೆಂದರೆ, ಸರ್ವಶ್ರೀ ನಾರಾಯಣ ಸಂಗಮ, ಟಿ. ಭೀಮಾಚಾರ್ಯ, ಕೆ. ಶ್ರೀನಿವಾಸರಾವ ಮತ್ತು ರಾಮಚಂದ್ರ ವಡವಿ ಇವರುಗಳು.

ಗಾಂಧೀ ಶತಾಬ್ದದ ನಿಮಿತ್ತ ಪ್ರಕಟವಾಗುತ್ತಿರುವ ಅಮೂಲ್ಯವಾದ ಈ ಮಹದ್‌ಗ್ರಂಥ ವನ್ನು, ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿಯ ಪರವಾಗಿ ಕನ್ನಡಿಗರಿಗೆ ಸಮರ್ಪಿಸಲು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಮುಂದಿನ ತಲೆಮಾರಿನವರಿಗೆ ಗಾಂಧೀಜಿಯ ಬಗೆಗೂ, ಕರ್ನಾಟಕದೊಂದಿಗೆ ಬಂದ ಗಾಂಧೀಜಿಯ ಸಂಬಂಧದ ಬಗೆಗೂ ಇದೊಂದು ಉಪಯುಕ್ತವೂ ಮಾರ್ಗದರ್ಶಕವೂ ಆದ ಗ್ರಂಥವಾಗುವುದೆಂಬಲ್ಲಿ ನನಗೆ ಸಂದೇಹವೇ ಇಲ್ಲ.

ಗ್ರಂಥ ಪ್ರಕಟನೆಯ ಯಶಸ್ಸಿಗೆ ಕಾರಣರಾದವರನ್ನೆಲ್ಲ ನಾನು ಮತ್ತೊಮ್ಮೆ ಹೃತ್ಪೂರ್ವಕ ಅಭಿನಂದಿಸುತ್ತೇನೆ.

**ಟೇಕೂರು ಸುಬ್ರಹ್ಮಣ್ಯಂ**
ಅಧ್ಯಕ್ಷ
ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿ

ಬಳ್ಳಾರಿ
೧೫-೨-೧೯೭೦

# ಮುನ್ನುಡಿ

(ಮೊದಲ ಮುದ್ರಣಕ್ಕೆ)

ಈಗ ತಾನೆ ಭಾರತದಲ್ಲಿ ಅಷ್ಟೇ ಅಲ್ಲ, ವಿಶ್ವದಲ್ಲೆಲ್ಲ ಗಾಂಧೀ ಶತಾಬ್ದಿ ಆಚರಿಸಲಾಯಿತು. ಈ ಸಂದರ್ಭದಲ್ಲಿ ಅಪಾರವಾದ ಗಾಂಧೀ ವಾಙ್ಮಯ ದೇಶ ದೇಶಾಂತರಗಳಲ್ಲಿ ಪ್ರಕಟವಾಗಿದೆ. ಇನ್ನೂ ಪ್ರಕಟವಾಗುತ್ತಲಿದೆ. ಗಾಂಧೀ ಸಂದೇಶವು ಮಾನವ ಪ್ರಗತಿಗೆ ಸಮರ್ಪಕವೆನಿಸುವವರೆಗೆ ಈ ಬಗೆಯ ಗಾಂಧೀ ಸಾಹಿತ್ಯ ಪ್ರಕಟವಾಗುತ್ತಲೆ ಇರುವುದು.

ಈ ಸಮಯದಲ್ಲಿ ಭಾರತದಲ್ಲಿಯೂ ವಿಧ ವಿಧದ ಗಾಂಧೀ ಸಾಹಿತ್ಯ ಪ್ರಕಟವಾಗುತ್ತಿದೆ, ಬರೆಯಲಾಗುತ್ತಿದೆ. ಭಾರತದ ಮೂಲೆ ಮೂಲೆಗಳಿಗೆ ಗಾಂಧೀಜಿ ಭೆಟ್ಟಿಕೊಟ್ಟಿರುವರು. ಅಲ್ಲಿಯ ಜನಗಳಿಗೆ ಸ್ಫೂರ್ತಿಕೊಟ್ಟು ಸತ್ಕಾರ್ಯದಲ್ಲಿ ತೊಡಗಿಸಿರುವರು. ಅವರು ಮಾಡಿದ ಜಾಗೃತಿಯ ಮೂಲಕ, ತೋರಿಸಿದ ದಾರಿಯ ಮೇರೆಗೆ ಹಲವಾರು ಸಂಸ್ಥೆ ಸಂಘಟನೆಗಳು, ಲಕ್ಷಾಂತರ ಜನರು ಬೇರೆ ಬೇರೆ ರೀತಿಯಿಂದ ಲೋಕಸೇವೆ ಮಾಡುತ್ತಲಿರುವರು. ಕರ್ನಾಟಕವು ಈ ಮಾತಿಗೆ ಹೊರತಲ್ಲ.

ಗಾಂಧೀ ಸ್ಮಾರಕ ನಿಧಿಯು, ಈ ವಿಷಯದಲ್ಲಿ ಆಯಾ ಪ್ರಾಂತಿಕ ಭಾಷೆಗಳಲ್ಲಿ ಗಾಂಧೀ ಸಾಹಿತ್ಯ ನಿರ್ಮಾಣದ ಕಾರ್ಯವನ್ನು ಕೈಕೊಂಡಿದೆ. ಆಯಾ ಪ್ರಾಂತಗಳಿಗೆ ಗಾಂಧೀಜಿಯವರು ಭೇಟಿಕೊಟ್ಟ ಸಂದರ್ಭಗಳು, ಅಲ್ಲಿ ಅವರು ಮಾಡಿದ ಭಾಷಣಗಳು, ಪ್ರವರ್ತಿಸಿದ ಕಾರ್ಯಗಳು, ಆಯಾ ಪ್ರಾಂತ್ಯದ ಬಗ್ಗೆ ಬರೆದ ಲೇಖನಗಳು, ಅಲ್ಲಿಯ ಜನರಿಗೆ ಬರೆದ ಪತ್ರಗಳು, ಅಲ್ಲಿ ದೊರೆಯುವ ಛಾಯಾಚಿತ್ರಗಳು ಇವುಗಳನ್ನೆಲ್ಲ ಒಳಗೊಂಡು ಗ್ರಂಥವೊಂದನ್ನು ಪ್ರಕಟಿಸುವುದೂ ಆ ಕಾರ್ಯಕ್ರಮದಲ್ಲಿ ಒಂದು ಹೆಜ್ಜೆ. ಈ ಬಗೆಯ ಗ್ರಂಥಗಳು ಅತ್ಯಂತ ಉದ್ಬೋಧಕವೂ ಈವರೆಗೆ ಪ್ರಕಟವಾಗದೆ ಇದ್ದ ಅನೇಕ ಸಂಗತಿಗಳಿಂದ ಕೂಡಿದವೂ ಇರುವವು. ಈಗ "ಗಾಂಧೀ ಮತ್ತು ಕರ್ನಾಟಕ" ಎಂಬ ಆ ಬಗೆಯ ಗ್ರಂಥವು ನಮ್ಮ ಕೈ ಸೇರುತ್ತಿದೆ.

ಗಾಂಧೀಜಿಯವರು ಕರ್ನಾಟಕದಲ್ಲಿ ಬಹಳಸಾರೆ ಅಥವಾ ಎಲ್ಲ ಕಡೆಗೆ ಹೋಗಿದ್ದರು ಅಥವಾ ಬಂದಿದ್ದರು ಎಂದು ಹೇಳಲಿಕ್ಕಾಗುವುದಿಲ್ಲ. ಆದರೆ ಕರ್ನಾಟಕವು ಗಾಂಧೀ ಪ್ರಾಂತ ಎಂದೆನಿಸಿಕೊಂಡಿತ್ತು. ಒಂದೇ ಒಂದು ಕಾಂಗ್ರೆಸ್ ಅಧಿವೇಶನಕ್ಕೆ ಗಾಂಧೀಜಿ ಅಧ್ಯಕ್ಷರಾಗಿದ್ದರು, ಅದೂ ಬೆಳಗಾಂವಿಯಲ್ಲಿ, ಕರ್ನಾಟಕದಲ್ಲಿ. ಕರನಿರಾಕರಣೆಯ ಅತ್ಯಂತ ನಿಕರದ ಚಳುವಳಿ ಕರ್ನಾಟಕದಲ್ಲಿ ನಡೆಯಿತು. ಗಾಂಧೀ ಭಕ್ತರು. ಅನುಯಾಯಿಗಳು, ವಿಧಾಯಕ ಕಾರ್ಯಕ್ರಮಗಳಲ್ಲಿ ತೊಡಗಿದ ಸಾವಿರಾರು ಜನರು ಇನ್ನೂ ಕರ್ನಾಟಕದಲ್ಲಿ ಕಂಗೊಳಿಸುವರು. ಕರ್ನಾಟಕದ ವಾಙ್ಮಯದ ಮೇಲೆ ಗಾಂಧೀ ವಿಚಾರ ಧಾರೆ ಸಾಕಷ್ಟು ಪರಿಣಾಮ ಮಾಡಿದ್ದುಂಟು. ಹೀಗೆಲ್ಲ ಇರುವ ಮೂಲಕ ಈ ಗ್ರಂಥ ಎಲ್ಲರಿಗೂ ಒಂದು ಒಳ್ಳೆಯ ಕೈಗನ್ನಡಿಯಂತೆ ಉಪಯುಕ್ತವೆನಿಸುವದು.

ಹಲ ಕೆಲವು ಹಿರಿಯರು, ನಮಗೆಲ್ಲ ಗೊತ್ತಿದೆ, ಈ ಪುಸ್ತಕದಲ್ಲಿ ಹೆಚ್ಚಿನದೇನು ಇರಬಲ್ಲದು ಎಂದು ಹೇಳಬಹುದು. ಆದರೆ ಒಂದೆರಡು ಉದಾಹರಣೆ ನೋಡಿದರೆ ಈ ಪುಸ್ತಕದಲ್ಲಿ ಎಷ್ಟು ವಿವಿಧ ಹಾಗೂ ಅನೇಕರಿಗೆ ಗೊತ್ತಿರದ ಸಂಗತಿಗಳು ಇವೆ ಎಂಬುದು ವಿಧಿತವಾಗುವದು.

ಹರಿಜನ ಕಾರ್ಯಕ್ಕಾಗಿ ಗಾಂಧೀಜಿ ಕರ್ನಾಟಕದ ಪ್ರವಾಸವನ್ನು ಕೈಕೊಂಡಾಗ (೧೯೩೪-೩೫) ಸಿದ್ದಾಪುರ ಸಂದರ್ಶಿಸಿದರು. ಅಲ್ಲಿ ಒಬ್ಬರು ಅವರಿಗೆ ಉಂಗುರವನ್ನು ದಾನವಾಗಿ ಕೊಟ್ಟರು. ಗಾಂಧೀಜಿ ಅಂದರು, "ಒಳ್ಳೇ ಕೆಲಸ. ನಿಮಗೆ ಹಗುರವಾಯಿತು. ಆ ಅಸಡ್ಡೆ ಪದಾರ್ಥವನ್ನು ನನಗೆ ಕೊಟ್ಟುಬಿಟ್ಟಿರಿ." ಎಲ್ಲರಿಗೂ ಆಶ್ಚರ್ಯ, ನಗು!"

ಬೆಂಗಳೂರಲ್ಲಿ ಗಾಂಧೀಜಿಗೆ ಕೌಟಿಲ್ಯನ ಸಂಸ್ಕೃತ ಅರ್ಥಶಾಸ್ತ್ರವನ್ನು ಆಂಗ್ಲ ಭಾಷೆಗೆ ಪರಿವರ್ತಿಸಿದ ಡಾ॥ ಶಾಮಾಶಾಸ್ತ್ರಿಯವರು ಭೇಟಿಯಾಗಿದ್ದರು. ಎಲ್ಲ ಕಡೆಗೆ ಆಶ್ರಮಗಳನ್ನು ಸ್ಥಾಪಿಸಿರಿ, ಎಂದು ಅವರ ಆಗ್ರಹ. ಆಗ ಗಾಂಧೀಜಿ ಒಂದು ಆಶ್ರಮ ಕಟ್ಟಿ ನಡೆಸಬೇಕಾದರೆ ತಮಗೆ ಆದ ಪರಿಶ್ರಮ-ಕಷ್ಟ ಇವುಗಳನ್ನು ಬಹಳ ಸ್ವಾರಸ್ಯವಾಗಿ ನಿವೇದಿಸಿದ್ದಾರೆ. ಅದು ಬಹಳ ಅನುಭವಸಿದ್ಧವಾಣಿ.

ಗೀತೆಯ ಬಗ್ಗೆ ಕರ್ನಾಟಕದಲ್ಲಿಯ ಒಬ್ಬ ಪಾದ್ರಿಯೊಡನೆ ಚರ್ಚೆ ಮಾಡುವಾಗ ಗಾಂಧೀಜಿ ಹೇಳಿದ ಮಾತನ್ನು "ಯಂಗ್ ಇಂಡಿಯಾದಲ್ಲಿ (೮-೯-೧೯೨೭) ಹೀಗೆ ಪ್ರಕಟವಾಗಿದೆ: "ಗೀತೆ ತತ್ವಶಾಸ್ತ್ರವೂ ಅಹುದು ಭಕ್ತಿಕಾವ್ಯವೂ ಅಹುದು. ಇಡೀ ವಿಶ್ವಕ್ಕೆ ಕೊಟ್ಟ ಸಂದೇಶವದು." ಎಷ್ಟು ಸುಂದರವಾಗಿದೆ, ಗೀತೆಯ ಲಕ್ಷಣದ ಈ ವರ್ಣನೆ.

ಕರ್ನಾಟಕದ ಸಿಂಹ ಎಂದೆನಿಸಿಕೊಂಡ ಬೆಳಗಾಂವಿಯ ದೇಶಪಾಂಡೆ ಗಂಗಾಧರ ರಾಯರಿಗೆ ಬರೆದ ಪತ್ರದ ಮೊದಲನೆ ವಾಕ್ಯ ಈ ಕೆಳಗಿನಂತಿದೆ. ಅದು ೧೯೨೧ನೇ ಇಸವಿ. ಅಹಿಂಸಾತ್ಮಕ ಅಸಹಕಾರ ಒಳ್ಳೆ ಭರದಿಂದ ಸಾಗಿತ್ತು. ಗಂಗಾಧರರಾಯರಿಗೆ ರಾಜದ್ರೋಹಿ ಭಾಷಣಕ್ಕಾಗಿ ಸೆಪ್ಟೆಂಬರದಲ್ಲಿ ೬ ತಿಂಗಳ ಶಿಕ್ಷೆ ವಿಧಿಸಲಾಗಿತ್ತು. ಗಾಂಧೀಜಿ ಬರೆಯುತ್ತಾರೆ. "ಸೆರೆಮನೆಯ ಬಹುಮಾನವನ್ನು ಪಡೆಯುವ ಸುಪ್ರಸಂಗ ನಿಮಗೆ ಈಗ ಬಂದಿದೆ ಎಂದು ಕೇಳಿದೆ. ಅಂಥ ಸುದೈವ ನನ್ನ ಪಾಲಿಗೆ ಬರಲಿಲ್ಲವಲ್ಲ ಎಂದು ನನಗೆ ಅಸೂಯೆ..."ಮುಂದೆ ಗಾಂಧೀಜಿಗೆ ಮೇ ೧೯೨೨ರಲ್ಲಿ ೬ ವರ್ಷ ಶಿಕ್ಷೆ ಆಯಿತು.

ವಿಷಯ ಐತಿಹಾಸಿಕ. ಬರಹಗಾರರು ಶ್ರೀ ಕೃಷ್ಣಶರ್ಮರು. ಅವರದೇ ಒಂದು ಕಥಾಸರಣಿ; ಸರಲ ಸುಲಭ, ಮನೋವೇಧಕ. ಈ ಗ್ರಂಥ ಬರೀ ಒಂದು ಕತೆಯಲ್ಲ. ಭಾರತದಲ್ಲಿ ವಿದ್ಯುತ್ ಸಂಚಾರದಂತೆ ತಿರುಗಾಡಿ ನವಚೈತನ್ಯವನ್ನುಂಟು ಮಾಡಿದ ಮಹಾಮಹಿಮರ ನಿಕಟ ಸಂಪರ್ಕದ ಝಳಕು ಇದು. ಇದು ಸಂಗ್ರಾಹ್ಯ, ವೇದ್ಯ, ಪಾಠಯೋಗ್ಯ.

ರಂಗನಾಥ ದಿವಾಕರ
ಅಧ್ಯಕ್ಷ
ಅಖಿಲ ಭಾರತ ಗಾಂಧೀ ಸ್ಮಾರಕ ನಿಧಿ
ಹೊಸದಿಲ್ಲಿ

ಬೆಂಗಳೂರು
೨೦-೨-೧೯೭೦

# ಪ್ರಕಾಶಕರ ಮಾತು

(ಮೊದಲ ಮುದ್ರಣಕ್ಕೆ)

ಗಾಂಧೀಜಿಯ ಬರಹಗಳು, ಭಾಷಣಗಳು ಈಗಾಗಲೇ ಎಲ್ಲ ಭಾಷೆಗಳಲ್ಲಿ ಪ್ರಸಿದ್ಧವಾಗಿದ್ದು ಕನ್ನಡದಲ್ಲಿಯೂ ಆಗಿವೆ. ಆದರೆ ಗಾಂಧೀಜಿ ಪ್ರತಿಯೊಂದು ಪ್ರಾಂತದಲ್ಲಿ ಪ್ರವಾಸ ಮಾಡಿದಾಗ, ಅಲ್ಲಿನ ಜನರನ್ನು ಕುರಿತು ಮಾಡಿದ ಭಾಷಣಗಳು, ಆಯಾ ಪ್ರಾಂತಕ್ಕೆ ಸಂಬಂಧಿಸಿದ ಅವರ ಲೇಖನಗಳು ಮತ್ತು ಆಯಾ ಪ್ರಾಂತಗಳಲ್ಲಿ ತೆಗೆದುಕೊಂಡ ಅವರ ಪ್ರಾಸಂಗಿಕ ಭಾವಚಿತ್ರಗಳು – ಇತ್ಯಾದಿ ವಿವಿಧ ವಿವರಗಳನ್ನು ಒಳಗೊಂಡ ಗ್ರಂಥ ಒಂದನ್ನು ಪ್ರತಿಯೊಂದು ಪ್ರಾಂತೀಯ ಭಾಷೆಯಲ್ಲಿಯೂ, ಗಾಂಧೀ ಶತಾಬ್ದದ ಸಮಯಕ್ಕೆ ಪ್ರಕಟಿಸಬೇಕೆಂದು, ದಿಲ್ಲಿಯ ಕೇಂದ್ರ ಗಾಂಧೀ ಸ್ಮಾರಕ ನಿಧಿಯವರು ನಿರ್ಧರಿಸಿದರು. ಅದಕ್ಕೆ ಅನುಗುಣವಾಗಿ ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ಈ ಸಂಸ್ಥೆಯವರು ಈ ಕಾರ್ಯವನ್ನು, ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಕೈಗೊಂಡರು.

ಈ ದಿಸೆಯಲ್ಲಿ ಕಾರ್ಯ ಪ್ರಾರಂಭ ಮಾಡಿ ಸುಮಾರು ಎರಡು ವರ್ಷಗಳ ಮೇಲಾದವು. ಈ ಗ್ರಂಥದಲ್ಲಿ ಗಾಂಧೀಜಿ ಅವರ ಲೇಖನ-ಭಾಷಣಗಳ ಹೊರತಾಗಿ, ಗಾಂಧೀಜಿಯ ಜೊತೆಗೆ ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷ ಸಂಪರ್ಕ ಬಂದ ಕನ್ನಡಿಗರ ವ್ಯಕ್ತಿಗತ ನೆನಹುಗಳನ್ನೂ, ಪತ್ರವ್ಯವಹಾರಗಳನ್ನೂ, ಭಾವಚಿತ್ರಗಳನ್ನೂ ಸಂಗ್ರಹಿಸಿ ಪ್ರಕಟಿಸಬೇಕೆಂದು ಗೊತ್ತುಮಾಡಿದೆವು. ಆದರೆ ಇದು ಕಷ್ಟದ ಕಾರ್ಯವಾಗಿ ಪರಿಣಮಿಸಿತು. ಈ ಬಗ್ಗೆ ಅನೇಕ ಸಲ ಪತ್ರಿಕಾ ಪ್ರಕಟನೆಗಳನ್ನು ಕೊಟ್ಟು, ಸಂಬಂಧಿಸಿದವರಿಗೆಲ್ಲ, ಗಾಂಧೀಜಿಯ ಬಗ್ಗೆ ತಮ್ಮ ತಮ್ಮ ನೆನಹು, ಪತ್ರ ಇತ್ಯಾದಿ ಕಳಿಸಿಕೊಡಬೇಕೆಂದು ಬಿನ್ನವಿಸಿಕೊಳ್ಳಲಾಗಿತ್ತು. ಇದಕ್ಕೆ ನಮಗೆ ತ್ವರಿತ ಪ್ರೋತ್ಸಾಹ ದೊರಕಲಿಲ್ಲವೆಂದೇ ಹೇಳಬೇಕು. ಇದರಿಂದಾಗಿ, ಸರ್ವಶ್ರೀ ವಿ.ಎಸ್. ನಾರಾಯಣರಾವ, ವ್ಹಿ.ಬಿ. ನಾಯಕ, ಹ.ರಾ. ಪುರೋಹಿತ, ಈ ಮೂವರನ್ನೂ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಮೇಲ್ಕಾಣಿಸಿದ ಸಾಮಗ್ರಿಯನ್ನು ಸಂಗ್ರಹಿಸಲು ಕೇಳಿಕೊಳ್ಳಲಾಯಿತು. ಶ್ರೀ ವಿ.ಎಸ್. ನಾರಾಯಣರಾಯರು ಅನೇಕರಿಗೆ ಪತ್ರ ಬರೆದು, ಪ್ರತ್ಯಕ್ಷ ಭೆಟ್ಟಿಯಾಗಿ, ಹಾಗೂ ಹಳೆಯ ವೃತ್ತಪತ್ರಿಕೆಗಳಿಂದ ವಿಷಯ ಆಯ್ದು ಕೆಲವೊಂದು

ಸಾಮಗ್ರಿಯನ್ನು ಸಂಗ್ರಹಿಸಿದರು. ಶ್ರೀ ಪ್ಪಿ.ಬಿ. ನಾಯಕರು, ಹಳೆಯ "ಕರ್ನಾಟಕ ವೈಭವ"ದಲ್ಲಿ ಹಿಂದೆ ಪ್ರಕಟವಾದ ಗಾಂಧೀಜಿಗೆ ಸಂಬಂಧಿಸಿದ ಲೇಖನಗಳನ್ನು ಒದಗಿಸಿದರು. ಅದೇ ಬಗೆಯಾಗಿ, ಶ್ರೀ ಹ.ರಾ. ಪುರೋಹಿತರು "ಕರ್ಮವೀರ" ಮತ್ತು "ಸಂಯುಕ್ತ ಕರ್ನಾಟಕ" ಪತ್ರಿಕೆಗಳ ಹಳೆಯ ಸಂಪುಟಗಳಿಂದ ವಿಷಯ ಸಂಗ್ರಹ ಮಾಡಿ ಕಳಿಸಿಕೊಟ್ಟರು. ಶ್ರೀ ವಿ.ಎಸ್. ನಾರಾಯಣರಾಯರು ಗಾಂಧೀಜಿಯ ಕೆಲವು ಲೇಖನಗಳನ್ನು ಅನುವಾದಿಸಿ ಕೊಟ್ಟಿದ್ದಾರೆ. ಸಂದರ್ಭೋಚಿತವಾಗಿ ಇವನ್ನೆಲ್ಲ ಈ ಗ್ರಂಥದಲ್ಲಿ ಬಳಸಿದ್ದಿದೆ.

ಈ ಪುಸ್ತಕಕ್ಕೆ ಮೂಲಾಧಾರವೆಂದರೆ–ಮುಖ್ಯವಾಗಿ ಗಾಂಧೀಜಿಯ "ಯಂಗ್ ಇಂಡಿಯಾ". "ಹರಿಜನ" ಪತ್ರಿಕೆಗಳು, ಶ್ರೀ ಮಹಾದೇವ ದೇಸಾಯಿ ಅವರ ದಿನಚರಿ, ಪ್ಯಾರೇಲಾಲರ "LAST PHASE" ಎಂಬ ಗ್ರಂಥ, ಗಾಂಧೀಜಿ ಅವರ ಸಂಕಲಿತ ಕೃತಿಗಳ ಸಂಪುಟಗಳು ("Collected works of Gandhi"), ೧೯೩೭ರ ಹುದಲಿ ಗಾಂಧೀ ಸೇವಾ ಸಂಘ ಸಮ್ಮೇಳನದ ವರದಿ, ಶ್ರೀ ತೆಂಡೂಲಕರರ "ಮಹಾತ್ಮಾ ಗಾಂಧೀ" ಸಂಪುಟಗಳು, ಡಾ॥ ಪಟ್ಟಾಭಿ ಸೀತಾರಾಮಯ್ಯ ಅವರ ಕಾಂಗ್ರೆಸ್ ಇತಿಹಾಸ, ಮತ್ತು ಶ್ರೀ ರಾಮಚಂದ್ರ ವಡವಿ ಅವರು ಕನ್ನಡಿಸಿದ ಶ್ರೀ ಗಂಗಾಧರರಾವ ದೇಶಪಾಂಡೆ ಅವರ ಆತ್ಮಚರಿತ್ರೆ ಇವೇ ಮೊದಲಾದವುಗಳು.

ಗಾಂಧೀಜಿ ಮೊಟ್ಟಮೊದಲು ಬೆಂಗಳೂರಿಗೆ ಬಂದದ್ದು ೧೯೧೫ರಲ್ಲಿ. ಅದರ ವಿವರ ತಕ್ಕಮಟ್ಟಿಗೆ ಗೋಖಲೆ ಸಾರ್ವಜನಿಕ ಸಂಸ್ಥೆಯ ರಜತ ಮಹೋತ್ಸವ ಸ್ಮರಣ ಸಂಚಿಕೆಯಲ್ಲಿದೆ. ಅದನ್ನು ಇಲ್ಲಿ ಉಪಯೋಗಿಸಿಕೊಳ್ಳಲು ನಮಗೆ ಕೊಟ್ಟ ಶ್ರೀ ಡಿ.ವಿ. ಗುಂಡಪ್ಪನವರಿಗೆ ನಾವು ತುಂಬಾ ಕೃತಜ್ಞರು.

ಈ ಎಲ್ಲ ಸಾಮಗ್ರಿಯೊಂದಿಗೆ ಗ್ರಂಥಗ್ರಥನ ಕಾರ್ಯ ಪ್ರಾರಂಭವಾಯಿತು. ಗ್ರಂಥದ ಸಂಪಾದನದ ಹೊಣೆಯನ್ನು ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರಿಗೆ ಒಪ್ಪಿಸಲಾಯಿತು. ಗ್ರಂಥ ಸಂಯೋಜನೆಯ ಪ್ರಾರಂಭಿಕ ದೆಸೆಯಲ್ಲಿ ಶ್ರೀ ಕೃಷ್ಣಶರ್ಮರ ಆರೋಗ್ಯ ಸರಿಯಾಗಿತ್ತು. ಮುಂದೆ ಅವರ ಆರೋಗ್ಯ ಕೆಟ್ಟಾಗ್ಯೂ ಶ್ರೀಯುತರು ಕೈಗೊಂಡ ಕೆಲಸ ಬಿಡದೆ, ಶ್ರೀ ಕೆ. ಶ್ರೀನಿವಾಸರಾಯರ ನೆರವಿನಿಂದ ಕೆಲಸ ಮುಂದುವರಿಸಿ ಒಂದು ಹಂತಕ್ಕೆ ತಂದರು. ಅವರು ಸಿದ್ಧಗೊಳಿಸಿದ ಕೈಬರಹದ ಪ್ರತಿಯನ್ನು ಶ್ರೀ ಕೆ. ಸಂಪದ್ಗಿರಿರಾಯರು ಮತ್ತು ಶ್ರೀ ರಂಗನಾಥ ದಿವಾಕರರು ಅವಲೋಕಿಸಿ ಕೆಲವೊಂದು ಸಲಹೆ ಸೂಚನೆಗಳನ್ನು ಕೊಟ್ಟರು. ಅವುಗಳನ್ನು ಈ ಗ್ರಂಥದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಮೇಲ್ಕಾಣಿಸಿದ ವಿಷಯ ಸಂಚಯನದಲ್ಲಿ, ಗಾಂಧೀಜಿಯ ಪ್ರವಾಸ ವೃತ್ತ, ಅವರ ಲೇಖನ, ಭಾಷಣ ದೊರೆತವು. ಆದರೆ ವೈಯಕ್ತಿಕ ನೆನಹುಗಳು ಮತ್ತು ಪತ್ರವ್ಯವಹಾರಗಳು ಸಾಕಷ್ಟು ಪ್ರಮಾಣದಲ್ಲಿ ದೊರಕಲಿಲ್ಲ. ಆದ್ದರಿಂದ ಆಮೇಲೆ ನಾವು ನಮಗೆ ಗೊತ್ತಿದ್ದ ಅನೇಕ ಕಾರ್ಯಕರ್ತರಿಗೆ ಮತ್ತು ಮುಖಂಡರಿಗೆ ವ್ಯಕ್ತಿಗತ ಪತ್ರಗಳನ್ನು ಬರೆದು ತಮ್ಮ ನೆನಹು, ಹಾಗು ಪತ್ರವ್ಯವಹಾರ ಕಳಿಸಿಕೊಡಲು ಬಿನ್ನವಿಸಿಕೊಳ್ಳಲಾಗಿ ಅನೇಕರು

ಕಳಿಸಿಕೊಟ್ಟರು. ಪುಸ್ತಕ ಮುದ್ರಣವು ಮುಂದುವರಿದಂತೆ ಇನ್ನೂ ಕೆಲವರಿಂದ ನೆನೆಹುಗಳು ಬರತೊಡಗಿದವು. ಇದಲ್ಲದೆ, ಇನ್ನು ಕೆಲವು ಸಂದರ್ಭಗಳಲ್ಲಿ ಶ್ರೀ ನಾರಾಯಣ ಸಂಗಮರು ಕೆಲವರನ್ನು ಸಂದರ್ಶಿಸಿ ಅವರಿಂದ ವಿಷಯ ಕೇಳಿ ತಿಳಿದುಕೊಂಡು ಬಂದರು. ಅವನ್ನೂ ಇಲ್ಲಿ ಸೇರಿಸಿದ್ದಿದೆ. ಅನೇಕರು ತಮ್ಮ ಸ್ಮರಣ ಕಥನವನ್ನು ಸುದೀರ್ಘವಾಗಿ ಪುಟಗಟ್ಟಲೆ ಕಳಿಸಿದುದೂ ಉಂಟು. ಸ್ಥಳಾಭಾವದ ಮೂಲಕ ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಆಯ್ದುಕೊಂಡದ್ದಿದೆ.

ಈ ವಿಷಯದಲ್ಲಿ ಪ್ರತ್ಯಕ್ಷವಾಗಿಯೂ, ಅಪ್ರತ್ಯಕ್ಷವಾಗಿಯೂ ನಮ್ಮೊಡನೆ ಸಹಕರಿಸಿದ ಮಹನೀಯರಿಗೆಲ್ಲ ನಿಧಿಯು ಉಪಕೃತವಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಗಾಂಧೀಜಿಯ ಬಗೆಗೆ ಇರುವ ವಿಷಯಗಳನ್ನು ಒಳಗೊಂಡ ೧೯೨೪, ೧೯೨೭, ೧೯೩೬, ೧೯೩೭ ಈ ವರ್ಷಗಳ "ಯಂಗ್ ಇಂಡಿಯಾ" ಮತ್ತು "ಹರಿಜನ" ಸಂಪುಟಗಳು ನಮಗೆ ದೊರೆತವು. ಆದರೆ ೧೯೩೪ರ "ಹರಿಜನ" ಸಂಪುಟದಲ್ಲಿಯೂ ನಮಗೆ ಬೇಕಾದ ವಿಷಯಗಳಿದ್ದು, ಅದು ನಮಗೆ ಲಭಿಸಲಿಲ್ಲ. ದಿಲ್ಲಿಯ ಗಾಂಧೀ ನಿಧಿಯ ಕಛೇರಿಗೆ ಬರೆದು ಶ್ರೀ ಎನ್.ಎನ್.ಯಾಜಿ ಅವರಿಂದ ಆ ವರ್ಷದ ಗಾಂಧೀಜಿಯ ಕರ್ನಾಟಕ ಹರಿಜನ ಪ್ರವಾಸದ ವಿವರಗಳನ್ನು ಟೈಪ್ ಮಾಡಿಸಿ ತರಿಸಿ ಕೊಳ್ಳಲಾಯಿತು. "ಬಾಪೂ ದರ್ಶನ" ಗ್ರಂಥದಿಂದ ಶ್ರೀ ಚೆಂಗಲರಾಯರೆಡ್ಡಿ, ಹಾಗೂ ದಿವಂಗತ ಶ್ರೀ ಹಿರಳ್ಳಿ ದಾಸಪ್ಪನವರ ನೆನಹುಗಳನ್ನು ಸಂಗ್ರಹಿಸಿಕೊಂಡಿದೆ. ಹೀಗೆ ನಾನಾ ವಿಧವಾಗಿ ಈ ಗ್ರಂಥಕ್ಕೆ ಸಾಮಗ್ರಿಯನ್ನು ಒದಗಿಸಿದ ಮಹನೀಯರಿಗೂ, ಗ್ರಂಥಕರ್ತರಿಗೂ, ಪ್ರಕಾಶಕರಿಗೂ, ಪತ್ರಿಕಾಕರ್ತರಿಗೂ ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿಯು ಉಪಕೃತವಾಗಿದೆ.

ಶ್ರೀ ಆರ್.ಎಸ್. ಹುಕ್ಕೇರಿಕರ ಅವರ ಗಾಂಧೀಜಿಯ ಬಗ್ಗೆ ಕೊಟ್ಟ ಸಂಸ್ಮರಣೆಯನ್ನು ಧಾರವಾಡ ಆಕಾಶವಾಣಿಯಿಂದ ಪಡೆದುಕೊಂಡದ್ದಿದೆ. ಶ್ರೀ ಮಂಜಪ್ಪ ಹರ್ಡೇಕರ ಅವರ ಗಾಂಧೀಜಿಯ ಬಗೆಗಿದ್ದ ಸಂಸ್ಮರಣೆಯನ್ನು ಪ್ರೊ. ಜಿ.ಎಸ್. ಹಾಲಪ್ಪನವರು ಬರೆದ "ರಾಷ್ಟ್ರ ದ್ರಷ್ಟಾರ ಮಂಜಪ್ಪ ಹರ್ಡೇಕರ" ಎಂಬ ಗ್ರಂಥದಿಂದ ಆಯ್ದುಕೊಂಡಿದೆ. ಕರ್ನಾಟಕದ ಕೆಲವು ಕಾರ್ಯಕರ್ತರು, ಗಾಂಧೀಜಿ ತಮಗೆ ಬರೆದ ಪತ್ರಗಳನ್ನು ಕಳಿಸಿದ್ದಾರೆ. ಅವುಗಳನ್ನು ಇಲ್ಲಿ ಅವುಗಳ ಭಾವಚಿತ್ರಗಳೊಂದಿಗೆ ಪ್ರಕಟಿಸಲಾಗಿದೆ. ಇನ್ನು ಕೆಲವು ಪತ್ರಗಳನ್ನು "ಸಂಯುಕ್ತ ಕರ್ನಾಟಕದ 'ಗಾಂಧೀ ಶತಾಬ್ದಿ ಸಂಚಿಕೆ'ಯಿಂದ ತೆಗೆದುಕೊಂಡಿದೆ. ಸರ್.ಎಂ.ವಿಶ್ವೇಶ್ವರಯ್ಯ ನವರಿಗೆ ಗಾಂಧೀಜಿ ಬರೆದ ಕೆಲವು ಪತ್ರಗಳ ಭಾವಚಿತ್ರಗಳನ್ನು ಶ್ರೀ ಎಸ್.ಎನ್.ಗುಪ್ತರ ಸೌಜನ್ಯದಿಂದ ಪಡೆದು ಇಲ್ಲಿ ಬಳಸಿಕೊಳ್ಳಲಾಗಿದೆ. ಶ್ರೀ ಹನುಮಂತರಾವ ಕೌಜಲಗಿ ಅವರ ನಿಧನದ ಬಗ್ಗೆ ಗಾಂಧೀಜಿ ಬರೆದ ಪತ್ರವನ್ನು ಶ್ರೀ ಮಧ್ವರಾವ ಕೌಜಲಗಿ ಒದಗಿಸಿದ್ದಾರೆ. ಮೈಸೂರು ರಾಜ್ಯ ಪ್ರದೇಶ ಕಾಂಗ್ರೆಸ್ ಕಮಿಟಿಯವರು, ಹಾಗೂ ಇನ್ನೂ ಅನೇಕ ಮಹನೀಯರು ಗಾಂಧೀಜಿ ಕರ್ನಾಟಕಕ್ಕೆ ಬಂದಾಗ ತೆಗೆದ ಕೆಲವೊಂದು ಪ್ರಾಸಂಗಿಕ ಭಾವಚಿತ್ರಗಳನ್ನು

ಕೊಟ್ಟು ಉಪಕರಿಸಿದ್ದಾರೆ. ಇವುಗಳಲ್ಲಿ ಕೆಲವು ಭಾವಚಿತ್ರಗಳು ಹಳೆಯವಾಗಿ ಮಾಸಿದ್ದರಿಂದ ಅವುಗಳನ್ನು ಬ್ಲಾಕ್ ಮಾಡಲು ಬರಲಿಲ್ಲ. ಯಾವ ಭಾವಚಿತ್ರಗಳ ಬ್ಲಾಕ್ ಮಾಡಲು ಸಾಧ್ಯವಾಯಿತೋ ಅವುಗಳನ್ನು ಮಾತ್ರ ಈ ಪುಸ್ತಕದಲ್ಲಿ ಬಳಸಲಾಗಿದೆ. ಸರ್ ಸಿ.ಪಿ.ರಾಮನ್ ಅವರು ಗಾಂಧೀಜಿಯ ಜೊತೆಗಿದ್ದ ಭಾವಚಿತ್ರವನ್ನು ಪ್ರಕಟಿಸಲು ಶ್ರೀಮತಿ ಲೋಕಸುಂದರಿ ರಾಮನ್ ಅವರು ಅನುಮತಿ ನೀಡಿದ್ದು ಇದಕ್ಕಾಗಿ ಸ್ಮಾರಕ ನಿಧಿಯು ಅವರಿಗೆ ಕೃತಜ್ಞವಾಗಿದೆ. ಪರಿಶಿಷ್ಟದ ಕೊನೆಯಲ್ಲಿನ "ಗಾಂಧೀಜಿ ಮತ್ತು ಜನರಲ್ ಕಾರಿಯಪ್ಪ" ಎಂಬ ಲೇಖನದ ಭಾಷಾಂತರವನ್ನು ಶ್ರೀ ಎಸ್. ಗುಂಡಾಚಾರ್ಯ ಒದಗಿಸಿದ್ದಾರೆ, ಶ್ರೀ ಎಸ್.ಬಿ. ಮುಂಡರಗಿ ಅವರು ಸಮಗ್ರ ಹಸ್ತಪ್ರತಿಯನ್ನು ಮುದ್ರಣಕ್ಕಾಗಿ ಕನ್ನಡದಲ್ಲಿ ಟೈಪ್‌ಮಾಡಿಕೊಟ್ಟಿದ್ದಾರೆ. ಹೀಗೆ ಈ ಗ್ರಂಥಕ್ಕೆ ಒಂದಿಲ್ಲ ಒಂದು ಬಗೆಯಾಗಿ ಸಹಾಯ ಸಲ್ಲಿಸಿದ ಎಲ್ಲ ಮಹನೀಯರಿಗೂ 'ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿ'ಯು ಋಣಿಯಾಗಿದೆ.

ಗ್ರಂಥಗ್ರಂಥನದ ಬಗೆಗೆ ಇಲ್ಲಿ ಇನ್ನೊಂದು ಅಂಶವನ್ನು ನಿವೇದಿಸುವದು ಅಗತ್ಯವಾಗಿದೆ. ಅದೆಂದರೆ, ಮುದ್ರಣಕ್ಕೆ ಹಸ್ತಪ್ರತಿಯನ್ನು ಒಪ್ಪಿಸುವ ಮುನ್ನ ಇನ್ನೊಮ್ಮೆ ವಿಷಯವನ್ನು ಆದ್ಯಂತ ಇಬ್ಬರು ಮೂವರು ಕೂಡಿ ನೋಡುವುದು ಉತ್ತಮವೆಂದೂ, ಗಾಂಧೀಜಿಯ ಮಹತ್ವದ ಭಾಷಣಗಳನ್ನು ಮತ್ತು ಲೇಖನಗಳನ್ನು ಸಾರಾಂಶ ರೂಪದಲ್ಲಿ ಕೊಡದೆ, ಅವನ್ನು ಆದಷ್ಟು ಶಬ್ದಶಃ ಸಮಗ್ರ ಕೊಡತಕ್ಕದ್ದೆಂದೂ, ಸಮಸಾಮಯಿಕ ಚಳವಳಿಯ ಘಟನೆಗಳ ಉಲ್ಲೇಖವು ವಿಷಯ ನಿವೇದನೆಯ ಹಿನ್ನೆಲೆಗೆ ಅಗತ್ಯಕಂಡಲ್ಲಿ ಆಯಾ ಸಂದರ್ಭಕ್ಕೆ ಉಚಿತವಾದ ಸಂಗತಿಯನ್ನು ಬರೆದು ಹೊಂದಿಸಬೇಕೆಂದೂ, ಪತ್ರ-ವ್ಯವಹಾರ ಇತ್ಯಾದಿಗಳನ್ನು ಸಾಧ್ಯವಿದ್ದಷ್ಟೂ ಸಂಗ್ರಹಿಸಬೇಕೆಂದೂ ಶ್ರೀ ದಿವಾಕರ ರಂಗರಾಯರು ಪುನಃ ಒಂದು ಸಲಹೆ ನೀಡಿದರು. ಆ ಪ್ರಕಾರ ಸರ್ವಶ್ರೀ ಟಿ.ಭೀಮಾಚಾರ್ಯ, ನಾರಾಯಣ ಸಂಗಮ, ಕೆ. ಶ್ರೀನಿವಾಸರಾವ ಮತ್ತು ರಾಮಚಂದ್ರ ವಡವಿ ಇವರು ಪುಟಪುಟವನ್ನೂ ಪರಿಶೀಲಿಸಿದ್ದಲ್ಲದೆ, ಅಲ್ಲಲ್ಲಿ ಸಮಯೋಚಿತ ಅಂಶಗಳನ್ನು ಬರೆಬರೆದು ಹಾಕಿದ್ದಾರೆ. ಇದಕ್ಕಾಗಿ, ಇವರೆಲ್ಲರಿಗೆ ಮೈ.ರಾ.ಗಾಂಧೀ ಸ್ಮಾರಕ ನಿಧಿಯು ಕೃತಜ್ಞವಾಗಿದೆ.

ಇನ್ನು ಗ್ರಂಥದ ವಿಷಯ ಮಂಡನದ ಬಗ್ಗೆ ಒಂದು ಮಾತು. ಪ್ರಾಸ್ತಾವಿಕದ ತರುವಾಯ ಇದ್ದ ಗಾಂಧೀಜಿ ಕರ್ನಾಟಕಕ್ಕೆ ಕೊಟ್ಟ ಭೆಟ್ಟಿಗಳನ್ನು ಆಯಾ ವರ್ಷಗಳಿಗೆ ಅನುಗುಣವಾಗಿ, ಹಂತಹಂತವಾಗಿ ವಿಂಗಡಿಸಿ, ಒಂದೊಂದು ಪ್ರಕರಣ ರೂಪದಲ್ಲಿ ಮಂಡಿಸಿದ್ದಿದೆ. ವೈಯಕ್ತಿಕ ನೆನಹುಗಳಿಗಾಗಿ, ಮತ್ತು ಗಾಂಧೀಜಿಯ ಜೊತೆಗಾದ ಪತ್ರವ್ಯವಹಾರಗಳಿಗಾಗಿ ಒಂದೊಂದು ಪ್ರತ್ಯೇಕ ಪ್ರಕರಣವನ್ನೇ ಮೀಸಲಿಡಲಾಗಿದೆ. ಕೆಲವೊಂದು ಹೆಚ್ಚಿನ ವಿಷಯಗಳನ್ನು ಪರಿಶಿಷ್ಟದಲ್ಲಿ ಹಾಕಿದೆ. ವೈಯಕ್ತಿಕ ನೆನಹುಗಳ ಅವಲೋಕನೆಗೆ ಅನುಕೂಲವಾಗಲೆಂದು ಅದಕ್ಕಾಗಿ ಬೇರೆ ಪರಿವಿಡಿಯನ್ನೇ ಕೊಟ್ಟದ್ದಿದೆ.

ಸ್ಮಾರಕ ನಿಧಿಯು ಸಾಧ್ಯವಿದ್ದ ಪ್ರಯತ್ನವನ್ನೆಲ್ಲ ಮಾಡಿ ಸಾಕಷ್ಟು ಸಾಮಗ್ರಿಗಳನ್ನು ಕಲೆಹಾಕಿ ಈ ಗ್ರಂಥದಲ್ಲಿ ಬಳಸಿಕೊಂಡಿದೆ. ಇಷ್ಟಾದರೂ ಇನ್ನೂ ಕೆಲವು ಸಂಗತಿಗಳು ಉಳಿದು

ಹೋಗಿರುವ ಸಂಭವವಿದೆ. ಅವು ಒಂದು ವೇಳೆ ಉಪಲಬ್ಧವಾದರೆ ಮುಂದಿನ ಮುದ್ರಣದಲ್ಲಿ ಅವನ್ನು ಬಳಸಿಕೊಳ್ಳಲಾಗುವದು.

ಗಾಂಧೀಜಿಯ ನೂರನೆಯ ಜಯಂತಿಯ ದಿನವಾದ ೨-೧೦-೧೯೬೯ರಂದೇ ಈ ಗ್ರಂಥ ಪ್ರಕಟನೆಯನ್ನು ಮಾಡುವ ಹಂಬಲವಿತ್ತು. ಆದರೆ, ಹೊರಗಿನಿಂದ ಬರಬೇಕಾದ ಸಹಕಾರವನ್ನು ಅವಲಂಬಿಸಬೇಕಾದ್ದು ಈ ಗ್ರಂಥ ರಚನೆಗೆ ಅನಿವಾರ್ಯವಾದ್ದರಿಂದ ಪ್ರಕಟನೆಯ ಕಾರ್ಯ ವಿಲಂಬವಾಯಿತು. ಗಾಂಧೀ ವಿಚಾರ ಚಿಂತನಕ್ಕೆ ಒಂದು ಚಿರಂತನ ಮೌಲ್ಯ ಇರುವದರಿಂದ ಈ ಗ್ರಂಥ ಎಂದೆಂದಿಗೂ ನವೋನವವೆಂದೇ ನಮ್ಮ ಗ್ರಹಿಕೆ.

ಈ ಗ್ರಂಥ ಮುದ್ರಣದ ಕಾರ್ಯದಲ್ಲಿ ಬೆಂಗಳೂರು ಸಂಯುಕ್ತ ಕರ್ನಾಟಕದ ಮುದ್ರಣಾಲಯದವರು ನಮ್ಮೊಂದಿಗೆ ಸಹಕರಿಸಿ ಗ್ರಂಥ ಮುದ್ರಿಸಿಕೊಟ್ಟದ್ದಕ್ಕಾಗಿ ಅವರಿಗೆ ನಮ್ಮ ಧನ್ಯವಾದಗಳು.

ಮೈ.ರಾ.ಗಾಂಧೀ ಸ್ಮಾರಕ ನಿಧಿ
ಬೆಂಗಳೂರು
೨೨-೨-೧೯೭೦

ಪ್ರಕಾಶಕರು
**ಶ್ರೀ ರಾಮಚಂದ್ರ ವಡವಿ**
ಕಾರ್ಯದರ್ಶಿ

# ಪ್ರಕಾಶಕರ ಮಾತು

(ದ್ವಿತೀಯ ಮುದ್ರಣಕ್ಕೆ)

**ಭಾ**ರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು, ಅದರಲ್ಲು ವಿದುರಾಶ್ವತ್ಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ ೧೯೪೨ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿದೆ. ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲೆ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ ೧೯೧೫ರಿಂದ ೧೯೩೭ರ ಅವಧಿಯಲ್ಲಿ ೧೯ ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೆ ಸ್ವತಃ ತಮ್ಮ ಹರಿಜನ ಮತ್ತು ಯಂಗ್ ಇಂಡಿಯಾ ಪತ್ರಿಕೆಗಳಲ್ಲಿ ೧೯೨೪, ೧೯೨೭, ೧೯೩೬, ಹಾಗೂ ೧೯೩೭ರ ಅವಧಿಯಲ್ಲಿ ಪ್ರಕಟಿಸಿದ್ದಾರೆ. ಈ ಸಮಗ್ರ ದಾಖಲೆಗಳು ಗಾಂಧೀ ಮತ್ತು ಕರ್ನಾಟಕ ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾ ಚಿತ್ರಗಳು ದಾಖಲಾಗಿವೆ. ಹಾಗೂ ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನು ದಿ: ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ ಹಳ್ಳಿ ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ

ಕಳಿಸಿಕೊಟ್ಟರು. ಪುಸ್ತಕ ಮುದ್ರಣವು ಮುಂದುವರಿದಂತೆ ಇನ್ನೂ ಕೆಲವರಿಂದ ನೆನೆಹುಗಳು ಬರತೊಡಗಿದವು. ಇದಲ್ಲದೆ, ಇನ್ನು ಕೆಲವು ಸಂದರ್ಭಗಳಲ್ಲಿ ಶ್ರೀ ನಾರಾಯಣ ಸಂಗಮರು ಕೆಲವರನ್ನು ಸಂದರ್ಶಿಸಿ ಅವರಿಂದ ವಿಷಯ ಕೇಳಿ ತಿಳಿದುಕೊಂಡು ಬಂದರು. ಅವನ್ನೂ ಇಲ್ಲಿ ಸೇರಿಸಿದ್ದಿದೆ. ಅನೇಕರು ತಮ್ಮ ಸ್ಮರಣ ಕಥನವನ್ನು ಸುದೀರ್ಘವಾಗಿ ಪುಟಗಟ್ಟಲೆ ಕಳಿಸಿದುದೂ ಉಂಟು. ಸ್ಥಳಾಭಾವದ ಮೂಲಕ ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಆಯ್ದುಕೊಂಡದ್ದಿದೆ.

ಈ ವಿಷಯದಲ್ಲಿ ಪ್ರತ್ಯಕ್ಷವಾಗಿಯೂ, ಅಪ್ರತ್ಯಕ್ಷವಾಗಿಯೂ ನಮ್ಮೊಡನೆ ಸಹಕರಿಸಿದ ಮಹನೀಯರಿಗೆಲ್ಲ ನಿಧಿಯು ಉಪಕೃತವಾಗಿದೆ.

ಕರ್ನಾಟಕಕ್ಕೆ ಸಂಬಂಧಿಸಿದಂತೆ ಗಾಂಧೀಜಿಯ ಬಗೆಗೆ ಇರುವ ವಿಷಯಗಳನ್ನು ಒಳಗೊಂಡ ೧೯೨೪, ೧೯೨೭, ೧೯೩೩, ೧೯೩೭ ಈ ವರ್ಷಗಳ "ಯಂಗ್ ಇಂಡಿಯಾ" ಮತ್ತು "ಹರಿಜನ" ಸಂಪುಟಗಳು ನಮಗೆ ದೊರೆತವು. ಆದರೆ ೧೯೩೪ರ "ಹರಿಜನ" ಸಂಪುಟದಲ್ಲಿಯೂ ನಮಗೆ ಬೇಕಾದ ವಿಷಯಗಳಿದ್ದು, ಅದು ನಮಗೆ ಲಭಿಸಲಿಲ್ಲ. ದಿಲ್ಲಿಯ ಗಾಂಧೀ ನಿಧಿಯ ಕಛೇರಿಗೆ ಬರೆದು ಶ್ರೀ ಎನ್.ಎನ್.ಯಾಜಿ ಅವರಿಂದ ಆ ವರ್ಷದ ಗಾಂಧೀಜಿಯ ಕರ್ನಾಟಕ ಹರಿಜನ ಪ್ರವಾಸದ ವಿವರಗಳನ್ನು ಟೈಪ್ ಮಾಡಿಸಿ ತರಿಸಿ ಕೊಳ್ಳಲಾಯಿತು. "ಬಾಪೂ ದರ್ಶನ" ಗ್ರಂಥದಿಂದ ಶ್ರೀ ಚೆಂಗಲರಾಯರೆಡ್ಡಿ, ಹಾಗೂ ದಿವಂಗತ ಶ್ರೀ ಹಿರಳ್ಳಿ ದಾಸಪ್ಪನವರ ನೆನಹುಗಳನ್ನು ಸಂಗ್ರಹಿಸಿಕೊಂಡಿದೆ. ಹೀಗೆ ನಾನಾ ವಿಧವಾಗಿ ಈ ಗ್ರಂಥಕ್ಕೆ ಸಾಮಗ್ರಿಯನ್ನು ಒದಗಿಸಿದ ಮಹನೀಯರಿಗೂ, ಗ್ರಂಥಕರ್ತರಿಗೂ, ಪ್ರಕಾಶಕರಿಗೂ, ಪತ್ರಿಕಾಕರ್ತರಿಗೂ ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿಯು ಉಪಕೃತವಾಗಿದೆ.

ಶ್ರೀ ಆರ್.ಎಸ್. ಹುಕ್ಕೇರಿಕರ ಅವರ ಗಾಂಧೀಜಿಯ ಬಗ್ಗೆ ಕೊಟ್ಟ ಸಂಸ್ಮರಣೆಯನ್ನು ಧಾರವಾಡ ಆಕಾಶವಾಣಿಯಿಂದ ಪಡೆದುಕೊಂಡದ್ದಿದೆ. ಶ್ರೀ ಮಂಜಪ್ಪ ಹರ್ಡೇಕರ ಅವರ ಗಾಂಧೀಜಿಯ ಬಗೆಗಿದ್ದ ಸಂಸ್ಮರಣೆಯನ್ನು ಪ್ರೊ. ಜಿ.ಎಸ್. ಹಾಲಪ್ಪನವರು ಬರೆದ "ರಾಷ್ಟ್ರ ದ್ರಷ್ಟಾರ ಮಂಜಪ್ಪ ಹರ್ಡೇಕರ" ಎಂಬ ಗ್ರಂಥದಿಂದ ಆಯ್ದುಕೊಂಡಿದೆ. ಕರ್ನಾಟಕದ ಕೆಲವು ಕಾರ್ಯಕರ್ತರು, ಗಾಂಧೀಜಿ ತಮಗೆ ಬರೆದ ಪತ್ರಗಳನ್ನು ಕಳಿಸಿದ್ದಾರೆ. ಅವುಗಳನ್ನು ಇಲ್ಲಿ ಅವುಗಳ ಭಾವಚಿತ್ರಗಳೊಂದಿಗೆ ಪ್ರಕಟಿಸಲಾಗಿದೆ. ಇನ್ನು ಕೆಲವು ಪತ್ರಗಳನ್ನು "ಸಂಯುಕ್ತ ಕರ್ನಾಟಕದ 'ಗಾಂಧೀ ಶತಾಬ್ದಿ ಸಂಚಿಕೆ'ಯಿಂದ ತೆಗೆದುಕೊಂಡಿದೆ. ಸರ್.ಎಂ.ವಿಶ್ವೇಶ್ವರಯ್ಯ ನವರಿಗೆ ಗಾಂಧೀಜಿ ಬರೆದ ಕೆಲವು ಪತ್ರಗಳ ಭಾವಚಿತ್ರಗಳನ್ನು ಶ್ರೀ ಎಸ್.ಎನ್.ಗುಪ್ತರ ಸೌಜನ್ಯದಿಂದ ಪಡೆದು ಇಲ್ಲಿ ಬಳಸಿಕೊಳ್ಳಲಾಗಿದೆ. ಶ್ರೀ ಹನುಮಂತರಾವ ಕೌಜಲಗಿ ಅವರ ನಿಧನದ ಬಗ್ಗೆ ಗಾಂಧೀಜಿ ಬರೆದ ಪತ್ರವನ್ನು ಶ್ರೀ ಮಧ್ವರಾವ ಕೌಜಲಗಿ ಒದಗಿಸಿದ್ದಾರೆ. ಮೈಸೂರು ರಾಜ್ಯ ಪ್ರದೇಶ ಕಾಂಗ್ರೆಸ್ ಕಮಿಟಿಯವರು, ಹಾಗೂ ಇನ್ನೂ ಅನೇಕ ಮಹನೀಯರು ಗಾಂಧೀಜಿ ಕರ್ನಾಟಕಕ್ಕೆ ಬಂದಾಗ ತೆಗೆದ ಕೆಲವೊಂದು ಪ್ರಾಸಂಗಿಕ ಭಾವಚಿತ್ರಗಳನ್ನು

ಕೊಟ್ಟು ಉಪಕರಿಸಿದ್ದಾರೆ. ಇವುಗಳಲ್ಲಿ ಕೆಲವು ಭಾವಚಿತ್ರಗಳು ಹಳೆಯವಾಗಿ ಮಾಸಿದ್ದರಿಂದ ಅವುಗಳನ್ನು ಬ್ಲಾಕ್ ಮಾಡಲು ಬರಲಿಲ್ಲ. ಯಾವ ಭಾವಚಿತ್ರಗಳ ಬ್ಲಾಕ್ ಮಾಡಲು ಸಾಧ್ಯವಾಯಿತೋ ಅವುಗಳನ್ನು ಮಾತ್ರ ಈ ಪುಸ್ತಕದಲ್ಲಿ ಬಳಸಲಾಗಿದೆ. ಸರ್ ಸಿ.ಪಿ.ರಾಮನ್ ಅವರು ಗಾಂಧೀಜಿಯ ಜೊತೆಗಿದ್ದ ಭಾವಚಿತ್ರವನ್ನು ಪ್ರಕಟಿಸಲು ಶ್ರೀಮತಿ ಲೋಕಸುಂದರಿ ರಾಮನ್ ಅವರು ಅನುಮತಿ ನೀಡಿದ್ದು ಇದಕ್ಕಾಗಿ ಸ್ಮಾರಕ ನಿಧಿಯು ಅವರಿಗೆ ಕೃತಜ್ಞವಾಗಿದೆ. ಪರಿಶಿಷ್ಟದ ಕೊನೆಯಲ್ಲಿನ "ಗಾಂಧೀಜಿ ಮತ್ತು ಜನರಲ್ ಕಾರಿಯಪ್ಪ" ಎಂಬ ಲೇಖನದ ಭಾಷಾಂತರವನ್ನು ಶ್ರೀ ಎಸ್. ಗುಂಡಾಚಾರ್ಯ ಒದಗಿಸಿದ್ದಾರೆ, ಶ್ರೀ ಎಸ್.ಬಿ. ಮುಂಡರಗಿ ಅವರು ಸಮಗ್ರ ಹಸ್ತಪ್ರತಿಯನ್ನು ಮುದ್ರಣಕ್ಕಾಗಿ ಕನ್ನಡದಲ್ಲಿ ಟೈಪ್‌ಮಾಡಿಕೊಟ್ಟಿದ್ದಾರೆ. ಹೀಗೆ ಈ ಗ್ರಂಥಕ್ಕೆ ಒಂದಿಲ್ಲ ಒಂದು ಬಗೆಯಾಗಿ ಸಹಾಯ ಸಲ್ಲಿಸಿದ ಎಲ್ಲ ಮಹನೀಯರಿಗೂ 'ಮೈಸೂರು ರಾಜ್ಯ ಗಾಂಧೀ ಸ್ಮಾರಕ ನಿಧಿ'ಯು ಋಣಿಯಾಗಿದೆ.

ಗ್ರಂಥಗ್ರಂಥನದ ಬಗೆಗೆ ಇಲ್ಲಿ ಇನ್ನೊಂದು ಅಂಶವನ್ನು ನಿವೇದಿಸುವದು ಅಗತ್ಯವಾಗಿದೆ. ಅದೆಂದರೆ, ಮುದ್ರಣಕ್ಕೆ ಹಸ್ತಪ್ರತಿಯನ್ನು ಒಪ್ಪಿಸುವ ಮುನ್ನ ಇನ್ನೊಮ್ಮೆ ವಿಷಯವನ್ನು ಆದ್ಯಂತ ಇಬ್ಬರು ಮೂವರು ಕೂಡಿ ನೋಡುವುದು ಉತ್ತಮವೆಂದೂ, ಗಾಂಧೀಜಿಯ ಮಹತ್ವದ ಭಾಷಣಗಳನ್ನು ಮತ್ತು ಲೇಖನಗಳನ್ನು ಸಾರಾಂಶ ರೂಪದಲ್ಲಿ ಕೊಡದೆ, ಅವನ್ನು ಆದಷ್ಟು ಶಬ್ದಶಃ ಸಮಗ್ರ ಕೊಡತಕ್ಕದ್ದೆಂದೂ, ಸಮಸಾಮಯಿಕ ಚಳವಳಿಯ ಘಟನೆಗಳ ಉಲ್ಲೇಖವು ವಿಷಯ ನಿವೇದನೆಯ ಹಿನ್ನೆಲೆಗೆ ಅಗತ್ಯಕಂಡಲ್ಲಿ ಆಯಾ ಸಂದರ್ಭಕ್ಕೆ ಉಚಿತವಾದ ಸಂಗತಿಯನ್ನು ಬರೆದು ಹೊಂದಿಸಬೇಕೆಂದೂ, ಪತ್ರ-ವ್ಯವಹಾರ ಇತ್ಯಾದಿಗಳನ್ನು ಸಾಧ್ಯವಿದ್ದಷ್ಟೂ ಸಂಗ್ರಹಿಸಬೇಕೆಂದೂ ಶ್ರೀ ದಿವಾಕರ ರಂಗರಾಯರು ಪುನಃ ಒಂದು ಸಲಹೆ ನೀಡಿದರು. ಆ ಪ್ರಕಾರ ಸರ್ವಶ್ರೀ ಟಿ.ಭೀಮಾಚಾರ್ಯ, ನಾರಾಯಣ ಸಂಗಮ, ಕೆ. ಶ್ರೀನಿವಾಸರಾವ ಮತ್ತು ರಾಮಚಂದ್ರ ವಡವಿ ಇವರು ಪುಟಪುಟವನ್ನೂ ಪರಿಶೀಲಿಸಿದ್ದಲ್ಲದೆ, ಅಲ್ಲಲ್ಲಿ ಸಮಯೋಚಿತ ಅಂಶಗಳನ್ನು ಬರೆಬರೆದು ಹಾಕಿದ್ದಾರೆ. ಇದಕ್ಕಾಗಿ, ಇವರೆಲ್ಲರಿಗೆ ಮೈ.ರಾ.ಗಾಂಧೀ ಸ್ಮಾರಕ ನಿಧಿಯು ಕೃತಜ್ಞವಾಗಿದೆ.

ಇನ್ನು ಗ್ರಂಥದ ವಿಷಯ ಮಂಡನದ ಬಗ್ಗೆ ಒಂದು ಮಾತು. ಪ್ರಾಸ್ತಾವಿಕದ ತರುವಾಯ ಇದ್ದ ಗಾಂಧೀಜಿ ಕರ್ನಾಟಕಕ್ಕೆ ಕೊಟ್ಟ ಭೆಟ್ಟಿಗಳನ್ನು ಆಯಾ ವರ್ಷಗಳಿಗೆ ಅನುಗುಣವಾಗಿ, ಹಂತಹಂತವಾಗಿ ವಿಂಗಡಿಸಿ, ಒಂದೊಂದು ಪ್ರಕರಣ ರೂಪದಲ್ಲಿ ಮಂಡಿಸಿದ್ದಿದೆ. ವೈಯಕ್ತಿಕ ನೆನಹುಗಳಿಗಾಗಿ, ಮತ್ತು ಗಾಂಧೀಜಿಯ ಜೊತೆಗಾದ ಪತ್ರವ್ಯವಹಾರಗಳಿಗಾಗಿ ಒಂದೊಂದು ಪ್ರತ್ಯೇಕ ಪ್ರಕರಣವನ್ನೇ ಮೀಸಲಿಡಲಾಗಿದೆ. ಕೆಲವೊಂದು ಹೆಚ್ಚಿನ ವಿಷಯಗಳನ್ನು ಪರಿಶಿಷ್ಟದಲ್ಲಿ ಹಾಕಿದೆ. ವೈಯಕ್ತಿಕ ನೆನಹುಗಳ ಅವಲೋಕನೆಗೆ ಅನುಕೂಲವಾಗಲೆಂದು ಅದಕ್ಕಾಗಿ ಬೇರೆ ಪರಿವಿಡಿಯನ್ನೇ ಕೊಟ್ಟದ್ದಿದೆ.

ಸ್ಮಾರಕ ನಿಧಿಯು ಸಾಧ್ಯವಿದ್ದ ಪ್ರಯತ್ನವನ್ನೆಲ್ಲ ಮಾಡಿ ಸಾಕಷ್ಟು ಸಾಮಗ್ರಿಗಳನ್ನು ಕಲೆಹಾಕಿ ಈ ಗ್ರಂಥದಲ್ಲಿ ಬಳಸಿಕೊಂಡಿದೆ. ಇಷ್ಟಾದರೂ ಇನ್ನೂ ಕೆಲವು ಸಂಗತಿಗಳು ಉಳಿದು

ಹೋಗಿರುವ ಸಂಭವವಿದೆ. ಅವು ಒಂದು ವೇಳೆ ಉಪಲಬ್ಧವಾದರೆ ಮುಂದಿನ ಮುದ್ರಣದಲ್ಲಿ ಅವನ್ನು ಬಳಸಿಕೊಳ್ಳಲಾಗುವದು.

ಗಾಂಧೀಜಿಯ ನೂರನೆಯ ಜಯಂತಿಯ ದಿನವಾದ ೨-೧೦-೧೯೬೯ರಂದೇ ಈ ಗ್ರಂಥ ಪ್ರಕಟನೆಯನ್ನು ಮಾಡುವ ಹಂಬಲವಿತ್ತು. ಆದರೆ, ಹೊರಗಿನಿಂದ ಬರಬೇಕಾದ ಸಹಕಾರವನ್ನು ಅವಲಂಬಿಸಬೇಕಾದ್ದು ಈ ಗ್ರಂಥ ರಚನೆಗೆ ಅನಿವಾರ್ಯವಾದ್ದರಿಂದ ಪ್ರಕಟನೆಯ ಕಾರ್ಯ ವಿಲಂಬವಾಯಿತು. ಗಾಂಧೀ ವಿಚಾರ ಚಿಂತನಕ್ಕೆ ಒಂದು ಚಿರಂತನ ಮೌಲ್ಯ ಇರುವದರಿಂದ ಈ ಗ್ರಂಥ ಎಂದೆಂದಿಗೂ ನವೋನವವೆಂದೇ ನಮ್ಮ ಗ್ರಹಿಕೆ.

ಈ ಗ್ರಂಥ ಮುದ್ರಣದ ಕಾರ್ಯದಲ್ಲಿ ಬೆಂಗಳೂರು ಸಂಯುಕ್ತ ಕರ್ನಾಟಕದ ಮುದ್ರಣಾಲಯದವರು ನಮ್ಮೊಂದಿಗೆ ಸಹಕರಿಸಿ ಗ್ರಂಥ ಮುದ್ರಿಸಿಕೊಟ್ಟದ್ದಕ್ಕಾಗಿ ಅವರಿಗೆ ನಮ್ಮ ಧನ್ಯವಾದಗಳು.

ಮೈ.ರಾ.ಗಾಂಧೀ ಸ್ಮಾರಕ ನಿಧಿ
ಬೆಂಗಳೂರು
೨೨-೨-೧೯೭೦

ಪ್ರಕಾಶಕರು
**ಶ್ರೀ ರಾಮಚಂದ್ರ ವಡವಿ**
ಕಾರ್ಯದರ್ಶಿ

# ಪ್ರಕಾಶಕರ ಮಾತು

(ದ್ವಿತೀಯ ಮುದ್ರಣಕ್ಕೆ)

**ಭಾ**ರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು, ಅದರಲ್ಲು ವಿದುರಾಶ್ವತ್ಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ ೧೯೩೮ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೆ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿದೆ. ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲೆ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ ೧೯೧೫ರಿಂದ ೧೯೩೭ರ ಅವಧಿಯಲ್ಲಿ ೧೯ ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೆ ಸ್ವತಃ ತಮ್ಮ ಹರಿಜನ ಮತ್ತು ಯಂಗ್ ಇಂಡಿಯಾ ಪತ್ರಿಕೆಗಳಲ್ಲಿ ೧೯೨೪, ೧೯೨೭, ೧೯೩೬, ಹಾಗೂ ೧೯೩೭ರ ಅವಧಿಯಲ್ಲಿ ಪ್ರಕಟಿಸಿದ್ದಾರೆ. ಈ ಸಮಗ್ರ ದಾಖಲೆಗಳು ಗಾಂಧೀ ಮತ್ತು ಕರ್ನಾಟಕ ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾ ಚಿತ್ರಗಳು ದಾಖಲಾಗಿವೆ. ಹಾಗೂ ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯುವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನು ದಿ: ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ ಳಳ ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ

ಮೂಡಿಸುತ್ತವೆ. ಗಾಂಧೀಜಿಯವರೆ ಅಂದಿನ ಮುಂಚೂಣಿ ನಾಯಕರಾಗಿದ್ದ ಗಂಗಾಧರ ರಾವ್ ದೇಶಪಾಂಡೆಯವರಿಗೆ ಬರೆದ ಪತ್ರದಲ್ಲಿ 'ಪ್ರಿಯ ಗಂಗಾಧರ ರಾಯರೆ ನಿಮಗೆ ಸೆರೆಮನೆಯ ಬಹುಮಾನವನ್ನು ಪಡೆಯುವ ಸುಪ್ರಸಂಗ ಬಂದಿದೆ, ಅಂಥ ಸುದೈವ ನನ್ನ ಪಾಲಿಗೆ ಬರಲಿಲ್ಲ ಎಂದು ನನಗ ಅಸೂಯೆ ಆಗುತ್ತದೆ' ಎಂದು ಬರಿದಿದ್ದಾರೆ. ಅದು ಸಹ ಈ ಕೃತಿಯಲ್ಲಿ ದಾಖಲಿಸಲ್ಪಟ್ಟಿದೆ. ಅಲ್ಲದೆ ಗಂಗಾಧರ ರಾಯರ ಕೋರಿಕೆಯ ಮೇರೆಗೆ ಮಹಾತ್ಮ ಗಾಂಧೀ ಅವರು ಬೆಳಗಾಂ ಕಾಂಗ್ರೆಸ್ ಅಧ್ಯಕ್ಷರಾದ ಪ್ರಸಂಗವು ಪಟ್ಟಾಭಿ ಸೀತಾರಾಮಯ್ಯನವರ ರಾಷ್ಟ್ರೀಯ ಕಾಂಗ್ರೆಸ್ ಇತಿಹಾಸ ಪುಸ್ತಕದಿಂದ ಸಂಗ್ರಹಗೊಂಡಿದೆ. ಅಲ್ಲದೆ ಮೈಸೂರು ಭೇಟಿ ಸಂದರ್ಭದಲ್ಲಿ ದಿವಾನರ ಭೇಟಿಯಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು ಮತ್ತು ಗಾಂಧೀಜಿಯವರ ಸಂಭಾಷಣೆ, ಗಾಂಧೀಜಿಯವರು ಮೈಸೂರು ರಾಜ್ಯಾಡಳಿತವನ್ನು ರಾಮರಾಜ್ಯ ಎಂದಿದ್ದ ಪ್ರಸಂಗದ ಸಂಭಾಷಣೆಯೂ ದಾಖಲಾಗಿದೆ. ಚಿಕ್ಕಬಳ್ಳಾಪುರದಲ್ಲಿ ಬಡವರು ನೀಡಿದ ಮಾವಿನಹಣ್ಣು ಮತ್ತು ರಾಜಗೋಪಾಲಚಾರಿಯವರ ನಡುವೆ ನಡೆದ ಸಂಭಾಷಣೆ ಗಾಂಧೀಜಿಯವರ ಹಾಸ್ಯ ಪ್ರಜ್ಞೆಯನ್ನು ಪರಿಚಯಿಸುತ್ತದೆ. ಹಾಗೂ ಹಾಸನ ಜಿಲ್ಲಾ ಪ್ರವಾಸದ ವೇಳೆಯಲ್ಲಿ ಬೇಲೂರು ಹಳೇಬಿಡು ದೇವಾಲಯ ಸಂದರ್ಶನ ಮತ್ತು ಅಲ್ಲಿನ ಪರಿಸ್ಥಿತಿಯ ಬಗ್ಗೆ ಗಾಂಧೀಜಿಯವರಾಡಿದ ಮಾತುಗಳು ಕಲೆಯ ಬಗ್ಗೆ ಗಾಂಧೀಜಿಗೆ ಇದ್ದ ಕಾಳಜಿ ಸೂಚಿಸುತ್ತದೆ. ಅವರು ಬೇಲೂರು ದೇವಾಲಯದ ಬಗ್ಗೆ ಮಾತನಾಡುತ್ತಾ 'ಇಲ್ಲಿನ ಅದ್ಭುತ ಶಿಲಾಶಿಲ್ಪವನ್ನು ಮೀರಿಸುವ ಶಿಲಾಶಿಲ್ಪ ಭರತಖಂಡದಲ್ಲಿ ಮತ್ತೊಂದು ಕಡೆ ಇಲ್ಲವೆ'ಂದು ಹೊಗಳಿದ್ದಾರೆ. ಗಾಂಧೀಜಿಯವರು ಬೆಂಗಳೂರು ಭೇಟಿ ಸಂದರ್ಭದಲ್ಲಿ ಹರಿಜನರಿಗೆ ಆತ್ಮಶುದ್ಧಿಯ ಬಗೆಗೆ ಮಾತನಾಡುತ್ತ ಅಂತರಂಗ, ಬಹಿರಂಗ ಶುದ್ಧಿಯ ಸೂತ್ರಗಳನ್ನು ಸರಿಯಾಗಿ ಪಾಲಿಸಬೇಕು ಗೋಮಾಂಸ ಭಕ್ಷಣೆಯನ್ನು ಸಂಪೂರ್ಣವಾಗಿ ಬಿಡಬೇಕೆಂದು ಹಾಗೂ ಹಿಂದೂ ಎನಿಸಿಕೊಂಡವರು ಗೋಮಾಂಸ ತಿನ್ನುವುದು ತಪ್ಪು ಹಾಗೂ ಹರಿಜನರೆಲ್ಲರು ಮದ್ಯಪಾನವನ್ನು ಬಿಡಬೇಕೆಂದು ವಿನಂತಿಸಿದ ಪ್ರಸಂಗ ಈ ಕೃತಿಯಲ್ಲಿ ದಾಖಲಾಗಿದೆ. ಇದರೊಂದಿಗೆ ಗಾಂಧೀಜಿಯವರ ಭಾಷಣದ ಕನ್ನಡ ಅನುವಾದ ಹಾಗೂ ಇಲ್ಲಿನ ನಾಯಕರಿಗೆ ಬರೆದ ಪತ್ರಗಳ ನಕಲುಗಳ ಸಂಗ್ರಹವೂ ಇದೆ. ಇಂತಹ ಕೃತಿಯನ್ನು ಪ್ರಕಟಿಸಿ ಮಹಾತ್ಮರ ಪ್ರವಾಸದ ಬಗ್ಗೆ ದಾಖಲೆ ಸಹಿತ ಹಾಗೂ ಚಿತ್ರಗಳ ಮೂಲಕ ಸಾರ್ವಜನಿಕರಿಗೆ ಕರ್ನಾಟಕದ ಮುಂಚೂಣಿ ನಾಯಕರ ತ್ಯಾಗ ಬಲಿದಾನ ಕಾರ್ಯಗಳ ಬಗ್ಗೆ ಜನರಿಗೆ ತಿಳಿಸಲೋಸುಗವಾಗಿ ಇಂತಹ ಮಹಾನ್ ಕೃತಿಯನ್ನು ಪ್ರಕಟಿಸಿದ ಅಂದಿನ ಸ್ಮಾರಕ ನಿಧಿಯ ಅಧ್ಯಕ್ಷರು ಹಾಗೂ ಅಂದಿನ ಪ್ರಕಟಣಾ ಸಲಹಾ ಸಮಿತಿಯ ಸದಸ್ಯರೆಲ್ಲರ ಸಹಾಯವನ್ನು ನಾನು ನೆನೆಯುತ್ತೇನೆ. ಹಾಗೂ ಈ ಕಾರ್ಯದಲ್ಲಿ ಸಂಪಾದಕರಾಗಿ ಕೆಲಸ ನಿರ್ವಹಿಸಿದ ದಿ: ಸಿದ್ದವನಹಳ್ಳಿ ಕೃಷ್ಣಶರ್ಮ ಅವರ ಕಾರ್ಯವನ್ನು ಮನಃಪೂರ್ವಕವಾಗಿ ನೆನೆಯುತ್ತೇನೆ.

ಪ್ರಸ್ತುತ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ ಹಾಗೂ ಈ ಕೃತಿ ತಿದ್ದುಪಡಿ ಮಾಡಿದ

ಪ್ರೊ. ಅಶ್ವಥನಾರಾಯಣ್ ದಂಪತಿಗಳಿಗೂ ಹಾಗೂ ಈ ಕೃತಿಗೆ ಅಂದವಾದ ಮುಖಪುಟ ರಚಿಸಿಕೊಟ್ಟ ಡಾ॥ ಬಸವರಾಜ ಪಾಟೀಲ್ ಅವರಿಗೂ ಮತ್ತು ಅಂದವಾಗಿ ಸಮಯಕ್ಕೆ ಸರಿಯಾಗಿ ಮುದ್ರಿಸಿಕೊಟ್ಟ ಇಳಾ ಮುದ್ರಣದ ಮಾಲೀಕರಾದ ಶ್ರೀಯುತ ಬಿ. ಗುರುಮೂರ್ತಿ ಅವರಿಗೂ ಅವರ ಮುದ್ರಣದ ವ್ಯವಸ್ಥಾಪಕರಾದ ಮಳಲೀಗೌಡರು ಮತ್ತು ಮುದ್ರಣಾಲಯ ಇತರೆ ಸಿಬ್ಬಂದಿ ವರ್ಗಕ್ಕೂ ಧನ್ಯವಾದಗಳು ಸಲ್ಲುತ್ತವೆ.

**(ಡಾ॥ ಹೊ. ಶ್ರೀನಿವಾಸಯ್ಯ)**
ಅಧ್ಯಕ್ಷರು ಮತ್ತು ಪ್ರಕಾಶಕರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

# ಗಾಂಧೀ ಮತ್ತು ಕರ್ನಾಟಕ

## ಪರಿವಿಡಿ

## ನೆನಹುಗಳ ಪರಿವಿಡಿ

# ಗಾಂಧೀ ಮತ್ತು ಕರ್ನಾಟಕ

## ಪ್ರಾಸ್ತಾವಿಕ

**ಅಂದಿನ ಭಾರತದ ಸ್ಥಿತಿಗತಿ**

ಭಾರತ ದೇಶ ಪ್ರಧಾನವಾಗಿ ಕೃಷಿಯ ದೇಶ. ಈಗ್ಯೂ ಶೇಕಡ ೮೦ ಜನ ಬೇಸಾಯದ ಮೇಲೆ ಅವಲಂಬಿಸಿದ್ದಾರೆ. ಇಲ್ಲಿ ವ್ಯವಸಾಯವೇ ಮುಖ್ಯ ವೃತ್ತಿ. ಬೇಕಾದಷ್ಟು ಭೂಮಿ ಯಥೇಚ್ಛವಾದ ಕಾಡು, ಸಾಕಷ್ಟು ದನಕರು, ಕುರಿ-ಮೇಕೆ, ಚಿಕ್ಕಪುಟ್ಟ ಕೈಗಾರಿಗೆ ಇದ್ದವು ಇಲ್ಲಿ. ಧನ ಧಾನ್ಯ ಸಮೃದ್ಧಿ ಇತ್ತು. ಭಾರತವನ್ನು ವರ್ಣಿಸಿದ ಕವಿ, ಅತ್ಯಾಧುನಿಕ ಕೂಡ, 'ಸುಜಲಾಂ ಸುಫಲಾಂ ಮಲಯಜ ಶೀತಲಾಂ ಸಸ್ಯ ಶ್ಯಾಮಲಾಂ' ಎಂದ. ಇಷ್ಟೆಲ್ಲ ಇದ್ದ ಮೇಲೆ ದೇಶ ಸುಹಾಸಿನೀ ಸುಮಧುರಭಾಷಿಣೀ ಆಗಲೇಬೇಕು ತಾನೆ! ಆಗಿತ್ತು.

ಹಿಂದೆ ಎಂದೋ ಆಗಿ ಹೋದ ಮಾತಲ್ಲ ಇದು. ಸ್ವರಾಜ್ಯ ಬರುವ ಮೊದಲು ನೂರು-ನೂರೈವತ್ತು ವರ್ಷಗಳ ಕೆಳಗೆ ಇನ್ನೂ ಇತ್ತೀಚೆಗೆ ದೇಶ ಹೀಗೆ ಇತ್ತು. ಇದರಲ್ಲಿ ಯಾವುದೂ ಅತಿಶಯೋಕ್ತಿ ಅಲ್ಲ. ದೇಶದ ಆರ್ಥಿಕ ವ್ಯವಸ್ಥೆಯ ಆಲಂಬ ವ್ಯವಸಾಯ, ಕೃಷಿ, ನಮ್ಮ ರೈತರು ಸುಸಂಸ್ಕೃತರು, ಧರ್ಮಪರಾಯಣರು, ವೀರ್ಯವಂತರು. ಆದರೂ ಅವರ ಐಹಿಕ ಇಚ್ಛೆ ಬಹಳ ಪರಿಮಿತ. ರಾಜಕಾರಣದಲ್ಲಿ ಅವರಿಗೆ ಆಸಕ್ತಿ ಕಡಿಮೆ. ರಾಜ್ಯಾಧಿಕಾರ ಯಾರ ಕೈಯಲ್ಲಿ ಎಂಬ ಚಿಂತೆ ಅವರಿಗೆ ಇರಲಿಲ್ಲ. ರಾಜರು ಯಾರಾದರೇನು, ರಾಗಿ ಬೀಸುವುದು ನಮಗೆ ತಪ್ಪದು ಎಂಬ ಮನೋಧರ್ಮ ಅವರದು. ಇಂಥವರಿಗೆ ಉದ್ಯೋಗಲಾಭ ಬೇಕಿದ್ದಿತೆ? ವ್ಯವಸಾಯ ಅವರ ಪಾಲಿಗೆ ಉದ್ಯೋಗ ಆಗಿರಲಿಲ್ಲ. ಅವರಿಗೆ ಅದೊಂದು ಜೀವನ ಧರ್ಮ, ಪರಂಪರಾಗತವಾಗಿ ಬಂದ ಒಂದು ಕರ್ತವ್ಯಕರ್ಮ. ಗ್ರಾಮಜೀವನ ಅವರಿಗೆ ಒಂದು ಜೀವನದ ರೀತಿ, ಭೂಮಿ ಅವರ ಪಾಲಿಗೆ ತಾಯಿ. ಆಕೆಯ ಸೇವೆಮಾಡಿ, ಆಕೆಯನ್ನು ತಣಿಯಿಸಿ ಅಭಿಮಾನದಿಂದ ಆಕೆ ನೀಡಿದುದರಲ್ಲಿ ತೃಪ್ತರಾಗಿದ್ದ ಜನರು ಭಾರತೀಯರು.

**ಭಾರತದ ಗ್ರಾಮ ಸಂಸ್ಕೃತಿ**

ಪಟ್ಟಣಗಳು ನಮ್ಮಲ್ಲಿ ಇರಲಿಲ್ಲ ಎಂದಲ್ಲ. ಅಲ್ಲೊಂದು ಇಲ್ಲೊಂದು ರಾಜಧಾನಿ. ಪಟ್ಟಣ

ಇದ್ದರೂ ಜೀವನ ಸಮಸ್ತವೂ ಗ್ರಾಮಾಭಿಮುಖ ಆಗಿತ್ತು. ಈಗಿನಂತೆ ಜೀವನ ರಾಜಕಾರಣ ಪ್ರಧಾನ, ನಗರಾಭಿಮುಖ ಆಗಿರಲಿಲ್ಲ. ನಗರಗಳಲ್ಲಿ ದೇಶದ ಸಂಪತ್ತಾಗಲಿ, ಅಧಿಕಾರ ಆಗಲಿ ಕೇಂದ್ರೀಕೃತ ಆಗಿರಲಿಲ್ಲ. ಆಗಿನ ಮೂವತ್ತು ಕೋಟಿ ಭಾರತೀಯರೂ ಸ್ವಚ್ಛಂದ ಪ್ರವೃತ್ತಿಯವರು. ಅವರ ಮನೋಧರ್ಮ ಸ್ವತಂತ್ರ. ಹಳ್ಳಿಹಳ್ಳಿಯೂ ಒಂದು ಸ್ವತಂತ್ರ ಗಣತಂತ್ರ, ವ್ಯಾಪಾರ, ಉದ್ಯೋಗ ಯಾವುದರಲ್ಲೂ ರಾಜಕೀಯ ಬಂಧನ ಇರಲಿಲ್ಲ. ಒಳನಾಡಿನ ವ್ಯಾಪಾರದಲ್ಲಿ ವಿನಿಮಯವೇ ಹೆಚ್ಚು. ರೈತರಲ್ಲಿ ದುಡ್ಡು ಕಡಿಮೆ. ದುಡ್ಡಿನ ವ್ಯಾಮೋಹವೂ ಕಡಿಮೆ. ಧಾನ್ಯ ಹೆಚ್ಚು. ಊರ ಮುಂದಿನ ಹಗೇವುಗಳು, ಮನೆಗಳಲ್ಲಿನ ಕಣಜ–ಪಣತಗಳು ಸದಾ ತುಂಬಿರುತ್ತಿದ್ದುವು.

ಇದೆಲ್ಲಕ್ಕೂ ಆಧಾರ ಆದ ಭೂಮಿಯನ್ನು ಸೊತ್ತು ಎಂದುಕೊಂಡವರು ಇರಲೇ ಇಲ್ಲ. ಈ ಹೊಲ ನನ್ನದು, ಇದು ನನ್ನ ಸೊತ್ತು ಎನ್ನುವ ಭಾವನೆ ಜನರಲ್ಲಿ ಇರಲಿಲ್ಲ. ಸ್ಥಿರ–ಚರ ಸೊತ್ತುಗಳ ಅಭಿಮಾನ ಎಲ್ಲವೂ ಈಚಿನದು. ರಾಜಕಾರಣದ ಅನುಗ್ರಹ ಅದು. ರೈತನಿಗೆ ಬೇಕಾಗಿದ್ದದ್ದು 'ವಿನಾದೈನ್ಯೇನ ಜೀವನಂ'. ಕನ್ನಡ ನಾಡಿನ ಮಹಾಕವಿ ಸರ್ವಜ್ಞ ಇದನ್ನೇ ತನ್ನ ರಸವಾಣಿಯಲ್ಲಿ ಹೇಳಿದ್ದಾನೆ, 'ಹಚ್ಚನೆಯ ಹೊಲವಾಗೆ, ಬೆಚ್ಚನೆಯ ಮನೆಯಾಗೆ, ಇಚ್ಛೆಯನರಿತು ನಡೆವ ಸತಿಯಾಗೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ.'

ಇದು ಎಲ್ಲವೂ ಈ ಶತಮಾನದಲ್ಲಿ ತಲೆಕೆಳಗು ಆಗಿದೆ. ಗ್ರಾಮ ಜೀವನ ಈಗ ನಮ್ಮ ವೈಶಿಷ್ಟ್ಯ ಅಲ್ಲ. ವಿನಿಮಯವೂ ಇಲ್ಲ. ಹಿಂದಿನ ಕಾಲದ ಹಳ್ಳಿಗಳೂ ಇಲ್ಲ. ಹಳ್ಳಿಗರೂ ಇಲ್ಲ. ವ್ಯವಸಾಯವನ್ನು ನಂಬಿ ಆಸ್ತಿಕರಾಗಿ ಅಲ್ಲಿ ಸಲ್ಲಬೇಕಾದರೆ 'ಇಲ್ಲಿ ಸಲ್ಲಬೇಕು' ಎಂದು, ಜೀವನಕ್ಕೆ ನೀತಿಯೇ ಧರ್ಮವೇ ನೆಲೆಗಟ್ಟು ಎಂದು ತಿಳಿದು ನಡೆಯುತ್ತಿದ್ದ ಆ ಜನ ಈಗ ಇಲ್ಲ.

ಸಾವಿರಾರು ವರ್ಷ ಇದ್ದ ತೃಪ್ತಿ, ಆಸ್ತಿಕತೆ, ಶ್ರದ್ಧೆ, ಅನಾಸಕ್ತ ಮನೋಧರ್ಮ ಜನರಲ್ಲಿ ಇಂದು ಬಹಳ ಮಟ್ಟಿಗೆ ಉರುಳಿ ಹೋಗಿವೆ. ಉದ್ಯೋಗ ಉದ್ಯೋಗ ಎಂದು ದೇಶ ಹಂಬಲಿಸುತ್ತಿದೆ. ಹಣ ಹಣ ಎಂದು ಹೆಣವೂ ಬಾಯಿ ಬಿಡುತ್ತಿದೆ. ಹಳ್ಳಿಗಳಲ್ಲಿ ಹಿಂದೆ ಇದ್ದ ಪ್ರಶಾಂತಿ ಈಗ ಇಲ್ಲ. ಹಳ್ಳಿಗಳಲ್ಲಿ ಇರಲು ಹುಡುಗರಿಗೆ ಯಾರಿಗೂ ಮನಸ್ಸಿಲ್ಲ. ಮನಸ್ಸು ಇದ್ದರೂ ಇರುವುದು ಸಾಧ್ಯ ಇಲ್ಲ. 'ಕುರಿತು ಓದದೆಯೆ ಪರಿಣತ ಮತಿಗಳ್' ಆಗಿದ್ದ ನಾವು ಇವತ್ತು ಕುರಿತು ಓದಿಯೂ ಕೂಡ ಭ್ರಾಂತಮತಿಗಳಾಗಿದ್ದೇವೆ.

ಈ ದೇಶ ಎಂದು ಸರ್ವತಂತ್ರ ಸ್ವತಂತ್ರ ಆಗಿತ್ತೋ ಸಾರ್ವಭೌಮ ಆಗಿತ್ತೋ ಈಗ ನಮಗಂತೂ ನೆನಪೇ ಇಲ್ಲ. ಯಾರೋ ಪಾಳೆಯಗಾರರು ಇದ್ದರು. ಯಾರೋ ರಾಜರು ಇದ್ದರು, ಅವರು ಪರಸ್ಪರ ಕಚ್ಚಾಡಿದರು ಎನ್ನುತ್ತದೆ ಇತಿಹಾಸ. ನಮ್ಮ ನಮ್ಮ ಜಗಳದಲ್ಲಿ ನಾವು ಪರರ ಗುಲಾಮರೂ ಆದೆವು ಎಂಬ ಮಾತನ್ನು ನಮ್ಮ ಇತಿಹಾಸವೂ ಸರಿಯಾಗಿ ನೇರಾಗಿ ತಿಳಿಸುವುದಿಲ್ಲ. ಅದು ನಮ್ಮ ಇತಿಹಾಸವೇ ಅಲ್ಲವಲ್ಲ. ನಾವು ಬರೆದುಕೊಂಡದ್ದೇ

ಅಲ್ಲ. ಅದು ನಮ್ಮನ್ನು ಗೆದ್ದವರ ಇತಿಹಾಸದ ಒಂದು ಮಾದರಿ. ನಮ್ಮವರೇ ಒಂದು ವೇಳೆ ಅದನ್ನು ಬರೆದಿದ್ದರೂ ಯಾರೋ ಹೇಳಿ ಬರೆಯಿಸಿದಂತೆ ಇದೆ. ಬರೆಸುವವರು ಒಬ್ಬರು ಬೇರೆ ಇದ್ದಾಗ, ಬರವಣಿಗೆ ಯಾರ ಕೈಯಿನದು ಆದರೆ ಏನು? ಭಾರತವನ್ನು ಬರೆದದ್ದು ಗಣಪತಿ. ಆದರೆ ಭಾರತ ವ್ಯಾಸಸ್ತೋತ್ರ

**ಸ್ವಾತಂತ್ರ್ಯಾನಂತರ**

ನಮ್ಮ ದೇಶ ಸ್ವತಂತ್ರ ಎನಿಸಿಕೊಂಡು ೧೯೬೭ಗೆ ಇಪ್ಪತ್ತು ವರ್ಷ ಆಗಿ ಹೋದವು. ಏನು ಸ್ವಾತಂತ್ರ್ಯವೋ! ರಾಜರು ಬದಲು ಆದರು, ರಾಜ್ಯ ನಮ್ಮ ಕೈಗೇ ಬಂತು. ರಾಜ್ಯಭಾರ ಮಾತ್ರ ಹಿಂದಿನಂತೆಯೆ ಇದೆ. ಸ್ವಲ್ಪವೂ ಬದಲಾವಣೆ ಆಗಲಿಲ್ಲ.

ಇದಕ್ಕೆ ಕಾರಣ ನಮ್ಮದನ್ನು ಬಿಟ್ಟು ನಾವು ಪರರ ದಾರಿ ಹಿಡಿದದ್ದೇ. ಬರೀ ದಾರಿ ಹಿಡಿಯಲಿಲ್ಲ. ಅವರ ಕಾಲನ್ನೇ ಹಿಡಿದೆವು. ನಮ್ಮ ದೇಶದಲ್ಲಿ ಮೊಗಲರು ನೂರಾರು ವರ್ಷ ರಾಜ್ಯಭಾರ ಮಾಡಿದರು. ದೀರ್ಘಕಾಲ ನಮ್ಮ ದೇಶದಲ್ಲಿ ನಡೆದ ವಿದೇಶಗಳ ರಾಜ್ಯ ಅದೇ. ಅವರೂ ಹೊರಗಿನಿಂದ ಬಂದವರೇ. ಆದರೂ ನಮ್ಮ ಸಮಾಜರಚನೆ, ಗ್ರಾಮಜೀವನ ವಿಧಾನ ಇವುಗಳಲ್ಲಿ ಗಮನಾರ್ಹ ವ್ಯತ್ಯಾಸ ಆಗ ಅ[illegible]ಲ್ಲ. [illegible]ದೇ ಇಂಗ್ಲಿಷರು ಬಂದರು. ಬರುವಾಗ ಸಾಹುಕಾರರಂತೆ ಬಂದರು. ಆಮೇಲೆ ಸಾಮ್ರಾಜ್ಯ ಕಟ್ಟಿದರು. ಅವರ ರಾಜ್ಯಭಾರ ನಡೆದದ್ದು ನೂರೈವತ್ತು ವರ್ಷ, ಆದರೂ ನಮ್ಮದು ಎಂಬುದು ಎಲ್ಲವೂ ಅಳಿದು ಹೋಯಿತು ಎನ್ನಬೇಕು,

ನಮ್ಮದು ದೈವ ಧರ್ಮಗಳನ್ನು ನಂಬಿದ ಸೀಮೆ. ಜನಸಾಮಾನ್ಯರಲ್ಲಿ ಸಮಾನತೆ ಬೆಳಗಿದ ಸೀಮೆ. ತಿಳಿದೂ ತಿಳಿಯದ ಹಾಗೆ ನಮ್ಮದು ಎಂಬ ವೈಶಿಷ್ಟ್ಯ ಎಲ್ಲವೂ ಅಳಿದು ಹೋಯಿತು ಇಂಗ್ಲಿಷರ ಕಾಲದಲ್ಲಿ. ಅವರನ್ನು ಅನ್ನುವ ಹಾಗೂ ಇರಲಿಲ್ಲ. ಅವರ ಭೋಗ ಭಾಗ್ಯದ ನಾಗರಿಕತೆಗೆ, ಅವರ ಲಾಭದ ದೃಷ್ಟಿಗೆ ಮರುಳಾಗಿ ನಾವೇ ನಮ್ಮ ಸಂಸ್ಕೃತಿಯನ್ನು ಗಾಳಿಗೆ ತೂರಿಕೊಂಡೆವು. ಅಷ್ಟು ಸೂಕ್ಷ್ಮ ಆ ಕೈವಾಡ. ನಾಲ್ಕೂ ರೀತಿಯಲ್ಲೂ ನಾವು ದಿವಾಳಿ ತೆಗೆದೆವು. ಆಧ್ಯಾತ್ಮಿಕ ಆಗಿ, ಬೌದ್ಧಿಕ ಆಗಿ, ನೈತಿಕ ಆಗಿ ಆರ್ಥಿಕ ಆಗಿ ನಾಲ್ಕು ಬಗೆಯಲ್ಲೂ ಹಾನಿ ಮಾಡಿಕೊಂಡೆವು. ಗಾಂಧೀಜಿ ಈ ಮಾತನ್ನು ಒತ್ತಿ ಹೇಳಿದ್ದಾರೆ. ಇಂಗ್ಲಿಷರ ರಾಜಕೀಯ, ಪಾಶ್ಚಾತ್ಯ ಸಂಸ್ಕೃತಿಯ ಮೆರುಗು, ನಮ್ಮ ವ್ಯಾಮೋಹ ಇವೆಲ್ಲ ತ್ರಿದೋಷಗಳು ನಮ್ಮನ್ನು ರಸಾತಳಕ್ಕೆ ಒಯ್ದುಬಿಟ್ಟವು.

ಸಹಕಾರದ ಆಧಾರದ ಮೇಲೆ ನಮ್ಮ ಸಮಾಜ ರಚಿತ ಆಗಿತ್ತು. ನಮ್ಮ ಮದುವೆ-ಮುಂಜಿ, ಹಬ್ಬ-ಹರಿದಿನ ಎಲ್ಲವೂ ಸಾಂಘಿಕ ಸಮಾರಂಭಗಳು, ಅದರಲ್ಲಿ ಯಾಜಮಾನ್ಯ ವ್ಯಕ್ತಿಯದಲ್ಲ, ಸಮಾಜದ್ದು. ನಮ್ಮ ಗುಲಾಮಗಿರಿಯಲ್ಲಿ ನಾವು ಮೊಟ್ಟಮೊದಲು ಕಳೆದುಕೊಂಡದ್ದು ನಮ್ಮ ಕೈಗಾರಿಕೆ, ಕೌಶಲ. ಯಾವ ಕೈಗಾರಿಕೆ ಇಡೀ ಜಗತ್ತಿನಲ್ಲೇ ಅಹಿಂಸೆಯ ದಾರಿಯಲ್ಲಿ ನಮ್ಮ ಧರ್ಮ, ಸಂಸ್ಕೃತಿಗಳನ್ನು ಹರಡಿತ್ತೋ, ಯಾವುದು ನಮಗೆ ಅಗ್ರಸ್ಥಾನವನ್ನು ತಂದುಕೊಟ್ಟಿತ್ತೋ ಅದನ್ನೇ ನಾವು ಕಳೆದುಕೊಂಡೆವು. ನಮ್ಮ ಸಮಾಜದ ಆಧಾರ ಆಗಿದ್ದ

ಕೃಷಿಯಲ್ಲಿ ಸ್ಪರ್ಧೆ ಲಾಭದ ಆಶೆ ಪ್ರವೇಶ ಮಾಡಿದವು, ಭೂಮಿ ಸೊತ್ತು ಆಯಿತು. ದುಡ್ಡಿಗಾಗಿ ಕೆಲಸ ಮಾಡುವ ರೂಢಿ ಬಂತು. ದುಡಿಯುವವರದೇ ಒಂದು ವರ್ಗ ಆಯಿತು. ಶ್ರೀಮಂತರದೇ ಒಂದು ವರ್ಗ ಆಯಿತು. ಹೀಗೆ ವರ್ಗೀಕರಣ ಪ್ರಾರಂಭ ಆಯಿತು ನಮ್ಮಲ್ಲಿ ದುಡ್ಡಿನ ತಳ ಹದಿಯ ಮೇಲೆ.

**ಹೊಸ ವರ್ಗೀಕರಣ**

ಈ ಆರ್ಥಿಕ ವರ್ಗೀಕರಣದ ಜೊತೆಗೆ ಮತ್ತೊಂದು ಆಯಿತು–ಕಲಿತವರದು ಕಲಿಯದವರದು, ವಿದ್ಯಾವಂತರದು–ಅವಿದ್ಯಾವಂತರದು (ಇಂಗ್ಲಿಷನ್ನು ತಿಳಿದವರು ಅದನ್ನು ತಿಳಿಯದವರು). ಈಗ ಇದು ಎರಡೂ ಸೇರಿ ಪಟ್ಟಣಿಗರು ಹಳ್ಳಿಗರು ಎಂಬ ಭೇದ ಬಂದಿದೆ. ಎಲ್ಲ ಹಕ್ಕುಗಳೂ ಎಲ್ಲ ಲಾಭವೂ ಈ ಆರ್ಥಿಕವೂ ವಿದ್ಯಾವಂತ ಪಟ್ಟಣಿಗರಿಗೆ: ಮತ್ತು ಎಲ್ಲ ದುಡಿತವೂ ಶ್ರಮಜೀವಿ ಅವಿದ್ಯಾವಂತ ಹಳ್ಳಿಜನರಿಗೆ, ಉತ್ತಮ ವಸ್ತು, ಭೋಗ ಭಾಗ್ಯಗಳೆಲ್ಲ ಮೊದಲಿನ ವರ್ಗದ ಪಾಲು. ಹಳ್ಳಿಗಳಿಗೂ ಕೂಡ ಈ ರೋಗ ವ್ಯಾಪಿಸಿ. ಭೂಮಿ ಇದ್ದವನು ಭೂಮಿಹೀನರಿಂದ ದುಡಿಸಿಕೊಂಡು, ಅವರಿಗೆ ಅರೆಹೊಟ್ಟೆಯ ಪಾಲು ಕೊಟ್ಟು ಅವರ ಮೇಲೆ ಸವಾರಿ ಮಾಡುತ್ತಿದ್ದ. ಈ ಬಗೆಯಾಗಿ, ಒಂದು ಶೋಷಿತವರ್ಗ, ಇನ್ನೊಂದು ಶೋಷಕವರ್ಗ ಆಯಿತು.

ಪರಿಸ್ಥಿತಿ ಹೀಗೆ ಬಲು ಗಂಭೀರ ಆಗಿತ್ತು. ಒಂದು ಕಡೆ ಧನಿಕರ, ಭೂಮಾಲಿಕರ, ವಿದ್ಯಾವಂತರ. ಅಧಿಕಾರಿಗಳ ಕಾಟ. ಮಳೆ ಸುರಿಸದೆ, ಬೆಳೆ ಬೆಳೆಯದೆ ಪದೇ ಪದೇ ಬರವನ್ನು ತಂದಿಡುತ್ತಿದ್ದ ದೈವದ ಕಾಟ ಇನ್ನೊಂದು ಕಡೆ. ಸರಕಾರವೂ ವಿದೇಶಿಗಳದು. ಅವರ ಪಾಲಿಗೆ ಭಾರತೀಯರು ಬರೀ ಗುಲಾಮರು. ಇವರ ಬಣ್ಣ ಮಾಸಲು. ಅವರದು ಕೆಂಪು. ಈ ಕಪ್ಪು ತೊಗಲಿನ ಜನರ ಬೆನ್ನಿನ ಮೇಲೆ ಸವಾರಿ ಮಾಡಲೆಂದೇ ತಾವು ಹುಟ್ಟಿದ್ದೇವೆ ಎಂದು ಕೆಂಪು ಜನರ ಭ್ರಾಂತಿ. ಸರಕಾರ ಮಾಡಿದ್ದೆಲ್ಲವೂ ಇವರ ಯೋಗಕ್ಷೇಮಕ್ಕೇ ಎಂಬ ಭಾವ. ಇದು ತಮಗೆ ದೈವದತ್ತ ಕರ್ತವ್ಯ ಎಂಬ ಅಭಿಪ್ರಾಯ ಕೆಂಪು ಜನರಲ್ಲಿ ಬಹಳವಾಗಿ ಬೇರೂರಿತ್ತು. 'White Man's Burden' ಎಂಬ ಶಬ್ದಗಳೂ ಹುಟ್ಟಿದ್ದು ಅದಕ್ಕಾಗಿಯೇ.

ಭಾರತ ದೇಶ ಹೇಗೆ ದಾಸ್ಯಕ್ಕೆ ಗುರಿ ಆಯಿತೋ, ದಲ್ಲಾಳಿಗಳು ಆಗಿ ಬಂದ ಬ್ರಿಟಿಷರು ಹೇಗೆ ದರೋಡೆಕಾರರು ಆದರೋ, ನಮ್ಮ ರಾಜರಲ್ಲಿ ಇಬ್ಬರಲ್ಲಿ ಸ್ವಲ್ಪ ಜಗಳ ಪ್ರಾರಂಭ ಆಯಿತೋ, ಅವರ ನಡುವೆ ಪ್ರವೇಶ ಮಾಡಿ ಅಥವಾ ಜಗಳ ಹಚ್ಚಿ ನಡುವೆ ಬಿದ್ದು ಮೂರನೆಯವರಾದ ತಾವು ಹೇಗೆ ಅದರಲ್ಲಿ ಲಾಭ ಹಿರಿದುಕೊಂಡರೋ ಇದು ಎಲ್ಲವೂ ಇತಿಹಾಸದ ಮಾತು. ಈ ಇತಿಹಾಸ ಎಲ್ಲವೂ ಈಚೆಗೆ ಬಯಲಿಗೆ ಬಿತ್ತು. ಬ್ರಿಟಿಷರು ವರ್ಷ ವರ್ಷವೂ ಇಲ್ಲಿಂದ ಸಂಪತ್ತಿನ ಕಾಲುವೆ ಹರಿಯಿಸಿಕೊಂಡರೋ ತಮ್ಮ ದೇಶಕ್ಕೆ ಅವರು ಬಂದ ಮೇಲೆ ಹೇಗೆ ಕ್ಷಾಮ ಡಾಮರಗಳು ಹೆಚ್ಚಿದವೋ ದೇಶದಲ್ಲಿ ಇದನ್ನೆಲ್ಲ ತಿಳಿಸುವ ಗ್ರಂಥಗಳು ಹುಟ್ಟಿದವು. ಭಾರತದ ಬಡತನಕ್ಕೆ ಮೂಲ ಕಾರಣ ಏನೋ ಬ್ರಿಟಿಷ್ ಕಂಪನಿ ಅಮಾನುಷ ರೀತಿಯಲ್ಲಿ ಕ್ರೂರತನದಿಂದ ಹೇಗೆ ನಮ್ಮ ಕೈಗಾರಿಕೆಯನ್ನು ಕೊಂದಿತೋ ಎಲ್ಲವೂ ತಿಳಿದುಬಂತು.

**ರಾಜಕೀಯ ಪ್ರಜ್ಞೆಯ ಹುಟ್ಟು**

ಇದರಿಂದಾಗಿ ರಾಜಕೀಯ ಪ್ರಜ್ಞೆ ಜನರಲ್ಲಿ ಮೂಡತೊಡಗಿತು. ಈ ರಾಜಕೀಯ ಜಾಗೃತಿಯೇ ರಾಷ್ಟ್ರೀಯ ಮಹಾಸಭೆಗೆ-ಕಾಂಗ್ರೆಸ್ಸಿಗೆ ಜನ್ಮಕೊಟ್ಟದ್ದು. ಭಾರತ ದೇಶದ ಪುನರುಜ್ಜೀವನಕ್ಕೆ ಈ ರಾಜಕೀಯ ಪ್ರಜ್ಞೆ ಒಂದೇ ಕಾರಣ ಆಗಲಿಲ್ಲ. ಧಾರ್ಮಿಕ, ಸಾಮಾಜಿಕ, ಶಿಕ್ಷಣದ ಕ್ಷೇತ್ರಗಳಲ್ಲಿ ಪುನರುತ್ಥಾನದ ಚಳವಳಿ ಮೊದಲೇ ರೂಪುಗೊಳ್ಳುತ್ತಿತ್ತು. ದಯಾನಂದ ಸರಸ್ವತಿ, ರಾಮಕೃಷ್ಣ ಪರಮಹಂಸ, ವಿವೇಕಾನಂದರ ಧಾರ್ಮಿಕ ಚಳವಳಿ ತಲೆಯೆತ್ತಿತ್ತು. ಭಾರತದ ಆತ್ಮವನ್ನು ಮತ್ತೆ ಚೇತನಗೊಳಿಸಬೇಕು ಎಂಬ ಚಳವಳಿ ಅದು. ಒಂದು ರಾಷ್ಟ್ರೀಯ ಸ್ವರೂಪ ಈ ಚಳವಳಿಗೆ ತಾನಾಗಿಯೆ ಬಂತು. ರಾಜಾ ರಾಮಮೋಹನ ರಾಯರು ಆಧುನಿಕ ಭಾರತದ ಜಾಗೃತಿಯ ಜನಕರು ಎನಿಸಿಕೊಂಡಿದ್ದಾರೆ. ಭಾರತದಲ್ಲಿ ಪಾಶ್ಚಿಮಾತ್ಯ ಶಿಕ್ಷಣ ಪ್ರಾರಂಭ ಆಗಲು ಬೇರೆ ಕೆಲವು ಕಾರಣ ಇದ್ದರೂ ರಾಜಾರಾಮ ಮೋಹನರಾಯರ ಪ್ರಯತ್ನವೇ ಹೆಚ್ಚು ಪರಿಣಾಮಕಾರಿ ಕಾರಣ. ಈ ಪ್ರಯತ್ನದ ನಡುವೆಯೇ ಅವರು ಇಂಗ್ಲೆಂಡಿಗೆ ಹೋಗಿ ಅಲ್ಲಿ ವಾದ ಮಾಡಿ ಈ ದೃಷ್ಟಿಯನ್ನು ಮಂಡಿಸಿದರು.

ರಾಜಾ ರಾಮಮೋಹನರಾಯರ ಕಾಲದಲ್ಲಿ ಬ್ರಹ್ಮ ಸಮಾಜ ಹುಟ್ಟಿತು. ಭಾರತದಲ್ಲಿ ಬಲವಾಗಿದ್ದ ಸಾಂಪ್ರದಾಯಿಕ ಶೃಂಖಲೆಗಳನ್ನು ಸಡಿಲಿಸಿ ಧರ್ಮವನ್ನು ವಿಶಾಲವಾದ ತಳಹದಿಯ ಮೇಲೆ ನಿಲ್ಲಿಸುವುದು ಅದರ ಉದ್ದೇಶ. ಮುಂದೆ ರಾಜಕೀಯದಲ್ಲಿ ಸ್ವತಂತ್ರ ವೃತ್ತಿಯನ್ನು ತೋರಿದ ಅನೇಕರು ಬ್ರಹ್ಮ ಸಮಾಜದವರು. ಗುರುದೇವ ಕವೀಂದ್ರ ರವೀಂದ್ರರೇ ಇಲ್ಲವೇ ಉದಾಹರಣೆಯಾಗಿ. ರಾಮಮೋಹನರ ತರುವಾಯ ಬ್ರಹ್ಮ ಸಮಾಜದ ಮುಖಂಡತನ ಕೇಶವಚಂದ್ರಸೇನರಿಗೆ ಹೋಯಿತು. ಅವರ ಕಾಲದಲ್ಲಿ ಅವರಿಗೂ ಬ್ರಹ್ಮ ಸಮಾಜದ ಇತರ ಸದಸ್ಯರಿಗೂ ವಿವಾದ ಹುಟ್ಟಿ, ಸಮಾಜ ಇಬ್ಭಾಗ ಆಯಿತು. ಸಾಧಾರಣ ಬ್ರಹ್ಮ ಸಮಾಜ ಹುಟ್ಟಿಕೊಂಡಿತು. ಅದರ ಅಧ್ಯಕ್ಷರೇ ಮುಂದೆ ಒಂದು ಸಲ ಕಾಂಗ್ರೆಸ್ ಅಧ್ಯಕ್ಷರಾದರು.

**ಕಾಂಗ್ರೆಸ್ ಉದಯ**

ಹೀಗೆ ಎಲ್ಲ ದಿಕ್ಕಿನಿಂದಲೂ ಪುನರುಜ್ಜೀವನದ ಗಾಳಿ ಬೀಸುತ್ತಿರುವಾಗ, ಭಾರತದ ರಾಷ್ಟ್ರೀಯ ಮಹಾಸಭೆ (ಕಾಂಗ್ರೆಸ್) ಪ್ರಾರಂಭ ಆಯಿತು. ಹಲವು ಭಾರತ ಪ್ರೇಮಿ ಇಂಗ್ಲಿಷರೇ ಇದರ ಸ್ಥಾಪನೆಗೆ ಕಾರಣ. ಎ.ಓ.ಹ್ಯೂಂ ಒಂದು ರೀತಿಯಲ್ಲಿ ಕಾಂಗ್ರೆಸ್ಸಿನ ಜನ್ಮದಾತರು ಎಂದರೂ ಎನ್ನಬಹುದು. ಅವರ ಪ್ರಯತ್ನ ಸಫಲವಾಗಿ ೧೮೮೫ರಲ್ಲಿ ಮೊಟ್ಟಮೊದಲು ಬೊಂಬಾಯಿಯಲ್ಲಿ ಕಾಂಗ್ರೆಸ್ ಸೇರಿತು.

❑

# ಅಧ್ಯಾಯ ೧



# ಗಾಂಧೀಜಿಯ ಭೇಟಿ, ೧೯೧೫-೧೯೨೧

**ಮೊ**ದಲ ಬಾರಿ ಕಾಂಗ್ರೆಸ್ ಸೇರಿದಾಗ ಗಾಂಧೀಜಿಗೆ ೧೫ ವರ್ಷ ಆಗಿತ್ತು. ಇನ್ನೂ ವಿದ್ಯಾರ್ಥಿ ದೆಸೆ.

ಇಂಥ ಪರಿಸ್ಥಿತಿಯಲ್ಲಿ ನಮ್ಮ ಜನ ಬದುಕಲಿಕ್ಕೆ ಎಂದು ಕೂಲಿಕುಂಬಳಿಗಾಗಿ ದೂರದ ದಕ್ಷಿಣ ಆಫ್ರಿಕಾಕ್ಕೆ ಹೋದರು. ಅಲ್ಲಿ ರಾಜ್ಯ ನಡೆಸುತ್ತಿದ್ದವರು ಅಲ್ಲಿಗೆ ಹೋಗಿ ನೆಲೆಸಿ ವಸಾಹತು ಕಟ್ಟಿಕೊಂಡ ಬಿಳಿ-ಕೆಂಪು ಜನ. ಅವರ ವ್ಯವಸಾಯಕ್ಕೆ, ಅವರ ತೋಟಗಾರಿಕೆಗೆ, ಕೆಲಸಗಾರರು ಬೇಕಾಗಿತ್ತು. ಭಾರತದಲ್ಲಿ ಇದ್ದಾರಲ್ಲ ಕೂಲಿಗಾರರು! ಕೆಲವು ಕರಾರು ಮಾಡಿಕೊಂಡು ದಕ್ಷಿಣ ಆಫ್ರಿಕಾಕ್ಕೆ ಅವರನ್ನು ಕರೆದೊಯ್ದರು. 'ಕರಾರು ಕೂಲಿಗಳು' ಎಂದು ಅವರನ್ನು ಕರೆಯತೊಡಗಿದರು. ನಮ್ಮ ಜನ ಅಲ್ಲಿಗೆ ಹೋದರೋ ಇಲ್ಲವೋ ಅವರ ಹಿಂದೆಯೇ ನಮ್ಮ ವರ್ತಕರೂ ಹೋದರು. ನಮ್ಮ ಜೀವನದ ಮಟ್ಟ ಬಿಳಿಯರ ಜೀವನದ ಮಟ್ಟಕ್ಕಿಂತ ತಗ್ಗು. ಎಂದರೆ ಅವರ ಜೀವನದ ಅವಶ್ಯಕತೆಗಳು ನಮಗಿಂತ ಹೆಚ್ಚು. ಹಾಗೆ ಬೆಳೆಸಿಕೊಂಡು ಬಿಟ್ಟಿದ್ದಾರೆ ಜೀವನವನ್ನು. ಇದರಿಂದಾಗಿ ನಮ್ಮವರಿಗೆ ಕೈಯಲ್ಲಿ ಸ್ವಲ್ಪ ಕಾಸು ಆಡಿತು. ಅಲ್ಲಿಯೇ ನೆಲೆಸುವ ಪ್ರಯತ್ನ ಮಾಡಿದರು. ಮನೆ ಮಾರು, ಹೊಲ ಹಸಿರು ಮಾಡಿಕೊಂಡರು. ಆದರೇನು? ನಮ್ಮವರು ಎಂಥವರೇ ಆಗಲಿ, ಎಷ್ಟು ಉನ್ನತ ಮಟ್ಟದ ಜನರೇ ಆಗಲಿ, ಅವರಿಗೆ ಕೂಲಿಗಳು ಎಂಬ ಹೆಸರು ತಪ್ಪಲಿಲ್ಲ. ಗಾಂಧೀಜಿ ದಕ್ಷಿಣ ಆಫ್ರಿಕಾಕ್ಕೆ ೧೮೯೩ರಲ್ಲಿ ವಕೀಲರಾಗಿ ಹೋದರು. ಅವರೂ 'ಕೂಲಿ ಬ್ಯಾರಿಸ್ಟರ್' ಎನಿಸಿಕೊಂಡರು.

**ಸತ್ಯಾಗ್ರಹ – ಅಮೃತ**

ಅಲ್ಲಿನ ಪರಿಸ್ಥಿತಿಯನ್ನು ಇದಿರಿಸಿ ದೀರ್ಘಕಾಲ ಹೋರಾಟ ನಡೆಸಿದರು ಗಾಂಧೀಜಿ. ಸಮುದ್ರ ಮಥನದಲ್ಲಿ ಅಮೃತ ಹುಟ್ಟಿ ಬಂದಂತೆ ಆ ಹೋರಾಟದಲ್ಲಿ ಹುಟ್ಟಿ ಬಂದದ್ದು ಸತ್ಯಾಗ್ರಹ. ಆ ಸತ್ಯಾಗ್ರಹವನ್ನೇ ಭಾರತಕ್ಕೆ ಮರಳಿ ಬಂದ ಮೇಲೂ ಪ್ರಯೋಗಿಸಿದರು

ಗಾಂಧೀಜಿ. ದಕ್ಷಿಣ ಆಫ್ರಿಕಾದ ಸತ್ಯಾಗ್ರಹದ ಆ ಕಥೆ ರೋಮಾಂಚಕಾರಿ. ಗಾಂಧೀಜಿಯೇ ಸ್ವಯಂ ಆ ಕಥೆಯನ್ನು ಹೇಳಿದ್ದಾರೆ. 'ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ' ಎಂಬ ಪುಸ್ತಕ ಅದು. ಕನ್ನಡದಲ್ಲೂ ಗಾಂಧೀಗ್ರಂಥ ಮಾಲೆಯಲ್ಲಿ ಆ ಪುಸ್ತಕ ಬಂದಿದೆ.

ದೇಶವನ್ನು ಗುಲಾಮಗಿರಿಯಿಂದ ಬಿಡಿಸಿ ಅದರಲ್ಲಿ ಹೊಸ ಜೀವನವನ್ನು ತುಂಬುವ ವಿಚಾರ ಕೆಲವರು ದೇಶವಾಸಿಗಳಲ್ಲಿ ಬಂತು. ಆ ಕೆಲಸಕ್ಕಾಗಿ ಪ್ರಾರಂಭ ಆದದ್ದೇ ಕಾಂಗ್ರೆಸ್ಸು. ಕೆಲವೇ ದಿನದಲ್ಲಿ ಕಾಂಗ್ರೆಸ್ಸಿನಲ್ಲಿಯೂ ಇಬ್ಭಾಗ ಆಯಿತು. ಒಂದು ಮಿತವಾದಿ ಪಕ್ಷ, ಇನ್ನೊಂದು ಉಗ್ರಗಾಮಿ ಪಕ್ಷ. ಪ್ರಾರಂಭದಲ್ಲಿ ಕಾಂಗ್ರೆಸ್ಸು ಮಿತವಾದಿಯೆ. ೧೯೦೫-೬ರಲ್ಲಿ ಅದರಲ್ಲಿ ತೀವ್ರತೆ ಹೆಚ್ಚಿತು. ಮಂದಗಾಮಿಗಳೂ ತೀವ್ರಗಾಮಿಗಳೂ ಎಂದು ಎರಡು ಪಕ್ಷ ಆದವು ಕಾಂಗ್ರೆಸಿನಲ್ಲಿ. ಆ ಕಥೆ ಬಲು ಸ್ವಾರಸ್ಯ. ಕಾಂಗ್ರೆಸ್ಸಿನ ಇದೆಲ್ಲ ಇತಿಹಾಸವನ್ನೂ ಎರಡು ದೊಡ್ಡ ಸಂಪುಟಗಳಲ್ಲಿ ಬರೆದಿದ್ದಾರೆ ಡಾ॥ ಪಟ್ಟಾಭಿ ಸೀತಾರಾಮಯ್ಯ (History of the Indian National Congress). ಈ ಮಾತು ಮುಂದುವರಿಸುವ ಮುನ್ನ ಆಗಿನ ಕ್ರಾಂತಿಕಾರರ ಬಗೆಗೆ ಒಂದೆರಡು ಮಾತು.

**ಭಾರತದ ಅಂದಿನ ಕ್ರಾಂತಿಕಾರರ ಆಂದೋಲನ**

ಗಾಂಧೀಜಿ ಭಾರತದ ರಾಜಕೀಯ ರಂಗದಲ್ಲಿ ಕಾಲಿಟ್ಟಾಗ ಇದ್ದ ಇನ್ನೂ ಒಂದು ಅಂಶವನ್ನು ಗಮನಿಸುವುದು ಸಮರ್ಪಕವಾಗಿದೆ. ಅದೆಂದರೆ, ರಾಷ್ಟ್ರ ಪ್ರೇಮದಿಂದ ಪ್ರೇರಿತರಾದ ಅಂದಿನ ಕ್ರಾಂತಿಕಾರರ ಮಾರಕ ಕಾರ್ಯವ್ಯೂಹದ ವಿಚಾರ. ಸ್ವಾತಂತ್ರ್ಯ ಕಾತರರಾದ ದೇಶದ ಅಂದಿನ ತರುಣ ವರ್ಗ, ಆಗ ಸ್ವಾಭಾವಿಕವಾಗಿಯೇ ಹಿಂಸಾಮಾರ್ಗದಲ್ಲಿ ಮುಂದುವರಿಯುತ್ತ ತಮ್ಮ ಪ್ರಾಣವನ್ನೇ ಪಣವಿಟ್ಟು ಸಂಘಟಿತರಾಗುತ್ತಿದ್ದರು. ಈ ಸಂಘಟನೆಯ ಫಲವಾಗಿ ಕ್ರಾಂತಿಕಾರರ ಸಂಘಗಳು ಅಲ್ಲಲ್ಲಿ ತಲೆ ಎತ್ತಿದವು. ಭಾರತದ ದಾಸ್ಯ ವಿಮೋಚನೆಯ ವಿಷಯದಲ್ಲಿ ಕ್ರಾಂತಿಕಾರರಿಗೆ ಹಿಂಸೆಯೇ ಗುರಿಯಾಗಿದ್ದರೆ, ಗಾಂಧೀಜಿಗೆ ಅಂದಿನ ಪರಿಸ್ಥಿತಿಯಲ್ಲಿ ಅಹಿಂಸಾತ್ಮಕ ಅಸಹಕಾರವು ಸ್ವಾತಂತ್ರ್ಯ ಪ್ರಾಪ್ತಿಯ ಕಾರ್ಯಕ್ಕೆ ತಕ್ಕ ಅಸ್ತ್ರವಾಗಿ ತೋರಿತು. ಮತ್ತು ಈ ಅಸ್ತ್ರದಿಂದಲೇ ಅವರು ಕೊನೆಗೆ ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು. ಇದು ಈಗ ಎಲ್ಲರೂ ಬಲ್ಲ ಸಂಗತಿಯೇ ಆಗಿದೆ.

ಸಿಪಾಯಿದಂಗೆ ಎಂದು ಹೆಸರಾದ ೧೮೫೭ರ ಭಾರತದ ದಾಸ್ಯ ವಿಮೋಚನೆಯ ಪ್ರಯತ್ನಾನಂತರ, ವಂಗಭಂಗದ ಮುನ್ನವೇ ಭಾರತದಲ್ಲಿ, ಅದರಲ್ಲೂ ಬಂಗಾಲದಲ್ಲಿ ಕ್ರಾಂತಿಕಾರಕ ವಿಚಾರಗಳು ಕಾರ್ಯರೂಪಕ್ಕೆ ಬರತೊಡಗಿದ್ದವು. ಮುಂದೆ ವಂಗಭಂಗದಿಂದ ಈ ದಿಸೆಯಲ್ಲಿ ಹೆಚ್ಚಿನ ಪ್ರಚೋದನೆ ಉಂಟಾಯಿತು. ಹೇಗಾದರೂ ಮಾಡಿ, ಭಾರತದ ಸೈನ್ಯದ ಸಹಾಯ ಪಡೆದು, ತನ್ಮೂಲಕ ಶಸ್ತ್ರ ಬಲದಿಂದ ಬ್ರಿಟಿಷರನ್ನು ಹೊರದೂಡಲು ಕ್ರಾಂತಿಕಾರರು ಅಲ್ಲಲ್ಲಿ ಸಂಘಟಿತರಾಗಿ ಹೊಂಚು ಹಾಕಿದ್ದರು ಮತ್ತು ಸಂಚು ಹೂಡಿದ್ದರು. ಇದರ ಜೊತೆಗೆ ದೊಡ್ಡ ದೊಡ್ಡ ಬ್ರಿಟಿಷ್ ಅಧಿಕಾರಿಗಳ ಬಲಿ ತೆಗೆದುಕೊಳ್ಳುವುದು ಕ್ರಾಂತಿಕಾರರ ಕಾರ್ಯಕ್ರಮಗಳಲ್ಲಿಯೂ ಅವರು ಕೈಕೊಂಡ ಪ್ರತಿಜ್ಞೆಯಲ್ಲಿಯೂ ಒಂದಾಗಿತ್ತು. ಇದಕ್ಕೆ

ಅನುಗುಣವಾಗಿ, ಗಾಂಧೀಜಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬರುವ ಹೊತ್ತಿಗೆ, ಕ್ರಾಂತಿಕಾರರು ಅನೇಕ ಬ್ರಿಟಿಷ್ ಅಧಿಕಾರಿಗಳ ಪ್ರಾಣಾಹುತಿ ತೆಗೆದುಕೊಂಡಿದ್ದರು. ಇಷ್ಟೇ ಅಲ್ಲ, ಈ ಸಂದರ್ಭದಲ್ಲಿ ಪ್ರಥಮ ಜಾಗತಿಕ ಮಹಾಯುದ್ಧದ ಲಾಭವನ್ನು ಪಡೆಯಲು ಕ್ರಾಂತಿಕಾರರು ತುಂಬ ಉತ್ಸುಕರಾಗಿದ್ದರು. ಗಾಂಧೀಜಿಯ ಅಭಿಪ್ರಾಯವೋ ಈ ಬಗ್ಗೆ ತದ್ವಿಪರೀತವಾಗಿತ್ತು.

ಕ್ರಾಂತಿಕಾರರ ಉದಯದ ವಿಷಯ ಉಲ್ಲೇಖಿಸುತ್ತ ಶ್ರೀ ಅರವಿಂದರು, ಪಿ.ಮಿತ್ರ ಮತ್ತು ಮಿಸ್ ಘೋಷಾಲ್ ಇವರು ಬ್ಯಾರನ್ ಓಕಾಕುರಾ(Baron Okakura) ಎಂಬವರಿಂದ ಸ್ಫೂರ್ತಿ ಪಡೆದು ಕ್ರಾಂತಿಕಾರಕ ಸಂಘ ಪ್ರಾರಂಭಿಸಿದರು ಎಂದು ಒಂದು ಕಡೆ ಹೇಳಿದ್ದಾರೆ. ಕ್ರಾಂತಿಕಾರರ ಜಾಲ ಬಂಗಾಲ, ಬಿಹಾರ, ಪಂಜಾಬ, ಮಧ್ಯಪ್ರದೇಶ, ಮಹಾರಾಷ್ಟ್ರ ಮೊದಲಾದ ಕಡೆಗಳಲ್ಲಿ ಹಬ್ಬಿತ್ತು. ಇಷ್ಟೇ ಅಲ್ಲ ಇದರ ಪ್ರಭಾವ ಕರ್ನಾಟಕದ ಬೆಳಗಾಂವಿಯ ವರೆಗೂ ಬಂದು ತಲುಪಿತ್ತು.

ಅಂದಿನ ಬ್ರಿಟಿಷ್ ಸರಕಾರದ ತೀವ್ರ ಸ್ವರೂಪದ ದಬ್ಬಾಳಿಕೆಗೆ ಸಹ ಮಣಿಯದೆ ವಿಧ್ವಂಸಕ ಗುಪ್ತ ಕಾರ್ಯಗಳು ನಡೆಯುತ್ತಲೇ ಇದ್ದವು. ಇದಕ್ಕೆ ಸಾಕ್ಷಿ ಸ್ವರೂಪವಾಗಿ, ಬಂಗಾಲದ ಡಿ.ಐ.ಜಿ ೨೮-೧-೧೯೧೫ರಲ್ಲಿ ಅಂದಿನ ರಾಜಕೀಯ ಪರಿಸ್ಥಿತಿಯ ಬಗ್ಗೆ ಕೊಟ್ಟ ಹೇಳಿಕೆಯ ಕೆಲ ಮಾತುಗಳನ್ನು ಉದ್ಧರಿಸಬಹುದು.

"............ The forces of revolution have in no way relaxed their activity and, ...... this extremely well organized movement defies all our efforts at repression and is considerably more virile and troublesome at the beginning of 1915 than it has been in the past". ಇದರ ಸಾರಾಂಶ:

"......ಕ್ರಾಂತಿಕಾರರ ದಲಬಲಗಳು ತಮ್ಮ ಕಾರ್ಯವನ್ನು ಸಡಿಲುಗೊಳಿಸಿಲ್ಲ, ಮತ್ತು ......ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ಸಂಘಟಿತವಾದ ಈ ಆಂದೋಲನವು ನಮ್ಮ ದಬ್ಬಾಳಿಕೆಯ ಪ್ರಯತ್ನಗಳನ್ನು ಲೆಕ್ಕಿಸುವುದೇ ಇಲ್ಲ, ಇಷ್ಟೇ ಅಲ್ಲ, ೧೯೧೫ರ ಆದಿಯಲ್ಲಿ ಅದು ಹಿಂದೆಂದಿಗಿಂತಲೂ ಇನ್ನೂ ಹೆಚ್ಚು ಪ್ರಬಲವಾಗಿದೆ ಹಾಗೂ ಪೀಡಾಕಾರಕವಾಗಿದೆ"

ಶ್ರೀ ಅರವಿಂದರು ಮತ್ತು ಶ್ರೀ ಸಾವರಕರರಂಥ ವಿಚಾರಶೀಲರ ವಿಚಾರಗಳು ಕೂಡ ಅತ್ತ ಹೊರಳಿದ್ದವು.

ಒಟ್ಟಿನಲ್ಲಿ, ಇಂಥ ರಾಜಕೀಯ ಹಿನ್ನೆಲೆ ಇದ್ದಾಗ. ಗಾಂಧೀಜಿ ತಮ್ಮ ಅಹಿಂಸಾತ್ಮಕ ಅಸಹಾಕಾರದ ಅಸ್ತ್ರದೊಂದಿಗೆ ಭಾರತದ ರಾಜಕೀಯ ರಂಗದಲ್ಲಿ ಕಾಲಿಟ್ಟರು. ಚೆನ್ನಾಗಿ ತೂಗಿ ನೋಡಿದ್ದಾದರೆ, ಭಾರತದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಇದೊಂದು ಬಹಳ ದೊಡ್ಡ ಘಟನೆಯೇ ಆಗಿದೆಯಲ್ಲದೆ, ಗಾಂಧೀಜಿಯ ಕಾರ್ಯಪ್ರಭಾವ ಬಹುಬೇಗ ವ್ಯಾಪಿಸಿ, ರಾಷ್ಟ್ರಾದ್ಯಂತ ಅದು ನವಜಾಗೃತಿಯನ್ನೇ ಉಂಟುಮಾಡಿತು. ಈ ಕಾಲಕ್ಕೆ ಸರಿಯಾಗಿ

ಗಾಂಧೀಜಿ ಒಂದು ವೇಳೆ ತಮ್ಮ ಅಹಿಂಸಾತ್ಮಕ ಅಸಹಕಾರ, ಖಾದಿ ಪ್ರಸಾರ ಮತ್ತು ಸತ್ಯಾಗ್ರಹದಂಥ ಸಾತ್ವಿಕ, ಆದರೂ ಸತ್ವಸಂಪನ್ನ ಅಸ್ತ್ರಗಳೊಂದಿಗೆ ಬಂದಿರದಿದ್ದರೆ ಭಾರತ ದೇಶ ಯಾವ ದಿಸೆಯಲ್ಲಿ ಹೆಜ್ಜೆ ಹಾಕುತ್ತಿತ್ತೋ ಹೇಳಲು ಬಾರದು.

ಇತ್ತ ಕಾಂಗ್ರೆಸ್ಸಿನಲ್ಲಿ ತೀವ್ರವಾದಿಗಳ ಪಕ್ಷಕ್ಕೆ ಅದರ ನಾಯಕರು ಲೋಕಮಾನ್ಯ ತಿಲಕರು. ಮಂದವಾದಿಗಳ ಪಕ್ಷಕ್ಕೆ ಗೋಖಲೆ. ಇಬ್ಬರದೂ ಒಂದೇ ತೆರದ ಸ್ವಭಾವ. ಇಬ್ಬರ ಮಾತಿನಲ್ಲೂ ಹೊಸದು ಏನೂ ಇರದಿದ್ದರೂ ಕಾವು ಇರುತ್ತಿತ್ತು. ತಿಲಕರು ಜನರ ಭಾಷೆಯಲ್ಲಿ ಮಾತಾಡುತ್ತಿದ್ದರು. ಅವರಿಗೆ ತಿಳಿಯುವಂತೆ ದಿನ ಬಳಕೆಯ ಉಪಮಾನ ಕೊಡುತ್ತಿದ್ದರು. ೧೯೦೬ರಲ್ಲಿ ಅವರು ಮೊದಲು ಬೆಳಗಾಂವಿಗೆ ಬಂದಾಗ ಅವರ ಮಾತಿನಿಂದ ಜನರ ಮೇಲೆ ಅದ್ಭುತ ಪರಿಣಾಮ ಆಯಿತು. ಹಳ್ಳಿಯ ಜನರಿಗೆ ತಿಳಿಯುವ ಹಾಗೆ ತಿಲಕರು ಗೋಕಾಕ್ ಗಿರಣಿಯ ಉದಾಹರಣೆ ಕೊಟ್ಟು ಸ್ವದೇಶಿ-ಬಹಿಷ್ಕಾರಗಳ ತತ್ವವನ್ನು ವಿವರಿಸಿದರು. ಆಗ ಬೆಳಗಾಂವಿಯ ಕಡೆ ಇದ್ದದ್ದು ಗೋಕಾಕ ಗಿರಣಿ ಒಂದೇ. ಗೋಕಾಕ್ ಗಿರಣಿ ಬಂಡವಾಳ ೨೦ ಲಕ್ಷ ರೂಪಾಯಿ. ಪ್ರತಿವರ್ಷವೂ ಭಾರತದಿಂದ ಬಟ್ಟೆಗಳ ಖರೀದಿಗಾಗಿ ಇಂಗ್ಲೆಂಡಿಗೆ ಎಷ್ಟು ರೂಪಾಯಿ ಹರಿದು ಹೋಗುತ್ತದೆ ಗೊತ್ತೇ? ಪ್ರತಿ ವರ್ಷವೂ ೪೦-೫೦ ಕೋಟಿ ರೂಪಾಯಿ ಬಟ್ಟೆಗಾಗಿ ಭಾರತದಿಂದ ಇಂಗ್ಲೆಂಡಿಗೆ ಹೋಗುತ್ತಿದೆ. ಅದೇ ರೂಪಾಯಿ ನಮ್ಮಲ್ಲೇ ಉಳಿದರೆ ಇಂಥ ಗಿರಣಿ ೨೦೦-೨೫೦ ಕಟ್ಟಬಹುದು ಎಂದರು. ಈ ಮಾತಿನಿಂದ ಸ್ವದೇಶಿಯ ಪ್ರಚಾರವೂ ಆಯಿತು, ವಸ್ತ್ರ ಬಹಿಷ್ಕಾರದ ಪ್ರಚಾರವೂ ಆಯಿತು.

ಸ್ವದೇಶಿ ಬಹಿಷ್ಕಾರಗಳನ್ನು ರಾಜಕಾರಣದಲ್ಲಿ ಬೆರೆಸಿ ರಾಷ್ಟ್ರೀಯತೆಯನ್ನು ತಿಲಕರು ಹಳ್ಳಿಯ ಬಯಲಿನಲ್ಲಿ, ಸಂತೆಮಾಳದಲ್ಲಿ ಬಿತ್ತಿದರು. ಜನತೆಯನ್ನು ಹುರಿದುಂಬಿಸಿದರು. ಎಲ್ಲೆಲ್ಲೂ ರಾಷ್ಟ್ರೀಯತೆಯ ಸ್ಫೂರ್ತಿ ಸೆಲೆ ಒಡೆಯಿತು. ತಿಲಕರು ರಾಷ್ಟ್ರೀಯತೆಯನ್ನು ಜನತೆಯಲ್ಲಿ ಬಿತ್ತಿದ್ದಲ್ಲದೆ, ರಾಷ್ಟ್ರೀಯತೆ ಸಫಲ ಆಗಲು ತ್ಯಾಗ ಬಲಿದಾನಗಳು ಅತ್ಯಗತ್ಯವೆಂಬುದನ್ನು ತೋರಿಸಿಕೊಟ್ಟರು.

ಯಾರೋ ಒಬ್ಬರು ಅವರನ್ನು ಕೇಳಿದರು: 'ಸ್ವರಾಜ್ಯ ಬಂದ ಮೇಲೆ ನೀವು ಏನು ಮಾಡುತ್ತೀರಿ?' 'ನಾನು ಯಥಾ ಪ್ರಕಾರ ಮತ್ತೆ ನನ್ನ ಗಣಿತ ಪಾಠ ಹೇಳಲು ಹೋಗುತ್ತೇನೆ' ಎಂದು ನೇರಾಗಿ ಬಂತು ಉತ್ತರ. ೧೯೦೫ರಲ್ಲಿ ಬೆಳಗಾಂವಿಗೆ ತಿಲಕರು ಬಂದಿದ್ದಾಗ ಅವರನ್ನು ಕೇಳಿದರು ಒಬ್ಬರು: 'ನಾಳೆ ನಿಮಗೆ ಅಧಿಕಾರ ಬಂದರೆ ಏನು ಮಾಡುತ್ತೀರಿ?' 'ಈಗ ಮಾಡಿದ್ದನ್ನೆ, ಈಗಿನ ಹಾಗೆಯೆ ಆಗ ಅಧಿಕಾರಕ್ಕೆ ಬಂದವರ ದೋಷಗಳನ್ನು ಎತ್ತಿ ತೋರಿಸುತ್ತ ಸುಧಾರಣೆಯ ಪ್ರಯತ್ನ ಮಾಡುತ್ತೇನೆ.'

**ಗಾಂಧೀಜಿ ತಿಲಕರ ಸಾಲಿನಲ್ಲಿ**

ಮುಂದೆ ೧೯೦೮ರಲ್ಲಿ ಬ್ರಿಟಿಷ್ ಸರಕಾರ ತಿಲಕರ ಮೇಲೆ ರಾಜದ್ರೋಹದ ಖಟ್ಲೆ ಹೂಡಿ, ೬ ವರ್ಷ ಶಿಕ್ಷೆ ಕೊಟ್ಟಿತು. ಸೆರೆಯಲ್ಲಿ ಇಟ್ಟರೂ ಅವರನ್ನು ಈ ದೇಶದಲ್ಲಿಯೇ ಇಡಬಾರದು ಎಂದು ಲೆಕ್ಕ ಹಾಕಿ ತಿಲಕರನ್ನು ಬರ್ಮಾದ ಮಂಡಾಲೆ ಸೆರೆಮನೆಗೆ ಕಳುಹಿಸಿತು.

ಅಲ್ಲಿಯೇ ಬರೆದದ್ದು ಅವರ 'ಗೀತಾರಹಸ್ಯ'. ಮುಂದೆ ಇಂಥದೇ ರಾಜದ್ರೋಹದ ಖಟ್ಲೆ ಗಾಂಧೀಜಿಯ ಮೇಲೆಯೂ ಹಾಕಿತ್ತು ಸರಕಾರ ೧೯೨೨ರಲ್ಲಿ. ಅವರಿಗೂ ೬ ವರ್ಷ ಶಿಕ್ಷೆ ಕೊಟ್ಟಿತು. ಆಗ ಗಾಂಧೀಜಿ ತಿಲಕರ ಮೇಲಿನ ಈ ಮೊಕದ್ದಮೆಯನ್ನೂ ಅವರಿಗೆ ಆದ ಶಿಕ್ಷೆಯನ್ನೂ ನೆನಪು ಮಾಡಿಕೊಂಡು, ಅಂಥ ಮಹಾಮಹಿಮರ ಸಾಲಿಗೆ ತಮ್ಮನ್ನು ಸೇರಿಸಿ ಗೌರವಿಸಿದ್ದಕ್ಕಾಗಿ ನ್ಯಾಯಾಧೀಶರಿಗೆ ವಂದನೆ ಅರ್ಪಿಸಿದರು.

**ಕರ್ನಾಟಕದಲ್ಲಿ**

ಹೀಗೆ ಕರ್ನಾಟಕದಲ್ಲಿ ತಿಲಕರ ಪ್ರಭಾವದಿಂದ ರಾಷ್ಟ್ರೀಯತೆ ಮೂಡಿತ್ತು. ರಾಜಕೀಯ ಜಾಗೃತಿ ಆಗಿತ್ತು. ದಿವಂಗತ ದೇಶಪಾಂಡೆ ಗಂಗಾಧರರಾಯರು ಬೆಳಗಾವಿಯ ರಾಜಕೀಯದಲ್ಲಿ ಕಾಲಿಟ್ಟು ಸಾಕಷ್ಟು ಪ್ರಭಾವ ಗಳಿಸಿಕೊಂಡಿದ್ದರು. ೧೯೦೬ರಲ್ಲಿ ಕಲಕತ್ತೆಯಲ್ಲಿ ನಡೆಯಿತು ಕಾಂಗ್ರೆಸ್. ಅಲ್ಲಿ ತಿಲಕರು 'ಹೊಸ ಪಕ್ಷದ ತತ್ವಗಳು' – Tenets of the New party ಎಂಬ ಭಾಷಣ ಮಾಡಿ, ತಮ್ಮ ಕಾರ್ಯಕ್ರಮದ ರೂಪುರೇಖೆಗಳನ್ನು ವಿವರಿಸಿದರು. ತುಂಬ ಓಜಸ್ವಿ ಭಾಷಣ ಅದು. ಅದರಲ್ಲಿ ಗಾಂಧೀಜಿಯ ಪದ್ಧತಿಯ ಚರ್ಚೆ ಇರಲಿಲ್ಲ. ಆಗ ಅದಕ್ಕೆ ಕಾಲವೂ ಅಲ್ಲ. ಆದರೆ ಮುಂದೆ ಗಾಂಧೀಯುಗದಲ್ಲಿ ಭಾರತದಲ್ಲಿ ರೂಢಿಗೆ ಬಂದ ಎಲ್ಲ ರೀತಿಗಳೂ ತಿಲಕರ ಕಣ್ಣ ಮುಂದೆ ಹಾಯ್ದು ಹೋಗಿದ್ದವು. ಗಾಂಧೀ ಚಳವಳಿಗೆ ಮುಂದೆ ಕರ್ನಾಟಕದಲ್ಲಿ ನಾಯಕರಾಗಿ ನಿಲ್ಲಲು ಆ ಭಾಷಣ ಪ್ರೇರಣೆ ನೀಡಿತೆಂದು ತಮ್ಮ ಆತ್ಮಕಥೆಯಲ್ಲಿ ಗಂಗಾಧರರಾಯರು ಹೇಳಿಕೊಂಡಿದ್ದಾರೆ.

ದೇಶದಲ್ಲಿ ಇಂಥ ಪರಿಸ್ಥಿತಿ ಇತ್ತು. ಹಿಂದೂಸ್ತಾನಕ್ಕೆ ಗಾಂಧೀಜಿ ಮರಳಿ ಬಂದಾಗ ಜನತೆಯ ಸಂಸ್ಥೆ ಆಗುವ ದಾರಿಯಲ್ಲಿ ಇತ್ತು ಕಾಂಗ್ರೆಸ್. ಸ್ವದೇಶಿ, ಬ್ರಿಟಿಷ್ ವಸ್ತ್ರದ ಬಹಿಷ್ಕಾರ ಸಂದೇಶ ಜನತೆಗೆ ಮುಟ್ಟಿತ್ತು. ೧೯೦೭ರಲ್ಲೇ ತಿಲಕರ ಪ್ರೋತ್ಸಾಹದಿಂದ ಪಾನನಿರೋಧ ಚಳವಳಿ ಪ್ರಾರಂಭ ಆಗಿತ್ತು. ಪಿಕೆಟಿಂಗ್ ಆಗಿತ್ತು. ಕರ್ನಾಟಕದಲ್ಲೂ ಆಗ ಈ ಚಳವಳಿ ನಡೆಯಿತು. ಅದರಲ್ಲಿ ಭಾಗವಹಿಸುವುದರಲ್ಲಿ ದಿ. ಗೋವಿಂದರಾವ್ ಯಾಳಗಿಯವರು ಪಾಚ್ಛಾಪುರದ ಡಾ.ಜೋಶಿಯವರು ಮುಖ್ಯರು. ಅದುವರೆಗೆ ಎಲ್ಲರಿಗೂ ದಂಡ ತೆರುವ ಅವಕಾಶ ಇತ್ತು. ಇವರಿಬ್ಬರೂ ದಂಡವನ್ನು ತೆರಲಿಲ್ಲ. ಜೈಲಿಗೆ ಹೋದರು. ಈ ಬಗ್ಗೆ 'ಕೇಸರಿ'ಯಲ್ಲಿ ಒಂದು ಅಭಿನಂದನಾ ಲೇಖನ ಬಂತು. ತಿಲಕರು ಗಂಗಾಧರರಾಯರಿಗೆ ಒಂದು ಅಭಿನಂದನಾ ಪತ್ರ ಖಾಸಗಿಯಾಗಿ ಬರೆದರು.

೧೯೧೫ರಲ್ಲಿ ಗಾಂಧೀಜಿ ಭಾರತಕ್ಕೆ ಮರಳಿ ಬಂದರು. ಆ ವೇಳೆಗೆ ಅವರ ಕೀರ್ತಿ ಭಾರತದಲ್ಲಿ ಹಬ್ಬಿತ್ತು. 'ಕರ್ಮವೀರ' ಎಂದು ಹೆಸರು ಕೊಟ್ಟಿತ್ತು ಜನ. ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹದ ಚಳವಳಿಯಲ್ಲಿ ಭಾಗವಹಿಸಿ ಅದನ್ನು ಯಶಸ್ವಿಗೊಳಿಸಿದವರಲ್ಲಿ ದಕ್ಷಿಣ ಭಾರತೀಯರು ಹೆಚ್ಚಾಗಿ ಇದ್ದರು. ಸಹಜವಾಗಿಯೇ ದಕ್ಷಿಣ ಭಾರತದ ಮೇಲೆ ಗಾಂಧೀಜಿಗೆ ಅಭಿಮಾನ.

ಗೋಖಲೆ ರಾಜಕೀಯದಲ್ಲಿ ಗುರುಗಳೆನಿಸಿದರು ಗಾಂಧೀಜೀಗೆ. ಅವರ ನೇತೃತ್ವದಲ್ಲಿ

ಕೆಲಸ ಮಾಡಬೇಕು ಎಂದು ಗಾಂಧೀಜಿ ಮನಸ್ಸು ಮಾಡಿದ್ದರು. ಆದರೆ ಅದು ಸಾಧ್ಯ ಆಗಲಿಲ್ಲ. ಗೋಖಲೆ ಅವರು ಗಾಂಧೀಜಿಗೆ ಒಂದು ಸೂಚನೆ ಕೊಟ್ಟಿದ್ದರು. ಒಂದು ವರ್ಷ ಕಾಲ ಇಡೀ ಭಾರತದ ಪ್ರವಾಸ ಮಾಡುತ್ತ ದೇಶದ ಪರಿಸ್ಥಿತಿಯನ್ನು ಅಭ್ಯಾಸ ಮಾಡಬೇಕು, ಆಮೇಲೆ ಸಾರ್ವಜನಿಕ ಕೆಲಸ ಮಾಡು ಎಂದು.

ಗಾಂಧೀಜಿ ಆತ್ಮಕತೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ೧೯೧೪ ಜುಲೈ ೧೮ರಲ್ಲಿ ನಾನು ಹಿಂದೂಸ್ತಾನಕ್ಕೆ ಹೊರಟೆ. ಬಹಳ ವರ್ಷಗಳ ತರುವಾಯ ಮನೆಗೆ ಮರಳುತ್ತಿದ್ದೆ. ಗೊಖಲೆಯವರ ಮಾರ್ಗದರ್ಶನದಲ್ಲಿ ದೇಶಸೇವೆ ಮಾಡಲು ಕಾತರನಾಗಿದ್ದೆ.

**ಭಾರತ ಸೇವಕ ಸಂಘ**

'ಗೋಖಲೆಯವರೂ ಭಾರತ ಸೇವಕ ಸಂಘದ ಸದಸ್ಯರೂ (Servants of Indian Society) ನನ್ನ ಮೇಲೆ ಪ್ರೀತಿ ತಳೆದರು. ನನ್ನನ್ನು ನೋಡಲು ಎಲ್ಲಾ ಸದಸ್ಯರನ್ನೂ ಕರೆಸಿದರು ಗೋಖಲೆ ಎಂದು ನನಗೆ ನೆನಪು. ಪ್ರತಿಯೊಂದು ಬಗೆಯ ವಿಷಯವನ್ನೂ ಬಿಚ್ಚು ಮನಸ್ಸಿನಿಂದ ಅವರೊಡನೆ ಚರ್ಚಿಸಿದೆ. ನಾನು ಸಂಘಕ್ಕೆ ಸೇರಬೇಕೆಂದು ಅವರಿಗೆ ತುಂಬಾ ಇಷ್ಟ. ನನಗೂ ತುಂಬಾ ಇಷ್ಟ. ಆದರೆ ನನ್ನ ಆದರ್ಶಗಳಿಗೂ ಕಾರ್ಯಕ್ರಮಕ್ಕೂ ಅವರದಕ್ಕೂ ಬಹಳ ವ್ಯತ್ಯಾಸ ಇದ್ದುದರಿಂದ ನಾನು ಸಂಘಕ್ಕೆ ಸೇರುವುದು ಸರಿಯಲ್ಲ ಎಂದು ಸಂಘದ ಸದಸ್ಯರು ಅಭಿಪ್ರಾಯಪಟ್ಟರು.

'ನಾನು ಬರಬೇಕಾದರೆ ಫೀನಿಕ್ಸ್ ಪರಿವಾರವೂ ನನ್ನ ಜೊತೆಯಲ್ಲೇ ಬಂದಿತ್ತು. ಅವರ ಸಮೇತ ಎಲ್ಲಾದರೂ ಗುಜರಾತಿನಲ್ಲಿ ನೆಲೆಸಬೇಕು, ಒಂದು ಆಶ್ರಮ ಕಟ್ಟಿಕೊಂಡು ಎಂದು ನನ್ನ ಮನಸ್ಸು. ಗುಜರಾತಿನ ಸೇವೆಯ ಮೂಲಕ ದೇಶಸೇವೆ ಯೋಗ್ಯ ಎಂದು ನಾನು ಹೇಳಿದೆ. ಸದಸ್ಯ ಆಗಿ ಸೇರಲಿ ಬಿಡಲಿ ಗೋಖಲೆಯವರಿಗೆ ಈ ವಿಚಾರ ರುಚಿಸಿತು. 'ಖಂಡಿತ ನೀನು ಹಾಗೆಯೇ ಮಾಡು, ನಿನ್ನ ಆಶ್ರಮದ ಯೋಗಕ್ಷೇಮದ ಹೊಣೆ ನನ್ನದು' – ಎಂದರು.

ಕರ್ನಾಟಕಕ್ಕೆ ಮೊಟ್ಟಮೊದಲು ಗಾಂಧೀಜಿ ಬಂದದ್ದು ೧೯೧೯ರ ಮೇ ತಿಂಗಳಲ್ಲಿ. ಅದೇ ತಿಂಗಳಲ್ಲಿಯೇ ಅಹಮದಾಬಾದಿನ ಬಳಿ ಸತ್ಯಾಗ್ರಹ ಆಶ್ರಮ ಸ್ಥಾಪಿತ ಆಯಿತು. ಅದೇ ಕಾಲಕ್ಕೆ ಮೊಟ್ಟಮೊದಲನೇ ಕನ್ನಡ ಸಾಹಿತ್ಯ ಸಮ್ಮೇಳನವೂ ಬೆಂಗಳೂರಿನಲ್ಲಿ ನಡೆಯಿತು. ದಕ್ಷಿಣ ಆಫ್ರಿಕಾದಲ್ಲಿ ದಿಗ್ವಿಜಯ ಮಾಡಿ ಬಂದ ಕರ್ಮವೀರ ಎಂ.ಕೆ.ಗಾಂಧಿಯನ್ನು ಸ್ವಾಗತಿಸಲು ಬೆಂಗಳೂರು ನಗರ ಉತ್ಸಾಹದಿಂದ ತುಳುಕುತ್ತಿತ್ತು. ಮೈಸೂರಿನ ಸಾರ್ವಜನಿಕ ಜೀವನದಲ್ಲಿ, ನುಡಿಯ ಸೇವೆಯಲ್ಲಿ ಆ ವೇಳೆಗೆ ಆಗಲೇ ಒಂದು ಗೌರವ ಸ್ಥಾನವನ್ನು ಗಳಿಸಿಕೊಂಡಿದ್ದ ಕನ್ನಡನಾಡಿನ ಹಿರಿಯ ರಾಜಕಾರಣಿ ಸಾಹಿತಿ ಶ್ರೀ ಡಿ.ವಿ.ಗುಂಡಪ್ಪನವರು ಗಾಂಧೀಜಿಯನ್ನು ಬೆಂಗಳೂರಿಗೆ ಬರಮಾಡಿಕೊಳ್ಳಲು ಮದರಾಸಿನ ಶ್ರೀ ಜಿ.ಎ.ನಟೇಶನ್ ಅವರ ಸಂಗಡ ಪತ್ರವ್ಯವಹಾರ ಮಾಡಿದರು. ಆ ಕಾಲಕ್ಕೆ ರಾಷ್ಟ್ರೀಯ ಸಾಹಿತ್ಯವನ್ನು ಸುಲಭವಾಗಿ ಒದಗಿಸಿ ದಕ್ಷಿಣ ಭಾರತಕ್ಕೆ ಶ್ರೀ ಜಿ.ಎ.ನಟೇಶನ್ ಅತ್ಯಂತ ಸ್ತುತ್ಯ ಸೇವೆಯನ್ನು ಮಾಡಿ ಹೆಸರಾಗಿದ್ದರು.

**ಆಫ್ರಿಕಾಕ್ಕೆ ಕನ್ನಡಿಗರ ಕಾಣಿಕೆ**

ಆಗ ಶ್ರೀ ಡಿ.ವಿ. ಗುಂಡಪ್ಪನವರ 'ಕರ್ನಾಟಕ' ಎಂಬ ಇಂಗ್ಲಿಷ್ ಪತ್ರಿಕೆ ಬೆಂಗಳೂರಿಂದ ಹೊರಡುತ್ತಿತ್ತು. ಶ್ರೀ ಜಿ.ಎ. ನಟೇಶನ್ ಗಾಂಧೀಜಿಯ ದಕ್ಷಿಣ ಆಫ್ರಿಕಾ ಸತ್ಯಾಗ್ರಹಕ್ಕೆ ದಕ್ಷಿಣ ಭಾರತದಲ್ಲಿ ನಿಧಿ ಕೂಡಿಸುವ ಕೆಲಸ ಕೈಕೊಂಡಿದ್ದರು. ಗುಂಡಪ್ಪನವರ 'ಕರ್ನಾಟಕ' ಪತ್ರಿಕೆಯಲ್ಲೂ ಒಂದು ಜಿನ್ನಹ ಬಂತು. ಮೈಸೂರು ಸಂಸ್ಥಾನಕ್ಕೆ ಆಗ ದಿವಾನರಾಗಿದ್ದವರು ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು. ಅವರಿಂದ ನಿಧಿಗೆ ಇನ್ನೂರು ರೂಪಾಯಿ ದಾನ ಬಂತು. ಒಟ್ಟು ೧೮೦೦ ರೂಪಾಯಿ ಕೂಡಿತು. ಆ ನಿಧಿಯನ್ನು ಶ್ರೀ ನಟೇಶನ್ ಅವರಿಗೆ ಕಳಿಸಿದ್ದರು.

ಮೈಸೂರಿನವರು–ಕನ್ನಡಿಗರು ತಮ್ಮ ಕಾಣಿಕೆ ಸಲ್ಲಿಸಿದ್ದರಲ್ಲ. ಈಗ ಅವರ ಕಡೆಯಿಂದ ಇಲ್ಲಿಗೆ ಬರಬೇಕು ಎಂಬ ಪ್ರಾರ್ಥನೆ ಹೋದಾಗ ಗಾಂಧೀಜಿ ಮನ್ನಿಸಿದರು. ಅಂತೂ ಆ ಕರ್ಮವೀರರು ಮೇ ತಿಂಗಳ ೮ನೇ ತಾರೀಖು ಬೆಂಗಳೂರಿಗೆ ಬರುವುದು ಗೊತ್ತಾಯಿತು. ಅದೇ ಮೊಟ್ಟ ಮೊದಲು (೧೯೧೫) ಗಾಂಧೀಜಿ ಬೆಂಗಳೂರಿಗೆ ಬಂದದ್ದು.

ಮದರಾಸಿನಿಂದ ಶ್ರೀ ನಟೇಶನ್ ಜೊತೆಯಲ್ಲಿ ಬಂದಿತು ಗಾಂಧೀ ಪರಿವಾರ. ಗಾಂಧೀ ದಂಪತಿಗಳು ಇಬ್ಬರೂ ಬಂದರು. ಈಗಿನಂತೆ ಮದರಾಸ್ ಮೈಲ್ ಬೆಂಗಳೂರಿಗೆ ಬೆಳಗ್ಗೆ ಬರುತ್ತಿತ್ತು. ಗಾಂಧೀಜಿ ಯಾವಾಗಲೂ ಮೂರನೇ ತರಗತಿ ಪ್ರಯಾಣಿಕರು. ಅವತ್ತು ಮಾತ್ರ ಮೊದಲನೆ ತರಗತಿಯಲ್ಲಿ ಬಂದರು. ಶ್ರೀ ನಟೇಶನ್‌ಗೆ ದೇಹಾಲಸ್ಯ. ಅವರನ್ನು ನೋಡಿಕೊಂಡು ಆರೈಕೆ ಮಾಡಬೇಕಲ್ಲ. ಅದಕ್ಕಾಗಿ ಅವತ್ತು ಅವರ ಜೊತೆಯಲ್ಲೇ ಬಂದರು.

ಆಗಲೇ ಗಾಂಧೀಜಿಯ ಕೀರ್ತಿ ಭರತಖಂಡದಲ್ಲೆಲ್ಲ ವ್ಯಾಪಿಸಿತ್ತು. ಅಷ್ಟಾದರೂ ಸರಳತೆಯಿಂದ ತುಂಬಿ ತುಳುಕುತ್ತಿದ್ದ ಗಾಂಧೀಜಿಯನ್ನು ನೋಡಿ ಬೆಂಗಳೂರಿನ ಜನ ಬೆರಗಾದರು. ಗಾಂಧೀಜಿಯ ಪೋಷಾಕಿನಲ್ಲಿ ಅಂತಸ್ತು ಗಿಂತಸ್ತು ಯಾವುದೂ ಇರಲಿಲ್ಲ. ಅಚ್ಚ ಕಾಠೇವಾಡಿಯ ಹಾಗೆ ಅವರ ಬದುಕು. ಒಂದು ಕಸೆ ಅಂಗಿ, ಒಂದು ಗುಜರಾತಿ ಪೇಟಾ, ಒಂದು ಧೋತರ. ಕಸ್ತೂರಬಾನೂ ಅಷ್ಟೇ. ಒಂದು ಕೆಂಪು ಅಂಚಿನ ಬಿಳಿ ಸೀರೆ, ಸ್ವಚ್ಛ, ಶುಭ್ರ.

**ಗಾಂಧೀಜಿಯ ಸರಳತೆ**

ಅವರ ಸಾಮಾನೂ ಬಹಳ ಸ್ವಲ್ಪ. ಒಂದು ಕೈಗಂಟು, ನೀರು ಕುಡಿಯುವ ಒಂದು ಹೂಜಿ. ಅವನ್ನು ತೆಗೆದುಕೊಂಡೇ ರೈಲಿಂದ ಇಳಿದರು ಗಾಂಧೀಜಿ. ಈ ಲೋಕನಾಯಕ ಇಷ್ಟು ಸರಳ, ಸಾದಾ ರೈತನ ಹಾಗೆ ಇರುತ್ತಾನೆ ಎಂದು ಬೆಂಗಳೂರಿನವರಿಗಂತೂ ಅನಿಸಿರಲಿಲ್ಲ. ಅವರನ್ನು ಗುರುತಿಸುವುದು ಸ್ವಾಗತಿಸಲು ಬಂದಿದ್ದವರಿಗೆ ಸ್ವಲ್ಪ ಕಷ್ಟವೇ ಆಯಿತು.

ಸತ್ಯಾಗ್ರಹದ ನಾಯಕ, ಅಹಿಂಸಾವೀರ, ಇಂಥವರಿಗೆ ಭವ್ಯ ಸ್ವಾಗತ ನೀಡಬೇಡವೆ? ಬೀದಿಯಲ್ಲಿ ಬಣ್ಣ ಬಣ್ಣದ ಪತಾಕೆಗಳನ್ನು ಕಟ್ಟಿ ಅಲಂಕರಿಸಿದ್ದರು. ಮದರಾಸಿನಲ್ಲಿಯೂ ಹೀಗೆಯೇ ಮಾಡಿದ್ದರು. ಆದರೆ ಈ ಅಚ್ಚ ಭಾರತೀಯನಿಗೆ ಇದೆಲ್ಲವೂ ಬೇಡವಾಗಿತ್ತು. ಇದು ಪಾಶ್ಚಾತ್ಯರ ಅನುಕರಣೆ. ಇದಕ್ಕಿಂತಲೂ ನಮ್ಮ ಹಳ್ಳಿಗಳಲ್ಲಿ, ಹಬ್ಬ ಹರಿದಿನಗಳಲ್ಲಿ,

ಜಾತ್ರೆ ಉತ್ಸವಗಳಲ್ಲಿ ಮಾಡುವಂತೆ ತಳಿರು–ತೋರಣ ಕಟ್ಟಿದ್ದರೆ ಚೆನ್ನು. ಅಲಂಕಾರಕ್ಕೆ ಅಲಂಕಾರ, ಸಂಪ್ರದಾಯಕ್ಕೆ ಸಂಪ್ರದಾಯ, ಮಿತವ್ಯಕ್ಕೆ ಮಿತವ್ಯಯ. ಮದರಾಸಿನಲ್ಲಿ ಮಸಬಿಜ್ಜಿ ಅಲ್ಲಿಯ ವ್ಯವಸ್ಥಾಪಕರನ್ನ ಟೀಕಿಸಿದ್ದರು. ಪತ್ರಿಕೆಗಳಲ್ಲಿ ಈ ಸುದ್ದಿ ಬಂದಿತು. ಅದನ್ನು ಓದಿ ಬೆಂಗಳೂರಿನವರು ಮೊದಲೇ ಎಚ್ಚೆತ್ತುಗೊಂಡರು. ರಾತ್ರೋರಾತ್ರಿ ಆ ಬಾವುಟಗಳನ್ನು ಬಿಚ್ಚಿಸಿದರು. ಅದರ ಬದಲು ಮಾವಿನ ತಳಿರು ತೋರಣಗಳನ್ನು ಕಟ್ಟಿದರು. ಬಾಳೆಯ ಕಂಬಗಳನ್ನು ನಿಲ್ಲಿಸಿದರು. ಎಲ್ಲವೂ ಶುಭ ಸಂಕೇತ. ಬ್ಯಾಂಡನ್ನು ಬಿಟ್ಟರು. ಬ್ಯಾಂಡ್ ಜನಪ್ರಿಯ ಆಗಿತ್ತು ಆಗಲೇ. ಆಡಂಬರಕ್ಕೆ, ಶ್ರೀಮಂತಿಕೆಗೆ ಅದು ಮುಖ್ಯ. ಬ್ಯಾಂಡ್ ವಾದ್ಯಗಾರರಿಗೆ ಹೆಚ್ಚು ದುಡ್ಡು ಕೊಡಬೇಕಲ್ಲ. ಆದರೆ ಸ್ವಾಗತ ಸಮಿತಿಯವರು ಇದರಲ್ಲೂ ಮಾರ್ಪಾಟು ಮಾಡಿದರು. ಅದನ್ನು ಕೈಬಿಟ್ಟು ಸೊಗಸಾದ ನಾಗಸ್ವರವನ್ನು ಏರ್ಪಡಿಸಿದರು. ಓಲಗ ಬಹಳ ಚೆನ್ನಾಗಿತ್ತು. ಆಮೇಲೆ ಓಲಗವೇ ಸಂಪ್ರದಾಯ ಆಯಿತು.

**ಗಾಂಧೀಜಿ ಬಂದರು**

ಗಾಂಧೀಜಿ, ಕಸ್ತೂರಬಾ ಇಬ್ಬರೂ ರೈಲು ಇಳಿದು ಸ್ಟೇಷನ್ನಿನಿಂದ ಹೊರ ಬಿದ್ದರು. ಅವರಿಗಾಗಿ ಕುದುರೆ ಸಾರೋಟು ಒಂದು ಸಿದ್ಧ ಆಗಿ ನಿಂತಿತ್ತು. ಬಂದ ಸುಪ್ರಸಿದ್ಧ ಅತಿಥಿಗಳನ್ನು ಮೆರವಣಿಗೆಯ ಮೂಲಕ ಬಿಡಾರಕ್ಕೆ ಕರೆದೊಯ್ಯಬೇಕಲ್ಲ. ಶುಭದಿನಗಳಲ್ಲಿ ಸಾಮಾನ್ಯ ಅತಿಥಿಗಳಿಗೇ ಈ ಮರ್ಯಾದೆ ನಡೆಯುತ್ತದೆ. ಲೋಕ ವಿಖ್ಯಾತ ಅತಿಥಿ. ಮೊದಲನೆ ಸಾರಿಗೆ ಬಂದಿದ್ದಾರೆ. ಅವರಿಗಾಗಿ ಮೆರವಣಿಗೆ ಸಜ್ಜು ಆಗಿತ್ತು. ವಿದ್ಯಾರ್ಥಿಗಳಿಗೆ ಇಷ್ಟರಿಂದ ತೃಪ್ತಿ ಆದೀತೆ? ವಿದ್ಯಾರ್ಥಿಗಳು ಎಂದರೆ ಆಗಲೂ ಒಂದೇ ಈಗಲೂ ಒಂದೇ. ಅತ್ಯುತ್ಸಾಹ ವಿದ್ಯಾರ್ಥಿಗಳು ಬಂದರು. ಸಾರೋಟಿಗೆ ಕಟ್ಟಿದ್ದ ಕುದುರೆಗಳನ್ನು ಬಿಚ್ಚಿದರು. 'ನೀವು ಕುಳಿತುಕೊಳ್ಳಿ, ನಾವೆಲ್ಲ ಗಾಡಿಯನ್ನು ಎಳೆಯುತ್ತೇವೆ' ಎಂದರು. ಗಾಂಧೀಜಿಗೆ ತಮ್ಮ ಗೌರವ ಸಲ್ಲಿಸಬೇಡವೆ? ಆದರೆ ಗಾಂಧೀಜಿ ಒಪ್ಪಬೇಕಲ್ಲ! ನರವಾಹನರಾಗಿ ಬರುವುದುಂಟೆ? ಅದು ಅಮಾನುಷ 'ಮನುಷ್ಯ ಮನುಷ್ಯನಿಗೆ ಅಗೌರವ ಮಾಡಿದಂತೆ' (Man's inhumanity to man) ಅವರು ಗಾಡಿಯಲ್ಲಿ ಕುಳಿತುಕೊಳ್ಳಲು ಒಪ್ಪಲಿಲ್ಲ. ಖಂಡಿತ ಆಗುವುದಿಲ್ಲ ಎಂದರು.

ಸ್ಟೇಷನ್ನಿನಿಂದ ಬಿಡಾರ ಎಷ್ಟು ದೂರ ಎಂದು ಕೇಳಿದರು. ಸುಮಾರು ಅರ್ಧ ಮೈಲಿ ಎಂದು ತಿಳಿಯಿತು. 'ಹಾಗಾದರೆ ನಡೆದೇ ಹೋಗೋಣ' ಎಂದರು. ವಿಧಿಯಿಲ್ಲ. ಕಾಲು ನಡಿಗೆಯಲ್ಲೇ ಮೆರವಣಿಗೆ ಆಯಿತು. ಜಯಘೋಷ ಮುಗಿಲನ್ನು ಸೀಳಿತು. ಅಂತೂ ಬಿಡಾರಕ್ಕೆ ಬಂದರು.

ಬಿಡಾರವೂ ಬಹಳ ದೂರ ಇರಲಿಲ್ಲ. ಈಗ ಆನಂದರಾವ್ ವೃತ್ತ ಇದೆಯಲ್ಲ. ಅವರ ಬಳಿಯಲ್ಲಿಯೇ ಶೇಷಾದ್ರಿ ರೋಡಿನಲ್ಲಿರುವ ಳನೆಯ ಬಿಡಾರ. ಜಿಲ್ಲಾ ನ್ಯಾಯಾಧೀಶರು ಶ್ರೀ ಬಿ.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರು ಅಲ್ಲಿ ಹೊಸತಾಗಿ ಮನೆ ಕಟ್ಟಿಸಿದ್ದರು. ಈಗ ಹೆಬ್ಬಾರ್ ಶ್ರೀವೈಷ್ಣವ ಸಭಾ ಇದೆಯಲ್ಲ ಅದರ ಇದಿರಿಗೆ. ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರ್ಯರು ನಿವೃತ್ತರಾಗಿದ್ದರು. ಅವರ ಮಗ ಶ್ರೀ ಬಿ. ಕೆ. ಶ್ರೀನಿವಾಸ

ಅಯ್ಯಂಗಾರ್ಯರು ಸೆಂಟ್ರಲ್ ಕಾಲೇಜಿನ ಅಸಿಸ್ಟೆಂಟ್ ಪ್ರೊಫೆಸರ್. ಆ ಬಂಗ್ಲೆ ಹೊಸದು. ಇನ್ನೂ ಗೃಹಪ್ರವೇಶ ಆಗಿರಲಿಲ್ಲ ಶಾಸ್ತ್ರೋಕ್ತವಾಗಿ. ಅಂಥಲ್ಲಿ ಇಂಥ ದೊಡ್ಡವರ ಪಾದಧೂಳಿ ಬಿದ್ದರೆ ಶುಭ ಅಲ್ಲವೆ. ಶ್ರೀ ಅಯ್ಯಂಗಾರ್ಯರು ಇಡೀ ಮನೆಯನ್ನೇ ಗಾಂಧೀಜಿಯ ಬಿಡಾರಕ್ಕೆ ಬಿಟ್ಟುಕೊಟ್ಟಿದ್ದರು.

ಮನೆಯ ಬಾಗಿಲಿಗೆ ಬಂದೊಡನೆ ಗಾಂಧೀ ದಂಪತಿಗಳಿಗೆ ಆರತಿ ಎತ್ತಿದರು. ಒಳಗೆ ಸ್ನಾನ, ಊಟ, ತಿಂಡಿ ಎಲ್ಲ ವ್ಯವಸ್ಥೆಯೂ ಸಮರ್ಪಕ ಆಗಿತ್ತು. ಐರಿಷ್ ಪ್ರೆಸ್ಸಿನ ಶ್ರೀ ಕೆ.ಎಸ್. ಕೃಷ್ಣಯ್ಯರ್ ಮೇಲ್ವಿಚಾರಕರು ಎಂದ ಮೇಲೆ ಅದರಲ್ಲಿ ಲೋಪ ಇಲ್ಲ ಎಂದು ಬೆಂಗಳೂರಿನ ಅನುಭವ. ಮುಂದೆ ಶ್ರೀ ಕೃಷ್ಣಯ್ಯರ್ ಅವರು ದೇಶೀಯ ವಿದ್ಯಾಶಾಲೆಯಲ್ಲಿ ಉಪಾಧ್ಯಾಯರೂ ಮುಖ್ಯೋಪಾಧ್ಯಾಯರೂ ಆದರು.

**ಗಾಂಧೀಜಿಯ ಊಟ**

ಆಗ ಗಾಂಧೀಜಿ ತಿನ್ನುತ್ತಿದ್ದುದು ನೆಲಗಡಲೆ ಬೀಜ, ಹಣ್ಣುಹಂಪಲು. ಅದೂ ಕೂಡ ಇಷ್ಟೇ ಎಂದು ಮಿತಿ. ಇದೆಲ್ಲವನ್ನೂ ಶ್ರೀ ಕೃಷ್ಣಯ್ಯರ್ ಮೊದಲೇ ತಿಳಿದುಕೊಂಡಿದ್ದರು. ಅತಿಥಿಗೆ ರಾಜೋಪಚಾರ ಬೇಡವೆ? ಬೆಂಗಳೂರಿನ ನಾಗರಿಕರ ಅಭಿಪ್ರಾಯವೂ ಹಾಗೆಯೇ ಇತ್ತು. ಅದನ್ನು ಶ್ರೀ ಡಿ.ವಿ.ಗುಂಡಪ್ಪನವರ ಮಾತಿನಲ್ಲಿಯೇ ಮುಂದೆ ತಿಳಿಸುತ್ತೇನೆ. ಅಂತೂ ಬೆಲೆ ಬಾಳುವ ಸೇಬಿನ ಹಣ್ಣನ್ನು ತರಿಸಿದ್ದರು. ಇಷ್ಟು ಬೆಲೆಯದು ಏಕೆ ಎಂದು ಗದರಿದರು ಗಾಂಧೀಜಿ. ಅದನ್ನು ಬಿಟ್ಟು ಅಲ್ಲಿದ್ದ ಪರಂಗಿ ಹಣ್ಣನ್ನು ತಿಂದರು. ಪರಂಗಿ ಹಣ್ಣು ಗಾಂಧೀಜಿಗೆ ತುಂಬಾ ಇಷ್ಟ.

ಬೆಂಗಳೂರಿನ ಮೊಟ್ಟ ಮೊದಲಿನ ಸಾರ್ವಜನಿಕ ಕಾರ್ಯಕ್ರಮ ಶ್ರೀ ಗುಂಡಪ್ಪನವರ ಸೋಷಿಯಲ್ ಕ್ಲಬ್ ಏರ್ಪಡಿಸಿತ್ತು. ಸ್ಥಳ ಆಗಿನ ಗೌವರ್ನಮೆಂಟ್ ಹೈಸ್ಕೂಲ್ ಸಭಾಭವನ. ಈಗ ಆರ್ಟ್ಸ್ ಮತ್ತು ಸೈಯನ್ಸ್ ಕಾಲೇಜು ಆಗಿದೆ. ಸಭೆಯಲ್ಲಿ ಅನೇಕರು ಗಣ್ಯವ್ಯಕ್ತಿಗಳು ನೆರೆದಿದ್ದರು. ನಿವೃತ್ತ ದಿವಾನ್ ಸರ್.ಟಿ. ಆನಂದರಾಯರು ಯಾವ ಸಾರ್ವಜನಿಕ ಸಭೆಯಲ್ಲೂ ಭಾಗವಹಿಸುತ್ತಿರಲಿಲ್ಲ. ವಿಶ್ರಾಂತಿ ಪಡೆಯುತ್ತಿದ್ದರು. ಅವರೂ ಬಂದಿದ್ದರು ಅಂದಿನ ಸಭೆಗೆ. ಅವತ್ತು ಮೇ ತಿಂಗಳು ೮ನೇ ತಾರೀಖು, ೧೯೧೫ನೇ ಇಸವಿ.

**ಹೊತ್ತಿಗೆ ಸರಿಯಾಗಿ**

ಕಾರ್ಯಕ್ರಮ ಹೊತ್ತಿಗೆ ಸರಿಯಾಗಿ ಪ್ರಾರಂಭ ಆಯಿತು. ನಾಟ್ಯಕಳಾ ಪ್ರಪೂರ್ಣ ಬಳ್ಳಾರಿ ರಾಘವ ಅವರು ಸಭೆಗೆ ಬಂದಿದ್ದರು. ಮೊಟ್ಟ ಮೊದಲು ಕವಿ ಸಾರ್ವಭೌಮ ರವೀಂದ್ರನಾಥ ಠಾಕೂರರ ಗೀತಾಂಜಲಿಯಿಂದ ಕೆಲವು ಸಮಯೋಚಿತ ಕವನ (Leave this chanting and telling of beads)ಗಳನ್ನು ಇಂಗ್ಲಿಷಿನಲ್ಲಿ ವಾಚನ ಮಾಡಿದರು, ಬಲು ಸೊಗಸಾಗಿತ್ತು ವಾಚನ. ಕಾರ್ಯಕ್ರಮವೂ ಅದರಿಂದಲೇ ಪ್ರಾರಂಭ. ಆಮೇಲೆ ಗಾಂಧಿ ದಂಪತಿಗಳಿಗೆ ಒಂದು ಬಿನ್ನವತ್ತಳೆಯನ್ನು ಸಮರ್ಪಿಸಿದರು. ಇಂಗ್ಲಿಷಿನ ಬಿನ್ನವತ್ತಳೆಯನ್ನು ಶ್ರೀ ಕೆ.ಎಸ್. ಕೃಷ್ಣಯ್ಯರ್ ಅವರು ಓದಿದರು. ಕನ್ನಡದ್ದನ್ನು ಶ್ರೀ ಡಿ.ವಿ.ಗುಂಡಪ್ಪನವರು ಓದಿದರು.

**ಗೋಖಲೆ ಭಾವಚಿತ್ರ ಅನಾವರಣ**

ಗಾಂಧೀಜಿ ಬಿನ್ನವತ್ತಳೆಗೆ ಇಂಗ್ಲಿಷಿನಲ್ಲಿ ಉತ್ತರಕೊಟ್ಟರು. ಆಮೇಲೆ ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡಬೇಕೆಂದು ಸಭೆಯ ಪರವಾಗಿ ಕೇಳಿಕೊಳ್ಳಲಾಯಿತು. ಸಭೆಯ ಮುಖ್ಯ ಉದ್ದೇಶವೂ ಅದೇ. ಗಾಂಧೀಜಿ ಸಂತೋಷದಿಂದ ಭಾವಚಿತ್ರ ಅನಾವರಣ ಮಾಡಿದರು. ಆಗ ಹೀಗೆ ಹೇಳಿದರು:

"ನನ್ನ ಪ್ರಿಯ ದೇಶ ಬಾಂಧವರೇ, ಈ ಭಾವಚಿತ್ರ ಅನಾವರಣ ಮಾಡಲು ನನ್ನನ್ನು ಇಲ್ಲಿಗೆ ಬರಮಾಡಿದ್ದೀರಿ. ಈ ಶುಭ ಕಾರ್ಯ ಮಾಡುವ ಮುನ್ನ ಎರಡು ಮಾತು ಹೇಳಬಯಸುತ್ತೇನೆ. ಈ ಕೆಲಸಕ್ಕಾಗಿ ನನ್ನನ್ನು ಇಲ್ಲಿಗೆ ಬರಹೇಳಿ ನನಗೆ ಒಂದು ಒಳ್ಳೆಯ ಅವಕಾಶ ಮಾಡಿಕೊಟ್ಟಿದ್ದೀರಿ. ಅಲ್ಲದೆ ಮನ್ನಣೆಯನ್ನು ಮಾಡಿದ್ದೀರಿ,

"ಈಗ ಹಾಡಿದ ಗೀತೆ ಬಹಳ ಭಾವಪೂರ್ಣವಾದ ಸುಂದರ ಗೀತೆ. ಯಾರ ಬಟ್ಟೆ ಹರಿದು ಇದೆಯೋ, ಕೊಳೆಯಾಗಿ ಇದೆಯೋ ಅವರ ಜೊತೆಗೆ, ಅವರೊಳಗೆ ಪರಮಾತ್ಮ ಇರುವ ಎಂದು ಹೇಳುತ್ತದೆ ಈ ಗೀತೆ. ಅದನ್ನು ಕೇಳಿದ ಕೂಡಲೆ ನನ್ನ ವಸ್ತ್ರದ ತುದಿಯ ಕಡೆ ಹೊರಳಿತು ನನ್ನ ದೃಷ್ಟಿ. ನಾನು ಉಟ್ಟ ಬಟ್ಟೆಯನ್ನು ಪರೀಕ್ಷಿಸಿ ನೋಡಿದೆ. ಅದು ಹರಿದೂ ಇಲ್ಲ, ಕೊಳೆಯೂ ಆಗಿಲ್ಲ! ಸಾಕಷ್ಟು ಶುಭ್ರ ಆಗಿದೆ, ಸ್ವಚ್ಛ ಆಗಿದೆ. ದೇವರು ನನ್ನ ಒಳಗೆ ಇಲ್ಲ, ಇದೇ ಅಲ್ಲದೆ ಇನ್ನೂ ಕೆಲವು ನಿರ್ಬಂಧಗಳು ಅಲ್ಲಿ ಬಂದಿವೆ. ಈ ಪರೀಕ್ಷೆಯಲ್ಲಿ ನಾನು ಉತ್ತೀರ್ಣನಾಗಲಾರೆ. ತಾವೂ ಕೂಡ ಇದರಲ್ಲಿ ಉತ್ತೀರ್ಣರು ಆಗದೆ ಹೋಗಬಹುದು. ಆದರೆ ಯಾವ ಮಾತನ್ನು ಇಲ್ಲಿ ಕೇಳಿದೆವೋ ಅದನ್ನು ಸರಿಯಾಗಿ ನಡೆಸಿಕೊಂಡು ಬಂದರೆ ಇವತ್ತು ಯಾರ ಭಾವಚಿತ್ರವನ್ನು ಅನಾವರಣ ಮಾಡಲು ನನ್ನನ್ನು ಕರೆಸಿದ್ದೀರೋ ಅವರ ಸವಿ ನೆನಪಿಗೆ ಗೌರವ ಸಲ್ಲುತ್ತದೆ.

"ರಾಜಕೀಯದಲ್ಲಿ ಶ್ರೀ ಗೋಖಲೆ ನನ್ನ ಗುರುಗಳು ಎಂದು ತಿಳಿದಿದ್ದೇನೆ. ನನ್ನ ರಾಜಗುರುಗಳು ಅವರು ಎಂದು ಸಾರಿ ಹೇಳಿದ್ದೇನೆ. ಭಾರತೀಯರ ಎಲ್ಲರ ಮುಂದೆಯೂ ಈ ಮಾತನ್ನು ಹೇಳುತ್ತೇನೆ. ೧೯೦೬ರಲ್ಲಿ ಈ ಘೋಷಣೆ ಮಾಡಿದೆ. ಆ ಬಗ್ಗೆ ನನಗೆ ಎಳ್ಳಷ್ಟೂ ವ್ಯಸನ ಇಲ್ಲ.

"ರಾಜಕೀಯಕ್ಕೂ ರಾಜಕೀಯ ಸಂಸ್ಥೆಗಳಿಗೂ ಧಾರ್ಮಿಕ ಸ್ವರೂಪ ಕೊಡಬೇಕು. ಪ್ರತಿಯೊಬ್ಬ ಭಾರತೀಯನ ಕರ್ತವ್ಯ ಇದು. ಇದು ನನ್ನ ದೇಶ. ನನ್ನ ನಾಡು ಎಂದು ಎಲ್ಲರೂ ಹಿಗ್ಗುತ್ತೇವೆ. ಸುಮ್ಮನೆ ಹೀಗೆ ಬಡಾಯಿ ಕೊಚ್ಚಿಕೊಂಡರೆ ಆಯಿತೆ? ಆ ಬಡಾಯಿಯಲ್ಲಿ ನಾವು ತೃಪ್ತರಾಗಬಾರದು ಎಂದು ಗೋಖಲೆಯವರಿಂದ ನಾನು ಕಲಿತಿದ್ದೇನೆ. ನನ್ನ ಬಾಳಿಗೆ ಉತ್ತೇಜನ ಕೊಟ್ಟವರು ಅವರೇ. ಇಂದಿಗೂ ಅವರ ಪ್ರೋತ್ಸಾಹ. ಉತ್ತೇಜನಗಳೇ ನನ್ನ ದಾರಿ ದೀಪ. ನನ್ನ ಜೀವನ ಪರಿಶುದ್ಧ ಆಗಬೇಕು. ಅದಕ್ಕೆ ಧಾರ್ಮಿಕ ರೂಪ ಬರಬೇಕು. ಇದು ನನ್ನ ಬಯಕೆ. ಈ ಸಾಧನೆಯೇ ನನ್ನ ಬದುಕಿನ ಗುರಿ. ಈ ಗುರಿಯನ್ನು ನಾನು

ಮುಟ್ಟಲಿಕ್ಕಿಲ್ಲ. ಸಾಧನೆಯಲ್ಲಿ ಸೋಲಲೂ ಬಹುದು. ಹಾಗಾದರೆ ಅಕ್ಷರ ಮಟ್ಟಿಗೆ ನನ್ನ ಗುರುಗಳ ಶಿಷ್ಯನಾಗಲು ನಾನು ಅನರ್ಹ ಎಂದು ಹೇಳಿಕೊಳ್ಳಬೇಕಾಗುತ್ತದೆ.

"ದೇಶದ ರಾಜಕೀಯಕ್ಕೆ ಧಾರ್ಮಿಕ ಸ್ವರೂಪ ಕೊಡಬೇಕು, ಹೀಗೆಂದರೆ ಏನು ಅರ್ಥ? ನನ್ನ ಬಾಳೇ ಧಾರ್ಮಿಕ ಆಗಿ ಮಾರ್ಪಡಬೇಕು. ಏನು ಹೀಗೆಂದರೆ? ಎಷ್ಟು ಸಲ ನನ್ನ ಇದಿರಿಗೆ ಬಂದು ನಿಂತಿದೆ ಈ ಪ್ರಶ್ನೆ. ಇದಕ್ಕೆ ಒಂದೇ ಒಂದು ಅರ್ಥ ಇಲ್ಲ. ನಾನು ಒಂದು ಅರ್ಥ ಮಾಡಬಹುದು. ನೀವೇ ಒಂದು ಅರ್ಥ ಕೊಡಬಹುದು. ಭಾರತ ಸೇವಕ ಸಮಾಜದ (Servants Of India Society) ಸದಸ್ಯರು ಒಬ್ಬೊಬ್ಬರೂ ಒಂದೊಂದು ವಿಧವಾಗಿ ಅರ್ಥಮಾಡಿಕೊಳ್ಳಬಹುದು. ಈ ಸಮಸ್ಯೆ ಅಷ್ಟು ಜಟಿಲ. ನನ್ನ ದೇಶವನ್ನು ನಾನು ಪ್ರೀತಿಸಬೇಕು. ನನ್ನ ದೇಶಕ್ಕೆ ನನ್ನ ಸೇವೆ ಸಲ್ಲಬೇಕು. ನನ್ನ ದೇಶ ನನ್ನಿಂದ ಗೌರವ ಪಡೆಯಬೇಕು. ಈ ರೀತಿ ಎಷ್ಟೋ ಜನ ಹಂಬಲಿಸುತ್ತೀರಿ. ಆ ಕೆಲಸದಲ್ಲಿ ನೀವು ಎಷ್ಟು ಕಷ್ಟ ಇದಿರಿಸಬೇಕೋ ಇದು ತಿಳಿಸುತ್ತದೆ. ಯಾರೇ ಆಗಲಿ, ವೈಯಕ್ತಿಕ ಜೀವನದ ಮಾರ್ದನಿ ಆಗಬೇಕು ಅವರ ರಾಜಕೀಯ ಜೀವನ. ಅದರಲ್ಲಿ ಕಿಂಚಿತ್ತೂ ದ್ವಂದ್ವ ಇರಬಾರದು. ಇದು ನನ್ನ ಅಭಿಪ್ರಾಯ.

ಇಲ್ಲಿ ಗಾಂಧೀಜಿ "ಕರುಣಾಳು ಬಾ ಬೆಳಕೆ' ಎಂದು ಕನ್ನಡದಲ್ಲಿ ಆಚಾರ್ಯ ಶ್ರೀ ಬಿ.ಎಂ. ಶ್ರೀಕಂಠಯ್ಯನವರು ಭಾಷಾಂತರಿಸಿರುವ ಕಾರ್ಡಿನಲ್ ನ್ಯೂಮನ್ ರಚಿಸಿದ Lead Kindly Light ಎಂಬ ಸುಂದರ ಹೃದಯಸ್ಪರ್ಶಿ ಗೀತೆಯನ್ನು ನೆನೆದುಕೊಂಡರು. ಗೋಖಲೆಯವರು ಪದೇ ಪದೇ ಈ ಗೀತೆಯನ್ನು ಹೇಳಿಕೊಳ್ಳುತ್ತಿದ್ದರು ಎಂದು ತಿಳಿಸಿದರು. ಮತ್ತೆ ಹೇಳಿದರು: ಪ್ರಗತಿಯಲ್ಲಿ ಒಂದೊಂದು ಹೆಜ್ಜೆಯಾಗಿ ಹೋಗಬೇಕು. 'ದೂರದ ನೋಟ ಕೇಳೆನು, ನನಗೆ ಒಂದೇ ಹೆಜ್ಜೆ ಸಾಕು' ಎಂದು ಹೇಳಿಲ್ಲವೆ ಕವಿ, ಕಾಂಚನ ಗಂಗಾ ಶಿಖರಕ್ಕೆ ಹತ್ತಬೇಕಾದರೆ ವಿಶಾಲವಾದ ಗಂಗಾನದಿಯ ಮೈದಾನವನ್ನು ನಿಧಾನವಾಗಿ ದಾಟಿ ಒಂದೊಂದು ಹೆಜ್ಜೆಯಾಗಿ ಹತ್ತಬೇಕು. ಜಗತ್ತಿನ ಯಾವ ಶಿಖರವನ್ನು ಹತ್ತಬೇಕಾದರೂ ಹೀಗೆಯೇ.

ಆ ರಾಜಕೀಯ ವ್ಯಕ್ತಿ ಅತ್ಯಂತ ಧಾರ್ಮಿಕ ಸ್ವರೂಪದವರು. ಅವರು ಕಡೆಯ ಉಸಿರು ಬಿಡುವವರೆಗೂ ಅವರ ಸಮೀಪದಲ್ಲಿಯೆ ಇದ್ದೆ ನಾನು. ಅವರಲ್ಲಿ ಅಹಂಕಾರ ಲವಲೇಶವೂ ಇರಲಿಲ್ಲ. ನೀವೆಲ್ಲರೂ ಸಮಾಜ ಸೇವಾ ಸಂಸ್ಥೆಯ ಸದಸ್ಯರು. ನಿಮ್ಮನ್ನು ಕೇಳುತ್ತೇನೆ: ನಿಮ್ಮಲ್ಲಿ 'ಅಹಂ' ಇಲ್ಲವೆ? ರಾಜಕೀಯ ಕ್ಷೇತ್ರದಲ್ಲಿ ಹೆಸರು ಪಡೆಯಬೇಕು, ಕೀರ್ತಿ ಗಳಿಸಬೇಕು ಎಂದು ಅವರಿಗೆ ಆಸೆ ಇರಲಿಲ್ಲ. ಸ್ವಲಾಭಕ್ಕಾಗಿ, ಸ್ವಪ್ರತಿಷ್ಠೆಗಾಗಿ ಎಂದು ಅವರು ಪ್ರಯತ್ನಿಸಿದವರೇ ಅಲ್ಲ. ದೇಶಕ್ಕೆ ಲಾಭ ಬರಲಿ ಎಂಬುದೇ ಅವರ ಬಯಕೆ. ತಮ್ಮೊಳಗೆ ಅಡಗಿದ್ದ ಸದ್ಗುಣ ಒಂದೊಂದನ್ನು ಬೆಳೆಸಿಕೊಳ್ಳಲು ಅವರು ಪ್ರಯತ್ನಿಸಿದರು. ಅದರಿಂದ ಪ್ರಪಂಚದಲ್ಲಿ ಕೀರ್ತಿಯನ್ನು ಗಳಿಸಬೇಕು ಎಂಬ ಆಸೆ ಅವರಿಗೆ ಇರಲಿಲ್ಲ. ದೇಶ ಅದರಿಂದ ಪ್ರಯೋಜನ ಪಡೆಯಲಿ ಎಂಬುದೇ ಅವರ ಹೆಬ್ಬಯಕೆ. ಜನರ ಮೆಚ್ಚುಗೆ ಅಥವಾ ಶಾಭಾಷ್‌ಗಿರಿ ಅವರಿಗೆ ಬೇಕಾಗಿರಲಿಲ್ಲ. ಅದಕ್ಕೆ ಅವರು ಆಸೆ ಪಡಲೂ ಇಲ್ಲ. ಆದರೆ ಆ ಕೀರ್ತಿ, ಆ ಮೆಚ್ಚುಗೆಯನ್ನು ಜನರು ಅವರ ಮೇಲೆ ಮಳೆಗರೆದರು, ಅವರ ಮೇಲೆ ಹೇರಿದರು. ದೇಶಕ್ಕೆ ಅದರಿಂದ

ಪ್ರಯೋಜನ ಆಗಲಿ ಎಂದು ಎಲ್ಲಕ್ಕೂ ಅವರು ತಲೆ ಕೊಟ್ಟರು. ಅವರು ನಮಗೆ ಇತ್ತ ಪ್ರೋತ್ಸಾಹ ಕೊಟ್ಟ ಉತ್ತೇಜನ ಇದೇ.

ದೇಶದಲ್ಲಿ ಅನೇಕ ಲೋಪದೋಷಗಳು ಇವೆ. ಅದಕ್ಕಾಗಿ ಭಾರತವನ್ನು ಜನ ತೆಗಳುತ್ತಾರೆ. ಇನ್ನೊಂದು ದೋಷವನ್ನು ಅದರ ಜೊತೆಗೆ ಕೂಡಿಸಿಕೊಳ್ಳೋಣ. ಆ ತಪ್ಪಿಗೆ ನೀವು ಮಾತ್ರವೇ ಹೊಣೆಗಾರರಾಗುವುದಿಲ್ಲ. ಇವತ್ತಿನ ಸಭೆಯಲ್ಲಿ ಭಾಗವಹಿಸಿದುದರಿಂದ ನನ್ನದೂ ಹೊಣೆ ಇದೆ. ಆ ದೋಷಕ್ಕೆ ನಾನೂ ಪಾತ್ರ. ಆದರೆ ಒಂದು; ನನ್ನ ದೇಶ ಬಾಂಧವರಲ್ಲಿ ನನ್ನ ವಿಶ್ವಾಸ ಅಚಲವಾದುದು.

ಅತ್ಯಂತ ಭಕ್ತಿ ಗೌರವದಿಂದ ಈ ಭಾವಚಿತ್ರವನ್ನು ಅನಾವರಣ ಮಾಡುತ್ತೇನೆ. ಕೊನೆಯವರೆಗೂ ಇದು ನಿಮ್ಮ ಬಾಳಿನ ಗುರಿಯಾಗಿರಲಿ.'

ಈಗಲೂ ಗಾಂಧೀಜಿ ಅನಾವರಣ ಮಾಡಿದ ಗೋಖಲೆಯವರ ಭಾವಚಿತ್ರ ಬೆಂಗಳೂರು ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ಇದೆ. ಯಾರು ಬೇಕಾದರೂ ಹೋಗಿ ನೋಡ ಬಹುದು.

ಸಭೆ ಮುಗಿದ ಮೇಲೆ ದಿವಾನ್ ಬಹದ್ದೂರ್ ಪುಟ್ಟಣ್ಣ ಶೆಟ್ಟರ ಕುದುರೆ ಗಾಡಿಯಲ್ಲಿ ಗಾಂಧೀಜಿಯನ್ನು ಬಿಡಾರಕ್ಕೆ ಕರೆತಂದರು. ಗಾಡಿಯಲ್ಲಿ ಪುಟ್ಟಣ್ಣ ಶೆಟ್ಟರ ಜೊತೆಗೆ ಕೃಷ್ಣಯ್ಯರೂ ಇದ್ದರು. ಇದು ಸೆಂಟ್ರಲ್ ಕಾಲೇಜ್ ಕಟ್ಟಡ–ಎಂದು ಗಾಂಧೀಜಿಗೆ ತೋರಿಸಿದರೋ ಇಲ್ಲವೋ, ಒಡನೆಯೆ ಗಾಂಧೀಜಿ ಹೇಳಿದರು: ಇದೆಲ್ಲವೂ ನನಗೇಕೆ? ಬೇಡ. ಬಡವರು ಇರುವ ಸ್ಥಳಕ್ಕೆ ನನ್ನನ್ನು ಕರೆದುಕೊಂಡು ಹೋಗಿ. ಬಡವರು ವಾಸಮಾಡುವ ಸ್ಥಳಕ್ಕೆ. ಆಗ ಅರಳೆ ಪೇಟೆ. ಮನೆವಾರ್ತೆ ಪೇಟೆಗಳ ಮಾರ್ಗವಾಗಿ ಅವರನ್ನು ಕರೆತರಲಾಯ್ತು.

ಬೆಂಗಳೂರಿನ ಪುರ ಪ್ರಮುಖರೊಡನೆ ಗಾಂಧೀಜಿಯ ಚರ್ಚೆ(೮–೫–೧೯೧೫)

ಕೆಲವರು ಪುರಪ್ರಮುಖರು. ನಾಗರಿಕರು ಗಾಂಧೀಜಿಯೊಡನೆ ಸ್ವಂತವಾಗಿ ಮಾತನಾಡಬೇಕು ಎಂದು ಅವರ ಬಿಡಾರಕ್ಕೆ ಬಂದರು. ಯಾರು ಯಾರು ಬಂದಿದ್ದರು ಎಂಬುದು ಸರಿಯಾಗಿ ತಿಳಿದಿಲ್ಲ. ಅಂತೂ ಬಂದವರು ಗಾಂಧೀಜಿಯನ್ನು ಕಂಡು ಮಾತಾಡಿಸಿದರು. ಕೆಲವು ಪ್ರಶ್ನೋತ್ತರ ನಡೆದವು.

ಭಾರತದ ದಾರಿದ್ರ್ಯದ ಪ್ರಶ್ನೆಯನ್ನು ಬಂದಿದ್ದವರು ಎತ್ತಿದರು. ಭಾರತ ದಿನೇ ದಿನೇ ಹೆಚ್ಚು ಹೆಚ್ಚು ದರಿದ್ರ ಆಗುತ್ತಿದೆ. ಈ ಭಾರಕ್ಕೆ ದೇಶ ತೀಣಕುತ್ತಿದೆ. ನಮ್ಮ ಕೈಮಗ್ಗಕ್ಕೆ. ಕೈಗಾರಿಕೆಗೆ ಇದಿರಿಸಲಾಗದಂಥ ಪೈಪೋಟಿ ಬಂದಿದೆ. ನಮ್ಮ ಕಚ್ಚಾ ಮಾಲು ದೇಶ ಬಿಟ್ಟು ಹೊರಕ್ಕೆ ಹೋಗುತ್ತಿದೆ ಎಂದರು. ಇದಕ್ಕೆ ಕಾರಣ ನಾವು ಮಾಡುತ್ತಿರುವ ಐರೋಪ್ಯರ ಅಂಧಾನುಕರಣ. ಎಷ್ಟು ಮಟ್ಟಿಗೆ ಇದು ಹೆಚ್ಚು ಹೋಗುತ್ತಿದೆ ಎಂದರೆ ನಮ್ಮ ಆತ್ಮಗೌರವವನ್ನೆ ಬಹಳ ಮಟ್ಟಿಗೆ ಕಳೆದುಕೊಂಡಿದ್ದೇವೆ. ನಾವು ಯೋಚಿಸುವುದು ಇಂಗ್ಲಿಷಿನಲ್ಲಿ: ಮಾತನಾಡುವುದೂ ಇಂಗ್ಲಿಷ್‌ನಲ್ಲೇ. ಇದರಿಂದ ನಮ್ಮ ದೇಶಭಾಷೆಗಳು ಬಡವಾದವು. ಸೊರಗಿ ಹೋದವು.

ಜನಸಾಮಾನ್ಯರಿಗೂ ಅವರ ಭಾವನೆಗೂ ನಮಗೂ ಬಹಳ ದೂರ ಆಯಿತು. ಅಂತರ ಹೆಚ್ಚು ಆಯಿತು. ಇಷ್ಟು ಅಗತ್ಯವೆ ಇಂಗ್ಲಿಷ್ ಭಾಷೆಯ ಜ್ಞಾನ ನಮ್ಮ ಮಾತೃಭೂಮಿಯ ಸೇವೆಗೆ? ಇಲ್ಲ.

ಆ ಮೇಲೆ ಜಾತಿ ವಿಚಾರ ಬಂತು. ಹಿಂದೂ ಧರ್ಮದ ಗುಟ್ಟು, ಅದರ ಮಹಾ ಶಕ್ತಿ ಜಾತಿಯಲ್ಲಿ ಅಲ್ಲ, ವರ್ಣವ್ಯವಸ್ಥೆಯಲ್ಲಿ ಅಡಗಿದೆ ಎಂದರು.

**ಗಾಂಧೀಜಿಯ ನಿವಾಸ**

ಭಾರತದಲ್ಲಿ ಎಲ್ಲಿ ವಾಸ ಮಾಡುತ್ತೀರಿ ನೀವು? ಬಂಗಾಳದಲ್ಲಿ ವಾಸ ಮಾಡುವಂತೆ ಬಹಳ ಬಲವಂತ ಮಾಡುತ್ತಿದ್ದಾರೆ. ಆದರೆ ನನಗಿರುವ ಅನುಭವವೆಲ್ಲ ಗುಜರಾತಿಗೆ ಸಂಬಂಧಿಸಿದುದು. ಅಲ್ಲಿಗೆ ಬಂದು ನೆಲೆಸುವಂತೆ ನನಗೆ ಅನೇಕ ಪತ್ರ ಬರುತ್ತಿವೆ. ಆ ಮೇಲೆ ಹಲವು ವಿಷಯಗಳ ಬಗ್ಗೆ ಅವರ ಅಭಿಪ್ರಾಯ ಹೇಳಿದರು. ಪುಸ್ತಕ ಭಂಡಾರಗಳ ಬಗ್ಗೆ ಮಾತಾಡುತ್ತ – "ನಮಗೆ ದೇಶೀಯ ಭಾಷೆ ಅತಿ ಮುಖ್ಯ. ಎಲ್ಲ ಪುಸ್ತಕಗಳೂ ಬೇಕು, ಸರಸ್ವತಿ ಭಂಡಾರವೇ ಬೇಕು. ಪುಸ್ತಕ ಭಂಡಾರಗಳನ್ನು ಸ್ಥಾಪಿಸಲು ಸ್ನೇಹಿತರು ಧನ ಸಹಾಯ ಮಾಡಬೇಕು ಎಂದು ನನ್ನ ಅಪೇಕ್ಷೆ" ಎಂದರು.

**ಆಧುನಿಕ ನಾಗರಿಕತೆ ಒಂದು ಶಾಪ**

ಆಧುನಿಕ ನಾಗರಿಕತೆಯ ಬಗ್ಗೆ ಮಾತನಾಡುತ್ತ– "ಯೂರೋಪಿಗೆ ಮಾತ್ರವೇ ಅಲ್ಲ. ಈ ಆಧುನಿಕ ನಾಗರಿಕತೆ ಭಾರತಕ್ಕೂ ಒಂದು ಶಾಪ. ಆಧುನಿಕ ನಾಗರಿಕತೆಯ ಪ್ರತ್ಯಕ್ಷ ಪರಿಣಾಮ ಎಂದರೆ ಯುದ್ಧ. ಪ್ರತಿಯೊಂದು ಸಶಕ್ತ ರಾಜ್ಯವೂ ಯುದ್ಧ ಸನ್ನಾಹ ಮಾಡಿ ಕೊಳ್ಳುತ್ತಿದೆ" ಎಂದರು.

**ಸಾತ್ವಿಕ ನಿರೋಧ – ನೀತಿ ಬಲ**

ಮುಂದೆ ಸಾತ್ವಿಕ ನಿರೋಧದ ಮಾತನ್ನು ಹೇಳಿದರು. ಸಬಲರಿಗೂ ಅಬಲರಿಗೂ ಪ್ರಯೋಜನಕರವಾದ ಮಹಾ ನೀತಿಬಲ ಈ ಸ್ವಾತಿಕ ನಿರೋಧ. ಇದು ಅತ್ಮಬಲ, ಅದ್ದರಿಂದ ಸ್ವಯಂಪೋಷಿತ. ನಾವು ಯಾವದೇ ಧ್ಯೇಯವನ್ನು ಇಟ್ಟುಕೊಳ್ಳಲಿ, ಅದು ಕ್ರಿಯಾತ್ಮಕ ಆಗಿರಬೇಕು; ಇಲ್ಲದೆ ಹೋದರೆ ಆ ಧ್ಯೇಯ ಶಕ್ತಿಹೀನ ಆಗುತ್ತದೆ.

ಧ್ಯೇಯದ ಜ್ಞಾನ ಒಂದು, ಅದರ ಆಚರಣೆಯೇ ಮತ್ತೊಂದು, ಆಚರಣೆ ಹೆಚ್ಚಿದಷ್ಟೂ ಶಿಸ್ತು ಹೆಚ್ಚು. ಶಿಸ್ತು ಹೆಚ್ಚಿದಷ್ಟು ಸೇವೆ ಹೆಚ್ಚು. ಈ ಲಾಭ ಸರಕಾರಕ್ಕೆ ಸಿಗುತ್ತದೆ. ಸಾತ್ವಿಕ ನಿರೋಧ ಬಹಳ ಪ್ರಭಾವಶಾಲಿ ಅಸ್ತ್ರ. ಆದರೆ ಮನಸ್ಸು ಬಲು ಚಂಚಲ. ಎಲ್ಲ ಬಗೆಯ ಚಿಂತನೆಗೂ ಅವಕಾಶ ಕೊಡುತ್ತದೆ.

**ಪಾಪಮೂಲ**

ಹೆಣ್ಣು, ಹೊನ್ನು, ಮಣ್ಣು–ಇವು ಮೂರು ಮೋಹಕ. ಇವೇ ಪಾಪಕ್ಕೆ ಮೂಲ. ಈ ಮೋಹಗಳನ್ನು ನಿವಾರಿಸಿಕೊಳ್ಳಲು ಸತತವೂ ಹೋರಾಟ ನಡೆಸಬೇಕು ನಾವು. ನಿಜವಾದ

ಸುಖ ಭೋಗಗಳಿಗೆ ಈ ಭೂಮಿ, ಈ ಹೆಣ್ಣು, ಈ ಹೊನ್ನು ಬೇಕೆ? ಇದರಿಂದ ನನಗೆ ತೃಪ್ತಿ ಆಗಬೇಕೆ? ಯಾರಿಗೊ ಕೆಲವರಿಗೆ ತಲೆ ಕೆಟ್ಟರೆ ನಾನೂ ನನ್ನ ತಲೆ ಕೆಡಿಸಿಕೊಳ್ಳಬೇಕೆ? ನಮ್ಮ ಗುರಿಯನ್ನು ಸಾಧಿಸಲು ಪ್ರಯತ್ನ ಮಾಡತೊಡಗಿದರೆ, ಕ್ರಿಯಾತ್ಮಕವಾಗಿ ತೊಡಗಿದರೆ. ಈ ಪಾಪ ಚೇಷ್ಟೆಗಳಿಗೆ ಅವಕಾಶ ಎಲ್ಲಿ? ಬಹಳ ಕಡಿಮೆ ಅವಕಾಶ. ಈ ದೃಷ್ಟಿಯಿಂದ ಜನಜೀವನವನ್ನು ತಿದ್ದಬೇಕು, ರೂಪಿಸಬೇಕು.

**ಭಾರತದ ಸಾಧುಗಳು**

ಯಾವ ಪ್ರವಾಹವೇ ಆಗಲಿ, ಎಷ್ಟೋ ವೇಳೆ ತನ್ನ ಪಾತ್ರವನ್ನು ಬದಲಾಯಿಸುತ್ತದೆ. ತನ್ನ ಓಟವನ್ನೂ ಬದಲಾಯಿಸುತ್ತದೆ. ನಮ್ಮಲ್ಲಿ ೧೫ ಲಕ್ಷ ಸಾಧುಗಳಿದ್ದಾರೆ. ಈ ಸಾಧುಗಳು ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯವನ್ನು ಪಾಲಿಸಿದರೆ ಭಾರತಕ್ಕೆ ಎಷ್ಟು ಲಾಭ? ಜಗದ್ಗುರು ಶಂಕರಾಚಾರ್ಯರು, ಈಗ 'ಜಗದ್ಗುರು' ಎಂಬ ವಿಶೇಷಣಕ್ಕೆ ತಕ್ಕ ಶಕ್ತಿ ಪಡೆದಿಲ್ಲ ತುಂಬ ಶಕ್ತಿಹೀನರು.

**ಭಾರತೀಯ ಆದರ್ಶಗಳು**

ಶಾರೀರಿಕ ಕ್ರಿಯೆಗಳು ದುಷ್ಟ ಆಗಬಾರದು, ಯಾರಿಗೂ ಅದರಿಂದ ಒಳಿತು ಆಗದು. ಸುಖವನ್ನು, ಮೌಲ್ಯವನ್ನು ಹೆಚ್ಚಿಸಿಕೊಳ್ಳುವ ದಾರಿಯನ್ನು ಅದು ಹುಡುಕುತ್ತ ಹೋಗುತ್ತದೆ. ಆಧುನಿಕ ಕರ್ಮಗಳಲ್ಲಿ ಎಷ್ಟೋ ಅನುಪಯುಕ್ತ. ಅಂಥವನ್ನು ಭಾರತೀಯ ಸಂಸ್ಥೆಗಳ ಮೇಲೆ ಹೊರಿಸಬಾರದು. ಇಂಥ ಸಂಸ್ಥೆಗಳನ್ನು ಹಿಂದೂ ಧರ್ಮದ ಆದರ್ಶಗಳ ತಳಹದಿಯ ಮೇಲೆ ರಚಿಸಬೇಕು. ಈ ಆದರ್ಶಗಳನ್ನು ಆರಿಸಿಕೊಳ್ಳಬಹುದು. ಭಾರತದಲ್ಲಿ ಕೆಲವು ಗುಣಗಳನ್ನು ಕೆಲವು ಆಚಾರಗಳನ್ನು ಸದ್ಗುಣ ಸದಾಚಾರ ಎಂದು ಭಾವಿಸುತ್ತಾರೆ. ಪಡುವಲ ದೇಶಗಳಲ್ಲಿ ಅವನ್ನೇ ದುರ್ಗುಣಗಳೆಂದು ತಿಳಿಯುತ್ತಾರೆ. ರಘುವಂಶದ ದಶರಥ ಮಹಾರಾಜ ತನ್ನ ಹೆಂಡತಿಗೆ ಮಾತು ಕೊಟ್ಟಿದ್ದ. ಅದರಂತೆ ನಡೆದುಕೊಂಡ, ನಾವು ಅವನನ್ನು ಸತ್ಯಸಂಧ ಎಂದುಕೊಂಡರೆ ಪರದೇಶದ ಜನರು ಅವನನ್ನು ಮೂರ್ಖ ಎನ್ನುತ್ತಾರೆ. ವಚನ ಎಂದರೆ ವಚನ, ವಚನ ಪಾಲನೆ ಉತ್ತಮ ನಡೆವಳಿಕೆ ಎಂದು ಭಾರತ ತಿಳಿದಿದೆ. ಭೌತಿಕ ಕ್ರಿಯೆ ಎಲ್ಲವೂ ಹಿಂಸೆಯಿಂದ ಲಿಪ್ತ ಆಗಿದೆ. ಸತ್ಯ ಒಂದೇ ಸತ್ಯ; ಕೊನೆಯಲ್ಲಿ ಅದಕ್ಕೇ ಗೆಲುವು.

**ವಲಸೆಗಾರರು**

ಯಾವ ದೇಶದಿಂದಲೂ ಜನ ಹೊರಗೆ ಹೊರಟು ಹೋಗಬಾರದು. ಅಲ್ಲಿಂದ ಜನರು ವಲಸೆ ಹೊರಟರೆ ಅದು ಆ ದೇಶಕ್ಕೆ ಶುಭವಲ್ಲ. ವಲಸೆ ಬಂದವರು ನಿಷ್ಠೆಯಿಂದ ಸ್ವದೇಶವನ್ನು ಸ್ಮರಿಸಿಕೊಳ್ಳುತ್ತಿದ್ದು, ಮತ್ತೆ ಅಲ್ಲಿಗೆ ಹಿಂದಿರುಗುವುದಿಲ್ಲ. ಈ ವಿಷಯ ಹಿಂದೂ ಧರ್ಮಕ್ಕೆ ವಿರುದ್ಧ. ಅಲ್ಲಿ ದೇವಾಲಯಗಳು ಅಭಿವೃದ್ಧಿ ಅಗುವುದಿಲ್ಲ. ಆಚಾರ ವ್ಯವಹಾರಗಳಿಗೂ ಅವಕಾಶವಿಲ್ಲ. ಪುರೋಹಿತರು ಸಿಗುವುದಿಲ್ಲ. ಒಂದು ವೇಳೆ ಸಿಕ್ಕರೂ ಅವರಿಗೆ ಏನೂ ಗೊತ್ತಿರುವುದಿಲ್ಲ ಎಷ್ಟೋ ವೇಳೆ ಅವರು ಕಸಕ್ಕಿಂತಲೂ ಕೀಳು. ಸಹಜವಾಗಿ ತುಂಟತನ ಹೆಚ್ಚು, ವಲಸೆ ಬಂದವರಲ್ಲಿ. ಸಮಾಜವನ್ನು ಕೆಡಿಸುತ್ತಾರೆ. ಇದು ಸಾಹಸವೂ ಅಲ್ಲ. ಒಳ್ಳೆಯ

ಕೆಲಸವೂ ಅಲ್ಲ. ಇವರು ಹೋಗಿ ನೆಲೆಸುವ ಕಡೆ ಹೆಚ್ಚು ಧನ ಸಂಪಾದನೆ ಆಗುತ್ತದೆ. ಹಾಗಂದರೆ ಏನು? ಕಷ್ಟ ಪಟ್ಟು ದುಡಿದು ಧರ್ಮ ಮಾರ್ಗದಲ್ಲಿ ಮಾಡುವ ಧನ ಸಂಪಾದನೆ ಅವರಿಗೆ ಬೇಡ. ಅವರಿಗೆ ಐಹಿಕ ಸುಖ ಬೇಕು, ಸುಖ ಸಾಧನಗಳೂ ಬೇಕು ಹೆಚ್ಚಾಗಿ.

ಥಿಯಾಸಾಫಿಕಲ್ ಸೊಸೈಟಿ ಬಗ್ಗೆ ಯಾರೋ ಒಂದು ಪ್ರಶ್ನೆ ಎತ್ತಿದರು. ಅದಕ್ಕೆ ಗಾಂಧೀಜಿ ಹೇಳಿದರು: 'ವ್ಯಕ್ತಿಗಳು ಹೇಗಾದರೂ ಇರಲಿ. ಥಿಯಸಾಫಿಕಲ್ ಸೊಸೈಟಿಯಲ್ಲಿ ಒಳ್ಳೆಯದು ಬಹಳ ಇದೆ. ಅದರಿಂದ ಆಚಾರ ವಿಚಾರಗಳಿಗೆ ಪ್ರೇರಣೆ ದೊರಕುವಂತಾಗುತ್ತದೆ.

**ಲಾಲ್‌ಬಾಗ್ ಸಭೆ**

ಸಂಜೆಗೆ ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ಒಂದು ದೊಡ್ಡ ಬಹಿರಂಗ ಸಭೆ ನಡೆಯಿತು. ಇಂಗ್ಲಿಷಿನಲ್ಲಿ ಒಂದು ಮಾನಪತ್ರವನ್ನು ಬೆಂಗಳೂರಿನ ನಾಗರಿಕರ ಪರವಾಗಿ ಪೌರಸಭೆಯ ಅಧ್ಯಕ್ಷರಾದ ದಿವಾನ್ ಬಹದ್ದೂರ್ ಕೆ.ಪಿ. ಪುಟ್ಟಣ್ಣ ಶೆಟ್ಟರು ಓದಿದರು. ತೆಲುಗು ಭಾಷೆಯಲ್ಲೂ, ಉರ್ದು ಭಾಷೆಯಲ್ಲೂ ಕವನಗಳನ್ನು ಓದಲಾಯಿತು. ದಿವಾನ್ ಬಹದ್ದೂರ್ ಸರ್ ಪುಟ್ಟಣ್ಣ ಶೆಟ್ಟರು ಆಗ ಪುರಸಭಾಧ್ಯಕ್ಷರು. ಅವರೇ ಆ ಸಭೆಗೂ ಅಧ್ಯಕ್ಷರಾಗಿದ್ದರು. ಗಾಂಧೀಜಿ ಮಾನಪತ್ರಕ್ಕೆ ಉತ್ತರ ಕೊಡುತ್ತ ಹೀಗೆ ಹೇಳಿದರು:

**ಅಧ್ಯಕ್ಷರೆ, ಮಿತ್ರರೆ,**

ನೀವು ನನಗೂ, ನನ್ನ ಹೆಂಡತಿಗೂ ಮಾಡಿದ ಮಹತ್‌ಗೌರವಕ್ಕೆ ಮನಸ್ಸಾಕ್ಷಿಯಾಗಿ ತಮ್ಮೆಲ್ಲರಿಗೂ ನನ್ನ ವಂದನೆ ಎಂದು ಹೇಳಿದರೆ ಅದು ಅತಿ ವಿನಯ ಎನಿಸೀತು. ನನಗೋ ಮಾತೇ ಹೊರಡುತ್ತಿಲ್ಲ. ಒಂದು ಚಿಂತೆ ನನ್ನನ್ನು ತುಂಬಾ ಕಾಡುತ್ತಿದೆ. ನಾನಾಗಲಿ ಅಥವಾ ನಾವಾಗಲಿ ಈ ಗೌರವಕ್ಕೆ ಪಾತ್ರರೆ? (ಖಂಡಿತವಾಗಿಯೂ ಪಾತ್ರರು ಎಂದು ಸಭೆಯಿಂದ ಧ್ವನಿಗಳು) ನಿಮ್ಮ ಔದಾರ್ಯ, ಪೂರ್ವ ದೇಶದ ಪದ್ಧತಿಗೆ ಅನುಗುಣವಾಗಿದೆ. ಆದರೆ ಈ ಪ್ರೀತಿಗೆ ನಾವು ಪಾತ್ರರೆ? ಸಭಾಧ್ಯಕ್ಷರು ಈ ಪ್ರೀತಿಗೆ ಒಂದು ಆಧಾರವನ್ನು ಸೂಚಿಸಿದ್ದಾರೆ. ಮಾನ್ಯ ಗೋಖಲೆಯವರ ಹೆಸರನ್ನು ನೆನೆದಿದ್ದಾರೆ. ಅದರ ಕೀರ್ತಿಯ ಬೆಳಕಿನಲ್ಲಿ ನಾನು ಬೆಳಗಲಾರೆ. ನಾನು ಕೆಲಸ ಮಾಡುವಾಗ ಪ್ರತ್ಯಕ್ಷವಾಗಿ ನನ್ನನ್ನು ಸಂಪೂರ್ಣವಾಗಿ ಪರೀಕ್ಷಿಸಿ, ನನ್ನ ಸ್ವಂತ ಇತಿಮಿತಿಗಳನ್ನು ನೋಡಿ. ಆಗ ನಿಮಗೆ ನನ್ನ ಗುಟ್ಟು ತಿಳಿಯುತ್ತದೆ.

ನಾನು ಕಾಲಿಡುವ ಸ್ಥಳ ಬಹಳ ಸೂಕ್ಷ್ಮವಾದುದು. ನಾನು ಕಾಡಿನಲ್ಲಿ ಹಾದು ಹೋಗಬೇಕಾಗಿದೆ. ನಿಮಗೆ ನನ್ನ ಪರಿಚಯ ಹೆಚ್ಚು ಆದ ಮೇಲೆ, ಆ ಸಂತ ರಾಜಕಾರಣಿ ಗೋಖಲೆಯವರ ಪ್ರಭಾವ ನಿಮ್ಮ ಕಣ್ಣಿಗೆ ಕಟ್ಟದೆ ಮರೆಯಾಗಿ ಹೋದ ಮೇಲೆಯೂ, ಆ ಮೇಲೆಯೂ, ಈ ಗೌರವಕ್ಕೆ ನಾನು ಪಾತ್ರನಾಗುವಂತೆ ಆಗಲಿ. ಎಷ್ಟು ಜನ ಸೇರಿದಿರಿ–ಇವತ್ತು ನನ್ನನ್ನು ಗೌರವಿಸಿಸಲಿಕ್ಕೆ. ಇವತ್ತು ಬೆಳಗ್ಗೆ ನನಗೆ ತುಂಬ ಗೌರವ ತೋರಿಸಿದಿರಿ. ನನ್ನನ್ನು ಗಾಡಿಯಲ್ಲಿ ಕೂಡಿಸಿ, ಎಳೆದುಕೊಂಡು ಹೋಗಲು ನಾನು ಒಪ್ಪಲಿಲ್ಲ. ನಮ್ಮ ವಿಚಾರಗಳನ್ನು ಅಳೆದು ಅಳೆದು, ನಮ್ಮನ್ನು ನಾವೇ ಮರೆಯದಂತೆ ಮಾಡಿಕೊಳ್ಳಬೇಕು. ಇಷ್ಟೇ ಅಲ್ಲದೆ ಈ ಊರಿನ ಮುಖಂಡರೊಡನೆ ಮಾತುಕತೆ ಆಡಿ. ಅವರಿಗೆ ನನ್ನ ಹೃದಯವನ್ನು

ಬಿಚ್ಚಿತೋರಿಸಲು, ಅವರ ಹೃದಯಾಂತರಾಳದ ಭಾವಗಳನ್ನು ಗ್ರಹಿಸಿಕೊಳ್ಳಲು ಶಾಂತವಾಗಿ ಮಾತುಕತೆ ನಡೆಸಲು ಸ್ವಾಗತ ಸಮಿತಿಯವರು ನನಗೆ ಒಂದು ಅವಕಾಶ ಮಾಡಿಕೊಟ್ಟರು. ಇದಕ್ಕಿಂತಲೂ ಹೆಚ್ಚಿನ ಗೌರವ ಉಂಟೆ?

ಬೆಳಿಗ್ಗೆ ಗಾಡಿಯಲ್ಲಿ ನನ್ನನ್ನು ಕೂಡಿಸಿ, ನೀವು ಎಳೆದುಕೊಂಡು ಹೋಗಲು ನಾನು ಒಪ್ಪಲಿಲ್ಲ. ಅದಕ್ಕೆ ಒಂದು ಅರ್ಥ ಇದೆ. ನಮ್ಮ ಸಾರ್ವಜನಿಕ ಸೇವಕರನ್ನು ಹೀಗೆ ಗಾಡಿಯಲ್ಲಿ ಕೂಡಿಸಿ, ಮೆರೆವಣಿಗೆಯಲ್ಲಿ ಕರೆದುಕೊಂಡು ಹೋಗಿ ಅವರನ್ನು ಕೆಡಿಸಬಾರದು. ಸ್ವಲ್ಪವೂ ಸದ್ದು ಇಲ್ಲದೆ ಕೆಲಸ ಮಾಡಲಿ ಅವರು, ಸಾರ್ವಜನಿಕ ಕ್ಷೇತ್ರದಲ್ಲಿ ಕೆಲಸ ಮಾಡಿದರೆ ನನಗೂ ಇದೇ ರೀತಿ ಗೌರವ ದೊರೆತೀತು ಎಂಬ ಭಾವನೆ ಅವರಲ್ಲಿ ಮೂಡಬಾರದು. ಸೇವೆ ಸಲ್ಲಿಸುವವರಿಗೆ ಕಲ್ಲಿನ ಏಟು ಬೀಳುತ್ತದೆ. ಜನರು ಅವರನ್ನು ಕಸಕ್ಕಿಂತ ಕಡೆಯಾಗಿ ಕಾಣುತ್ತಾರೆ ಎಂಬ ಭಾವನೆ ಬರಲಿ. ಆದರೂ ನನ್ನ ದೇಶ ಪ್ರೇಮವನ್ನು ನಾನು ಬಿಡಲಾರೆ ಎನಿಸಲಿ. ಅವರ ಸೇವೆಗೆ ಸೇವೆಯೇ ಪ್ರತಿಫಲ, ನಮಗೆ ಕಟ್ಟುನಿಟ್ಟಾಗಿ ವ್ಯಾವಹಾರಿಕ ರೀತಿಯಲ್ಲಿ ಕೆಲಸ ಮಾಡಲು ಬರುವುದಿಲ್ಲ; ನಮ್ಮದು ಬರೀ ತೋರಿಕೆ, ಆಡಂಬರ ಎಂದು ನಮ್ಮ ದೇಶವನ್ನೇ ಆಕ್ಷೇಪಿಸುತ್ತಾರೆ ಈ ಮಾತು ನಿಜ. ಒಪ್ಪಿಕೊಳ್ಳಬೇಕಾದದ್ದೇ. ಈ ಆಧುನಿಕ ಕಾರ್ಯಕಲಾಪಗಳನ್ನು ಅನುಕರಿಸಬೇಕೋ ಅಥವಾ ಅನೇಕಾನೇಕ ಆಘಾತಗಳನ್ನು ಇದಿರಿಸಿ ಇನ್ನೂ ನಡೆದು ಬರುತ್ತಿರುವ ನಮ್ಮ ಪುರಾತನ ನಾಗರೀಕತೆಯನ್ನು ಅನುಸರಿಸೋಣವೋ?" ನೀವು ನಾನು ಲೋಕಸೇವೆಯನ್ನು ರಾಜಕಾರಣದಲ್ಲಿ ಮಾಡುವಾಗ ಧಾರ್ಮಿಕ ದೃಷ್ಟಿಯಿಂದ ನಡೆಯಬೇಡವೆ? ಹೀಗೆ ಮಾಡಿದರೆ ನಮ್ಮನ್ನು ಯಾರು ಗೆದ್ದಿದ್ದಾರೋ ಅವರನ್ನು ಗೆಲ್ಲಬಹುದು. ಆಗ ನಮ್ಮನ್ನಾಳುವ ಇಂಗ್ಲೀಷರನ್ನು ನಮ್ಮ ಜೊತೆಗಾರರು ಸಹಪೌರರು ಎಂದು ತಿಳಿಯಬಹುದು. ಇಂಥ ಕಾಲ ಒಂದು ಬಂದೇ ಬರುತ್ತದೆ. (ಕರತಾಡನ) ಇಷ್ಟರಲ್ಲೇ ಬರಬಹುದು. ಆ ಕಾಲ ಎಂದು ಬಂದೀತೋ ಹೇಳುವುದು ಕಷ್ಟ. ಒಳ್ಳೆಯ ಗುಣವಂತಿಕೆ. ನಿಷ್ಠೆ, ಸದ್ಗುಣ ಪ್ರಭಾವ ಸಂಪನ್ನರಾದ ಎಷ್ಟೋ ಇಂಗ್ಲಿಷರ ಸಂಪರ್ಕ ನನಗೆ ಆಗಿದೆ. ಅವರ ಜೊತೆಯಲ್ಲಿ ಕೆಲಸ ಮಾಡಿದ್ದೇನೆ. ಈಗಿನ ಈ ಕಾರ್ಯಕ್ರಮ ಮುಗಿದು ಹೋಗುತ್ತದೆ. ಒಂದು ಹೊಸ ನಾಗರಿಕತೆ ಇದಕ್ಕಿಂತ ಹೆಚ್ಚು ಶ್ರೇಷ್ಠವಾದುದು ಬೇಗ ಬರಲಿದೆ. ನಿಮಗೆ ಆ ಭರವಸೆ ಕೊಡಬಲ್ಲೆ.

ಭಾರತ ದೊಡ್ಡ ವಸಾಹತು ರಾಷ್ಟ್ರ. ಅದರಲ್ಲಿ ಮೈಸೂರು ಶ್ರೇಷ್ಠವಾದ ಸಂಸ್ಥಾನ. ಬ್ರಿಟಿಷ್ ಗವರ್ನರಗಳಿಗೂ, ಬ್ರಿಟಿಷ್ ರಾಜಕಾರಣಿಗಳಿಗೂ ಈ ಸಂದೇಶ ತಿಳಿಸಲು ನಿಮಗೆ ಸಾಧ್ಯ. ಅದು ಹೀಗೆ: ಮೈಸೂರಿನಲ್ಲಿ ರಾಮರಾಜ್ಯವನ್ನು ಸ್ಥಾಪಿಸಿ; ಜನರು ಯಾರ ಅಪ್ಪಣೆಯನ್ನು ಒಪ್ಪಿಕೊಳ್ಳುತ್ತಾರೊ ಅಂಥ ವರಿಷ್ಠ ನಿಮ್ಮ ಮಂತ್ರಿಯಾಗಲಿ (ದೀರ್ಘ ಕರತಾಡನ!) ಹಾಗಾದರೆ ಆಗ ನೀವು ನಿಮ್ಮನ್ನು ಆಳುತ್ತಿರುವವರನ್ನು ಅಪ್ಪಣೆ ಮಾಡಿ ನಡೆಸಿಕೊಳ್ಳಬಹುದು."

ಗಾಂಧೀಜಿ ಸಭೆಯನ್ನು ಮುಗಿಸಿಕೊಂಡು ಗಾಜಿನ ಮನೆಯಿಂದ ಹೊರಗೆ ಬಂದರು. ಜನರ ಸಂದಣಿಯೊ ಸಂದಣಿ. ಎಲ್ಲರಿಗೂ ಹರ್ಷ ಉಕ್ಕುತ್ತಿತ್ತು. ದರ್ಶನಕ್ಕೆ ಎಂದು ಬಂದಿದ್ದ ಚಾಮರಾಜಪೇಟೆಯ ಏಳು ವರ್ಷದ ಹುಡುಗಿಯೊಬ್ಬಳು ಜನರ ಗುಂಪಿನ ನೂಕು ನುಗ್ಗಲಿನಲ್ಲಿ

ಸಿಕ್ಕಿ ಬಿದ್ದಳು. ಯಾರಿಗೂ ಇದು ಗೊತ್ತಾಗಲಿಲ್ಲ ಆದರೆ ಗಾಂಧೀಜಿಯದು ಚುರುಕು ಕಣ್ಣು. ನಿಂತಲ್ಲಿಂದಲೇ ಅವರು ಅದನ್ನು ನೋಡಿದರು. ಆ ಮಗುವನ್ನು ಕಾಪಾಡಲು ಓಡಿದರು ಅಲ್ಲಿಗೆ. ಜನಸಂದಣಿಗೆ ಏನೂ ತಿಳಿಯಲಿಲ್ಲ. ಎಲ್ಲರೂ ಮಂತ್ರ ಮುಗ್ಧರಂತೆ ನಿಂತುಬಿಟ್ಟರು. ಎಲ್ಲ ನಿಶ್ಶಬ್ದ ಆಯಿತು. ಗಾಂಧೀಜಿಗೆ ದಾರಿಬಿಟ್ಟಿತು ಗುಂಪು. ಅವರು ಆ ಹುಡುಗಿಯ ಬಳಿಗೆ ಓಡಿ, ಅವಳನ್ನು ಎತ್ತಿಕೊಂಡು ಬಂದು ಅವಳ ಅಣ್ಣನ ಕೈಗೆ ಕೊಟ್ಟರು.

ಸಂಜೆಯ ಊಟಕ್ಕೂ ಗಾಂಧೀಜಿಗೆ ನೆಲಗಡಲೆ ಬೀಜ, ಹಣ್ಣು. ಎರಡು ಮಾವಿನ ಹಣ್ಣನ್ನು ತೆಗೆದುಕೊಂಡು ಅದನ್ನು ತೊಳೆದುಕೊಡುವಂತೆ ಅತಿಥಿ ಸತ್ಕಾರದ ಪಾರುಪತ್ಯಗಾರರು ಕೃಷ್ಣಯ್ಯರ್ ಕೈಗೆ ಕೊಟ್ಟರು. ತೊಳೆದು ಕೊಡುವಂತೆ ಹೇಳಿ ಅವರು ಮತ್ತೊಬ್ಬ ಸ್ವಯಂ ಸೇವಕನ ಕೈಗೆ ಕೊಟ್ಟರು.

**ಚಟಾಕಿ**

ಗಾಂಧೀಜಿ ಇದನ್ನೆಲ್ಲ ನೋಡುತ್ತಿದ್ದರು. ನಡುವೆ ಅಡ್ಡಿಮಾಡಿ– "ಅಲ್ಲ ನಾನು ನಿಮಗೆ ಒಂದು ಕೆಲಸ ಒಪ್ಪಿಸಿದೆ. ನೀವು ನಿಮ್ಮ ಕೈಕೆಳಗಿನವನಿಗೆ ಹೇಳುತ್ತೀರಿ ಅವನು ಮತ್ತೊಬ್ಬನಿಗೆ ಹೇಳುತ್ತಾನೆ. ಅವನು ಮತ್ತೊಬ್ಬನಿಗೆ. ಈ ಸರಪಣಿ ಎಲ್ಲಿಗೆ ಕೊನೆ ಮುಟ್ಟಬೇಕು? ಹೀಗಾದರೆ ಈ ಕೆಲಸದ ಹೊಣೆ ಯಾರದು? ಎಂದು ಖಚಿತ ಪಡಿಸಲು ಸಾಧ್ಯವಾಗುವುದಿಲ್ಲ" ಎಂದರು. ಕೂಡಲೆ ಕೃಷ್ಣಯ್ಯರ್ ಸ್ವಯಂ ಸೇವಕನಿಂದ ಆ ಮಾವಿನ ಹಣ್ಣನ್ನು ತೆಗೆದುಕೊಂಡು ತಾವೇ ಸ್ವತಃ ತೊಳೆದುಕೊಟ್ಟರು. ಆ ರಾತ್ರಿ ಏಳು ಗಂಟೆ ಹೊತ್ತಿಗೆ ಗಾಂಧೀಜಿಯನ್ನು ನೋಡಲು ಮೈಸೂರಿನಿಂದ ನೇರಾಗಿ ದಿವಾನ್ ವಿಶ್ವೇಶ್ವರಯ್ಯನವರು ಮೋಟಾರಿನಲ್ಲಿ ಬಂದರು. ಒಳಗಡೆ ಒಂದು ಗಂಟೆಯ ಕಾಲ ಮಾತುಕತೆ ನಡೆಯಿತು. ಹೊರಗೆ ಬರುವಾಗ ವ್ಯವಸ್ಥಾಪಕರನ್ನು ನೋಡಿ ದಿವಾನರು ಗಾಂಧೀಜಿಗೆ ಮೊದಲನೆ ತರಗತಿಯ ಟಿಕೇಟು ತೆಗೆದುಕೊಡಿ ಎಂದರು. ದುಡ್ಡಿನ ಕೊರತೆ ಏನೂ ಇರಲಿಲ್ಲ. ದಂಡಿನ ಶ್ರೀಮಂತ ಮೊದಲಿಯಾರ್ ಕೆಲವರು ವ್ಯವಸ್ಥೆ ಮಾಡುತ್ತ ಇದ್ದರು. ಗಾಂಧೀಜಿಗಾಗಿ ಎಷ್ಟು ವೆಚ್ಚ ಮಾಡಬೇಕಾಗಿ ಬಂದರೂ ಅವರು ಸಿದ್ಧ. ಆದರೆ ಮೊದಲನೆ ತರಗತಿಯ ಡಬ್ಬಿಯಲ್ಲಿ ಪ್ರಯಾಣಮಾಡಲು ಒಪ್ಪಬೇಕಲ್ಲ; ಗಾಂಧೀಜಿ ಒಪ್ಪಲಿಲ್ಲ.

ಬರುವಾಗ ನಟೇಶನ್ ಅವರಿಗೆ ಕಾಯಿಲೆ. ಆದ್ದರಿಂದ ಅವರ ಜೊತೆಯಲ್ಲಿ ಬೆಂಗಳೂರಿಗೆ ಪ್ರಯಾಣ ಮಾಡಬೇಕಾಯಿತು. ಆದರೆ ಈಗ ಅಂಥ ಅಗತ್ಯ ಇಲ್ಲ. ಒಂದು ವೇಳೆ ತಮ್ಮ ಮಾತನ್ನು ಅಸಡ್ಡೆ ಮಾಡದೆ, ಮೊದಲನೆ ತರಗತಿಯ ಟಿಕೆಟ್ಟನ್ನೆ ಕೊಂಡುಕೊಂಡರೆ, ಮುಂದಿನ ಸ್ಟೇಶನ್ನಿನಲ್ಲಿ ಕೆಳಗಿಳಿದು ಮೂರನೆ ತರಗತಿಯ ಡಬ್ಬಿಯಲ್ಲಿಯೆ ಹೋಗಿ ಕೂಡುತ್ತೇನೆ ಎಂದು ಗಾಂಧೀಜಿ ಹೇಳಿದರು. ಈ ಹಟಕ್ಕೆ ಮದ್ದು ಏನು ಬಂತು? ಕಡೆಗೆ ಮೂರನೆಯ ಡಬ್ಬಿಯಲ್ಲಿಯೆ ಪ್ರಯಾಣ ನಡೆಯಿತು.

**ಬೆಂಗಳೂರಿನ ಸ್ವಾಗತ**

ಇದು ಕರ್ನಾಟಕಕ್ಕೆ ಗಾಂಧೀಜಿಯ ಪ್ರಥಮ ಭೇಟಿ. ಭೇಟಿ ಬಹಳ ಯಶಸ್ವಿ ಆಯಿತು.

ಆ ಸಂದರ್ಭದಲ್ಲಿ ಹುಟ್ಟಿಕೊಂಡದ್ದು ಗೋಖಲೆ ಸಾರ್ವಜನಿಕ ಸಂಸ್ಥೆ. ಅದರ ಸ್ಥಾಪಕರು ಶ್ರೀ ಡಿ.ವಿ. ಗುಂಡಪ್ಪನವರು. ಆ ಭೇಟಿಯ ಬಗ್ಗೆ ತಮ್ಮ ನೆನಪಿನಿಂದ ಅವರು ಬರೆದ ಮಾತುಗಳನ್ನು ಎತ್ತಿಕೊಡುವುದು ಅಪ್ರಸ್ತುತ ಅಲ್ಲ.

"ಗಾಂಧೀಜಿ ಆಗ ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡುತ್ತಿದ್ದರು. ಬೆಂಗಳೂರಿಗೂ ಬರಬೇಕೆಂದು ಮದ್ರಾಸಿಗೆ ತಂತಿ ಕೊಟ್ಟೆವು. ಅವರಿಂದ ಒಪ್ಪಿಗೆ ಬಂತು. ಈ ಸಂದರ್ಭದಲ್ಲಿ ನಡೆದ ಒಂದು ಸಂಗತಿಯನ್ನು ಹೇಳಬೇಕು, ತುಂಬ ಯೋಗ್ಯ.

ನಮಗೆ ದುಡ್ಡು ಬೇಕಾಗಿತ್ತು. ಕೆಲವರು ವರ್ತಕ-ವ್ಯವಹಾರಿಗಳನ್ನು ಕಂಡರೆ ಒಳ್ಳೆಯದು ಎಂದು ಒಬ್ಬ ಮಿತ್ರರು ಹೇಳಿದರು. ಅದರಲ್ಲೂ ಮುಖ್ಯವಾಗಿ ಷಣ್ಮುಗಂ ಮೊದಲಿಯಾರ್ ಬಳಿಗೆ ಹೋಗಿ ಎಂದರು.

ಅದೇ ರೀತಿ ಅಲ್ಲಿಗೆ ಹೋಗಿ ನಮ್ಮ ಉದ್ದೇಶವನ್ನು ತಿಳಿಸಿದೆವು. ಅವರು ಕೇಳಿದರು:

'ನಿಮ್ಮಲ್ಲಿ ಎಷ್ಟು ಹಣ ಇದೆ?'
'ನೂರೈವತ್ತೊ ಇನ್ನೂರೋ ಇದೆ'
ಅವರು ನಸು ನಕ್ಕರು. ಆಮೇಲೆ ಕೇಳಿದರು:
'ನನ್ನಿಂದ ಏನು ಆಗಬೇಕು?'
'ಒಂದು ನೂರು ರೂಪಾಯಿ ಕೊಟ್ಟರೆ ಸಾಕು.'

ಶ್ರೀ ಷಣ್ಮುಖಂ ಮೊದಲಿಯಾರ್ ಗಟ್ಟಿಯಾಗಿ ನಕ್ಕು ಹೇಳಿದರು: 'ಅಯ್ಯಾ ನೀವು ಎಂಥ ಕೆಲಸ ಮಾಡುತ್ತಿದ್ದೀರಿ ನಿಮಗೇ ಗೊತ್ತಿಲ್ಲ. ಅಂಥ ದೊಡ್ಡವರನ್ನು ಕರೆಸಿದ ಮೇಲೆ ಅವರಿಗಾಗಿ ಯೋಗ್ಯ ವಸತಿ, ಯೋಗ್ಯ ಸತ್ಕಾರ ಏರ್ಪಡಿಸಬೇಕು. ಇದಕ್ಕೆ ಬಹಳ ವೆಚ್ಚವಾಗುತ್ತದೆ. ಇದೋ ತೆಗೆದುಕೊಳ್ಳಿ ಎಂದು ೧,೦೦೦ ರೂಪಾಯಿ ಕೊಟ್ಟರು. ನನ್ನ ಸ್ನೇಹಿತರಿಗೂ ಹೇಳುತ್ತೇನೆ. ನಿಮಗೆ ಇನ್ನೂ ಹಣ ಬೇಕಾಗಬಹುದು. ಅವರು ಇರಲಿಕ್ಕೆ ಒಂದು ವಿಶಾಲವಾದ ಮನೆ ಏರ್ಪಾಡು ಮಾಡಿ. ಅದನ್ನು ಅಚ್ಚು ಕಟ್ಟಾಗಿ ಸಿಂಗರಿಸಿ. ನೀವು ಏನು ಬಿನ್ನವತ್ತಳೆ ಕೊಡಬೇಕೋ ಅವರಿಗೆ ಅದನ್ನು ಅತ್ಯುತ್ತಮವಾಗಿ ಅಚ್ಚು ಮಾಡಿಸಿ. ಅದನ್ನು ಕೊಡಲು ಒಂದು ಸೊಗಸಾದ ಪೆಟ್ಟಿಗೆ ಇರಲಿ. ಸಭಾ ಸ್ಥಳವನ್ನು ಮನ ತಟ್ಟುವಂತೆ ಚನ್ನಾಗಿ ಅಲಂಕಾರ ಮಾಡಿಸಿ. ಯಾವುದಕ್ಕೂ ಕೈ ಬಿಗಿ ಹಿಡಿಯ ಬೇಡಿ. ಧಾರಾಳವಾಗಿ ವೆಚ್ಚ ಮಾಡಿ. ಸಂತೋಷವಾಗಿ ಹೋಗಿ. ಚೆನ್ನಾಗಿ ಕೆಲಸ ಮಾಡಿ. ನಮ್ಮ ಮೋಟಾರುಗಳೂ ಆಗ ನಿಮ್ಮ ಸ್ವಾಧೀನದಲ್ಲಿರುತ್ತವೆ. ನೆನಪಿರಲಿ. ಆ ದೊಡ್ಡ ಮನುಷ್ಯನಿಗೆ ತಕ್ಕ ಹಾಗೆ ಭವ್ಯವಾಗಿರಬೇಕು ನಮ್ಮ ಸ್ವಾಗತ. ಬೆಂಗಳೂರಿಗೆ ಅಗೌರವ ತರಬಾರದು.

"ಮಹಾತ್ಮಾ ಗಾಂಧೀಜಿಯ ಈ ಭೇಟಿ ಯಶಸ್ವಿ ಆಯಿತು. ಬೆಂಗಳೂರಿಗೆ ಅವರು ಬಂದದ್ದು ಇದೇ ಮೊದಲು. ಜನರ ಉತ್ಸಾಹ, ಅವರ ಹುರುಪು ಹಿಂದೆ ಎಂದೂ ಇಷ್ಟು ಕಂಡಿರಲಿಲ್ಲ. ಮೈಸೂರಿನ ವೃದ್ಧ ಪಿತಾಮಹ ತಾತಯ್ಯನವರು ಶ್ರೀ ವೆಂಕಟಕೃಷ್ಣಯ್ಯನವರು

ಇದಕ್ಕಾಗಿಯೇ ಮೈಸೂರಿನಿಂದ ಬಂದಿದ್ದರು. ನಿವೃತ್ತ ಹೈಕೋರ್ಟ ನ್ಯಾಯಾಧಿಪತಿ ಶ್ರೀ ಪಿ.ಆರ್. ನಾಗೇಶ್ವರ ಅಯ್ಯರ್ ಅವರ ನೇತೃತ್ವದಲ್ಲಿ ಒಳ್ಳೇ ಶಿಸ್ತಿನ ಸ್ವಯಂ ಸೇವಕರು ನಮಗೆ ನೆರವಾಗಿ ನಿಂತರು."

**ಬೆಳಗಾವಿಯಲ್ಲಿ ಮುಂಬಯಿಯ ಪ್ರಾಂತೀಯ ಪರಿಷತ್ತು**

ಇದೇ ಸುಮಾರಿಗೆ ೧೯೧೬ರಲ್ಲಿ ಬೆಳಗಾವಿಯಲ್ಲಿ ಮುಂಬಯಿ ಪ್ರಾಂತೀಯ ಪರಿಷತ್ತನ್ನು ನೆರೆಯಿಸಲು ಬಹಳ ಭರದಿಂದ ಸಿದ್ಧತೆ ನಡೆಯಿತು. ಶ್ರೀ ದತ್ತೋಪಂತ ಬೆಳವಿಯವರು ಸ್ವಾಗತಾಧ್ಯಕ್ಷರು. ದೇಶಪಾಂಡೆ ಗಂಗಾಧರರಾಯರು ಕಾರ್ಯದರ್ಶಿ. ಪರಿಷತ್ತಿಗೆ ಅಧಿಕ ಸಂಖ್ಯೆಯಲ್ಲಿ ಜನರು ಬರಬಹುದು ಎಂಬ ನಿರೀಕ್ಷೆ ಇತ್ತು. ಕರ್ನಾಟಕದಲ್ಲೂ ಮಹಾರಾಷ್ಟ್ರದಲ್ಲೂ ಪರಿಷತ್ತಿನ ಪ್ರಚಾರ ಕಾರ್ಯ ರಭಸದಿಂದ ಸಾಗಿತು. ವಾಯಿಯ ಪ್ರಾಜ್ಞ ಪಾಠಶಾಲೆಯ ಮಹಾದೇವ ಶಾಸ್ತ್ರಿ ದಿವಾಕರ್ ಅವರು ಪ್ರಚಾರದ ಕಾರ್ಯವನ್ನು ವಹಿಸಿಕೊಂಡಿದ್ದರು. ಆಗ ಲೋಕಮಾನ್ಯ ತಿಲಕರೇ ರಾಜಕೀಯದಲ್ಲಿ ನಮ್ಮ ಮುಖಂಡರು. ಮಂಡಾಲೆ ಸೆರೆಮನೆಯಲ್ಲಿ ಆರು ವರ್ಷ ಕಳೆದು ೧೯೧೪ರಲ್ಲಿ ಬಿಡುಗಡೆ ಆದ ಮೇಲೆ ಶ್ರೀ ತಿಲಕರು ಕರ್ನಾಟಕಕ್ಕೆ ಬರುತ್ತಿದ್ದುದು ಅದೇ ಮೊದಲು. ಆದ್ದರಿಂದ ಅವರ ದರ್ಶನಕ್ಕಾಗಿ ಜನರು ಬಂದು ಮುಗಿಬಿದ್ದಾರೆಂದು ನಿರೀಕ್ಷೆ.

ಏಪ್ರಿಲ್ (೧೯೧೬) ತಿಂಗಳ ಕೊನೆಯ ವಾರದಲ್ಲಿ ಬೆಳಗಾವಿಯಲ್ಲಿ ಪರಿಷತ್ತು ನಡೆಯಬೇಕು. ಲೋಕಮಾನ್ಯ ತಿಲಕರೇ ಇದನ್ನು ಗೊತ್ತು ಮಾಡಿದ್ದರು. ಇದೇ ವೇಳೆಗೆ ಇನ್ನೊಂದು ಯೋಗಾಯೋಗವು ಘಟಿಸಿತು. ಪರಿಷತ್ತಿಗೆ ಗಾಂಧೀಜಿಯವರೂ ಬಂದರು. ಉತ್ತರ ಕರ್ನಾಟಕಕ್ಕೆ ಗಾಂಧೀಜಿ ಬಂದದ್ದು ಅದೇ ಮೊದಲು, ಅವರನ್ನು ಆಹ್ವಾನಿಸಲು ಬೆಳಗಾವಿಯ ಪರಿಷತ್ತಿನ ಪರವಾಗಿ ಕಾಕಾ ಕಾಲೇಕರ ಗಾಂಧೀಜಿಯ ಬಳಿಗೆ ಹೋಗಿದ್ದರು. ಕಾಕಾ ಮೊದಲು ಉಪಾಧ್ಯಾಯರ ಕೆಲಸ ಮಾಡಿದ್ದರು. ಆಮೇಲೆ ಹಿಮಾಲಯ ಯಾತ್ರ ಮಾಡಿಕೊಂಡು ಬಂದು ಗುರುದೇವ ರವೀಂದ್ರನಾಥರ ಶಾಂತಿನಿಕೇತನ ಆಶ್ರಮಕ್ಕೆ ಹೋದರು.

ಆಗ ಅಹಮದಾಬಾದಿನಲ್ಲಿ ಇದ್ದರು ಗಾಂಧೀಜಿ. ಕಾಕಾ ಅಲ್ಲಿಗೆ ಹೋದರು. ಹೇಳಿ ಕೇಳಿ ಗಾಂಧೀಜಿ ರಾಜಕಾರಣದಲ್ಲಿ ಗೋಖಲೆ ಶಿಷ್ಯರು. ಗಾಂಧೀಜಿ ಭಾರತಕ್ಕೆ ಹಿಂದಿರುಗಿ ಬಂದಮೇಲೆ ಗೋಖಲೆಯವರ ಭಾರತ ಸೇವಕ ಸಂಘಕ್ಕೆ ಸೇರಬೇಕೆಂದು ಇಬ್ಬರಿಗೂ ಮನಸ್ಸಿತ್ತು. ಬೆಳಗಾವಿಯ ಪರಿಷತ್ತಿನಲ್ಲಿ ತಿಲಕರದೇ ಪೂರಾ ಪ್ರಭಾವ. ಗೋಖಲೆಯ ಹಾಗೂ ತಿಲಕರ ಪಕ್ಷಗಳು ಬೇರೆ ಬೇರೆ. ಪರಸ್ಪರ ವಿರುದ್ಧ. ಆದ್ದರಿಂದ ಗಾಂಧೀಜಿ ಈ ಮುಂಬಯಿ ಪ್ರಾಂತಿಕ ಪರಿಷತ್ತಿಗೆ ಬರಲು ಒಪ್ಪುತ್ತಾರೋ ಇಲ್ಲವೋ ಎಂಬ ಸಂದೇಹ ಇತ್ತು ಗಂಗಾಧರ ರಾಯರಿಗೆ. ಆದರೂ ಗಾಂಧೀಜಿ ಕರ್ನಾಟಕದ ಆಹ್ವಾನವನ್ನು ಒಪ್ಪಿಕೊಂಡರು.

**ಗಾಂಧೀಜಿಯ ತಂತಿ**

ಗಾಂಧೀಜಿ ಪರಿಷತ್ತಿಗೆ ಬಾರದಂತೆ ತಡೆಯಲು ಮಂದಗಾಮಿಗಳಲ್ಲಿ ಕೆಲವರು ಬಹಳ ಪ್ರಯತ್ನ ಮಾಡುತ್ತಿದ್ದರೆಂಬ ಸುದ್ದಿ ಇದ್ದುದರಿಂದ ಪರಿಷತ್ತಿನ ಕಾರ್ಯದರ್ಶಿ ಆಗಿದ್ದ ದೇಶಪಾಂಡೆ

ಗಂಗಾಧರರಾಯರಿಗೆ ತುಂಬಾ ಗಾಬರಿ ಆಯಿತು. ಗಾಂಧೀಜಿಗೆ ನೇರಾಗಿ ಪತ್ರ ಬರೆದು ಕೇಳಿಬಿಟ್ಟರು. ಬರುತ್ತಾರೋ ಇಲ್ಲವೋ ತಿಳಿಸಬೇಕೆಂದು ಕೋರಿದರು. ಗಂಗಾಧರರಾಯರೇ ಹೀಗೆ ಹೇಳಿದಾರೆ: "ನಾನು ಮತ್ತೆ ಪತ್ರ ಬರೆದೆ. ಅವರು ಬರುವದನ್ನು ಖಂಡಿತ ತಿಳಿಸಬೇಕು ಎಂದು ವಿನಂತಿ ಮಾಡಿಕೊಂಡೆ. ನನಗೆ ಅವರ ಉತ್ತರ ಬಂತು(೨೯-೪-೧೯೧೬) ಒಂದು ಕಾರ್ಡು ಬರೆದರು. ಆ ಉತ್ತರ ಒಂದು ಮಾದರಿ ಉತ್ತರ. 'ಸತ್ತರೆ ಒಂದು ಹೋಯಿತೇ ವಿನಾ ಇಲ್ಲದೆ ಇದ್ದರೆ ನಾನು ಪರಿಷತ್ತಿಗೆ ಬಾರದಂತೆ ಯಾರೂ ತಡೆಯಲಾರರು– Nothing but death can prevent me from going to Belgaum and attending the Conference.' ಈ ಕಾರ್ಡನ್ನು ಓದಿ ನನ್ನ ಆನಂದ ಒಂದಕ್ಕೆ ಎರಡಾಗಿ ಚಿಮ್ಮಿತು. ಒಮ್ಮೆ ಗಾಂಧೀಜಿ ನಮ್ಮ ಆಹ್ವಾನವನ್ನು ಸ್ವೀಕರಿಸಿದ ಮೇಲೆ ಅವರ ಗೆಳೆಯರು ಯಾರಾದರೂ ಆಗಲಿ ಲೋಕಮಾನ್ಯ ತಿಲಕರ ವಿಷಯದಲ್ಲಿ ಅಥವಾ ರಾಷ್ಟ್ರೀಯ ಪಕ್ಷದ ವಿಷಯದಲ್ಲಿ ಏನಾದರೂ ಹೇಳಿದರೆ, ಅದನ್ನು ಕೇಳಿ ಗಾಂಧೀಜಿ ತಮ್ಮ ಮನಸ್ಸನ್ನು ಬದಲಾಯಿಸಬಹುದು ಎಂದು ನನಗಿದ್ದ ಸಂಶಯದಿಂದ ನನ್ನ ಅಜ್ಞಾನ ಪ್ರದರ್ಶಿತವಾಯಿತಲ್ಲ ಎಂದು ತುಂಬಾ ವಿಷಾದ ಆಯಿತು. ಈ ಮನುಷ್ಯ ಬಹುವಿಲಕ್ಷಣ ವ್ಯಕ್ತಿ; ಅವರ ಸಂಗಡ ಕೂಡಿ ನಡೆಯುವುದು ಬಹಳ ಕಷ್ಟ ಎನಿಸಿತು ನನಗೆ ಅದೇ ಸಮಯದಲ್ಲಿ. ಆದರೆ ಅವರ ಬಗ್ಗೆ ನನ್ನ ಮನಸ್ಸಿನಲ್ಲಿ ಪೂಜ್ಯ ಬುದ್ಧಿ ನೆಟ್ಟು ಹೋಯಿತು."

ಜನಸಾಮಾನ್ಯರಿಗೆ ಗಾಂಧೀಜಿ ವಿಷಯ ಹೆಚ್ಚಾಗಿ ಗೊತ್ತಿರಲಿಲ್ಲ. ದಕ್ಷಿಣ ಆಫ್ರಿಕಾದ ಅವರ ಮಹಾಸಾಹಸ, ಅವರ ಕೀರ್ತಿ ಭಾರತದಲ್ಲಿ ವಿದ್ಯಾವಂತರಿಗೆ ಮಾತ್ರವೇ ಗೊತ್ತಿತ್ತು. ಅವರು ಪ್ರಯಾಣ ಮಾಡುತ್ತಿದ್ದುದು ರೈಲಿನಲ್ಲಿ ಮೂರನೆಯ ತರಗತಿಯ ಗಾಡಿಯಲ್ಲಿಯೆ. ಪರಿಷತ್ತಿಗೆ ಅವರೂ, ಅವರ ಮಗ ರಾಮದಾಸನೂ, ಕಾಕಾ ಕಾಲೇಲಕರರೂ ಸೇರಿ ಒಟ್ಟಿಗೇ ಏಪ್ರಿಲ್ ೨೯, ೧೯೧೬ರಂದು ಬೆಳಗಾವಿಗೆ ಬಂದರು. ಅಂದೇ ಮುಂಬಯಿ ಪ್ರಾಂತೀಯ ಸಮ್ಮೇಳನ.

ಆಗ ಗಾಂಧೀಜಿಗಿಂತ ತಿಲಕರದೇ ಹೆಚ್ಚು ಪ್ರಭಾವ ಜನತೆಯಲ್ಲಿ. ಸ್ವಾಗತದ ಮಹಾ ವೈಭವವೂ ಅವರಿಗೇ ಹೆಚ್ಚು, ಆದರೆ ಗಾಂಧೀಜಿಯ ಬಗ್ಗೆ ಅಭಿಮಾನ ಇದ್ದವರೂ ದೇಶದಲ್ಲಿ ಇದ್ದರು. ಪರಿಷತ್ತಿನ ಪ್ರೇಕ್ಷಕ ವೃಂದದಲ್ಲಿಯೂ ಇದ್ದರು. ಪರಿಷತ್ತಿನಲ್ಲಿ ಗಾಂಧೀಜಿ ಮಾತಾಡಬೇಕು ಎಂದು ಒತ್ತಾಯ ಬಂತು. ಅದರಂತೆ ಅವರು ೧-೫-೧೯೧೬ರಂದು ಮಾತೂ ಆಡಿದರು.

ಆಗ ನಮ್ಮ ರಾಜಕೀಯದಲ್ಲಿ ಮಿತವಾದಿಗಳು (ಕಾನೂನಿಗನುಸಾರವಾಗಿಯೇ ಆಂದೋಲನವನ್ನು ನಡೆಸಬೇಕೆನ್ನುವರು) ಉಗ್ರವಾದಿಗಳು, (ಸ್ವದೇಶಿ, ಪರದೇಶ ವಸ್ತುಗಳ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಸ್ವರಾಜ್ಯ ಇವುಗಳ ಬಗ್ಗೆ ತೀವ್ರವಾಗಿಯೂ ನೇರವಾಗಿಯೂ ಜನರನ್ನು ಹುರಿದುಂಬಿಸುವವರು) – ಈ ಎರಡು ಪಕ್ಷಗಳು ಪರಸ್ಪರ ವೈಮನಸ್ಯ ತಾಳಿದ್ದವು. ೧೯೦೭ರಲ್ಲಿ ಸೂರತ್ ಕಾಂಗ್ರೆಸ್ ಗಲಭೆಯಲ್ಲಿ ಕೊನೆಗೊಂಡಾಗ ಉಗ್ರವಾದಿಗಳು ಕಾಂಗ್ರೆಸ್‌ನಿಂದ ದೂರವಿದ್ದರು. ಈ ಎರಡು ಪಕ್ಷಗಳನ್ನು ಒಟ್ಟು ಕೂಡಿಸಲು ತಿಲಕರು ಮಂಡಿಸಿದ ಠರಾವನ್ನು ಹೃದಯಪೂರ್ವಕವಾಗಿ ಸಮರ್ಥಿಸುತ್ತ ಗಾಂಧೀಜಿ ಅವರು ಹಿಂದುಸ್ತಾನಿಯಲ್ಲಿ ಹೇಳಿದರು:

ತಾವು ಯಾರ ಪಕ್ಷಕ್ಕೂ ಸೇರಿದವರಲ್ಲ. ಆದ್ದರಿಂದ ತಾವು ಹೊರಗಿನವರು, ತಮಗೆ ಭಾಷಣಗಳನ್ನು ಕೇಳುವ ಮನಸ್ಸೂ ಇಲ್ಲ. ತಮ್ಮ ಧ್ವನಿಯನ್ನೇ ಕೇಳುವ ಮನಸ್ಸೂ ಇಲ್ಲ. ಆದರೆ ತಾವು ರಾಷ್ಟ್ರೀಯ ಸೇವೆಗೆ ಒಬ್ಬ ಉಮೇದುವಾರರು. ಆದ್ದರಿಂದ ಎಲ್ಲ ಸಂಸ್ಥೆಗಳನ್ನೂ ಪರಿಶೀಲಿಸುವುದು ತಮ್ಮ ಕೆಲಸ. ಅಂತೇ ಬೆಳಗಾವಿಗೆ ತಾವು ಬಂದುದ್ದು. ರಾಷ್ಟ್ರೀಯತೆಯ ಎರಡು ಮಹಾ ಪಕ್ಷಗಳು ಬೆಳಗಾವಿಯಲ್ಲಿ ಸೇರುತ್ತವೆ ಎಂದು ತಮಗೆ ತಿಳಿದುಬಂತು. ಇಂಥದೊಂದು ಶಾಂತಿ-ಸಮಾಧಾನಗಳ ಕಾಲ ಇಲ್ಲಿ ಪ್ರಾರಂಭವಾಗುತ್ತದೆ ಎಂದು ತಿಳಿದು ತಮಗೆ ಅಲ್ಲಿ ಬರಬೇಕೆನಿಸಿತು. ಈ ಪರಿಷತ್ತಿನಲ್ಲಿ ಅಂಥ ಒಂದು ಏಕತೆಯ ಅಸ್ತಿಭಾರ ಹಾಕಲ್ಪಡುವುದು ಎಂಬುದು ತುಂಬಾ ಸಂತೋಷದ ವಿಷಯ ಎಂದು ಹೇಳಿ ತಿಲಕರ ಗೊತ್ತುವಳಿಯ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದರು:

ಆ ತೀರ್ಮಾನದ ಪ್ರತಿಯೊಂದು ಅಕ್ಷರವನ್ನೂ ಒಪ್ಪಿಕೊಳ್ಳಬೇಕು ಎಂದು ಯಾರೂ ಹೇಳರು. ತೀರ್ಮಾನದ ಮುಖ್ಯೋದ್ದೇಶ ತಾವು ಒಪ್ಪಿಕೊಂಡರಾಯಿತು ತಾವೇ ತೀರ್ಮಾನವನ್ನು ಬರೆದಿದ್ದರೆ ಅದರಲ್ಲಿ ಕೆಲವು ಮಾತನ್ನು ಬಿಡುತ್ತಿದ್ದರು. ತಿಲಕರು ಆಡಿದಂತೆ ಮಾಡುವವರು. ಅವರ ಭಾಷಣದಲ್ಲಿ ಏನೂ ಕೊರತೆ ಇರಲಿಲ್ಲ. ಅವರ ಭಾಷಣದಂತೆ ಕೆಲಸ ನಡೆದರೆ ಎರಡು ಪಕ್ಷಗಳೂ ಒಂದಾಗಿ ಕಲೆತು ದೇಶೋದ್ಧಾರ ಆದೀತು. ಆದ್ದರಿಂದಲೇ ತಾನು ಬ್ಯಾಪ್‌ಟಿಸ್ಟಾ ಅವರ ಮಾತಿಗೆ ವಿರೋಧವಾಗಿದ್ದದ್ದು. ಬ್ಯಾಪ್‌ಟಿಸ್ಟಾ ವಕೀಲರಾಗಿ ಮಾತಾಡಿದರು. ವಕೀಲರ ಮನೋಧರ್ಮದಿಂದ ಇದನ್ನು ನೋಡಿದರೆ ಇವರಲ್ಲಿ ಬರೀ ದೋಷಗಳೇ ಕಾಣುತ್ತವೆ. ಇದು ರಾಷ್ಟ್ರೀಯ ಸಮಸ್ಯೆ. ಸಾಮಾನ್ಯ ಜನರ ದೃಷ್ಟಿಯಿಂದ ಇದನ್ನು ನೋಡಬೇಕು. ಆಗ ವಿರೋಧಿ ಪಕ್ಷದ ಲೋಪದೋಷಗಳು ಕಳೆದುಹೋಗುತ್ತವೆ; ಸಮ್ಮತಿ ಸಂಪರ್ಕಗಳ ಅಂಶಗಳು ಕಾಣಬರುತ್ತವೆ. ಈ ಪಕ್ಷ ಪ್ರಾಮಾಣಿಕತನದಿಂದ, ನಿಸ್ವಾರ್ಥ ಬುದ್ಧಿಯಿಂದ ಸದಾ ದೇಶವನ್ನೂ, ದೇಶದ ಜನರನ್ನೂ ಕುರಿತು ಚಿಂತಿಸುತ್ತ ತಮ್ಮ ಪಕ್ಷದ ಅಥವಾ ಸ್ವಂತದ ಲಾಭಕ್ಕೆ ಗಮನ ಕೊಡದೆ ಕಾಂಗ್ರೆಸ್ಸಿಗೆ ಹಿಂದಿರುಗಿ ಬಂದರೆ ದೇವರು ಅವರ ಕಡೆ ವಾಲುತ್ತಾನೆ. ಆಗ ದೈವ ಬಲದಿಂದ ಭಾರತ ದೇಶ ಇಡೀ ಜಗತ್ತೇ ವಿರೋಧಿಸಿದರೂ ಮುಂದೆ ಸಾಗುತ್ತದೆ. ಮಿತವಾದಿಗಳಿಗೂ ಉಗ್ರವಾದಿಗಳಿಗೂ ಇಬ್ಬರಿಗೂ ಒಪ್ಪಂದ ಆಗುವಂತೆ ಇದ್ದರೆ, ಅವರಿಗೆ ಇಷ್ಟಪಿದ್ದರೆ ಆಗಲಿ. ಆದರೆ ಮನಸ್ಸು ಇಲ್ಲದೆ ಮೇಲೆ ಮೇಲೆ ಒಪ್ಪಂದ ಮಾಡಿಕೊಂಡು ಅದನ್ನು ಮುರಿಯುವ ಕೆಲಸ ಮಾಡುವಂತೆ ಇದ್ದರೆ. ದಯವಿಟ್ಟು ಮಾಡಿಕೊಳ್ಳಬೇಡಿ. ಇಷ್ಟ ಇಲ್ಲದ ಒಪ್ಪಂದ ಖಂಡಿತ ಬೇಡ. ಪ್ರತಿಯೊಂದು ಪಕ್ಷವೂ ತನ್ನ ತನ್ನ ರೀತಿಯಲ್ಲಿ ಪ್ರತ್ಯೇಕ ಆಗಿ ಕೆಲಸಮಾಡಲಿ. ಇದರಿಂದ ದೇಶಕ್ಕೆ ಹಿತ ಆಗುತ್ತದೆ ಎಂದರು.

ಇದಕ್ಕೆ ಮೊದಲೇ ಏಪ್ರಿಲ್ ೩೦ನೇ ತಾರೀಖು (೧೯೧೬) ಗಾಂಧೀಜಿ ರವಿವಾರ ಪೇಟೆಯಲ್ಲಿ ದಲಿತ ವರ್ಗದ ವಿಷಯವಾಗಿ ಮಾತನಾಡಿದರು. ಸುಮಾರು ಸಾವಿರ ಜನ ಸೇರಿತ್ತು. ಶ್ರೋತೃಗಳಲ್ಲಿ ಲಿಂಗಾಯಿತರು ಮತ್ತು ಅಸ್ಪೃಶ್ಯರೇ ಹೆಚ್ಚಾಗಿದ್ದರು. ಕಣಬರಗಿಯ ಶಿವಮೂರ್ತಿಸ್ವಾಮಿ ಅಧ್ಯಕ್ಷರಾಗಿದ್ದರು.

ಗಾಂಧೀಜಿಗೆ ಅಸ್ವಸ್ಥತೆ ಇದ್ದುದರಿಂದ ಒಂದೇ ನಿಮಿಷ ಮಾತನಾಡುವುದಾಗಿ ಹೇಳಿದರು:

ಪ್ರಾಂತೀಯ ಪರಿಷತ್ತನ್ನು ಬೆಳಗಾವಿಯಲ್ಲಿ ನೆರೆಸುವುದರ ವಿರುದ್ಧ ಇದ್ದ ಚಟುವಟಿಕೆಯನ್ನು ಖಂಡಿಸಿದರು. ಈ ಪರಿಷತ್ತು ನೆರೆಯುವುದು ಎರಡೂ ರಾಜಕೀಯ ಪಕ್ಷಗಳ ನಡುವೆ ಒಂದು ಸಮಾಧಾನ ಮಾಡಲಿಕ್ಕೆ. ಐಕಮತ್ಯ ಇಲ್ಲದೆ ಸ್ವರಾಜ್ಯ ಸಿಗುವುದಿಲ್ಲ. ಭಾರತಕ್ಕೆ ಸ್ವರಾಜ್ಯ ಸಿಗಬೇಕು. ಅದನ್ನು ಎಲ್ಲ ವರ್ಗಗಳೂ ಸೇರಿ ಕೇಳಬೇಕು. ಸ್ವರಾಜ್ಯ ಬಂದರೆ ಯಾವ ಒಂದು ವರ್ಗದ್ದೂ ಮೇಲುಗೈ ಇರುವುದಿಲ್ಲ. ಹಾಗಿಲ್ಲದೆ ಹೋದರೆ, ಅದು ಸ್ವರಾಜ್ಯವೆ ಅಲ್ಲ. ತಮ್ಮ ಪಾಲಿಗೆ ಮೇಲೂ ಇಲ್ಲ, ಕೆಳಗೂ ಇಲ್ಲ. ಒಬ್ಬ ಮನುಷ್ಯ ಭಂಗಿ ಅಥವಾ ನಾಪಿತ ಎಂದು ಅವನನ್ನು ನೀಚವಾಗಿ ನೋಡುವುದಿಲ್ಲ. ಒಬ್ಬ ಮನುಷ್ಯ ಬ್ರಾಹ್ಮಣನಾಗಿ ಹುಟ್ಟಿದ ಮಾತ್ರಕ್ಕೆ ತಮಗೆ ಅವನಲ್ಲಿ ವಿಶೇಷ ಆದರ ಇಲ್ಲ. ಎಲ್ಲವನ್ನೂ ಒಂದೇ ರೀತಿ ಕಾಣುವಂತೆ, ವರ್ಗಭೇದ ಮತಭೇದಗಳನ್ನು ತೋರದಂತೆ ಧರ್ಮ ನಮಗೆ ಹೇಳಿಕೊಟ್ಟಿದೆ. ನಮ್ಮಲ್ಲಿ ಭೇದ ಬುದ್ಧಿ ಇರುವವರೆಗೂ ಸ್ವರಾಜ್ಯ ಸಿಗುವುದಿಲ್ಲ.

ಅವರ ಆ ಹೊತ್ತಿನ ಭಾಷಣದಲ್ಲಿ ಯಾವ ರೀತಿಯ ಉದ್ವೇಗವೂ, ಆವೇಶವೂ ಇರಲಿಲ್ಲ. ಶಾಂತವಾಗಿಯೇ ಮಾತನಾಡಿದರು. ಜನರೂ ಶಾಂತವಾಗಿಯೇ ಕೇಳಿದರು. ಎಷ್ಟು ಜನಕ್ಕೆ ಅರ್ಥವಾಯಿತೊ ಅದನ್ನು ಹೇಳುವುದು ಕಷ್ಟ.

**ಮತಭೇದ ಸಂಶಯ**

ತಿಲಕರಿಗೂ ಗಾಂಧೀಜಿಗೂ ಏನೋ ಮತಭೇದ ಇದೆ, ವಿರಸ ಇದೆ ಎಂದು ಜನ ತಿಳಿದುಕೊಂಡಿದ್ದರು. ಜನರಲ್ಲಿ ಹರಡಿದ್ದ ಈ ಅಭಿಪ್ರಾಯವನ್ನು ಹೋಗಲಾಡಿಸಬೇಕೆಂದು ದೇಶಪಾಂಡೆ ಗಂಗಾಧರರಾಯರ ಪ್ರಬಲವಾದ ಇಚ್ಛೆ. ಇಬ್ಬರೂ ಏಕಾಂತದಲ್ಲಿ ಭೆಟ್ಟಿಯಾಗಿ ಮಾತಾಡಲಿ ಎಂದು ಏರ್ಪಾಡು ಮಾಡಿದರು. ಈ ಮಾತನ್ನು ಗಂಗಾಧರರಾಯರು ಇಬ್ಬರಿಗೂ ತಿಳಿಸಿದರು. ಇಬ್ಬರೂ ಒಪ್ಪಿಕೊಂಡರು. ತಿಲಕರ ಬಳಿಗೇ ಬರುತ್ತೇನೆ ಮಾತಾಡಲು ಎಂದು ಹೇಳಿದರು ಗಾಂಧೀಜಿ. ಆದರೆ ತಿಲಕರ ಸುತ್ತ ಜನ ಜಂಗುಳಿ ಸದಾ ಇದ್ದೇ ಇರುತ್ತಿತ್ತು. ಆ ಗುಂಪು ಅವರ ಜೊತೆಯಲ್ಲಿ ಇದ್ದಾಗ ಇಬ್ಬರೂ ಮನಬಿಚ್ಚಿ ಮಾತನಾಡುವುದು ಸಾಧ್ಯ ಇಲ್ಲ ಎನಿಸಿತು ದೇಶಪಾಂಡೆಯವರಿಗೆ. ತಿಲಕರಿಗೂ ಹಾಗೆಯೇ ಅನಿಸಿರಲಿಕ್ಕೆ ಬೇಕು. ತಿಲಕರು ಗಾಂಧೀಜಿಯ ಬಳಿಗೆ ತಾವೇ ಬರುವುದಾಗಿ ತೀರ್ಮಾನಿಸಿದರು. ಒಂದು ಸಮಯ ಗೊತ್ತು ಆಯಿತು. ಗಾಂಧೀಜಿ ಇದ್ದಲ್ಲಿಗೆ ತಿಲಕರು ಬಂದರು. ಒಂದು ಗಂಟೆಯ ಕಾಲ ಮಾತುಕತೆ ನಡೆಯಿತು.

ಮುಂದೆ ತಿಲಕರು ಅಹಮದಾಬಾದಿಗೆ ಹೋಗಿದ್ದಾಗ ಅವರ ಸ್ವಾಗತಕ್ಕಾಗಿ ಗಾಂಧೀಜಿಯೇ ಸಹಿ ಮಾಡಿ ಪ್ರಕಟಣೆ ಹೊರಡಿಸಿದ್ದರು. ಆ ಊರಿನಲ್ಲಿ ತಿಲಕರ ಮೆರವಣಿಗೆ ಆಯಿತು. ತಿಲಕರ ಜೊತೆಯಲ್ಲಿಯೇ ಗಾಂಧೀಜಿ ಕೂತಿದ್ದರು. ಅದನ್ನು ನೋಡಿದವರಿಗೆ ಎಲ್ಲರಿಗೂ ಸಮಾಧಾನ ಆಗಿರಬೇಕು.

ಮುಂದೆ ಗಾಂಧೀಜಿ ಚಂಪಾರಣ್ಯದಲ್ಲಿ (೧೯೧೭) ನೀಲಿ ಉತ್ಪಾದನೆಯ ಕಳಂಕದ ಬಗ್ಗೆ ವಿಚಾರಣೆ ಮಾಡಲು ಸ್ವತಃ ಹೋದರು. ಚಂಪಾರಣ್ಯದ ಆ ಕಥೆಯನ್ನೆಲ್ಲ

ಡಿ.ರಾಜೇಂದ್ರಪ್ರಸಾದರು 'The Story of Champaranya' ಎಂದು ಬರೆದಿದ್ದಾರೆ. ಗಾಂಧೀಜಿಯ ಆತ್ಮಕಥೆ-ಸತ್ಯಶೋಧನೆ-ಅಲ್ಲಿಯೂ ಸಂಗ್ರಹವಾಗಿ ಈ ಕಥೆ ಬರುತ್ತದೆ.

**ಚಂಪಾರಣ್ಯಕ್ಕೆ ಕನ್ನಡಿಗರು**

ಚಂಪಾರಣ್ಯ ಬಿಹಾರದಲ್ಲಿ ಇದೆ. ಆ ಕಾಲಕ್ಕೆ ಅಲ್ಲಿನ ಜನರಲ್ಲಿ ವಿದ್ಯಾವಂತರೇ ಇರಲಿಲ್ಲ. ಅಲ್ಲಿನ ಅನುಭವ ಹೆಚ್ಚಾದಂತೆ ಅಲ್ಲಿ ಏನಾದರೂ ಸ್ಥಿರವಾದ ಕೆಲಸ ಮಾಡಬೇಕು ಎನಿಸಿತು ಅವರಿಗೆ. ಆಗಲೂ ಈಗಲೂ ಹಳ್ಳಿಗಳಲ್ಲಿ ಶಿಕ್ಷಣ ಅತ್ಯಗತ್ಯ. ಇಲ್ಲದೇ ಇದ್ದರೆ ಪ್ರಗತಿಯ ಯಾವ ಕಾರ್ಯಕ್ರಮವೂ ಇಲ್ಲ ಎನಿಸಿತು. ಈ ಮಾತು ಗಾಂಧೀಜಿಗೆ ಮನದಟ್ಟು ಆಯಿತು. ಅಲ್ಲಿನ ರೈತರ ಅಜ್ಞಾನ ಬಹಳ ಕರುಣಾಜನಕ ಆಗಿತ್ತು. ಸಂಗಾತಿಗಳೊಡನೆ ಆಲೋಚಿಸಿ, ಆರು ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಿದರು ಗಾಂಧೀಜಿ. ಆ ಶಾಲೆಗಳ ಶಿಕ್ಷಕರಿಗೆ ಆಯಾ ಹಳ್ಳಿಯವರೇ ಊಟ-ವಸತಿ ಏರ್ಪಡಿಸಬೇಕು. ಉಳಿದ ವೆಚ್ಚ ಗಾಂಧೀಜಿಯದು.

ಒಂದೊಂದು ಶಾಲೆಗೆ ಒಬ್ಬ ಗಂಡಸು, ಒಬ್ಬ ಹೆಂಗಸು. ಈ ಕೆಲಸಕ್ಕೆ ಕರ್ನಾಟಕದಿಂದ ಸ್ವಯಂ ಸೇವಕರನ್ನು ಕಳಿಸಿಕೊಡಲು ಸಾಧ್ಯವೇ ಎಂದು ದೇಶಪಾಂಡೆ ಗಂಗಾಧರರಾಯರನ್ನು ಗಾಂಧೀಜಿ ಕೇಳಿದರು 'ಈ ಕೋರಿಕೆಯನ್ನು ಕಾಕಾ ಕಾಲೇಲಕರರೂ ಕೂಡ ಗಂಗಾಧರರಾಯರಿಗೆ ಬರೆದು ತಿಳಿಸಿದರು. ಬಾಬಾಸಾಹೇಬ ಸೋಮಣ ಮತ್ತು ಶ್ರೀ ಪುಂಡಲೀಕಜಿ ಕಾತಗಡೆ ಈ ಇಬ್ಬರು ಗಂಗಾಧರರಾಯರ ಜೊತೆಯಲ್ಲಿ ಕೆಲಸ ಮಾಡುತ್ತಿದ್ದರು. ಚಂಪಾರಣ್ಯಕ್ಕೆ ನೀವು ಹೋಗುತ್ತೀರಾ' - ಎಂದು ಅವರನ್ನು ಕೇಳಿದುದಕ್ಕೆ ಅವರೂ ಒಪ್ಪಿಕೊಂಡರು.

ಚಂಪಾರಣ್ಯದಲ್ಲಿ ಬೀತೀಹರವಾ ಎಂಬ ಚಿಕ್ಕಹಳ್ಳಿ, ಅಲ್ಲಿ ಒಂದು ಶಾಲೆ. ಅಲ್ಲಿಗೆ ಹೋದರು ಬಾಬಾ ಸಾಹೇಬ ಸೋಮಣ್ಣ. ಗಾಂಧೀಜಿ ಹೆಂಡತಿ ಕಸ್ತೂರಬಾ ಕೆಲವು ಕಾಲ ಸೋಮಣರ ಜೊತೆಯಲ್ಲಿ ಕೆಲಸ ಮಾಡುತ್ತ ಅಲ್ಲಿಯೇ ಇದ್ದರು. ಕರ್ನಾಟಕದ ಭಾಗ್ಯ ಅದು. ಬೀತೀಹರವಾದ ಶಾಲೆ ಒಂದು ಹುಲ್ಲಿನ ಗುಡಿಸಲಿನಲ್ಲಿ ಇತ್ತು. ಒಂದು ರಾತ್ರಿ ಇದ್ದಕ್ಕಿದ್ದಂತೆ ಶಾಲೆಯ ಆ ಗುಡಿಸಲು ಅಗ್ನಿದೇವನಿಗೆ ಆಹುತಿ ಆಯಿತು. ಅಲ್ಲಿನ ನೀಲಿ ತೋಟಗಾರರದೇ ಈ ಕೆಲಸ ಎಂದುಕೊಂಡರು ಜನ. ಗುಡಿಸಲು ಸುಟ್ಟು ಹೋಯಿತಲ್ಲ. ಆಮೇಲೆ ಬಾಬಾಸಾಹೇಬ ಸೋಮಣ ಸ್ವತಃ ಒಂದು ಕಟ್ಟಡವನ್ನು ಕೈಯಾರೆ ಕಟ್ಟಲು ಮೊದಲಿಟ್ಟರು. ಅದಕ್ಕೆ ನೆರವಾದರು ಹಳ್ಳಿಯ ಜನ. ಆ ಕಟ್ಟಡದ ಕೆಲಸ ಬಹಳ ಚೆನ್ನಾಗಿ ನಡೆಯಿತು. ಕೆಲವು ಕಾಲ ಮಾಡಿ, ಬಾಬಾಸಾಹೇಬರು ಹಿಂದಿರುಗಿ ಬಂದರು. ಆ ಮೇಲೆ ಅವರ ಸ್ಥಳದಲ್ಲಿ ಪುಂಡಲೀಕಜಿ ಕಾತಗಡೆ ಇವರು ಬೆಳಗಾಂವಿಯಿಂದ ಹೋಗಿ ಅಲ್ಲಿ ಒಂದು ವರ್ಷ ಕೆಲಸ ಮಾಡಿದರು. ಅವರ ಕೆಲಸ ಗಾಂಧೀಜಿಗೆ ಬಹಳ ಮೆಚ್ಚಿಕೆ ಆಗಿತ್ತು. ದಕ್ಷಿಣ ಆಫ್ರಿಕಾದಲ್ಲೇ ಕೆಲವು ಕನ್ನಡಿಗರ ನಿಷ್ಠೆಯ ಪರಿಚಯ ಅವರಿಗೆ ಆಗಿತ್ತು. ಮತ್ತೊಮ್ಮೆ ಇಲ್ಲಿಯೂ ಅದೇ ಸದನುಭವ.

**ಮುಂಬಯಿ ಪ್ರಾಂತದ ರಾಜಕೀಯ ಪರಿಷತ್ತು ೧೯೧೮ ಮೇ ೫ರಿಂದ ೮ ರವರೆಗೆ**

೧೯೧೭-೧೮ರಲ್ಲಿ ಗಾಂಧೀಜಿ ಸೈನ್ಯಕ್ಕೆ ಸಿಪಾಯಿಗಳನ್ನು ಭರ್ತಿ ಮಾಡುವ ಕೆಲಸದಲ್ಲಿ

ತೊಡಗಿದ್ದರು. ಅದರ ಪ್ರಚಾರ ಭರದಿಂದ ಸಾಗಿತ್ತು. ಆ ಸಂದರ್ಭದಲ್ಲಿ ಮುಂಬಯಿ ಪ್ರಾಂತದ ರಾಜಕೀಯ ಪರಿಷತ್ತು ವಿಜಾಪುರದಲ್ಲಿ ನಡೆಯಿತು. ವಿಠ್ಠಲಭಾಯಿ ಪಟೇಲರು ಅದಕ್ಕೆ ಅಧ್ಯಕ್ಷರು. ಮಹಾ ಯುದ್ಧದಲ್ಲಿ ಇಂಗ್ಲೆಂಡಿಗೆ ಭಾರತ ನೆರವಾಗಬೇಕೆ ಬೇಡವೆ ಎಂಬ ಚರ್ಚೆ ನಡೆಯಬೇಕಾಗಿತ್ತು ಅಲ್ಲಿ. ಈ ಬಗ್ಗೆ ಗಾಂಧೀಜಿಗೂ ತಿಲಕರಿಗೂ ಮತ ಭೇದ. ಇಬ್ಬರೂ ಪರಿಷತ್ತಿಗೆ ಬರುತ್ತಾರೆ, ಇಬ್ಬರ ವಾದವನ್ನೂ ಕೇಳಬಹುದು ಎಂದುಕೊಂಡು ಅನೇಕರು ಪರಿಷತ್ತಿಗೆ ಬಂದು ಸೇರಿದ್ದರು. ಆದರೆ ಲೋಕಮಾನ್ಯ ತಿಲಕರು ಬರಲಿಲ್ಲ. ನರಸಿಂಹ ಚಿಂತಾಮಣ ಕೇಳಕರ, ಪಿ.ಎಂ. ಬಾಪಟ ಮೊದಲಾದವರು ಬಂದರು. ಗಾಂಧೀಜಿ ಮಾತ್ರ ಗೊತ್ತಾದಂತೆ ಪರಿಷತ್ತಿಗೆ ಬಂದರು.

ಯಾವ ಷರತ್ತು ಇಲ್ಲದೆ ಈ ವಿಪತ್ಕಾಲದಲ್ಲಿ ಬ್ರಿಟಿಷರಿಗೆ ಸಹಾಯ ಮಾಡಬೇಕು ಎಂಬುದು ಗಾಂಧೀಜಿಯ ವಾದ. ಇದಿರಾಳಿಯ ಆಪತ್ತಿನ ಅಥವಾ ಸಂಕಟ ಸಮಯದ ಲಾಭ ಪಡೆಯಬಾರದು ಎಂಬ ಧರ್ಮ ಗಾಂಧೀಯವರದು. ಆದರೆ ವ್ಯವಹಾರದಲ್ಲಿ ಗೆಲ್ಲಬೇಕು ಎಂದರೆ ಅದೇ ಒಳ್ಳೆಯ ಸಮಯ. ತಿಲಕರು ಬಂದಿದ್ದರೆ ಗಾಂಧೀಜಿಯ ವಾದಕ್ಕೆ ವಿರುದ್ಧವಾಗಿ ಅವರು ವಾದಿಸುತ್ತಿದ್ದರು ಎಂದು ಜನರ ನಿರೀಕ್ಷೆ. "ಗಾಂಧೀಜಿ ನನ್ನನ್ನು (ಗಂಗಾಧರ ರಾಯರನ್ನು) ಕರೆದು 'ತಿಲಕರ ಬದಲು ನೀನು ನನ್ನ ವಾದವನ್ನು ವಿರೋಧಿಸು ಎಂದು ಹೇಳಿದರು. ಕರ್ನಾಟಕದಲ್ಲಿ ನಾನು ಈ ಬಗ್ಗೆ ಎಷ್ಟೋ ಭಾಷಣ ಮಾಡಿದ್ದೆ. ಆದ್ದರಿಂದ ನನಗೆ ಹೇಳಿದರೋ ಏನೋ."

ಆದರೆ ತಿಲಕರು ಪರಿಷತ್ತಿಗೆ ಬರಲಿಲ್ಲ ಎಂದು ಗಾಂಧೀಜಿ ತಮ್ಮ ವಾದವನ್ನು ಮಂಡಿಸಲೇ ಇಲ್ಲ. ನನಗೂ ಅವರನ್ನು ವಿರೋಧಿಸುವ ಸರದಿ ಬರಲಿಲ್ಲ ಎಂದು ಹೇಳಿದ್ದಾರೆ ಗಂಗಾಧರ ರಾಯರು.

ಪರಿಷತ್ತಿನ ಎರಡನೆಯ ದಿನ ಎಂದರೆ ಮೇ ೬ನೇ ತಾರೀಖು ಗಾಂಧೀಜಿ ಭಾಷಣ ಮಾಡುತ್ತ ಈ ರೀತಿ ಹೇಳಿದರು: "ನಾನು ಒಂದು ದೊಡ್ಡ ತಪ್ಪನ್ನು ಮಾಡಿದ್ದೇನೆ. ವಿಜಾಪುರದಲ್ಲಿ ಮೊದಲೇ ಎರಡು ಪಕ್ಷ ಇವೆ; ನಾನು ಅನಾವಶ್ಯಕವಾಗಿ ಈ ಊರಿನಲ್ಲಿ ಗದ್ದಲ ಎಬ್ಬಿಸುತ್ತಿದ್ದೇನೆ ಎಂದು ಒಬ್ಬ ಗೆಳೆಯರು ಬಂದು ನನಗೆ ಹೇಳಿದರು. ನನಗೆ ವಾಸ್ತವಸ್ಥಿತಿ ಗೊತ್ತಿರಲಿಲ್ಲ. ಜಗಳ ಹಚ್ಚಿ ಎರಡೂ ಕಡೆಯವರ ಮನಸ್ಸನ್ನು ಉದ್ರೇಕಗೊಳಿಸಲು ನಾನು ಬಂದಿಲ್ಲ.

ನನಗೂ ನಿಮಗೂ ಮಾರ್ಗದರ್ಶನ ಮಾಡಲು ಲೋಕಮಾನ್ಯ ತಿಲಕರು ಇಲ್ಲಿರಬೇಕಾಗಿತ್ತು. ರಾಜಕೀಯದಲ್ಲಿ ನಾನಿನ್ನೂ ಮೂರು ವರ್ಷದ ಎಳೆಯ ಮಗು. ರಾಜಕೀಯದಲ್ಲಿ ನಾನಿನ್ನೂ ನೋಡಬೇಕು, ಪರಿಶೀಲಿಸಬೇಕು ಹಾಗೂ ಕಲಿಯಬೇಕು. ಈ ಗೊಂದಲವನ್ನು ನಿರ್ಮಿಸಿದುದುದಕ್ಕಾಗಿ ನಿಮ್ಮ ಕ್ಷಮೆ ಬೇಡುತ್ತೇನೆ. ಸಾಮಾನ್ಯ ಸಭೆಗಳಲ್ಲಿ ಗದ್ದಲವನ್ನು ಉಂಟುಮಾಡಿದ ಆರೋಪಕ್ಕೆ ಗುರಿಯಾಗದೆ ತನ್ನ ಅಭಿಪ್ರಾಯಗಳನ್ನು ಸ್ಪಷ್ಟವಾಗಿ, ವಿಶದವಾಗಿ ವಿವರಿಸಬಹುದು. ಹಾಕಿಕೊಂಡ ಕಾರ್ಯಕ್ರಮವನ್ನು ನಾನು ಆಚರಣೆಯಲ್ಲಿ ತರುವವನು ಆಗಿರುವುದರಿಂದ ಭರತ ಖಂಡದಲ್ಲಿ ಎಲ್ಲ ಭಾಗಗಳಲ್ಲಿ ಅದರ ಬಗ್ಗೆ ಏನು ಭಾವನೆ ಇದೆ

ಎಂದು ತಿಳಿದುಕೊಳ್ಳುವ ಕುತೂಹಲ. ನಿಮಗೆಲ್ಲರಿಗೂ ಪೂರ್ವಗ್ರಹ ಇದೆ. ಅದನ್ನು ಮನಸ್ಸಿನಲ್ಲಿಟ್ಟುಕೊಂಡೇ ಇಲ್ಲಿಗೆ ಬಂದಿದ್ದೀರಿ. ನಾನು ನನ್ನ ವಾದವನ್ನು ಇಲ್ಲಿ ಮಂಡಿಸಲಾರೆ. ನಿಮ್ಮ ಅಭಿಪ್ರಾಯಗಳನ್ನು ತಿಳಿದುಕೊಂಡು ನಿಮ್ಮ ಭಾವನೆಗಳನ್ನೂ ನಿರ್ಧಾರಕ ಉದ್ದೇಶಗಳನ್ನೂ ಅರ್ಥಮಾಡಿಕೊಂಡು, ನಿಮ್ಮ ಮನಸ್ಸಿನ ಹಿನ್ನೆಲೆಯನ್ನು ಅರಿತುಕೊಳ್ಳಬೇಕು ನಾನು, ಇನ್ನೊಮ್ಮೆ ಶಾಂತವಾತಾವರಣದಲ್ಲಿ ಬಂದು ನಿಮ್ಮ ಮನಸ್ಸುಗಳನ್ನು ಗೆಲ್ಲ ಬಯಸುತ್ತೇನೆ. ನಿಮ್ಮ ಮುಂದೆ ಈಗ ತೀರ್ಮಾನಗಳು ಇವೆ. ಈ ವಿಷಯದಲ್ಲಿ ಶ್ರೀ ಕೇಳಕರರ ನಿಲುವೇ ಸರಿಯೆನಿಸುತ್ತದೆ ನನಗೂ. ಈ ಸಂದರ್ಭದಲ್ಲಿ ಕಾಂಗ್ರೆಸ್ ಸಮಿತಿಯ ತೀರ್ಮಾನವನ್ನು ಒಪ್ಪಿಕೊಳ್ಳಬೇಕು."

ತೀರ್ಮಾನ ಹೀಗಿತ್ತು: "ಯಾವ ವಿಧದಲ್ಲಿಯೂ ಕೂಲಿಕಾರರನ್ನು ಕರೆದೊಯ್ಯುವ ಈ ಇಂಡೆಂಚರ್ ಪದ್ಧತಿ ಸಂಪೂರ್ಣವಾಗಿ ಹೋಗಲೇಬೇಕು; ಇದು ಒಂದು ಬಗೆಯ ಗುಲಾಮಗಿರಿಯಾದುದರಿಂದ ಕೂಲಿಕಾರರನ್ನು ಕೆಳಕ್ಕೆ ಎಳೆದು ಸಮಾಜದ ಆರ್ಥಿಕ ಹಾಗೂ ನೈತಿಕ ಹಿತಕ್ಕೆ ವಿರುದ್ಧವಾಗಿರುವುದರಿಂದ ಇದಕ್ಕಿಂತ ಕಡಿಮೆ ಯಾವ ವಿಧಾನವೂ ಸರಿಹೊಂದುವುದಿಲ್ಲ – ಎಂದು ಈ ಸಮ್ಮೇಳನ ಒತ್ತಾಯಪೂರ್ವಕ ತಿಳಿಸುತ್ತದೆ."

ತೀರ್ಮಾನದ ಸಮರ್ಥನೆಗಾಗಿ Indenture System ಆಫ್ರಿಕಾದ ಕೂಲಿ ಪದ್ಧತಿಯ ಮೇಲೆ ಹುರುಪಿನಿಂದ ಭಾಷಣ ಮಾಡಿದರು. ಗಾಂಧೀಜಿ ಹಾದಿಯಲ್ಲಿ ಮಾತನಾಡುತ್ತ ಈ ಕೂಲಿಕಾರ ಪದ್ಧತಿಯನ್ನು ವಿವರಿಸಿದರು. ಇದರಿಂದ ವಸಾಹತುಗಳಲ್ಲಿ ನಮ್ಮ ಜನರ ಮೇಲೆ ಎಷ್ಟು ಕೆಟ್ಟ ಪ್ರಭಾವ ಆಗಿದೆ ಎಂಬುದನ್ನು ವರ್ಣಿಸಿದರು. ಈ ಪ್ರಶ್ನೆಯ ಬಗ್ಗೆ ಅಂತಶ್ಯಾಖಾ ವರದಿಯ ಸಲಹೆಗಳನ್ನು ಬಲವಾಗಿ ಖಂಡಿಸಿ, ಈ ಪದ್ಧತಿ ಕೂಡಲೆ ಹೋಗಬೇಕೆಂದೂ ಇದರಲ್ಲಿ ಯಾವ ವಿನಾಯತಿಯೂ ಇರಕೂಡದೆಂದೂ ಒತ್ತಿ ಹೇಳಿದರು.

**ಕಲಕತ್ತೆಯ ಕಾಂಗೆಸ್ ವಿಶೇಷ ಅಧಿವೇಶನ**

ಮುಂದೆ ಕಲ್ಕತ್ತೆಯಲ್ಲಿ ಸೆಪ್ಟೆಂಬರ್ ೧೯೨೦ರಲ್ಲಿ ಲಜಪತರಾಯರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ನಡೆಯಿತು. ಅದು ವಿಶೇಷ ಅಧಿವೇಶನ. ಆ ವೇಳೆಗೆ ದೇಶದ ನಾಯಕರಲ್ಲಿ ಎರಡು ಬಣಗಳು ಆಗಿದ್ದವು. ಅಲ್ಲಿ ಅಸಹಕಾರದ ನಿರ್ಣಯ ಆದರೂ ಮುಂದಿನ ನಾಗಪುರದ ಅಧಿವೇಶನದಲ್ಲಿ ಅದರ ಕಾರ್ಯಕ್ರಮ ನಿಶ್ಚಯ ಆಗಬೇಕು ಎಂದು ಗೊತ್ತಾಯಿತು.

ನಾಗಪುರದ ಕಾಂಗ್ರೆಸ್ಸಿನ ವೇಳೆಗೆ ಜನರ ಅಭಿಪ್ರಾಯವನ್ನು ತಮ್ಮ ಕಡೆಗೆ ಎಂದರೆ ಅಸಹಕಾರದ ಚಳವಳಿ ಕಡೆಗೆ ಒಲಿಸಿಕೊಳ್ಳಬೇಕು ಎಂಬ ಉದ್ದೇಶದಿಂದ ಗಾಂಧೀಜಿ ಅಖಿಲ ಭಾರತ ಪ್ರವಾಸ ಮಾಡಿದರು. ಆ ಪ್ರವಾಸದಲ್ಲಿ ಕರ್ನಾಟಕಕ್ಕೂ ಕೆಲವು ದಿನ ಬರಬೇಕಾದ ಕಾರ್ಯಕ್ರಮ ಇತ್ತು, ಬೆಳಗಾಂವಿಗೆ ಗಂಗಾಧರರಾಯರಿಗೆ ಪತ್ರ ಬರೆದು ಕರ್ನಾಟಕದಲ್ಲಿ ಕಾರ್ಯಕ್ರಮದ ಅನುಕ್ರಮವನ್ನು ಗೊತ್ತು ಮಾಡುವಂತೆ ತಿಳಿಸಿದರು ಗಾಂಧೀಜಿ. ಆ ಪ್ರಕಾರ ಉತ್ತರ ಕರ್ನಾಟಕದ ಮುಖ್ಯ ಮುಖ್ಯ ಊರುಗಳಲ್ಲಿ ಸ್ವಾಗತದ ಸಿದ್ಧತೆಯೂ ಆಯಿತು. ಆಗ ಗಾಂಧೀಜಿ ಅಖಿಲ ಭಾರತದಲ್ಲಿ ಒಂದು ಕೋಟಿ ರೂಪಾಯಿಯ 'ತಿಲಕ' ಸ್ವರಾಜ್ಯ ನಿಧಿ ಸಂಗ್ರಹ ಮಾಡುತ್ತಿದ್ದರು.

**ಮಂಗಳೂರಿನಲ್ಲಿ ಗಾಂಧೀಜಿ (೧೯.೮.೧೯೨೦)**

ಆಗ ಮಂಗಳೂರು ಮದರಾಸ್ ಪ್ರಾಂತದಲ್ಲಿ ಇತ್ತು. ಆಗ ಇನ್ನೂ ಭಾಷಾವಾರು ಪ್ರಾಂತಗಳ ವ್ಯವಸ್ಥೆ ಆಗಿರಲಿಲ್ಲ. ರಾಜಕೀಯವಾಗಿ ಅಲ್ಲದಿದ್ದರೂ, ಕಾಂಗ್ರೆಸ್ಸಿನ ಘಟನೆಯಲ್ಲಿ ಕೂಡ ಬ್ರಿಟಿಷ್ ಪ್ರಾಂತಗಳಾದ ಮದರಾಸ್, ಮುಂಬಯಿಗಳೇ ಇದ್ದವು. ಮಂಗಳೂರು ಈಗ ಕನ್ನಡದ ಮಹಾನಗರ, ಆಗ ಅದು ಮದರಾಸ್ ಪ್ರಾಂತದ ಪಟ್ಟಣಗಳಲ್ಲಿ ಒಂದು. ಅಲ್ಲಿಗೆ ಗಾಂಧೀಜಿ ಶೌಕತ್ ಅಲಿ ಸಂಗಡ ಆಗಸ್ಟ್ ೧೯, ೧೯೨೦ರ ದಿನ ಬಂದರು. ಅವರದೊಂದು ಸುದೀರ್ಘ ಭಾಷಣ ಅಲ್ಲಿ ಆಯಿತು. ಗಾಂಧೀಜಿ ಹೇಳಿದರು: 'ನನಗೂ ನನ್ನ ಅಣ್ಣ ಶೌಕತ್ ಅಲಿಗೂ ಭಾರತದ ಈ ಸುಂದರ ಉದ್ಯಾನಕ್ಕೆ ಬರಲು ಬಹಳ ಸಂತೋಷ ಆಯಿತು. ಇವತ್ತು ನೀವು ಕೊಟ್ಟ ಭವ್ಯ ಸ್ವಾಗತ, ನಾವು ಪ್ರತಿನಿಧಿಸುತ್ತಿರುವ ಚಳವಳಿಯಲ್ಲಿ ನಿಮಗೆ ಸಹಾನುಭೂತಿ ಇದೆ ಎಂದಾದರೆ ನಮಗೆ ಬಹಳ ಸಂತೋಷ. ಈ ನಿರಂತರ ಪ್ರವಾಸವನ್ನು ನಾವು ಕೈಗೊಂಡದ್ದು ಸ್ವಾಗತಗಳಿಗೆ ಬಿನ್ನವತ್ತಳೆಗಳಿಗೆ ಅಲ್ಲ. ಇವತ್ತಿನ ನಮ್ಮ ಪರಿಸ್ಥಿತಿಯನ್ನು ನಿಮ್ಮ ಮುಂದೆ ಇಡಬೇಕೆಂದು ಪ್ರವಾಸ ಮಾಡುತ್ತಿದ್ದೇವೆ. ನಮ್ಮ ಪ್ರವಾಸದಲ್ಲಿ ಎಲ್ಲೆಲ್ಲೂ ಬಿನ್ನವತ್ತಳೆಗಳು ನಮಗೆ ದೊರೆತವು. ಆದರೆ ಕಾಸರಗೋಡಿನಲ್ಲಿ ದೊರೆತ ಬಿನ್ನವತ್ತಳೆ ಬಹಳ ಪ್ರಾಮಾಣಿಕ ಆಗಿದೆ. ನಮ್ಮಿಬ್ಬರನ್ನು 'ಪ್ರಿಯ ಪೂಜನೀಯ ಸೋದರರೆ' ಎಂದು ಕರೆದಿದ್ದಾರೆ. 'ಪೂಜನೀಯ' ಶಬ್ದ ನನಗೆ ಇಷ್ಟ ಇಲ್ಲದಿದ್ದರೂ, 'ಪ್ರಿಯ' ಎಂಬ ಶಬ್ದ ಮಾತ್ರ ಪ್ರಿಯ. ಅದಕ್ಕಿಂತಲೂ ಪ್ರಿಯ 'ಸೋದರರೆ' ಎಂಬ ಶಬ್ದ. ಆ ಬಿನ್ನವತ್ತಳೆಯನ್ನು ಬರೆದವರು ಈ ಪ್ರವಾಸದ ಮಹತ್ವವನ್ನು ಅರಿತುಕೊಂಡಿದ್ದಾರೆ. ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಯಾವ ಅಣ್ಣ ತಮ್ಮಂದಿರೂ ನನ್ನ ಹಾಗೆ, ನಮ್ಮ ಅಣ್ಣ ಶೌಕತ್ ಅಲಿ ಹಾಗೆ ಒಂದೇ ಧ್ಯೇಯ ಒಂದೇ ಉದ್ದೇಶ ಇಟ್ಟುಕೊಂಡು ನಮ್ಮಷ್ಟು ನಿಕಟ ಬಂಧುಗಳಾಗಿರಲಾರರು. ಶೌಕತ್ ಅಲಿ ಜೊತೆಯಲ್ಲಿ ಒಡಹುಟ್ಟಿದವನು ಎನಿಸಿಕೊಳ್ಳಲು ನನಗೆ ಬಲು ಹೆಮ್ಮೆ. ಆ ಬಿನ್ನವತ್ತಳೆಯ ವಿಷಯ ಮಾತ್ರ ಮಹತ್ವದ್ದು. ನಮ್ಮ ಈ ಒಟ್ಟು ಕೆಲಸದಲ್ಲಿ ಭಾರತದ ಹಿಂದೂ-ಮುಸಲ್ಮಾನರ ಐಕಮತ್ಯದ ತಿರುಳು ಅಡಗಿದೆ ಎಂದು ಹೇಳಿದರು. ಅತ್ಯವಶ್ಯಕವಾದ ಆ ಐಕಮತ್ಯವನ್ನು ನಾವಿಬ್ಬರೂ ಪ್ರತಿನಿಧಿಸಲಾರೆವಾದರೆ, ಈ ಎರಡು ಮತದ ಗುಂಪುಗಳಲ್ಲಿ ಸದ್ಭಾವನೆಯ ಸಂಬಂಧವನ್ನು ತರಲಾರೆವಾದರೆ ಬೇರೆ ಯಾರಿಗೆ ಅದು ಸಾಧ್ಯವೋ ನಾನರಿಯೆ. ಆಮೇಲೆ ಉತ್ಪ್ರೇಕ್ಷೆ, ಅಲಂಕಾರ ಯಾವುದೋ ಇಲ್ಲದೆ ಪಂಜಾಬಿನ ಹಾಗೂ ಖಿಲಾಫತ್ತಿನ ಹೋರಾಟದ ಅಂತರಾರ್ಥವನ್ನು ವರ್ಣಿಸಿತು. ಆಮೇಲೆ ಸರಳ ಸುಂದರ ಭಾಷೆಯಲ್ಲಿ ಸತ್ಯಾಗ್ರಹ ಅಸಹಕಾರಗಳ ಅಧ್ಯಾತ್ಮಕ ಅರ್ಥವನ್ನು ವಿವರಿಸಿತು. ಅದರ ತರುವಾಯ ಒಂದು ಸ್ಪಷ್ಟವಾದ ಸರಳ ಶಪಥ. ನಮ್ಮ ಈ ಹೋರಾಟದ ಬೃಹತ್ ಪ್ರಮಾಣ - ಸ್ವಭಾವ ಅವರಿಗೆ ಅರ್ಥವಾಗಿದೆ. ಆದರೂ ಅಸಹಕಾರದಲ್ಲಿ ಅವರು ಸಂಪೂರ್ಣವಾಗಿ ಭಾಗವಹಿಸದೇ ಹೋದರೂ ಕೂಡ ತಮ್ಮ ಕೈಲಾದಷ್ಟು ಹೋರಾಟಕ್ಕೆ ಸಹಾಯ ನೀಡುವುದಾಗಿ ಮಾತುಕೊಟ್ಟರು. ಕಟ್ಟಕಡೆಯಲ್ಲಿ ಒಂದು ಭಾವಪೂರ್ಣ, ಸತ್ಯವಂತ ಭಾಷೆಯಲ್ಲಿ ಈ ಮಾತನ್ನು ಹೇಳಿದರು: 'ಈ ಸಂದರ್ಭಕ್ಕೆ ನಾವು ಎಟುಕದಿದ್ದರೆ ಅದು ನಮ್ಮ ಪ್ರಯತ್ನದ ಲೋಪ ಅಲ್ಲ, ನಮ್ಮ ಸಾಮರ್ಥ್ಯದ ಲೋಪ' ಎಂದರು.

ಇದಕ್ಕಿಂತ ಹೆಚ್ಚಿನ ಚಿನ್ನವತ್ತಳೆ, ಹೆಚ್ಚಿನ ವಚನ ಇನ್ನೇನು ಬೇಕು! ಮಂಗಳೂರಿನವರು ನೀವು ಕೂಡ – ಈ ಚಳವಳಿ ಸರಿ, ಅದಕ್ಕೆ ನಮ್ಮ ಒಪ್ಪಿಗೆ ಇದೆ ಎಂದರೆ ಯಥಾಶಕ್ತಿ ತ್ಯಾಗವನ್ನು ಮಾಡಿರಿ. ಏಕೆಂದರೆ ಈಗ ನಮ್ಮ ಇದಿರಿಗೆ ಇರುವ ಪಿಡುಗು ಪ್ಲೇಗು, ಪ್ರವಾಹ, ಭೂಕಂಪಗಳಿಗಿಂತ ದೊಡ್ಡದು. ಈ ಅನರ್ಥಗಳಿಂದ ನಮ್ಮ ದೇಹಗಳು ನಾಶ ಆದಾವು. ಆದರೆ ಈ ಪಿಡುಗಿನಿಂದ ನಮ್ಮ ಇಡೀ ರಾಷ್ಟ್ರದ ಸ್ವಾಭಿಮಾನ ನಮ್ಮ ಜನರ ಧರ್ಮಾಭಿಮಾನ ನಾಶ ಆಗುತ್ತದೆ. ಖಿಲಾಫತ್ ಅನ್ಯಾಯ ಭಾರತದ ಮುಸಲ್ಮಾನರಿಗೆ ಅನ್ವಯಿಸಿದರೆ, ಪಂಜಾಬಿನ ದುರಂತವಂತೂ ಇಡೀ ಭಾರತದ ಪೌರುಷವನ್ನೇ ಕೆಣಕುತ್ತದೆ. ಈ ದುರಂತದ ಎದುರಿನಲ್ಲಿ ನಾವು ದುರ್ಬಲತೆಯಿಂದ ಮಣಿಯೋಣವೆ ಅಥವಾ ಎದೆ ಮುಂದೆ ಮಾಡಿ ಸೆಟೆದು ನಿಲ್ಲೋಣವೆ? ಈ ಎರಡು ಅನರ್ಥಗಳಿಗೂ ಪರಿಹಾರ ಆಧ್ಯಾತ್ಮಿಕವಾದ ಅಸಹಕಾರ. ಇದರಲ್ಲಿ ನಿಗ್ರಹ ಬೇಕು ತ್ಯಾಗ ಬೇಕು ಆದ್ದರಿಂದಲೇ ಆಧ್ಯಾತ್ಮಿಕ ಎನ್ನುತ್ತೇನೆ. ಯಾರು ಹೇಗಾದರೂ ಇರಲಿ, ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಮಟ್ಟಿಗೆ ತಾನು ತ್ಯಾಗ ಮಾಡಬೇಕು. ಈ ಕರ್ತವ್ಯ ಪಾಲನೆಯ ಹಿಂದೆ ಇರುವ ಧಾರ್ಮಿಕ ಶಪಥ ಬಹಳ ಮಹತ್ವದ್ದು. ಎಲ್ಲ ಧರ್ಮಗಳಲ್ಲಿಯೂ ಇದು ಇದೆ. ನಾನು ಅಭ್ಯಾಸ ಮಾಡಿದ್ದೇನೆ. ಎಲ್ಲಕ್ಕು ಒಂದು ಪ್ರತಿಫಲ ಇದ್ದೇ ಇದೆ. ಇದನ್ನು ಆಧ್ಯಾತ್ಮಿಕ ಸಾಧನೆ ಎನ್ನಲು ಇದಕ್ಕೆ ಯಾರ ಅಪ್ಪಣೆಯೂ ಬೇಕಾಗಿಲ್ಲ. ತನ್ನ ಅಂತರಂಗದ ಅಪ್ಪಣೆ ಆದರೆ ಸಾಕು. ಇದು ಆಧ್ಯಾತ್ಮಿಕ, ಏಕೆಂದರೆ ರಾಷ್ಟ್ರದ ಉತ್ತಮೋತ್ತಮ ಗುಣವನ್ನು ಮೇಲಕ್ಕೆ ತರುತ್ತದೆ; ಒಬ್ಬ ವ್ಯಕ್ತಿ ಅದನ್ನು ಮಾಡಿದರೆ ವೈಯಕ್ತಿಕ ಗೌರವಕ್ಕೆ ದಾರಿ ಮಾಡುತ್ತದೆ. ಇಡೀ ರಾಷ್ಟ್ರವೇ ಸಾಧಿಸಿದರೆ ರಾಷ್ಟ್ರ ಗೌರವ ಹೆಚ್ಚುತ್ತದೆ. ಆದ್ದರಿಂದಲೇ ನಮ್ಮ ದೇಶ ನಾಯಕರು ಎಷ್ಟು ಜನ ವಿರೋಧಿಸಿದರೂ ಈ ಅಸಹಕಾರದ ಆಯುಧವನ್ನು ಅತ್ಯಂತ ವ್ಯಾವಹಾರಿಕ, ದೋಷ ರಹಿತ ಎಂದಿದ್ದೇನೆ. ವೈಯಕ್ತಿಕ ಅಂತರಾತ್ಮದ ಕರೆಗೂ ಇದು ಅನುಕೂಲ. ಆದ್ದರಿಂದಲೇ ಇದು ದೋಷರಹಿತ. ಮೌಲಾನಾ ಶೌಕತ್ ಆಲಿ ಈಗ ಏನು ಅರ್ಜಿಸಿದಾರೋ ಅದಕ್ಕಿಂತ ಹೆಚ್ಚು ದೇವರು ಏನನ್ನೂ ಬೇಡುವುದಿಲ್ಲ. ಸರ್ವಶಕ್ತ ಪರಮಾತ್ಮನ ಪಾದಾರವಿಂದದಲ್ಲಿ ಎಲ್ಲವನ್ನೂ ಅವರು ಸಮರ್ಪಿಸಿದಾರೆ.

**ಅಸಹಕಾರದ ನಾಲ್ಕು ಅಂಶ**

ಮಂಗಳೂರಿನ ಜನರ ಮುಂದೆ ನಿಂತು ನಾವು ನೀಡುತ್ತಿರುವ ಈ ಅಮೂಲ್ಯ ಕೊಡುಗೆಯನ್ನು ಸ್ವೀಕರಿಸಿ ಎಂದು ಬೇಡುತ್ತಿದ್ದೇವೆ. ನನ್ನ ಭಾಷಣ ಕೇಳಿ ಇಸ್ಲಾಂ ಸಂರಕ್ಷಣೆಗೆ. ಅಸಹಕಾರಕ್ಕಿಂತ ಬೇರೆ ಉಪಾಯ ಇಲ್ಲ ಎಂದೆನಿಸಿದರೆ ಇದನ್ನು ಒಪ್ಪಿಕೊಳ್ಳಿ. ನಿಮ್ಮ ಮುಂದೆ ಎಷ್ಟೋ ಸಮಸ್ಯೆಯನ್ನು ಮಂಡಿಸುತ್ತಾರೆ. ನಿಮ್ಮ ನಾಯಕರಲ್ಲಿ ಒಮ್ಮತ ಇಲ್ಲ. ಆದರೆ ನೀವು ಗೊಂದಲದಲ್ಲಿ ಬೀಳಬೇಡಿ. ಈ ಪ್ರಪಂಚದಲ್ಲಿ ಧಾರ್ಮಿಕ ಆಗಲಿ, ಆಧ್ಯಾತ್ಮಿಕ ಆಗಲಿ–ಯಾವುದೇ ಹೋರಾಟಕ್ಕಾಗಲಿ ಈ ಪರಿಮಿತಿ ಅಗತ್ಯ. ಇದು ತುಂಬಾ ಹಠಾತ್ತಾಗಿ ಬರುತ್ತಿದೆ. ಹೃದಯ ಸರಿಯಾಗಿ ಪ್ರತಿಗೂಡದಿದ್ದರೆ ಮನಸ್ಸು ಗೊಂದಲದಲ್ಲಿ ಬೀಳಬಹುದು. ನಮ್ಮೆಲ್ಲರಲ್ಲೂ ಹೃದಯಕ್ಕೂ ಮನಸ್ಸಿಗೂ ಮೇಳ ಸಂಪೂರ್ಣವಾಗಿ ಇದ್ದರೆ ನಾವೆಲ್ಲರೂ ಪರಿಪೂರ್ಣ ಮನುಷ್ಯರೇ ಆಗಬೇಕು. ನಮ್ಮ ಪತ್ರಿಕೆಗಳಲ್ಲಿ ಬೇಕಾದಷ್ಟು ವಾದ–ವಿವಾದ ನಡೆಯುತ್ತಿದೆ.

ಅದೇನೇ ಇರಲಿ, ದೊಡ್ಡ ಪ್ರಮಾಣದಲ್ಲಿ ಹಿಂಸಾರಹಿತವಾಗಿ ಈ ಚಳವಳಿ ನಡೆಸಿದರೆ ಬಹಳ ಪರಿಣಾಮ ಆಗುವುದರಲ್ಲಿ ಸಂದೇಹ ಇಲ್ಲ. ಇದರಲ್ಲಿ ಬಹಳ ತೊಂದರೆ ಇದೆ ನಾನು ಬಲ್ಲೆ. ಅದನ್ನು ಗೆಲ್ಲುವುದೇ ನಮ್ಮ ವಿಶೇಷ. ಹಿಂಸೆಯನ್ನೂ, ಅಸಹಕಾರದಂಥ ಆಧ್ಯಾತ್ಮಿಕ ಸಾಧನವನ್ನೂ ಒಟ್ಟಿಗೆ ಸೇರಿಸಲಾರೆವು. ನಮ್ಮ ಪ್ರಾಣವನ್ನು ಕೊಡುವ ಸಂದರ್ಭದಲ್ಲಿ ಇತರರ ಪ್ರಾಣವನ್ನು ತೆಗೆದುಕೊಂಡರೆ, ಅದು ನಿಷ್ಕಳಂಕ ತ್ಯಾಗ ಆಗಲಾರದು. ಆದ್ದರಿಂದ ಅಸಹಾಕಾರದ ಪೂರ್ವಸಿದ್ಧತೆಯಾಗಿ, ಸಂಪೂರ್ಣ ಹಿಂಸಾ ಪರಿತ್ಯಾಗ ಅತ್ಯಗತ್ಯ. ನಮ್ಮ ದೇಶದ ಜನರಲ್ಲಿ ನನಗೆ ನಂಬಿಕೆ ಇದೆ. ಅಂತೂ ಭಾರತ ಆತ್ಮತ್ಯಾಗ ಮಾಡದೆ, ಏನನ್ನೂ ಗಳಿಸಲಾರದು. ಒಂದು ವೇಳೆ ಈ ದೇಶ ಹಿಂಸೆಯನ್ನು ಅವಲಂಬಿಸಿದರೂ – ದೇವರು ಹಾಗೆ ಮಾಡದಿರಲಿ – ಸ್ವಾರ್ಥತ್ಯಾಗದ ಪಾಠವನ್ನು ಕಲಿಯಲೇಬೇಕು. ಇನ್ನೊಂದು ಆತಂಕವನ್ನು ಹೂಡುತ್ತಾರೆ: ನಮ್ಮ ರಾಷ್ಟ್ರದಲ್ಲಿ ಒಗ್ಗಟ್ಟಿಲ್ಲ. ಅದನ್ನೂ ಒಪ್ಪಿಕೊಳ್ಳುತ್ತೇನೆ. ಆಗಲೇ ಹೇಳಿದ್ದೇನೆ: ವ್ಯಕ್ತಿಗಳು ವೈಯಕ್ತಿಕವಾಗಿ ರಾಷ್ಟ್ರವು ರಾಷ್ಟ್ರೀಯವಾಗಿ ಈ ಮಾರ್ಗವನ್ನು ಅನುಸರಿಸಬಹುದು. ಆದ್ದರಿಂದ ಇಡೀ ರಾಷ್ಟ್ರವೇ ಅಸಹಕಾರವನ್ನು ಅವಲಂಬಿಸದಿದ್ದರೂ ಕೂಡ, ಹಲವರು ವ್ಯಕ್ತಿಗಳು ಅದರಲ್ಲಿ ಯಶಸ್ಸನ್ನು ಸಂಪಾದಿಸಿದರೆ, ಆ ಕೀರ್ತಿ ರಾಷ್ಟ್ರಕ್ಕೂ ಸಲ್ಲುತ್ತದೆ.

**ಮೊದಲನೆಯ ಹೆಜ್ಜೆ : ಪ್ರಶಸ್ತಿಗಳ ತ್ಯಾಗ**

ಮೊಟ್ಟ ಮೊದಲನೆ ಹೆಜ್ಜೆ ಬಹಳ ಸುಲಭ, ಅದರಲ್ಲಿ ಅಂಥ ತ್ಯಾಗ ಏನೂ ಬೇಕಾಗಿಲ್ಲ. ನಿಮ್ಮ ಖಾನ್ ಬಹದ್ದೂರರು, ರಾವ್ ಸಾಹೇಬರು, ಉಳಿದ ಪ್ರಶಸ್ತಿ ಪಡೆದವರು ತಮ್ಮ ಪ್ರಶಸ್ತಿಗಳನ್ನು ಬಿಟ್ಟುಕೊಟ್ಟರೆ ಅವರಿಗೆ ಇದು ಮಹಾತ್ಯಾಗವಲ್ಲ, ಆದರೆ ದೇಶಕ್ಕೆ ಮಾತ್ರ ಬಹಳ ದೊಡ್ಡ ಗೌರವ, ಅವರು ಕಳೆದುಕೊಂಡದ್ದು ಏನೂ ಇಲ್ಲ. ಮೂರು ಕಾಸೂ ಕಳೆದು ಕೊಳ್ಳುವುದಿಲ್ಲ, ಆದರೆ ರಾಷ್ಟ್ರದ ಮೆಚ್ಚಿಗೆ ಸಿಗುತ್ತದೆ. ಈ ಮೊದಲ ಹೆಜ್ಜೆಯ ಅರ್ಥ ಏನೋ ನೋಡೋಣ. ಹಿಂದು ಪತ್ರಿಕೆಯ ಸಮರ್ಥ ಸಂಪಾದಕರು ಕಸ್ತೂರಿ ರಂಗಯ್ಯಂಗಾರ್ಯರೂ ಈ ಪ್ರಶಸ್ತಿಗಳ ತ್ಯಾಗ ಅತ್ಯಗತ್ಯ ಎಂದು ಒಪ್ಪಿಕೊಂಡಿದ್ದಾರೆ. ಸರಕಾರ ಯಾರನ್ನು ಪದವಿಗಳಿಂದ ಗೌರವಿಸಿದೆಯೋ ಅವರು "ಭಾರತದ ಗೌರವಕ್ಕೆ ಮುಸ್ಲಿಂ ಧರ್ಮಕ್ಕೆ ಧಕ್ಕೆ ತರುವಂಥ ಕೆಲಸ ಸರಕಾರದಿಂದ ನಡೆದಿದೆ, ಭಾರತದ ಹೃದಯ ಘಾಸಿ ಆಗಿದೆ. ಇನ್ನು ಸರಕಾರ ಕೊಟ್ಟ ಈ ಪ್ರಶಸ್ತಿಗಳನ್ನು ನಾವು ಇಟ್ಟುಕೊಳ್ಳಲಾರೆವು: – ಎಂದು ಸರಕಾರಕ್ಕೆ ಬರೆದು ತಿಳಿಸಿ, ಅವನ್ನು ಹಿಂದಿರುಗಿಸಬೇಕು. ಇದರಿಂದ ಅವರಿಗೊಂದು ಕುರುಡು ಕಾಸೂ ವೆಚ್ಚ ಇಲ್ಲ. ರಾಷ್ಟ್ರಕ್ಕೂ ಇಲ್ಲ. ಆದರೆ ರಾಷ್ಟ್ರದ ಸಂಕಲ್ಪದ ಅತ್ಯಂತ ಪರಿಣಾಮಕಾರಿ ಸಂಕಲ್ಪ ಇದು.

**ಎರಡನೆಯ ಹೆಜ್ಜೆ : ಶಾಸನಸಭಾ ಬಹಿಷ್ಕಾರ**

ಎರಡನೆಯ ಹೆಜ್ಜೆ ಎಂದರೆ ಅಸಹಾಕಾರದ ಎರಡನೆಯ ಕಾರ್ಯಕ್ರಮ. ಶಾಸನ ಸಭಾ ಬಹಿಷ್ಕಾರಕ್ಕೆ ಪ್ರಬಲ ವಿರೋಧ ಇದೆ ಎಂದು ನಾನು ಬಲ್ಲೆ. ಈ ವಿರೋಧವನ್ನು ಸ್ವಲ್ಪ ವಿಶ್ಲೇಷಿಸಿ ನೋಡಿದರೆ ಗೊತ್ತಾಗುತ್ತದೆ. ಈ ಹೆಜ್ಜೆ ತಪ್ಪೂ ಅಲ್ಲ, ಅದು ಅಯಶಸ್ವಿ ಆಗುತ್ತದೆ ಎನ್ನುವ ಹೆದರಿಕೆಯೂ ಇಲ್ಲ. ಆದರೆ ಈ ದೇಶ ಇದನ್ನು ಒಪ್ಪಿಕೊಳ್ಳುತ್ತದೆಯೋ ಇಲ್ಲವೋ, ಮಿತವಾದಿಗಳು ಶಾಸನ ಸಭೆಗಳಿಗೆ ಕಳ್ಳತನದಲ್ಲಿ ನುಸುಳಿಕೊಳ್ಳುತ್ತಾರೆಯೋ ಏನೋ ಎಂಬ

ಭಾವನೆ ಇದೆ. ಈ ಹೃದಯ ದೌರ್ಬಲ್ಯವನ್ನು ಬಿಡಿ ಎಂದು ಮಂಗಳೂರಿನ ನಾಗರಿಕರನ್ನು ಬೇಡಿಕೊಳ್ಳುತ್ತೇನೆ. ಮಂಗಳೂರಿನ ಜನ ಮನಸ್ಸು ಮಾಡಿದರೆ ನಿಮ್ಮ ಪ್ರತಿನಿಧಿಯಾಗಿ ಯಾವ ಮಿತವಾದಿಯೂ ಉಗ್ರವಾದಿಯೂ ಅಥವಾ ಮತ್ತೊಬ್ಬನೂ ಶಾಸನ ಸಭೆಗೆ ಹೋಗಲಾರ. ಇದರಲ್ಲಿಯೂ ಒಂದು ಕಾಸಿನ ತ್ಯಾಗವೂ ಇಲ್ಲ, ಗೌರವದ ನಷ್ಟವೂ ಇಲ್ಲ. ಇಡೀ ರಾಷ್ಟ್ರಕ್ಕೆ ಇದರಿಂದ ಗೌರವ ಹೆಚ್ಚುತ್ತದೆ. ಈ ಒಂದು ಹೆಜ್ಜೆಯನ್ನು ಹಾಕಿದರೆ ಸಾಕು ನಮಗೆ ಬೇಕಾದ ಫಲ ಸಿಗುತ್ತದೆ. ಇದರಲ್ಲಿ ತೀವ್ರವಾದಿಗಳೂ ನಾವೂ ಎಲ್ಲರೂ ಒಗ್ಗಟ್ಟಾಗಬೇಕು. ಒಂದು ವೇಳೆ ಎಲ್ಲರೂ ಬರಲಿಲ್ಲ, ನಾವು ವೈಯುಕ್ತಿಕವಾಗಿ ಅಂಜಬೇಕಾದ್ದಿಲ್ಲ. ಮುಂದಿನ ಪ್ರಗತಿಯ ಹಾದಿಗೆ ಆ ವ್ಯಕ್ತಿ ತಳಹದಿ ಹಾಕಿದ ಹಾಗೆ ಆಗುತ್ತದೆ. ತನ್ನ ಕೈಯಿಂದಾದರೂ ಈ ಸರಕಾರದ ಪಾಪವನ್ನು ತೊಳೆದುಕೊಂಡ ಸಮಾಧಾನ ಅವನಿಗಿರುತ್ತದೆ.

**ಮೂರನೆಯ ಹೆಜ್ಜೆ : ವಕೀಲಿ ಬಹಿಷ್ಕಾರ**

ಒಂದು ಕಾಲಕ್ಕೆ ನಾನು ವಕೀಲ ಆಗಿದ್ದೆ. ಅದರ ಬಗ್ಗೆ ಈಗ ಹೇಳುತ್ತೇನೆ ಅವರೆಲ್ಲರೂ ಸರಕಾರಕ್ಕೆ ತಮ್ಮ ಸಹಕಾರ ನೀಡದೆ ಹಿಂದೆ ಸರಿದು, ತಮ್ಮ ವಕೀಲಿಯನ್ನು ಬಿಟ್ಟುಕೊಡಬೇಕು ಎಂದು ಕೇಳಿದ್ದೇನೆ. ಈ ಸರಕಾರದಲ್ಲಿ ಶುದ್ಧ ನ್ಯಾಯ ಇಲ್ಲ. ನಮ್ಮ ರಾಷ್ಟ್ರಕ್ಕಂತೂ ದೊರಕುತ್ತಿಲ್ಲ. ಒಬ್ಬನೇ ಒಬ್ಬ ವಕೀಲ ಈ ಹೆಜ್ಜೆ ಹಾಕಿದರೂ ಅದು ಅವನಿಗೆ ಒಳ್ಳೆಯದೇ. ಎಲ್ಲರೂ ಹಾಕಿದರೆ ರಾಷ್ಟ್ರಕ್ಕೇ ಒಳ್ಳೆಯದು.

**ನಾಲ್ಕನೆಯ ಹೆಜ್ಜೆ : ಶಾಲಾ ಬಹಿಷ್ಕಾರ**

ಸರಕಾರೀ ಶಾಲೆಗಳ, ಸರಕಾರದ ಸಹಾಯ ಪಡೆವ ಶಾಲೆಗಳ ಮಾತನ್ನು ಹೇಳುತ್ತೇನೆ. ನನ್ನ ಮಕ್ಕಳು ಸರಕಾರಿ ಶಾಲೆಗಳಿಗೆ ಹೋಗುತ್ತ ನಾನು ಮಾತ್ರ ಅಸಹಕಾರವನ್ನು ನಡೆಸಬೇಕು ಎಂದರೆ ಅದು ಸಾಧ್ಯ ಇಲ್ಲ. ಸರಕಾರಕ್ಕೆ ನಾವು ಯಾವ ಬಗೆಯ ಸಹಕಾರವನ್ನೂ ಕೊಡಬಾರದು. ಅದರಿಂದ ಯಾವ ಬಗೆಯ ಸಹಾಯವನ್ನೂ ಪಡೆಯಬಾರದು. ಇದು ಈ ಚಳವಳಿಯ ಉದ್ದೇಶ.

ಅಸಹಕಾರದ ಉಳಿದ ಕಾರ್ಯಕ್ರಮಗಳೂ ಮುಖ್ಯವೇ. ಆದರೆ ಅವನ್ನೆಲ್ಲ ಹೇಳಿ ನಿಮ್ಮ ಸಹನೆಯನ್ನು ಪರೀಕ್ಷೆಗೆ ಗುರಿ ಮಾಡುವುದಿಲ್ಲ. ನಾಲ್ಕು ಅಂಶಗಳನ್ನು ಮಾತ್ರ ನಿಮ್ಮ ಮುಂದೆ ಇಟ್ಟಿದ್ದೇನೆ. ಇದರಲ್ಲಿ ಯಾವುದೇ ಒಂದನ್ನು ಪೂರ್ಣವಾಗಿ ಅವಲಂಬಿಸಿದರೂ ಸಾಕು, ಅದರಲ್ಲಿ ಯಶಸ್ಸು ಅಡಗಿದೆ. ಸ್ವದೇಶಿಯನ್ನೂ ಅಸಹಕಾರದ ಅಂಗವಾಗಿ ಹೇಳುತ್ತಿದ್ದೇನೆ. ನಮ್ಮಲ್ಲಿರುವ ತ್ಯಾಗಬುದ್ಧಿಯ ದ್ಯೋತಕ ಅದು. ಪ್ರತಿಯೊಬ್ಬ ಗಂಡಸೂ ಹೆಂಗಸೂ ಮಗುವೂ ಕೂಡ ಸ್ವದೇಶಿಯನ್ನು ಅನುಸರಿಸಬಹುದು.

**ಬೆಂಗಳೂರಿನಲ್ಲಿ ಗಾಂಧೀಜಿ (೨೧-೮-೧೯೨೦)**

ಮಂಗಳೂರಿನಿಂದ ಮುಂದೆ ಸೇಲಂ ಮಾರ್ಗವಾಗಿ ಗಾಂಧೀಜಿ ಬೆಂಗಳೂರಿಗೆ ಬಂದರು. ಬೆಂಗಳೂರಿನಲ್ಲಿ ಆ ದಿನ ನಡೆದ ಸಭೆ ಅತ್ಯಂತ ವಿಲಕ್ಷಣ. 'ಇಲಿಯಂಥ ಮನುಷ್ಯನನ್ನು ಬೆಟ್ಟದಂಥ ನಾನು ಹೊತ್ತುಕೊಂಡು ಬಂದಿದೇನೆ' ಎನ್ನುತ್ತ ಭೀಮಕಾಯ ಶೌಕತ್ ಆಲಿ

ಗಾಂಧೀಜಿಯನ್ನು ವೇದಿಕೆಯ ಮೇಲೆ ಇಳಿಸಿದರು. ಸೇಲಂನಿಂದ ನೇರಾಗಿ ಮೋಟಾರು ಸಭೆಯ ಬಳಿಗೇ ಬಂದಿತು. ಅವತ್ತು ಮಳೆಯೋ ಮಳೆ. ರಪ ರಪ ಮಳೆ ಹೊಡೆಯುತ್ತಿದ್ದರೂ ಆ ಮಳೆಯಲ್ಲಿಯೇ ಸಭೆ ನಡೆಯಿತು. ಯಾರೂ ಛತ್ರಿಯನ್ನೇ ಬಿಚ್ಚಲಿಲ್ಲ. ಸ್ವಯಂ ಸೇವಕರು ಬಿಚ್ಚಗೊಡಲೂ ಇಲ್ಲ. ಈದ್‌ಗಾ ಕಟೋನ್ಮೆಂಟ್ ಪ್ರದೇಶದಲ್ಲಿ ಈ ಸಭೆ ನಡೆಯಿತು. ಸಭೆಗೆ ಬಂದಿದ್ದವರೆಲ್ಲ ಮುದ್ದೆ ಮುದ್ದೆಯಾಗಿ ಮನೆಗೆ ಹೋದರು. ಗಾಂಧೀಜಿಯ ಭಾಷಣ ಹೇಗಿತ್ತು, ಏನು ಹೇಳಿದರು ಎಂಬುದು ಯಾರಿಗೂ ನೆನಪು ಇಲ್ಲ.

ಆದರೂ 'ಹಿಂದು' ಪತ್ರಿಕೆಯಲ್ಲಿ ಬಂದ ಒಂದು ಸುದ್ದಿಯ ಆಧಾರದ ಮೇಲೆ ಗಾಂಧೀಜಿಯ 'ಸಮಸ್ತ ಕೃತಿ ಸಂಗ್ರಹ' (Collected Works of Gandhiji)ದಲ್ಲಿ ಇಷ್ಟು ಇದೆ: ಗಾಂಧೀಜಿ ಉರ್ದು ಭಾಷೆಯಲ್ಲಿ ಮಾತನಾಡಿದರು. ತಮಗೆ ಎದ್ದು ನಿಂತುಕೊಳ್ಳಲು ಆಗದುದಕ್ಕೆ ಕ್ಷಮೆ ಬೇಡಿ, ಕುಳಿತೇ ಮಾತನಾಡಿದರು. ರಾಷ್ಟ್ರದ ಎರಡು ಮುಖ್ಯ ದೂರುಗಳನ್ನು ಮಂಡಿಸುತ್ತ ಅಸಹಕಾರದ ಅಂಶಗಳನ್ನು ಒಂದೊಂದಾಗಿ ವಿವರಿಸಿದರು. ಎಲ್ಲ ಕಾಲಕ್ಕೂ ಭಾರತದ ಜನ ಈ ಸರಕಾರದ ಯಂತ್ರದ ಗುಲಾಮರಾಗಿ ಇರಬೇಕೆ? ಎಷ್ಟು ದಿನ ಸರಕಾರದ ನ್ಯಾಯಾಲಯ ಗಳಿಗೆ ಹೋಗುತ್ತಿರಬೇಕು. ಸರಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸಿ, ಅವನ್ನು ತುಂಬಬೇಕೆ? ಶಾಸನ ಸಭೆಗಳಿಗೆ ತಮ್ಮ ಜನ ಇನ್ನೂ ಹೋಗಬೇಕೆ? ಈ ಬಗೆಯ ಪರಿಸ್ಥಿತಿ ಇರುವವರೆಗೆ ಹೂ-ಹಾರ ತಮಗೆ ಯಾವುದೂ ಬೇಡ ಎಂದರು. ಈ ಅನ್ಯಾಯಗಳನ್ನೂ ಬಗೆ ಹರಿಸುವವರೆಗೆ ಸರಕಾರಕ್ಕೆ ಯಾವ ಬಗೆಯಲ್ಲಿ ಸಹಕಾರ ಕೊಟ್ಟರೂ ಅದು ನಮ್ಮ ಗಂಟಲಿಗೇ ಗಾಳ ಎಂದರು. ಇತ್ತ ಪವಿತ್ರ ಕೊರಾನಿನ ಆಯತೆಗಳನ್ನು ಓದುತ್ತ, ಅತ್ತ ಇಸ್ಲಾಮಿಗೆ ಧಕ್ಕೆ ತಂದ ಈ ಸರಕಾರಕ್ಕೆ ಸಹಕಾರ ನೀಡುವುದು ಹೇಗೆ ಸಾಧ್ಯ? ಖಿಲಾಫತ್ತಿಗಾಗಿ ಕತ್ತಿ ಎತ್ತುವುದು ಮುಸ್ಲಿಮರು ಧಾರ್ಮಿಕ ಕರ್ತವ್ಯ ಎಂದುಕೊಳ್ಳುತ್ತಾರೆ. ತಾವು ಯಾವಾಗಲೂ ಕತ್ತಿಯ ವಿದ್ಯೆಗೆ ವಿರುದ್ಧ.

ಅಸಹಕಾರ ಪವಿತ್ರ ಕೊರಾನಿಗೆ ವಿರುದ್ಧ ಅಲ್ಲ. ಪೈಗಂಬರರೇ ಅಸಹಕಾರವನ್ನು ಅವಲಂಬಿಸಿದ್ದರೆಂದು ಮೌಲಾನಾ ಅಬ್ದುಲ್ ಬಾರಿ ತಮಗೆ ಹೇಳಿದ್ದಾರೆ. ಅಲ್ಲದೆ, ಕತ್ತಿ ಹಿರಿಯಲು ಈ ದೇಶ ಅಷ್ಟು ಬಲಶಾಲಿಯಲ್ಲ. ಹೀಗಾಗಿ ಅಸಹಕಾರವನ್ನೇ ಎಲ್ಲರೂ ಅವಲಂಬಿಸಬೇಕಾಗುವುದು. ಕತ್ತಿಯನ್ನು ಎತ್ತುವುದರಲ್ಲಿ ತ್ಯಾಗ ಇದೆ. ಆದರೆ ಅಸಹಕಾರದಲ್ಲಿ ತೋರಬೇಕಾದ ತ್ಯಾಗ ಅದಕ್ಕೂ ಹೆಚ್ಚಿನದು. ಇಷ್ಟಾದರೂ ಒಂದು ಪುಟ್ಟ ಮಗು ಕೂಡ ಅಸಹಕಾರ ಮಾಡಬಹುದು. ಈ ಮಾತು ಮೌಲಾನಾ ಶೌಕತ್ ಆಲಿಗೂ ಅರ್ಥವಾಗಿದೆ. ಯಾರೂ ಪೀರ್ ಮಹಬೂಬ್ ಷಾ ಮಾಡಿದ ಕೆಲಸವನ್ನು ಮಾಡಬಾರದು (ಪೀರ್ ಮಹಬೂಬ್ ಷಾ ಸಿಂಧದ ಒಬ್ಬ ಪೀರರು. ಅವರನ್ನು ರಾಜದ್ರೋಹಕ್ಕಾಗಿ ಬಂಧಿಸಲಾಗಿತ್ತು. ಎರಡೇ ವರ್ಷ ಸಾದಾ ಶಿಕ್ಷೆ ಕೊಟ್ಟಿದ್ದರೂ ಅವರು ಅದನ್ನು ತಡೆದುಕೊಳ್ಳಲಾಗಲಿಲ್ಲ. ಒಂದು ಒಪ್ಪಿಗೆ ಚೀಟಿ ಬರೆದುಕೊಟ್ಟು ಹೊರಗೆ ಬಂದರು). ಭಾರತೀಯರಾದ ನಾವು ನಮ್ಮ ಸ್ವಭಾವದಿಂದ ಸಂಪ್ರದಾಯಗಳಿಂದ ಪೀರರನ್ನೂ, ಪೂಜಾರಿಗಳನ್ನು ದುರ್ಬಲಗೊಳಿಸಿದ್ದೇವೆ. ಆದ್ದರಿಂದ ತಾವು ಅಪೇಕ್ಷಿಸುವ ತ್ಯಾಗವನ್ನು ಪೀರ್, ಪೂಜಾರಿಗಳಿಂದ ನಿರೀಕ್ಷಿಸುವುದಿಲ್ಲ.

ತಮ್ಮ ದಕ್ಷಿಣ ಆಫ್ರಿಕದ ಹೋರಾಟದಲ್ಲಿಯೂ ಮೊಟ್ಟ ಮೊದಲು ಬಂದ ಸಹಕಾರ್ಯಕರ್ತರಲ್ಲಿ ಒಬ್ಬ ಪೂಜಾರಿ ಇದ್ದ. ಆದರೆ ಆ ಹೋರಾಟಕ್ಕೆ ಬಂದ ಯಶಸ್ಸು ಜನತೆಯಿಂದ ಬಂತು.

**ಕರ್ನಾಟಕ ಪ್ರವಾಸ**

ಕರ್ನಾಟಕವು ತನ್ನ ಪಾಲಿನ ಕಾಣಿಕೆಯನ್ನು ಸಮರ್ಪಿಸಲು ಏರ್ಪಾಟು ಮಾಡಿಕೊಂಡಿತು. ಕರ್ನಾಟಕದ ಮೊದಲನೆ ಮುಕ್ಕಾಂ ನಿಪ್ಪಾಣಿ ಎಂದು ಗೊತ್ತಾಗಿತ್ತು. ನಿಪ್ಪಾಣಿ, ಅಲ್ಲಿಂದ ಚಿಕ್ಕೋಡಿ, ಹುಕ್ಕೇರಿ, ಸಂಕೇಶ್ವರಗಳ ಪ್ರವಾಸ ಮುಗಿಸಿಕೊಂಡು ಬೆಳಗಾಂವಿಗೆ ಬಂದರು.

**ನಿಪ್ಪಾಣಿಯಲ್ಲಿ (೮-೧೧-೧೯೨೦)**

ನವೆಂಬರ್ ೮, ೧೯೨೦ರ ದಿನ ಗಾಂಧೀಜಿ ನಿಪ್ಪಾಣಿಗೆ ಬಂದರು. ಅಲ್ಲಿ ಒಂದು ದೊಡ್ಡ ಸಭೆ ನಡೆಯಿತು. ಈ ಪ್ರವಾಸದ ಬಗ್ಗೆ ಮಹದೇವ ದೇಸಾಯಿ ಬರೆದ ವರದಿಯಿಂದ ಇದನ್ನು ಆರಿಸಿಕೊಂಡಿದೆ. ಸಭೆ ಪ್ರಾರಂಭ ಆದಾಗ ಸಭಿಕರಲ್ಲಿ ಒಬ್ಬ ಮನುಷ್ಯ ಬ್ರಾಹ್ಮಣರನ್ನು ಬಲವಾಗಿ ಟೀಕಿಸಿದ. ಅದಕ್ಕೆ ಉತ್ತರ ಕೊಡುತ್ತ ಗಾಂಧೀಜಿ ಹೇಳಿದರು : ಶ್ರೀ ಮಾರುತಿರಾಯರು ಹೇಳಿದ್ದನ್ನೆಲ್ಲ ನಾನು ಎಚ್ಚರಿಕೆಯಿಂದ ಕೇಳಿದ್ದೇನೆ. ಇದು ಅರೆಬರೆ ಸತ್ಯ ಎಂದಿದ್ದರೂ ಬಲು ಅಪಾಯಕಾರಿ. ಅವರು ಬೇಕೆಂದೇ ಹೀಗೆ ಹೇಳಿದ್ದಾರೆ ಎಂದು ನಾನು ಅನ್ನುವುದಿಲ್ಲ, ಎಷ್ಟೋ ಸಲ ತಪ್ಪು ತಿಳುವಳಿಕೆಯಿಂದ ಅರೆ ಬರೆ ಸತ್ಯಗಳನ್ನು ಆಡುತ್ತೇವೆ, ಮಾಡುತ್ತೇವೆ. ಲೋಕದಲ್ಲಿ ಇತರರ ಕೈಯಿಂದ ತಮ್ಮ ಪಾದ ತೊಳೆಸಿಕೊಂಡು, ಅದನ್ನು ತೀರ್ಥ ಎಂದು ಕೊಡುವ ಬ್ರಾಹ್ಮಣರು ಇಲ್ಲದೆ ಇಲ್ಲ. ಜನರ ಅಜ್ಞಾನವನ್ನು ಆಧರಿಸಿ ಬರೆದ ಗ್ರಂಥಗಳು ಎಷ್ಟೋ ಹಿಂದೂ ಜನರಲ್ಲಿ ಧರ್ಮಗ್ರಂಥ ಎನಿಸಿಕೊಂಡಿವೆ. ಆದರೆ ಸತ್ಯ ಅಸತ್ಯಗಳ ವಿವೇಚನೆ ಮಾಡಬೇಕು ನಾವು. ಇಡೀ ಬ್ರಾಹ್ಮಣ ಸಮಾಜವನ್ನು ದ್ವೇಷಿಸಿ, ಅವರಿಂದ ದೂರ ಇರುವುದು ಆತ್ಮಘಾತಕತನ. ಅವರಲ್ಲಿ ಕೆಲವರು ಸುಳ್ಳು ಹೇಳಿ, ಸುಳ್ಳು ಶಾಸ್ತ್ರಗಳನ್ನು ತೋರಿಸಿ ಜನರನ್ನು ತಪ್ಪು ದಾರಿಗೆ ಎಳೆದಿರಬಹುದು. ಬ್ರಾಹ್ಮಣೇತರರಿಗೆ ಆಣೆ ಮಾಡಿ ಹೇಳುತ್ತೇನೆ; ನಾನು ಕೊರಾನ್, ಝೆಂಡ ಅವೆಸ್ತ, ಬೈಬಲ್‌ಗಳನ್ನು ಯಥಾಶಕ್ತಿ ಓದಿದ್ದೇನೆ. ಈ ಎಲ್ಲ ಧರ್ಮಗಳಿಗೂ ನಾನು ಸಮಾನ ಗೌರವ ತೋರುತ್ತೇನೆ. ಎಲ್ಲದರಲ್ಲಿಯೂ ಸ್ವಲ್ಪ ಸ್ವಲ್ಪ ಸತ್ಯ ಇದೆ. ಆದರೆ ಯಾವ ಧರ್ಮವೂ ಆತ್ಮಸಂಯಮ, ತ್ಯಾಗಗಳನ್ನು ಯಜ್ಞದ ರೀತಿಯಲ್ಲಿ ಹಿಂದೂ ಧರ್ಮದ ಹಾಗೆ ಹೇಳಿಲ್ಲ. ನಮ್ಮಲ್ಲಿರುವ ಯಜ್ಞ, ತ್ಯಾಗ ಮುಂತಾದ ಅಭಿಪ್ರಾಯಗಳೆಲ್ಲ ನಮಗೆ ಬ್ರಾಹ್ಮಣರಿಂದ ಬಂದವೇ. ತ್ಯಾಗವನ್ನು ಬ್ರಾಹ್ಮಣರಷ್ಟು ಮಾಡಿದವರು ಪ್ರಪಂಚದಲ್ಲಿ ಯಾರೂ ಇಲ್ಲ. ಈ ಕಲಿಯುಗದಲ್ಲಿಯೂ ಕೂಡ. ಇವತ್ತಿಗೂ ಆ ಸಮಾಜ ತೋರಿಸಿದಷ್ಟು ಸ್ವಾರ್ಥತ್ಯಾಗ, ಪರಿಶುದ್ಧತೆ ಬೇರೆ ಯಾರೂ ತೋರಿಲ್ಲ. ಆದ್ದರಿಂದ ನಾನು ಬ್ರಾಹ್ಮಣೇತರ ಬಂಧುಗಳಿಗೂ ಶ್ರೀ ಮಾರುತಿರಾಯರಿಗೂ ಹೇಳುತ್ತೇನೆ: ಅವರು ಹೇಳುವ ತಪ್ಪುಗಳೆಲ್ಲವೂ ನಿಜ. ಆದರೆ ಒಂದು ಹೋಲಿಕೆ ನೆನಪಾಗುತ್ತದೆ. ಹಾಲಿನಲ್ಲಿ ಏನಾದರೂ ಕಸ ಇದ್ದರೆ ಕೂಡಲೇ ಕಾಣುತ್ತದೆ, ಅದೇ ಕೊಳಕು ಪದಾರ್ಥದಲ್ಲಿ ಎಷ್ಟು ಹೊಲಸು ಇದ್ದರೂ ತಿಳಿಯುವುದಿಲ್ಲ. ಬ್ರಾಹ್ಮಣರು ಎಂದರೆ ಬ್ರಾಹ್ಮಣೇತರರ ಮನಸ್ಸಿನಲ್ಲಿ ಬಹಳ ದೊಡ್ಡ ಆದರ್ಶವಾದಿಗಳು ಎಂಬ ಭಾವನೆ ಇದೆ. ಏನು ಲೋಪದೋಷ ಅವರಲ್ಲಿ ಕಂಡುಬಂದರೂ ಕೂಡಲೇ ಅದು ಗಮನ ಸೆಳೆಯುತ್ತದೆ.

ನನ್ನ ಮಟ್ಟಿಗೆ ಹೇಳುವುದಾದರೆ ಬ್ರಾಹ್ಮಣರ ಈ ಅಲ್ಪ ದೋಷಗಳನ್ನು ಉತ್ಪ್ರೇಕ್ಷಿಸಿ ಹೇಳುತ್ತಿರುವುದೇ ಅವರ ಯೋಗ್ಯತೆಗೆ ಸಾಕ್ಷಿ. ಯಾವ ದೇಶದಲ್ಲಿಯೂ ಬ್ರಾಹ್ಮಣರಷ್ಟು ತಪಸ್ಸು ಮಾಡಿದ ಸಮಾಜ ಒಂದು ಇದೆ ಎಂದು ನಾನು ಕೇಳಿಲ್ಲ. ಆದ್ದರಿಂದ ಬ್ರಾಹ್ಮಣರ ತಪ್ಪುಗಳನ್ನು ಲೆಕ್ಕಿಸುವಾಗ, ವಿವೇಕ ಇರಬೇಕು ಎಂದು ಬ್ರಾಹ್ಮಣೇತರ ಬಂಧುಗಳಿಗೆ ಹೇಳುತ್ತಿದ್ದೇನೆ. ಅವರೊಡನೆ ಅಸಹಕಾರ ಮಾಡಿದರೆ ಆತ್ಮನಾಶವೇ.

ಬ್ರಾಹ್ಮಣರ ಸಂಖ್ಯೆ ಚಿಕ್ಕದು. ಬ್ರಾಹ್ಮಣೇತರರು ಬಹುಸಂಖ್ಯಾಕರು, ಆದ್ದರಿಂದಲೇ ಯಾರೋ ಒಬ್ಬ ಕಿಡಿಗೇಡಿ ಇವತ್ತಿನ ಬ್ರಿಟಿಷ್ ಸರಕಾರವೂ ಕೂಡ ಒಂದು ಬಗೆಯ 'ಬ್ರಾಹ್ಮಣ ಸರಕಾರ' ಎಂದ. ಏಕೆಂದರೆ ೩೦ ಕೋಟಿ ಹಿಂದೂ-ಮುಸ್ಲಿಂ-ಸಿಕ್ಖರನ್ನು ಅದು ಆಳುತ್ತದೆ. ಖಡ್ಗಬಲದಿಂದ ಅವರು ನಮ್ಮನ್ನು ಅಧೀನದಲ್ಲಿಟ್ಟುಕೊಂಡಿದ್ದಾರೆ. ನಮ್ಮ ೩೦ ಕೋಟಿ ಜನರನ್ನು ಆ ರೀತಿ ಕೆಳಗಿಡಬೇಕು ಎಂಬುದು ಬ್ರಾಹ್ಮಣರ ಬಯಕೆ ಅಲ್ಲ. ತಮ್ಮ ಆತ್ಮ ಸಂಯಮದಿಂದ ಎಷ್ಟೇ ಸ್ವಲ್ಪ ಜನರು ಆದರೂ ಅವರು ೩೦ ಕೋಟಿಯನ್ನು ಅಧೀನದಲ್ಲಿಟ್ಟುಕೊಳ್ಳಬಲ್ಲರು. ಯಾವ ಆತ್ಮ ಸಂಯಮ ಬಲದಿಂದ ಈ ಬ್ರಿಟಿಷ್ ದಬ್ಬಾಳಿಕೆ ಸರಕಾರವನ್ನು ಹೋರಾಡಿ ಉರುಳಿಸ ಬೇಕೆನ್ನುತ್ತೇವೋ, ಬ್ರಾಹ್ಮಣರು ಅದೇ ರೀತಿ ತಮ್ಮ ಸ್ವಾತಂತ್ರ್ಯವನ್ನು, ತಮ್ಮ ಪರಿಶುದ್ಧತೆಯನ್ನು ತಮ್ಮ ಪಾವನ ಜೀವನದಿಂದ ಕಾಪಾಡಿಕೊಂಡಿದ್ದಾರೆ. ಇವತ್ತು ಬ್ರಾಹ್ಮಣರನೇಕರು ತಮ್ಮ ಧರ್ಮವನ್ನು ಬಿಟ್ಟಿದ್ದಾರೆ. ಮಹಾರಾಷ್ಟ್ರದ ಬ್ರಾಹ್ಮಣರು ತಮ್ಮ ಶ್ರದ್ಧಾ ಭಕ್ತಿಗಳನ್ನು ಪುನರುಜ್ಜೀವನ ಮಾಡಿಕೊಂಡರೆ ನಾವು ಹೇಳಬೇಕಾದ್ದೇನೂ ಇರುವುದಿಲ್ಲ. ಬ್ರಾಹ್ಮಣರನ್ನು ಈಗಿನ ಹಾಗೆ ದ್ವೇಷಿಸುತ್ತ ಹೋಗಬೇಡಿ; ನಿಮ್ಮ ಸಹನೆಯನ್ನೂ ಮನಸ್ಥೈರ್ಯವನ್ನೂ ಕಳೆದುಕೊಳ್ಳಬೇಡಿ ಎಂದು ಬ್ರಾಹ್ಮಣೇತರ ಬಂಧುಗಳಿಗೆ ಹೇಳುತ್ತೇನೆ. ಹೀಗೆಂದರೆ ಬ್ರಾಹ್ಮಣರು ಮಾಡಿದ್ದನ್ನೆಲ್ಲ ಗಮನಿಸಬಾರದು ಎಂದಲ್ಲ. ಅನ್ಯಾಯಕ್ಕೆ ತಲೆಬಾಗಬೇಕೆಂದು ನಾನು ಎಂದೂ ಹೇಳುವುದಿಲ್ಲ. ಈ ಸಾಮ್ರಾಜ್ಯವನ್ನು ಸೋಲಿಸಲು ನಾವು ಮಾಡಬೇಕಾದ ಕರ್ತವ್ಯವನ್ನು ಮಾಡುತ್ತಿದ್ದರೆ. ಯಾವ ಸಮಾಜವೂ ನಮಗೆ ಅನ್ಯಾಯ ಮಾಡಲಾರದು. ಬ್ರಿಟಿಷ್ ಸರಕಾರದ ಶನಿ ಪ್ರಭಾವ ಬ್ರಾಹ್ಮಣ ಧರ್ಮದಲ್ಲಿ ಇಲ್ಲ ಎಂದು ಒಂದು ಚಿಕ್ಕ ಮಗು ಕೂಡ ಹೇಳಬಲ್ಲದು. ಆ ಧರ್ಮದಲ್ಲಿ ಅಂಥದು ಏನೋ ಇದೆ. ಅಸ್ಪ್ರಶ್ಯರಲ್ಲಿ ಒಬ್ಬ ಭಕ್ತ ಆದರೆ ಬ್ರಾಹ್ಮಣ ಧರ್ಮ ಅವನನ್ನು ಪೂಜ್ಯ ಬುದ್ಧಿಯಿಂದ ಗೌರವಿಸುತ್ತದೆ. ಬ್ರಾಹ್ಮಣರಲ್ಲಿ ಬೇಕಾದಷ್ಟು ದೋಷಗಳು ಇವೆ. ಅದನ್ನು ನೀವು ತೋರಿಸಲೂಬಹುದು. ಪಂಚಾಯತಿಯ ಮೂಲಕ ಇವನ್ನು ನೀವು ಬಗೆಹರಿಸಿಕೊಳ್ಳಬೇಕು. ಜಗತ್ತಿಗೆ ಅವರು ಮಾಡಿದ ಸೇವೆಯನ್ನು ಒಪ್ಪಿಕೊಂಡು, ಅವರೊಡನೆ ಸಹಕರಿಸಬೇಕಾದ್ದೇ ಸರಿಯಾದ ದಾರಿ.

**ಬೆಳಗಾಂವಿಯಲ್ಲಿ – (೮-೧೧-೧೯೨೦)**

ಬೆಳಗಾಂವಿಯ ವ್ಯವಸ್ಥೆಯ ಕೆಲಸವನ್ನೆಲ್ಲ ಯಾಳಗಿ ಗೋವಿಂದರಾಯರಿಗೆ ಒಪ್ಪಿಸಲಾಗಿತ್ತು. ಕೋಟೆಯ ಬಯಲಿನಲ್ಲಿ ಸಭೆಯ ವ್ಯವಸ್ಥೆಯನ್ನು ಮಾಡಿದ್ದರು. ಕನಿಷ್ಠ ಪಕ್ಷ ೧೫ ಸಾವಿರ ಜನರಾದರೂ ಸಭೆಗೆ ಬಂದಿದ್ದರು. ಇಂಥ ದೊಡ್ಡ ಸಭೆ ಬೆಳಗಾಂವಿಯಲ್ಲಿ ಈ ಮೊದಲು ಎಂದೂ ನಡೆದಿರಲಿಲ್ಲ. ಸಭೆಯ ವ್ಯವಸ್ಥೆ ಚೆನ್ನಾಗಿತ್ತು. ಶೌಕತ್ ಆಲಿಗೂ ಗಾಂಧೀಜಿಗೂ

ಬೆಳ್ಳಿಯ ಕರಂಡಕಗಳಲ್ಲಿ ಮಾನಪತ್ರ ಅರ್ಪಿಸಿದರು. ಮಹಾತ್ಮರಿಗೆ ಕೊಟ್ಟ ಕರಂಡಕಕ್ಕಿಂತ ಶೌಕಲ್ ಆಲಿಗೆ ಕೊಟ್ಟ ಕರಂಡಕ ಸ್ವಲ್ಪ ಚಿಕ್ಕದು. ಈ ತಪ್ಪು ಗಾಂಧೀಜಿಯ ಗಮನಕ್ಕೆ ಬಂತು. ಭಾಷಣ ಮಾಡುವಾಗ ಈ ಸಂಗತಿಯನ್ನು ಉಲ್ಲೇಖಿಮಾಡಿ, ಆಕ್ಷೇಪಿಸಿದರು ಅವರು. ಇಂಥ ಅನೇಕ ಪ್ರಸಂಗಗಳಲ್ಲಿ ಗಾಂಧೀಜಿಯ ಸ್ವಭಾವದ ಪರೀಕ್ಷೆ ಆಗುತ್ತಿತ್ತು. ಸಭೆಯ ಕಾರ್ಯಕಲಾಪ ಶಾಂತವಾಗಿ ನಡೆಯಿತು. ಸಭೆಯಲ್ಲಿ ಗಾಂಧೀಟೋಪಿಗಳನ್ನು ಹಂಚಿ ಚಂದಾ ಕೂಡಿಸಲಾಯಿತು. ಸುಮಾರು ಒಂದು ಸಾವಿರ ರೂಪಾಯಿ ವಸೂಲು ಆಯಿತು.

**ಮಹಿಳೆಯರ ಸಭೆ**

ಸಭೆ ಮಾರುತಿ ಗುಡಿಯಲ್ಲಿ ನಡೆಯಿತು. ಗಾಂಧೀಜಿ ಹೇಳಿದರು: "ಈ ಗುಡಿಯಲ್ಲಿ ನಿಮ್ಮೆಲ್ಲರ ದರ್ಶನದಿಂದ ನಾನು ಪುನೀತನಾದೆ. ಎಲ್ಲಕ್ಕಿಂತ ನನಗೆ ಹೆಚ್ಚು ಸಂತೋಷ ನನ್ನ ಗೆಳೆಯ ಶೌಕತ್ ಆಲಿಯನ್ನು ನೀವು ನೋಡಬಯಸಿದ್ದು. ನಾವೆಲ್ಲರೂ ದಣಿದು ಸ್ವಲ್ಪ ವಿಶ್ರಾಂತಿ ಪಡೆಯುತ್ತಿದ್ದೆವು. ಆದರೆ ನೀವು ಶೌಕತ್ ಆಲಿಯನ್ನು ನೋಡ ಬಯಸಿದ್ದರಿಂದ ಕೂಡಲೆ ಆತನಿಗೆ ಹೇಳಿಕಳುಹಿಸಿ ಕರೆದುಕೊಂಡು ಬಂದೆ. ಈ ನಿಮ್ಮ ಸಾದ್ಭಾವನೆಯಲ್ಲಿ ಭಾರತದ ಗೆಲವು ಅಡಗಿದೆ. ನಮ್ಮ ಹಿಂದೂ ಹೆಂಗಸರು ಮುಸ್ಲಿಂರನ್ನು ಎಲ್ಲಿಯವರೆಗೆ ಅಣ್ಣ-ತಮ್ಮಂದಿರೆಂದು ತಿಳಿಯುವದಿಲ್ಲವೊ ಅಲ್ಲಿಯವರೆಗೆ ನಮ್ಮ ದುರದೃಷ್ಟ ನೀಗದು. ಈ ದೇವಸ್ಥಾನದಲ್ಲಿ ಕುಳಿತು, ನಿಮ್ಮ ಮನಸ್ಸನ್ನು ನೋಯಿಸಲು ನನಗೆ ಇಷ್ಟವಿಲ್ಲ. ನಾನು ಒಬ್ಬ ಸನಾತನಿ ಹಿಂದೂ. ಬೇರೆ ಯಾವ ಧರ್ಮವನ್ನೂ ತಿರಸ್ಕರಿಸಬಾರದೆಂದು, ಅಗೌರವದಿಂದ ಕಾಣಬಾರದೆಂದು ನನ್ನ ಹಿಂದೂಧರ್ಮ ನನಗೆ ಹೇಳಿಕೊಟ್ಟಿದೆ. ಎಲ್ಲಿಯವರೆಗೆ ಇತರ ಮತದವರನ್ನು ಪ್ರೀತಿಸುವದಿಲ್ಲವೋ, ನಮ್ಮ ನೆರೆಹೊರೆಯವರನ್ನು ಪ್ರೀತಿಸುವದಿಲ್ಲವೋ, ಅಲ್ಲಿಯವರೆಗೆ ನಮ್ಮ ದೇಶದ ಕ್ಷೇಮ ಸಾಧ್ಯವಾಗದು ಎಂದು ನನಗೆ ಗೊತ್ತಾಗಿದೆ. ನಿಮ್ಮ ರೂಢಿಗಳನ್ನು ಬದಲಾಯಿಸಿ, ಮುಸಲ್ಮಾನರ ಜೊತೆಯಲ್ಲಿ ಊಟ ಮಾಡಿ, ಅವರನ್ನು ಮದುವೆ ಮಾಡಿಕೊಳ್ಳಿ ಎಂದು ಹೇಳಲು ನಾನು ಇಲ್ಲಿಗೆ ಬಂದಿಲ್ಲ. ಆದರೆ ಪ್ರತಿಯೊಬ್ಬ ಮನುಷ್ಯನನ್ನೂ ಪ್ರೀತಿಸಬೇಕು ಎಂದು ಹೇಳಲು ಬಂದಿದ್ದೇನೆ. ಇತರ ಮತಗಳ ಜನರನ್ನು ಪ್ರೀತಿಸಬೇಕೆಂದು ನಿಮ್ಮ ಮಕ್ಕಳಿಗೆ ಹೇಳಿಕೊಡಲು ಬೇಡುತ್ತೇವೆ.

ದೇಶದ ಆಗುಹೋಗುಗಳನ್ನು, ರಾಷ್ಟ್ರೀಯ ವಿದ್ಯಮಾನಗಳನ್ನು ಅರಿತುಕೊಳ್ಳಬೇಕೆಂದು ನಿಮ್ಮನ್ನು ಪ್ರಾರ್ಥಿಸುತ್ತೇನೆ. ಇದಕ್ಕಾಗಿ ನೀವು ಉನ್ನತ ವಿದ್ಯಾಭ್ಯಾಸಂಗ ಮಾಡಬೇಕಾದ್ದಿಲ್ಲ, ದೊಡ್ಡ ಗ್ರಂಥಗಳನ್ನು ಓದಬೇಕಾದ್ದಿಲ್ಲ. ನಮ್ಮ ಸರಕಾರ ರಾಕ್ಷಸಿ ಸರಕಾರ ಎಂದು ಹೇಳುತ್ತೇನೆ. ಸರಕಾರ ನಮ್ಮ ಮುಸ್ಲಿಂ ಸೋದರರ ಭಾವನೆಯನ್ನು ತುಂಬಾ ಗಾಸಿಗೊಳಿಸಿದೆ. ಪಂಜಾಬಿನಲ್ಲಿ ಸ್ತ್ರೀ-ಪುರುಷರ ಮೇಲೆ, ಮಕ್ಕಳ ಮೇಲೆ ಮಾಡಿದ ಭಯಂಕರ ಅತ್ಯಾಚಾರಗಳನ್ನು ಹೇಳಲು ಸಾಧ್ಯ ಇಲ್ಲ. ಈ ಸರಕಾರ ತನ್ನ ತಪ್ಪನ್ನು ಒಪ್ಪಿಕೊಳ್ಳದು, ಪರಿತಾಪ ಪಡದು. ನಮ್ಮನ್ನೇ ತಿರುಗಿ ಕೇಳುತ್ತದೆ-ಈ ಕ್ರೌರ್ಯವನ್ನೆಲ್ಲ ಮರೆತುಬಿಡಿ ಎಂದು. ಆದ್ದರಿಂದಲೇ ಇದನ್ನು ರಾಕ್ಷಸೀ ಸರಕಾರ ಎನ್ನುತ್ತೇನೆ. ಈಗ ನಮ್ಮ ಜನರು ಎಲ್ಲರೂ ಅಸಹಕಾರ ಮಾಡಬೇಕು. ರಾವಣನೊಂದಿಗೆ ಸೀತೆ ಅಸಹಕರಿಸಲಿಲ್ಲವೆ? ರಾಮಚಂದ್ರ ಅಸಹಕರಿಸಲಿಲ್ಲವೆ? ರಾವಣ

ಎಷ್ಟು ಪ್ರಲೋಭನಗೊಳಿಸಿದ ಸೀತೆಯನ್ನು. ಮುತ್ತು ರತ್ನಗಳನ್ನು ಕಳಿಸಿದ. ಸೀತೆ ಅದು ಯಾವುದನ್ನೂ ಕಣ್ಣೆತ್ತಿ ಕೂಡ ನೋಡದೆ, ರಾವಣನ ಹಿಡಿತದಿಂದ ತಪ್ಪಿಸಿಕೊಳ್ಳಲು ಕಟ್ಟುನಿಟ್ಟಾದ ತಪಶ್ಚರ್ಯೆ ಮಾಡಿದಳು. ಮುಕ್ತಳಾಗುವವರೆಗೆ ಒಳ್ಳೆಯ ಬಟ್ಟೆ ಉಡಲಿಲ್ಲ, ಒಡವೆ ತೊಡಲಿಲ್ಲ. ರಾಮಲಕ್ಷ್ಮಣರಿಬ್ಬರೂ ಎಷ್ಟು ತಪಸ್ಸು ಮಾಡಿದರು. ಅವರ ಇಂದ್ರಿಯ ಸಂಯಮ ಎಷ್ಟು? ಬರೀ ಹಣ್ಣು-ಹಂಪಲು ತಿನ್ನುತ ಬ್ರಹ್ಮಚರ್ಯವ್ರತನಿಷ್ಠರಾಗಿ ಕಾಲ ಕಳೆದರಲ್ಲ. ಈ ದಬ್ಬಾಳಿಕೆಯ ಸರಕಾರ ನಮ್ಮ ಬೆನ್ನಿನ ಮೇಲೆ ಸವಾರಿ ಮಾಡುತ್ತಿರುವವರೆಗೆ ಗಂಡಸಿಗಾಗಲಿ, ಹೆಂಗಸಿಗಾಗಲಿ ಒಳ್ಳೆಯ ಬಟ್ಟೆ ಬರೆ ಉಡಲು ಒಳ್ಳೆಯ ಒಡವೆ ತೊಡಲು ಅಧಿಕಾರವೇ ಇಲ್ಲ. ಭಾರತ ಸ್ವತಂತ್ರ ಆಗುವವರೆಗೆ, ಮುಸಲ್ಮಾನರ ಗಾಯಗಳು ಮಾಯುವವರೆಗೆ ನಾವೆಲ್ಲರೂ ಫಕೀರರ ಹಾಗೆ ಇರಬೇಕು. ಕಷ್ಟ ಸಹನೆಯ ಬೆಂಕಿಯಲ್ಲಿ ನಮ್ಮ ಶ್ರೀಮಂತಿಕೆ ನಮ್ಮ ವಿಲಾಸ ಭೋಗಗಳನ್ನು ಸುಡಬೇಕು. ನಿಮ್ಮ ಸುಖಭೋಗಗಳನ್ನು ಬಿಟ್ಟು ಕಠಿಣ ತಪಶ್ಚರ್ಯೆಯನ್ನು ಅವಲಂಬಿಸಿ, ನಿಮ್ಮ ಚಿತ್ತವನ್ನು ಶುದ್ಧವಾಗಿಟ್ಟುಕೊಳ್ಳಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ.

೫೦ ವರ್ಷಗಳ ಹಿಂದೆ ನಮ್ಮ ಹೆಂಗಸರು ಎಲ್ಲರೂ ರಾಟೆ ತಿರುಗಿಸುತ್ತಿದ್ದರು, ಕೈನೂಲಿನ ಬಟ್ಟೆ ಉಡುತ್ತಿದ್ದರು. ಹೆಂಗಸರಿಗೆ-ನಿಮಗೆ ಹೇಳುತ್ತೇನೆ, ಎಂದು ನಾವು ಸ್ವದೇಶಿ ಧರ್ಮವನ್ನು ಕೈಬಿಟ್ಟೆವೊ ಅಂದೇ ನಮ್ಮ ಪತನ ಪ್ರಾರಂಭವಾಯಿತು. ನಾವು ಗುಲಾಮರಾದೆವು. ದೇಶದಲ್ಲಿ ಎಲ್ಲ ಕಡೆಯಲ್ಲಿಯೂ ಜನರು ಹಸಿವಿನಿಂದ ಸಾಯುತ್ತಿದ್ದಾರೆ. ಉಡಲು ಬಟ್ಟೆ ಇಲ್ಲದೆ ಬೆತ್ತಲೆ ಹೋಗುತ್ತಿದ್ದಾರೆ. ಪರಿಸ್ಥಿತಿ ಹೀಗಿದೆ. ನೀವು ಪ್ರತಿಯೊಬ್ಬರೂ ದಿನವೂ ಒಂದು ಗಂಟೆ ಹೊತ್ತು ನೂತು ಆ ನೂಲನ್ನು ದೇಶಕ್ಕೆ ದಾನ ಕೊಡಬೇಕು ಎಂದು ಬೇಡುತ್ತೇನೆ. ಕೆಲವು ಕಾಲ ನಿಮಗೆ ಸೊಗಸಾದ ಬಟ್ಟೆ ಸಿಗಲಿಕ್ಕಿಲ್ಲ. ಆದರೆ ಸೊಗಸಾದ ನೂಲನ್ನು ನೂಲಲು ಕಲಿತರೆ ಆಗ ಅದು ಸಿಕ್ಕೇ ಸಿಗುತ್ತದೆ. ಆದರೆ ದೇಶ ಗುಲಾಮಗಿರಿಯಲ್ಲಿರುವ ತನಕ, ಒಳ್ಳೇ ಬಟ್ಟೆಯನ್ನು ಉಡುವ ಯೋಚನೆಯನ್ನೇ ಮಾಡಬಾರದು. ಒಳ್ಳೆಯ ನೂಲನ್ನು ನೂಲಲು ಸಮಯ ಬಹಳ ಬೇಕು. ಈಗಲೋ ನಮಗೆ ಘಳಿಗೆ ಘಳಿಗೆಯೂ ಅತ್ಯಮೂಲ್ಯ.

ನಿಮ್ಮಲ್ಲಿ ಸ್ವಾರ್ಥತ್ಯಾಗವನ್ನು ನಾನು ಪ್ರಚೋದಿಸಬಲ್ಲೆನಾದರೆ ದೇಶಕ್ಕಾಗಿ ನಿಮ್ಮ ಕೈಮೇಲಿರುವ ಎಲ್ಲ ಒಡವೆಗಳನ್ನು ಸುಲಿದುಕೊಳ್ಳಲು ನಾನು ಹಿಂಜರಿಯೆ. ಅದರಿಂದ ಬಂದ ಹಣವನ್ನು ದೇಶಪಾಂಡೆ ಗಂಗಾಧರರಾಯರು ರಾಷ್ಟ್ರೀಯ ವಿದ್ಯಾಭ್ಯಾಸಕ್ಕೆ, ಸ್ವದೇಶಿ ಪ್ರಚಾರಕ್ಕೆ ಉಪಯೋಗಿಸುತ್ತಾರೆ. ಈ ದೇವಾಲಯಕ್ಕೆ ಹಣ ಹೇಗೆ ನೀಡುತ್ತೀರೋ ಅದೇ ಭಾವನೆಯಿಂದ ದೇಶಕ್ಕಾಗಿ ನೀಡಿ. ಕಟುಕನ ಕೈಗೆ ಸಿಕ್ಕ ಬಡಹಸುವಿನಂತೆ ಆಗಿದೆ ಭಾರತ. ಅದನ್ನು ಬಿಡಿಸುವುದು ನನ್ನ ಕರ್ತವ್ಯ, ನಿಮ್ಮ ಕರ್ತವ್ಯ.

ಕಟ್ಟ ಕಡೆಯಲ್ಲಿ ನಿಮ್ಮನ್ನು ಒಂದು ಮಾತು ಕೇಳುತ್ತೇನೆ. ಶೌಕತ್ ಅಲಿ, ಗಂಗಾಧರ ರಾಯರು, ನಾನು ಯಾವ ಕೆಲಸ ಮಾಡುತ್ತಿದ್ದೇವೋ ಅದನ್ನು ಹರಸಿ. ಯಾರೂ ಯಾವ ತಂಗಿಯೂ ಏನೋ ದಾಕ್ಷಿಣ್ಯಕ್ಕೊಳಗಾಗಿ ತನ್ನ ಆಭರಣವನ್ನು ಕಳಚಿಕೊಡದೇ ಇರಲಿ. ನಿಮ್ಮ ಮನಸ್ಸಿನಲ್ಲಿ ಇದು ಪವಿತ್ರ ಕಾರ್ಯ, ಇದು ಕರ್ತವ್ಯ ಎನಿಸಿದರೆ ಮಾತ್ರ ನೀಡಿ.

ದೇವರು ನಿಮಗೆ ಧೈರ್ಯವನ್ನೂ ಪರಿಶುದ್ಧತೆಯನ್ನೂ ಕೊಟ್ಟು, ದೇಶಕ್ಕಾಗಿ ತ್ಯಾಗ ಮಾಡುವ ಮನೋಭಾವನೆಯನ್ನು ಕೊಡಲಿ.

ಅಂದಿನ ಮಹಿಳೆಯರ ಸಭೆಯಲ್ಲಿ ಎರಡು ಸಾವಿರ ರೂಪಾಯಿಗೆ ಕಡಿಮೆಯಿಲ್ಲದೆ ಆಭರಣಗಳು ಬಂದವು. ಜೊತೆಗೆ ಸ್ವಲ್ಪ ನಗದು ಹಣವೂ ಬಂತು.

**ಬೆಳಗಾಂವಿಯಲ್ಲಿ ಬಹಿರಂಗ ಸಭೆ (೮–೧೧–೧೯೨೦)**

ಈ ಬಹಿರಂಗ ಸಭೆಯಲ್ಲಿ ಗಾಂಧೀಜಿ ಹೇಳಿದರು: "ಮಾರುತಿ ಗುಡಿಯಲ್ಲಿ ನಾನು ಕಂಡ ದೃಶ್ಯದಿಂದ ನನ್ನ ಮೇಲಾದ ಪ್ರಭಾವವನ್ನು ಶಬ್ದಗಳಿಂದ ವರ್ಣಿಸಲಾರೆ. ಪೂನಾದಲ್ಲಿಯೂ ನನಗೆ ಇಂಥದೇ ಅನುಭವ ಆಗಿತ್ತು. ಜನ ತಮ್ಮ ಪ್ರೀತಿಯನ್ನು, ತಮ್ಮ ಒಡವೆಗಳನ್ನು ನನ್ನ ಮೇಲೆ ಮಳೆಗರೆದರು. ಅವರಿಗೆ ಗೊತ್ತು – ರಾಮರಾಜ್ಯ ಪಡೆಯಲು ಸ್ವರಾಜ್ಯ ಸಂಪಾದಿಸಲು ನಾನು ಒಡವೆಗಳನ್ನು ಕೇಳಿದ್ದೇನೆ. ನಮ್ಮ ಕೋಟೀಶ್ವರರು ಇದಕ್ಕೆ ಸಮನಾಗಿ ಏನೂ ಕೊಟ್ಟಿಲ್ಲ. ಅವರ ಕಾಲಿಗೆ ಬಿದ್ದು ದಾನ ಕೇಳಿದಾಗ ಸ್ವಲ್ಪ ಅವರ ಮನಸ್ಸು ಕರಗಬಹುದು – ಅಷ್ಟೇ. ಹೆಂಗಸರಿಗೆ ನಾನು ಏನೂ ಬಿನ್ನಹ ಮಾಡಬೇಕಾಗಲಿಲ್ಲ. ಸ್ವಯಂ ಪ್ರೇರಣೆಯಿಂದ ಪ್ರೀತಿಯಿಂದ ನಾನು ಕೇಳಿದ್ದನ್ನೆಲ್ಲ ಕೊಟ್ಟರು. ಈ ಪ್ರೀತಿಯ ಕಾಣಿಕೆಗೆ ಕೋಟಿಗಟ್ಟಲೆ ದಾನ ಸಮ ಅಲ್ಲ."

ಶಹಾಪುರದಲ್ಲಿ ಜನ ಒಂದು ನಿಧಿಯನ್ನು ಅರ್ಪಿಸಿದರು. ತರುವಾಯ ಖಾನಾಪುರ, ನಂದಗಡ, ಅಳಣಾವರ, ಹಳ್ಯಾಳಗಳ ಪ್ರವಾಸ ಮುಗಿಸಿಕೊಂಡು ಧಾರವಾಡಕ್ಕೆ ಹೋದರು. ಧಾರವಾಡದಿಂದ ಹುಬ್ಬಳ್ಳಿ, ಅಲ್ಲಿಂದ ಮುಂದೆ ಗದಗು ಎರಡಕ್ಕೂ ಹೋದರು. ಇವೆರಡೂ ಊರು ಕರ್ನಾಟಕದ ಮುಖ್ಯ ವ್ಯಾಪಾರ ಕೇಂದ್ರಗಳು. ಇಲ್ಲಿ ಗುಜರಾತಿ ವ್ಯಾಪಾರಿಗಳು ಹೆಚ್ಚು. ಎರಡೂ ಕಡೆ ಸ್ವಾಗತ ಚೆನ್ನಾಗಿ ನಡೆಯಿತು ೧೨ ಸಾವಿರ ರೂಪಾಯಿ ಕೂಡಿತು. ಗದುಗಿನಿಂದ ಮುಂದೆ ಬಾಗಲಕೋಟೆಗೆ. ವಿಜಾಪುರಕ್ಕೆ ಹೋಗಬೇಕು. ಆದರೆ ದೇವಲ್ ಸರ್ಕಸ್ಸಿನ ಮಾಜಿ ವ್ಯವಸ್ಥಾಪಕ ರಾಮಭಾವು ಪಟವರ್ಧನ ಗದುಗಿನಲ್ಲಿ ಭೇಟಿಯಾಗಿ, ಸಾಂಗ್ಲಿಯಲ್ಲಿ ಲೋಕಮಾನ್ಯರ ಸ್ಮಾರಕ ಮಂದಿರದ ಶಂಕುಸ್ಥಾಪನೆ ಗಾಂಧೀಜಿ ಮಾಡಬೇಕೆಂದು ಅಲ್ಲಿನ ಜನ ನಿರ್ಧರಿಸಿದ್ದಾರೆ. ಹಾಗೂ ಈ ಮಂದಿರದ ಕೆಲಸಕ್ಕಾಗಿ ಒಂದು ಲಕ್ಷ ರೂಪಾಯಿ ಕೂಡಿ ಹಾಕಿದ್ದಾರೆ ಎಂದು ಗಾಂಧೀಜಿಗೆ ತಿಳಿಸಿದರು. ವಿಜಾಪುರದ ಕಡೆಗೆ ಹೋಗುವುದನ್ನು ಕೈಬಿಟ್ಟು, ಅಲ್ಲಿಂದ ಹೀಗೆ ಸಾಂಗ್ಲಿಗೆ ಬರಬೇಕೆಂದು ಬಹಳ ಒತ್ತಾಯ ಮಾಡಿದರು. ಹೇಳಿಕೇಳಿ ಲೋಕಮಾನ್ಯ ತಿಲಕರ ಸ್ಮಾರಕ. ಅದಕ್ಕಾಗಿ ಇಷ್ಟು ದೊಡ್ಡ ನಿಧಿಯ ಸಂಗ್ರಹ! ಗಾಂಧೀಜಿಗೆ ಈ ಅವಕಾಶವನ್ನು ಕಳೆದುಕೊಳ್ಳಲು ಮನಸ್ಸು ಬರಲಿಲ್ಲ. ತಮ್ಮ ಕಾರ್ಯಕ್ರಮವನ್ನು ಸ್ವಲ್ಪ ಬದಲಾಯಿಸಿ ಗದುಗಿನಿಂದ ಸಾಂಗ್ಲಿಗೆ ಹೊರಟರು ಗಾಂಧೀಜಿ. ಉತ್ತರ ಕರ್ನಾಟಕದ ಪ್ರವಾಸ ಅಗ್ಗೆ ಅಲ್ಲಿಗೆ ನಿಂತು ಹೋಯಿತು.

**ಮಿರಜ್‌ನಲ್ಲಿ**

ಮಧ್ಯಾಹ್ನ ೧೨ ಗಂಟೆಗೆ ಮಿರಜ್‌ಗೆ ಹೋದರು. ಮಿರಜ್ ಸ್ಟೇಶನ್ನಿನಲ್ಲಿ ಇಳಿದು ಅಲ್ಲಿಂದ ನೆಟ್ಟಗೆ ಸಾಂಗ್ಲಿಗೆ ಹೋಗಬೇಕು. ಅಲ್ಲಿನ ಕಾರ್ಯಕ್ರಮ ಮುಗಿಸಿಕೊಂಡು ಮತ್ತೆ

ಮಿರಜಿಗೆ ಬಂದು ರಾತ್ರಿ ಅಲ್ಲಿ ಭಾಷಣ ಮಾಡಬೇಕು. ಅಲ್ಲಿಂದ ಮುಂಬಯಿಗೆ ಇದು ರಾಮಭಾವು ಗೊತ್ತು ಮಾಡಿದ ಕಾರ್ಯಕ್ರಮ. ಗಾಂಧೀಜಿಗೂ ಇದು ಗೊತ್ತಿತ್ತು. ಮಿರಜಿಗೆ ಬಂದಾಗ ಸ್ಟೇಶನ್ನಿನಲ್ಲಿಯೂ ಹೊರಗಡೆಯೂ ಜನರು ಸಾವಿರಗಟ್ಟಲೆ ನೆರೆದಿದ್ದರು. ಗಾಡಿಯಿಂದ ಇಳಿದು ಹೊರಗೆ ಹೋಗುವುದೇ ಗಾಂಧೀಜಿಗೆ ಕಷ್ಟವಾಯಿತು. ವ್ಯವಸ್ಥೆಯಾಗಲಿ, ಶಿಸ್ತು ಆಗಲಿ ಎಳ್ಳಷ್ಟೂ ಇರಲಿಲ್ಲ. ಗದ್ದಲವಂತೂ ಸಾಕಷ್ಟು ಇತ್ತು. ಅಲ್ಲಿ ನೆರೆದಿದ್ದ ಜನ ಮೊದಲು ಮಿರಜಿಗೆ ಬರಲಿ ಗಾಂಧೀಜೀ ಆಮೇಲೆ ಸಾಂಗ್ಲಿಗೆ ಹೋಗಲಿ ಎಂದು ಹಟ ಮಾಡಿದರು. ಕಾರ್ಯಕ್ರಮವನ್ನು ಬದಲಾಯಿಸಲು ನಿರಾಕರಿಸಿ ಗಾಂಧೀಜಿ ಕಾರಿನಲ್ಲಿ ಹೋಗಿ ಕುಳಿತರು.

ಜನರ ಹಟ ಕಡಿಮೆ ಆಗಲಿಲ್ಲ. ಅವರಿಗೆ ತಿಳಿಸಿ ಹೇಳುವ ಪ್ರಯತ್ನವನ್ನು ಕೆಲವರು ಗೆಳೆಯರು ಮಾಡಿದರು. ಅದರಿಂದ ಏನೂ ಪ್ರಯೋಜನ ಆಗಲಿಲ್ಲ.

ಕಾರನ್ನು ಮುಂದೆ ಹೋಗಗೊಡದೆ ಜನರು ಅಡ್ಡಿ ಮಾಡಿದರು. ಗಾಂಧೀಜಿ ಕಾರಿನಿಂದ ಕೆಳಗಿಳಿದು 'ನನಗೆ ಸಾಂಗ್ಲಿಯ ದಾರಿ ತೋರಿಸಿ' ಎಂದು ಇದಿರಿಗಿದ್ದ ರಸ್ತೆಯಲ್ಲಿ ಮುಂದೆ ನಡೆದುಬಿಟ್ಟರು. ಅಲ್ಲಿಯ ಗುಂಪಿನ ಮುಖಂಡರಿಗೆ 'ರಾತ್ರಿ ತಿರುಗಿ ಬರುತ್ತೇನೆ' ಎಂದು ಮಾತುಕೊಟ್ಟು 'ನನಗೆ ಸಾಂಗ್ಲಿಗೆ ಹೋಗಲು ಬಿಡಿ' ಎಂದು ನಾನಾ ಬಗೆಯಲ್ಲಿ ಹೇಳಿದರು. ಆದರೆ ಆ ಜನ ಕೇಳಲಿಲ್ಲ. 'ನಾನು ಯಾರ ಒತ್ತಾಯಕ್ಕೂ ಮಣಿಯುವುದಿಲ್ಲ. ಆದದ್ದು ಆಗಲಿ' ಎನ್ನುತ್ತ ಗಾಂಧೀಜಿ ರಸ್ತೆಯನ್ನು ಬಿಟ್ಟು. ಒಂದು ಹೊಲದಲ್ಲಿ ನುಗ್ಗಿ ಮುಂದೆ ಸಾಗಿದರು. ಜನರಿಗೆ ಆಗ ಉಪಾಯ ಏನೂ ತೋರಲಿಲ್ಲ. ನಿರುಪಾಯರಾಗಿ ಹಿಂದಕ್ಕೆ ಹೋದರು.

ಸಾಂಗ್ಲಿಯಲ್ಲಿ ಸಭೆ ಆಯಿತು. ಅಲ್ಲಿಗೆ ಹೋದ ಮೇಲೆ ವಿಜಾಪುರದ ಕಾರ್ಯಕ್ರಮನ್ನು ಬದಲಾಯಿಸಿದುದು ತಪ್ಪು ಎನಿಸಿತು. ಆದರೆ ಮಿಂಚಿ ಹೋದ ಮೇಲೆ ಚಿಂತಿಸಿ ಏನು ಪ್ರಯೋಜನ? ಮಿರಜಿಗೆ ಬಂದಾಗ ಅಲ್ಲಿನ ದರಗಾದ ಮುಂದೆ ಗಾಂಧೀಜಿಯ ಭಾಷಣ ವಾಯಿತು. ಸಭೆಯಲ್ಲಿ ಬಹಳ ಜನ ಇದ್ದರೂ ಅತ್ಯಂತ ಶಿಸ್ತು ಇತ್ತು. ಗಾಂಧೀಜಿಗೆ ಅದರಿಂದ ಬಹಳ ಆನಂದ ಆಯಿತು. ನಿಪ್ಪಾಣಿ, ಬೆಳಗಾಂವಿ, ಧಾರವಾಡ, ಹುಬ್ಬಳ್ಳಿ, ಗದಗುಗಳ ಈ ಪ್ರವಾಸದಲ್ಲಿ ಎರಡು ಮೂರು ರಾಷ್ಟ್ರೀಯ ಶಾಲೆ ಪ್ರಾರಂಭ ಆದವು. ಖಾದಿ ಅಂಗಡಿಗಳನ್ನು ತೆರೆಯಲಾಯಿತು.

ಅಂತೂ ೧೯೨೦ರಲ್ಲಿ ಗಾಂಧೀಜಿಯ ಕರ್ನಾಟಕ ಪ್ರವಾಸ ಅರ್ಧಕ್ಕೆ ನಿಂತುಹೋಯಿತು. ಗದುಗಿನಿಂದ ಸಾಂಗ್ಲಿಗೆ ಹೋದರಲ್ಲ ಅವರು. ಇದರಿಂದ ವಿಜಾಪುರ ಜಿಲ್ಲೆಯ ಪ್ರವಾಸ ನಿಂತುಹೋಗಿತ್ತು. ನಿಂತು ಹೋಗಿದ್ದ ಈ ಪ್ರವಾಸವನ್ನು ೧೯೨೧ರಲ್ಲಿ ಮತ್ತೆ ಮುಂದುವರಿಸಿದರು ಗಾಂಧೀಜಿ. ಮೊಟ್ಟ ಮೊದಲು ಬಾಗಲಕೋಟೆಗೆ ಬಂದರು. ಅಲ್ಲಿಂದ ಮುಂದೆ ವಿಜಾಪುರಕ್ಕೆ ಹೋದರು. ಎರಡೂ ಕಡೆ ಸಭೆ ನಡೆದವು. ಬಾಗಲಕೋಟೆಯಲ್ಲಿ ಭಾಷಣ ಕೇಳಲಿಕ್ಕೆ ಹತ್ತುಸಾವಿರ ಜನ ನೆರೆದಿದ್ದರು. ಗಾಂಧೀಜಿ ಸಂಗ್ರಹಿಸುತ್ತಿದ್ದ ತಿಲಕ ಸ್ವರಾಜ್ಯ ನಿಧಿಗೆ ಒಂದು ಸಾವಿರ ರೂಪಾಯಿ ಸೇರಿತು. ವಿಜಾಪುರದಲ್ಲಿ ೧೨ ಸಾವಿರ ಜನರ ಸಭೆ. ಬಾಗಲಕೋಟೆಯ

ಸೇಠ ರಾಮದಾಸರು ತಮ್ಮ ರಾವ್‌ಸಾಹೇಬ ಬಿರುದನ್ನು ಹಿಂತಿರುಗಿಸಿದ್ದಾರೆ ಎಂಬುದನ್ನು ಸಭೆಯಲ್ಲಿ ಘೋಷಿಸಲಾಯಿತು. ವಿಜಾಪುರದಿಂದ ಮುಂದೆ ಗಾಂಧೀಜಿ ಸೊಲ್ಲಾಪುರಕ್ಕೆ ಹೋದರು. ಅಲ್ಲಿ ಶ್ರೀಯುತ ವಾರದರ ಅಂಗಳದಲ್ಲಿ ೨೦ ಸಾವಿರ ಜನ ಸೇರಿದ್ದರು, ಅಲ್ಲಿ ೧೦ ಸಾವಿರ ರೂಪಾಯಿ ತಿಲಕ ನಿಧಿಗೆ ಬಂತು. ವಿಜಾಪುರ ಸೊಲ್ಲಾಪುರ ಎರಡೂ ಕಡೆ ಪುರಸಭೆಗಳು ಗಾಂಧೀಜಿಗೆ ಮಾನಪತ್ರ ಅರ್ಪಿಸಿದವು. ವಿಜಾಪುರದಲ್ಲಿ ವರ್ತಕರು ಪ್ರತ್ಯೇಕವಾಗಿ ಗಾಂಧೀಜಿಗೆ ಸನ್ಮಾನ ಮಾಡಿದರು.

ಬಾಗಲಕೋಟೆಯಿಂದ ವಿಜಾಪುರಕ್ಕೆ ಮೋಟಾರಿನಲ್ಲಿ ಪ್ರವಾಸ ಮಾಡಿದರು. ಗಾಂಧೀಜಿ. ದಾರಿಯಲ್ಲಿ ಸಾವಿರಾರು ಜನ ಗುಂಪುಗುಂಪಾಗಿ ನಿಂತು ಗಾಂಧೀ ದರ್ಶನಾರ್ಥಿಗಳಾಗಿ ಕಾದಿದ್ದರು. ಕೈಯಲ್ಲಿ ಹೂಮಾಲೆ, ಗಂಧ-ಪುಷ್ಪ, ಆರತಿ. ಗಂಟೆಗಟ್ಟಲೆ ಗಾಂಧೀಜಿಯ ದರ್ಶನಕ್ಕಾಗಿ ಕಾದು ನಿಂತಿದ್ದರು. ಎಲ್ಲಾ ಕಡೆಯಲ್ಲೂ ಗಾಂಧೀಜಿಯದು ಒಂದೇ ಸಂದೇಶ. ವರ್ಷದ ಕೊನೆ ಒಳಗಾಗಿ ಒಂದು ಕೋಟಿ ನಿಧಿ ಕೊಡಬೇಕು. ಒಂದು ಕೋಟಿ ಜನ ಕಾಂಗ್ರೆಸ್ ಸದಸ್ಯರಾಗಬೇಕು. ಇಪ್ಪತ್ತು ಲಕ್ಷ ರಾಟೆ ದೇಶದಲ್ಲಿ ತಿರುಗಬೇಕು. ಇಂತ ಮಹತ್ ಕಾರ್ಯಕ್ರಮವನ್ನು ಹಿಂದೆ ಯಾವ ನಾಯಕನಿಂದಲೂ ದೇಶ ಕೇಳಿರಲಿಲ್ಲ.

ಬಾಗಲಕೋಟೆಯಿಂದ ವಿಜಾಪುರಕ್ಕೆ ಪ್ರಯಾಣ ಎಂದರೆ ಉರಿ ಬಿಸಿಲೆಲ್ಲ ನಮ್ಮ ಪಾಲಿಗೇ! ಮೈಸುಡುತ್ತದೆ. ಇಂಥ ಉರಿಬಿಸಿಲಿನಲ್ಲಿಯೂ ಕೂಡ ದಾರಿ ಉದ್ದಕ್ಕೂ ಹೆಂಗಸರು ಖಡಿ ಒಡೆಯುತ್ತಿದ್ದರು. ಎಂದರೆ ಕಲ್ಲನ್ನು ಒಡೆದು ಚೂರು ಚೂರು ಮಾಡಿ ಜಲ್ಲಿ ಕುಟ್ಟುವುದು. ಇದನ್ನು ನೋಡಿ ಗಾಂಧೀಜಿಗೆ ತುಂಬಾ ವ್ಯಥೆ ಆಯಿತು. ಇಂಥ ಕೆಲಸಮಾಡುವ ದುರವಸ್ಥೆ ಹೆಂಗಸರಿಗೆ ಬರಬಾರದು. ಖಾದಿ ಪ್ರಚಾರಮಾಡಿ ಇದನ್ನು ತಡೆಗಟ್ಟಬೇಕು. ಖಾದಿ ಕೆಲಸವೇ ಇದೆಲ್ಲಕ್ಕೂ ಮದ್ದು ಎಂದರು.

**ವಿಜಾಪುರದಲ್ಲಿ (೨೮-೫-೧೯೨೧)**

ಮಹಾತ್ಮಾ ಗಾಂಧೀಯವರು ವಿಜಾಪುರಕ್ಕೆ ಬಂದಾಗ ಆಗಲೇ ಸಂಜೆಯಾಗಿತ್ತ, ಮೊದಲು ಒಂದು ಮಹಿಳೆಯರ ಸಭೆ ನಡೆಯಿತು. ಆಮೇಲೆ ತಾಸ್‌ಬಾವಡಿ ಮೈದಾನದಲ್ಲಿ ಸಾರ್ವಜನಿಕ ಸಭೆ ಸೇರಿತ್ತು. ಸುಮಾರು ೧೨೦೦೦ ಜನ ಸೇರಿದ್ದರು. ಪೌರಸಭೆಯ ಪರವಾಗಿಯೂ. ವರ್ತಕರ ಸಂಘದ ಪರವಾಗಿಯೂ ಬಿನ್ನವತ್ತಳೆಯನ್ನು ಅರ್ಪಿಸಿದರು. ಆ ಸಭೆಯಲ್ಲಿ ಶ್ರೀ ಶಾಬಾದಿ ಗುಂಡಪ್ಪನವರು ಮಾತನಾಡಬೇಕೆಂದು ಅಭಿಲಾಷೆ ಪಟ್ಟರು. ಮಹಾತ್ಮರು ಅಪ್ಪಣೆ ಕೊಟ್ಟನಂತರ ಶ್ರೀ ಗುಂಡಪ್ಪನವರು ಮಾತನಾಡಿ ಬ್ರಾಹ್ಮಣರನ್ನು ಬಹಳವಾಗಿ ಟೀಕಿಸಿದರು. ಅನಂತರ ಗಾಂಧೀಜಿಯವರು ಮಾತನಾಡುತ್ತ:

'ಶ್ರೀ ಗುಂಡಪ್ಪನವರಿಗೆ ಮಾತನಾಡಲು ಅನುಮತಿ ಕೊಟ್ಟಿದ್ದು ನನಗೆ ಬಹಳ ಸಂತೋಷ. ನಮ್ಮ ವಿರೋಧಿಗಳ ಅಭಿಪ್ರಾಯವನ್ನು ತಾಳ್ಮೆಯಿಂದ ಕೇಳಿಕೊಳ್ಳುವುದು ನಮ್ಮ ಕರ್ತವ್ಯ. ಬ್ರಾಹ್ಮಣೇತರರ ಮನಸ್ಸನ್ನು ನಾನು ಬಲ್ಲೆ. ಬ್ರಾಹ್ಮಣರಲ್ಲಿ ತಪ್ಪು ಇಲ್ಲ ಎನ್ನಲಾರೆ. ಬ್ರಾಹ್ಮಣರೂ ಕೂಡ ತಾವು ನಿಷ್ಕಳಂಕರೆಂದು ಹೇಳಿಕೊಳ್ಳುವುದಿಲ್ಲ. ತಮ್ಮ ಧರ್ಮದ ಭಾವನೆಗಳನ್ನು

ಅವರು ಬಿಟ್ಟಿದ್ದಾರೆ. ಜೀವನ ಶುದ್ಧಿ ಹೋಗಿದೆ, ಒಂದು ಕಾಲಕ್ಕೆ ಅವರ ಸ್ಥಾನ ಬಹಳ ಮೇಲೆ ಇತ್ತು. ಆ ಸ್ಥಾನದಿಂದ ಇವತ್ತು ಕೆಳಗೆ ಬಿದ್ದಿದ್ದಾರೆ. ಅವರ ಪತನವೇ ಭಾರತದ ಪತನದ ಪ್ರಾರಂಭ. ನಾನೂ ಬ್ರಾಹ್ಮಣೇತರ. ಬ್ರಾಹ್ಮಣೇತರ ಬಂಧುಗಳಿಗೆ ನನ್ನ ಬಿನ್ನಹ ಇಷ್ಟು; ಇವತ್ತು ಬ್ರಾಹ್ಮಣರು ಪತಿತರು ಆಗಿದ್ದಾರೆ ಎಂದು ತಮ್ಮ ಧರ್ಮವನ್ನು, ಜೀವನದ ಆದರ್ಶಗಳನ್ನು ಅವರು ಮರೆಯಬಾರದು. ಬ್ರಾಹ್ಮಣರ ಈ ದೋಷಗಳನ್ನು ಅರಿತುಕೊಂಡು. ತಮ್ಮ ಹಕ್ಕುಗಳಿಗಾಗಿ ಹೊಡೆದಾಡಲು ಬ್ರಾಹ್ಮಣೇತರರು ಕಲಿತದ್ದೇ ಬ್ರಾಹ್ಮಣರಿಂದ, ಇದನ್ನು ಕೇಳಿ ಆಶ್ಚರ್ಯವೆನಿಸಬಹುದು ನಿಮಗೆ. ಬ್ರಾಹ್ಮಣರು ಎಷ್ಟೇ ಪತಿತರಾದರೂ ಇನ್ನೂ ಎಲ್ಲ ಚಳವಳಿಗೂ, ರಾಜಕೀಯವಾಗಲಿ ಸಾಮಾಜಿಕವಾಗಲಿ, ಅವರೇ ನಾಯಕರು. ಹಿಂದುಳಿದ ವರ್ಗದ ಉದ್ಧಾರಕ್ಕಾಗಿ ಮಾಡಿದ ಪ್ರಯತ್ನಗಳಲ್ಲಿ ಎಲ್ಲರಿಗಿಂತ ಅವರ ಪ್ರಯತ್ನವೇ ಹೆಚ್ಚು. ಲೋಕಮಾನ್ಯ ತಿಲಕರ ದೇಶಸೇವೆ ಸಮಸ್ತ ಜನಕ್ಕೂ ಮೆಚ್ಚುಗೆ ಆಗಿದೆ. ಆಂಧ್ರದಲ್ಲಿ ಒಬ್ಬ ಬ್ರಾಹ್ಮಣ ಸದ್ಗೃಹಸ್ಥ ಅಸ್ಪೃಶ್ಯರ ಸೇವೆಗಾಗಿ ತನ್ನ ಜೀವನವನ್ನೇ ಮೀಸಲಿಟ್ಟಿದ್ದಾನೆ. ದಿವಂಗತ ಗೋಖಲೆ, ರಾನಡೆ ಮತ್ತು ನಾಮದಾರ ಶಾಸ್ತ್ರಿಗಳು ಹಿಂದುಳಿದ ವರ್ಗದ ಪುನರುಜ್ಜೀವನಕ್ಕಾಗಿ ಅದ್ಭುತವಾಗಿ ದುಡಿದಿದ್ದಾರೆ. ಇವರೆಲ್ಲರೂ ಬ್ರಾಹ್ಮಣರೇ. ಎಲ್ಲ ಕಾಲದಲ್ಲಿಯೂ ಸ್ವಾರ್ಥತ್ಯಾಗದಲ್ಲಿ ಬ್ರಾಹ್ಮಣರದೇ ಎತ್ತಿದ ಕೈ ಎಂದು ನನಗೆ ಮಂದಟ್ಟಾಗಿದೆ. ಬ್ರಾಹ್ಮಣ ನೌಕರಶಾಹಿ ಬಗ್ಗೆ ನೀವು ದೂರುತ್ತೀರಿ. ಆದರೆ ಬ್ರಿಟಿಷ್ ನೌಕರಶಾಹಿಯ ಸಂಗಡ ಅದನ್ನು ಹೋಲಿಸಿ ನೋಡೋಣ. ಅವರು ನಮ್ಮನ್ನು 'ವಿಭಜಿಸಿ' ಆಳುತ್ತಾರೆ; ತಮ್ಮ ಅಧಿಕಾರವನ್ನು ಖಡ್ಗಬಲದಿಂದ ಉಳಿಸಿಕೊಂಡಿದ್ದಾರೆ. ಬ್ರಾಹ್ಮಣರು ಹಾಗೆ ಎಂದೂ ಮಾಡಲಿಲ್ಲ. ಅವರು ದೇಹಬಲವನ್ನು ಎಂದೂ ಉಪಯೋಗಿಸಲಿಲ್ಲ. ತಮ್ಮ ಬುದ್ಧಿಬಲದಿಂದ, ತಪೋಬಲದಿಂದ, ತ್ಯಾಗಬಲದಿಂದ ತಮ್ಮ ಆಧಿಪತ್ಯವನ್ನು ಸ್ಥಾಪಿಸಿಕೊಂಡಿದ್ದಾರೆ. ಅವರ ಹೆಚ್ಚುಗಾರಿಕೆಗೆ ನಾವು ಅಸೂಯೆ ಪಡಬೇಕಾದ್ದಿಲ್ಲ. ಬ್ರಾಹ್ಮಣರನ್ನು ದ್ವೇಷಿಸಬೇಡಿ, ನೌಕರಶಾಹಿಯ ಬಲೆಗೆ ಸಿಕ್ಕಬೇಡಿ ಎಂದು ನನ್ನ ಬ್ರಾಹ್ಮಣೇತರ ಬಂಧುಗಳಿಗೆ ವಿನಂತಿ ಮಾಡಿಕೊಳ್ಳುತ್ತೇನೆ.

ಬ್ರಾಹ್ಮಣೇತರರು ಶ್ರೀಮಂತರು. ವ್ಯವಸಾಯ ವ್ಯಾಪಾರ ಎರಡೂ ಅವರ ಕೈಲಿದೆ. ಅವರಿಗೂ ನೌಕರಿಗಳು ಬೇಕು ಎಂದರೆ ಅಸಹಕಾರ ಚಳವಳಿ ಅವರಿಗೆ ಹಾದಿ ಮಾಡಿಕೊಡುತ್ತದೆ. ಅಸಹಕಾರ ಬ್ರಾಹ್ಮಣರಿಗೂ, ಬ್ರಾಹ್ಮಣೇತರರಿಗೂ ಎಲ್ಲರಿಗೂ ಹಿತಕರ. ಶಾಲಾ ಕಾಲೇಜುಗಳ ಬಹಿಷ್ಕಾರ ವಿದ್ಯಾವಂತ ಬ್ರಾಹ್ಮಣರಿಗೆ ಸಮ್ಮತ ಆಗಬಹುದು. ಆದರೆ ಬ್ರಾಹ್ಮಣೇತರರು ಇನ್ನೂ ವಿದ್ಯೆ ಕಲಿತಿಲ್ಲ. ಅವರಿಗೆ ಖಂಡಿತವಾಗಿಯೂ ಇದರಿಂದ ಹಾನಿ ತಟ್ಟುತ್ತದೆ ಎನ್ನುತ್ತೀರಿ. ಆಧುನಿಕ ಶಿಕ್ಷಣದ ಬಹಳ ಉತ್ತಮಫಲ ನಾನು ಎಂದೂ ಹೇಳುತ್ತೀರಿ. ಆದರೆ ಆಧುನಿಕ ಶಿಕ್ಷಣ ನಮ್ಮನ್ನು ಹೇಡಿಗಳನ್ನಾಗಿ ಮಾಡಿದೆ ಎನ್ನುತ್ತೇನೆ. ನಮ್ಮ ನಿಸ್ಸಹಾಯತೆ, ನಮ್ಮ ಪರಸ್ಪರ ಈರ್ಷೆ-ಅಸೂಯೆಗಳು ಈ ಶಿಕ್ಷಣದ ಫಲ. ಇದು ನಮ್ಮಲ್ಲಿ ಗುಲಾಮಗಿರಿ ವೃತ್ತಿಯನ್ನು ತಂದಿದೆ. ನನ್ನಲ್ಲಿ ಇವೆ ಎಂದು ನೀವು ಹೇಳುವ ಗುಣಗಳು ಖಂಡಿತವಾಗಿಯೂ ಈ ಶಿಕ್ಷಣದ ಫಲ ಅಲ್ಲ. ಬಹಳಕಾಲದ ಹಿಂದೆಯೇ ಈ ಶಿಕ್ಷಣದ ಮೋಡಿಯಿಂದ ನಾನು ಬಿಡಿಸಿಕೊಂಡಿದ್ದೇನೆ. ನನ್ನ ಧರ್ಮದ ಅಧ್ಯಯನ, ಜೀವನದ ಶಾಶ್ವತ ತತ್ವಗಳ ಅಧ್ಯಯನ,

ಬ್ರಾಹ್ಮಣರಿಂದ ಸಂಕಲಿತವಾದ ಭಗವದ್ಗೀತೆ, ಮಹಾಭಾರತ, ರಾಮಾಯಣಗಳ ಅಧ್ಯಯನದಿಂದ ನನ್ನ ವ್ಯಕ್ತಿತ್ವ ರೂಪುಗೊಂಡಿದೆ. ಈ ವಿಚಾರಗಳನ್ನು ಸಾವಧಾನವಾಗಿ ಚಿಂತನ ಮಾಡಬೇಕು ಎಂದು ನನ್ನ ಬ್ರಾಹ್ಮಣೇತರ ಗೆಳೆಯರನ್ನು ಕೇಳಿಕೊಳ್ಳುತ್ತೇನೆ. ಆಗ ಅವರಿಗೆ ನಾನು ಹೇಳುವುದರ ಸತ್ಯ ಮನದಟ್ಟಾಗುವುದು.

ನಾನೂ, ಅಲಿ ಸೋದರರೂ ಅಣ್ಣ-ತಮ್ಮಂದಿರ ಹಾಗೆ ಬಾಳುತ್ತಿದ್ದೇವೆ. ಹಿಂದು ಮುಸಲ್ಮಾನರು ಇಬ್ಬರೂ ಅದೇ ರೀತಿ ಸೋದರರಂತೆ ಬಾಳಬೇಕೆಂದು ನನ್ನ ಬಿನ್ನಹ. ಅಸಹಕಾರದ ಚಳವಳಿ ಆತ್ಮಶುದ್ಧಿಯ ಚಳವಳಿ. ನಮ್ಮ ಸಮಾಜಕ್ಕೆ ಗೆದ್ದಲು ಹತ್ತಿದಂತೆ ಹತ್ತಿರುವ ದುರ್ಗುಣಗಳನ್ನು ನಾವು ತೊಲಗಿಸಬೇಕು. ದೇಶಕ್ಕಾಗಿ ಪ್ರಾಣತ್ಯಾಗ ಮಾಡಲು ಸಿದ್ಧರಾಗಬೇಕು. ಏನೇ ಬರಲಿ, ಅಹಿಂಸೆಯನ್ನು ಅವಲಂಬಿಸಬೇಕು. ಪಂಜಾಬಿನ ಲಕ್ಷ್ಮಣಸಿಂಗ್ ದಿಲೀಪಸಿಂಗರ ಶ್ರೇಷ್ಠ ಉದಾಹರಣೆಗಳನ್ನು ಅನುಸರಿಸಬೇಕು. ಮಹಂತ ನಾರಾಯಣದಾಸರನ್ನು ಕೊಲ್ಲಲು ಅವರಿಗೆ ಸಾಕಷ್ಟು ಸಾಮರ್ಥ್ಯ ಇತ್ತು. ಆದರೂ ಆತ್ಮ ರಕ್ಷಣೆಗಾಗಿ ತಮ್ಮ ಕಿರುಬೆರಳನ್ನೂ ಎತ್ತಲಿಲ್ಲ.

ಈ ಜಿಲ್ಲೆ ಕ್ಷಾಮಪೀಡಿತ ಎಂದು ನನಗೆ ದುಃಖ ಆಗುತ್ತದೆ. ಸಹಜವಾಗಿಯೇ ತಿಲಕ ಸ್ವರಾಜ್ಯ ನಿಧಿಗೆ ನೀವು ಧಾರಾಳವಾಗಿ ನೀಡಲು ಆಗಿಲ್ಲ. ಆದರೆ ಇಡೀ ಜಿಲ್ಲೆಯಲ್ಲಿ ೧೪೦೦ ರಾಟೆ ಮಾತ್ರ ತಿರುಗುತ್ತಿವೆ ಎಂದು ಕೇಳಿ ನನಗೆ ವಿಷಾದ ಎನಿಸುತ್ತಿದೆ. **ರಾಟೆ ಬರಗಾಲಕ್ಕೆ ಒಂದು ವಿಮೆ ಮಾಡಿದಂತೆ**. ಇಲ್ಲಿ ನೂರಕ್ಕೆ ೮೭ ಜನ ವ್ಯವಸಾಯವನ್ನು ಅವಲಂಬಿಸಿದ್ದೀರಿ. ಅಭಾವದ ಸಮಯಕ್ಕೆ ಬೇರೆ ಯಾವ ಅನುಕೂಲವೂ ಇಲ್ಲ. ಆದ್ದರಿಂದ ಮನೆ ಮನೆಯಲ್ಲೂ ರಾಟೆ ತಿರುಗುವಂತೆ ಮಾಡಬೇಕು. ಹಾಗೆ ಮಾಡಿದರೆ 'ಏಕ ಕ್ರಿಯಾ ದ್ವ್ಯರ್ಥ ಕರೀ' ಆಗುತ್ತದೆ. ಸ್ವದೇಶಿಯೂ ಬೆಳೆಯುತ್ತದೆ. ಪರದೇಶಿ ವಸ್ತ್ರ ಬಹಿಷ್ಕಾರವೂ ಆಗುತ್ತದೆ. ಅಹಿಂಸೆಯ ದಾರಿಯನ್ನು ತುಳಿಯಲು ನಿರ್ಧರಿಸಿದ್ದರೆ, ಬ್ರಾಹ್ಮಣ ಬ್ರಾಹ್ಮಣೇತರರ ಕಲಹವನ್ನು ಅಹಿಂಸೆಯಿಂದ ಪರಿಹಾರ ಮಾಡಿಕೊಳ್ಳಲು ನಿರ್ಧಾರ ಮಾಡಿದರೆ, ಹಿಂದೂ ಮುಸಲ್ಮಾನರಿಬ್ಬರೂ ಪರಸ್ಪರ ಪ್ರೀತಿಯಿಂದ ನಡೆದುಕೊಂಡರೆ, ಪ್ರತಿಯೊಂದು ಮನೆಯಲ್ಲಿಯೂ ರಾಟೆ ತಿರುಗಿದರೆ ಈ ವರ್ಷದೊಳಗಾಗಿಯೇ ಸ್ವರಾಜ್ಯ ಸ್ಥಾಪನೆ ಆಗುತ್ತದೆ ಎಂದು ಭರವಸೆ ಕೊಡುತ್ತೇನೆ.

ಲೋಕಮಾನ್ಯ ತಿಲಕರು 'ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು' ಎಂದು ಹೇಳಿಕೊಟ್ಟಿದ್ದಾರೆ. ಈ ಮಂತ್ರವನ್ನು ಜಪಿಸಲು ನಾವು ಶಾಲೆಗಾಗಲಿ, ಶಾಸನಸಭೆಗಾಗಲಿ ಹೋಗಬೇಕಾದ್ದಿಲ್ಲ. ರಾಟೆ ನಮಗೆ ಬೇಕಾದ ಸ್ವರಾಜ್ಯವನ್ನು ಕೊಡುತ್ತದೆ. ಜೂನ್ ೩೦ರ ಒಳಗಾಗಿ ಒಂದು ಕೋಟಿ ರೂಪಾಯಿಯನ್ನು ನಾವು ಸಂಗ್ರಹಿಸಬೇಕು. ಲೋಕಮಾನ್ಯ ತಿಲಕರ ಹೆಸರಿನಲ್ಲಿ ಒಂದು ಕೋಟಿ ರೂಪಾಯಿಯನ್ನು ಸಂಗ್ರಹಿಸುವುದು ಕಷ್ಟವೇನಲ್ಲ ಎನಿಸುತ್ತದೆ ನನಗೆ.

ನನಗೆ ಬಿನ್ನವತ್ತಳೆ ಕೊಟ್ಟು ಗೌರವ ತೋರಿಸಿದ್ದೀರಿ. ಪೌರಸಭೆಯವರೂ, ವರ್ತಕರೂ ತಮ್ಮ ಕರ್ತವ್ಯವನ್ನು ಅರಿತುಕೊಂಡರೆ, ಸ್ವರಾಜ್ಯ ಸಾಧನೆಗೆ ಸಾಕಷ್ಟು ಸಹಾಯ ಮಾಡಬಹುದು. ಖಿಲಾಫತ್ ಅನ್ಯಾಯಗಳನ್ನು ತೊಡೆದು ನ್ಯಾಯ ದೊರಕಿಸಿಕೊಳ್ಳಲು ಸಹಾಯ ಮಾಡಬಹುದು.'

**ಧಾರವಾಡದಲ್ಲಿ ಗೋಲಿಬಾರು (೧-೭-೧೯೨೧)**

ಧಾರವಾಡದಲ್ಲಿ ೧-೭-೧೯೨೧ರಂದು ಹೆಂಡದ ಗಡಂಗದ ಮುಂದೆ ಪಿಕೆಟಿಂಗ್ ನಡೆದಿತ್ತು. ಅಂದಿನ ಕಾಂಗ್ರೆಸ್ ಕಾರ್ಯಕ್ರಮದ ಪ್ರಕಾರ ಈ ಪಿಕೆಟಿಂಗ್ ನಡೆದಾಗ ಪೋಲೀಸ ಅಧಿಕಾರಿಗಳು ಗುಂಡು ಹಾರಿಸಿದ ಪರಣಾಮವಾಗಿ ಮೂರು ಜನರು ಅಸು ನೀಗಿದರು. ಈ ಪ್ರಕರಣದಲ್ಲಿ ಧಾರವಾಡದ ಅನೇಕ ಕಾಂಗ್ರೆಸ್ ಕಾರ್ಯಕರ್ತರನ್ನು ಸುಳ್ಳು ಆರೋಪಗಳ ಮೇಲೆ ಸರಕಾರ ಬಂಧಿಸಿತು. ಹೀಗೆ ಬಂಧಿತರಾದವವರಲ್ಲಿ ಸರ್ವಶ್ರೀ ಗೋಪಾಳರಾವ ದೇಶಪಾಂಡೆ, ಹುನುಮಂತರಾವ ದೇಸಾಯಿ, ರಂಗರಾವ ದಿವಾಕರ, ಕೃಷ್ಣರಾವ ಮುದವೇಡಕರ, ವೆಂಕಟರಾವ ಮುದವೇಡಕರ, ಗೋವಿಂದಾಚಾರ್ಯ ಗುತ್ತಲ ವಕೀಲ, ಮಧ್ವರಾವ ಕಬ್ಬೂರ ವಕೀಲ, ಅನಂತರಾವ ದಾಬಡೆ, ನಾರಾಯಣ ರಾವ ಭಿಸೆ ಇವರೇ ಮೊದಲಾದವರು ಇದ್ದರು. ಬಂಧಿತರಾದ ಕೆಲಜನ ಮುಸಲ್ಮಾನ ಬಂಧುಗಳೂ ಇದ್ದರು. ಇವರೆಲ್ಲರ ಮೇಲೂ ಮೊಕದ್ದಮೆ ನಡೆಯಿತು. ಆಗ ದಕ್ಷಿಣ ಭಾಗದ ಕಮಿಶನರ್ ಮತ್ತು ಮುಂಬಯಿ ಸರಕಾರದ ಹೋಂ ಮೆಂಬರ್ ಧಾರವಾಡಕ್ಕೆ ಬಂದು ವಿಚಾರಣೆ ಮಾಡಿಕೊಂಡು ಹೋದರು. ಪದ್ಧತಿಯಂತೆ ಮ್ಯಾಜಿಸ್ಟ್ರೇಟರ ಮುಂದೆ ವಿಚಾರಣೆ ಆಗಿ ಮೊಕದ್ದಮೆ ಸೆಷನ್ ಕೋರ್ಟಿಗೆ ಕಮಿಟ್ ಮಾಡಲಾಯಿತು. ಆರೋಪಿಗಳು, ಗಾಂಧೀಜಿ ತತ್ವಕ್ಕೆ ಅನುಗುಣವಾಗಿ, ಮೊಕದ್ದಮೆಯಲ್ಲಿ ಭಾಗವಹಿಸಲು ನಿರಾಕರಿಸಿದರು. ಅವರು ಕೇವಲ ತಮ್ಮ ಹೇಳಿಕೆ ಕೊಡುವುದಕ್ಕಿಂತ ಹೆಚ್ಚಿನದೇನನ್ನೂ ಮಾಡಲಿಲ್ಲ.

ಮುಂಬಯಿ ಏ.ಐ.ಸಿ.ಸಿ ಸಭೆಯಲ್ಲಿ ಧಾರವಾಡ ಗೋಲಿಬಾರ್ ಪ್ರಶ್ನೆ ಬಂದು ಕಾಂಗ್ರೆಸ್ ಪರವಾಗಿ ಈ ಪ್ರಕರಣದ ವಿಚಾರಣೆ ನಡೆಯಬೇಕೆಂದು ನಿರ್ಣಯವಾಯಿತು. ಅದರಂತೆ, ಅಬ್ಬಾಸ್ ತಯ್ಯಬ್‌ಜಿ ಅವರ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿ ಏರ್ಪಟ್ಟಿತು. ಮುಖಂಡರಲ್ಲಿ ಯಾರಾದರೂ ಧಾರವಾಡಕ್ಕೆ ಹೋಗಿ ಬಂಧನದಲ್ಲಿದ್ದ ಆರೋಪಿಗಳನ್ನು ಕಂಡುಬಂದರೆ, ಅವರಿಗೆಲ್ಲ ಸಮಾಧಾನವಾಗುವದೆಂದು ಗಾಂಧೀಜಿ ಹೇಳಿದ್ದರಿಂದ ಲಾಲಾ ಲಜಪತರಾಯ ಮತ್ತು ಶೌಕತ್ ಅಲಿ ಧಾರವಾಡಕ್ಕೆ ಬಂದರು. ಇವರ ಸಂಗಡ ದೇಶಪಾಂಡೆ ಗಂಗಾಧರ ರಾಯರು ಸಹ ಇದ್ದರು. ಲಾಲಾಜಿ ಮತ್ತು ಶೌಕತ್ ಅಲಿ ಅವರು ಆರೋಪಿಗಳ ಸಂಗಡ ಮಾತನಾಡಬಾರದೆಂಬ ಕರಾರಿನ ಮೇಲೆ ಅವರಿಗೆ ಗೋಲಿಬಾರ್ ಪ್ರಕರಣದ ರಾಜಕೀಯ ಆರೋಪಿಗಳನ್ನು ಕಾಣಲು ಅನುಮತಿ ದೊರೆತಿತ್ತು. ಇದರಿಂದ ಆರೋಪಿಗಳಿಗೆಲ್ಲ ಸಮಾಧಾನ ಆಯಿತು. ಸೆಶನ್ಸ್ ಕೋರ್ಟಿನಲ್ಲಿ ಈ ಮೊಕದ್ದಮೆಯ ತೀರ್ಮಾನ ಹೊರ ಬಿದ್ದು ದಿವಾಕರ, ಗೋಪಾಳರಾವ ದೇಶಪಾಂಡೆ, ಕೃಷ್ಣರಾವ ಮುದವೇಡಕರ, ಹನುಮಂತರಾವ ದೇಸಾಯಿ ಇವರು ದೋಷಮುಕ್ತರಾದರು. ಉಳಿದವರಿಗೆ ಒಂದು ವರ್ಷದಿಂದ ಮೂರು ವರ್ಷಗಳವರೆಗೆ ಸಶ್ರಮ ಶಿಕ್ಷೆ ಆಯಿತು. ಆಗ ಶ್ರೀ ವಿನಾಯಕರಾವ ಜೋಶಿ ಅವರ ನಿವೃತ್ತಿ ವೇತನವನ್ನು ಸರಕಾರ ನಿಲ್ಲಿಸಿ ಬಿಟ್ಟಿತು. ಇನ್ನು ಕಾಂಗ್ರೆಸ್ ನೇಮಿಸಿದ್ದ ವಿಚಾರಣಾ ಸಮಿತಿಯು ಸಾಕ್ಷ್ಯ ತೆಗೆದುಕೊಂಡು ಗೋಲಿಬಾರ್ ಮಾಡಲು ಏನೂ ಕಾರಣ ಇರಲಿಲ್ಲ ಎಂದು ವರದಿ ಮಾಡಿತು.

ಈ ಗೋಲಿಬಾರ್ ಪ್ರಕರಣದ ಸಂಬಂಧದಲ್ಲಿ ಗಾಂಧೀಜಿ ೧೪-೭-೧೯೨೧ರಲ್ಲಿ ಒಂದು ಸಂದೇಶ ಕಳಿಸಿದ್ದು ಅದು ಹೀಗಿದೆ: ಧಾರವಾಡದಲ್ಲಿ ಸರಕಾರ ಮಾಡುತ್ತಿರುವ ಕೆಲಸವನ್ನು ಅತ್ಯಂತ ಆಸಕ್ತಿಯಿಂದ ನಾನು ಗಮನಿಸುತ್ತಿದ್ದೇನೆ. ಸರಕಾರದ ದಬ್ಬಾಳಿಕೆಗೆ ಗುರಿಯಾದವರ ಬಳಗದವರಿಗೆ ನನ್ನ ಅಭಿನಂದನೆಗಳು. ಒಟ್ಟಿನಲ್ಲಿ ಜನತೆಯನ್ನೇ ನಾನು ಅಭಿನಂದಿಸುತ್ತೇನೆ. ಅವರ ಧೈರ್ಯ ಸ್ಥೈರ್ಯ ಸಹನೆಗಳಿಗೆ ಅಭಿನಂದಿಸುತ್ತೇನೆ. ಅಲ್ಲಿ ದಸ್ತಗಿರಿಗಳಿಂದ ಧಾರವಾಡದ ಜನರ ನೀತಿ ಸ್ವಲ್ಪವೂ ಕೆಡಲಿಲ್ಲವೆಂದು ಕೇಳಿ ನನಗೆ ಸಂತೋಷವಾಗಿದೆ. ಧಾರವಾಡದಲ್ಲಿ ನಡೆದ ಘಟನೆಯಂಥ ಘಟನೆಗಳಿಂದ ಸ್ವರಾಜ್ಯಕ್ಕೆ ನಮ್ಮ ದಾರಿ ಹತ್ತಿರವಾಗುತ್ತದೆ. ನಮ್ಮ ಕೂಚು(ಮಾರ್ಚ್) ಶೀಘ್ರ ಆಗುತ್ತದೆ. ಆದರೆ ಅಹಿಂಸೆಯನ್ನೂ, ಸಹನೆಯನ್ನೂ ನಾವು ಕಾಯ್ದುಕೊಳ್ಳಬೇಕು. ಉದ್ದೇಶಪೂರ್ವಕ ಮಾಡಿದ ಪ್ರತಿಭಟನೆ ಜನರ ಧೈರ್ಯವನ್ನೂ ಇಮ್ಮಡಿಗೊಳಿಸುತ್ತದೆ. ಅವರ ಚಳವಳಿಗೆ ಹೆಚ್ಚು ಪವಿತ್ರತೆಯನ್ನು ತರುತ್ತದೆ. ಆದ್ದರಿಂದ ಸರಕಾರದ ದಬ್ಬಾಳಿಕೆ ಎಷ್ಟೇ ಆದರೂ ನಾವು ಸಹಿಸಿಕೊಂಡು, ಧೈರ್ಯಗೆಡದೆ ನಮ್ಮ ಗುರಿಯ ಕಡೆ ಸಾಗಿ ಹೋಗಬೇಕು.

ಧಾರವಾಡದ ಸಮಸ್ಯೆ ಸ್ಥಳೀಯ ಕಲಹಗಳಿಂದ, ವಿವಾದಗಳಿಂದ ತೊಡಕಾಗಿ ಗೊಂದಲಗೆಟ್ಟಿದೆ ಎಂದು ಕೇಳಿದ್ದೇನೆ. ಎಲ್ಲರಿಗೂ ಸಮಾನ ಆದ ವಿಪತ್ತು ಇದು. ಎಲ್ಲರೂ ತಮ್ಮ ತಮ್ಮ ಜಗಳಗಳನ್ನು ಮರೆಯಬೇಕು ಎಂದು ಬೇಡುತ್ತೇನೆ. ಎಲ್ಲರೂ ಈ ಮಾತಿನಂತೆ ನಡೆಯಲಿ, ನಡೆಯದಿರಲಿ, ಅಸಹಕಾರಿಗಳಾದರೂ ಖಂಡಿತ ಹೀಗೆಯೆ ಮಾಡಿಯಾರು ಎಂದು ನಿರೀಕ್ಷಿಸುತ್ತೇನೆ. ಅಸೂಯೆ ಪಡುವವರು ಎಷ್ಟೇ ದ್ವೇಷ ಮಾಡಿದರೂ ಶಾಂತವಾಗಿ ಅದನ್ನು ಸಹಿಸುವುದರಿಂದ ವಿರೋಧಿಗಳ ಬಲ ಕುಗ್ಗುತ್ತದೆ.

**ವಿರೋಧಿಗಳನ್ನು ಗೆಲ್ಲಲು ಪ್ರೀತಿ ಔದಾರ್ಯಗಳಿಗಿಂತ ಹೆಚ್ಚಿನ ಮಾರ್ಗ ಇಲ್ಲ**

ಬೆಳಗಾಂವಿಯಲ್ಲಿ ಆಗ ಹೆಂಡದಂಗಡಿಗಳ ಪಿಕೆಟಿಂಗ್ ನಡೆದಿತ್ತು. 'ಪಿಕೆಟಿಂಗ್‌ನ ವಿರುದ್ಧ ಅನ್ಯಾಯವಾದ ಅಪ್ಪಣೆ ಮಾಡಿದ್ದರೂ, ಕಾನೂನಿಗೆ ಅದು ವಿರುದ್ಧವಾಗಿದ್ದರೂ ಅದನ್ನು ಪಾಲಿಸಿರಿ. ಅದರಿಂದ ಮುಂದೆ ಸವಿನಯ ಶಾಸನ ಭಂಗ ಚಳವಳಿಗೆ ಬಲ ಬರುತ್ತದೆ. ಪರದೇಶಿ ವಸ್ತ್ರ ಬಹಿಷ್ಕಾರಕ್ಕೆ ಶಕ್ತಿ ಮೀರಿ ಪ್ರಯತ್ನ ಮಾಡಿರಿ' ಎಂದು ಗಾಂಧೀಜಿ ಸಂದೇಶ ಕಳಿಸಿದ್ದರು.

೧೯೨೧ ಜುಲೈ ತಿಂಗಳು ನವಲಗುಂದದಲ್ಲಿ ಧಾರವಾಡ ಜಿಲ್ಲಾ ಪರಿಷತ್ತು ಕೂಡಿತ್ತು. ಅದಕ್ಕೆ ಅಧ್ಯಕ್ಷರು ಶ್ರೀ ಗಂಗಾಧರರಾವ ದೇಶಪಾಂಡೆ ಅವರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, ಅಹಿಂಸಾತ್ಮಕ ಅಸಹಕಾರವೇ ಉತ್ತಮ ಉಪಾಯವಾದರೂ ಕರನಿರಾಕರಣ ಚಳವಳಿ ನಡೆಸುವ ಪ್ರಸಂಗ ಬಂದರೂ ಬರಬಹುದು ಎಂದು ಹೇಳಿದ್ದರು. ಅಲ್ಲದೆ. ಧಾರವಾಡ ಗೋಲಿಬಾರ್ ಪ್ರಸಂಗ ಉಲ್ಲೇಖಿಸಿ ಧಾರವಾಡ ಕಲೆಕ್ಟರ್ ಪೇಂಟರ್ ಅವರನ್ನು ಟೀಕಿಸಿದ್ದರು. ಈ ಸಂಬಂಧವಾಗಿ ಅವರ ಮೇಲೆ ೧೨೪ ಎ ಕಲಮಿನಂತೆ ರಾಜದ್ರೋಹ ಮೊಕದ್ದಮೆ ಹಾಕಲಾಯಿತು, ಮತ್ತು ಇದರಲ್ಲಿ ಅವರಿಗೆ ಆರು ತಿಂಗಳು ಶಿಕ್ಷೆ ಆಯಿತು. ಈ ಸಂಬಂಧದಲ್ಲಿ

ಗಾಂಧೀಜಿ ಶ್ರೀ ಗಂಗಾಧರರಾಯರಿಗೆ ಒಂದು ಪತ್ರ ಬರೆದರು. ಆ ಪತ್ರವನ್ನು ಅಕ್ಟೋಬರ್ ೧೫ರ ದಿನ ಹುಬ್ಬಳ್ಳಿಯಲ್ಲಿ ನಡೆದ ಒಂದು ಸಾರ್ವಜನಿಕ ಸಭೆಯಲ್ಲಿ ಶ್ರೀ ದಿವಾಕರ ರಂಗರಾಯರು ಓದಿದರು. ದಿವಾಕರರೂ ಕೂಡ ಅದೇ ಒಂದು ವಾರದ ಹಿಂದೆ ಸೆರೆಮನೆಯಿಂದ ಬಿಡುಗಡೆ ಆಗಿ ಬಂದಿದ್ದರು. ಆ ಪತ್ರ ಹೀಗಿದೆ:

ಪ್ರಿಯ ಗಂಗಾಧರರಾಯರೆ, ಸೆರೆಮನೆಯ ಬಹುಮಾನವನ್ನು ಪಡೆಯುವ ಸುಪ್ರಸಂಗ ನಿಮಗೆ ಈಗ ಬಂದಿದೆ ಎಂದು ಕೇಳಿದೆ. ಅಂಥ ಸುದೈವ ನನ್ನ ಪಾಲಿಗೆ ಬರಲಿಲ್ಲವಲ್ಲ ಎಂದು ನನಗೆ ಅಸೂಯೆ ಆಗುತ್ತದೆ. ಹೆಚ್ಚು ಹೆಚ್ಚು ಜನರು ಸೆರೆಮನೆಗೆ ಹೋದಂತೆ, ಹಿಂದೆ ಉಳಿದವರ ಮೇಲೆ ಹೆಚ್ಚು ಹೆಚ್ಚು ಭಾರವೂ, ಹೆಚ್ಚು ಹೆಚ್ಚು ಜವಾಬ್ದಾರಿಯೂ ಬೀಳುತ್ತದೆ ನಿಜ. ಆದರೆ ಸಮಸ್ತ ಭಾರವನ್ನು ಹೊರಲು ಸರ್ವಶಕ್ತ ಭಗವಂತ ಸಮರ್ಥ. ಅವನಿಗೆ ಈ ಭಾರ ಹೊರಿಸಿ, ನಾವು ನಿಶ್ಚಿಂತರಾದರಾಯಿತು. ಸೆರೆಮನೆಯಲ್ಲಿ ಕೂಡ ರಾಟೆಯನ್ನು ತರಿಸಿಕೊಳ್ಳುವ ಬಗ್ಗೆ ತಾವು ಒತ್ತಾಯ ಮಾಡಿಯೇ ಮಾಡುತ್ತೀರಿ ಎಂದು ನಾ ಬಲ್ಲೆ. ಏನೇ ಆಗಲಿ, ಈ ವರ್ಷ ಕೊನೆ ಮುಟ್ಟಿದ ಮೇಲೆ ಸೆರೆಮನೆಯಲ್ಲಿ ಇರುವ, ವಿಶ್ರಾಂತಿ ಸಂತೋಷವನ್ನನುಭವಿಸುವ ಅವಕಾಶ ನಿಮಗೆ ನಾವು ಕೊಡುವುದಿಲ್ಲವೆಂದು ಖಂಡಿತವಾಗಿ ನಂಬಿ.

**ಬಳ್ಳಾರಿಗೆ ಗಾಂಧೀಜಿಯ ಆಗಮನ (೧-೧೦-೧೯೨೧)**

ಆಗ ಬಳ್ಳಾರಿ ಜಿಲ್ಲೆ ಮದರಾಸ್ ಪ್ರಾಂತದಲ್ಲಿತ್ತು. ಮದರಾಸ್ ಪ್ರಾಂತದಲ್ಲಿ ಆಂಧ್ರ, ತಮಿಳು ಕರ್ನಾಟಕ ಮೂರೂ ಇದ್ದವು. ಭಾಷೆಯ ದೃಷ್ಟಿಯಿಂದ, ಜಾತಿಯ ದೃಷ್ಟಿಯಿಂದ ಆಗಾಗ ಇವುಗಳಲ್ಲಿ ಸ್ವಲ್ಪ ವಿರಸ ಏರ್ಪಡುತ್ತಿತ್ತು. ಇಂಥ ಪರಿಸ್ಥಿತಿಯಲ್ಲಿ ಕಾಂಗ್ರೆಸ್ ಮುನ್ನಡೆಯಬೇಕಾಗಿತ್ತು. ೧೯೨೧ರಲ್ಲಿ ಆಂಧ್ರದ ತಿರುಪತಿಯ ಮೂಲಕ ಗಾಂಧೀಜಿ ಬಳ್ಳಾರಿಗೆ ಬಂದರು. ಮುಂದೆ ಅವರು ತಮಿಳುನಾಡಿಗೆ ಹೋಗಬೇಕಾಗಿತ್ತು. ಈ ತಮಿಳುನಾಡ ಪ್ರವಾಸದಲ್ಲಿಯೇ ಅವರು ತಮ್ಮ ಧೋತ್ರವನ್ನು ಬಿಟ್ಟು, ತುಂಡು ಪಂಚೆಯನ್ನು ಉಡಲು ಉಪಕ್ರಮಿಸಿದರು. ಸೆಪ್ಟೆಂಬರ್ ೨೨ಕ್ಕೆ ಮಧುರೆಗೆ ಹೋದರು. ಅಲ್ಲಿ ಈ ತೀರ್ಮಾನ ಕೈಗೊಂಡರು. ಮಾರನೇ ದಿನ ಮಧುರೆಯ ನೇಕಾರರನ್ನು ಕುರಿತು ಭಾಷಣ ಮಾಡುವಾಗ ತುಂಡುಪಂಚೆ ಉಟ್ಟೇ ಭಾಷಣ ಮಾಡಿದರು.

ಬಳ್ಳಾರಿಗೆ ಗಾಂಧೀಜಿ ಬಂದಾಗ ಒಂದು ಬಿನ್ನವತ್ತಳೆಯನ್ನು ಕೊಡಲಾಯಿತು. ಅದಕ್ಕೆ ಗಾಂಧೀಜಿ ಹಿಂದೀಯಲ್ಲಿ ಉತ್ತರ ಕೊಟ್ಟರು. ಖಿಲಾಫತ್ ಸಮಿತಿ ತಮಗೆ ಬಿನ್ನವತ್ತಳೆ ಕೊಡಲಿಲ್ಲ ಎಂದು ವಿಷಾದಪಟ್ಟು, ಖಿಲಾಫತ್ ಸಮಿತಿ ಒಂದು ಇದೆಯೋ ಇಲ್ಲವೋ ಎಂಬ ಸಂಶಯವನ್ನು ಪ್ರಕಟಿಸಿದರು. ಒಂದು ವೇಳೆ ಇದ್ದಿದ್ದರೆ ಈ ತಪ್ಪು – ಈ ಲೋಪ ಆಗಬಾರದಿತ್ತು ಎಂದರು. ಬಳ್ಳಾರಿಯಿಂದ ಅಸಂಖ್ಯ ಪತ್ರ ಬಂದಿವೆ. ಇಲ್ಲಿಯ ವಕೀಲರಲ್ಲಿ, ಪೌರಸಭಾ ಸದಸ್ಯರಲ್ಲಿ, ಹಿಂದೂಗಳಲ್ಲಿ, ಮುಸ್ಲಿಂರಲ್ಲಿ ಸ್ಥಳೀಯ ಮತಭೇದಗಳು ಇವೆ – ಎಂದು ತಿಳಿಸಿದ್ದರು. ಎಲ್ಲಿಯವರೆಗೆ ಶಾಂತಿ ಸಾಮರಸ್ಯ ಇಲ್ಲವೋ ಅಲ್ಲಿಯವರೆಗೆ ಕಾಂಗ್ರೆಸ್ ಕೆಲಸ ನಡೆಯುವುದು ಅಸಾಧ್ಯ. ಆದ್ದರಿಂದ ಎಲ್ಲರೂ ತಮ್ಮ ಭೇದವನ್ನು ಮರೆತು

ಒಟ್ಟುಗೂಡಬೇಕು - ಎಂದರು. ಆಂಧ್ರ - ಕರ್ನಾಟಕದ ಸಮಸ್ಯೆಗಳು ಸ್ವರಾಜ್ಯ ಬಂದ ಮೇಲೆ ತೀರ್ಮಾನ ಆದೀತು ಎಂದರು. ಎಲ್ಲರೂ ರಾಟೆಯನ್ನು ಸ್ವೀಕರಿಸಿ, ಖಾದಿ ಉತ್ಪನ್ನ ಮಾಡಬೇಕು ಎಂದು ಕೋರಿದರು. ವಕಾಲತ್ತನ್ನು ಕೈಬಿಡುವ ಬಗ್ಗೆ ಬಳ್ಳಾರಿಯ ಪ್ರತಿಕ್ರಿಯೆ ಅಷ್ಟು ಚೆನ್ನಾಗಿಲ್ಲ ಅಥವಾ ಶೂನ್ಯ ಎಂದು ವಿಷಾದಿಸಿದರು. ಆದರೂ ಇಷ್ಟು ನಡುರಾತ್ರಿ ಆಗಿದ್ದರೂ ಇಷ್ಟು ದೊಡ್ಡ ಸಂಖ್ಯೆಯಲ್ಲಿ ಬಂದು ತಮ್ಮನ್ನು ಸ್ವಾಗತಿಸಿದುದಕ್ಕಾಗಿ ಅವರಿಗೆ ಧನ್ಯವಾದಗಳನ್ನು ಅರ್ಪಿಸಿದರು.

ಇದಾದ ಮೇಲೆ ರಾಷ್ಟ್ರದಲ್ಲಿ ಅನೇಕ ಮಹತ್ವದ ಘಟನೆಗಳು ನಡೆದವು. ಸ್ವರಾಜ್ಯ ಸಾಧನೆಗಾಗಿ ಮತ್ತು ಬ್ರಿಟಿಷರ ಅನ್ಯಾಯದ ಪ್ರತೀಕಾರಕ್ಕಾಗಿ ಅಸಹಕಾರ ಆಂದೋಲನವೂ, ವೈಯಕ್ತಿಕ ಸತ್ಯಾಗ್ರಹಗಳೂ ದೇಶದಲ್ಲಿ ನಡೆದೇ ಇದ್ದವು. ಇದೇ ಸಮಯದಲ್ಲಿ ಬಾರ್ಡೋಲಿ ತಾಲ್ಲೂಕಿನ(ಗುಜರಾತ) ಜನರು, ೨೯-೧-೧೯೨೨ರಂದು ಸೇರಿದ ತಾಲ್ಲೂಕಾ ಪರಿಷತ್ತಿನಲ್ಲಿ ಕರನಿರಾಕರಣೆಯ ಸತ್ಯಾಗ್ರಹ ಹೂಡಲು ನಿಶ್ಚಯಿಸಿದರು. ಕಾಂಗ್ರೆಸ್ ಕಾರ್ಯಕಾರಣೀ ಸಮಿತಿಯು ತನ್ನ ೩೧-೧-೧೯೨೨ರ ಸಭೆಯಲ್ಲಿ ಬಾರ್ಡೋಲಿಯ ಜನರನ್ನು ಅಭಿನಂದಿಸಿ ಅವರ ಕರನಿರಾಕರಣೆಯ ನಿರ್ಣಯವನ್ನು ಅನುಮೋದಿಸಿತು. ಬಾರ್ಡೋಲಿಯಲ್ಲಿ ಸತ್ಯಾಗ್ರಹ ಪ್ರಾರಂಭ ಮಾಡಬೇಕು ಎಂಬುವಷ್ಟರಲ್ಲಿಯೇ ದೇಶದಲ್ಲಿ ಕೆಲವು ಕಡೆ ದುರ್ಘಟನೆಗಳು ನಡೆದವು. ಚೌರಿಚೌರಾ (ಉತ್ತರ ಪ್ರದೇಶ)ದಲ್ಲಿ ಮೆರವಣಿಗೆ ಹೊರಟಾಗ ಪೊಲೀಸ್ ಠಾಣೆಯ ಮೇಲೆ ಹಲ್ಲೇ ಮಾಡಿ, ಜನತೆ ಇಪ್ಪತ್ತೆರಡು ಜನ ಪೊಲೀಸರನ್ನು ಸಾವಿಗೀಡು ಮಾಡಿತು. ಅದೇ ರೀತಿ ಮುಂಬಯಿ ಮತ್ತು ಮದರಾಸ್‌ಗಳಲ್ಲಿಯೂ ಹಿಂಸಾತ್ಮಕ ಕೃತ್ಯಗಳು ನಡೆದವು. ಇದನ್ನು ನೋಡಿ ಗಾಂಧೀಜಿ ಅವರಿಗೆ ರಾಷ್ಟ್ರವು ಅಹಿಂಸಾತ್ಮಕ ಹೋರಾಟಕ್ಕೆ ಸಿದ್ಧವಾಗಿಲ್ಲ ಎಂದೆನಿಸಿ ಬಾರ್ಡೋಲಿಯ ಸತ್ಯಾಗ್ರಹವನ್ನು ಹಿಂತೆಗೆದುಕೊಂಡರು. ಕಾಂಗ್ರೆಸ್ ಕಾರ್ಯಕಾರಿಣೀ ಸಮಿತಿಯು ಗಾಂಧೀಜಿಯ ಈ ನಿರ್ಣಯವನ್ನು ಅನುಮೋದಿಸಿತು. ಆದರೆ ಆಗ ಕಾರಾಗೃಹ ವಾಸದಲ್ಲಿ ಇದ್ದ ಶ್ರೀ ಮೋತಿಲಾಲ ನೆಹರೂ ಮತ್ತು ಶ್ರೀ ಲಾಲಾಲಜಪತರಾಯ ಇನ್ನೂ ಅನೇಕರಿಗೆ ಗಾಂಧೀಜಿಯ ಈ ಹಿನ್ನಡೆ ಸರಿ ಬರಲಿಲ್ಲ. ಮತ್ತು ಅವರನ್ನು ಬಹಿರಂಗವಾಗಿಯೇ ದೂಷಿಸಿದರು. ದಿಲ್ಲಿಯಲ್ಲಿ ೨೪-೨-೧೯೨೨ರಂದು ಸೇರಿದ ಎ.ಐ.ಸಿ.ಸಿ ಸಭೆಯಲ್ಲಿ ಗಾಂಧೀಜಿ ಅವರ ಈ ಕೃತಿಯ ಬಗ್ಗೆ ಅವರ ಮೇಲೆ ಅನೇಕ ಕಡೆಗಳಿಂದ, ವಿಶೇಷತಃ ಮಹಾರಾಷ್ಟ್ರ ಮತ್ತು ಬಂಗಾಲಗಳಿಂದ ಹಲ್ಲೆಗಳಾದವು. ಸರಕಾರೀ ಗೂಢಚಾರರು ಸಹ ಆ ಸಭೆಯಲ್ಲಿ ಸೇರಿಕೊಂಡು ಎಲ್ಲವನ್ನೂ ನಿರೀಕ್ಷಿಸುತ್ತಿದ್ದರು. ಇದುವರೆಗೆ ಬ್ರಿಟಿಷ್ ಸರಕಾರದವರು ಗಾಂಧೀಜಿಯವರನ್ನು ಸೆರೆ ಹಿಡಿಯಲು ಅನುಮಾನಿಸುತ್ತ ಇದ್ದರು. ಆದರೆ ಈಗಿನ ಪರಿಸ್ಥಿತಿ ನೋಡಿ ಮತ್ತು ಗಾಂಧೀಜಿ ಸದ್ಯ ಜನತೆಯ ಅಸಂತೋಷಕ್ಕೆ ಗುರಿಯಾಗಿರುವರೆಂದು ಭಾವಿಸಿ ಅವರನ್ನು ೧೩-೩-೧೯೨೨ರಂದು ಸರ್ಕಾರ ಬಂಧಿಸಿತು ಮತ್ತು ೧೮-೩-೧೯೨೨ರಂದು ಗಾಂಧೀಜಿಗೆ ಆರು ವರ್ಷಗಳ ಶಿಕ್ಷೆ ವಿಧಿಸಿತು.

೧೯೨೪ ಜನವರಿಯಲ್ಲಿ ಗಾಂಧೀಜಿಗೆ ಅಪೆಂಡಿಸೈಟಿಸ್ - ಕರುಳು ರೋಗದ ತೀವ್ರ ಕಾಯಿಲೆ ಆಯಿತು. ಆಗ ರಾಷ್ಟ್ರದ ಲಕ್ಷ್ಯವೆಲ್ಲ ಅವರ ಕಡೆಗೇ ಹೊರಳಿತು. ಈ ರೋಗಕ್ಕಾಗಿ

೧೨-೧-೧೯೨೪ರಂದು ಪುಣೆಯ ಸಸೂನ್ ಆಸ್ಪತ್ರೆಯಲ್ಲಿ ಗಾಂಧೀಜಿಗೆ ಶಸ್ತ್ರಚಿಕಿತ್ಸೆ ಮಾಡಲಾಯಿತು. ಮುಂದೆ ೪-೨-೧೯೨೪ರಂದು ಗಾಂಧೀಜಿ ಅವರನ್ನು ಅನಿರ್ಬಂಧ ಬಿಡುಗಡೆ ಮಾಡಲಾಯಿತು. ಈ ಎಲ್ಲ ಕಾರಣಗಳಿಂದಾಗಿ ಗಾಂಧೀಜಿಯ ಎಲ್ಲ ಚಲನವಲನಗಳೂ ಸ್ವಾಭಾವಿಕವಾಗಿಯೇ ಸ್ಥಗಿತವಾಗಿದ್ದವು.



## ಅಧ್ಯಾಯ ೨



# ಕರ್ನಾಟಕದಲ್ಲಿ ಕಾಂಗ್ರೆಸ್ – ಬೆಳಗಾಂವಿ, ೧೯೨೪

**ಕಾ**ಕಿನಾಡದಲ್ಲಿ ಕಾಂಗ್ರೆಸ್ ನಡೆದಾಗ, ಕರ್ನಾಟಕದ ಪ್ರತಿನಿಧಿಗಳು ಬಹಳ ಜನ ಹೋಗಿದ್ದರು. ಆಗ ಗಾಂಧೀಜಿ ಯರವಡಾ ಸೆರೆಮನೆಯಲ್ಲಿದ್ದರು. ಕಾಕಿನಾಡದಲ್ಲಿ, ಮುಂದಿನ ಕಾಂಗ್ರೆಸ್ (೧೯೨೪ರಲ್ಲಿ) ಕರ್ನಾಟಕದಲ್ಲಿ ನಡೆಯಬೇಕು ಎಂದು ಗೊತ್ತಾಗಿತ್ತು. ಕರ್ನಾಟಕದಿಂದ ಅಷ್ಟು ಜನ ಪ್ರತಿನಿಧಿಗಳು ಕಾಂಗ್ರೆಸ್ಸಿಗೆ ಬಂದಿದ್ದಕ್ಕೂ ಅದೇ ಕಾರಣ. ಮೊಟ್ಟಮೊದಲು ಆ ಕಾಂಗ್ರೆಸ್ಸಿನಲ್ಲಿ–ಕನ್ನಡದಲ್ಲಿ ಭಾಷಣ ಆಯಿತು. ಆ ಭಾಗ್ಯ ಶ್ರೀ ದೇಶಪಾಂಡೆ ಗಂಗಾಧರ ರಾಯರದು. ೧೫–೨೦ ನಿಮಿಷ ಮಾತನಾಡಿ, ಕಾಂಗ್ರೆಸ್ ಅಧಿವೇಶನ ಮುಂದಿನದು ಕರ್ನಾಟಕದಲ್ಲಿ ಆಗಲಿ ಎಂದು ಕರ್ನಾಟಕದ ಪರವಾಗಿ ಅವರು ಆಹ್ವಾನ ಇತ್ತರು.

ಮೌಲಾನಾ ಮಹಮ್ಮದಲಿ ಕಾಕಿನಾಡ ಕಾಂಗ್ರೆಸ್ಸಿನ ಅಧ್ಯಕ್ಷರು. ಕಾಂಗ್ರೆಸ್ಸಿಗೆ ಯಾರು ಕಾರ್ಯದರ್ಶಿಗಳಾಗಿರಬೇಕು ಎಂದು ಸೂಚಿಸುವುದು ಅಧ್ಯಕ್ಷರ ಕೆಲಸ. ಮೌಲಾನಾ ಸಾಹೇಬರು ಮೂರು ಹೆಸರನ್ನು ಸೂಚಿಸಿದರು. ಪಂಡಿತ ನೆಹರು, ಡಾ॥ ಕಿಚಲು, ದೇಶಪಾಂಡೆ ಗಂಗಾಧರರಾಯರು. ಒಂದು ಉತ್ತರ ಪ್ರದೇಶದ್ದು, ಒಂದು ಪಂಜಾಬಿನದು, ಒಂದು ಕರ್ನಾಟಕದ್ದು, ಈ ಹೆಸರುಗಳು. ಸರ್ವಾನುಮತಿಯಿಂದ ಕಾಂಗ್ರೆಸ್ ಮೂರೂ ಹೆಸರನ್ನು ಒಪ್ಪಿಕೊಂಡಿತು.

ಕರ್ನಾಟಕದಲ್ಲಿ ಮುಂದಿನ ವರ್ಷದ ಕಾಂಗ್ರೆಸ್ ನಡೆಯಬೇಕು ಎಂಬ ಆಮಂತ್ರಣ ಬಂದಾಗ ಸ್ವಯಂ ಮಹಮ್ಮದಲಿಯೇ ಅದನ್ನು ಪುಷ್ಟೀಕರಿಸಿದರು. ಅಧ್ಯಕ್ಷರೇ ಸಮರ್ಥಿಸಿದ ಮೇಲೆ ಉಳಿದ ಎಲ್ಲ ಆಮಂತ್ರಣಗಳು ಹಿಂದಕ್ಕೆ ಹೋದವು. ಕರ್ನಾಟಕದ ಆಮಂತ್ರಣಕ್ಕೆ ಸರ್ವಾನುಮತಿ ದೊರೆಯಿತು. ಬಿಜಾಪುರದ ಕಾಂಗ್ರೆಸ್ ಮುಖಂಡರು ಶ್ರೀ ಕೌಜಲಗಿ ಶ್ರೀನಿವಾಸರಾಯರು ಆ ಆಮಂತ್ರಣದ ಸೂಚನೆಯನ್ನು ಮಂಡಿಸಿದರು. ಅದು ಮಾನ್ಯವಾಯಿತು.

ಕರ್ನಾಟಕದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಸಬೇಕು – ಆದರೆ ಎಲ್ಲಿ? ಈ ಪ್ರಶ್ನೆಯನ್ನು

ಕಾಂಗ್ರೆಸ್ ತೀರ್ಮಾನಿಸಲಿಲ್ಲ. ಪ್ರಾಂತೀಯ ಕಾಂಗ್ರೆಸ್ ಸಮಿತಿಗೇ ಬಿಟ್ಟುಬಿಟ್ಟರು. ಇದು ಅಷ್ಟು ಸುಲಭವಾಗಿ ಇತ್ಯರ್ಥವಾಗುವ ಮಾತು ಅಲ್ಲ. ಸುಲಭವಾಗಿ ಸಮರಸ ಆಗಿ ತೀರ್ಮಾನ ಆಗಲೂ ಇಲ್ಲ. ಬಿಜಾಪುರದವರಿಗೆ ಬಿಜಾಪುರದಲ್ಲಿ ಅಧಿವೇಶನ ನಡೆಸಬೇಕು ಎಂಬ ಆಶೆ. ಮಂಗಳೂರಿನಲ್ಲಿ ಆಗಬೇಕು ಎಂದು ಮಂಗಳೂರಿನವರಿಗೆ. ಧಾರವಾಡದಲ್ಲಿ ಆಗಬೇಕು ಎಂದು ಧಾರವಾಡದವರಿಗೆ. ಗಂಗಾಧರರಾಯರಿಗೆ ಬೆಳಗಾಂವಿಯಲ್ಲಿ ನಡೆಸಬೇಕು ಎಂಬ ಬಯಕೆ.

ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಸಭೆ ಹುಬ್ಬಳ್ಳಿಯಲ್ಲಿ ನಡೆಯಿತು. ಆಗ ಕರ್ನಾಟಕದಲ್ಲಿ ಇದ್ದದ್ದು ಎರಡೇ ದೊಡ್ಡ ಪಟ್ಟಣ: ಒಂದು ಬೆಂಗಳೂರು, ಒಂದು ಹುಬ್ಬಳ್ಳಿ. ಆಗ ಮೈಸೂರು ಸಂಸ್ಥಾನಕ್ಕೆ ಸೇರಿದ್ದಾಗಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರು ಮಹಾರಾಜರು. ಗಾಂಧೀಜಿಗೆ ದೇಶೀ ಸಂಸ್ಥಾನಗಳಲ್ಲಿ ರಾಜಕೀಯ ಚಳವಳಿ ನಡೆಸುವುದು ಇಷ್ಟವಿರಲಿಲ್ಲ. ಆದ್ದರಿಂದ ಬೆಂಗಳೂರಲ್ಲಿ ಕಾಂಗ್ರೆಸ್ ನಡೆಸುವ ಮಾತೇ ಇರಲಿಲ್ಲ. ಉಳಿದದ್ದು ಹುಬ್ಬಳ್ಳಿ. ಹುಬ್ಬಳ್ಳಿಯೇನೋ ವ್ಯಾಪಾರ ಸ್ಥಳವೇ. ಅಲ್ಲಿ ಹತ್ತಿವ್ಯಾಪಾರ ಹೆಚ್ಚೇ. ಆದರೆ ಅಲ್ಲಿನ ಜನರಿಗೆ ಕಾಂಗ್ರೆಸ್ ನಡೆಸುವ ಮನಸ್ಸು ಇರಲಿಲ್ಲ. ಮನಸ್ಸು ಮಾಡಿದ್ದರೆ ಕಾಂಗ್ರೆಸ್ ನಡೆಸುವುದು ಅವರಿಗೆ ಕಷ್ಟ ಆಗುತ್ತಿರಲಿಲ್ಲ. ಬಳ್ಳಾರಿ, ಕಾರವಾರ ಜಿಲ್ಲೆಗಳಲ್ಲಿ ಜನರಿಗೆ ಉತ್ಸಾಹ ಕಡಿಮೆ ಇತ್ತು. ತಮ್ಮಿಂದ ಸಾಧ್ಯ ಇಲ್ಲ – ಎಂದು ಅಲ್ಲಿನ ಜನ ಹೇಳಿಬಿಟ್ಟರು. ಧಾರವಾಡದಲ್ಲಿ ಮಾಡಬೇಕು ಎಂದು ಕೆಲವರಿಗೆ ಭಾರಿ ಹುರುಪು. ಮಂಗಳೂರಿನಲ್ಲಿ ಮಾಡಬೇಕು ಎನ್ನುವ ಉತ್ಸಾಹ ಕಾರ್ನಾಡ ಸದಾಶಿವರಾಯರಿಗೆ ಇತ್ತು. ಕಾಂಗ್ರೆಸ್ಸನ್ನು ನಡೆಸಲು ಪ್ರಾರಂಭದ ವೆಚ್ಚವೇ ಕೆಲವು ಸಾವಿರ ಆಗುತ್ತದೆ. ಕಡೇ ಪಕ್ಷ ೫೦ ಸಾವಿರ ಆದರೂ ಬೇಕು. ಬೆಳಗಾಂವಿ, ಶಹಪುರದ ವರ್ತಕರನ್ನು ಕೇಳಿ, ೩೦ ಸಾವಿರ ರೂಪಾಯಿನ ವಾಗ್ದಾನ ಪಡೆದಿದ್ದರು ಗಂಗಾಧರರಾಯರು. ಆ ವರ್ತಕರು ತಮ್ಮ ವಾಗ್ದಾನವನ್ನು ಬರೆದೇ ಕೊಟ್ಟಿದ್ದರು. ಕೆಲವರಂತೂ ಈ ಸುಸಂಧಿಯನ್ನು ಕಳೆದುಕೊಳ್ಳಬಾರದು ಎಂದು ತಮ್ಮ ಆಮಂತ್ರಣವನ್ನು ಒತ್ತಾಯಿಸಲು ಪ್ರಾಂತೀಯ ಸಮಿತಿಯ ಸಭೆಗೇ ಬಂದಿದ್ದರು.

**ಪ್ರಾಂತೀಯ ಸಮಿತಿ ಸಭೆಯಲ್ಲಿ ನಿರ್ಣಯ**

ಪ್ರಾಂತೀಯ ಸಮಿತಿಯ ಸಭೆಗೆ ಬಿಜಾಪುರ, ಮಂಗಳೂರು, ಕಾರವಾರ ಜಿಲ್ಲೆಗಳ ಜನರು ಎಲ್ಲರೂ ಬಂದಿದ್ದರು. ತಮ್ಮ ತಮ್ಮ ಜಿಲ್ಲೆಯಲ್ಲಿ ಕಾಂಗ್ರೆಸ್ ನಡೆಯಬೇಕೆಂದು ಎಲ್ಲರದೂ ಭಾರಿ ಪ್ರಯತ್ನ. ಮಂಗಳೂರಿನ ಪರ ಶ್ರೀ ಕಾರ್ನಾಡ ಸದಾಶಿವರಾಯರೂ, ಬಿಜಾಪುರದ ಪರ ಶ್ರೀ ಕೌಜಲಗಿ ಶ್ರೀನಿವಾಸರಾಯರೂ ಬಹಳ ಗಟ್ಟಿಯಾಗಿ ವಾದಿಸಿದರು. ಎರಡೂ ಊರಿನದೂ ಸ್ವಲ್ಪ ಹೆಚ್ಚುಗಾರಿಕೆ ಇತ್ತು. ಬಿಜಾಪುರ ಹಿಂದಿನ ವೈಭವದ ಅವಶೇಷ. ಮಂಗಳೂರು ಸೃಷ್ಟಿ ಸೌಂದರ್ಯದ ಗಣಿ. ಬೆಳಗಾಂವಿಯಲ್ಲಿ ಈ ಎರಡೂ ಇಲ್ಲ. ಹೀಗಿದ್ದೂ ಆ ಸಭೆಯಲ್ಲಿ ಕರ್ನಾಟಕದ ಈ ಕಾಂಗ್ರೆಸ್ಸನ್ನು ಬೆಳಗಾಂವಿಯಲ್ಲೇ ನಡೆಸಬೇಕು ಎಂದು ತೀರ್ಮಾನ ಆಯಿತು. ಅದರಂತೆ ಬೆಳಗಾಂವಿಯಲ್ಲಿ ಸರ್ವಸಿದ್ಧತೆಗಳೂ ಆಗತೊಡಗಿದವು.

ಈ ಸಂದರ್ಭದಲ್ಲಿ ಅಂದಿನ ರಾಜಕೀಯ ವಿಶೇಷವಾಗಿ ಕಾಂಗ್ರೆಸ್ಸಿನ ಪರಿಸ್ಥಿತಿಯು ಹೇಗಿತ್ತು ಎಂಬುದನ್ನು ಸ್ವಲ್ಪ ನೋಡೋಣ.

**ಅಂದಿನ ರಾಜಕೀಯ ಪರಿಸ್ಥಿತಿ**

ಗಾಂಧೀಜಿ ಜೈಲಿಗೆ ಹೋದ ನಂತರ ಹೊರಗೆ ದೇಶದಲ್ಲಿ ಅಸಹಕಾರದ ಆಂದೋಲನದ ಕಸುವು ಕುಗ್ಗುತ್ತ ಬಂತು. ಅಲ್ಲಲ್ಲಿ ಜಾತೀಯ ದಂಗೆಗಳು ಮತ್ತೆ ತಲೆ ಎತ್ತಿದವು. ಸಿ.ಆರ್.ದಾಸ್ ಮತ್ತು ಮೋತಿಲಾಲ ನೆಹರು ಮೊದಲಾದ ನಿಸ್ಸೀಮ ದೇಶಭಕ್ತರು ಕೌನ್ಸಿಲ್ ಪ್ರವೇಶಮಾಡಿ ಅಲ್ಲಿಯೇ ಅಸಹಕಾರ ಪ್ರಾರಂಭಿಸಬೇಕೆಂಬ ನಿರ್ಧಾರಕ್ಕೆ ಬಂದರು. ೧೯೨೨ರಲ್ಲಿ ಗಯಾದಲ್ಲಿ ಸಿ.ಆರ್.ದಾಸರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಸಿ.ಆರ್. ದಾಸರು ಕಾಂಗ್ರೆಸ್ ಅಧಿವೇಶನ ಮುಗಿದ ಕೂಡಲೆ ತಮ್ಮ ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆ ಕೊಟ್ಟು ೧೯೨೨ರಲ್ಲಿ ಸ್ವರಾಜ್ಯ ಪಕ್ಷ ಸ್ಥಾಪಿಸಿದರು. ಮುಂದೆ ಬರಬರುತ್ತ ದೇಶದಲ್ಲಿ ವಿಚಾರವಂತ ಜನರಿಂದ ಈ ಪಕ್ಷಕ್ಕೆ ಬೆಂಬಲ ದೊರೆಯತೊಡಗಿತು. ೧೯೨೩ರಲ್ಲಿ ಕಾಕಿನಾಡಾದಲ್ಲಿ ಸೇರಿದ ಕಾಂಗ್ರೆಸ್ಸಿನ ಅಧ್ಯಕ್ಷತೆಯನ್ನು ಮಹಮ್ಮದಲಿ ಅವರು ವಹಿಸಿದರು. ಈ ಕಾಲಕ್ಕೆ ಕೌನ್ಸಿಲ್ ಪ್ರವೇಶದ ಬಗೆಗೆ ತೀವ್ರ ಭಿನ್ನಾಭಿಪ್ರಾಯಗಳಾಗಿ ಕಾಂಗ್ರೆಸ್ಸಿನಲ್ಲಿ ಎರಡು ಬಣಗಳಾದವು. ಒಂದು, ಪರಿವರ್ತನ ಪಕ್ಷ (ಪ್ರೋ ಚೇಂಜರ್ಸ್), ಇನ್ನೊಂದು ಅಪರಿವರ್ತನ ಪಕ್ಷ (ನೋ ಚೇಂಜರ್ಸ್). ಪರಿವರ್ತನ ಪಕ್ಷದಲ್ಲಿ ಸಿ.ಆರ್. ದಾಸ್ ಮತ್ತು ಮೋತಿಲಾಲ್ ನೆಹರು ಮೊದಲಾದವರೂ, ಅಪರಿವರ್ತನ ಪಕ್ಷದಲ್ಲಿ ಬಾಬುರಾಜೇಂದ್ರ ಪ್ರಸಾದ, ರಾಜಗೋಪಾಲಾಚಾರ್ಯ, ವಲ್ಲಭಭಾಯಿ ಪಟೇಲ್, ಗಂಗಾಧರರಾವ್ ದೇಶಪಾಂಡೆ ಮೊದಲಾದವರೂ ಇದ್ದರು. ಇವರೆಲ್ಲರೂ ನಖಶಿಖಾಂತ ದೇಶಭಕ್ತರೇ ಆಗಿದ್ದರು. ಇದರಿಂದಾಗಿ ಜನರು ಯಾರನ್ನು ಹಿಂಬಾಲಿಸಬೇಕು ಎಂಬುದು ತಿಳಿಯದೆ ಗೊಂದಲದಲ್ಲಿ ಬಿದ್ದಿದ್ದರು. ಇಷ್ಟೆ ಅಲ್ಲ, ಕಾಂಗ್ರೆಸ್ಸೇ ಎಲ್ಲಿ ಒಡೆದು ಹೋಗುವದೋ ಎಂಬ ಭೀತಿಯೂ ತಲೆದೋರಿತು. ಬಹು ಜನರ ಬೆಂಬಲ ಕೌನ್ಸಿಲ್ ಪ್ರವೇಶದ ಪರವಾಗಿಯೇ ಬೆಳೆಯತೊಡಗಿತು. ಇಷ್ಟೇ ಅಲ್ಲ, ೧೯೨೪ರ ಪ್ರಾರಂಭದ ಹೊತ್ತಿಗೆ, ಅಸಹಕಾರದ ಆಂದೋಲನಕ್ಕೂ ಗಾಂಧೀವಾದಕ್ಕೂ ತಿಲಾಂಜಲಿ ಕೊಟಂತಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ದೇಶಕ್ಕೆ ಮಾರ್ಗದರ್ಶನ ಮಾಡಲೋ ಏನೋ ಎಂಬಂತೆ ಸೆರೆಮನೆಯಿಂದ ಗಾಂಧೀಜಿಯ ಬಿಡುಗಡೆ ಆಯಿತು. ಯಾವುದೇ ಮಹತ್ವದ ಕಾರ್ಯವನ್ನು ದೊಡ್ಡವರೇ ಪ್ರಾರಂಭಿಸಬಲ್ಲರು, ಮತ್ತು ಅದರಲ್ಲಿ ಬರುವ ಅಡೆತಡೆಗಳನ್ನು ಅವರೇ ನಿವಾರಿಸಬಲ್ಲರು. ಆಗ ಕಾಂಗ್ರೆಸ್ಸಿನಲ್ಲಿ ಉದ್ಭವಿಸಿದ ಮತ ಭೇದವನ್ನು ಗಾಂಧೀಜಿ ಅಲ್ಲದೆ ಮತ್ತಾರು ನಿವಾರಿಸಬಹುದಿತ್ತು? ಇಂಥ ಪರಿಸ್ಥಿತಿಯಲ್ಲಿ ಗಾಂಧೀಜಿ ಅಂಥವರೇ ಕಾಂಗ್ರೆಸ್ಸಿನ ಅಧ್ಯಕ್ಷರಾಗುವ ಅವಶ್ಯಕತೆ ಇತ್ತು; ಮತ್ತು ಆ ಮೇರೆಗೆ ಗಾಂಧೀಜಿಯೇ ೧೯೨೪ರಲ್ಲಿ ಬೆಳಗಾಂವಿ ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಈ ದೃಷ್ಟಿಯಿಂದ, ಬೆಳಗಾಂವ ಕಾಂಗ್ರೆಸ್ಸು ಅಸಹಕಾರದ ಇತಿಹಾಸದಲ್ಲಿ ಒಂದು ಮಹತ್ವಪೂರ್ಣವಾದ ಘಟ್ಟವಾಗಿದೆ. ಇದರ ವಿವರ ಮುಂದೆ ಬರುವದು.

ಈ ಸಂದರ್ಭದಲ್ಲಿ ಎಲ್ಲರನ್ನೂ ಗಾಬರಿಗೊಳಿಸುವಂಥ ಒಂದು ಸುದ್ದಿ ಬಂತು. ಪೂನಾದಲ್ಲಿ

ಗಾಂಧೀಜಿಗೆ ಅಪೆಂಡಿಸೈಟಿಸ್ ಕರುಳು ರೋಗಕ್ಕೆ ಶಸ್ತ್ರಚಿಕಿತ್ಸೆ ಎಂದು ಸುದ್ದಿ ಬಂದು. ಸಸೂನ್ ಆಸ್ಪತ್ರೆಯಲ್ಲಿ ಗಾಂಧೀಜಿಗೆ ಈ ಚಿಕಿತ್ಸೆ ನಡೆಯಿತು. ಕರ್ನಲ್ ಮ್ಯಾಡಾಕ್ ಚಿಕಿತ್ಸೆ ನಡೆಸಿದರು. ಚಿಕಿತ್ಸೆ ನಡೆಯುವ ಹೊತ್ತಿಗೆ ಸರಿಯಾಗಿ ವಿದ್ಯುತ್ ದೀಪ ಆರಿಹೋದವು. ದೊಡ್ಡ ಅಪಶಕುನ. ಒಂದು ಕಂದೀಲಿನ ಬೆಳಕಿನಲ್ಲೇ ಚಿಕಿತ್ಸೆ ಮಾಡಿದರು. ದೇವರ ದಯೆ ! ಶಸ್ತ್ರಚಿಕಿತ್ಸೆ ಯಶಸ್ವಿ ಆಯಿತು.

ಈ ಸುದ್ದಿ ಕೇಳಿ ಕಾಂಗ್ರೆಸ್ ಕಾರ್ಯದರ್ಶಿ ಆಗಿದ್ದ ಗಂಗಾಧರರಾಯರು ಪೂನಾಕ್ಕೆ ಓಡಿದರು. ರೈಲಿಳಿದವರೇ ನೆಟ್ಟಗೆ ಗಾಂಧೀಜಿ ಇದ್ದ ಸಸೂನ್ ಆಸ್ಪತ್ರೆಗೆ ಹೋದರು. ಅವರ ಪರಿಸ್ಥಿತಿ, ಅವರ ಆರೋಗ್ಯ ಸುಧಾರಿಸುತ್ತಿದ್ದುದನ್ನು ಕಂಡು ಆನಂದಪಟ್ಟರು. ಗಾಂಧೀಜಿ ಆಗಿನ್ನೂ ಕೈದಿ. ಅವರ ಮೇಲೆ ಪೊಲೀಸರ ಕಾವಲಿತ್ತು. ಆದರೂ ಅವರನ್ನು ಕಾಣಬಯಸುವ ಬಂಧು-ಬಾಂಧವರನ್ನು ಅವರ ಭೆಟ್ಟಿಗೆ ಬಿಡುತ್ತಿದ್ದರು. ಕೆಲವು ದಿನಗಳ ಮೇಲೆ ಅವರ ಆರೋಗ್ಯ ಉತ್ತಮಗೊಂಡಿತು. ಅಲ್ಲಿಯವರೆಗೂ ಪೂನಾದಲ್ಲೇ ಇದ್ದು, ಆಮೇಲೆ ಊರಿಗೆ ಬಂದರು ಗಂಗಾಧರರಾಯರು.

ಗಾಂಧೀಜಿ ಶಿಕ್ಷೆಯ ಅವಧಿಗಿಂತ ಮೊದಲೇ ೫-೨-೧೯೨೪ರಂದು ಅನಿರ್ಬಂಧ ಬಿಡುಗಡೆ ಹೊಂದಿದರು. ಮತ್ತೊಮ್ಮೆ ಪ್ರಾಂತೀಯ ಸಭೆ ಹುಬ್ಬಳ್ಳಿಯಲ್ಲಿ ನಡೆದು, ಬೆಳಗಾಂವಿಯಲ್ಲೇ ಕಾಂಗ್ರೆಸ್ ನಡೆಯಬೇಕೆಂದು ಹಿಂದಿನ ತೀರ್ಮಾನ ಸ್ಥಿರ ಆಯಿತು. ಸ್ವಾಗತಾಧ್ಯಕ್ಷರಾಗಿ ಗಂಗಾಧರರಾಯರೇ ಆರಿಸಿ ಬಂದರು. ಮಧ್ವರಾವ್ ಕೆಂಭಾವಿ, ಭೀಮರಾವ್ ಪೋತದಾರ್, ಬಾಬಾ ಸಾಹೇಬ್ ಸೋಮಣ್ – ಈ ಮೂವರೂ ಕಾರ್ಯದರ್ಶಿಗಳು. ಅಧಿವೇಶನದ ಕಾಲಕ್ಕೆ ಸ್ವಯಂಸೇವಕರ ಪಥಕವನ್ನು ಕೂಡಿಸುವ ಕೆಲಸವನ್ನು ಡಾ॥ ಹರ್ಡೀಕರರ ಹಿಂದೂಸ್ತಾನಿ ಸೇವಾದಲಕ್ಕೆ ಒಪ್ಪಿಸಿದರು. ಕಾಕಿನಾಡಾದ ಕಾಂಗ್ರೆಸ್ಸಿನಲ್ಲೇ ಹಿಂದೂಸ್ತಾನಿ ಸೇವಾದಲ ಜನ್ಮತಾಳಿತ್ತು. ಅದಕ್ಕೂ ಕಾಂಗ್ರೆಸ್ಸಿಗೂ ಒಂದು ನಂಟು ಏರ್ಪಟ್ಟಿತ್ತು. ಸ್ವಾಗತಾಧ್ಯಕ್ಷರಾದ ದೇಶಪಾಂಡೆ ಗಂಗಾಧರರಾಯರ ಆತ್ಮಕಥೆಯಿಂದ ಮುಂದಿನ ಸಂಗತಿಗಳನ್ನು ಎತ್ತಿಕೊಳ್ಳೋಣ.

"ಕಾಂಗ್ರೆಸ್ ಶಿಬಿರದ ರಚನೆ ಮುಂತಾದವನ್ನು ಸಿದ್ಧಗೊಳಿಸುವ ಕೆಲಸವನ್ನು ನಮ್ಮ ಗೆಳೆಯರಾದ ವಿ.ಕೃಷ್ಣರಾವ್ ಅವರ ಸಲಹೆಯಿಂದ ಮಾಡಲಾಗಿತ್ತು. ಹೊಸ ವಿಸ್ತರಣಕ್ಕಾಗಿ (ಬೆಳಗಾಂವಿಯ) ಪುರಸಭೆ ಹೊಸ ಬೀದಿಗಳನ್ನು ರಚಿಸಬೇಕಾಗಿತ್ತು. ಕಾಂಗ್ರೆಸ್ ಸೇರುವ ಮೊದಲೇ ಬೀದಿಗಳನ್ನು ಪೂರ್ಣ ರಚಿಸಿಕೊಡುವುದಾಗಿ ಪುರಸಭೆ ಒಪ್ಪಿಕೊಂಡಿತ್ತು. ಈ ಬೀದಿಗಳ ಸಾಲು ಹಿಡಿದೇ ನಮ್ಮ ಶಿಬಿರವನ್ನು ರಚಿಸಿದ್ದೆವು. ಅದರಿಂದ ಬೀದಿ, ಬಚ್ಚಲು, ಇತ್ಯಾದಿಗಳನ್ನು ಕಟ್ಟುವ ಖರ್ಚು ಹೊರಗಿನಿಂದ ಹೊರಗೇ ಹೋಯಿತು. ಬೆಳಗಾಂವಿಯಲ್ಲಿ ಮಳೆಗಾಲ ಹೆಚ್ಚಾಗಿ ಇರುವುದರಿಂದ ಪ್ರತ್ಯಕ್ಷರಚನೆಯ ಕೆಲಸಕ್ಕೆ ತೊಡಗುವುದು ಅಷ್ಟೊಂದು ಸುಲಭ ಅಲ್ಲ. ಆದರೂ ದೊಡ್ಡಗಳ, ಬಿದಿರು, ಕಂಭ – ಇತ್ಯಾದಿ ಅಡವಿಯ ಸಾಮಾನುಗಳು ಹತ್ತಿರದ ಯಾವ ಅಡವಿಯಲ್ಲಿ ಸಿಕ್ಕುತ್ತವೆ ಎಂಬುದನ್ನು ಗೊತ್ತುಮಾಡಿಕೊಂಡು, ದಸರೆಯನಂತರ ಅವನ್ನು ಕೂಡಿಸುವ ವ್ಯವಸ್ಥೆ ಮಾಡಿದ್ದೆವು. ಈ ಸಾಮಾನುಗಳನ್ನು ಸಹ ಪೇಟೆಯಲ್ಲಿ

ಕೊಂಡುಕೊಳ್ಳದೆ ಅರಣ್ಯದಲ್ಲಿಯೇ ಸುಂಕಕೊಟ್ಟು ನಾವೇ ಕಡಿದು ತರಿಸುವ ವ್ಯವಸ್ಥೆ ಮಾಡಿದ್ದೆವು. ಇದರಿಂದ ಗುತ್ತಿಗೆದಾರರಿಗೆ ಮತ್ತು ವ್ಯಾಪಾರಸ್ಥರಿಗೆ ದೊರೆಯುತ್ತಿದ್ದ ಲಾಭವು ಉಳಿಯಿತು. ಕಾಕಿನಾಡದಲ್ಲಿ ಪ್ರತಿಸಲದಂತೆ ಮಂಟಪವನ್ನು ಹಾಕದೇ ಒಂದು ಡೇರೆಯನ್ನು ನಿಲ್ಲಿಸಿದ್ದರು. ಅದನ್ನೇ ನಾವು ಕೊಂಡುಕೊಂಡೆವು. ಅದರಿಂದ ಮಂಟಪದ ಖರ್ಚಿನಲ್ಲಿ ಸಾಕಷ್ಟು ಉಳಿತಾಯ ಆಯಿತು. ಈ ರೀತಿ ಪ್ರತಿಯೊಂದು ವಿಷಯದಲ್ಲಿಯೂ ಕೈಬಿಗಿಹಿಡಿದು ವೆಚ್ಚಮಾಡುವ ಧೋರಣೆಯನ್ನು ಮೊದಲಿನಿಂದಲೇ ನಿಶ್ಚಯಿಸಿದ್ದೆವು. ಕರ್ನಾಟಕದಲ್ಲಿಯ ಜನರು ಉದಾರ ಹಸ್ತದಿಂದ ಸಹಾಯಮಾಡಿ ಕಾಂಗ್ರೆಸ್ಸನ್ನು ಯಶಸ್ವಿಯಾಗಿ ಮಾಡುತ್ತಾರೆಂದು ನನ್ನ ನಂಬಿಕೆ ಇತ್ತು. ಅದಕ್ಕಾಗಿ ಮೇಲಿಂದ ಮೇಲೆ ಅವರ ಬೆನ್ನು ಹತ್ತುವುದು ಅವಶ್ಯ ಇತ್ತು. ಆದುದರಿಂದ ಆದಷ್ಟು ಬೇಗ ಸ್ವಾಗತಸಮಿತಿಯ ಸದಸ್ಯರಾಗಿ ಕಾಂಗ್ರೆಸ್ಸಿಗೆ ಆರ್ಥಿಕ ಸಹಾಯ ಮಾಡಬೇಕೆಂದು ಒಂದು ಬಿನ್ನಹ ಪತ್ರವನ್ನು ಪತ್ರಿಕೆಗಳಲ್ಲಿ ನಾನು ಪ್ರಸಿದ್ಧ ಮಾಡಿದೆನು. ಅದನ್ನು ವಲ್ಲಭಭಾಯಿಯವರು ನೋಡಿದರು. ನನಗೆ ಹಣದಕೊರತೆ ಬಹಳ ಇದೆಯೆಂದು ತಿಳಿದು ಏನಾದರೂ ಸಹಾಯ ಮಾಡಬೇಕೇ ಎಂದು ಅವರು ನನ್ನನ್ನು ವಿಚಾರಿಸಿದರು. ಆದರೆ ಹೊರಗಿನಿಂದ ಸಹಾಯ ತೆಗೆದುಕೊಳ್ಳುವ ಪರಿಸ್ಥಿತಿ ಇಲ್ಲವೆಂದು ನಾನು ಅವರಿಗೆ ತಿಳಿಸಿದೆನು."

**ಗಾಂಧೀಜಿ – ಬೆಳಗಾಂವಿ ಕಾಂಗ್ರೆಸ್ಸಿನ ಅಧ್ಯಕ್ಷರು**

ಈ ಮಧ್ಯೆ ಭಾರತದ ಹಿಂದೂ–ಮುಸಲ್ಮಾನರಲ್ಲಿ ಪರಸ್ಪರ ತಿಳಿವಳಿಕೆ ಕಡಿಮೆ ಆಗಿ, ವೈಷಮ್ಯ ಹೆಚ್ಚು ಆಗಿ ಅಲ್ಲಲ್ಲಿ ದಂಗೆ – ದೊಂಬಿ ಆದವು. ಇದನ್ನು ವಿವರವಾಗಿ ಕೂಲಂಕಷವಾಗಿ ತಿಳಿದುಕೊಳ್ಳಲು ಗಾಂಧೀಜಿ ಮತ್ತು ಶೌಕತ್ ಆಲಿ ದೇಶಾದ್ಯಂತ ಒಟ್ಟಿಗೆ ಪ್ರವಾಸ ಮಾಡಿದರು. ಹಿಂದೂ – ಮುಸಲ್ಮಾನರ ಸಂಬಂಧ ಸರಿಹೋಗಲಿಲ್ಲ. ಇಷ್ಟೆಲ್ಲ ಕಾರಣಗಳಿಂದ ಗಾಂಧೀಜಿ ಸೆಪ್ಟೆಂಬರಿನಲ್ಲಿ ೨೧ ದಿನ ಉಪವಾಸ ಮಾಡಲು ತೀರ್ಮಾನಿಸಿದರು. ದಿಲ್ಲಿಯಲ್ಲಿ ಆಗ ಅವರು ಮಹಮ್ಮದಲಿಯ ಮನೆಯಲ್ಲಿ ಇಳಿದುಕೊಂಡಿದ್ದರು. ಅಲ್ಲಿಯೇ ನಡೆಯಿತು ಈ ಐಕ್ಯತೆಯ ಉಪವಾಸ. ಆ ಸಂದರ್ಭದಲ್ಲಿ ಒಂದು ಸರ್ವಪಕ್ಷ ಸಮ್ಮೇಳನ ದಿಲ್ಲಿಯಲ್ಲಿ ನಡೆಯಿತು. ಎಲ್ಲ ಪಕ್ಷದವರೂ ಎಲ್ಲ ಪ್ರಸಿದ್ಧ ವ್ಯಕ್ತಿಗಳು ಅಲ್ಲಿಗೆ ಬಂದಿದ್ದರು. ಆ ಸಮ್ಮೇಳನವನ್ನು Unity Conference ಅಥವಾ 'ಐಕ್ಯತಾ ಸಮ್ಮೇಳನ' ಎಂದು ಕರೆದರು. ಕರ್ನಾಟಕವೂ ಅದರಲ್ಲಿ ಪಾಲುಗೊಂಡಿತ್ತು. ದೇಶಪಾಂಡೆ ಗಂಗಾಧರರಾಯರು ಹೋಗಿದ್ದರು ಕರ್ನಾಟಕದ ಪರವಾಗಿ, ಅದರಲ್ಲಿ ಐಕ್ಯತೆಯ ತೀರ್ಮಾನ ಆಯಿತು.

ಅಲ್ಲಿಂದ ಮುಂದೆ ಅಹಮದಾಬಾದಿಗೆ ಬಂದರು ಗಾಂಧೀಜಿ. ಅಲ್ಲಿ ಅಖಿಲಭಾರತ ಚರಖಾ ಸಂಘದ ಸಭೆ. ಕರ್ನಾಟಕದಲ್ಲಿ ಚರಖಾ ಸಂಘದ ಪ್ರತಿನಿಧಿ ಆಗಿದ್ದ ಗಂಗಾಧರರಾಯರೂ ಆ ಸಭೆಗೆ ಹೋಗಿದ್ದರು. ಬೆಳಗಾಂವಿಯ ಕಾಂಗ್ರೆಸ್ ಅಧಿವೇಶನಕ್ಕೆ ತಾವು ಅಧ್ಯಕ್ಷರು ಆಗಬೇಕು ಎಂದು ಗಾಂಧೀಜಿಯನ್ನು ಗಂಗಾಧರರಾಯರು ಕೇಳಿಕೊಂಡರು. ಆ ವೇಳೆಗೆ ಆಗಲೇ ಎಲ್ಲ ಪ್ರಾಂತೀಯ ಕಾಂಗ್ರೆಸ್ ಸಂಸ್ಥೆಗಳೂ ಗಾಂಧೀಜಿಯ ಹೆಸರನ್ನೇ ಸೂಚಿಸಿದ್ದವು. ಗಾಂಧೀಜಿ ಮಾತ್ರ ಆಗ ಈ ಸೂಚನೆಗೆ ಒಪ್ಪಿರಲಿಲ್ಲ. ಮುಂದೆ ತಿಳಿಸುತ್ತೇನೆ ಯೋಚಿಸಿ ಎಂದು ಹೇಳಿಬಿಟ್ಟರು. ಇದು ನಡೆದ ಕೆಲವು ದಿನಗಳಲ್ಲಿಯೇ ಬೊಂಬಾಯಿಯಲ್ಲಿ

ಒಂದು ಸರ್ವಪಕ್ಷೀಯ ಸಮ್ಮೇಳನ ನಡೆಯಿತು. ಆ ಸಮ್ಮೇಳನದಲ್ಲಿ ಬಹಳ ಮಟ್ಟಿಗೆ ಏಕವಾಕ್ಯತೆ ಕಂಡುಬಂತು ರಾಜಕಾರಣಿಗಳಲ್ಲಿ. ಆದ್ದರಿಂದ ಗಾಂಧೀಜಿ ಕರ್ನಾಟಕದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಲು ಒಪ್ಪಿದರು. ಅವರು ಅಲ್ಲದೆ ಬೇರೆ ಯಾರೂ ಆಗ ಕಾಂಗ್ರೆಸ್ ಅಧ್ಯಕ್ಷ ಪೀಠವನ್ನು ಏರಿ, ದೇಶದಲ್ಲಿ ಐಕಮತ್ಯವನ್ನು ಸಾಧಿಸಲು ಸಾಧ್ಯ ಇರಲಿಲ್ಲ.

ಇದರಿಂದ ಕರ್ನಾಟಕದ ಜನರಲ್ಲಿ ಹುರುಪು ಹೆಚ್ಚಾಗಿ ಬಂದು ಬೇಗ ಬೇಗ ಕೆಲಸ ನಡೆಯುವಂತೆ ಆಯಿತು. ಬೆಳಗಾಂವಿ, ಧಾರವಾಡ, ಬಳ್ಳಾರಿ, ಕಾರವಾರ ಜಿಲ್ಲೆಗಳಿಂದ ಸಾಕಷ್ಟು ಧನಸಹಾಯವೂ ದೊರೆಯಿತು. ಆಗ ಮೈಸೂರು ದೇಶೀ ಸಂಸ್ಥಾನ. ಇಲ್ಲಿ ಅ.ಭಾ.ಕಾಂಗ್ರೆಸ್ಸಿನ ಕಾರ್ಯಕಲಾಪಗಳು ನಡೆಯುವಂತಿರಲಿಲ್ಲ. ಸ್ವಯಂ ಗಾಂಧೀಜಿಯ ಅದಕ್ಕೆ ವಿರುದ್ಧ. ಸಂಸ್ಥಾನದ ಜನ ಹೊರಗಿನ ಬ್ರಿಟಿಷ್ ಪ್ರಾಂತಗಳ ಪ್ರಾಂತೀಯ ಕಾಂಗ್ರೆಸ್ಸಿನ ಸದಸ್ಯರಾಗಿ ಅಲ್ಲಿನ ಚಳವಳಿಗಳಲ್ಲಿ ಭಾಗವಹಿಸಬೇಕಾಗಿತ್ತು. ಇಲ್ಲಿನ ಉತ್ಸಾಹೀ ತರುಣರು ಅದೇ ದಾರಿ ಹಿಡಿದರು. ನಾಗಪುರದಲ್ಲಿ ನಡೆದ ಧ್ವಜಸತ್ಯಾಗ್ರಹಕ್ಕೆ (೧-೫-೧೯೨೩), ಕರ್ನಾಟಕದಿಂದ ಅನೇಕ ಮಂದಿ ಕಾರ್ಯಕರ್ತರು ಹೋಗಿದ್ದರು. ಅವರಲ್ಲಿ ಪ್ರಮುಖರು ಡಾ॥ ಹರ್ಡೀಕರರು. ಶ್ರೀನಿವಾಸರಾವ ಜೋಗ ಇವರು. ಧಾರವಾಡ, ಬೆಂಗಳೂರು ಮುಂತಾದ ಕಡೆಗಳಿಂದ ಹಲವಾರು ಕಾರ್ಯಕರ್ತರು ಆ ಸತ್ಯಾಗ್ರಹಕ್ಕೆ ಹೋಗಿದ್ದರು. ನಾಗಪುರದ ಸಿವಿಲ್ ಲೈನಿನಲ್ಲಿ ಕಾಂಗ್ರೆಸ್ ಧ್ವಜ ಹಿಡಿದುಕೊಂಡು ಹೋಗಕೂಡದು ಎಂದು ಪ್ರತಿಬಂಧಕ ಆಜ್ಞೆಯನ್ನು ಹೊರಡಿಸಿತ್ತು ಅಂದಿನ ಸರಕಾರ. ಆ ಕಾರಣದಿಂದ ಅಲ್ಲಿ ಸತ್ಯಾಗ್ರಹ ಪ್ರಾರಂಭವಾಗಿತ್ತು. ಸ್ವರ್ಗೀಯ ಸೇಠ ಜಮುನಾಲಾಲ ಬಜಾಜರು ಆ ಸತ್ಯಾಗ್ರಹಕ್ಕೆ ಮುಂದಾಳು. ಅವರು ಸೆರೆ ಆದಮೇಲೆ ವಲ್ಲಭಭಾಯಿಯವರೇ ಅದಕ್ಕೆ ನಾಯಕರು ಆದರು. ನಾಗಪುರದಲ್ಲಿ ಜುಲೈ ೧೮, ೧೯೨೩ಕ್ಕೆ ಝುಂಡಾ ಸತ್ಯಾಗ್ರಹ ಯಶಸ್ವಿಯಾಗಿ ಮುಕ್ತಾಯಗೊಂಡಿತು. ಆಗ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾಗಿದ್ದ ಮೌಲಾನಾ ಮಹಮ್ಮದಲಿ ಬಿಜಾಪುರ ಜೈಲಿನಲ್ಲಿದ್ದರು. ಅವರ ಬಿಡುಗಡೆ ಆದಮೇಲೆ ಕೌಜಲಗಿ ಶ್ರೀನಿವಾಸರಾಯರು ಹೊರಗೆ ಬಂದರು. ಅವರು ಹೊರಗೆ ಬಂದಮೇಲೆ ಬಿಜಾಪುರದಲ್ಲಿ ಪ್ರಾಂತೀಯ ಪರಿಷತ್ತು ನಡೆಯಿತು. ಅದಕ್ಕೆ ಶ್ರೀ ಶ್ರೀನಿವಾಸರಾವ ಕೌಜಲಗಿಯವರೇ ಸ್ವಾಗತಾಧ್ಯಕ್ಷರು. ಅಧ್ಯಕ್ಷರು ಚಕ್ರವರ್ತಿ ರಾಜಗೋಪಾಲಾಚಾರ್ಯರು.

೧೯೨೪ ಡಿಸೆಂಬರ್‌ನಲ್ಲಿ ಬೆಳಗಾಂವಿಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಕಾಂಗ್ರೆಸ್ಸಿನ ಇತಿಹಾಸ ಬರೆದ ಸುಪ್ರಸಿದ್ಧ ಇತಿಹಾಸಜ್ಞ, ಲೇಖಕ, ವಿಮರ್ಶಕ, ಕಾಂಗ್ರೆಸ್ ಅಧ್ಯಕ್ಷ ಆದ ಡಾ॥ ಪಟ್ಟಾಭಿ ಸೀತಾರಾಮಯ್ಯನವರು ತಮ್ಮ 'ರಾಷ್ಟ್ರೀಯ ಕಾಂಗ್ರೆಸ್ಸಿನ ಇತಿಹಾಸ' ಎಂಬ ಪುಸ್ತಕದಲ್ಲಿ ಬೆಳಗಾಂವಿಯ ಕಾಂಗ್ರೆಸ್ ಬಗ್ಗೆ ಹೀಗೆ ಬರೆದಿದ್ದಾರೆ:

"ಅಸಹಕಾರದ ಇತಿಹಾಸದಲ್ಲಿ ಬೆಳಗಾಂವಿಯ ಕಾಂಗ್ರೆಸ್ ಒಂದು ಮುಖ್ಯ ಘಟ್ಟ. ಗಾಂಧೀವಾದದ ಬಹಿಷ್ಕಾರ ಪದ್ಧತಿ ವಿರುದ್ಧ ಎದ್ದಿದ್ದ ಬಂಡು ಅಲ್ಲಿ ಶಾಂತವಾಯಿತು. ಕಾಂಗ್ರೆಸ್ ಎರಡು ಬಣ ಆಗಿ ಕವಲು ಒಡೆಯುವಂತೆ ಇತ್ತು. ಕಾಂಗ್ರೆಸ್ಸಿಗರು ಹೀಗೆ ಎರಡು ಗುಂಪು ಆಗಿ ಪರಸ್ಪರ ವಿರುದ್ಧ ನಿಲ್ಲಬೇಕೆ ಅಥವಾ ಏನಾದರೂ ಒಪ್ಪಂದ ಮಾಡಿಕೊಂಡು,

ತಮ್ಮ ಭೇದಗಳನ್ನು ಪಕ್ಕಕ್ಕೆ ಸರಿಸಬೇಕೇ?" ಹಾಗೆ ಒಪ್ಪಂದ ಮಾಡಿಸಬೇಕು ಎಂದರೆ ಅಂಥ ಒಪ್ಪಂದವನ್ನು ಮಾಡಿಸಬಲ್ಲ ಸಮರ್ಥರು ಗಾಂಧೀಜಿ ಒಬ್ಬರೇ – ಬೇರೆ ಯಾರೂ ಇರಲಿಲ್ಲ. ಅವರಿಗಿಂತ ಸಮರ್ಥರು ಯಾರು ಈ ಕೆಲಸಕ್ಕೆ. ಇತ್ತ ಸವಿನಯ ಶಾಸನಭಂಗವನ್ನು ನಿಲ್ಲಿಸಲೂ ಬೇಕು, ಅತ್ತ ಸತ್ಯಾಗ್ರಹಿ ಅನುಯಾಯಿಗಳಿಗೆ ಮನಸ್ಸು ಕಹಿ ಆಗಲೂಬಾರದು. ಇದನ್ನು ಮಾಡಲು ಕೇವಲ ಗಾಂಧೀಜಿಗೆ ಮಾತ್ರವೇ ಸಾಧ್ಯ. ಶಾಸನ ಸಭಾಪ್ರವೇಶವನ್ನು ವಿರೋಧಿಸಲೂ ಬೇಕು. ಆದರೆ ಸ್ವರಾಜ್ಯ ಪಕ್ಷಕ್ಕೆ ಸ್ವಲ್ಪವೂ ಗಾಸಿ ಆಗಲೂಬಾರದು. ಯಾವುದಾದರೂ ಮಹಾಕಾರ್ಯಕ್ರಮವನ್ನು ಪ್ರಾರಂಭಿಸಲು ಮಹಾಪುರುಷರೇ ಬೇಕು. ಅಂಥ ಮಹಾಕಾರ್ಯಕ್ರಮವನ್ನು ಉಪಸಂಹರಿಸಲೂ ಮಹಾಪುರುಷರೇ ಬೇಕು. ಬೇರೆ ಯಾರಿಗೂ ಸಾಧ್ಯ ಅಲ್ಲ. ಆದ್ದರಿಂದ ಬೆಳಗಾಂವಿ ಕಾಂಗ್ರೆಸ್ಸಿಗೆ ಗಾಂಧೀಜಿ ಅಧ್ಯಕ್ಷರಾದುದು ಆ ಕಾಲದ ದೃಷ್ಟಿಯಿಂದ ಅತ್ಯಂತ ಯೋಗ್ಯ."

'ಬೆಳಗಾಂವಿಯ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿಯ ಅಧ್ಯಕ್ಷಭಾಷಣ ಪುಟ್ಟದು. ಅದನ್ನು ಸಭೆಗೆ ಮೊದಲೇ ಹಂಚಿಬಿಟ್ಟರು. ಅದರ ಸಾರಾಂಶವನ್ನು ಮಾತ್ರ ಬಾಯಲ್ಲಿ ಹೇಳಿದರು ಗಾಂಧೀಜಿ. ಸುಮಾರು ಅರ್ಧ ಘಂಟೆ ಹಿಡಿಸಿತು ಅಧ್ಯಕ್ಷ ಭಾಷಣಕ್ಕೆ. ಸ್ವಾಗತಾಧ್ಯಕ್ಷರಾದ ಗಂಗಾಧರರಾಯರಿಗೂ ಗಾಂಧೀಜಿ ಮೊದಲೇ ತಿಳಿಸಿದ್ದರು. ಅದರಂತೆ ಅವರ ಭಾಷಣವೂ ಹತ್ತೇ ನಿಮಿಷದಲ್ಲಿ ಮುಗಿಯಿತು. ಮೊದಲೆ ಪ್ರಕಟಿಸಿದ್ದಂತೆ ಕಾರ್ಯಕ್ರಮಗಳು ಕ್ಲುಪ್ತಕಾಲಕ್ಕೆ ಸರಿಯಾಗಿ ನೆರವೇರಿದವು. ಕಾಲಕ್ಲುಪ್ತತೆಯನ್ನು ಬೆಳಗಾಂವಿಯಲ್ಲಿ ಅಪೂರ್ವ ರೀತಿಯಲ್ಲಿ ಸಾಧಿಸಲಾಯಿತು.

**ಅಪರಿವರ್ತನವಾದಿಗಳ ಸಭೆ (೨೧–೧೨–೨೪)**

ಅಪರಿವರ್ತನವಾದಿಗಳ ಸಭೆ ಒಂದು ನಡೆಯಿತು ಬೆಳಗಾಂವಿಯಲ್ಲಿ. ಚರ್ಚೆ ನಡೆದವು. ಗಾಂಧೀಜಿಯ ಭಾಷಣ ಬಹಳ ಹೃದಯಸ್ಪರ್ಶಿ ಆಗಿತ್ತು. ಸ್ವತಃ ಸ್ವಭಾವದಿಂದ ಅವರು ಯಾವತ್ತೂ ಅಪರಿವರ್ತನವಾದಿಗಳೆ; ಶಾಸನ ಸಭೆಗಳಲ್ಲಿ ತಮಗೆ ರುಚಿ ಇಲ್ಲ ಎಂದರು. ಅದಕ್ಕೆ ಬದಲು ಅಷ್ಟೇ ಹುರುಪಿನ ಕಾರ್ಯಕ್ರಮ ಎಂದರೆ ಚರಖಾ, ಹಿಂದೂ ಮುಸ್ಲಿಂ ಐಕ್ಯ, ಅಸ್ಪೃಶ್ಯತಾ ನಿವಾರಣೆ ಎನ್ನಬೇಕು. ದೇಶಕ್ಕೆ ಉಪಯುಕ್ತವಾದ ಇನ್ನೂ ಎಷ್ಟೋ ಕಾರ್ಯಕ್ರಮಗಳನ್ನು ತಾವು ಊಹಿಸಬಹುದು. ಅವು ಎಲ್ಲವೂ ಸ್ವರಾಜ್ಯಕ್ಕೆ ಅನಿವಾರ್ಯ ಅಲ್ಲ. ಅದ್ದರಿಂದಲೇ ಚರಖಾ ಪ್ರಚಾರವನ್ನು ತಾವು ಕೈಗೊಂಡದ್ದು. ಈ ರಾಟೆಯ ಕಾರ್ಯಕ್ರಮದ ಮೇಲು ಕೀಳು ಎಂಬ ಭೇದವಿಲ್ಲದೆ, ಹಳ್ಳಿ–ಪಟ್ಟಣ ಎಂಬ ಭೇದವಿಲ್ಲದೆ ಒಬ್ಬೊಬ್ಬರೂ ಒಂಟಿಯಾಗಿ ಮಾಡಬಹುದು. ಆದ್ದರಿಂದ ಅದು ಅವರ ಈ ವರ್ಷದ ಕಾರ್ಯಕ್ರಮದ ಕಮಾನಿಗೆ ನಡುಗಲ್ಲು ಇದ್ದಂತೆ. ಚರಖಾ ಕಾರ್ಯಕ್ರಮ ಅಪಾರವಾಗಿ ನಡೆಯದೇ ಈ ವರ್ಷದಲ್ಲಿ ಪರದೇಶಿ ವಸ್ತ್ರ ಬಹಿಷ್ಕಾರ ಸಂಪೂರ್ಣವಾಗಿ ನಡೆಯುವುದಿಲ್ಲ; ಕಾಂಗ್ರೆಸ್ಸು ನೂಲುವ ಮತದಾನವನ್ನು ಅಂಗೀಕರಿಸಿದರೆ ವರ್ಷವೆಲ್ಲ ಅದನ್ನು ಶ್ರದ್ಧೆಯಿಂದ ನಡೆಸಬೇಕು. ಅದನ್ನು ಒಪ್ಪಿಕೊಂಡು, ಅದಕ್ಕೆ ಮತಕೊಟ್ಟು ಅದರಂತೆ ನಡೆಯದೆ ಇದ್ದರೆ ತಮಗೆ ಹೃದಯಘಾತವಾಗುತ್ತದೆ ಎಂದರು.

**ಹೊಸ ಕಾರ್ಯಕ್ರಮ**

ಹೊಸ ಕಾರ್ಯಕ್ರಮ ಒಂದು ಬಂದಿತ್ತು. ಬ್ರಿಟಿಷ್ ಸರಕಾರದೊಂದಿಗೆ ಒಂದು ಹೊಸ ಬಗೆಯ ಹೋರಾಟ ನಡೆಸಬೇಕೆಂದು ಗಾಂಧೀಜಿಯವರ ಮನಸ್ಸಿನಲ್ಲಿತ್ತು. ಆದರೆ ಪರದೇಶಿ ವಸ್ತ್ರಬಹಿಷ್ಕಾರ ಸಂಪೂರ್ಣವಾಗಿ ಆಗದೆ ಅದು ಯಶಸ್ವಿಯಾಗುವಂತಿರಲಿಲ್ಲ. ಅಪರಿವರ್ತನ ವಾದಿಗಳು ತಮ್ಮ ಶಕ್ತಿಯನ್ನೆಲ್ಲ ಹಾಕಿ ಬರುವ ವರ್ಷ ಶ್ರದ್ಧೆಯಿಂದ ಚರಖಾ ಕಾರ್ಯಕ್ರಮವನ್ನು ನಡೆಸದೆ ಇದ್ದರೆ ತಮಗೆ ಹೃದಯಕ್ಕೆ ವಜ್ರಘಾತವಾಗುತ್ತದೆ. ಮುಂದಿನ ಕಾರ್ಯಕ್ರಮ ಬಾರ್ಡೋಲಿಯ ಕಾರ್ಯಕ್ರಮಕ್ಕಿಂತ ಭಿನ್ನ. ಈ ಹೊಸ ಕಾರ್ಯಕ್ರಮ ಏನೆಂಬುದನ್ನು ಈಗಲೇ ತಿಳಿಸುವುದಿಲ್ಲ. ಆದರೆ ವಿದೇಶೀ ವಸ್ತ್ರಬಹಿಷ್ಕಾರದ ಈ ಕಾರ್ಯಕ್ರಮ ಸಫಲಗೊಂಡರೆ, ದೇಶದಲ್ಲಿ ಏನೇ ನಡೆಯುತ್ತಿರಲಿ, ಈ ಹೊಸ ಕಾರ್ಯಕ್ರಮ ಆಚರಣೆಗೆ ಬರುತ್ತದೆ, ಅದಕ್ಕೆ ಮುಖ್ಯ ಆಧಾರ ಪರದೇಶಿ ವಸ್ತ್ರಬಹಿಷ್ಕಾರ – ಎಂದರು.

**ಬಿನ್ನವತ್ತಳೆಗಳಿಗೆ ಗಾಂಧೀಜಿಯ ಉತ್ತರ**

ಅವತ್ತೇ ಬೆಳಗಾಂವಿಯ ಪೌರಸಭೆ ಮತ್ತು ಜಿಲ್ಲಾ ಬೋರ್ಡುಗಳು ಗಾಂಧೀಜಿಗೆ ಬಿನ್ನವತ್ತಳೆಗಳನ್ನು ಅರ್ಪಿಸಿದವು. ಅದಕ್ಕೆ ಉತ್ತರ ಕೊಡುತ್ತ ತಾವು ಬೆಳಗಾಂವಿಗೆ ಏನೂ ಸೇವೆ ಸಲ್ಲಿಸದೆ ಇದ್ದುದರಿಂದ ಅದರಲ್ಲಿ ಇದ್ದ ಪ್ರಶಂಸೆಯೆಲ್ಲ ತಮಗೆ ಸಲ್ಲಬೇಕಾದ್ದಲ್ಲ ಎಂದರು. ಪ್ರಸ್ತುತ ಪರಿಸ್ಥಿತಿಯಲ್ಲಿ ಭಾರತದ ಎಲ್ಲ ಪೌರಸಭೆಗಳೂ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಬೇಕು; ಆದರೆ ಪ್ರಾಥಮಿಕ ಕರ್ತವ್ಯ ಆದ ನೈರ್ಮಲ್ಯ–ಸಫಾಯಿಗಳನ್ನು ಬಿಡಬಾರದು ಎಂದರು. ಪಾಶ್ಚಾತ್ಯ ನಾಗರಿಕತೆಯ ಮೋಹ ತಮಗೆ ಇಲ್ಲವಾದರೂ ಸಫಾಯಿಯ ಬಗ್ಗೆ ಅವರಿಂದ ಕಲಿಯಬೇಕಾದ್ದು ಬಹಳ ಇದೆ ಎಂದರು. ಭಾರತ ಬೇಸಾಯದ ದೇಶ. ಈ ದೇಶದ ಪಟ್ಟಣಗಳಲ್ಲಿ ಪ್ಲೇಗು ಮುಂತಾದ ಪಿಡುಗುಗಳು ಹರಡಬಾರದು. ಈ ಪಿಡುಗು ದೈವದತ್ತ ಎಂದು ಹೇಳುವುದನ್ನು ಕೇಳಿ ತಮಗೆ ಬಹಳ ದುಃಖ. ತಾವು ದೇವರಲ್ಲಿ ನಂಬಿಕೆ ಇದ್ದವರು. ಆದರೆ ಮಾನವ ಸಂಕಟವನ್ನು ಮನಷ್ಯ ಪ್ರಯತ್ನದಿಂದ ನಿವಾರಿಸಿಕೊಳ್ಳಬಹುದಾದ ಅವಕಾಶ ಅಪಾರ. ನಾವೇ ದೈವೀ ನಿಯಮವನ್ನು ಅಥವಾ ಪ್ರಕೃತಿ ನಿಯಮವನ್ನು ಮೀರಿ, ಈ ಪಿಡುಗು ದೈವದತ್ತ ಎನ್ನವುದು ಆಭಾಸ. ಬೇರೆ ಬೇರೆ ಜಾತಿಗಳಲ್ಲಿ ಇದ್ದ ಸೌಹಾರ್ದವನ್ನು ನೋಡಿ ತಮಗೆ ಸಂತೋಷ. ಇವು ಹೀಗೆ ಇರಲಿ. ಇದರ ಜೊತೆಗೇ ಅಸ್ಪೃಶ್ಯರನ್ನು ಪ್ರೀತಿಸಿ ಎಂದರು.

**ಒಪ್ಪಂದದ ಪ್ರಸ್ತಾಪ**

ವಿಷಯ ನಿಯಾಮಕ ಸಮಿತಿಯಲ್ಲಿ ಡಿಸೆಂಬರ್ ೨೩ರ ದಿನ ಯಾವ ವಿಷಯದಲ್ಲಿಯೂ ಸಭೆಯನ್ನು ಇಬ್ಭಾಗ ಮಾಡುವುದು ತಮಗೆ ಇಷ್ಟವಿಲ್ಲ ಎಂದರು ಗಾಂಧೀಜಿ. ಸ್ವರಾಜ್ಯ ಪಕ್ಷದ ಮುಖಂಡರ ಸಂಗಡ ಒಂದು ಸಂಧಾನ ಮಾಡಿಕೊಂಡು ಅದನ್ನು ಸ್ಥಿರೀಕರಿಸಿ ಎಂದು ಕೇಳಿಕೊಂಡರು. ಓಂದಿನ ಅ.ಭಾ.ಕಾಂಗ್ರೆಸ್ ಸಮಿತಿಯ ಕಾಲದಿಂದ ಇಲ್ಲಿಯವರೆಗೆ ನಡೆದುದು ಎಲ್ಲವನ್ನೂ ತಾವು ನೋಡಿದ್ದೇವೆ. ಈ ಹೆಜ್ಜೆ ಆತ್ಮಹತ್ಯೆಯ ಹೆಜ್ಜೆ. ಈ ನೂಲುವ ಮತದಾನದಿಂದ ಕಾಂಗ್ರೆಸ್ಸಿನಲ್ಲಿ ನೂರಕ್ಕೆ ತೊಂಬತ್ತು ಜನ ವಿರುದ್ಧವಾಗಿರುವ ಈ ಮತದಾನ

ಪದ್ಧತಿಯನ್ನು ಎಲ್ಲರೂ ವಿರೋಧಿಸುವ ಲಕ್ಷಣ ಇದೆಯೆಂದು ವಿಠ್ಠಲಭಾಯಿ ಪಟೇಲರು ಗಾಂಧೀಜಿಗೆ ಹೇಳಿದ್ದರು. ಈಗಾಗಲೇ ಬಿಹಾರ ಕಾಂಗ್ರೆಸ್ ಸಮಿತಿ ಸಿಂಧ್ ಮಧ್ಯಪ್ರಾಂತ ಸಮಿತಿಗಳು ಅದನ್ನು ಒಪ್ಪಿಕೊಂಡಿದ್ದವು. ಆದರೂ ಸಭೆಗೆ ಬೇಡ ಎನಿಸಿದರೆ ಇದನ್ನು ಒಪ್ಪದೇ ಬಿಡಬಹುದು ಎಂದರು ಗಾಂಧೀಜಿ.

ಆದರೆ ನನ್ನನ್ನು ಸಂತೋಷಪಡಿಸಲು ಮಾತ್ರ ಈ ಬದಲಾವಣೆಯನ್ನು ಒಪ್ಪಿಕೊಳ್ಳಬೇಡಿ. ನಿಮ್ಮ ಮನಬಂದಂತೆ ಮತಕೊಡಿ. ನಿಮ್ಮ ಮನಸ್ಸಿಗೆ ಎಷ್ಟೇ ದೊಡ್ಡವರು ಎಂದು ತೋಚಿದರೂ, ಅವರು ಎಷ್ಟೇ ಸೇವೆಮಾಡಿದ್ದರೂ, ಒಬ್ಬ ಮನುಷ್ಯನ ಅಭಿಪ್ರಾಯಕ್ಕೆ ಬೆಲೆ ಕಡಿಮೆ.

ಶ್ರೀ ಚಿತ್ತರಂಜನದಾಸರು ನನಗೆ ಬರೆದಿದ್ದಾರೆ. ಸ್ವರಾಜ್ಯ ಪಕ್ಷದವರು ಒಪ್ಪಂದದ ಬಗ್ಗೆ ಯಾವ ವಿರೋಧವನ್ನೂ ತೋರಿಸುತ್ತಿಲ್ಲ; ವಿಠ್ಠಲಭಾಯಿ ಪಟೇಲರ ಅಭಿಪ್ರಾಯ ಅವರ ಸ್ವಂತದ್ದು. ಸ್ವರಾಜ್ಯ ಪಕ್ಷದ ಬಹುಮತದ ತೀರ್ಮಾನದಂತೆ ಎಲ್ಲರೂ ನಡೆಯಲೇಬೇಕು, ನಡೆಯುತ್ತಾರೆ.

ಈ ಮಾತನ್ನು ಕೇಳಿದಾಗ ತಮಗೆಷ್ಟೋ ಸಮಾಧಾನ ಆಯಿತೆಂದರು ಗಾಂಧೀಜಿ, ಆದರೆ ಒಪ್ಪಂದ ಒಪ್ಪಿಗೆ ಆಗದಿದ್ದವರನ್ನು ಹೀಗೆ ಬಂಧಿಸುವದು ಬೇಡ ಎಂದು ದಾಸರನ್ನು ಕೇಳಿಕೊಳ್ಳುತ್ತೇನೆ. ಇದು ಬರೀ ಕಾಗದದ ಒಪ್ಪಂದವಾಗಬಾರದು. ಇದರ ಅರ್ಥ ನಿರಂತರಕಾರ್ಯ, ಕಠಿಣಶಿಸ್ತಿಗೆ ಆಹ್ವಾನ. ಇದಕ್ಕೆ ಒಪ್ಪಿಕೊಂಡವರು ಪ್ರತಿಯೊಬ್ಬರೂ ತಾವೇ ನೂತ ೨ ಸಾವಿರ ಗಜ ನೂಲನ್ನು ಕಳುಹಿಸಬೇಕಾಗುತ್ತದೆ. ನೂಲಲು ಆಗದಿದ್ದವರು ಅಥವಾ ಇಷ್ಟವಿಲ್ಲದಿದ್ದವರು ಇತರರಿಂದ ನೂಲಿಸಿ ಕಳುಹಿಸಬಹುದು. ಆದರೆ ಅವರು ಅದರ ಮೇಲ್ವಿಚಾರಣೆಯನ್ನು ವಹಿಸಿಕೊಳ್ಳಬೇಕು. ಇದನ್ನು ಪೂರ್ತಿ ಅರ್ಥಮಾಡಿಕೊಂಡು, ಸಭೆ ಒಪ್ಪಿಗೆ ಕೊಡಬೇಕು ಎಂದರು.

ಅಪರಿವರ್ತನವಾದಿಗಳ ಸಭೆಯಲ್ಲಿ ಸ್ವರಾಜ್ಯ ಪಕ್ಷಕ್ಕೆ ಒಂದು ಮತದಾನ ಪದ್ಧತಿ, ಕಾಂಗ್ರೆಸ್ಸಿಗೇ ಒಂದು, ಇರಬಹುದೇ ಎಂಬ ಪ್ರಶ್ನೆ ಬಂದು. ಶ್ರೀ ಶ್ರೀನಿವಾಸಯ್ಯಂಗಾರ್ಯರು ಕಾಂಗ್ರೆಸ್ ನಿಯಮಗಳಿಗೆ ತಕ್ಕಹಾಗೆ ಸ್ವರಾಜ್ಯ ಪಕ್ಷದ ಅಂಗರಚನೆಯನ್ನು ತಿದ್ದಲು ಯೋಚಿಸಿದ್ದೇವೆ ಎಂದರು. ಅವರೂ ತಮ್ಮಂತೆಯೇ ಅಂಗರಚನೆಯನ್ನು ಮಾಡಿಕೊಳ್ಳುವರೆಂದು ತಿಳಿದು ಅಪರಿವರ್ತನವಾದಿಗಳು ಒಪ್ಪಂದವನ್ನು ಒಪ್ಪಿಕೊಂಡರು.

ಆವತ್ತಿಗೆ ಮೂರನೆಯ ದಿನ ಎಂದರೆ, ೨೫–೧೨–೨೪ರಲ್ಲಿ ಗಾಂಧೀಜಿಯ ಹೇಳಿಕೆಯೊಂದು ಬಂತು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ವೆಚ್ಚ ಬಹಳ ಶ್ರೀಮಂತಿಕೆಯದು; ಅಲಂಕಾರಕ್ಕೆ ವಸತಿಗೆ ಹೆಚ್ಚು ಹಣ ವೆಚ್ಚವಾಗುತ್ತದೆ. ಈಗಿರುವ ಹತ್ತು ರೂಪಾಯಿ ಪ್ರತಿನಿಧಿಗಳ ಶುಲ್ಕ ಬಹಳ ಹೆಚ್ಚು ಎಂದು ಅದರಲ್ಲಿ ಇತ್ತು. ತಮ್ಮ ಗುಡಿಸಲು ಕೂಡ ಬಹಳ ಹಣ ತಿಂದಿದೆ. ತಾವು ಆ ಸಮಿತಿಯ ಸದಸ್ಯರಾಗಿದ್ದರೆ ಈ ವೆಚ್ಚವನ್ನೆಲ್ಲ ತಗ್ಗಿಸಬಹುದಾಗಿತ್ತು. ಎಂದರು. ಪ್ರತಿನಿಧಿಗಳ ಶುಲ್ಕ ಹತ್ತುರೂಪಾಯಿ ಬೇಡ ಒಂದು ರೂಪಾಯಿ ಸಾಕು ಎಂದರು. ಎಷ್ಟೋ ಜನ ನೂರಾರು ರೂಪಾಯಿ ವೆಚ್ಚಮಾಡಿ ಕಾಂಗ್ರೆಸ್ಸಿಗೆ ಬಂದಿದ್ದಾರೆ

ಎಂದು ಹೇಳಿದರು. ವಿಷಯ ನಿಯಾಮಕ ಸಮಿತಿಯು ಪ್ರತಿನಿಧಿಶುಲ್ಕವನ್ನು ಒಂದು ರೂಪಾಯಿಗೆ ಇಳಿಸಿತು.

ಮುಂದಿನ ಕಾಂಗ್ರೆಸ್ಸಿನ ಅಧಿವೇಶನ, ಯಾವ ಪ್ರಾಂತದಲ್ಲಿ ಖಾದೀ ಕಾರ್ಯಕ್ರಮ, ಪರದೇಶಿವಸ್ತ್ರ ಬಹಿಷ್ಕಾರ, ಆ ಪ್ರಾಂತದ ಜನಸಂಖ್ಯೆಗೆ ಅನುಗುಣವಾಗಿ, ಹೆಚ್ಚು ಆಗಿದೆಯೋ ಅಲ್ಲಿ ನಡೆಯಬೇಕು ಎಂದು ತೀರ್ಮಾನ ಆಯಿತು.

**ವಿಷಯ ನಿಯಾಮಕ ಸಮಿತಿಯಲ್ಲಿ (೨೫-೧೨-೨೪):**

ನಾಳೆ ಮೂರುಗಂಟೆಗೆ ಸರಿಯಾಗಿ ನಾವು ಸೇರುತ್ತೇವೆ, ಒಂದೆರಡು ನಿಮಿಷ ಪ್ರಾರ್ಥನೆ. ಆಮೇಲೆ ಸ್ವಾಗತ ಭಾಷಣ. ಅದು ೧೫ ನಿಮಿಷಕ್ಕೆ ಹೆಚ್ಚಾಗುವದಿಲ್ಲ. ನಾನು ನನ್ನ ಭಾಷಣ ಓದುವದಿಲ್ಲ. ಇವತ್ತು ಸಂಜೆಗೆ ಅದರ ಪ್ರತಿಗಳನ್ನು ಹಂಚುತ್ತಾರೆ. ಅದನ್ನು ಚೆನ್ನಾಗಿ ಓದಿ. ನಾನು ಕೆಲವು ಪ್ರಾರಂಭದ ಮಾತುಗಳನ್ನು ಹೇಳುತ್ತೇನೆ. ಹಿಂದೂಸ್ತಾನಿಯಲ್ಲಿ ಪ್ರಾರಂಭಿಸಿ ಇಂಗ್ಲೀಷಿನಲ್ಲಿ ಮುಗಿಸುತ್ತೇನೆ.

ನಾಳೆ ಮೊಟ್ಟಮೊದಲು ಬರುವ ಗೊತ್ತುವಳಿ ಕಲ್ಕತ್ತೆಯ ಒಪ್ಪಂದದ ಬಗ್ಗೆ. ಅದನ್ನು ಮೌಲಾನಾ ಹಜರತ್ ಮೋಹಾನೀ ವಿರೋಧಿಸುತ್ತಾರೆ. ಈ ಸಂದರ್ಭದಲ್ಲಿ ಒಂದೆರಡು ಮಾತು ಹೇಳುತ್ತೇನೆ. ಒಂದು ಅರ್ಥದಲ್ಲಿ ನೀವು ಪ್ರತಿನಿಧಿಗಳು, ಎಲ್ಲರೂ ಬಂದಿದ್ದಾರೆ. ಭಾರವನ್ನೆಲ್ಲ ನನ್ನ ತಲೆಯಮೇಲೆ ಹಾಕುವಹಾಗಿದ್ದರೆ ಈ ಗೊತ್ತವಳಿಯನ್ನು ಒಪ್ಪಿಕೊಳ್ಳಬೇಡಿ ಎಂದು ಮರ್ಯಾದೆಯಿಂದ ಹೇಳುತ್ತೇನೆ. ನನ್ನ ಹೆಗಲು ಈ ಭಾರವನ್ನು ಹೊರಲಾರದು. ನಿಮ್ಮ ಸಹಾಯವಿದ್ದರೆ ಮಾತ್ರ ಹೊರಬಲ್ಲೆ. ನಿಮ್ಮಲ್ಲಿ ಪ್ರತಿಯೊಬ್ಬರೂ ಇದಕ್ಕೆ ತತ್ವಶಃ, ಅಕ್ಷರಶಃ ಪೂರ್ಣ ಮನಸ್ಸಿನಿಂದ ನೆರವು ಕೊಡಲು ಸಿದ್ಧರಾಗದಿದ್ದರೆ, ನಮ್ಮ ಉದ್ದೇಶ ಸಫಲ ಆಗುವದಿಲ್ಲ. ಪರದೇಶೀ ವಸ್ತ್ರ ಬಹಿಷ್ಕಾರ ಮಾಡುವದೇ ನಮ್ಮ ಉದ್ದೇಶ. ಇದನ್ನು ಕಾರ್ಯಗತಮಾಡಲು ಕಡು ಬಡವರಾದ ಗಂಡಸರೂ, ಹೆಂಗಸರೂ, ಮಕ್ಕಳೂ ಇವರೆಲ್ಲರ ಸಹಾಯದಿಂದ ಮಾತ್ರ ಸಾಧ್ಯ. ಇದು ಪ್ರಾಮಾಣಿಕ ಪ್ರಯತ್ನವಾಗಬೇಕು. ನನ್ನ ವಿನಮ್ರ ಅಭಿಪ್ರಾಯದಲ್ಲಿ ಇಡೀ ರಾಷ್ಟ್ರವೇ ಕೈಕೊಳ್ಳಲು ತಕ್ಕುದಾದ ಕಾರ್ಯಕ್ರಮ ಇದು. ಇವತ್ತು ನಾವು ಮಾಡಬಹುದಾದುದು ಇಷ್ಟೇ. ಇದನ್ನು ಮಾಡಿದರೆ ಇನ್ನೂ ಸಾವಿರ ಕಾರ್ಯಗಳನ್ನು ಮಾಡಬಹುದು ಎಂದು ನಮಗೆ ನಾವೇ ಮನಗಾಣುತ್ತೇವೆ. ಇದನ್ನು ಜಗತ್ತಿಗೂ ತೋರಿಸಿ ಕೊಡುತ್ತೇವೆ.

ಇವತ್ತು ಬಂದ ತಿದ್ದುಪಡಿ ನನ್ನನ್ನು ಬಹಳ ನೋಯಿಸಿತು. ಭೋಪಟಕರರು ಅದನ್ನು ಮಂಡಿಸುತ್ತಾ, ಎಲ್ಲ ಸಂದರ್ಭದಲ್ಲಿಯೂ ನಮ್ಮಲ್ಲಿ ವಯಸ್ಕರಾದವರೇ ನೂಲದೇ ಇದ್ದರೆ, ಖಾದೀ ಧರಿಸದೇ ಇದ್ದರೆ, ಮಕ್ಕಳು ಹಾಗೆ ಮಾಡಿಯಾರು ಎಂದು ನಿರೀಕ್ಷಿಸಬಾರದು ಎಂದರು, ಇದು ನಿಜವಾಗಿಯೂ ನನ್ನನ್ನು ನೋಯಿಸಿತು. ಏಕೆಂದರೆ ಮತಾಧಿಕಾರ ಪಾತ್ರತೆಯ ಬಗೆಗೆ ನಾವೂ ಹಾಕಿದ ನಿರ್ಬಂಧದ ವಿಷಯಕ್ಕೆ ಶ್ರೀ ಭೋಪಟಕರರು ಅದರಲ್ಲಿ ಇಲ್ಲದ ಅರ್ಥವನ್ನು ಆರೋಪಿಸಿದ್ದಾರೆ. ಅವರು ಮಾಡಿದ ಈ ವಿವರಣೆ ಸರಿಯಲ್ಲ. ನಾವು ಹಾಕಿಕೊಂಡ

ಕನಿಷ್ಠ ಮಿತಿ ಇದು. ಅದೇ ಸ್ವಾಭಾವಿಕ, ಏಕೆಂದರೆ ಈ ಕನಿಷ್ಠ ಮಿತಿಯನ್ನು ಅಂಗೀಕರಿಸದವರಿಗೆ ಮತದಾನದ ಅಧಿಕಾರ ಬಹಳ ಪವಿತ್ರ, ಅದಕ್ಕೆ ಕನಿಷ್ಠ ಮಿತಿಯನ್ನು ಹಾಕಲೇಬೇಕು. ಎಲ್ಲ ರಾಜಕೀಯ ಮತ್ತು ಇತರ ಸಮಾರಂಭಗಳ ಸಂದರ್ಭಗಳಲ್ಲೆಲ್ಲ ಖಾದಿಯನ್ನು ಹಾಕಿಕೊಳ್ಳಬೇಕು ಎಂಬುದು ಕನಿಷ್ಠ ಮಿತಿ. ಬೆಳಗಾಂವಿಯಲ್ಲಿ ಕಾಂಗ್ರೆಸ್ ಅಧಿವೇಶನ ಮುಗಿದ ಕೂಡಲೇ ಖಾದೀ ಉಡುಪನ್ನು ನೀವು ಕೈಬಿಡುತ್ತೀರಿ ಎಂದು ಅರ್ಥವಲ್ಲ. ಹಾಗೆ ಅದರ ಅರ್ಥಮಾಡಿದರೆ ನೀವು ಪರದೇಶಿವಸ್ತ್ರವನ್ನು ಪರಿಣಾಮಕಾರಿಯಾಗಿ ಬಹಿಷ್ಕರಿಸಲಾರಿರಿ; ಈ ಒಪ್ಪಂದವನ್ನು ಓದಿ, ಅದರ ಸತ್ಯವನ್ನು ಅರ್ಥಮಾಡಿಕೊಳ್ಳಿ ಎನ್ನುತ್ತೇನೆ. ಕಾಂಗ್ರೆಸ್ ಸದಸ್ಯರಿಂದ ನಾವು ಅಪೇಕ್ಷಿಸುವ ಕನಿಷ್ಠ ಬಯಕೆ ಇದು. ಎಂದಮೇಲೆ ಜನರಿಂದ ಇದಕ್ಕಿಂತ ಹೆಚ್ಚು ನಾವು ಹೇಗೆ ಅಪೇಕ್ಷಿಸಬಹುದು? ವಯಸ್ಕರಾದ ನಾವಷ್ಟೇ ಅಲ್ಲ ಮಕ್ಕಳು ಕೂಡ ಎಲ್ಲ ಸಂದರ್ಭ ಗಳಲ್ಲಿಯೂ ಖಾದಿಯನ್ನು ಧರಿಸಬೇಕು. ಎಂದರೆ ಖಾದಿ ನಮ್ಮೆಲ್ಲರ ನಿತ್ಯೋಪಯೋಗದ ವಸ್ತ್ರ ಆಗಬೇಕು. ಹಾಗೆ ಆಗದಿದ್ದರೆ ಬಹಿಷ್ಕಾರ ಯಶಸ್ವಿ ಆಗಲಾರದು.

ಇಷ್ಟ ಇಲ್ಲದಿರವವರನ್ನು ತಾವು ಸ್ವಯಂ ನೂಲಬೇಕಾಗಿಲ್ಲ – ಎಂದು ಕೊಟ್ಟ ವಿನಾಯತಿ, ನೂಲದೇ ಇರಲು ಒಂದು ಅವಕಾಶ ಎನ್ನುತ್ತಾರೆ. ಆದರೆ ಒಪ್ಪಂದವನ್ನು ಹಾಗೆ ನಾನು ಓದುವುದಿಲ್ಲ. ನೀವು ಹಾಗೆ ಅರ್ಥಮಾಡುವದಾದರೆ ನಾಳೆ ಗೊತ್ತುವಳಿಯನ್ನು ನಿರಾಕರಿಸುತ್ತೇನೆ. ಅದರಿಂದ ಪರದೇಶೀ ವಸ್ತ್ರಬಹಿಷ್ಕಾರ ಅಸಾಧ್ಯವಾಗುತ್ತದೆ ಎಂದು ನನಗೆ ನೋವೆನಿಸುತ್ತದೆ. ಆದರೂ ಚಿಂತೆಯಲ್ಲ, ಇಷ್ಟವಿಲ್ಲದಿರುವ ಈ ಮಾತು ಬಂದಿರುವುದು ದೈಹಿಕವಾಗಿ ಅಸಮರ್ಥರಾಗಿ ಮತ್ತು ಇಷ್ಟವಿಲ್ಲದಿರುವವರಿಗಾಗಿ. ಮಕ್ಕಳು ಖಂಡಿತವಾಗಿಯೂ ಈ ವಿವರದಲ್ಲಿ ಬರುವುದಿಲ್ಲ. ಪರದೇಶೀ–ವಸ್ತ್ರ ಬಹಿಷ್ಕಾರವಾಗಬೇಕಾದರೆ ಈ ಒಪ್ಪಂದವನ್ನು ನೀವು ನಡೆಸಲೇಬೇಕು. ಪ್ರಾಮಾಣಿಕವಾಗಿ ನಾವು ಪ್ರಯತ್ನಿಸಿದರೆ ಸಫಲತೆ ಬಂದೇ–ಬರುತ್ತದೆ. ಪ್ರತಿನಿಧಿಗಳು ಹಳ್ಳಿಗಳಲ್ಲಿ ಹರಡಿಕೊಂಡು ರಾಟೆಯ ಸಂದೇಶವನ್ನು ಬೀರುತ್ತ ಬಂದರೆ, ನಮ್ಮಲ್ಲಿಯ ಉತ್ತಮೋತ್ತಮರ ಸಮಸ್ತಶಕ್ತಿಯು ಇದರಲ್ಲಿ ತೊಡಗಿಕೊಳ್ಳುತ್ತದೆ. ಇದರಲ್ಲಿ ನಿಮಗೆ ನಂಬಿಕೆ ಇಲ್ಲದಿದ್ದರೆ ಈ ಗೊತ್ತುವಳಿಯನ್ನು ಸ್ವೀಕರಿಸುವದರಲ್ಲಿ ಅರ್ಥವಿಲ್ಲ. ಆದ್ದರಿಂದ ನಾಳೆ ನಾವು ಸೇರಿದಾಗ ಅದರ ಪೂರ್ಣ ಪರಿಣಾಮವನ್ನು ಅರಿತುಕೊಂಡು ನೀವು ಮತ ಕೊಡಿ. ಈ ಕಾರ್ಯಕ್ರಮವನ್ನು ನೀವು ಪ್ರಾಮಾಣಿಕವಾಗಿ ನಡೆಸದಿದ್ದರೆ, ಇದು ಸಫಲ ಆಗಲಾರದು. ಪ್ರತಿಯೊಬ್ಬ ಪ್ರತಿನಿಧಿಯೂ ಹಿಂದಕ್ಕೆ ಹೋದಾಗ ತಮ್ಮ ಪ್ರಾಂತದ ಹಳ್ಳಿಗರೊಂದಿಗೆ ಸಂಪರ್ಕ ಬೆಳೆಸಿಕೊಂಡು ಅವರು ಏನು ಮಾಡಬೇಕು ತಿಳಿಸಿ ಹೇಳಬೇಕು. ನಾಳೆ ಮತ ಕೊಡುವಾಗ ಇದರ ಪರಿಣಾಮವನ್ನು ಯೋಚಿಸಿ ವಿಚಾರಪೂರ್ವಕವಾಗಿ ಮತ್ತು ಮನಃಪೂರ್ವಕ ವಾಗಿ ಮತ ಕೊಡಬೇಕು.

ನೀವು ಇಲ್ಲಿಂದ ಹೊರಟುಹೋಗುವ ಮೊದಲು ನಿಮಗೆ ಎಚ್ಚರಿಕೆ ಕೊಟ್ಟು ನಿಮ್ಮ ಮೇಲೆ ಇರುವ ಈ ಪವಿತ್ರ ಭಾರದ ಬಗ್ಗೆ ನಿಮಗೆ ನೆನಪು ಕೊಡುತ್ತೇನೆ. ೨೭ನೇ ತಾರೀಖಿಗೆ ಎಲ್ಲ ಕೆಲಸವನ್ನು ಮುಗಿಸಿ, ಒಂದು ದಿನ ಅ.ಭಾ. ಕಾಂಗ್ರೆಸ್ ಸಮಿತಿಯ ಕೆಲಸಕ್ಕೆ ಕಾರ್ಯಕಲಾಪದ ವಿಧಾನಕ್ಕೆ ಕಾರ್ಯನಿರ್ವಾಹಕ ಸಮಿತಿಯ ನೇಮಕಕ್ಕೆ ಇಟ್ಟುಕೊಳ್ಳೋಣ.

(ಆಗ ಕೇಳ್ಕರ್ ಅವರು ಮಹಾತ್ಮಾ ಗಾಂಧೀಜಿಗೆ ಹೀಗೆ ಹೇಳಿದರು. "ನಿಮ್ಮ ವಿನಂತಿಯನ್ನು ಕೇಳಿದೆ. ಇದು ಸ್ವರಾಜ್ಯ ಪಕ್ಷದವರಿಗೆ ಆಯಿತು. ಇನ್ನೊಂದು ಭಾಗ ಇದೆಯಲ್ಲ ಒಪ್ಪಂದದ್ದು, ವಿಧಾನಸಭೆಯ, ಶಾಸನಸಭೆಯ ಕಾರ್ಯ, ಕಾಂಗ್ರೆಸ್ ಪರನಡೆಯಬೇಕು. ಶಾಸನಸಭಾ ಸದಸ್ಯರಿಗೆ ಸರ್ವ ವಿಧದಲ್ಲಿಯೂ ನೆರವಾಗಬೇಕು ಎಂದು ಅಪರಿವರ್ತನವಾದಿಗಳಿಗೆ ವಿನಂತಿಮಾಡಿ")

ಕೇಳ್ಕರರ ಮಾತು ನನಗೆ ಸಂಪೂರ್ಣ ಒಪ್ಪಿಗೆ. ಆಗಲೇ ಯಂಗ್ ಇಂಡಿಯಾದಲ್ಲಿ ಇದನ್ನು ನಾನು ಬರೆದಿದ್ದೇನೆ. ನಾಳಿನ ಕೆಲಸಕ್ಕೆ ಸಿದ್ಧ ಆಗುವ ಮೊದಲು ಅಪರಿವರ್ತನ ವಾದಿಗಳಿಗೆ ನಾನು ನೆನಪು ಕೊಡಬಯಸುತ್ತೇನೆ. ನಮ್ಮ ವಿನಂತಿ ಕೇವಲ ಸ್ವರಾಜ್ಯ ಪಕ್ಷಕ್ಕಲ್ಲ. ಅಪರಿವರ್ತನವಾದಿಗಳಲ್ಲೂ ನೂಲುವ ಮತಕ್ಕೆ ವಿರುದ್ಧವಾದವರು ಇದ್ದಾರೆ ಎಂದು ಕೇಳಿದ್ದೇನೆ. ಆದ್ದರಿಂದ ಅಪರಿವರ್ತನವಾದಿಗಳಿಗೆ ನನ್ನ ವಿನಂತಿ ಇಷ್ಟು – ಈ ಒಪ್ಪಂದವನ್ನು ನನ್ನ ಮನಸ್ಸಿನಂತೆ ಅವರು ಅಂಗೀಕರಿಸಿ ಅದರಂತೆ ನಡೆಯಬೇಕು. ನನ್ನ ಸಾಮರ್ಥ್ಯ ಇದ್ದಷ್ಟು ಒಬ್ಬ ಮನುಷ್ಯ ಎಷ್ಟು ಮಾಡಬಹುದೋ ಅಷ್ಟೂ ಸಹಾಯ ಸ್ವರಾಜ್ಯಪಕ್ಷಕ್ಕೆ ಮಾಡುತ್ತೇನೆ; ಯಾವ ವಿಧದಲ್ಲಿಯೂ ಅವರ ಆಶಯಕ್ಕೆ ಧಕ್ಕೆ ತರುವುದಿಲ್ಲ. ಅವರ ಆಶಯ ಏನು ಎಂದು ತಿಳಿದೂ ತಿಳಿದೂ ಹೇಳುತ್ತಿದ್ದೇನೆ. ಏಕೋ ಏನೋ ಅವರ ವಿಧಾನಗಳು ನನಗೆ ಸರಿಬರುವುದಿಲ್ಲ. ಅವರ ಆಶಯ ಅವರದೇ ಅಲ್ಲ, ಕಾಂಗ್ರೆಸ್ಸಿನದೂ ಅಲ್ಲ, ಇಡೀ ರಾಷ್ಟ್ರದ್ದು. ನಾನು ಇದನ್ನು ತೀರ್ಮಾನಿಸಲಾರೆ. ಇದೇನು ಬಂತು ರಾಟೆ ಎಂದು ಹೇಳಲು ಅವರಿಗೆ ಸಂಪೂರ್ಣ ಹಕ್ಕು ಇದೆ. ಹಾಗೇ ನನಗೂ ಹಕ್ಕು ಇದೆ. ಇದೇನು ಈ ಶಾಸನಸಭೆಗಳ ಮಾತು ಎಂದು ಹೇಳಲು. ನೌಕರಶಾಹಿಯನ್ನು ಎದುರಿಸಲು ಇದೊಂದು ಮುಖ್ಯ ಸಾಧನ ಎಂದು ಅವರು ಹೇಳುತ್ತಾರೆ. ನನಗೆ ಅವರ ದಾರಿ ಸರಿಕಾಣುವದಿಲ್ಲ. ಆದರೂ ನಾನು ಸ್ವರಾಜ್ಯ ಪಕ್ಷಕ್ಕೆ ನೆರವಾಗಬಲ್ಲೆ. ಅವರ ಧೋರಣೆಗೆ ಕಾಂಗ್ರೆಸ್ಸಿನಲ್ಲಿ ನಿಶ್ಚಿತವಾದ ಸ್ಥಾನ ಕೊಡಬಲ್ಲೆ.

ಒಬ್ಬ ಸದಸ್ಯ: – ಕಾಂಗ್ರೆಸ್ಸಿನ ಹೆಸರಿನಲ್ಲೇ – ಎಂದು ಪ್ರಶ್ನೆ ಕೇಳಿದರು.

ಉತ್ತರ: ಹೌದು, ಕಾಂಗ್ರೆಸ್ಸಿನ ಹೆಸರಿನಲ್ಲೇ. ಅವರಿಗೆ ಹೇಗೆ ಸಹಾಯ ಮಾಡಲೆಂದು ಸುತ್ತೂ ಹುಡುಕುತ್ತಿದ್ದೆ. ಈ ಒಪ್ಪಂದ ಹೊಳೆಯಿತು. ನಾನು ಅವರಿಗೆ ಮಾಡಿದ ಅನುಗ್ರಹ ಏನೂ ಇಲ್ಲ. ಇದು ಅವರ ಹಕ್ಕು. ಆದರೆ ಇದು ಅವರ ಹಕ್ಕು ಎಂದು ತಿಳಿದುಕೊಳ್ಳಲು ಸ್ವಲ್ಪ ತಡಮಾಡಿದೆ. ಇಷ್ಟು ತಿಳಿದಮೇಲೆ ನಾನು ಅವರ ಕಾರ್ಯಕ್ರಮಕ್ಕೆ ಮನಸ್ಸಿನಿಂದಲೂ ಅಡ್ಡಿ ತೋರಬಾರದು. ಅದರ ಬದಲು ಅವರು ಮಾಡುತ್ತಿರುವ ಕೆಲಸವೂ ಕೂಡ ಸರಿ ಎಂದು ನನ್ನ ಮನಸ್ಸನ್ನು ಗಟ್ಟಿ ಮಾಡಿಕೊಳ್ಳಲು ಪ್ರಯತ್ನಿಸಬೇಕು. ನೀವೂ ಹಾಗೆ ಮಾಡಬೇಕು ಎಂದು ನನ್ನ ವಿನಂತಿ.

ಆದ್ದರಿಂದಲೇ ನನ್ನ ದಾರಿಬಿಟ್ಟುಹೋಗಿ ಪ್ರತಿಯೊಬ್ಬ ಸ್ವರಾಜ್ಯ ಪಕ್ಷದವರನ್ನು ಸಂಪರ್ಕ ಮಾಡಿಕೊಳ್ಳುತ್ತಿದ್ದೇನೆ. ಅವರ ವಾದಕ್ಕೆ, ಅವರ ಸಲಹೆಗಳಿಗೆ ನನ್ನದು ಮುಕ್ತಮನಸ್ಸು. ನಾನು ಸ್ವರಾಜ್ಯ ಪಕ್ಷದವರಿಗೆ ಸಹಾಯಮಾಡಬಹುದಾದುದು ಹೀಗೆಯೇ. ಇದರಿಂದ ನಾನು ವೇದಿಕೆಗಳ

ಮೇಲೆ ಭಾಷಣಮಾಡಿ ಸರಕಾರದ ಧೋರಣೆಯ ಬಗ್ಗೆ ಮಾತಾಡಿ ಸಭೆಗಳನ್ನು ನೆರಸುತ್ತೇನೆ ಎಂದು ಮುಂತಾಗಿ ಅರ್ಥಮಾಡಿದರೆ ನಾನು ಹಾಗೆ ಮಾಡಲಾರೆ; ಏಕೆಂದರೆ ನನಗೆ ಅದರಲ್ಲಿ ಮನಸ್ಸಿಲ್ಲ. ನಾನು ಒಪ್ಪಂದಕ್ಕೆ ಒಪ್ಪಿಕೊಂಡದ್ದು ಈ ಅರ್ಥದಲ್ಲಿ ಅಲ್ಲ. ಇವು ನನ್ನ ಮಿತಿ. ನನಗೆ ಇದನ್ನೆಲ್ಲ ಮಾಡಬಾರದೆಂದಿಲ್ಲ. ಆದರೆ ನಾನು ಮನಗಾಣಬೇಕು. ಮನಗಂಡ ಕೂಡಲೇ ನಾನು ಸ್ವರಾಜ್ಯವಾದಿಯೆಂದು ಸಂಪೂರ್ಣವಾಗಿ ಘೋಷಿಸಿದ್ದೇನೆ. ಈ ಪೃಥ್ವಿಯ ಮೇಲಿನ ಯಾವದೂ ನನ್ನನ್ನು ತಡೆಯಲಾರದು. ಆಮೇಲೆ ನನ್ನಿಂದ ೨೪ ಗಂಟೆಯನ್ನೂ, ನನ್ನ ಜಾಗೃತಿಯ ಎಲ್ಲ ಸಮಯವನ್ನೂ ನಿರೀಕ್ಷಿಸಬಹುದು. ಇವತ್ತು ನಾನು ಪೂರ್ಣ ಮನಸ್ಸಿನ ಸಹಕಾರವನ್ನು ನೀಡಲಾರೆ. ಆದರೆ ನನ್ನ ಮಿತಿಯಲ್ಲಿ ಖಂಡಿತವಾಗಿಯೂ ಅವರಿಗೆ ಪ್ರೋತ್ಸಾಹಕರ, ಮನಃಪೂರ್ಣ ಸಹಕಾರ ಕೊಡಬಲ್ಲೆ. ಉದಾಹರಣೆಗೆ ಸರಕಾರ ನಿಮಗೂ ನಿಮ್ಮ ಕೀರ್ತಿ ಪ್ರತಿಷ್ಠೆಗೂ ಆತಂಕ ಒಡ್ಡಿದರೆ, ನಿಮ್ಮ ಜೊತೆ ಜೊತೆಗೆ ನಾನು ಕೂಡ ನಿಮಗೆ ನೆರವಾಗಲು ಬರುತ್ತೇನೆ. ನಿಮ್ಮ ಜೊತೆಗೆ ಕಷ್ಟ ಅನುಭವಿಸುತ್ತೇನೆ. ಒಂದು ವೇಳೆ ನೀವು ನನ್ನ ಸಹಕಾರ ಬೇಡವೆಂದರೂ, ದಯವಿಟ್ಟು ನನ್ನ ಸಹಾಯ ತೆಗೆದುಕೊಳ್ಳಿ ಎಂದು ಬೇಡುತ್ತೇನೆ. ಖಾಸಗಿಯಾಗಿ ಈ ಧೋರಣೆ ಒಳ್ಳೆಯದು ಎಂದು ಹೇಳಿರಿ – ಎಂದರೆ ನನ್ನ ಅರ್ಥ ಅದಲ್ಲ ಎಂದು ಸ್ಪಷ್ಟವಾಗಿ ಹೇಳುತ್ತೇನೆ. ಆದರೆ ಒಂದು ಮಾತು. ನಿಮ್ಮನ್ನು ಯಾರಾದರೂ ಖಾಸಗಿಯಾಗಿ ಕೇಳಿದರೆ, ರಾಟೆಯಲ್ಲಿ ಅವರಿಗೆ ನಂಬಿಕೆ ಇಲ್ಲದಿದ್ದರೂ ನೂಲಬೇಕು ಎಂದು ಹೇಳಿರಿ. ನಿಮಗೆ ರಾಟೆಯಲ್ಲಿ ನಂಬಿಕೆ ಇಲ್ಲದೆ ಇಲ್ಲ ಎನ್ನುತ್ತೀರಿ. ನಿಮಗೆ ನಂಬಿಕೆ ಇಲ್ಲದಿದ್ದರೆ ಈ ಒಪ್ಪಂದವನ್ನು ತಿರಸ್ಕರಿಸಿರಿ. ಇಲ್ಲದಿದ್ದರೆ ನಿಮ್ಮ ವಿಶ್ವಾಸಕ್ಕೆ ಭಂಗ ಬರುತ್ತದೆ.

ಕೇಳ್ಕರ್: ಈ ಕೆಲಸ ಅವರವರ ಮನಸ್ಸಿನ ವಿಷೇಧಾತ್ಮಕ ವಿಚಾರಕ್ಕೆ ತಕ್ಕಂತೆ ಇರುತ್ತದೆ. ಸ್ವರಾಜ್ಯಪಕ್ಷದಲ್ಲಿ ಅನೇಕರಿಗೆ ಒಂದು ಮಾನಸಿಕ ಪ್ರತಿಬಂಧ ಇದೆ. ಅವರಿಗಾಗಿ ನೀವು ಸ್ವಲ್ಪ ಅವಕಾಶ ಕೊಡಬೇಕು.

ಈ ಮಾನಸಿಕ ಪ್ರತಿಬಂಧ ರಾಟೆಯಿಂದ ಏನೂ ಪ್ರಯೋಜನವಿಲ್ಲ ಎನ್ನುವಷ್ಟು ದೂರ ಹೋಗಿದ್ದರೆ ಆಗ ನೀವು ಒಪ್ಪಂದವನ್ನು ತಿರಸ್ಕರಿಸಬೇಕು.

ರಾಟೆಯ ಬಗ್ಗೆ ಸ್ವರಾಜ್ಯ ಪಕ್ಷದಿಂದ ನಾನು ಬಯಸುವ ಸಹಕಾರ, ನನ್ನಿಂದ ಅವರು ಶಾಸನ ಸಭೆಗಳ ಕಾರ್ಯದ ಬಗ್ಗೆ ನಿರೀಕ್ಷಿಸುವ ಸಹಕಾರ, ಒಂದೇ ಬಗೆಯದು ಅಲ್ಲ. ಒಂದೇ ಪರಿಮಾಣದ್ದೂ ಅಲ್ಲ. ಇದನ್ನು ಒಪ್ಪಂದದಲ್ಲಿ ಸ್ಪಷ್ಟವಾಗಿ ತಿಳಿಸಿದೆ. ಅಸಾಧ್ಯ ಕಾರ್ಯಗಳನ್ನು ನಿಮ್ಮಿಂದ ನಾನು ನಿರೀಕ್ಷಿಸುವದಿಲ್ಲ. ನಿಮ್ಮಿಂದ ನಾನು ನಿರೀಕ್ಷಿಸುವುದು ಯಥಾಶಕ್ತಿ ಪ್ರಾಮಾಣಿಕತೆ, ನಂಬಿಕೆ: ಅಷ್ಟೇ ಸಾಕು, ಒಂದು ಗುಂಜೂ ಹೆಚ್ಚುಬೇಡ. ಈ ಒಪ್ಪಂದವನ್ನು ಈ ದೃಷ್ಟಿಯಿಂದ ಪ್ರತಿಯೊಬ್ಬರೂ ನೋಡಿ ಎನ್ನುತ್ತೇನೆ. ಈ ದೃಷ್ಟಿ ಇಲ್ಲದಿದ್ದರೆ, ಚಳವಳಿ ವಿಫಲವಾಗುತ್ತದೆ ಎಂದು ನಾನು ಹೇಳುತ್ತೇನೆ. ಆಗಲೂ ನಾನು ವಿಫಲ ಆದೆ ಎಂದಲ್ಲ. ಬಹುಶಃ ನನ್ನನ್ನು ಅಹಂಕಾರಿ, ವಿಲಕ್ಷಣ ಎಂದು ನೀವು ಕರೆಯಬಹುದು. ಈಗಾಗಲೆ ಕೆಲವರು ಯುರೋಪಿಯನ್ನರು, ಕೆಲವರು ಭಾರತೀಯರು ನನಗೊಬ್ಬನಿಗೇ

ಮನುಷ್ಯ ಸ್ವಭಾವ ಗೊತ್ತು ಎನ್ನುತ್ತೇನೆ ಎನ್ನುತಾರೆ. ನನ್ನದು ಸರಿ ಎಂದು ನನ್ನ ನಂಬಿಕೆ. ಇತರರು ಹೇಳಿದುದೂ ಇಷ್ಟೇ ಸರಿ ಇರಬಹುದು. ನಾನು ಸರಿ ಎಂಬ ನಂಬಿಕೆ ನನಗಿಲ್ಲದಿದ್ದರೆ. ನನ್ನ ಮಾರ್ಗ ಸರಿ ಎಂದು ನಾನು ನಂಬದಿದ್ದರೆ. ಚುಕ್ಕಾಣಿ ಹಿಡಿಯಲು ನಾನು ಅಯೋಗ್ಯ. ನಾನು ತಿದ್ದಿಕೊಳ್ಳಬೇಕು ಎನ್ನುವದು ಆ ಕೆಟ್ಟ ಮನಸ್ಸನ್ನು. ಕೇಳಕರರು ಹೇಳುವ ಆ ಮಾನಸಿಕ ಪ್ರತಿಬಂಧವನ್ನು. ಅಂಥದು ಏನೂ ಇರಬಾರದು. ಸ್ವರಾಜ್ಯ ಪಕ್ಷದವರು ಭಾರತದ ವೈರಿಗಳೆಂದು ಯಾರೂ ತಿಳಿಯಬಾರದು. ಅರಾಜಕತಾವಾದಿಗಳೂ ಕೂಡಾ ಭಾರತದ ಶತ್ರುಗಳು ಎಂದು ನಾನು ತಿಳಿದಿಲ್ಲ. ತನಗೆ ತೋಚಿದಂತೆ ಅವನು ಮಾಡುತ್ತಾನೆ. ನಾನು ಹೇಗೆ ತೀರ್ಪು ಕೊಡಲಿ? ಅವನ ಕೃತಿಯನ್ನು ಮಾತ್ರ ನಾನು ವಿಮರ್ಶೆ ಮಾಡಬಲ್ಲೆ. ಆದರೆ ಇಲ್ಲಿ ಯಾವ ಹೋಲಿಕೆಯೂ ಇಲ್ಲ.

ಅಪರಿವರ್ತನವಾದಿಗಳಿಗೆ ಹೇಳುತ್ತೇನೆ – ನಿಮಗೆ ರಾಟೆಯ ನಂಬಿಕೆ ಇಲ್ಲದೆ ಇದ್ದರೆ ನಿಮಗೆ ಬೇರೆ ಯಾವ ದಾರಿಯೂ ಇಲ್ಲ. ಹಿಂಸೆಯಲ್ಲಿ ತೊಡಗಬೇಕು ಅಷ್ಟೇ. ನಿಮ್ಮ ದೇಶಭಕ್ತಿಗೆ ರಾಟೆ ತೃಪ್ತಿ ಕೊಡದು ಎನಿಸಿದರೆ ಶಾಸನ ಸಭೆಗಾದರೂ ಹೋಗಿ. ಅಲ್ಲಿ ಒಂದು ಮಿಂಚು ಹರಿಯಿಸಿ. ಕೆಲವರು ಕೈದಿಗಳನ್ನಾದರೂ ಬಿಡಿಸಬಹುದು. ಇವತ್ತು ಸ್ವರಾಜ್ಯ ಪಕ್ಷದವರೂ ತಮ್ಮ ಆದರ್ಶಗಳನ್ನೆಲ್ಲ ಗಾಳಿಗೆ ತೂರಿ. ಅಂದಮಾನ ದ್ವೀಪದಲ್ಲಿರುವ ಕೆಲವರು ಕೈದಿಗಳನ್ನು ಬಿಡುಗಡೆ ಮಾಡಬಯಸಿದರೆ ಅದು ನಡೆಯಬಹುದು. ಆದರೆ ತಾವೇ ಕೈಕೊಂಡ ಹೊಣೆಗೆ ಅವರು ನಿಷ್ಠರು. ದೇಶಕ್ಕಾಗಿ ಇಂಥ ಹಾನಿಕರ ವ್ಯವಹಾರವನ್ನು ಮಾಡರು. ಅವರು ಶಾಸನಸಭೆಗೆ ಹೋದದ್ದು ಅಂದಮಾನ ಸೆರೆಯಾಳುಗಳನ್ನು ಬಿಡಿಸಲಿಕ್ಕೆ ಅಲ್ಲ. ಅಥವಾ ಯರವಡಾ ಜೇಲಿನಲ್ಲಿ ಬೇನೆಯಿಂದ ಬಳಲುತ್ತಿರುವ ಒಬ್ಬ ಬಡಪಾಯಿಯನ್ನು ಬಿಡಿಸಲೂ ಅಲ್ಲ. ಎಷ್ಟೋ ಸಲ ನಾನು ಹೇಳಿದ್ದೇನೆ. ನಿಮಗೆ ರಾಟೆಯಲ್ಲಿ ನಂಬಿಕೆ ಇಲ್ಲದಿದ್ದರೆ, ನಿಮಗೆ ಇರುವ ಇನ್ನೊಂದು ದಾರಿ ಶಾಸನಸಭಾ ಪ್ರವೇಶ ಒಂದೇ. ಎಷ್ಟೋ ಜನ ಶಾಸನ ಸಭೆಗೆ ಹೋಗುತ್ತಾರಲ್ಲ. ಅಲ್ಲಿ ಏನಾದರೂ ಮಾಡಬಹುದೆಂಬ ಆಶೆಯೇ ಶಾಸನಸಭೆಗೆ ಹೋಗುವವರ ರಹಸ್ಯ. ಶಾಸನಸಭೆಗೆ ಹೋಗುವವರು ನಮ್ಮಲ್ಲಿ ವಿಶೇಷ ಬುದ್ಧಿವಂತರ ಪ್ರತಿನಿಧಿಗಳು. ಚೆನ್ನಾಗಿ ತರಬೇತಾದ ಸಿಪಾಯಿಗಳು. ಉದಾಹರಣೆಗೆ. ಪಂಡಿತ್ ಮಾಲವೀಯರ ಹಾಗೆ ತ್ಯಾಗ ಮಾಡಿದ ಮನುಷ್ಯ ಸಿಕ್ಕುತ್ತಾನೆಯೇ? ೧೮೮೧ರಲ್ಲಿ ಸರ್ ದಿವಾನ್ ಷಾ ಅವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ಸಿನಲ್ಲಿ ಮಾಲವೀಯಾಜಿ ಭಾಷಣ ಮಾಡಿದಾಗಿನಿಂದಲೂ ನಾನು ಅವರನ್ನು ಬಲ್ಲೆ. ಅವರು ಎಷ್ಟೋ ಕೆಲಸ ಮಾಡಿದ್ದಾರೆ. ಶಾಸನ ಸಭೆಯಲ್ಲೂ ಇದ್ದಾರೆ. ಈಗಲೂ ಶಾಸನಸಭೆಗೆ ಅಂಟಿಕೊಂಡಿರುತ್ತಾರೆ. ಅವರೇನೂ ಮೂರ್ಖರಲ್ಲ. ಅವರನ್ನು ನೋಡಿದಾಗಲೆಲ್ಲ ನನ್ನ ತಲೆ ಬಾಗುತ್ತದೆ. ಸೀ.ಆರ್.ದಾಸ್ ಯಾರು? ಪಂಡಿತ್ ಮೋತೀಲಾಲ್ ನೆಹರು ಯಾರು? ಇವತ್ತು ಅವರು ಹೀಗೇಕೆ ಬಟ್ಟೆ ಉಡುತ್ತಾರೆ? ಪಂಡಿತ್ ಮೋತಿಲಾಲ ನೆಹರು ಹಿಂದೆ ರಾಜಮಾಹಾರಾಜನಂತೆ ಬದುಕುತ್ತಿದ್ದರು. ಅವರು ಲಾಹೋರಿಗೆ ಮೋಟಾರಿನಲ್ಲಿ ಬಂದಾಗ ಅವರ ಬೆಂಬತ್ತಿ ಸೇವಕರ ದಂಡಿಗೆದಂಡೆ ಬಂದಿತ್ತು. ರಾಜಮಹಾರಾಜರು ಸಹ ಅವರ ಹಾಗೆ ಬಾಳಲಿಲ್ಲ. ಹಿಂದೆ ಗುಲಾಬಿ ಹೂಗಳಿಂದ. ಇತರ ಹೂಗಳಿಂದ ಅಂದವಾಗಿದ್ದ

ಅವರ ತೋಟದಲ್ಲಿ ಇವತ್ತು ಕಸ ಬೆಳೆಯುತ್ತಿದೆ. ಅವರು ದೇಶದ್ರೋಹಿಯೇ? ಇವರನ್ನು ನೋಡಿದಾಗಲೆಲ್ಲ ನನ್ನ ತಲೆ ಬಾಗುತ್ತದೆ. ಇವರ ದೃಷ್ಟಿಯಂತೆ ನನ್ನ ದೃಷ್ಟಿ ಇಲ್ಲದೆ ಹೋದುದಕ್ಕೆ, ಅವರ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳಲಾರದುದಕ್ಕೆ ನನ್ನಲ್ಲಿಯೇ ಏನೋ ಅಪೂರ್ಣತೆ ಇದೆ ಎಂದುಕೊಳ್ಳುತ್ತೇನೆ. ಈ ಕೇಳಕರರು ತಾನೇ ಯಾರು? ಭವಿಷ್ಯಕಾಲಕ್ಕೆ ಕೀರ್ತಿ ಕಾಯರಾಗಿ ಉಳಿಯುವ ಭಾರತೀಯ ಶ್ರೇಷ್ಠನೊಬ್ಬನ ಪ್ರತಿನಿಧಿ. ಆತನನ್ನು ಮುಂದಿನ ಪೀಳಿಗೆಯವರು ದೇವರು ಎಂದು ಪೂಜಿಸುವರು. ಈ ದೇಶದಲ್ಲಿ ದೇವರು ಒಬ್ಬ, ನಾಮ ಹಲವು. ಆದ್ದರಿಂದ ನಿಮ್ಮನ್ನು ಬೇಡಿಕೊಳ್ಳುತ್ತೇನೆ. ನಿಮ್ಮ ಹೃದಯ ಶುದ್ಧಿ ಮಾಡಿಕೊಳ್ಳಿರಿ. ಔದಾರ್ಯ ಇರಲಿ. ನಿಮ್ಮ ಹೃದಯಗಳು ಸಮುದ್ರದಷ್ಟು ವಿಶಾಲ ಆಗಲಿ. ಕೋರಾನ್ ಹೇಳುವದೂ ಇದೇ. ಭಗವದ್ಗೀತೆ ಹೇಳುವದೂ ಇದೇ. ಇನ್ನೊಬ್ಬರನ್ನು ಹೀಗೆ ಹಾಗೆ ಎಂದು ಎನ್ನಬೇಡಿ. ನಿಮ್ಮನ್ನೂ ಹೀಗೆ ಎಂದಾರು. ಎಲ್ಲವನ್ನೂ ನಿರ್ಧರಿಸುವ ಪರಮೋಚ್ಚ ನ್ಯಾಯಾಧಿಪತಿ ದೇವರು. ಆತ ನಿಮ್ಮನ್ನು ಗಲ್ಲಿಗೆ ಹಾಕಬಹುದು. ಆದರೂ ಆತ ನಿಮ್ಮನ್ನು ಬದುಕಗೊಟ್ಟಿದ್ದಾನೆ. ನಿಮ್ಮ ಸುತ್ತಲೂ ಅನೇಕ ವೈರಿಗಳಿದ್ದಾರೆ. ನಿಮ್ಮ ಒಳಗೂ ಇದ್ದಾರೆ. ಆದರೆ ಆತನ ಕಾಯುವ ಕೈ ಸದಾ ಕಾಯುತ್ತದೆ: ಆತನ ಕರುಣೆಯ ಕಣ್ಣು ಸದಾ ನಿಮ್ಮ ಮೇಲೆ ಇರುತ್ತದೆ.

ಅವರ ಧೋರಣೆ ಭ್ರಷ್ಟ, ಅವರೆಲ್ಲರೂ ವಂಚಕರು, ಅಥವಾ ಅಪ್ರಮಾಣಿಕರು, ದೂರದೃಷ್ಟಿ ಇಲ್ಲದ ರಾಜಕಾರಣಿಗಳು ಎಂದೇಕೆ ನಾವು ಹೇಳಬೇಕು? ಮಾನವ ಸ್ವಭಾವವನ್ನು ಹೀಗೆ ತೆಗಳುವ ಬುದ್ಧಿ ಬರದಂತೆ ದೇವರು ನಮ್ಮನ್ನು ರಕ್ಷಿಸಲಿ. ಈ ಜಗತ್ತು ಇರುವವರೆಗೆ ಮತಭೇದ ಇದ್ದೇ ಇರುತ್ತದೆ. ಅಪರಿವರ್ತನವಾದಿಗಳ ಮಹತ್ತರ ಸಾಧನೆಯೆಂದರೆ ತಮ್ಮ ಇದಿರಾಳುಗಳು ಎಂದು ತಿಳಿದವರನ್ನು ನಿಜವಾದ ಗೆಳೆಯರನ್ನಾಗಿ ಮಾಡಿಕೊಂಡು ರಾಟೆಯ ಪಂಥಕ್ಕೆ ಅವರ ಮನ ಒಲಿಸುವುದು. ನನ್ನಲ್ಲಿ ವಿಶ್ವಾಸವಿಡಿರಿ. ಅಪರಿವರ್ತನವಾದಿಗಳು ನಿಂದೆ ಮಾಡುವುದನ್ನು ನಿಲ್ಲಿಸಿ ತಮ್ಮ ಕರ್ತವ್ಯವನ್ನು ತಾವು ಮಾಡಿದರೆ, ಮತ್ತು ರಾಟೆಗೆ ಅಂಟಿಕೊಂಡು ಅದಕ್ಕಾಗಿ ಪ್ರಾಣತೆತ್ತರೆ, ಪರಿವರ್ತನಾವಾದಿಗಳನ್ನು ಚರಖಾ ಪಂಥಕ್ಕೆ ಪರಿವರ್ತಿಸಿಕೊಳ್ಳಬಹುದು. ಜನರು ರಾಟೆಯನ್ನು ಒಪ್ಪದಿದ್ದರೆ, ಅದರ ಕಾರಣ ಅದರ ಪ್ರಯೋಜನ ಅವರಿಗೆ ಗೊತ್ತಿಲ್ಲ. ನೀವು ಅದನ್ನು ಅವರಿಗೆ ತೋರಿಸಿಕೊಡಬೇಕು. ನಾನು ರಾಟೆಯ ಹಾಡನ್ನು ಹೇಳುತ್ತಿದ್ದೇನೆ. ಏಕೆಂದರೆ, ಅದರಿಂದಲೇ ದೇಶಕ್ಕೆ ಮೋಕ್ಷ ಎಂದು ನನ್ನ ಅಜೇಯ ಶ್ರದ್ಧೆ. ಶ್ರದ್ಧೆ ಇಲ್ಲದೆ ಹೋದರೆ ಹಿಂದೂ ಧರ್ಮದ ಸಂದೇಶ ಏನಿದೆ? ಒಂದು ವೇಳೆ ನೀವು ನಂಜಿದ ರಾಟೆ ಇತರರಿಗೆ ಒಳ್ಳೆಯದು ಅಲ್ಲದೇ ಇದ್ದರೂ ನಮಗೆ ಮಾತ್ರ ಅದೇ ಸರ್ವಸ್ವ. ಕಾಶೀ ವಿಶ್ವನಾಥನ ದೇವಾಲಯದ ಲಿಂಗ ಮೌಲನಾ ಹಜರತ್ ಮೋಹಾನಿಗೆ ಬರಿ ಕಲ್ಲೇ ಆಗಬಹುದು. ಅಲ್ಲಿಗೆ ನಾನು ಹೋದರೆ ನನ್ನ ಹೃದಯ ಕರಗಬೇಕು. ಶ್ರದ್ಧೆಯೇ ಮುಖ್ಯ. ಹಸುವನ್ನು ಕಂಡರೆ ನನಗದು ತಿನ್ನುವ ಪ್ರಾಣಿ ಅಲ್ಲ. ಅದೊಂದು ಕರುಣೆಯ ಕಾವ್ಯ. ನಾನದನ್ನು ಪೂಜಿಸುತ್ತೇನೆ. ಇಡೀ ಜಗತ್ತಿನ ಎದುರು ಅದರ ಪೂಜೆಯನ್ನು ಸಮರ್ಥಿಸಿಕೊಳ್ಳುತ್ತೇನೆ. ದೇವರು ಇರುವದು ಒಬ್ಬನೇ. ಆದರೆ ಕಲ್ಲಿನಲ್ಲಿ, ಅಂಗ್ಲನಲ್ಲಿ, ಇಷ್ಟೇಯೇಕೆ ದೇಶದ್ರೋಹಿಯಲ್ಲಿ ಕೂಡ ನಾನು ದೇವರನ್ನು ಕಾಣುತ್ತೇನೆ. ಈ ಸಾಮರ್ಥ್ಯ ದೇವರದು.

ದೇಶದ್ರೋಹಿಯನ್ನು ಕೂಡ ದ್ವೇಷಿಸಲಾರೆ. ಅಲ್ಲಿಯವರೆಗೆ ಒಯ್ಯುತ್ತದೆ ನನ್ನ ಧರ್ಮ. ಅಪರಿವರ್ತನವಾದಿಯಾದ ಪ್ರತಿಯೊಬ್ಬನಿಗೂ ಹೇಳುತ್ತೇನೆ – ನಿಮ್ಮ ಪಂಥಕ್ಕೆ ನೀವು ಯೋಗ್ಯರು ಎನಿಸಿಕೊಳ್ಳಬೇಕಾದರೆ, ಅಹಿಂಸಾವಾದಿಗಳಾಗಿದ್ದರೆ, ಸ್ವರಾಜ್ಯ ಪಕ್ಷದವರೊಡನೆ ಕೈಕುಲುಕಿ, ನಾವು ಮಾಡಿದ್ದಕ್ಕೆ ಕ್ಷಮಿಸಿ ಎಂದು ಕೇಳಿಕೊಳ್ಳಿ ಎನ್ನುತ್ತೇನೆ. ಯಾರೊಬ್ಬರ ಬಗ್ಗೆಯೂ ಅಸಾಧು ಭಾವನೆಯನ್ನು ತಳೆಯಲು ನಿಮಗೆ ಹಕ್ಕು ಇಲ್ಲ. ಅವರ ವಿರುದ್ಧವಾಗಿ ಒಂದೇ ಒಂದು ಮಾತನ್ನು ಹೇಳಲು ಕೂಡ ನಿಮಗೆ ಹಕ್ಕು ಇಲ್ಲ. ಈ ಉತ್ತಮ ಸೂತ್ರವನ್ನು ಅನುಸರಿಸಿ. ಇದಕ್ಕಿಂತ ಉತ್ತಮ ಸೂತ್ರವನ್ನು ನಾನು ಕೊಡಲಾರೆ. ಇದನ್ನು ಅನುಸರಿಸಲು ದೇವರು ನಿಮಗೆ ಶಕ್ತಿ ಕೊಡಲಿ. ವರ್ಷದ ಕೊನೆಯಲ್ಲಿ ಎಲ್ಲವೂ ಸರಿಹೋಗುತ್ತದೆ.

*[Collected Works of Mahatma Gandhi Vol. xxv.]*

ಕಾಂಗ್ರೆಸ್ ಅಧಿವೇಶನ ನಡೆಯುವ ದಿನ ಗಾಂಧೀಜಿ ಸ್ವಾಗತಾಧ್ಯಕ್ಷರನ್ನು ಮೊದಲೇ ಕರೆದರು. ಭಾಷಣ ಕಡಿಮೆ ಮಾಡಿ ಕೆಲಸ ಹೆಚ್ಚು ಮಾಡಬೇಕು ಎಂದು ಹೇಳಿದರು. ಇದಕ್ಕಿಂತ ಮೊದಲು ನಡೆದ ಎಲ್ಲ ಕಾಂಗ್ರೆಸ್ಸುಗಳಲ್ಲೂ ಮೂರು ದಿನಗಳಲ್ಲಿ ಕಾಂಗ್ರೆಸ್ ಕಾರ್ಯಕಲಾಪ ಎಂದೂ ಮುಗಿದಿರಲಿಲ್ಲ. ೫–೬ ದಿನ ನಡೆಯುತ್ತಿತ್ತು. ಮೊದಲನೆಯ ದಿನ ಸ್ವಾಗತ ಭಾಷಣ, ಅಧ್ಯಕ್ಷ ಭಾಷಣ, ಇವುಗಳಲ್ಲೇ ಕಳೆದು ಹೋಗುತ್ತಿತ್ತು. ಆಮೇಲೆ ಎರಡನೆಯ ದಿನ ಇತರ ಬೇರೆ ಬೇರೆ ಭಾಷಣಗಳು, ಇದೆಲ್ಲವನ್ನೂ ತಪ್ಪಿಸಿ ಅಧಿವೇಶನವನ್ನು ಆದಷ್ಟು ಕಾರ್ಯಶೀಲವಾಗಿ ಹೇಗೆ ಮಾಡಬೇಕು. ನಿಜವಾದ ಕೆಲಸವನ್ನು ಬೇಗ ಬೇಗ ಹೇಗೆ ನಡೆಸಬೇಕು ಎಂಬುದು ಗಾಂಧೀಜಿಯ ಯೋಚನೆ.

ಗಾಂಧೀಜಿಯ ಈ ಸ್ವಭಾವ ಸ್ವಾಗತಾಧ್ಯಕ್ಷರಿಗೆ ಚೆನ್ನಾಗಿ ಗೊತ್ತು. ಮೊದಲೇ ತಮ್ಮ ಸ್ವಾಗತಭಾಷಣವನ್ನು ಚಿಕ್ಕದು ಮಾಡಿಬಿಟ್ಟರು. ಕರ್ನಾಟಕದ ಬಗ್ಗೆ ಇತರ ಪ್ರಾಂತದ ಜನರಿಗೆ ಸ್ವಲ್ಪ ಮಾಹಿತಿ ಕೊಡಬೇಕಾಗಿತ್ತು. ಪೂರ್ಣ ಭಾಷಣವನ್ನು ಅವರು ಓದಲೇ ಇಲ್ಲ. ಗಾಂಧೀಜಿಯ ಅಪ್ಪಣೆಯಂತೆ ಅದರ ಸಾರಾಂಶವನ್ನು ಹೇಳಿದರು. ಅದಕ್ಕೆ ೫–೬ ನಿಮಿಷ ಸಾಕು ಎಂದು ಮೊದಲೇ ಗೊತ್ತಾಗಿತ್ತು. ನಿಮ್ಮ ಭಾಷಣ ಅಚ್ಚಾಗಿದ್ದರೆ ಮೊದಲು ಪ್ರತಿನಿಧಿಗಳಿಗೆ ಹಂಚಿಬಿಡಿ. ಉಳಿದವರಿಗೂ ಬಹಳ ಕಡಿಮೆ ಬೆಲೆಗೆ ಮಾರಿ ಎಂದು ಗಂಗಾಧರರಾಯರಿಗೆ ಗಾಂಧೀಜಿ ಮೊದಲೇ ಹೇಳಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣವನ್ನು ಅಚ್ಚು ಮಾಡಿಸಿ ತಂದಿದ್ದರು. ಅದನ್ನೂ ಹಾಗೆಯೇ ಹಂಚಿಸಿದರು. ಅವರ ಭಾಷಣವನ್ನು ಮಾರಿದ್ದರಿಂದ ಸ್ವಾಗತ ಸಮಿತಿಗೆ ಒಂದು ಸಾವಿರ ರೂಪಾಯಿಯಷ್ಟು ಹಣ ಬಂತು.

ಗಂಗಾಧರರಾಯರು ತಮ್ಮ ಆತ್ಮಕಥೆಯಲ್ಲಿ ಬರೆದ ವರ್ಣನೆ ಈಗ ನೋಡೋಣ:

"ಸಭೆಯ ಪ್ರಾರಂಭದಲ್ಲಿ ಸಂಗೀತಕ್ಕೆ ಬಹಳ ಸಮಯ ಹೋಗುತ್ತದೆ. ಸಭೆ ಆರಂಭವಾಗುವದಕ್ಕೆ ಮೊದಲೇ ಅದನ್ನು ಪ್ರಾರಂಭಿಸಬೇಕು. ಕಾರ್ಯಕ್ರಮ ಆರಂಭವಾಗುವ ಮೊದಲು ೫–೧೧ ನಿಮಿಷಗಳಲ್ಲಿ ಒಂದು ಹಾಡನ್ನು ಹಾಡಿ ಮುಗಿಸಬೇಕು. ಸಭೆ ಆರಂಭವಾಗುವ ಮೊದಲು ಮಂಟಪದಲ್ಲಿ ಗದ್ದಲ ಆಗುತ್ತದೆ. ಹಾಡುಗಳನ್ನು ಹಾಡುತ್ತಿದ್ದರೆ

ಜನರು ಸುಮ್ಮನಿರುತ್ತಾರೆ. ಇದು ಒಂದು ಲಾಭವೇ ಎಂದರು. ಅವರೇ ಕಾಂಗ್ರೆಸ್ ಅಧ್ಯಕ್ಷರಾಗಿದ್ದುದರಿಂದ ಎಲ್ಲವನ್ನೂ ಅವರ ಇಚ್ಛೆಯಂತೆ ಮಾಡಬೇಕೆಂದು ನನಗೆ ಮೊದಲಿನಿಂದಲೂ ಅನಿಸುತ್ತಿತ್ತು. ಅಂತೆಯೇ ಅವರು ಹೇಳಿದಂತೆ ಎಲ್ಲ ಕಾರ್ಯಕ್ರಮವನ್ನೂ ನಿಶ್ಚಯಿಸಿದೆ.

"ಸಭೆ ಆರಂಭವಾಗುವುದಕ್ಕೆ ೧೦ ನಿಮಿಷ ಮೊದಲು ಮನೆ ಬಿಡುವದೆಂದು ಅವರು ಗೊತ್ತು ಮಾಡಿದ್ದರು. ಹೊರಡುವದಕ್ಕೆ ಮೊದಲು ಮನೆಯಲ್ಲಿದ್ದ ಎಲ್ಲರೂ ಸೇರಿ ೧೦-೧೫ ನಿಮಿಷ ಪ್ರಾರ್ಥನೆ ಮಾಡಿದರು "ವೈಷ್ಣವ ಜನತೋ" ಹಾಡು ಅವರಿಗೆ ತುಂಬ ಮೆಚ್ಚಿಗೆ. ಅವರ ಮುಖ ಆಗ ಅತ್ಯಂತ ಗಂಭೀರವಾಗಿತ್ತು. ಕಾಂಗ್ರೆಸ್ಸಿನ ಅಧ್ಯಕ್ಷ ಎಂದರೆ ಎಷ್ಟು ಹೊಣೆ ಹೊರಬೇಕೋ ಅದರ ಪೂರ್ಣ ಕಲ್ಪನೆ ಅವರಿಗೆ ಬಂದಿತ್ತು. ಯಶಸ್ವಿಯಾಗಿ ಆ ಹೊಣೆಯನ್ನು ನಡೆಸಲು ದೇವರ ಪ್ರಾರ್ಥನೆ ಎಷ್ಟು ಅಗತ್ಯವೋ ಅದರ ಚಿತ್ರ ಅವರ ಮುಖದಲ್ಲಿ ಸ್ಪಷ್ಟವಾಗಿ ಮೂಡಿತ್ತು. ಪ್ರಾರ್ಥನೆ ಮುಗಿದನಂತರ ವಾಡಿಕೆಯಂತೆ ಹಿಂದಿನ ಕಾಂಗ್ರೆಸ್ ಅಧ್ಯಕ್ಷ ಕಾರ್ಯ ನಿರ್ವಾಹಕ ಮಂಡಲಿಯ ಸದಸ್ಯರು, ಕಾರ್ಯದರ್ಶಿ, ಪ್ರತಿಯೊಂದು ಪ್ರಾಂತದ ಪ್ರಮುಖ ಮುಂದಾಳುಗಳೂ ಎಲ್ಲರ ಜೊತೆಯಲ್ಲಿ ಕಾಂಗ್ರೆಸ್ಸಿನ ಆಯೋಜಿತ ಅಧ್ಯಕ್ಷ ಮಂಟಪ ಪ್ರವೇಶಮಾಡಬೇಕು. ಗಾಂಧೀಜಿಯೂ ಹಾಗೆ ಮಾಡಿದರು. ಮಂಟಪವು ಕಿಕ್ಕಿರಿದು ತುಂಬಿತ್ತು. ಗಾಂಧೀಜಿಯ ಇಚ್ಛೆಯಂತೆ ಹಾಡು ಕೂಡ ಪ್ರಾರಂಭವಾಗಿತ್ತು. ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಮೇಲೆ ಹಾಡು ಮುಗಿಯಿತು. ನಾನು ನನ್ನ ಭಾಷಣ ಪ್ರಾರಂಭ ಮಾಡಿದೆ.

"ವಿಷಯ ನಿಯಾಮಕ ಸಮಿತಿ ಈ ಮೊದಲೇ ಸೇರಿತ್ತು. ಇಂತಿಂಥ ವಿಷಯ ಕಾಂಗ್ರೆಸ್ಸಿನ ಮುಂದೆ ಬರಬೇಕು ಎಂದು ಗೊತ್ತಾಯಿತು. ಕಾಂಗ್ರೆಸ್ಸನ್ನು ಸ್ವರಾಜ್ಯ ಪಕ್ಷದವರ ಕಡೆಗೆ ಕೊಡಬೇಕು. ಪಾಟ್ನಾದಲ್ಲಿ ನಡೆದ ಕಾರ್ಯನಿರ್ವಾಹಕ ಮಂಡಲಿಯ ಸಭೆಯಲ್ಲಿ ಆದ ತೀರ್ಮಾನವನ್ನು ಪುಷ್ಟೀಕರಿಸುವುದೇ ಮುಖ್ಯ ಠರಾವು. ಇದರ ಬಗ್ಗೆ ವಿಷಯ ನಿಯಾಮಕ ಸಮಿತಿಯಲ್ಲಿ ಸಾಕಷ್ಟು ಚರ್ಚೆ, ವಾದ ವಿವಾದ ನಡೆದಿದ್ದವು. ಈ ಮುಖ್ಯ ಠರಾವನ್ನು ಮೊದಲನೆಯ ದಿವಸವೇ ಮಂಡಿಸಲಾಯಿತು. ಅದು ಅಂಗೀಕೃತ ಆಯಿತು. ಮೊದಲನೆಯ ದಿವಸವೇ ಈ ಠರಾವನ್ನು ಅಂಗೀಕರಿಸುವದರಲ್ಲಿ ಗಾಂಧೀಜಿಯ ಉದ್ದೇಶ, ಕಾಂಗ್ರೆಸ್ಸಿನ ಅಧಿವೇಶನವನ್ನು ಆದಷ್ಟು ಬೇಗ ಮುಗಿಸಬೇಕು ಎಂದು. ಹೊತ್ತಿಗೆ ಸರಿಯಾಗಿ ಎಲ್ಲ ಕೆಲಸಗಳನ್ನೂ ಮುಗಿಸುವದರಲ್ಲೇ ಅವರಿಗೆ ಲಕ್ಷ್ಯ ಹೆಚ್ಚು. ಹೀಗಾಗಿ ಮರುದಿವಸವೇ ಅಧಿವೇಶನ ಮುಗಿಯಬಹುದೆಂದು ನಮಗನಿಸಿತು. ಎರಡೇ ದಿನಗಳಲ್ಲಿ ಕೆಲಸ ಮುಗಿದರೆ ಮೂರನೇ ದಿನ ಟಿಕೆಟ್ ಮಾರಾಟ ಆಗುವದಿಲ್ಲ. ಅದರಿಂದ ಬರುವ ಉತ್ಪನ್ನದಲ್ಲಿ ಕೊರತೆ ಆಗಬಹುದು ಎನಿಸಿತು, ಸ್ವಾಗತ ಸಮಿತಿಯ ಕೆಲವು ಸದಸ್ಯರಿಗೆ. ಕೇವಲ ಹಣಕ್ಕಾಗಿ ಅಧಿವೇಶನವನ್ನು ಮುಂದುವರಿಸುವದು ಗಾಂಧೀಜಿಗೆ ಸಮ್ಮತ ಇರಲಿಲ್ಲ. ಗಾಂಧೀಜಿ ಇಚ್ಛೆಯಂತೆ ಅತ್ಯಂತ ಕ್ರಮಬದ್ಧವಾಗಿ ಕೆಲಸ ನಡೆದು, ಎರಡೇ ದಿನಗಳಲ್ಲಿ ಅಧಿವೇಶನ ಮುಕ್ತಾಯ ಆಯಿತು. ಅವರಿಗೆ ವೇಳೆಯ ಬೆಲೆ ಚೆನ್ನಾಗಿ ಗೊತ್ತಿತ್ತು." ಹೀಗೆ ದೇಶಪಾಂಡೆ ಗಂಗಾಧರರಾಯರು ಬರೆಯುತ್ತಾರೆ.

ಕಾಂಗ್ರೆಸ್ ಅಧಿವೇಶನ ಮುಗಿದಮೇಲೆ ಗಾಂಧೀಜಿ ಹೆಚ್ಚಾಗಿಯೇ ಒಂದು ದಿನ ವಿಜಯನಗರದಲ್ಲಿ (ಬೆಳಗಾಂವಿಯಲ್ಲಿ) ಇದ್ದರು. ಬೇರೆ ಬೇರೆ ಪ್ರಾಂತಗಳ ಕಾರ್ಯಕರ್ತ ರೊಂದಿಗೆ ವಿಚಾರ ವಿನಿಮಯ ನಡೆಸಲು ಶಿಬಿರದಲ್ಲಿ ಇದ್ದರು. ಅಧಿವೇಶನಕ್ಕೆ ೧೫ ದಿನ ಮೊದಲು "ಅಧಿವೇಶನ ಕೆಲಸಕ್ಕಾಗಿಯೇ ಹೊರತು ಆಡಂಬರಕ್ಕೆ ಅಲ್ಲ. ಆಡಂಬರಕ್ಕೆ ಅಥವಾ ಶೃಂಗಾರ ಪ್ರದರ್ಶನಕ್ಕೆ ಬೇರೆ ಕಾರ್ಯಕ್ರಮ ಇಟ್ಟುಕೊಳ್ಳಬೇಕು. ಅಧಿವೇಶನದ ಕಾಲ ವ್ಯರ್ಥ ಆಗಬಾರದು. ನನ್ನ ಮೆರವಣಿಗೆ ಮಾಡಬಾರದು" ಎಂದು ನಿಷ್ಠುರವಾಗಿ ಗಾಂಧೀಜಿ ಸ್ವಾಗತ ಸಮಿತಿಗೆ ತಿಳಿಸಿದ್ದರು. ಬೆಳಗಾಂವಿಗೆ ನಾಲ್ಕೈದು ದಿನ ಮೊದಲೇ ತಾವು ಬರುತ್ತಿರುವದರಿಂದ ಆಗಿನಿಂದಲೇ ಜನರು ಗುಂಪು ಸೇರಿ ಗದ್ದಲ ಆಗುವ ಸಂಭವ ಇದೆ, ಹಾಗೆ ಜನರು ನೆರೆಯಬಾರದು ಎಂದು ಸಾರ್ವಜನಿಕವಾಗಿ "ಯಂಗ್ ಇಂಡಿಯಾ"ದಲ್ಲಿ ಮೊದಲೇ ಸೂಚನೆ ಕೊಟ್ಟಿದ್ದರು.

ಸ್ವತಃ ಗಾಂಧೀಜಿಯೇ ಅಧ್ಯಕ್ಷರಾಗಿದ್ದುದರಿಂದ ಕಾಂಗ್ರೆಸ್ಸಿನಲ್ಲಿ ಬಹುಮತ ಅಪರಿವರ್ತನ ವಾದಿಗಳಿಗೇ ಸಿಗುತ್ತಿತ್ತು. ಅದರಲ್ಲಿ ಎಳ್ಳಷ್ಟೂ ಸಂಶಯ ಇರಲಿಲ್ಲ. ಆದರೆ ಗಾಂಧೀಜಿ ಸತ್ಯಾಗ್ರಹಿಗಳು. ಪರಿವರ್ತನವಾದಿಗಳ ಮುಖಂಡರಾದ ಶ್ರೀ ಚಿತ್ತರಂಜನ ದಾಸ್ ಮತ್ತು ಪಂಡಿತ ಮೋತಿಲಾಲ್ ನೆಹರು ಇವರ ಸಂಗಡ ಒಪ್ಪಂದ ಮಾಡಿಕೊಂಡಿದ್ದರು. ಅದರಿಂದ ಬಹಳ ತೊಡಕಾಗಿದ್ದ ಈ ಪ್ರಶ್ನೆ ಬಗೆಹರಿದಿತ್ತು. ಈ ಒಪ್ಪಂದ ಅಧ್ಯಕ್ಷರು ಸ್ವಂತ ಜವಾಬ್ದಾರಿಯ ಮೇಲೆ ಮಾಡಿಕೊಂಡಿದ್ದು. ಅದಕ್ಕೆ ಕಾಂಗ್ರೆಸ್ ಅಧಿವೇಶನದಲ್ಲಿ ಅ.ಭಾ. ಕಾಂಗ್ರೆಸ್ ಸಮಿತಿಯ ಹಾಗೂ ಕಾಂಗ್ರೆಸ್ಸಿನ ಒಪ್ಪಿಗೆ ಬೇಕಾಗಿತ್ತು. ಬೆಳಗಾಂವ ಕಾಂಗ್ರೆಸ್ಸಿನಲ್ಲಿ ಅದು ಸಿಕ್ಕಿತು. ಮುಖ್ಯ ತತ್ವವನ್ನು ಬಿಟ್ಟುಕೊಡದಿದ್ದರೂ ವಿವರಗಳಲ್ಲಿ ಜಗಳಾಡುವ ಸ್ವಭಾವ ಅವರದಲ್ಲ. ಆದರಿಂದ ಕೆಲಸ ಕೇಡು. ವಿರುದ್ಧ ಇದ್ದರೂ ಕೂಡ ಅವರೂ ಪ್ರಾಮಾಣಿಕರೇಕೆ ಆಗಿರಬಾರದು ಎಂಬ ನಿಲುವು ಅವರದು. ಮಾಡಿಕೊಂಡ ಒಪ್ಪಂದವನ್ನು ಸ್ವಯಂ ಅಕ್ಷರಶಃ ಅವರು ಪಾಲಿಸಿದರು. ಇತರರೂ ಹಾಗೇ ನಡೆಯಬೇಕೆಂದು ಅವರು ಹೇಳುತ್ತಿದ್ದರು. – ಎಂದು ಸಾಗತಾಧ್ಯಕ್ಷರು ತಿಳಿಸಿದ್ದಾರೆ.

**ಬೆಳಗಾಂವ ಕಾಂಗ್ರೆಸ್ಸಿನಲ್ಲಿ ಅಧ್ಯಕ್ಷರ ಪ್ರಾರಂಭ ಭಾಷಣ : ೨೬-೧೨-೧೯೨೪**

ಮಹಾತ್ಮಾ ಗಾಂಧೀ ಅಧಿವೇಶನಕ್ಕೆ ಅಧ್ಯಕ್ಷರು. ಅಧ್ಯಕ್ಷರು ವೇದಿಕೆಯಿಂದ ಕೆಳಗೆ ಇಳಿದು ಭಾಷಣ ಮಾಡುವ ಸ್ಥಳಕ್ಕೆ ಬಂದರು. ಎತ್ತರವಾದ ಒಂದು ಸ್ಟೂಲಿನ ಮೇಲೆ ಕುಳಿತು, ಎದುರಿಗೆ ಗಡಿಯಾರ ಇಟ್ಟುಕೊಂಡರು. ಸ್ವಾಗತಾಧ್ಯಕ್ಷರು ಒಂದು ಗಂಧದ ಮರದ ಪೆಟ್ಟಿಗೆಯಲ್ಲಿ ಕರ್ನಾಟಕ – ಒಂದು ಕೈಪಿಡಿ (Karnatak - A Hand Book) ಎಂಬುದನ್ನು ಇಟ್ಟು, ಗಾಂಧೀಜಿಗೆ ಅರ್ಪಿಸಿದರು. ಚಪ್ಪಾಳೆಗಳ ನಡುವೆ ಅದನ್ನು ಅಧ್ಯಕ್ಷರು ಸ್ವೀಕರಿಸಿದರು. ಆಮೇಲೆ ೧೦ ನಿಮಿಷ ಹಿಂದಿಯಲ್ಲಿ ಮಾತನಾಡಿದರು.

ಗಂಗಾಧರರಾಯರೇ, ಸೋದರ ಸೋದರಿಯರೇ, ನನಗೆ ನೀವು ಮಾಡಿರುವ ಗೌರವವನ್ನು ಕೆಡಿಸುವಂತೆ ದೊಡ್ಡ ಭಾಷಣ ನಾನು ಮಾಡುವದಿಲ್ಲ; ನಾನು ಹೇಳಬೇಕಾದದ್ದು (ತಮಗೆ

ಆಗಲೇ ಗೊತ್ತಿದೆ. ನನ್ನ ಭಾಷಣ ಹಿಂದೀ, ಕನ್ನಡ ಮರಾಠಿಗಳಿಗೆ ಭಾಷಾಂತರ ಆಗಿದೆ. ಇಂಗ್ಲೀಷಿನಲ್ಲಿಯೂ ಇದೆ. ನಿನ್ನೆ ಸಂಜೆಯ ಹೊತ್ತಿಗೆ ನಿಮಗೆಲ್ಲರಿಗೂ ಅದರ ಪ್ರತಿಗಳು ಸಿಗಬೇಕು ಎಂದು ಗಂಗಾಧರರಾಯರನ್ನು ಪ್ರಾರ್ಥಿಸಿದ್ದೆ. ನಿಮಗೆ ಸಿಕ್ಕಿದೆ. ನೀವು ಅದನ್ನು ಚೆನ್ನಾಗಿ ಓದಿಕೊಂಡಿದ್ದೀರಿ ಎಂದು ತಿಳಿದಿದ್ದೇನೆ.

ನಾನು ಹೇಳಬೇಕಾದದ್ದು ಇಷ್ಟೇ. ೧೯೨೦-೨೧ರಲ್ಲಿ ನಾವು ಏನು ಸಾಧಿಸಬೇಕು ಎಂದಿದ್ದೆವೋ ಅದನ್ನು ಸಾಧಿಸಲಾಗಲಿಲ್ಲ. ನಮ್ಮೊಳಗೆ ಅನೈಕಮತ್ಯ ವಿರಸ ತಲೆ ಎತ್ತಿಕೊಂಡಿದೆ. ಹಿಂದೂಗಳೂ, ಮುಸ್ಲಿಮರೂ ಪರಸ್ಪರ ಶತ್ರುಗಳು ಎಂದು ತಿಳಿದುಕೊಂಡು ಶಾರೀರಿಕ ಹಿಂಸೆಯನ್ನು ಮಾಡುತ್ತಿದ್ದಾರೆ. ಇದು ಸ್ವರಾಜ್ಯ ಸಾಧನೆಗೆ ದಾರಿಯಲ್ಲ ಎಂದು ಹೇಳುವ ಅಗತ್ಯವಿಲ್ಲ. ಹಿಂದೂಗಳು ನಾವು, ಅಸ್ಪೃಶ್ಯರನ್ನು ಕೀಳಾಗಿ ಕಾಣುತ್ತೇವೆ. ಅವರನ್ನು ಮುಟ್ಟಿದರೆ ಪಾಪ ಎಂದು ತಿಳಿದಿದ್ದೇವೆ. ಇದು ದೇವರೆದುರು ಮಾಡಿದ ಮಹಾಪಾಪ. ಈಗಾಗಲೇ ೩-೪ ವರ್ಷಗಳಿಂದ ದೊಡ್ಡವರು ಚಿಕ್ಕವರು ರಾಟೆ ತಿರುಗಿಸಬೇಕು ಎನ್ನುತ್ತಿದ್ದೇವೆ: ಕಾಂಗ್ರೆಸ್ಸಿನಲ್ಲಿ; ಅ.ಭಾ.ಕಾಂಗ್ರೆಸ್ ಸಮಿತಿಯಲ್ಲಿ ರಾಟೆಯ ಮೂಲಕ ಸ್ವರಾಜ್ಯ ಸಂಪಾದನೆ ಆಗಬೇಕು ಎಂದು ಹೇಳುತ್ತಿದ್ದೇವೆ. ಈ ಚಳವಳಿಯ ಪ್ರಚಾರಕ್ಕಾಗಿ ನಾನು ಪೂನಾಕ್ಕೆ ಹೋಗಿದ್ದಾಗ, ಲೋಕಮಾನ್ಯ ತಿಲಕರು ಕೊಟ್ಟ "ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು" ಎಂಬ ವಾಕ್ಯಾರ್ಥವನ್ನು ಹೇಳಿ, ಅದನ್ನು ಪೂರ್ಣ ಮಾಡುವುದೇ ನನ್ನ ಬದುಕಿನ ಪರಮೋದ್ದೇಶ ಎಂದು ಹೇಳಿದೆ. ಇದು ನನ್ನ ನಂಬಿಕೆ. ನಾನು ಮತ್ತೆ ಅದನ್ನೇ ಹೇಳುತ್ತಿದ್ದೇನೆ. ನಮಗೆ ಸ್ವರಾಜ್ಯ ಬೇಕು ಎಂದರೆ ಅದಕ್ಕೆ ದಾರಿ ರಾಟೆ, ನೂಲು, ಖಾದಿ. ಇದು ನಮಗೆ ಗೊತ್ತಿದೆ. ಆದರೆ ಅದರಂತೆ ಮಾಡುವುದಿಲ್ಲ ಎಂದು ನನಗೆ ವಿಷಾದವಾಗುತ್ತದೆ. ನನಗೆ ಬೇರೆ ಏನೂ ಗೊತ್ತಿಲ್ಲ. ಬೇರೆ ಯೋಚಿಸುವುದೂ ಇಲ್ಲ. ಸೋದರ ಸೋದರಿಯರೇ, ನಿಮ್ಮ ಎದುರಿಗೆ ನಿಂತು ಭಾಷಣ ಮಾಡುವುದು ವ್ಯರ್ಥ. ಅದು ನಮ್ಮನ್ನು ಎಲ್ಲಿಗೂ ಒಯ್ಯುವುದಿಲ್ಲ. ನಿಮಗೂ ನನಗೂ ಅಮೂಲ್ಯವಾದ ಕಾಲಹರಣ ಮಾತ್ರ, ಏಕೆಂದರೆ ನಾನು ದೇವರ ಕಿಂಕರ ಎಂದುಕೊಂಡಿದ್ದೇನೆ. ಈ ರೀತಿ ನಮಗೆ ಸ್ವರಾಜ್ಯ ದೊರೆಯುವುದಿಲ್ಲ ಎಂದು ನಾನು ಬಲ್ಲೆ. ಬೇಗಂ ಮಹಮ್ಮದಾಲಿ ಒಂದು ಸಾರಿ ನನಗೆ ಹೇಳಿದರು, – ಕಾಂಗ್ರೆಸ್ ಅಧಿವೇಶನಕ್ಕೆ ಹೋದಾಗಲೆಲ್ಲ ಸ್ವರಾಜ್ಯ ಬಂತು ಎಂದು ಒಂದು ವಾರ ತನಗೆ ಅನಿಸುತ್ತದೆ ಎಂದು. ಎಂದರೆ ಸ್ವರಾಜ್ಯದ ನಾಟಕ ಆಡುತ್ತೇವೆ ಎಂತ, ಒಬ್ಬ ವೇಷಧಾರಿ ಹರಿಶ್ಚಂದ್ರನ ಪಾತ್ರ ಮಾಡಿದಂತೆ ಆಗುತ್ತದೆ. ಹರಿಶ್ಚಂದ್ರನ ವೇಷ ಹಾಕಿದವನು ಸತ್ಯವಂತ ಹೌದೋ ಅಲ್ಲವೋ ನಮಗೆ ತಿಳಿಯದು. ಈ ಸ್ವರಾಜ್ಯೋತ್ಸವ ಒಂದು ನಾಟಕ ಆಗಿದೆ. ಆದ್ದರಿಂದಲೇ ನಿಮಗೆ ನಾನು ಹೇಳುತ್ತೇನೆ. ದೇಶಬಂಧು ದಾಸರು ಒಂದು ಗೊತ್ತುವಳಿಯನ್ನು ಮಂಡಿಸುತ್ತಾರೆ. ನಿಮಗೆ ಇದು ಒಪ್ಪಿಗೆ ಇದ್ದರೆ ಒಪ್ಪಿಗೆ ಕೊಡಿ. ಇಲ್ಲದೆ ಇದ್ದರೆ ನಿರಾಕರಿಸಿ. ಅದರಲ್ಲಿ ಹಿಂದೂ ಮುಸ್ಲಿಂ ಐಕ್ಯದ ಮಾತು ಇಲ್ಲ; ಅಸ್ಪೃಶ್ಯತೆಯ ವಿಷಯವೂ ಇಲ್ಲ. ನಾವು ನೂಲಬಯಸುತ್ತೇವೆ ಎಂದಷ್ಟೇ ಅದರ ಮಾತು. ಇಲ್ಲಿ ಬಂದಿರುವ ಅಸ್ಪೃಶ್ಯರು ಕ್ರಿಶ್ಚಿಯನರು, ಇತರರು ಎಲ್ಲ ಪ್ರತಿನಿಧಿಗಳಿಗೂ ನನ್ನ ಬೇಡಿಕೆ ಇಷ್ಟೇ – ನೀವು ಯಾರನ್ನು ಪ್ರತಿನಿಧಿಸಲು ಬಂದಿದ್ದೀರೋ ಅವರ ಪ್ರತಿನಿಧಿಗಳು ನಿಜವಾಗಿ ಆಗಿದ್ದರೆ, ಮಹಮ್ಮದಾಲಿ ಮತ್ತು ದಾಸರ ಶಪಥವನ್ನು ನೀವು ಎತ್ತಿ ಹಿಡಿಯಬಯಸಿದರೆ ದೇವರ

ಸನ್ನಿಧಿಯಲ್ಲಿ ಹೇಗೆ ಮಾಡಬೇಕೋ ಹಾಗೆ ಮಾಡಿ. ಇದು ಸರಿ ಅಲ್ಲ, ಗಾಂಧೀ ನಿಮ್ಮನ್ನು ಮೋಸಗೊಳಿಸುತ್ತಿದ್ದಾನೆ ಎನಿಸಿದರೆ ಇದನ್ನು ತಿರಸ್ಕರಿಸಿಬಿಡಿ. ಆದರೆ ನೀವು ಶಪಥಮಾಡಿದರೆ – ಈ ಗೊತ್ತುವಳಿಯನ್ನು ಒಪ್ಪಿಕೊಳ್ಳುವುದೇ ಒಂದು ಶಪಥ– ಆಮೇಲೆ ಅದರಂತೆ ಮಾಡದಿದ್ದರೆ ನಿಮ್ಮ ಹಣೇಬರಹ. ದೇಶಕ್ಕೆ ಗಾಂಧೀ ಹುಚ್ಚ ಎನಿಸಿದರೆ ಅವನನ್ನು ತಿರಸ್ಕರಿಸಿಬಿಡಿ. ಮತ್ತೊಮ್ಮೆ ಯೋಚಿಸಿ. ಭಾರತ ಸ್ವರಾಜ್ಯಕ್ಕೆ ಯೋಗ್ಯವೆ? ಪ್ರತಿಜ್ಞೆಮಾಡಿ ಅದರಂತೆ ನಡೆಯದಿದ್ದರೆ ಆ ಮನುಷ್ಯನಿಗೆ ಜಗತ್ತು ಏನನ್ನುತ್ತದೆ? ಬೈಬಲ್ ಅಥವಾ ಗ್ರಂಥಸಾಹೇಬ್ ಅಥವಾ ಕೊರಾನ್ ಯಾವುದನ್ನೇ ಅವನು ಓದಿದ್ದರೂ ನಿಮ್ಮ ಕಣ್ಣಿಗೆ ಆಗ ಕುಷ್ಠರೋಗಿ, ಅಪ್ರಯೋಜಕ, ಖೊಟ್ಟನಾಣ್ಯ. ಖೊಟ್ಟನಾಣ್ಯವನ್ನು ಅಂಗಡಿಗೆ ತೆಗೆದುಕೊಂಡು ಹೋದರೆ, ಸರಕಾರ ನಿಮ್ಮನ್ನು ಹಿಡಿದುಹಾಕುತ್ತದೆ, ನಿಮ್ಮನ್ನು ತಪ್ಪುದಾರಿಗೆ ಎಳೆಯುವ ಉದ್ದೇಶ ನನ್ನದಲ್ಲ. ನಿಮ್ಮ ಸಂಗಡ ಹುಡುಗಾಟಿಕೆ ಆಡುವುದಿಲ್ಲ. ನನಗೆ ತಿಳಿದದ್ದನ್ನು, ನನಗೆ ಅನಿಸಿದ್ದನ್ನು ನಾನು ಹೇಳುತ್ತಿದ್ದೇನೆ. ನಮ್ಮ ಕೋಟಿ ಕೋಟಿ ಜನ ಸೋದರ ಸೋದರಿಯರು ಎಲ್ಲಿಯವರೆಗೆ ರಾಟೆಯಲ್ಲಿ ವಿಶ್ವಾಸವಿಡುವುದಿಲ್ಲವೋ, ರಾಟೆಯನ್ನು ನೂಲುವುದಿಲ್ಲವೋ, ಖಾದಿಯನ್ನು ಮಾಡುವುದಿಲ್ಲವೋ ಮತ್ತು ಧರಿಸುವುದಿಲ್ಲವೋ ಅಲ್ಲಿಯವರೆಗೆ ಸ್ವರಾಜ್ಯ ಬರುವುದಿಲ್ಲವೆಂದು ನಾನು ಮನಗಂಡಿದ್ದೇನೆ. ಈ ಖಾದೀ ಕಾರ್ಯ ಆಗುವವರೆಗೆ ಭಾರತದ ಬಡತನ ನೀಗದು. ನಮ್ಮ ಕೋಟ್ಯಂತರ ಬಡಬಗ್ಗರಿಗೆ ಹಿಟ್ಟು ದೊರೆಯುವವರೆಗೆ ನಮಗೆ ಸ್ವರಾಜ್ಯ ಇಲ್ಲ.

ನಿಮಗೆ ಸ್ವರಾಜ್ಯ ಸಿಗಬೇಕಾದರೆ ಇದೇ ಕರಾರಿನ ಮೇರೆಗೆ ದೇಶಬಂಧು ದಾಸರೊಂದಿಗೆ, ಪಂಡಿತ್ ಮೋತಿಲಾಲರೊಂದಿಗೆ ನಾನು ಒಂದು ಒಪ್ಪಂದ ಮಾಡಿಕೊಂಡು, ಅದನ್ನು ಇಡೀ ದೇಶದ ಮುಂದೆ ಇಟ್ಟಿದ್ದೇನೆ. ನಾನು ಬಯಸಿದ್ದರಲ್ಲಿ ಏನೂ ತಪ್ಪಿಲ್ಲ ಎಂದು ನಂಬಿದ್ದೇನೆ. ತಾವು ಬಯಸಿದಂತೆ ಮಾಡುವ ಅವರ ಹಕ್ಕನ್ನು ಒಪ್ಪಿಕೊಳ್ಳುತ್ತೇನೆ. ನನ್ನ ಮಟ್ಟಿಗೆ ಶಾಸನಸಭೆಗಳಿಂದ ಏನೂ ಲಾಭ ಇಲ್ಲ ಎಂದುಕೊಂಡಿದ್ದೇನೆ. ಆದರೆ ಶಾಸನಸಭೆಗಳ ಮೂಲಕ ಲಾಭ ಉಂಟು ಎಂದು ತಿಳಿದ ಅನೇಕ ಮಹಾನಾಯಕರು ಇದ್ದಾರೆ. ಏನೂ ಆಗದಿದ್ದರೂ ಶಾಸನಸಭೆಗಳಿಗಾದರೂ ಹೋಗಬಹುದಲ್ಲ ಎನ್ನುತ್ತಾರೆ ಅವರು. ನಿಜ. ಶಾಸನಸಭೆಗಳಿಗೆ ಹೋಗುವುದರಲ್ಲಿ ಪ್ರಯೋಜನ ಇದೆ ಎನಿಸಿದರೆ ಅವರಿಗೆ, ಅವರು ಹೋಗಲೇಬೇಕು ಎನ್ನುತ್ತೇನೆ. ಅವರೂ ದೇಶದ ನಾಯಕರೇ. ನಾನು ಬೇಡ ಎಂದು ಹೇಳಲು ಯಾರು. ಹೋಗಬೇಕು ಎನ್ನುವವರು ಶಾಸನಸಭೆಗೆ ಹೋಗಲಿ ಎನ್ನುತ್ತದೆ ಒಪ್ಪಂದ. ಅಸಹಕಾರಿಗಳು ಅವರನ್ನು ಹಿಂಬಾಲಿಸಬೇಕು ಎಂದು ಅರ್ಥವಲ್ಲ. ಕಾಂಗ್ರೆಸ್ ಪರಿವರ್ತನ ವಾದಿಗಳಿಗೆ ಎಷ್ಟರ ಮಟ್ಟಿಗೆ ಸೊತ್ತೋ ಅಪರಿವರ್ತನವಾದಿಗಳಿಗೂ ಅಷ್ಟೇ. ಯಾರೊಬ್ಬರದೂ ಇದಲ್ಲ. ಹಾಗೆ ತಿಳಿದರೆ ಅದು ತಪ್ಪು. ಆದ್ದರಿಂದ ಅವರು ಕಾಂಗ್ರೆಸ್ಸಿನ ಪರವಾಗಿ ಹೋಗುತ್ತಾರೆ.

ಇದು ತಪ್ಪು ಎಂದು ಹೇಳಿದೆ. ಆದರೆ ನನ್ನದೇ ಸರಿ, ಉಳಿದವರು ತಪ್ಪು ಎಂಬ ಭಾವನೆಯು ಅಳಿಯಬೇಕು. ಜಗತ್ತಿನಲ್ಲಿ ಬೇರೆ ಬೇರೆ ಮನೋಧರ್ಮ ಇರುವವರೆಗೆ ಭಿನ್ನಾಭಿಪ್ರಾಯಗಳು ಇದ್ದೇ ಇರುತ್ತವೆ. ಆದರೆ ಸಹನೆಯನ್ನು ಹೆಚ್ಚಿಸಲು ನಾವು ಎಲ್ಲವನ್ನೂ ಒಪ್ಪಿಕೊಳ್ಳುತ್ತೇವೆ. ಇದು ಅಹಿಂಸೆಯ ಒಂದು ಅಂಗ. ಆದರೆ ನಾನು ಹೇಳಿದ ಹಾಗೆ ಇದು

ಚಿಕ್ಕ ವಿಷಯ. ಈ ಪ್ರತಿಜ್ಞೆಯಲ್ಲಿ ಮುಖ್ಯ ವಿಷಯ ರಾಟೆ. ಚರಖಾಶಾಸ್ತ್ರದಲ್ಲಿ ನಿಮಗೆ ನಂಬಿಕೆ ಇಲ್ಲದಿದ್ದರೆ, ಖಾದಿಯಲ್ಲಿ ನಿಮಗೆ ಶ್ರದ್ಧೆ ಇಲ್ಲದಿದ್ದರೆ, ಈ ಹೊಸ ಮತದಾನ ಪದ್ಧತಿ ಕಾಂಗ್ರೆಸ್ಸನ್ನು ದುರ್ಬಲಗೊಳಿಸುತ್ತದೆ ಎಂದು ನಿಮಗನಿಸಿದರೆ, ರಾಟೆಯನ್ನು ಕೈಬಿಡಿ ಎನ್ನುತ್ತೇನೆ.

ಸೋದರರೇ, ಈ ಕೆಲಮಾತನ್ನು ನನ್ನ ಹರಕುಮುರುಕು ಹಿಂದಿಯಲ್ಲಿ ಹೇಳಿದ್ದೇನೆ. ಕರ್ನಾಟಕದ, ದಕ್ಷಿಣಭಾರತದ ಕೆಲವರು ಇಂಗ್ಲೀಷಿನಲ್ಲಿ ಮಾತನಾಡಿ ಎನ್ನುತ್ತಿದ್ದೀರಿ. ಇದರಿಂದ ನನಗೆ ನೋವಾಗುತ್ತದೆ. ನಾನು ಭಾರತಕ್ಕೆ ಬಂದಾಗಿನಿಂದ ಕನಿಷ್ಠ ಪಕ್ಷ ಕಾಂಗ್ರೆಸ್ಸಿನಲ್ಲಾದರೂ ಸ್ವರಾಜ್ಯದ ಮಾತನಾಡುವಾಗ, ಹಿಂದಿಯಲ್ಲೇ ಮಾತನಾಡೋಣ ಎನ್ನುತ್ತಿದ್ದೇನೆ. ನಮ್ಮ ದುರ್ದೈವ, ನಮ್ಮ ಶಿಕ್ಷಣ ಬಹಳ ತಪ್ಪು. ಅದರ ತುಂಬ ಸೋಮಾರಿತನ ಸೇರಿಕೊಂಡಿದೆ. ಇದಕ್ಕಾಗಿ ಎಷ್ಟು ಪ್ರಯತ್ನ ಮಾಡಬೇಕೊ ಅಷ್ಟು ಪ್ರಯತ್ನ ಮಾಡುತ್ತಿಲ್ಲ. ಈಗಲೂ ಕೂಡ ನನ್ನ ಹರಕುಮುರುಕು ಹಿಂದಿ ತಮಿಳುನಾಡಿನ, ಕರ್ನಾಟಕದ ಸೋದರರಿಗೆ ಅರ್ಥವಾಗುತ್ತದೆ ಸ್ವಲ್ಪಮಟ್ಟಿಗೆ ಎಂದು ನನಗೆ ಮನವರಿಕೆಯಾದರೆ ನಾನು ಸಮಾಧಾನಗೊಂಡು ಹೋಗುತ್ತೇನೆ. ಆದರೆ ಪರಿಸ್ಥಿತಿ ಹಾಗಿಲ್ಲ. ದೇಶಬಂಧು ದಾಸರನ್ನು ನಾನು ಮರೆಯುತ್ತಿದ್ದೇನೆ. ಈ ಪಾಪಕ್ಕೆ ಬಂಗಾಲದಲ್ಲೂ ಕಾಣಿಕೆ ಇದೆ. ರವೀಂದ್ರನಾಥ ಠಾಕೂರರು ಅಂಥ ಅದ್ಭುತ ಸಾಹಿತ್ಯ ಸೃಷ್ಟಿಸಿರುವ ಆ ಭಾಷೆಯನ್ನು ಕಲಿಯಲು ದೇವರು ನನಗೆ ಶಕ್ತಿ ಕೊಟ್ಟಿದ್ದರೆ ಚೆನ್ನಾಗಿತ್ತು. ನನ್ನ ಬಂಗಾಳೀ ಸೋದರರಿಗೆ ಆ ಭಾಷೆಯಲ್ಲಿ ಹೇಳಬಹುದಾಗಿತ್ತು.

ಇನ್ನು ಒಂದೇ ಒಂದು ಬಿನ್ನಹ. ಚೆನ್ನಾಗಿ ತಿಳಿದುಕೊಳ್ಳಿ. ನಾನು ಹೇಳಬೇಕಾದ್ದನ್ನೆಲ್ಲ ಹಿಂದಿಯಲ್ಲಿ ಹೇಳಿದ್ದೇನೆ. ನಿಮಗೂ ಅರ್ಥವಾಗಿದೆ. ದಾಸರು ಬಂದು ತಮಗೆ ಬೇಕಾದದ್ದನ್ನು ಹೇಳುತ್ತಾರೆ. ದಾಸರು ಗೊತ್ತುವಳಿಯನ್ನು ಓದುವದಿಲ್ಲ. ಓದಲು ಒತ್ತಾಯ ಮಾಡಬೇಡಿ. ನೀವು ಓದಿರದಿದ್ದರೆ ನಾಳೆ ಪತ್ರಿಕೆಗಳಲ್ಲಿ ಓದಿ. ಅದರಲ್ಲಿ ಇರುವುದು ಇಷ್ಟೇ. ಪರಿವರ್ತನವಾದಿಗಳು, ಅಪರಿವರ್ತನವಾದಿಗಳು ಏಕಮತದಿಂದ ಇರಬೇಕು ಎಂಬುದು ಆಶಯ. ನಮ್ಮ ಅಭಿಪ್ರಾಯಗಳು ಬೇರೆ ಬೇರೆ. ಆದರೆ ನಮ್ಮ ಹೃದಯ ಒಂದೇ. ನೀವು ಅಪರಿವರ್ತನವಾದಿಗಳಾಗಿದ್ರೆ ನಿಮ್ಮ ಹೃದಯದಲ್ಲಿ ನನಗಿರುವಷ್ಟು ಸ್ಥಾನವೇ ದೇಶಬಂಧು ದಾಸರಿಗೆ, ಪಂಡಿತ್ ಮೋತೀಲಾಲರಿಗೆ, ಕೇಳಕರರಿಗೆ ಇತರರಿಗೆ ಇರಬೇಕು. ನಿಮ್ಮ ನಾಯಕರುಗಳಿಗೆ ಕೊಡುವಷ್ಟು ಗೌರವವನ್ನು ನನಗೂ ಕೊಡಬೇಕು. ಇದೇ ಹಿಂದೂಮುಸ್ಲಿಮ್ ಐಕ್ಯತೆ. ಹಿಂದೂ ಮುಸ್ಲಿಮ್ ಐಕ್ಯ ಎಂದರೆ ನಾನು ಸನಾತನ ಇದ್ದರೆ ನನ್ನ ಹೃದಯದಲ್ಲಿ ಮಾಲವೀಯ ಅವರಿಗೆ ಯಾವ ಸ್ಥಾನವಿದೆಯೋ ಮೌಲಾನಾ ಮಹಮದಾಲಿ, ಶೌಕತಾಲಿ ಮತ್ತು ಇತರ ಮುಸಲ್ಮಾನರ ಬಗ್ಗೆಯೂ ಅದೇ ಸ್ಥಾನ ಇರಬೇಕು. ಅವರು ನಮ್ಮನ್ನು ಶತ್ರುಗಳೆಂದು ತಿಳಿದರೂ ಕೂಡ ನಮ್ಮ ಈ ಭಾವ ಕದಲಕೂಡದು; ವಿಚಿತ್ರ ಅಲ್ಲವೇ ಇದು. ಮಾಲವೀಯರೊಂದು ಕಡೆ, ನಮ್ಮನ್ನು ಶತ್ರು ಎಂದು ತಿಳಿದ ಮುಸಲ್ಮಾನ ಒಂದು ಕಡೆ. ಆದರೆ ಈ ಗೀತೆ, ಭಾಗವತ, ರಾಮಾಯಣಗಳ ಅಭ್ಯಾಸದಿಂದ ನಾನು ಏನಾದರೂ ಕಲಿತಿದ್ದರೆ ಅದು ಇದೇ.

ಇನ್ನು ನೀವು ಗೊತ್ತುವಳಿ ಓದಿಕೊಳ್ಳಿ; ಮತ್ತು ದಾಸರು ಹೇಳುವದನ್ನು ಕೇಳಿಕೊಳ್ಳಿ. ದಾಸರಿಗೆ ಗೊತ್ತುವಳಿ ಓದಲು ಒತ್ತಾಯಪಡಿಸಬೇಡಿರಿ.

**ಅಧ್ಯಕ್ಷರು ಇಂಗ್ಲಿಷಿನಲ್ಲಿ ಭಾಷಣ ಮುಂದುವರಿಸಿದರು:**

ಹತ್ತು ನಿಮಿಷಕ್ಕಿಂತ ಹೆಚ್ಚಾಗಿ ಮಾತನಾಡುವುದಿಲ್ಲ. ಅರ್ಧಗಂಟೆ ಎಂದುಕೊಂಡಿದ್ದೆ. ಅದರಲ್ಲೇ ಆಗಲೇ ಹಿಂದೂಸ್ತಾನೀ ಭಾಷಣಕ್ಕೆ ತುಂಬಾ ಹೊತ್ತು ತೆಗೆದುಕೊಂಡೆ. ನನ್ನ ಭಾಷಣ ನಿಮಗೆ ಆಗಲೇ ಸಿಕ್ಕಿದೆ. ಅದನ್ನು ನಾನು ಈಗ ಓದುವದಿಲ್ಲ. ಅದರಿಂದ ನಿಮಗೂ ಕಾಲಹರಣ, ನನಗೂ ಕಾಲಹರಣ. ನಿಮಗೆ ಬೇಸರ, ಆದ್ದರಿಂದ ಭಾಷಣ ಓದುವದಿಲ್ಲ. ಆದಷ್ಟು ಕೆಲಸಕ್ಕೆ ತೊಡಗಬೇಕು ದೇಶಬಂಧು ದಾಸರು ಮುಖ್ಯ ಗೊತ್ತುವಳಿಯನ್ನು ಮಂಡಿಸುತ್ತಾರೆ. ನೀವು ಆ ಗೊತ್ತುವಳಿಯನ್ನು ತಿರಸ್ಕರಿಸಿದರೆ, ನಿಮ್ಮ ದಾರಿ ನೀವು ಹಿಡಿದು, ದೇಶಕ್ಕೂ ನಿಮಗೂ ಯಾವುದು ನಿಮಗೆ ಉತ್ತಮ ಎನಿಸುತ್ತದೆಯೋ ಆ ರೀತಿ ಮಾಡಬೇಕು; ನಾನು ಉತ್ತಮ ಎಂದು ತಿಳಿದುಕೊಂಡ ಕೆಲಸವನ್ನು, ಎಂದರೆ ನೂಲುವದನ್ನು ಮಾಡಲು ನನಗೆ ಅನುಮತಿ ಕೊಡಬೇಕು. ನಿಮ್ಮ ಮುಂದೆ ಬರುವ ಗೊತ್ತುವಳಿಯನ್ನು ನೀವೆಲ್ಲರೂ, ಪ್ರತಿಯೊಬ್ಬರೂ ಚೆನ್ನಾಗಿ ಪರ್ಯಾಲೋಚಿಸಿ ಎಂದು ಕೇಳಿಕೊಳ್ಳುತ್ತೇನೆ.

ರಾಷ್ಟ್ರದ ಮುಂದೆ ಒಂದು ಕ್ರಾಂತಿಕಾರಿ ಪರಿವರ್ತನೆಯ ವಿಚಾರವನ್ನು ಮಂಡಿಸಲಾಗುತ್ತಿದೆ. ಲಾಲಾಜಿ ಹೇಳಿದಂತೆ ಕಲ್ಕತ್ತೆಯ ವಿಶೇಷ ಅಧಿವೇಶನದಲ್ಲಿ – ೧೯೨೦ರಲ್ಲಿ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರ ಕೈಕೊಂಡ ಪರಿವರ್ತನೆಯಷ್ಟೇ ಇದೂ ಕೂಡ ಕ್ರಾಂತಿಕಾರಿ ಎನ್ನುತ್ತೇನೆ. ನಾನು ದೇಶದ ಮುಂದಿಟ್ಟಿರುವ ಈ ಬದಲಾವಣೆಯು ಅದಕ್ಕಿಂತಲೂ ಹೆಚ್ಚು ಕ್ರಾಂತಿಕಾರಿ ಎಂದು ಹೇಳಿದ ಅವರ ಮಾತಿಗೆ ದನಿಗೂಡಿಸುತ್ತೇನೆ. ಈ ಗೊತ್ತವಳಿಯನ್ನು ನೀವು ಪೂರ್ಣ ಮನಸ್ಸಿನಿಂದ ಒಪ್ಪಿಕೊಂಡು ಅದರಂತೆ ನಡೆದರೆ ಸ್ವರಾಜ್ಯದ ಹತ್ತಿರಹತ್ತಿರಕ್ಕೆ ನೀವು ಬರುತ್ತೀರಿ ಎಂದು ಧೈರ್ಯವಾಗಿ ಹೇಳುತ್ತೇನೆ. ಕೇವಲ ತೀರ್ಮಾನಮಾಡಿ, ಸಂತೋಷಪಟ್ಟು, ಆಮೇಲೆ ಅದನ್ನು ಮರೆತುಬಿಡುವ ದಿನಗಳು ಕಳೆದುಹೋಗಿವೆ. ಈ ಗೊತ್ತುವಳಿ ಅಸ್ಪಷ್ಟವಾಗಿಲ್ಲ. ಕೆಲಸಮಾಡುವ ಮನಸ್ಸು ಇದ್ದವರಿಗೆ ಎಲ್ಲರಿಗೂ ಇದೊಂದು ಕರೆ. ಅರ್ಥಮಾಡಿಕೊಳ್ಳಬಲ್ಲ ಗಂಡು ಹೆಣ್ಣು, ಯಾರು ಯಾರು ಈ ಸಭೆಯಲ್ಲಿದ್ದರೂ ಅವರಿಗಾಗಿಯೇ ಈ ಠರಾವು ಬಂದಿದೆ. ದೇಶಬಂಧು ದಾಸರಾಗಲೀ, ಮೌಲಾನಾ ಮಹಮ್ಮದಾಲಿ ಆಗಲಿ, ಈ ಠರಾವನ್ನು ಒಪ್ಪಿಕೊಳ್ಳಿ ಎಂದು ನಿಮ್ಮನ್ನು ಕೇಳದಿದ್ದರೂ ದೇವರ ಸಾಕ್ಷಿಯಾಗಿ ಒಪ್ಪಿಕೊಳ್ಳಲು ನಿಮ್ಮನ್ನು ನಾನು ಕೇಳಿಕೊಳ್ಳುತ್ತೇನೆ. ನೀವು ಈ ಠರಾವಿನ ಮೇಲೆ ಮತ ಕೊಡುವಾಗ ದೈವಸಾಕ್ಷಿಯಾಗಿ ಕೊಡುತ್ತಿದ್ದೇನೆ ಎಂದುಕೊಳ್ಳಿ. ರಾಷ್ಟ್ರಕ್ಕಾಗಿ, ದೇಶದ ಕಡುಬಡವರಿಗಾಗಿ, ಸ್ವರಾಜ್ಯ ಸಂಪಾದನೆಗಾಗಿ ಏನಾದರೂ ಮಾಡುವ ಸಂಕಲ್ಪ ಕೈಕೊಳ್ಳುವಿರಿ ಎಂದು ಅದರ ಅರ್ಥ. ಇದರ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಸಂದೇಹ ಇದ್ದರೆ ಠರಾವನ್ನು ತಿರಸ್ಕರಿಸಿ ಎನ್ನುತ್ತೇನೆ.

ಈ ಠರಾವಿನ ಹಿಂದೆ ನನ್ನ ವ್ಯಕ್ತಿತ್ವ ಇದೆ ಎಂದು ನೀವು ಚಿಂತಿಸಬೇಕಾಗಿಲ್ಲ. ನಾನು ಎಂದೂ ತಪ್ಪು ಮಾಡಲಾರದವನು ಅಲ್ಲ ಎಂದು ಪದೇ ಪದೇ ಹೇಳಿದ್ದೇನೆ. ನಾನೂ ತಪ್ಪು

ಮಾಡುವವ ಎಂದು ಮತ್ತೆ ಮತ್ತೆ ಒಪ್ಪಿಕೊಂಡಿದ್ದೇನೆ. ನನ್ನ ಬದುಕಿನಲ್ಲಿ ಕೆಲವು ಸಲ ಹಿಮಾಲಯದಂಥ ತಪ್ಪು ಮಾಡಿದ್ದೇನೆ, ಒಪ್ಪಿಕೊಂಡಿದ್ದೇನೆ. ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡಿದ್ದೇನೆ. ತಪ್ಪು ಮಾಡದವನು ಪರಿಪೂರ್ಣಪುರುಷ. ಅವನು ತಪಸ್ಸು ಮಾಡಬೇಕಾಗಿಲ್ಲ. ಅವನಿಗೆ ಪ್ರಾಯಶ್ಚಿತ್ತ ಬೇಕಿಲ್ಲ. ಏಕೆಂದರೆ ಅವನು ತಪ್ಪನ್ನೇ ಮಾಡಲಾರ. ಅಂಥವನು ತಿಳಿಸಿ ಹೇಳಬೇಕಾದ ಅಗತ್ಯವೇನಿಲ್ಲ. ನಾನೂ ನಮ್ಮ ಹಾಗೆಯೇ ನಮ್ಮಷ್ಟೇ ಸದ್ಗುಣಿ, ಅಥವಾ ದುರ್ಗುಣಿ. ಆದ್ದರಿಂದ ನನ್ನ ವ್ಯಕ್ತಿತ್ವವನ್ನು ಮರೆತು ಈ ಸಮಸ್ಯೆಗೆ ಸರಿಯಾಗಿ ಉತ್ತರ ಹುಡುಕಿರಿ.

ಈ ತೀರ್ಮಾನ ಬಹಳ ಮಹತ್ತರವಾದದ್ದು ಇದಕ್ಕೆ ವಿರುದ್ಧವಾಗಿ ಸಾಕಷ್ಟು ದೊಡ್ಡ ಗುಂಪು ಇದೆ ಎಂದು ಬಲ್ಲೆ. ಕೇವಲ ನೂಲುವದನ್ನೆ ನಂಬಿ ಕುಳಿತುಕೊಳ್ಳುವದು ಯೋಗ್ಯವಲ್ಲ ಎಂದು ಒಂದು ಗುಂಪು. ನೂಲುವದು ಒಳ್ಳೆಯದೇ. ಆದರೆ ಇದು ಬಹಳ ಕಷ್ಟದಾಯಕ ದೀರ್ಘ ಪ್ರಯಾಸ ಎನ್ನುತ್ತದೆ ಇನ್ನೊಂದು ಗುಂಪು. ಖಾದಿ, ನೂಲುವದು ಒಳ್ಳೆಯವೆ. ಆದರೆ ರಾಷ್ಟ್ರೀಯ ಮತಾಧಿಕಾರದಲ್ಲಿ ಇವಕ್ಕೆ ಸ್ಥಾನ ಇಲ್ಲ ಎನ್ನುತ್ತದೆ ಮೂರನೆಯ ಗುಂಪು. ಇವಕ್ಕೆ ವಿರುದ್ಧವಾದ ಅಭಿಪ್ರಾಯ ನನ್ನದು. ದಿನೇ ದಿನೇ ಇದು ನನಗೆ ಹೆಚ್ಚು ಮನದಟ್ಟಾಗುತ್ತಿದೆ. ಸಾಧ್ಯವಾದರೆ ದಿನವೂ ಪ್ರತಿಯೊಂದು ಗಂಟೆಯಲ್ಲಿಯೂ ನಾನು ನೂಲುತ್ತಿದ್ದೆ. ರಾಟೆಯ ಒಂದೊಂದು ಸುತ್ತಿನಿಂದಲೂ ಸ್ವರಾಜ್ಯ ನಮಗೆ ಹತ್ತಿರ ಹತ್ತಿರ ಬರುತ್ತಿದೆ ಎಂದು ನನಗೆ ಅನಿಸುತ್ತದೆ. ಈ ಸುತ್ತುಗಳನ್ನು ಮೂವತ್ತು ಕೋಟಿಯಿಂದ ಗುಣಿಸಿ, ಅದರಿಂದ ಸ್ವರಾಜ್ಯ ಪ್ರಾಪ್ತಿಗೆ ಎಷ್ಟು ವೇಗ ಬರುತ್ತದೆಯೋ ನೋಡಿ. ಈ ಗತಿ, ಈ ವೇಗ ಬರಬೇಕಾದರೆ ನೂಲುವ ಕ್ರಿಯೆಯಲ್ಲಿ ಸ್ವರಾಜ್ಯ ಸಂಪಾದನೆಯ ಶಕ್ತಿ ಅಡಗಿದೆ ಎಂಬ ನನ್ನಲ್ಲಿರುವ ದೃಢವಿಶ್ವಾಸದ ಕಾವು ನಿಮ್ಮಲ್ಲೂ ಉಂಟಾಗಬೇಕು.

ನನ್ನ ಭಾಷಣದಲ್ಲಿ ಎಷ್ಟೋ ಮಾತು ಹೇಳಿದ್ದೇನೆ. ಶ್ರೀಮತಿ ಸರೋಜಿನಿದೇವಿ ಒಂದು ಮಾತನ್ನು ಮಾತ್ರ ಹೇಳಲು ನನಗೆ ಹೇಳಿದ್ದಾಳೆ. ದಕ್ಷಿಣ ಆಫ್ರಿಕದಲ್ಲಿ ಅಂಥ ಅದ್ಭುತಸೇವೆ ಮಾಡಿಬಂದ ಆಕೆಯ ಗೌರವಕ್ಕಾಗಿ ನಾನು ಅದನ್ನು ಹೇಳುತ್ತೇನೆ – ಹಿಂದೂ ಮುಸ್ಲಿಂ ಐಕ್ಯದ ವಿಷಯ. ನನಗೆ ಇದು ತುಂಬ ಬೇಸರ ಆಗಿದೆ. ದಣಿದಿದ್ದೇನೆ. ಹಿಂದೂ ಮುಸ್ಲಿಂ ದಂಗೆ ಎಲ್ಲಿಯಾದರೂ ಆಗಲಿ. ಅದರ ಪಾಡಿಗೆ ಅದನ್ನು ಬಿಡೋಣ – ಎನ್ನುತ್ತಾರೆ ಶೌಕತ್ ಆಲಿ. ಆ ದೊಡ್ಡ ತಲೆಯಲ್ಲಿ ಬೇಕಾದಷ್ಟು ವಿವೇಕ ಇದೆ: ಅದರಲ್ಲಿ ಬರೀ ಜರಬಿ ತುಂಬಿಲ್ಲ (ನಗೆ). ಪದೇ ಪದೇ ಅವರು ಹೇಳಿದ್ದಾರೆ – ನನ್ನ ಈ ಮುಸಲ್ಮಾನರು ಶತಮೂರ್ಖರಾಗಿದ್ದಾರೆ. ಅವರ ತಲೆ ಕೆಟ್ಟಿದೆ, ಇದೇ ರೀತಿ ನಿಮ್ಮ ಹಿಂದೂಗಳೂ ಮೂರ್ಖರಾಗಿದ್ದಾರೆ. ಇವರ ಜಗಳಗಳನ್ನು ತೀರ್ಮಾನಿಸುವ ಪ್ರಯತ್ನದಲ್ಲಿ ಸ್ವರಾಜ್ಯ ನಮ್ಮ ಕೈಯಿಂದ ಜಾರಿಹೋಗುತ್ತವೆ. ಅವರ ಪಾಡಿಗೆ ಅವರನ್ನು ಬಿಟ್ಟುಬಿಡೋಣ. ಆದರೆ ನಾನು ಹೇಗೆ ಕೈಬಿಡಲಿ. ರಾಟೆಯಂತೆ ಹಿಂದೂ ಮುಸ್ಲಿಂ ಐಕ್ಯವು ನನಗೆ ಒಂದು ಹುಚ್ಚು. ಅದರಲ್ಲಿ ನನಗೊಂದು ರಾಗ, ಭಕ್ತಿ. ನಾನು ಅದನ್ನು ಕೈಬಿಟ್ಟು ಮರೆತು ಕೂಡಲಾರೆ. ನಾನು ಈ ಹುಡುಗಿ, ಗುಲ್ನಾರಿನಲ್ಲಿ ತುಂಬ ಮಮತೆ ಇಟ್ಟುಕೊಂಡಿದ್ದೇನೆ. ಏಕೆ ಹೀಗೆ ಎಂದು ನೀವು ಕೇಳೀರಿ. ಒಂದು ಕಾರಣ ಇದೆ:

ಈ ಹುಡುಗಿ ದೊಡ್ಡವಳಾದಾಗ ಒಬ್ಬ ಸನಾತನೀ ಗಾಂಧೀಯನ್ನು ನೆನೆದುಕೊಳ್ಳುತ್ತಾಳೆ. ಆ ಗಾಂಧೀ ಅವಳ ಜೊತೆಗೆ ಮಾಂಸ ತಿನ್ನುತ್ತಿರಲಿಲ್ಲ. ಮಾಂಸ ಮುಟ್ಟುತ್ತಿರಲಿಲ್ಲ. ಯಾರು ಬೇಕಾದರೂ ತಿನ್ನಲಿ ಎಂದು ಕೈ ಬಿಡುತ್ತಿದ್ದ, ತನ್ನ ಪಾಡಿಗೆ ತಾನು ಗೋಪೂಜೆ ಮಾಡುತ್ತಿದ್ದ. ಈ ಹುಡುಗಿ ಪ್ರೌಢೆ ಆಗುವ ವೇಳೆಗೆ ನಾನು ಸಾಯಬಹುದು. ಅವಳ ಪ್ರೌಢೆ ಆದಾಗ ನನ್ನ ಸಂದೇಶವನ್ನು ಪ್ರತಿಬಿಂಬಿಸುತ್ತಾಳೆ. ಇವತ್ತು ಅವಳು ಶುದ್ಧಳು. ಏನೂ ಅರಿಯದವಳು. ಎಲ್ಲವೂ ಸರಿ ಎಂದುಕೊಳ್ಳುತ್ತಾಳೆ. ದ್ವೇಷ ಎಂಬುದು ಅವಳಿಗಿಲ್ಲ. ಬರಿ ಪ್ರೇಮ. ಪ್ರೇಮದ ಪುತ್ಥಳಿ ಅವಳು. ನನಗೂ ಅವಳಿಗೂ ಸಮುದ್ರದಷ್ಟು ಅಂತರವಿದ್ದರೂ, ನನ್ನ ಸ್ವಂತ ಮಾಂಸ ರಕ್ತ ಎನ್ನುವ ಹಾಗೆ ನಡೆಸಿಕೊಳ್ಳುತ್ತಿದ್ದೇನೆ, ಈ ರೀತಿ ಮುಸಲ್ಮಾನರ ಸಂಗಡ ಏಕತೆಯನ್ನು ಸಾಧಿಸುತ್ತಿದ್ದೇನೆ. ಕೋರಾನ ಪ್ರಕಾರ ಗೋವನ್ನು ಕೊಲ್ಲುವದು ನ್ಯಾಯ ಎಂದು ಅವಳು ತಿಳಿಯುತ್ತಾಳೆ, ನನ್ನ ಧರ್ಮ ಗೋವಧೆ ಮಾಡಕೂಡದು ಎಂದು ಹೇಳುತ್ತದೆ. ಹೀಗಿರುವಾಗ ಗೋವಧೆ ಮಾಡಬೇಡ ಎಂದು ಅವಳನ್ನು ಅಡ್ಡಿಪಡಿಸಲು ನಾನು ಯಾರು? ಹಾಗೆ ಅಡ್ಡಿ ಪಡಿಸದಿದ್ದರೆ ನನ್ನ ಧರ್ಮಕ್ಕೆ ನಾನು ತಪ್ಪಿ ನಡೆದಂತೆ. ಆದರೆ ಪ್ರೇಮದಿಂದ ಅವಳ ಮನ ಒಲೆಸಿ ಗೆಲ್ಲುತ್ತೇನೆ; "ಕೋರಾನ್ ನೀನು ಗೋವನ್ನು ಕೊಂದೇ ತೀರಬೇಕು, ಗೋಮಾಂಸ ತಿಂದೇ ತೀರಬೇಕು ಎಂದು ಹೇಳುವದಿಲ್ಲ. ನನ್ನ ಧರ್ಮ ನನಗೆ ಇದಕ್ಕೆ ಸಮ್ಮತಿ ಕೊಡುವದಿಲ್ಲ. ಅಷ್ಟೇ ಅಲ್ಲ, ನನ್ನ ಕೋರಾನ್ ಗೋವನ್ನು ಪೂಜಿಸುವಂತೆ ನನ್ನನ್ನು ಬಲಾತ್ಕರಿಸುತ್ತದೆ. ನೀನು ಗೋಪೂಜೆಯನ್ನು ಬಿಡಬಹುದು. ಆದರೆ ನಾನು ಗೋಮಾಂಸ ತಿನ್ನದಿದ್ದರೆ, ಗೋಪೂಜೆ ಮಾಡಿದರೆ ನೀನು ಸೈರಿಸಲೇಬೇಕು. ನನ್ನ ಸ್ನೇಹಕ್ಕಾಗಿ ನೀನು ಗೋವಧೆ ಮಾಡದೆ ಬಿಡಬಹುದು." ಇದು ನನ್ನ ಪ್ರೇಮದ ರಹಸ್ಯ. ಈ ಚಿಕ್ಕ ಹುಡುಗಿ, ಗುಲ್ನಾರ ಬಗ್ಗೆ ನನಗಿರುವ ಮಮತೆಯ ಗುಟ್ಟು ಇದೇ. ಆದ್ದರಿಂದ ಶೌಕತ್ ಆಲಿಯು ಜೇಬಿನಲ್ಲಿ ನನ್ನನ್ನು ಹೊತ್ತುಕೊಂಡು ಹೋಗಲಿ, ನನಗೆ ಒಪ್ಪಿಗೆ. ಮಾಲಪೀಯರ ಬಗ್ಗೆ ನಾನೇಕೆ ವಿಚಾರ ಮಾಡುವದಿಲ್ಲ? ಮಾಲಪೀಯರ ಬಗ್ಗೆ ನನ್ನ ಪೂಜ್ಯಭಾವ ನನಗೆ ಸಹಜ, ಸ್ವಾಭಾವಿಕ. ಆದರೆ ನಾನು ಮುಸಲ್ಮಾನರ ಪಕ್ಷಪಾತಿ. ಇಲ್ಲದೇ ಇದ್ದರೆ ಹೇಗೆ? ಮುಸಲ್ಮಾನರ ಪಕ್ಷಪಾತಿಯಾದರೇನೇ ಈ ಸಮಸ್ಯೆಗೆ ಸರಿಯಾದ ಉತ್ತರ, ಇದಕ್ಕೆ ಸರಿಯಾದ ಪರಿಹಾರ ನಿಮಗೆ ಸಿಗಬೇಕಾದರೆ. ಹಿಂದೂಗಳೂ ಮುಸಲ್ಮಾನರೂ ಈ ಸಮಸ್ಯೆಗೆ ಏನು ಮಾಡಬೇಕು ಎಂದು ಕೇಳಿದರೆ ಪ್ರತಿಯೊಬ್ಬ ಹಿಂದೂ ಮುಸಲ್ಮಾನ ಪಕ್ಷಪಾತಿಯಾಗಬೇಕು, ಪ್ರತಿಯೊಬ್ಬ ಮುಸಲ್ಮಾನನೂ ಹಿಂದೂ ಪಕ್ಷಪಾತಿ ಆಗಬೇಕು ಎನ್ನುತ್ತೇನೆ. ದೇವರನ್ನು ನೋಡಬೇಕು ಅಥವಾ ಸಂಧಿಸಬೇಕು ಎನ್ನುವ ದ್ರಷ್ಟಾರ ಒಂದು ರೀತಿ ನೋಡುತ್ತಾನೆ. ನಾನು ಇನ್ನೊಂದು ರೀತಿ ನೋಡುತ್ತೇನೆ. ಅವನು ಮಾಡುವದೆಲ್ಲವು ನನ್ನ ದೃಷ್ಟಿಗೆ ವಕ್ರವಾಗಿ ಕಾಣುತ್ತದೆ. ಆಗ ನಾನು ಪಕ್ಷಪಾತಿ ಆಗಬೇಕು. ಆಗ ನಾನು ನ್ಯಾಯವಾಗಿ ಇರಬಲ್ಲೆ ಎಂದುಕೊಳ್ಳುತ್ತೇನೆ. ಮುಸಲ್ಮಾನರು ಹಿಂದೂ ಪಕ್ಷಪಾತಿಗಳಾಗಬೇಕು ಎಂದು ಪ್ರಾರ್ಥಿಸಬಯಸುತ್ತೇನೆ.

ಇನ್ನೊಂದು ಮಾತು ಹೇಳಲು ಶ್ರೀಮತಿ ನಾಯುಡು ನನಗೆ ಹೇಳಿದ್ದಾಳೆ. ಅದು ಉದಾರವಾದಿಗಳ ಬಗ್ಗೆ. ಅವರು ಕೇಳುತ್ತಾರೆ ಮಂದಗಾಮಿಗಳ ಬಗ್ಗೆ, ಉದಾರವಾದಿಗಳ

ಬಗ್ಗೆ (ಲಿಬರಲ್ಸ) ಏನಾದರೂ ಹೇಳುತ್ತೀರಾ ಎಂದು. ಉದಾರವಾದಿಗಳು ನನಗೆ ಪೂಜನೀಯರು ಎಂದು ಹೇಳುತ್ತೇನೆ. ಸ್ವರಾಜ್ಯವಾದಿಗಳು ಕಾಂಗ್ರೆಸ್ಸಿಗೆ ಬರಬೇಕು ಎನ್ನುವಂತೆಯೇ ಉದಾರ ವಾದಿಗಳೂ ಬರಬೇಕು ಎನ್ನುತ್ತೇನೆ. ಅವರ ಮುಂದೆ ನನ್ನ ಹೃದಯವನ್ನು ತೆರೆದಿಟ್ಟಿದ್ದೇನೆ. ರಾಟೆಯ ಮುಂದೆ ಕುಳಿತು ನೂಲೋಣ ಎನ್ನುತ್ತೇನೆ. ಇಲ್ಲ, ರಾಟೆಯ ಮುಂದೆ ಕುಳಿತು ನಾವು ನೂಲುವದಿಲ್ಲ ಎನ್ನುತ್ತಾರೆ ಅವರು. ಅವರು ಹಾಗೆಂದರೆ ನಾನೇನು ಹೇಳಲಿ? ಕಾಂಗ್ರೆಸ್ಸಿನೊಳಗೆ ಬನ್ನಿರಿ. ನನ್ನನ್ನು ಹೊರಗೆ ನೂಕಿಬಿಡಿರಿ ಎಂದು ಅವರಿಗೆ ಹೇಳುತ್ತೇನೆ.

ನಾನು ಮುಗಿಸಿದೆ. ದೇವರ ಸಾಕ್ಷಿಯಾಗಿ ಹೇಳಿ. – ನೀವು ಏನು ತೀರ್ಮಾನಿಸುತ್ತೀರೋ ಪ್ರಾಣಹೋದರೂ ಚಿಂತೆಯಿಲ್ಲ, ಅದನ್ನು ಮಾಡುತ್ತೇವೆ ಎಂದು. " (ಚಪ್ಪಾಳೆ)

**ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷೀಯ ಲಿಖಿತ ಭಾಷಣದ ಪೂರ್ಣಪಾಠ**

ಬೆಳಗಾಂವಿಯಲ್ಲಿ ನಡೆದದ್ದು ೩೯ನೆಯ ಅಧಿವೇಶನ. ಭಾರತದ ಸ್ವರಾಜ್ಯ ಸಂಗ್ರಾಮದಲ್ಲಿ ಶಾಸನಸಭಾ ಪ್ರವೇಶದ ಒಂದು ಘಟ್ಟ. ಗಾಂಧೀಜಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ಅದನ್ನು ತಿಳಿಸಿದರು. ಅವರ ಅಧ್ಯಕ್ಷ ಭಾಷಣ ಕೆಳಗಿನಂತೆ ಇತ್ತು.

"ಗೆಳೆಯರೆ, ನನ್ನ ಹೆಗಲ ಮೇಲೆ ಗೌರವದ ಬಹಳ ದೊಡ್ಡಭಾರ ಹೊರಿಸಿದ್ದೀರಿ ಇವತ್ತು. ಈ ಭಾರವನ್ನು ಒಪ್ಪಿಕೊಳ್ಳುವ ಮೊದಲು ನಾನು ಬಹಳ ಮೀನ–ಮೇಷ ಮಾಡಿದೆ. ಈ ವರ್ಷದ ಈ ವಿಶಿಷ್ಟ ಗೌರವ, ಶ್ರೀಮತಿ ಸರೋಜಿನಿ ನಾಯ್ಡುಗೆ ಹೋಗಬೇಕಾಗಿತ್ತು. ಕೆನ್ಯಾದಲ್ಲಿಯೂ, ದಕ್ಷಿಣ ಆಫ್ರಿಕಾದಲ್ಲಿಯೂ ಎಂಥ ಅದ್ಭುತ ಕೆಲಸ ಮಾಡಿದ್ದಾಳೆ ಆಕೆ! ಆದರೆ ಪರಿಸ್ಥಿತಿ ಹಾಗಾಗುವಂತಿರಲಿಲ್ಲ. ಆಂತರಿಕ ಪರಿಸ್ಥಿತಿಯೂ ಹೊರಗಿನ ಸನ್ನಿವೇಶವೂ ನಾನು ಈ ಭಾರವನ್ನು ಒಪ್ಪಿಕೊಳ್ಳುವಂತೆ ಮಾಡಿದೆ. ಈ ಉನ್ನತ ಸ್ಥಾನಕ್ಕೆ ತಕ್ಕರೀತಿಯಲ್ಲಿ ನಡೆದುಕೊಳ್ಳಲು ನಾನು ಮಾಡುವ ಪ್ರಯತ್ನದಲ್ಲಿ ತಮ್ಮ ಬೆಂಬಲ ಇದೆ ಎಂದು ನನಗೆ ಗೊತ್ತು.

ಪ್ರಾರಂಭದಲ್ಲಿ, ಈ ವರ್ಷ ತೀರಿಕೊಂಡ ಬಿ.ಅಮ್ಮ, ಸರ್. ಅಶುತೋಷ್ ಮುಖರ್ಜಿ, ಶ್ರೀ ಭೂಪೇಂದ್ರನಾಥ ಬಸು, ಡಾ॥ ಸುಬ್ರಹ್ಮಣ್ಯ ಐಯ್ಯರ್, ಶ್ರೀ ದಳಬಹದ್ದೂರ್ ಗಿರಿ, ಇವರ ಬಗ್ಗೆ ಗೌರವಪೂರ್ವಕವಾಗಿ ನನ್ನ ವಿಷಾದವನ್ನು ಸೂಚಿಸುತ್ತೇನೆ. ದಕ್ಷಿಣ ಆಫ್ರಿಕಾದಲ್ಲಿ ಸರ್ವಶ್ರೀ ರುಸ್ತುಮಜೀ, ಪಿ.ಕೆ.ನಾಯ್ಡು ಇವರಿಬ್ಬರೂ ಗತಿಸಿದ್ದಾರೆ. ಅವರ ಕುಟುಂಬಗಳಿಗೆ ನಿಮ್ಮ ಹೆಸರಿನಲ್ಲಿ ನನ್ನ ಗೌರವಪೂರ್ಣ ಸಂತಾಪವನ್ನು ಸೂಚಿಸುತ್ತೇನೆ.

೧೯೨೦ರ ಸೆಪ್ಟೆಂಬರಿನಿಂದಲೂ ಆಂತರಿಕ ಶಕ್ತಿಯನ್ನು ಬೆಳೆಸಿಕೊಳ್ಳುವ ಸಂಸ್ಥೆ ಮುಖ್ಯವಾಗಿ ಕಾಂಗ್ರೆಸ್ ಆಗಿದೆ. ನಮಗೆ ಇರುವ ಕುಂದು ಕೊರತೆಗಳನ್ನು ಪರಿಹರಿಸಲು ಸರಕಾರಕ್ಕೆ ತಿಳಿಸುವ ತೀರ್ಮಾನಗಳನ್ನು ಮಾಡಿ, ಕೆಲಸ ಮಾಡುವವರನ್ನು ಕೈಬಿಟ್ಟಿದೆ. ಈಗಿನ ಸರಕಾರದ ಪದ್ಧತಿಯಿಂದ ಏನಾದರೂ ಲಾಭ ಆದೀತು ಎಂಬ ನಂಬಿಕೆ ಹೋಗಿರುವದೇ ಅದಕ್ಕೆ ಕಾರಣ. ಮುಸಲ್ಮಾನರ ವಿಷಯದಲ್ಲಿ ಸರಕಾರ ತೋರಿಸಿದ ವಿಶ್ವಾಸ ಭಂಗವೇ ಸರಕಾರದ ಬಗ್ಗೆ ನಂಬಿಕೆ ಹೋಗುವಂತೆ ಮಾಡಿದ ಕಟು ಪ್ರಸಂಗ. ರೌಲೆಟ್ ಶಾಸನವು ಜಾಲಿಯಾನ್‌ವಾಲ

ಬಾಗಿನ ಹತ್ಯಾಕಾಂಡದಲ್ಲಿ ಕೊನೆಗೊಂಡ ಒಡ್ವಾಯರ್ ಪ್ರವೃತ್ತಿಯು ಈ ಪದ್ಧತಿಯ ನಿಜರೂಪ ಏನು ಎಂಬುದನ್ನು ಜನರು ತಿಳಿದುಕೊಳ್ಳುವಂತೆ ಮಾಡಿತು. ಈ ರಾಜ್ಯ ಪದ್ಧತಿಯು ನಡೆಯಲು ಕಾರಣ, ತಿಳಿದೋ ತಿಳಿಯದೆಯೋ, ಇಷ್ಟಪಟ್ಟೋ ಅಥವಾ ಬಲಾತ್ಕಾರವಾಗಿಯೋ ನಮ್ಮ ಜನರು ಸರಕಾರಕ್ಕೆ ಕೊಡುತ್ತಿರುವ ಸಹಕಾರವೇ ಎಂಬುದು ಕೂಡ ಅರ್ಥವಾಯಿತು. ಈ ಪದ್ಧತಿಯನ್ನು ತಿದ್ದಬೇಕೋ ಅಥವಾ ನಾಶಮಾಡಬೇಕೋ ಎಂಬ ದೃಷ್ಟಿಯಿಂದ ಈ ಸ್ವಯಂ ಸಹಕಾರಕ್ಕೆ ಮೇಲ್ಮಟ್ಟದಿಂದ ಅಂದರೆ ಶಾಸನಸಭೆಯಿಂದ ಮೊದಲು ನಿರಾಕರಿಸುತ್ತ ಬರಬೇಕು ಎಂದು ತೀರ್ಮಾನವಾಯಿತು. ಕಲ್ಕತ್ತೆಯ ವಿಶೇಷ ಅಧಿವೇಶನ ೧೯೨೦ರಲ್ಲಿ ನಡೆದಾಗ, ಸರಕಾರ ಕೊಟ್ಟ ಬಿರುದು, ಸರಕಾರದ ನ್ಯಾಯಾಲಯ, ಸರಕಾರದ ಶಿಕ್ಷಣ ಸಂಸ್ಥೆ, ಶಾಸನಸಭೆಗಳು, ಪರದೇಶೀ ವಸ್ತ್ರ ಇವೇ ಮೊದಲಾದವನ್ನು ಬಹಿಷ್ಕರಿಸಬೇಕು ಎಂದು ತೀರ್ಮಾನವಾಯಿತು. ಈ ಬಹಿಷ್ಕಾರದ ಕಾರ್ಯಕ್ರಮವನ್ನು ಅದಕ್ಕೆ ಸಂಬಂಧ ಪಟ್ಟವರು ಕೈಗೆ ತೆಗೆದುಕೊಂಡರು ಯಾರು ಈ ಕಾರ್ಯಕ್ರಮಕ್ಕೆ ಇಷ್ಟಪಡಲಿಲ್ಲವೋ, ಅಥವಾ ಅದನ್ನು ನಡೆಸಲು ಯಾರಿಗೆ ಸಾಧ್ಯವಿಲ್ಲವೋ ಅಂಥವರು ಕಾಂಗ್ರೆಸ್ಸಿನಿಂದ ಹೊರಗೆ ಹೋದರು. ಅಸಹಕಾರದ ಈ ಚಳವಳಿಯು ಬಹಳ ಕುಂಠಿತವಾಗಿ ಡೊಂಕು ಡೊಂಕಾಗಿ ನಡೆಯಿತು. ಅದೆಲ್ಲವನ್ನೂ ಈಗ ನಾನು ಹೇಳುವುದಿಲ್ಲ. ಯಾವ ಒಂದು ಬಹಿಷ್ಕಾರವು ಪೂರ್ಣ ಗತಿಯನ್ನು ಮುಟ್ಟದಿದ್ದರೂ, ಯಾವ ಸಂಸ್ಥೆಯನ್ನು ಬಹಿಷ್ಕರಿಸಿದೆವೋ ಆ ಸಂಸ್ಥೆಯ ಕೀರ್ತಿ ಪ್ರತಿಷ್ಠೆಗಳನ್ನು, ಪ್ರತಿಯೊಂದು ಬಹಿಷ್ಕಾರವೂ ಖಂಡಿತವಾಗಿಯೂ ತಗ್ಗಿಸಿತು.

ಎಲ್ಲಕ್ಕಿಂತ ಮುಖ್ಯವಾದ ಬಹಿಷ್ಕಾರ ಹಿಂಸೆಯ ಬಹಿಷ್ಕಾರ. ಅಹಿಂಸೆ ಒಂದು ಸಲ ಪೂರ್ಣ ಯಶಸ್ವಿಯಾದಂತೆ ಕಂಡುಬಂದರೂ ಆ ಅಹಿಂಸೆಯು ಮೇಲು ಮೇಲಿನದು ಎಂದು ಬೇಗನೆ ತಿಳಿದುಬಂತು. ಅದು ಅಸಹಾಯಕತೆಯಿಂದ ಹುಟ್ಟಿದ ಕ್ರಿಯಾಶೂನ್ಯ ಅಹಿಂಸೆಯೇ ವಿನಾ ಸಮಯಸ್ಫೂರ್ತಿಯಿಂದ ಕೆಲಸಮಾಡುವ ವಿಚಾರಶೀಲ ಅಹಿಂಸೆ ಅದಲ್ಲ. ಇದರಿಂದ ಏನಾಯಿತೆಂದರೆ ಯಾರು ಅಸಹಕಾರ ಮಾಡಲಿಲ್ಲವೋ ಅವರ ಬಗ್ಗೆ ಒಂದು ಅಸಹನೆಯ ಭಾವ ಚಿಮ್ಮಿಬಂತು. ಇದೂ ಸಹ ಒಂದು ಬಗೆಯ ಸೂಕ್ಷ್ಮ ಹಿಂಸೆ. ಇಷ್ಟೆಲ್ಲ ದೋಷಪೂರ್ಣವಾಗಿದ್ದರೂ ಹೊರಹೊಮ್ಮಬಹುದಾಗಿದ್ದ ಶಾರೀರಿಕ ಹಿಂಸೆಯನ್ನು ಈ ಅಹಿಂಸಾ ಪ್ರಚಾರ ತಡೆಗಟ್ಟಿತು ಎಂದು ಧೈರ್ಯವಾಗಿ ಹೇಳುತ್ತೇನೆ. ಅಹಿಂಸಾತ್ಮಕ ಅಸಹಕಾರ ಹುಟ್ಟಿರದಿದ್ದರೆ ಖಂಡಿತವಾಗಿಯೂ ಶಾರೀರಿಕ ಹಿಂಸೆ ನಡೆದೇ ನಡೆಯುತ್ತಿತ್ತು. ಅಹಿಂಸಾತ್ಮಕ ಅಸಹಕಾರದಿಂದ ಜನರಿಗೆ ತಮ್ಮ ಅಂತಃಶಕ್ತಿಯ ಅರಿವು ಉಂಟಾಗಿದೆ ಎಂದು ವಿಚಾರಪೂರ್ವಕ ನಾನು ಮನದಟ್ಟು ಮಾಡಿಕೊಂಡಿದ್ದೇನೆ. ಕಷ್ಟ ಸಹನೆಯಿಂದ ಜನತೆಯಲ್ಲಿ ಹುದುಗಿದ್ದ ಪ್ರತಿಭಟನಾಶಕ್ತಿಯು ಹೊರಹೊಮ್ಮಿದೆ. ಜನತೆಯಲ್ಲಿ ಅಪಾರ ಜಾಗೃತಿ ಆಗಿದೆ. ಬೇರೆ ಯಾವ ಪದ್ಧತಿಯಿಂದಲೂ ಇದು ಸಾಧ್ಯವಾಗುತ್ತಿರಲಿಲ್ಲ.

ಅಹಿಂಸಾತ್ಮಕ ಅಸಹಕಾರದಿಂದ ನಮಗೆ ಸ್ವರಾಜ್ಯ ಬರಲಿಲ್ಲ. ಕೆಲವು ವಿಷಾದಕರ ಘಟನೆಗಳು ನಡೆದು ಹೋದವು. ಯಾವ ಸಂಸ್ಥೆಗಳನ್ನು ನಾವು ಬಹಿಷ್ಕರಿಸಬೇಕು ಎಂದುಕೊಂಡೆವೋ ಅವು ಇನ್ನೂ ಮುಂದುವರಿಯುತ್ತಲೇ ಇವೆ. ಆದರೂ ನನ್ನ ವಿನಯಪೂರ್ವಕ ಅಭಿಪ್ರಾಯ

ಇಷ್ಟು-ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸಲು ಅಹಿಂಸಾತ್ಮಕ ಅಸಹಕಾರ ಒಂದು ಸಾಧನ ಎಂಬ ಮಾತು ಸ್ಥಿರವಾಗಿ ನಿಂತುಹೋಯಿತು. ಆಂಶಿಕವಾಗಿ ಅದು ಸಫಲವಾಗಿದ್ದರೂ ಅದರಿಂದ ನಾವು ಸ್ವರಾಜ್ಯದ ಹತ್ತಿರ ಹತ್ತಿರ ಬಂದಿದ್ದೇವೆ. ಯಾವ ಧ್ಯೇಯಕ್ಕಾಗಿ ನಾವು ಕಷ್ಟ ಸಹಿಸಲು ಶಕ್ತರಾಗುತ್ತೇವೆಯೋ ಆ ಶಕ್ತಿಯು ಆ ಧ್ಯೇಯವನ್ನು ಸಾಧಿಸಬಲ್ಲದು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

**ರುಖ್ ಜಾವ**

ಆದರೆ ಇಲ್ಲಿ ನಾವು ನಿಲ್ಲಬೇಕು. ನಮ್ಮನ್ನು ನಾವು ತರುಬಿ ನಿಲ್ಲಿಸಿಕೊಳ್ಳಬೇಕು ಎಂಬ ಒಂದು ಸನ್ನಿವೇಶ ನಮ್ಮ ಇದುರಿಗೆ ಬಂದು ನಿಂತಿದೆ. ವ್ಯಕ್ತಿಗಳು ಬಹಳ ದೃಢವಾಗಿ ಅಹಿಂಸೆಯನ್ನು ನಂಬಿರಬಹುದು. ಆದರೆ ಈ ಚಳವಳಿಗೆ ಸಂಬಂಧಿಸಿದ ಬಹುಜನ, ಪರದೇಶೀ ವಸ್ತ್ರ ಬಹಿಷ್ಕಾರ ಒಂದನ್ನು ಬಿಟ್ಟು, ಉಳಿದವುಗಳಲ್ಲಿ ನಂಬಿಕೆ ಕಳೆದುಕೊಂಡಿದ್ದಾರೆ. ವಕೀಲರನೇಕರು ತಮ್ಮ ವೃತ್ತಿಯನ್ನು ಮತ್ತೆ ಆರಂಭಿಸಿದ್ದಾರೆ. ಕೆಲವರಿಗಂತೂ ನಾವು ಏಕೆ ಬಿಟ್ಟೆವೋ ಎಂದು ಪಶ್ಚಾತ್ತಾಪವು ಆಗಿದೆ. ಶಾಸನಸಭೆಗಳನ್ನು ಬಹಿಷ್ಕರಿಸಿದ್ದ ಅನೇಕರು ಮತ್ತೆ ಸಭೆಗಳಿಗೆ ಹೋಗಿದ್ದಾರೆ. ಶಾಸನಸಭಾ ಪ್ರವೇಶವನ್ನು ನಂಬುವ ಜನರ ಸಂಖ್ಯೆ ಹೆಚ್ಚುತ್ತಿದೆ. ಸರಕಾರಿ ಶಾಲಾ ಕಾಲೇಜುಗಳನ್ನು ಬಹಿಷ್ಕರಿಸಿದ್ದ ನೂರಾರು ಹುಡುಗರೂ, ಹುಡುಗಿಯರೂ ಪಶ್ಚಾತ್ತಾಪಗೊಂಡು ಪುನಃ ಹಿಂದಕ್ಕೆ ಹೋಗಿದ್ದಾರೆ. ತಮಗೆ ಪ್ರವೇಶ ಬೇಕು ಎಂದು ಹೇಳುವವರ ಸಂಖ್ಯೆಗೆ ಸರಕಾರಿ ಶಾಲಾ ಕಾಲೇಜುಗಳಲ್ಲಿ ಸ್ಥಳ ಒದಗಿಸುವುದು ಕಷ್ಟವಾಗಿದೆ ಎಂದು ನಾನು ಕೇಳಿದ್ದೇನೆ. ಇಂಥ ಪರಿಸ್ಥಿತಿಯಲ್ಲಿ ಈ ಬಹಿಷ್ಕಾರಗಳಿಂದ ಯಾವ ಯಾವ ಜನರು ನೇರವಾಗಿ ಹಾನಿಗೆ ಒಳಗಾಗಿದ್ದಾರೆಯೋ ಅಂಥವರನ್ನು ಬಿಟ್ಟು ಕೂಡ ಕಾಂಗ್ರೆಸ್ಸು ಈ ಬಹಿಷ್ಕಾರಗಳನ್ನು ಮುಂದುವರಿಸಲು ಸಿದ್ಧರಾಗದಿದ್ದರೆ, ಇವುಗಳನ್ನು ರಾಷ್ಟ್ರೀಯ ಕಾರ್ಯಕ್ರಮಗಳ ಅಂಗವಾಗಿ ನಡೆಸುವುದು ಸಾಧ್ಯವಾಗಲಾರದು. ಆದರೆ ಇಂಥ ಜನರನ್ನು ಕಾಂಗ್ರೆಸ್ಸಿನಿಂದ ಹೊರಗಿಡುವುದು ವ್ಯಾವಹಾರಿಕವಾಗಿ ಸುಲಭವಲ್ಲ. ಅಪರಿವರ್ತನ ವಾದಿಗಳನ್ನು ಹೊರಗೆ ಓಡಿಸಬೇಕು ಎಂಬುದು ಎಷ್ಟು ಅವ್ಯವಹಾರ್ಯವೋ ಇದೂ ಅಷ್ಟೇ. ಇಬ್ಬರೂ ಕಾಂಗ್ರೆಸ್ಸಿನೊಳಗೇ ಇರಬೇಕು. ಪರಸ್ಪರ ಹಸ್ತಕ್ಷೇಪ ಮಾಡಬಾರದು. ಪರಸ್ಪರ ವಿರುದ್ಧವಾಗಿ ವೈರ ತುಂಬಿ ಟೀಕೆ ಮಾಡಬಾರದು. ಹಿಂದೂ ಮುಸ್ಲಿಂ ಏಕತೆಗೆ ಯಾವುದು ಅನ್ವಯಿಸುತ್ತದೆಯೋ ಅದೇ ಭಿನ್ನ ಭಿನ್ನ ರಾಜಕೀಯ ಪಕ್ಷಗಳಿಗೂ ಅನ್ವಯಿಸುತ್ತದೆ ಎಂದು ನನ್ನ ಭಾವನೆ. ನಾವು ಪರಸ್ಪರ ಸಹನೆಯಿಂದ ಇರಬೇಕು. ಕಾಲಕ್ರಮೇಣ, ಒಬ್ಬರು ತಮ್ಮ ವಿರುದ್ಧವಾದ ಇನ್ನೊಂದು ಮತಕ್ಕೆ ಪರಿವರ್ತನೆ ಹೊಂದಬಹುದೆಂದು ನಾವು ನಂಬೋಣ. ಇಷ್ಟೇ ಅಲ್ಲ, ಇನ್ನೂ ಮುಂದೆ ಹೋಗಿ ಕಾಂಗ್ರೆಸ್ಸನ್ನು ಬಿಟ್ಟಿರುವ ಉದಾರ ಮತವಾದಿಗಳನ್ನೂ ಇತರರನ್ನೂ ಮತ್ತೆ ಕಾಂಗ್ರೆಸ್ಸಿಗೆ ಸೇರುವಂತೆ ಪ್ರಾರ್ಥಿಸಬೇಕು. ಅಸಹಕಾರವನ್ನು ಸದ್ಯಕ್ಕೆ ನಿಲ್ಲಿಸಿದರೆ, ಅವರು ಹೊರಗೆ ಇರಲು ಯಾವ ಕಾರಣವೂ ಇಲ್ಲ. ಈ ಕೆಲಸದಲ್ಲಿ ಕಾಂಗ್ರೆಸ್ಸಿಗರೇ ಮೊದಲು ಹೆಜ್ಜೆ ಹಾಕಬೇಕು. ಅವರನ್ನು ಸ್ನೇಹಪೂರ್ಣವಾಗಿ ಆಹ್ವಾನಿಸಿ, ಅವರು ಒಳಕ್ಕೆ ಬರಲು ಸುಲಭವಾಗುವಂತೆ ಮಾಡಬೇಕು. ಈಗ ನಿಮಗೆ ಅರ್ಥವಾಗಬಹುದು ಸ್ವರಾಜ್ಯ ಪಕ್ಷದವರೊಂದಿಗೆ ನಾನು ಏಕೆ ಒಪ್ಪಂದ ಮಾಡಿಕೊಂಡೆನು ಎಂಬುದು.

**ಪರದೇಶಿ ವಸ್ತ್ರ ಬಹಿಷ್ಕಾರ:**

ಒಂದು ಬಹಿಷ್ಕಾರವನ್ನು ಮಾತ್ರ ನಾವು ಉಳಿಸಿಕೊಂಡಿದ್ದೇವೆ ಎಂಬುದನ್ನು ಮರೆಯಬೇಡಿರಿ. ಒಬ್ಬ ಇಂಗ್ಲೀಷ ಸ್ನೇಹಿತನ ಮನಸ್ಸಿಗೆ ನೋವು ಆಗಬಾರದು ಎಂದು 'ಬಹಿಷ್ಕಾರ' ಎಂಬ ಶಬ್ದವನ್ನು ಬದಲಿಸಿ ಪರದೇಶೀ ವಸ್ತ್ರದ ಉಪಯೋಗವನ್ನು ಬಿಡಬೇಕು ಎಂದು ಒಪ್ಪಂದದಲ್ಲಿ ಮಾಡಿಕೊಂಡಿದೆ. ಬಹಿಷ್ಕಾರ ಶಬ್ದದಲ್ಲಿ ಒಂದು ದುರ್ವಾಸನೆ ಇರವದೇನೋ ನಿಜ. ಅದು ದ್ವೇಷವನ್ನು ಸೂಚಿಸುತ್ತದೆ, ಅಂಥ ಅರ್ಥ ಯಾವುದೂ ನನ್ನ ಮನಸ್ಸಿನಲ್ಲಿ ಇಲ್ಲ. ಕೇವಲ ಬ್ರಿಟಿಷ್ ವಸ್ತ್ರ ಬಹಿಷ್ಕಾರ ಇದಲ್ಲ. ಪರದೇಶಿ ವಸ್ತ್ರ ಬಹಿಷ್ಕಾರ. ಇಂಥ ಬಹಿಷ್ಕಾರ ನಮಗೆ ಕೇವಲ ಒಂದು ಹಕ್ಕು ಮಾತ್ರವಲ್ಲ ಅದು ನಮಗೆ ಒಂದು ಕರ್ತವ್ಯ. ನಮ್ಮ ದೇಶದ ನದಿಗಳ ನೀರಿನ ಬದಲು ಪರದೇಶದಿಂದ ನೀರನ್ನು ತರಿಸಲು ಮೊದಲಿಟ್ಟರೆ ಅದರ ಬಹಿಷ್ಕಾರ ಹೇಗೆ ನಮ್ಮ ಕರ್ತವ್ಯವಾಗುತ್ತದೆಯೋ ಅಷ್ಟೇ ಮಟ್ಟಿಗೆ ಇದಾದರೂ ನಮ್ಮ ಕರ್ತವ್ಯ. ಆದರೆ ಇದು ವಿಷಯಾಂತರ.

ನಾನು ಹೇಳಬೇಕಾದ್ದು ಇಷ್ಟು:– ಈ ಒಪ್ಪಂದದಿಂದ ಪರದೇಶೀ ವಸ್ತ್ರ ಬಹಿಷ್ಕಾರ ಉಳಿಯುತ್ತದೆ, ಮತ್ತು ಅದಕ್ಕೊಂದು ಮಹತ್ವ ಬರುತ್ತದೆ. ನನ್ನ ಪಾಲಿಗೆ ಇದಂತೂ ಹಿಂಸಾತ್ಮಕ ವಿಧಾನಕ್ಕೆ ಒಂದು ಪರ್ಯಾಯ. ಕೆಲವು ಕೃತಿ, ಬೈಗಳು, ರೇಗಿಸುವ ನಡತೆ, ಸುಳ್ಳು ಹೇಳುವದು, ಇತರರನ್ನು ಗಾಸಿಗೊಳಿಸುವದು, ಕೊಲೆ ಮಾಡುವದು ಇಂಥವೆಲ್ಲ ಹಿಂಸೆಯ ಸಂಕೇತ. ಅದರಂತೆಯೇ ನಯ ವಿನಯ, ಯಾರಿಗೂ ನೋವು ಕೊಡದ ನಡತೆ; ಸತ್ಯಸಂಧತೆ ಇತ್ಯಾದಿ ಅಹಿಂಸೆಯ ಸಂಕೇತ. ನನ್ನ ಮಟ್ಟಿಗೆ ಪರದೇಶೀ ವಸ್ತ್ರ ಬಹಿಷ್ಕಾರವೂ ಅಹಿಂಸೆಯ ಸಂಕೇತವೇ. ಕ್ರಾಂತಿಕಾರಿ ಅಪರಾಧವನ್ನು ಒತ್ತಾಯತರುವ ಉದ್ದೇಶದಿಂದ ಮಾಡಲಾಗುತ್ತದೆ. ಆದರೆ ಆ ಒತ್ತಾಯ ಸಿಟ್ಟಿನದು, ದ್ವೇಷದ್ದು. ಅಹಿಂಸೆಯ ಕೃತಿಗಳಿಂದ ಆಗುವ ಒತ್ತಾಯ ಹಿಂಸಾಕೃತಿಯ ಒತ್ತಾಯಕ್ಕಿಂತ ಹೆಚ್ಚು ಪರಿಣಾಮಕಾರಿ ಎಂದು ನನ್ನ ವಾದ. ಈ ಒತ್ತಾಯ ಸದ್ಭಾವನೆಯದು, ನಮ್ರತೆಯದು. ಪರದೇಶಿ ವಸ್ತ್ರ ಬಹಿಷ್ಕಾರದಿಂದ ಇಂಥ ಸೌಮ್ಯ ಒತ್ತಾಯ ಆಗುತ್ತದೆ. ತಾವು ತರಿಸಿಕೊಳ್ಳುವ ಪರದೇಶಿ ವಸ್ತ್ರವು ಹೆಚ್ಚಾಗಿ ಲ್ಯಾಂಕಾಷೈರಿನದು. ನಮ್ಮ ಆಮದು ಪದಾರ್ಥಗಳಲ್ಲಿ ಎಲ್ಲಕ್ಕಿಂತ ಅದೇ ಹೆಚ್ಚಿನದು. ಎರಡನೆಯದು ಸಕ್ಕರೆ. ಭಾರತದೊಡನೆ ಲ್ಯಾಂಕಾಷೈರಿನ ವ್ಯಾಪಾರವೇ ಬ್ರಿಟನ್ನಿನ ಮುಖ್ಯ ಆಸಕ್ತಿ. ಭಾರತದ ರೈತನನ್ನು ನಾಶಮಾಡಿ ಅವನ ಮೇಲೆ ಆಂಶಿಕ ನಿರುದ್ಯೋಗವನ್ನೂ ಸೋಮಾರಿತನವನ್ನೂ ಹೊರಿಸುವುದು ಎಲ್ಲಕ್ಕಿಂತ ಹೆಚ್ಚು ಇದೇ. ಆತನಿಗೆ ಇದ್ದದ್ದು ಇದೊಂದೇ ಉಪವೃತ್ತಿ. ಅದನ್ನು ಇದು ಇಲ್ಲದಂತೆ ಮಾಡಿತು. ಆದ್ದರಿಂದ ನಮ್ಮ ರೈತ ಬದುಕಬೇಕು ಎಂದರೆ ಪರದೇಶಿ ವಸ್ತ್ರ ಬಹಿಷ್ಕಾರ ಅತ್ಯಗತ್ಯ. ಹೀಗೆ ನಮ್ಮ ರೈತನನ್ನು ಅಗ್ಗವಾದ ಮತ್ತು ಚೆಂದಕಾಣುವ ಪರದೇಶಿ ವಸ್ತ್ರ ಕೊಳ್ಳುವದನ್ನು ಬಿಡುವಂತೆ ಮಾಡುವದು ಒಂದೇ ಉದ್ದೇಶವಲ್ಲ ಈ ಬಹಿಷ್ಕಾರಕ್ಕೆ. ತನ್ನ ಬಿಡುವಿನ ವೇಳೆಯಲ್ಲಿ ಅರಳೆಯನ್ನು ಹಿಂಜುವುದು. ನೂಲುವದು ಮುಂತಾದ್ದನ್ನು ಮಾಡಿ ಅವನ್ನು ತನ್ನ ಹಳ್ಳಿಯಲ್ಲೇ ನೇಯಿಸಿಕೊಳ್ಳುವಂತೆ ಅವನ ಮನವೊಲಿಸಿ ಅಥವಾ ಹಾಗೆ ಹಳ್ಳಿಯಲ್ಲಿ ನೇಯ್ದು ಖಾದಿಯನ್ನು ಉಟ್ಟು ತೊಟ್ಟು ಪರದೇಶಿ ವಸ್ತ್ರವನ್ನು, ಅಷ್ಟೇ ಅಲ್ಲ

ದೇಶೀ ಗಿರಿಣಿಬಟ್ಟೆಯನ್ನು ಕೊಳ್ಳುವದನ್ನೂ ತಪ್ಪಿಸುವದು, ಕೊಳ್ಳದಂತೆ ಮಾಡುವದು ಇವರ ಉದ್ದೇಶ. ಹೀಗೆ ಕೈನೂಲು ಕೈನೇಯ್ಗೆಯ ಮೂಲಕ ಎಂದರೆ ಖಾದಿಯ ಮೂಲಕ ಪರದೇಶಿ ವಸ್ತ್ರ ಬಹಿಷ್ಕಾರ ನಡೆಸುವದು, ರೈತನಿಗೆ ದುಡ್ಡು ಮಿಗಿಸುವದು ಮಾತ್ರವಲ್ಲದೆ, ಒಂದು ಉತ್ತಮ ಸಮಾಜ ಸೇವೆ ಮಾಡಲು ನಮ್ಮ ಕೆಲಸಗಾರರಿಗೆ ಅದು ಅವಕಾಶ ಮಾಡಿಕೊಡುತ್ತದೆ. ಇದರಿಂದ ಹಳ್ಳಿಯವರ ಪ್ರತ್ಯಕ್ಷ ಸಂಪರ್ಕ ನಮಗೆ ಆಗುತ್ತದೆ. ಅವರಿಗೆ ನಿಜವಾದ ರಾಜಕೀಯ ಶಿಕ್ಷಣ ಕೊಟ್ಟು, ಅವರು ಸ್ವಾವಲಂಬಿಗಳೂ, ಸ್ವಾಶ್ರಯಿಗಳೂ ಆಗುವಂತೆ ಮಾಡುತ್ತದೆ. ಆದ್ದರಿಂದ ಸಹಕಾರ ಸಂಘಗಳು ಅಥವಾ ಬೇರೆ ಯಾವದೇ ಬಗೆಯ ಗ್ರಾಮಸಂಸ್ಥೆಗಳು ಇವುಗಳಿಗಿಂತ ಎಷ್ಟೋಪಾಲು ಉತ್ತಮ ಖಾದಿಯ ಸಂಘಗಳು. ಅದರಿಂದ ಮಹತ್ತರ ರಾಜಕೀಯ ಪರಿಣಾಮ ಆಗುತ್ತದೆ. ಏಕೆಂದರೆ ಬ್ರಿಟನ್ನಿಗೆ ಇರುವ ದುರಾಶೆಯನ್ನು ಕಳೆಯುತ್ತದೆ. ಲ್ಯಾಂಕಾಶೈರಿನ ಈ ವ್ಯಾಪಾರ ಅನೈತಿಕ ಎನ್ನುತ್ತೇನೆ. ಭಾರತೀಯ ಕೋಟ್ಯಂತರ ರೈತರ ವಿನಾಶದ ಮೇಲೆ ಇದನ್ನು ಕಟ್ಟಿದ್ದಾರೆ. ಒಂದು ಅನೀತಿಯ ದಾರಿ ಇನ್ನೊಂದಕ್ಕೆ ಮಾರ್ಗಮಾಡಿ ಕೊಡುತ್ತದೆ. ಬ್ರಿಟನ್ನು ಎಷ್ಟೋ ಅನೀತಿಯ ಕೃತಿಗಳನ್ನು ಮಾಡಿದೆ. ಅವು ರುಜುವಾತು ಆಗಿವೆ. ಆದರೆ ಇವೆಲ್ಲವೂ ಈ ಒಂದು ಅನೈತಿಕ ವ್ಯಾಪಾರದಿಂದಲೇ ಹುಟ್ಟಿದವು. ಆದ್ದರಿಂದ ಭಾರತದ ಸ್ವಪ್ರಯತ್ನದ ಮೂಲಕ ಬ್ರಿಟನ್ನಿನ ದಾರಿಯಲ್ಲಿಯ ಈ ಮಹತ್ತರ ಪ್ರಲೋಭನೆ ಅಳಿದು ಹೋದರೆ ಅದು ಭಾರತಕ್ಕೂ ಒಳಿತು ಬ್ರಿಟನ್ನಿಗೂ ಒಳಿತು. ಮತ್ತು ಬ್ರಿಟನ್ನು ಇವತ್ತು ಪ್ರಬಲ ಜಾಗತಿಕ ಶಕ್ತಿ ಆಗಿರುವದರಿಂದ ಮಾನವತೆಗೂ ಒಳಿತು.

ಬೇಡಿಕೆಯಂತೆ ಪೂರೈಕೆ ಎಂಬ ಈ ಸಿದ್ಧಾಂತವನ್ನು ನಾನು ಒಪ್ಪುವುದಿಲ್ಲ. ಎಷ್ಟೋ ಸಲ ತದ್ವಿರುದ್ಧವಾಗಿ, ನೀತಿ ನಿಯಮವಿಲ್ಲದ ವರ್ತಕರು ಕೃತ್ರಿಮವಾಗಿ ಬೇಡಿಕೆಯನ್ನು ಹುಟ್ಟಿಸುತ್ತಾರೆ. ವ್ಯಕ್ತಿಗಳಿಗೆ ಇದ್ದ ಹಾಗೆ ರಾಷ್ಟ್ರಗಳಿಗೂ ನೀತಿಯ ಬಂಧನ ಇದೆ ಎಂದು ನಾನು ತಿಳಿದಿದ್ದೇನೆ. ಹಾಗಿದ್ದರೆ ಯಾರ ಅವಶ್ಯಕತೆಗಳನ್ನು ಪೂರೈಸಲು ಬಯಸುತ್ತೇವೆಯೋ ಅವರ ಯೋಗಕ್ಷೇಮವನ್ನೂ ನೋಡಿಕೊಳ್ಳಬೇಕು. ಉದಾಹರಣೆಗೆ, ರಾಷ್ಟ್ರವು ಕುಡುಕರಿಗೆ ಹೆಂಡವನ್ನು ಒದಗಿಸುವದು ಅಪರಾಧ ಮತ್ತು ಅನೈತಿಕ. ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರಕ್ಕೆ ಆಹಾರಧಾನ್ಯವನ್ನೂ, ಬಟ್ಟೆಯನ್ನೂ ನಿರ್ಯಾತಮಾಡುವದರಿಂದ, ಆಯಾತ ಮಾಡಿಕೊಳ್ಳುವ ರಾಷ್ಟ್ರದಲ್ಲಿ ಧಾನ್ಯ ಮತ್ತು ಬಟ್ಟೆಯ ಉತ್ಪಾದನೆ ನಿಂತು ಜನರು ಸೋಮಾರಿಗಳೂ ಬಡವರೂ ಆದರೆ, ಈ ಆಹಾರಧಾನ್ಯ ಹಾಗೂ ಬಟ್ಟೆಯ ನಿರ್ಯಾತ ಮಾಡುವದು, ಹೆಂಡದ ನಿರ್ಯಾತದಷ್ಟೇ ಅಪರಾಧ. ಈ ಬಗೆಯ ಒತ್ತಾಯ ಸೋಮಾರಿತನ, ಬಡತನ ಮನುಷ್ಯನ ಆತ್ಮಕ್ಕೂ ದೇಹಕ್ಕೂ ಹೆಂಡದಷ್ಟೇ ಹಾನಿಕರ. ಮನಸ್ಸಿನ ಹತಾಶಾಭಾವವು, ತಿರುವುಮುರುವು ಆದ ಉದ್ವೇಗವೇ ಆಗಿದೆ. ಆದ್ದರಿಂದ ಅದರ ಪರಿಣಾಮ ಕೂಡ ಅಷ್ಟೇ ಹಾನಿಕರ, ಕೆಲವು ವೇಳೆ ಇದು ಇನ್ನೂ ಹೆಚ್ಚು ಹಾನಿಕರ. ಏಕೆಂದರೆ ಈ ಸೋಮಾರಿತನ ಮತ್ತು ಬಡತನದಿಂದ ಉಂಟಾಗುವ ಹತಾಶಾಭಾವವು ಅನೈತಿಕ, ಪಾಪ ಎಂಬುದು ನಮಗಿನ್ನೂ ತಿಳಿದಿಲ್ಲ.

**ಬ್ರಿಟನ್ನಿನ ಕರ್ತವ್ಯ:**

ಆದ್ದರಿಂದ ಭಾರತದ ಕ್ಷೇಮವನ್ನು ಗಮನಿಸಿಕೊಂಡು ತನ್ನ ರಫ್ತುವ್ಯಾಪಾರವನ್ನು ಬ್ರಿಟನ್ನು ಸಕ್ರಮಗೊಳಿಸಿಕೊಳ್ಳಬೇಕು. ಇದು ಅದರ ಕರ್ತವ್ಯವೆಂದು ನನ್ನ ಅಭಿಪ್ರಾಯ. ಭಾರತ ಕೂಡ ತನ್ನ ಕಲ್ಯಾಣಕ್ಕೆ, ಯೋಗಕ್ಷೇಮಕ್ಕೆ ಅನುಕೂಲವಾಗುವಂತೆ ತನ್ನ ಆಮದು ವ್ಯಾಪಾರವನ್ನು ಸಕ್ರಮಿಸಿಕೊಳ್ಳಬೇಕಾದ್ದು ಅದರ ಕರ್ತವ್ಯ. ನೀತಿಯ ಮೌಲ್ಯಗಳನ್ನು ಲೆಕ್ಕಿಸದ ಅಥವಾ ಗಮನಿಸದ ಅರ್ಥಶಾಸ್ತ್ರ ಸತ್ಯಕ್ಕೆ ದೂರ. ಅಹಿಂಸೆಯ ನ್ಯಾಯವನ್ನು ಅರ್ಥಶಾಸ್ತ್ರದಲ್ಲಿ ತರುವುದು ಎಂದರೆ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ನೀತಿಯ ನಿಯಮಗಳನ್ನು ಅಳವಡಿಸಿ ಕ್ರಮಗೊಳಿಸುವುದು ಎಂದು ಅರ್ಥ. ಅಂತರರಾಷ್ಟ್ರೀಯ ಸಂಬಂಧಗಳನ್ನು ನೀತಿಯ ತಳಹದಿಯಮೇಲೆ ಭಾರತದ ಪ್ರಯತ್ನಗಳ ಮುಖಾಂತರ ನಿಲ್ಲಿಸುವದೇ ನನ್ನ ಮಹತ್ವಾಕಾಂಕ್ಷೆ. ಸಾಮೂಹಿಕ ಅಹಿಂಸೆ ಪರಿಮಿತವಾಗಿ ಬೆಳೆಯುವದರ ಬಗ್ಗೆ ನನಗೆ ನಿರಾಶೆ ಇಲ್ಲ. ಮನುಷ್ಯ ಸ್ವಭಾವ ಯಾವಾಗಲೂ ಅಧೋಗತಿಯನ್ನೇ ಹಿಡಿಯುತ್ತದೆ ಎಂದು ನಂಬಲು ನಾನು ಸಿದ್ಧನಿಲ್ಲ.

ನೂಲುವದರಿಂದ, ಖಾದಿಯಿಂದ ಪರದೇಶೀ ವಸ್ತ್ರ ಬಹಿಷ್ಕಾರ ಸಫಲವಾದರೆ ಅದರಿಂದ ಪ್ರಥಮ ತರಗತಿಯ ರಾಜಕೀಯ ಫಲ ಬರಲೇಬೇಕು. ಅಷ್ಟೇ ಅಲ್ಲ, ಭಾರತದ ಅತ್ಯಂತ ದೀನ ದರಿದ್ರರನ್ನು, ಗಂಡಸರಾಗಲೀ ಹೆಂಗಸರಾಗಲೀ ತಮ್ಮ ಶಕ್ತಿಯನ್ನು ಅರಿತುಕೊಳ್ಳುವಂತೆ ಮಾಡಿ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರು ಭಾಗವಹಿಸುವಂತೆ ಮಾಡುವದೂ ಇದರ ಉದ್ದೇಶ. ಬ್ರಿಟಿಷ್ ವಸ್ತ್ರ ಬಹಿಷ್ಕಾರದ ಅಥವಾ ಬ್ರಿಟಿಷ್ ವಸ್ತು ಬಹಿಷ್ಕಾರದ ಹಿಂಸಾತ್ಮಕ ಸ್ವಭಾವವನ್ನೂ ಅದರ ವ್ಯರ್ಥತೆಯನ್ನೂ ತೋರಿಸುವ ಅಗತ್ಯ ಈಗ ಬಹಳಮಟ್ಟಿಗೆ ಇಲ್ಲ.

**ಪರದೇಶ – ವಿರುದ್ಧ – ಬ್ರಿಟಿಷ್:**

ಅನೇಕ ದೇಶಭಕ್ತರು ಸೂಚಿಸಿದಂತೆ, ಆದರೆ ಭಾರತದ ಕಲ್ಯಾಣ ದೃಷ್ಟಿಯಿಂದ ಮಾತ್ರ ನಾನು ಈ ಬಹಿಷ್ಕಾರವನ್ನು ನೋಡುತ್ತಿದ್ದೇನೆ. ಬ್ರಿಟಿಷ್ ವಸ್ತುಗಳೆಲ್ಲವೂ ನಮಗೆ ಬಾಧಕವಲ್ಲ: ಉದಾಹರಣೆಗೆ, ಇಂಗ್ಲಿಷ್ ಪುಸ್ತಕಗಳಿಂದ ನಮ್ಮ ಬೌದ್ಧಿಕ, ಆಧ್ಯಾತ್ಮಿಕ ಲಾಭವೇ ಆಗುತ್ತದೆ. ಬಟ್ಟೆಯ ವಿಷಯದಲ್ಲಿ ಕೇವಲ ಬ್ರಿಟಿಷ್ ಬಟ್ಟೆ ಮಾತ್ರವಲ್ಲ, ಎಲ್ಲ ಪರದೇಶೀ ಬಟ್ಟೆಯೂ ನಮಗೆ ಬಾಧಕವೇ. ಹಾಗೆ ನೋಡಿದರೆ ಸ್ವಲ್ಪ ಕಡಿಮೆಯ ಪ್ರಮಾಣದಲ್ಲಿ ನಮ್ಮ ಗಿರಣಿಬಟ್ಟೆಯು ನಮಗೆ ಬಾಧಕವೇ. ಕೈನೂಲು ಮತ್ತು ಖಾದಿ ಮೂಲಕ ಸಾಧಿಸುವ ಬ್ರಿಟಿಷ್ ಬಹಿಷ್ಕಾರವು ಎಷ್ಟು ಪ್ರಯೋಜನಕಾರಿ ಆಗಬಲ್ಲದೋ ಅಷ್ಟು ಇನ್ನಾವುದೇ ರೀತಿಯಿಂದ ಸಾಧಿಸಿದ ಬ್ರಿಟಿಷ್ ವಸ್ತ್ರ ಬಹಿಷ್ಕಾರವು ಪ್ರಯೋಜನಕಾರಿ ಆಗಲಾರದು. ಇದರಿಂದ ಕನಿಷ್ಠ ಪಕ್ಷ ಎಲ್ಲ ಪರದೇಶೀ ಬಟ್ಟೆಯ ಬಹಿಷ್ಕಾರವಾದರೂ ಅಗತ್ಯ ಆಗುತ್ತದೆ. ಈ ಬಹಿಷ್ಕಾರವು ಯಾರನ್ನೂ ಶಿಕ್ಷಿಸಲು ಮಾಡಿದ್ದಲ್ಲ. ಇದು ರಾಷ್ಟ್ರೀಯ ಅಸ್ತಿತ್ವಕ್ಕೆ ಅಗತ್ಯ.

**ಆಕ್ಷೇಪಣೆಗಳ ವಿಚಾರ:**

ಟೀಕಾಕಾರರು ಹೇಳುತ್ತಾರೆ, ರಾಟೆ ಇನ್ನೂ ರೂಢಿ ಆಗಿಲ್ಲ. ಅದರಲ್ಲಿ ಸಾಕಷ್ಟು ಹುರುಪು ಹೆಚ್ಚಿಸುವ ಗುಣ ಅಥವಾ ಭಾವೋದ್ದೀಪಕತೆ ಇಲ್ಲ. ಹೆಂಗಸರಿಗೆ ಮಾತ್ರ ಈ ಉದ್ಯೋಗ

ಸರಿಹೋದೀತು; ಹೀಗೆ ಮಾಡುವದರಿಂದ ಮತ್ತೆ ನಾವು ಮಧ್ಯಯುಗಕ್ಕೆ ಹೋದಂತೆ ಆಗುತ್ತದೆ. ಯಂತ್ರವು ವಿಜ್ಞಾನದ ವೈಭವೋಪೇತ ಪ್ರಗತಿಯ ದ್ಯೋತಕವಾಗಿದೆ. ಅದರ ವಿರುದ್ಧ ರಾಟೆಯನ್ನು ತರುವದು ವ್ಯರ್ಥಪ್ರಯತ್ನ, ಇತ್ಯಾದಿ. ಆದರೆ ನನ್ನ ಅಭಿಪ್ರಾಯದಲ್ಲಿ ಭಾರತಕ್ಕೆ ಭಾವೋದ್ದೀಪಕತೆ ಬೇಕಾಗಿಲ್ಲ. ಗಟ್ಟಿಯಾದ ಕೆಲಸ ನಮ್ಮ ಜನಕೋಟಿಗೆ ಬೇಕು. ಗಟ್ಟಿಕೆಲಸ ಭಾವೋದ್ದೀಪಕವೂ ಹೌದು, ಪುಷ್ಟಿಕರವೂ ಹೌದು. ರಾಟೆಯ ಪ್ರಯೋಗಕ್ಕೆ ನಾವಿನ್ನೂ ಸಾಕಷ್ಟು ಅವಕಾಶಕೊಟ್ಟಿಲ್ಲ. ನಮ್ಮಲ್ಲಿ ಅನೇಕರು ಸಾಕಷ್ಟು ಆಳವಾಗಿ ಅದರ ಬಗ್ಗೆ ವಿಚಾರವನ್ನೇ ಮಾಡಿಲ್ಲ. ಹೀಗೆನ್ನುವಾಗ ನನಗೆ ದುಃಖವಾಗುತ್ತದೆ. ಕೈನೂಲಿನ ಬಗ್ಗೆ ಆಗಾಗ ಕೆಲವು ತೀರ್ಮಾನಗಳು ಆಗಿವೆ. ಅವನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರೇ ಕಾರ್ಯಗತಗೊಳಿಸಿಲ್ಲ. ನಮ್ಮಲ್ಲಿ ಬಹುಜನಕ್ಕೆ ಅದರಲ್ಲಿ ನಂಬಿಕೆಯೇ ಇಲ್ಲ. ಪರಿಸ್ಥಿತಿ ಹೀಗಿರುವಾಗ ಕೈನೂಲಿನ ಕೆಲಸದಲ್ಲಿ ಚೈತನ್ಯಗೊಳಿಸುವ ಶಕ್ತಿ ಇಲ್ಲದ ಮೂಲಕ ಅದು ವಿಫಲವಾಯಿತು ಎಂದು ಹೇಳುವದು ನ್ಯಾಯಸಂಗತವಲ್ಲ. ಕೇವಲ ಮುದುಕರ ಉದ್ಯೋಗ ಇದು ಎನ್ನುವದು ನಿಜಾಂಶಗಳನ್ನು ಅಲಕ್ಷಿಸಿದಂತೆ. ನೂಲಿನ ಗಿರಿಣಿ ಬೇರೆ ಏನೂ ಅಲ್ಲ. ಅದು ಅನೇಕ ರಾಟೆಗಳನ್ನು ಒಟ್ಟುಗೂಡಿಸಿದಂತೆ ಅವನ್ನು ಗಂಡಸರೇ ನಡೆಸುತ್ತಾರೆ. ಗಂಡಸಿನ ಯೋಗ್ಯತೆಗೆ ಕೆಲವು ಕೆಲಸ ತಕ್ಕುವಲ್ಲ ಎಂಬ ಈ ಭ್ರಾಂತಿ ಹೋಗಬೇಕಾದ ಕಾಲ ಈಗ ಬಂದಿದೆ. ಸಾಧಾರಣ ಪರಿಸ್ಥಿತಿಯಲ್ಲಿ ಕೈನೂಲಿನ ಉದ್ಯೋಗವು ಮಹಿಳೆಯರದೇ ನಿಜ. ಆದರೆ ಮುಂದಿನ ರಾಜ್ಯ ಕೆಲವು ಗಂಡಸರನ್ನು ಯಾವಾಗಲೂ ರಾಟೆಯ ಉದ್ಯೋಗದಲ್ಲಿ ತೊಡಗಿಸಿಯೇ ಇರಬೇಕಾಗುತ್ತದೆ. ಇದು ಗೃಹೋದ್ಯೋಗ. ಆ ಚೌಕಟ್ಟಿನೊಳಗೆಯೇ ಸುಧಾರಣೆಗಳನ್ನು ಅವರು ಮಾಡಬೇಕು. ಈಗ ರಾಟೆಯಲ್ಲಿ ಆಗಿರುವ ಸುಧಾರಣೆಯು ಗಂಡಸರು ನಾವು ಕೆಲವರು ಅದನ್ನು ತಿರುಗಿಸದೇ ಇದ್ದಿದ್ದರೆ, ಅದರ ಬಗ್ಗೆ ಹಗಲೂ ರಾತ್ರಿಯೂ ಯೋಚಿಸದೇ ಇದ್ದಿದ್ದರೆ ಸಾಧ್ಯವಾಗುತ್ತಿರಲಿಲ್ಲ.

**ಯಂತ್ರಗಳು:**

ಯಂತ್ರಗಳ ವಿಷಯದಲ್ಲಿ ನನ್ನವು ಎಂದು ಹೇಳಲಾದ ಅಭಿಪ್ರಾಯಗಳನ್ನು ನೀವು ನಿಮ್ಮ ಮನಸ್ಸಿನಿಂದ ತೆಗೆದುಹಾಕಬೇಕೆಂದು ನನ್ನ ಅಪೇಕ್ಷೆ. ಯಾವ ಪ್ರಕಾರ ನಾನು ಸಮಗ್ರ ಅಹಿಂಸಾ ಸಿದ್ಧಾಂತವನ್ನು ರಾಷ್ಟ್ರವು ಸ್ವೀಕರಿಸಬೇಕೆಂದು ಹೇಳುತ್ತಿಲ್ಲವೋ ಅದೇ ಪ್ರಕಾರ, ಯಂತ್ರಗಳ ಬಗ್ಗೆ ಸಹ ನನ್ನ ಅಭಿಪ್ರಾಯಗಳೆಲ್ಲವನ್ನೂ ರಾಷ್ಟ್ರವು ಒಪ್ಪಿಕೊಳ್ಳಬೇಕೆಂದು ಪ್ರಯತ್ನಿಸುತ್ತಿಲ್ಲ. ರಾಟೆಯೇ ಒಂದು ಸೊಗಸಾದ ಯಂತ್ರ, ಇದನ್ನು ಕಂಡುಹಿಡಿದ ಆ ಅಜ್ಞಾತ ಶೋಧಕನಿಗೆ ಗೌರವಪೂರ್ಣವಾಗಿ ನನ್ನ ತಲೆ ಪ್ರತಿನಿತ್ಯವೂ ಬಾಗುತ್ತದೆ. ನನಗಿರುವ ಅಸಮಾಧಾನ ಒಂದರ ಬಗ್ಗೆಯೇ. ನಮ್ಮ ದೇಶ ಬಹಳ ವಿಸ್ತಾರವಾದುದು. ೧೯೦೦ ಮೈಲಿ ಉದ್ದ ೧೫೦೦ ಮೈಲಿ ಅಗಲ. ಇದರಲ್ಲಿ ಅಲ್ಲಿ ಇಲ್ಲಿ ಎಲ್ಲೆಲ್ಲೋ ದೂರ ದೂರ ಹರಡಿರುವ ಸಾವಿರಾರು ಮನೆಗಳಲ್ಲಿ ಹಸಿವಿನ ಬಾಧೆ ತಗಲದಂತೆ ಕಾಪಾಡಲು ಆಧಾರವಾದ ಈ ಒಂದೇ ಒಂದು ಗೃಹ ಉದ್ಯೋಗವನ್ನು ಉದ್ದೇಶಪೂರ್ವಕವಾಗಿ ನಾಶಗೊಳಿಸಿದರು. ಅದರ ಬಗ್ಗೆ ನನಗೆ ಅಸಮಾಧಾನ.

**ನೂಲಿನ ಮತಾಧಿಕಾರ :**

ರಾಟೆಯ ಬಗ್ಗೆ ನನಗಿರುವ ಈ ಅನುರಾಗವನ್ನು ನೋಡಿ, ಅಥವಾ ನಮ್ಮ ಚುನಾವಣೆಯ ಮತಾಧಿಕಾರದಲ್ಲಿ ಇದನ್ನು ಸೇರಿಸುವ ಸಾಹಸವನ್ನು ನೋಡಿ ಈಗ ನಿಮಗೆ ಆಶ್ಚರ್ಯವಾಗದು. ಪಂಡಿತ್ ಮೋತಿಲಾಲ ನೆಹರು ಹಾಗೂ ದೇಶಬಂಧು ದಾಸರು ಸ್ವರಾಜ್ಯ ಪಕ್ಷದ ಪರವಾಗಿ ಇದನ್ನು ಏಕೆ ಒಪ್ಪಿಕೊಂಡರು ಎಂಬ ಬಗ್ಗೆಯೂ ನಿಮಗೆ ಆಶ್ಚರ್ಯವಾಗದು. ನನ್ನ ಮಾತೇ ನಡೆಯಬೇಕು ಎಂದಿದ್ದರೆ, ಕಾಂಗ್ರೆಸ್ಸಿನ ಪಟ್ಟಿಯಲ್ಲಿ ನೂಲಲು ಇಷ್ಟ ಇಲ್ಲದವರು ಅಥವಾ ಯಾವಾಗಲೂ ಖಾದಿಯನ್ನು ಧರಿಸದವರು ಒಬ್ಬರೂ ಇರುತ್ತಿರಲಿಲ್ಲ. ಸ್ವರಾಜ್ಯ ಪಕ್ಷವು ಎಷ್ಟು ಒಪ್ಪಿಕೊಂಡಿದೆಯೋ ಅಷ್ಟಕ್ಕೆ ನಾನು ಕೃತಜ್ಞ. ಈ ತಿದ್ದುಪಡಿಯಾಗಲೀ ಸುಧಾರಣೆ ಯಾಗಲೀ ನಮ್ಮ ದೌರ್ಬಲ್ಯಕ್ಕೆ ಅಥವಾ ಶ್ರದ್ಧಾಹೀನತೆಗೆ ಒಂದು ರಿಯಾಯಿತಿ. ಆದರೆ ಯಾರಿಗೆ ರಾಟೆಯಲ್ಲಿ ಖಾದಿಯಲ್ಲಿ ಪೂರ್ಣ ನಂಬಿಕೆ ಇದೆಯೋ ಅವರಿಗೆ ಇದರಿಂದ ಹೆಚ್ಚು ಹೆಚ್ಚು ಸ್ಫೂರ್ತಿ ಬರುವಂತೆ ಆಗಬೇಕು.

**ಮತ್ತಾವ ಸಂದೇಶವೂ ಇಲ್ಲ:**

ರಾಟೆಯ ಬಗ್ಗೆ ಇಷ್ಟು ಹೊತ್ತು ನಾನು ಹೇಳಿದೆ. ವಿಸ್ತಾರವಾಗಿಯೂ ಹೇಳಿದೆ. ಕಾರಣ ಇದಕ್ಕಿಂತ ಉತ್ತಮ ಸಂದೇಶ ಅಥವಾ ಬೇರೆ ಸಂದೇಶ ರಾಷ್ಟ್ರದ ಮುಂದೆ ಇಡಲಾರೆ. ಸ್ವರಾಜ್ಯ ಸಾಧನೆ ಶಾಂತಿಯುತ ಮತ್ತು ನ್ಯಾಯಸಮ್ಮತ ಮಾರ್ಗದಿಂದ ಆಗಬೇಕೆಂದರೆ ಅದಕ್ಕೆ ಇದಕ್ಕಿಂತ ಹೆಚ್ಚು ಪರಿಣಾಮಕಾರಿಯಾದ ಸಾಧನ ನನಗೆ ಯಾವುದೂ ಗೊತ್ತಿಲ್ಲ. ಆಗಲೇ ನಾನು ಹೇಳಿದ್ದೇನೆ. ಹಿಂಸೆಗೆ ಬದಲು ಇಡೀ ರಾಷ್ಟ್ರವು ಯಾವುದನ್ನಾದರೂ ಒಪ್ಪಿಕೊಳ್ಳಬೇಕಾಗಿದ್ದರೆ ಇದೊಂದೇ. ಸವಿನಯ ಶಾಸನಭಂಗದಲ್ಲಿ ನನಗೆ ದೃಢ ವಿಶ್ವಾಸ. ಆದರೆ ಪರದೇಶೀವಸ್ತ್ರ ಬಹಿಷ್ಕಾರದ ಶಕ್ತಿ ನಮ್ಮಲ್ಲಿ ಮೂಡುವವರೆಗೆ ಸ್ವರಾಜ್ಯ ಸಂಪಾದನೆಗಾಗಿ ಸವಿನಯ ಶಾಸನ ಭಂಗ ಮಾಡುವುದು ಅಸಾಧ್ಯ. ಈಗ ನಿಮಗೆ ಸುಲಭವಾಗಿ ಅರ್ಥವಾಗ ಬಹುದು – ರಾಟೆಯ ಬಗ್ಗೆ ನನ್ನ ಅಭಿಪ್ರಾಯಗಳನ್ನು ನೀವು ಅಂಗೀಕರಿಸದೆ ಇದ್ದರೆ ನನ್ನಿಂದ ಕಾಂಗ್ರೆಸ್ಸಿಗೆ ಯಾವ ಮಾರ್ಗದರ್ಶನವೂ ಆಗಲಾರದು. ರಾಟೆಯ ಹಿನ್ನೆಲೆಯಲ್ಲಿ ಇರುವ ಸಿದ್ಧಾಂತವನ್ನು ನಾನು ಪ್ರತಿಪಾದಿಸಿದ್ದು ತಪ್ಪು ಎನಿಸಿ, ನಿಮಗೆ ರಾಷ್ಟ್ರೀಯ ಪ್ರಗತಿಗೆ ನಾನು ಅಡ್ಡ ಎಂದು ನೀವು ಭಾವಿಸಿದರೆ, ಅದು ನ್ಯಾಯವೇ. ಕೆಲವು ಗೆಳೆಯರು ಹಾಗೆ ತಿಳಿದೂ ಇದ್ದಾರೆ. ನಿಮ್ಮ ಬುದ್ಧಿಗೂ ನಿಮ್ಮ ಹೃದಯಕ್ಕೂ ಇದು ಒಪ್ಪಿಗೆ ಆಗದೇ ಹೋದರೆ. ನನ್ನ ನಾಯಕತ್ವವನ್ನು ನೀವು ತ್ಯಜಿಸಬೇಕಾದ್ದೇ. ಹಾಗೆ ಮಾಡದೆ ಹೋದರೆ ನೀವು ಕರ್ತವ್ಯಚ್ಯುತರಾಗುತ್ತೀರಿ. ಲಾರ್ಡ್ ವಿಲಿಂಗಡನ್ ಒಮ್ಮೆ ನಮ್ಮ ಬಗ್ಗೆ ಬಹಳ ಯೋಗ್ಯ ಹೇಳಿದ. ನಮಗೆ ಇಲ್ಲ ಎನ್ನುವ ಧೈರ್ಯ ಮತ್ತು ಶಕ್ತಿ ಸಾಲದು ಎಂದು. ಇನ್ನು ಮುಂದೆ ಅಂಥ ಪ್ರಸಂಗ ಬರದಿರಲಿ. ನಿಮಗೆ ನಂಬಿಕೆ ಇಲ್ಲದಿದ್ದರೆ ನನ್ನ ಸೂಚನೆಯನ್ನು ನೀವು ತಿರಸ್ಕರಿಸುವದೇ ಸ್ವರಾಜ್ಯ ಪ್ರಾಪ್ತಿಗೆ ನೀವು ಇಟ್ಟ ಮೊದಲನೆಯ ಹೆಜ್ಜೆ ಎನ್ನುತ್ತೇನೆ.

**ಹಿಂದೂ ಮುಸ್ಲಿಂ ಐಕ್ಯ:**

ಹಿಂದೂ ಮುಸ್ಲಿಂ ಐಕ್ಯ ರಾಟೆಗಿಂತ ಕಡಿಮೆ ಮಹತ್ವದ್ದಲ್ಲ. ಬಾಳಿನ ಉಸಿರು ಅದು.

ಈ ವಿಷಯವಾಗಿ ನಿಮ್ಮ ಹೊತ್ತನ್ನು ನಾನು ಹೆಚ್ಚು ಕಳೆಯಬೇಕಾಗಿಲ್ಲ. ಸ್ವರಾಜ್ಯಕ್ಕೆ ಇದು ಅಗತ್ಯವೆಂಬುದು ಬಹಳ ಮಟ್ಟಿಗೆ ಸಾರ್ವತ್ರಿಕವಾಗಿ ಒಪ್ಪಿಗೆಯಾಗಿದೆ. 'ಬಹುಳಮಟ್ಟಿಗೆ' ಎಂದದ್ದು ಏಕೆ ಎಂದರೆ, ಕೆಲವರು ಹಿಂದೂಗಳು ಕೆಲವರು ಮುಸಲ್ಮಾನರು ಸಂಪೂರ್ಣವಾಗಿ ಹಿಂದೂ ಭಾರತ ಅಥವಾ ಮುಸಲ್ಮಾನ ಭಾರತ ಆಗದೇ ಇದ್ದರೆ ಈಗಿನ ಹಾಗೆ ಬ್ರಿಟನ್ನಿನ ಆಶ್ರಯವೇ ಇರಲಿ ಎನ್ನುತ್ತಾರೆ. ಹಾಗೆ ಹೇಳುವರ ಸಂಖ್ಯೆ ಬಹಳ ಕಡಿಮೆ ಎಂಬುದು ಸಂತೋಷದ ವಿಷಯ.

ಮೌಲಾನಾ ಶೌಕತ್ ಅಲಿಗೆ ಬಹಳ ಪ್ರಬಲವಾದ ಆಶಾಭಾವನೆ. ಈಗಿನ ಈ ವಿರಸವು ತಾತ್ಕಾಲಿಕ ಎನ್ನುತ್ತಾರೆ. ನನಗೂ ಹಾಗೆಯೇ ಅನ್ನಿಸುತ್ತದೆ. ಹಿಂದೂಗಳೂ ಭಾಗವಹಿಸಿ ತಮ್ಮದಾಗಿ ಮಾಡಿಕೊಂಡ ಖಿಲಾಫತ್ ಚಳವಳಿ, ಆಮೇಲೆ ಬಂದ ಅಸಹಕಾರ, ಇದುವರೆಗೆ ನಿದ್ದೆ ಮಾಡುತ್ತಿದ್ದ ಜನತೆಯನ್ನು ಎಚ್ಚರಿಸಿದವು. ಮೇಲಿನ ವರ್ಗಕ್ಕೂ ಕೆಳಗಿನ ವರ್ಗಕ್ಕೂ ಇದು ಒಂದು ಹೊಸ ಜಾಗೃತಿಯನ್ನು ಕೊಟ್ಟಿತು. ಅಸಹಕಾರದ ಉತ್ಕರ್ಷದ ದಿನಗಳಲ್ಲಿ ನಿರಾಶೆಗೊಂಡಿದ್ದ ಸ್ವಾರ್ಥಿಗಳು ಈಗ ಅಸಹಕಾರದ ಹೊಸತನದ ಆಕರ್ಷಣೆ ಕಡಿಮೆಯಾದ ಮೇಲೆ ಅವಕಾಶ ಪಡೆದು ಎರಡೂ ಸಮಾಜಗಳ ಸ್ವಾರ್ಥವನ್ನು ಅಥವಾ ಮತಾಂಧತೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಕಳೆದ ಎರಡು ವರ್ಷಗಳ ಜಗಳಗಳು ಅದರ ಫಲ. ಧರ್ಮವನ್ನು ವಿದ್ರೂಪಗೊಳಿಸಿ ಅಪಹಾಸ್ಯಗೊಳಿಸಲಾಗಿದೆ. ಕ್ಷುಲ್ಲಕ ವಿಷಯಗಳನ್ನು ಧರ್ಮದ ಹೆಸರಿನಲ್ಲಿ ದೊಡ್ಡದು ಮಾಡಿದ್ದಾರೆ. ಏನು ಬೇಕಾದರೂ ಆಗಲಿ ಅದನ್ನು ನಡೆಸಿಯೇ ತೀರಬೇಕು ಎನ್ನುತ್ತಾರೆ ಮತಾಂಧರು. ವಿರಸ ಹುಟ್ಟಿಸಲು ಆರ್ಥಿಕ ರಾಜಕೀಯ ಕಾರಣಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಇದು ಕೋಹಾಟನಲ್ಲಿ ಶಿಖರಕ್ಕೆ ಮುಟ್ಟಿತು. ಮೊದಲೇ ದುರಂತ. ಆ ಬೆಂಕಿಗೆ ಸ್ಥಳೀಯ ಅಧಿಕಾರಿಗಳ ಹೃದಯಹೀನ ಔದಾಸೀನ್ಯದಿಂದ ತುಪ್ಪ ಸುರಿದಂತಾಯಿತು. ಆ ದುರಂತದ ಕಾರಣಗಳನ್ನು ಪರಿಶೀಲಿಸಲು ಅಥವಾ ಅಪರಾಧವನ್ನು ನಿಷ್ಕರ್ಷಿಸಲು ನಾನು ಇಲ್ಲಿ ತೊಡಗುವದಿಲ್ಲ. ನನಗೆ ಒಂದು ವೇಳೆ ಮನಸ್ಸಿದ್ದರೂ ಅದಕ್ಕೆ ಬೇಕಾದ ಸಾಮಗ್ರಿ ಇಲ್ಲ. ಇಷ್ಟು ಹೇಳಿದರೆ ಸಾಕು. ಹಿಂದೂ ಶರಣಾರ್ಥಿಗಳು ಪ್ರಾಣಭಯದಿಂದ ಓಡಿಹೋದರು. ಕೋಹಾಟನಲ್ಲಿ ಮುಸಲ್ಮಾನರ ಸಂಖ್ಯೆ ಅತ್ಯಧಿಕ. ಪರದೇಶೀಯ ಪ್ರಭುತ್ವದಲ್ಲಿ ಎಷ್ಟು ಸಾಧ್ಯವೋ ಅಷ್ಟು ಪರಿಣಾಮಕಾರಿ ರಾಜಕೀಯ ಅಧಿಕಾರ ಅವರ ಕೈಯಲ್ಲಿದೆ. ಕೋಹಾಟನ ಸಂಪೂರ್ಣ ಜನ ಹಿಂದೂಗಳೇ ಆಗಿದ್ದ ಪಕ್ಷದಲ್ಲಿ ಅಲ್ಲಿ ಹಿಂದೂಗಳು ಎಷ್ಟು ಸುರಕ್ಷಿತವಾಗಿ ಇರಬಹುದಾಗಿತ್ತೋ ಅಷ್ಟೇ ಸುರಕ್ಷಿತವಾಗಿ ಮುಸಲ್ಮಾನರು ಬಹುಸಂಖ್ಯಾತರಾಗಿ ಇದ್ದಾಗ ಕೂಡ ಅವರು ಇರಬಲ್ಲರು ಎಂಬುದನ್ನು ತೋರಿಸಕೊಡುವದು ಮುಸಲ್ಮಾನರ ಕರ್ತವ್ಯ. ಹಿಂದೂ ಶರಣಾರ್ಥಿಗಳು ಪ್ರತಿಯೊಬ್ಬರೂ ಊರಿಗೆ ಬರುವಂತೆ ಮಾಡುವವರೆಗೂ ಕೋಹಾಟ ಮುಸಲ್ಮಾನರು ಸುಮ್ಮನೆ ಇರಲಾಗದು. ಸರಕಾರ ಒಡ್ಡಿದ ಬೋನಿನಲ್ಲಿ ಹಿಂದೂಗಳು ಬೀಳಬಾರದು ಎಂದು ನಾನು ಆಶಿಸುತ್ತೇನೆ. ತಮ್ಮ ಪ್ರಾಣ ಸೊತ್ತುಗಳ ಬಗ್ಗೆ ಕೋಹಾಟ ಮುಸಲ್ಮಾನರು ಪೂರ್ಣ ಭರವಸೆ ಕೊಡುವವರೆಗೆ ಹಿಂದೂ ಶರಣಾರ್ಥಿಗಳು ಹಿಂದಕ್ಕೆ ಹೋಗಲು ದೃಢವಾಗಿ ತಿರಸ್ಕರಿಸಬೇಕು ಎನ್ನುತ್ತೇನೆ.

ಮುಸಲ್ಮಾನರ ಸಂಖ್ಯೆ ಅತ್ಯಧಿಕವಾಗಿರುತ್ತದೆ. ಅವರ ನಡುವೆ ಹಿಂದೂಗಳು ಇರಬೇಕೆಂದರೆ ಮುಸಲ್ಮಾನರು ಅವರನ್ನು ಬರಮಾಡಿಕೊಂಡು, ತಮ್ಮ ಗೆಳೆಯರಂತೆ ಸಮಾನರಂತೆ ನೋಡುವ ಸಂದರ್ಭ ಇರಬೇಕು. ಮುಸಲ್ಮಾನರು ಕಡಿಮೆ ಸಂಖ್ಯೆ ಇರುವ ಕಡೆಯೂ ಅಷ್ಟೇ. ಹಿಂದೂಗಳು ಹೆಚ್ಚಾಗಿ ಇರುವ ಕಡೆ, ಅವರ ನಡುವೆ ಇವರು ಗೌರವದಿಂದ ಬಾಳಬೇಕೆಂದರೆ ಹಿಂದೂಗಳ ಸ್ನೇಹ ಅತ್ಯಗತ್ಯ. ಸರಕಾರ ಕಳ್ಳಕಾಕರ ದರೋಡೆಕಾರರ ವಿರುದ್ಧ ರಕ್ಷಣೆ ಕೊಡಬಹುದು. ಆದರೆ ಒಂದು ಇಡೀ ಸಮಾಜ ಇನ್ನೊಂದು ಸಮಾಜವನ್ನು ಸಂಪೂರ್ಣವಾಗಿ ಬಹಿಷ್ಕರಿಸಿದರೆ ಅದಕ್ಕೆ ರಕ್ಷಣೆ ಕೊಡಲು ಸ್ವರಾಜ್ಯ ಸರಕಾರಕ್ಕೂ ಸಾಧ್ಯವಿಲ್ಲ. ಸರಕಾರ ಅಸಾಧಾರಣ ಪರಿಸ್ಥಿತಿಯಲ್ಲಿ ಮಾತ್ರ ಕೈಹಾಕಬಹುದು. ಜಗಳ ಆಡುವದೇ ಸಹಜವಾಗಿಬಿಟ್ಟರೆ ಅದು ಅಂತಃಕಲಹ. ಆಯಾ ಗುಂಪುಗಳು ಕಲಹ ಮೂಲಕವೇ ಸಮಸ್ಯೆಗಳನ್ನು ತೀರ್ಮಾನಮಾಡಿಕೊಳ್ಳಬೇಕು. ಈಗಿನ ಸರಕಾರ ಪರದೇಶಿ. ಆದ್ದರಿಂದ ಇದು ಪ್ರಚ್ಛನ್ನ ಸೈನಿಕ ಆಡಳಿತ. ನಾವು ಎಷ್ಟೇ ಸಂಘಟಿತ ರಾದರೂ ತನ್ನನ್ನು ಕಾಪಾಡಿಕೊಳ್ಳುವ ಶಕ್ತಿ ಸರಕಾರಕ್ಕಿದೆ. ಆದ್ದರಿಂದಲೇ ಅದಕ್ಕೆ ಮನಸ್ಸಿದ್ದರೆ ನಮ್ಮ ಈ ಅಂತಃಕಲಹವನ್ನು ತಡೆಗಟ್ಟಬಹುದು. ಆದರೆ ಜನಪ್ರಿಯ ಎನ್ನಿಸಿಕೊಳ್ಳಬಯಸಿದ ಯಾರ ಸ್ವರಾಜ್ಯ ಸರಕಾರವೂ ಯಾವಾಗಲೂ ಯುದ್ಧ ಸಿದ್ಧತೆಯಲ್ಲಿ ಇರಲಾರದು. ಸ್ವರಾಜ್ಯ ಸರಕಾರ ಎಂದರೆ ಹಿಂದೂಗಳ, ಮುಸಲ್ಮಾನರ ಹಾಗೂ ಇತರರ ಸ್ವತಂತ್ರ ಸಾಮುದಾಯಿಕ ಇಚ್ಛೆಯಿಂದ ಸ್ಥಾಪಿತವಾದದ್ದು. ಹಿಂದೂಗಳಿಗೆ ಮುಸಲ್ಮಾನರಿಗೆ ಸ್ವರಾಜ್ಯ ಬೇಕಾದರೆ ತಮ್ಮ ತಮ್ಮ ಭಿನ್ನಾಭಿಪ್ರಾಯಗಳನ್ನು ಅವರು ಸ್ನೇಹದಿಂದ ಬಗೆಹರಿಸಿಕೊಳ್ಳಬೇಕು.

ದಿಲ್ಲಿಯಲ್ಲಿ ನಡೆದ ಐಕ್ಯತಾ ಸಮ್ಮೇಲನವು ಮತೀಯ ಭಿನ್ನತೆಗಳ ಪರಿಹಾರಕ್ಕೆ ದಾರಿಮಾಡಿದೆ. ಹಿಂದೂಗಳಿಗೂ, ಮುಸಲ್ಮಾನರಿಗೂ ಅಷ್ಟೇ ಅಲ್ಲ–ಎಲ್ಲ ಜಾತಿಗಳಿಗೂ ಪಂಥಗಳಿಗೂ ಇರುವ ರಾಜಕೀಯ ಭೇದಗಳನ್ನು ನ್ಯಾಯವಾಗಿ ಪರಿಹರಿಸಲು ಸರ್ವಪಕ್ಷ ಪರಿಷತ್ತಿನ ಸಮಿತಿಯು ಒಂದು ಮಾರ್ಗವನ್ನು ಹುಡುಕಬೇಕಾಗಿದೆ. ಮತೀಯ ಪಂಥೀಯ ಪ್ರಾತಿನಿಧ್ಯಗಳನ್ನು ಆದಷ್ಟು ಬೇಗ ತೆಗೆದು ಹಾಕುವದೇ ನಮ್ಮ ಗುರಿಯಾಗಬೇಕು. ಮತದಾರ ವರ್ಗವು ಸಕಲರದೂ ಆಗಿ ಕೇವಲ ಯೋಗ್ಯತೆಯ ಆಧಾರದ ಮೇಲೆ ನಿಷ್ಪಕ್ಷಪಾತವಾಗಿ ತಮ್ಮ ಪ್ರತಿನಿಧಿಗಳನ್ನು ಆರಿಸಬೇಕು. ನಮ್ಮ ನೌಕರ ವರ್ಗದಲ್ಲಿ ಹಾಗೆಯೇ ನಿಷ್ಪಕ್ಷಪಾತವಾಗಿ ಕೇವಲ ಅರ್ಹತೆಯ ಆಧಾರದ ಮೇಲೆ ಗಂಡಸರನ್ನು, ಹೆಂಗಸರನ್ನು ನಿಯಮಿಸಿಕೊಳ್ಳಬೇಕು. ಆದರೆ ಆ ಕಾಲ ಬರುವವರೆಗೆ ಮತೀಯ ದ್ವೇಷಾಸೂಯೆಗಳು, ಪಕ್ಷಪಾತಗಳು ಗತಕಾಲದವು ಎನಿಸಿಕೊಳ್ಳುವವರೆಗೆ ಬಹುಸಂಖ್ಯೆಯ ಜನರ ಉದ್ದೇಶಗಳನ್ನು ಶಂಕಿಸುವ ಅಲ್ಪ ಸಂಖ್ಯಾಕರಿಗೂ ಅವರ ದಾರಿಯಲ್ಲಿ ನಡೆಯಲು ಅವಕಾಶ ಇರಬೇಕು. ಬಹುಸಂಖ್ಯೆಯ ಜನರು ತ್ಯಾಗದ ಉದಾಹರಣೆ ತೋರಬೇಕು.

**ಅಸ್ಪೃಶ್ಯತೆ:**

ಸ್ವರಾಜ್ಯಕ್ಕೆ ಮತ್ತೊಂದು ಆತಂಕ ಅಸ್ಪೃಶ್ಯತೆ. ಅದರ ನಿವಾರಣೆ ಸ್ವರಾಜ್ಯಕ್ಕೆ ಅತ್ಯಗತ್ಯ. ಹಿಂದೂ ಮುಸ್ಲಿಂ ಹೇಗೋ ಇದು ಹಾಗೆಯೇ ಸ್ವರಾಜ್ಯಪ್ರಾಪ್ತಿಗೆ ಅಗತ್ಯ. ಮುಖ್ಯವಾಗಿ ಇದು ಹಿಂದೂಗಳ ಸಮಸ್ಯೆ. ಈ ದಲಿತವರ್ಗಗಳಿಗೆ ಸ್ವಾತಂತ್ರ್ಯವನ್ನು ಮತ್ತೆ ತಂದುಕೊಡುವವರೆಗೆ ಹಿಂದೂಗಳು ಸ್ವರಾಜ್ಯವನ್ನು ಕೇಳಲು ಹಕ್ಕಿಲ್ಲ. ಪಡೆಯಲು ಸಾಧ್ಯವಿಲ್ಲ. ಅವರನ್ನು ತುಳಿತುಳಿದು

ನಾವೂ ಅಧಃಪತನ ಹೊಂದಿದ್ದೇವೆ. ಇಂಗ್ಲೀಷ ಆಕ್ರಮಣಕಾರರು ನಮ್ಮನ್ನು ಹೇಗೆ ನಡೆಸಿ ಕೊಳ್ಳುತ್ತಾರೆಯೋ ಅದಕ್ಕಿಂತ ಹೀನವಾಗಿ ಅಲ್ಲದಿದ್ದರೂ ಅಷ್ಟೇ ಹೀನವಾಗಿ ಹಿಂದೂಸ್ತಾನದ ಮೂಲನಿಸವಾಸಿಗಳನ್ನು ಆರ್ಯರ ದಾಳಿಕಾರರು ನಡೆಸಿಕೊಂಡರು ಎಂದು ಇತಿಹಾಸ ಬಲ್ಲವರು ಹೇಳುತ್ತಾರೆ. ಹಾಗೆ ಒಂದು ಅಸ್ಪೃಶ್ಯರ ವರ್ಗವನ್ನು ನಿರ್ಮಿಸಿದ್ದಕ್ಕಾಗಿ ಈಗ ಗುಲಾಮಗಿರಿಯ ರೂಪದ ಪ್ರತಿಫಲವನ್ನು ನಾವು ಅನುಭವಿಸುತ್ತಿದ್ದೇವೆ. ಈ ಕಲಂಕವನ್ನು ಎಷ್ಟು ಬೇಗ ತೊಳೆದು ಹಾಕಿದರೆ ಅಷ್ಟು ಹಿಂದೂಗಳಿಗೆ ಒಳ್ಳೆಯದು. ಆದರೆ ಅಸ್ಪೃಶ್ಯತೆಯು ದೈವನಿರ್ಮಿತವೆಂದು ಪಂಡಿತರೂ ಪುರೋಹಿತರೂ ಹೇಳುತ್ತಾರೆ. ಹಿಂದೂ ಧರ್ಮದ ಬಗ್ಗೆ ನನಗೂ ಸ್ವಲ್ಪ ಗೊತ್ತಿದೆ. ಈ ಪಂಡಿತರದು ಶುದ್ಧ ತಪ್ಪು ಎಂದು ನನ್ನ ದೃಢ ಅಭಿಪ್ರಾಯ. ಭಗವಂತ ಮಾನವಕುಲದ ಒಂದು ಭಾಗವನ್ನು ಅಸ್ಪೃಶ್ಯ ಎಂದು ಬೇರೆ ಮಾಡಿದ ಎಂಬ ಮಾತು ದೈವದ್ರೋಹ. ಕಾಂಗ್ರೆಸ್ಸಿಗರಾದ ಹಿಂದೂಗಳು ಆದಷ್ಟು ಬೇಗ ಈ ಆತಂಕವನ್ನು ತೆಗೆದು ಹಾಕಬೇಕು. ವಾಯಿಕೋಂ ಸತ್ಯಾಗ್ರಹಿಗಳು ನಮಗೆ ದಾರಿತೋರಿಸುತ್ತಿದ್ದಾರೆ. ಸಜ್ಜನಿಕೆಯಿಂದಲೂ ದೃಢತೆಯಿಂದಲೂ ಸೌಮ್ಯದಿಂದಲೂ ಅವರು ತಮ್ಮ ಹೋರಾಟ ನಡೆಸುತ್ತಿದ್ದಾರೆ. ಅವರಿಗೆ ಸಹನೆ ಇದೆ, ಧೈರ್ಯ ಇದೆ, ಶ್ರದ್ಧೆ ಇದೆ. ಈ ಗುಣಗಳು ಯಾವ ಚಳವಳಿಯಲ್ಲಿ ಇದ್ದರೂ ಅದು ಅಪ್ರತಿಮವಾಗುತ್ತದೆ; ಅದನ್ನು ತಡೆಯಲು ಸಾಧ್ಯವಿಲ್ಲ.

ಆದರೆ ಈಚೆಗೆ ಒಂದು ಮಾತು ಪ್ರಾರಂಭವಾಗಿದೆ. ರಾಜಕೀಯ ಗುರಿಗಳನ್ನು ಸಾಧಿಸಲು ದಲಿತವರ್ಗವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಈ ಬಗ್ಗೆ ಹಿಂದೂಗಳಿಗೆ ನಾನು ಎಚ್ಚರಿಕೆ ಕೊಡಬಯಸುತ್ತೇನೆ. ಅಸ್ಪೃಶ್ಯತಾನಿವಾರಣೆ ಒಂದು ಪ್ರಾಯಶ್ಚಿತ್ತ. ಸವರ್ಣ ಹಿಂದೂಗಳು ತಮಗೂ ಹಿಂದೂಧರ್ಮಕ್ಕೂ ಪ್ರಾಯಶ್ಚಿತ್ತ ಮೂಲಕ ಋಣಮುಕ್ತರಾಗಬೇಕು. ನಿಜವಾಗಿ ಅಸ್ಪೃಶ್ಯರು ಶುದ್ಧರಾಗಬೇಕಾದ್ದಿಲ್ಲ. ಶುದ್ಧರಾಗಬೇಕಾದವರು ಮೇಲಿನ ಜಾತಿಯವರು ಅಸ್ಪೃಶ್ಯರಿಗೆ ಮೀಸಲಾದ ಪಾಪ ಯಾವುದೂ ಇಲ್ಲ. ಹೊಲಸು, ಅನೈರ್ಮಲ್ಯ ಅವರಿಗೇ ಮೀಸಲಿಲ್ಲ. ನಮ್ಮ ದುರಹಂಕಾರವು ನಮ್ಮ ಕಣ್ಣೊಳಗೆ ಪರೆಕಟ್ಟಿ, ನಮ್ಮ ತಪ್ಪುಗಳು ಕಾಣದಂತೆ ಮಾಡುತ್ತವೆ. ಆ ಅಹಂಕಾರವೇ ನಾವು ತುಳಿದ ಇನ್ನೂ ತುಳಿಯುತ್ತಿರುವ, ದಲಿತ ಸಹೋದರರ ಅಲ್ಪ ದೋಷಗಳನ್ನು ಗುಡ್ಡದ ಹಾಗೆ ಕಾಣುವಂತೆ ಮಾಡುತ್ತದೆ. ರಾಷ್ಟ್ರಗಳಿಗೆ ಹೇಗೋ ಧರ್ಮಗಳಿಗೂ ಹಾಗೇಯೇ ಇದು ಪರೀಕ್ಷಾ ಸಮಯ. ದೇವರ ಅನುಗ್ರಹವು, ದೇವರ ಸಾಕ್ಷಾತ್ಕಾರವು ಯಾವ ಜಾತಿಗೂ ಯಾವ ರಾಷ್ಟ್ರಕ್ಕೂ ಗುತ್ತಿಗೆಯಲ್ಲ. ದೇವರಲ್ಲಿ ಶ್ರದ್ಧೆ ಇಟ್ಟು ಅವನ ಬಾಗಿಲ ಕಾಯುವವರೆಲ್ಲರಿಗೂ ಸಮಾನವಾಗಿ ಅದು ಲಭಿಸುತ್ತದೆ. ಯಾವ ರಾಷ್ಟ್ರ, ಯಾವ ಮತ, ಅನ್ಯಾಯಕ್ಕೆ, ಅಸತ್ಯಕ್ಕೆ, ಹಿಂಸೆಗೆ ಮಡಿಲು ಕಟ್ಟುತ್ತದೆಯೋ ಅದು ಈ ಭೂಮಿಯಿಂದ ಮಾಯವಾಗುತ್ತದೆ. ದೇವರು ಪ್ರಕಾಶ, ಅಂಧಕಾರವಲ್ಲ. ದೇವರು ಪ್ರೇಮ, ದ್ವೇಷವಲ್ಲ. ದೇವರು ಸತ್ಯ, ಅಸತ್ಯವಲ್ಲ. ದೇವರು ಒಬ್ಬನೇ ಶ್ರೇಷ್ಠ. ಅವನು ಸೃಷ್ಟಿಸಿದ ನಾವು ಬರೀ ಮಣ್ಣು. ವಿನಯವಂತರಾಗಿ ಅವನ ಸೃಷ್ಟಿಯಲ್ಲಿನ ಕೀರ ಕಟ್ಟಕಡೆಯ ಪ್ರಾಣಿಯನ್ನು ಗುರುತಿಸಿಕೊಳ್ಳೋಣ. ಸುದಾಮನು ಚಿಂದಿ ಉಟ್ಟಿದ್ದರೂ ಕೃಷ್ಣ ಅವನನ್ನು ಗೌರವಿಸಿದ. ಅಷ್ಟು ಗೌರವ ಬೇರೆ ಯಾರಿಗೂ ತೋರಲಿಲ್ಲ. ಧರ್ಮದ ಅಥವಾ ತ್ಯಾಗದ ಬೇರು ಪ್ರೇಮ.

ಈ ನಾಶವಂತ ದೇಹವು ಎಲ್ಲ ಅಧರ್ಮಕ್ಕೂ ಎಲ್ಲ ಸ್ವಾರ್ಥಕ್ಕೂ ಮೂಲಕಾರಣ ಎಂದು ತುಳಸೀದಾಸರು ಅನ್ನುತ್ತಾರೆ. ಸ್ವರಾಜ್ಯವು ಬರಲಿ ಬಿಡಲಿ. ವೇದದ ತತ್ವವನ್ನು ಪುನರುಜ್ಜೀವನಗೊಳಿಸಿ ಅದನ್ನು ಜೀವಂತವಾಗಿ ಮಾಡುವ ಆಶೆ ಇದ್ದರೆ ಹಿಂದೂಗಳು ಮೊಟ್ಟ ಮೊದಲು ತಮ್ಮನ್ನು ಶುದ್ಧೀಕರಿಸಿಕೊಳ್ಳಬೇಕು.

**ಸ್ವರಾಜ್ಯದ ಯೋಜನೆ:**

ಈ ರಾಟೆ. ಹಿಂದೂ ಮುಸ್ಲಿಂ ಐಕ್ಯ. ಅಸ್ಪೃಶ್ಯತಾನಿವಾರಣೆ ಎಲ್ಲವೂ ಒಂದು ಗುರಿಗೆ ಸಾಧನ ಮಾತ್ರ. ಸಾಧ್ಯ ಏನೋ ನಮಗೆ ತಿಳಿಯದು. ನನ್ನ ಮಟ್ಟಿಗಂತೂ ಸಾಧನ ಮಾರ್ಗ ತಿಳಿದರೆ ಸಾಕು. ನನ್ನ ಜೀವನ ಸಿದ್ಧಾಂತದಲ್ಲಿ ಸಾಧನ ಸಾಧ್ಯ ಎರಡೂ ಒಂದಕ್ಕೊಂದು ಪರ್ಯಾಯ ಶಬ್ದಗಳು. ಆದರೆ ಬಹುಕಾಲದಿಂದ ನಾನು ಬಾಬೂ ಭಗವಾನದಾಸರ ಅಭಿಪ್ರಾಯವನ್ನು ಒಪ್ಪಿಕೊಂಡಿದ್ದೇನೆ ಜನತೆಗೆ ನಮ್ಮ ಲಕ್ಷ್ಯ ಏನೋ ತಿಳಿಯಬೇಕು. ಅಸ್ಪಷ್ಟವಾಗಿ ಅಲ್ಲ ಸ್ಪಷ್ಟವಾಗಿ. ಸ್ವರಾಜ್ಯದ ಲಕ್ಷಣ ಅವರಿಗೆ ತಿಳಿಯಬೇಕು. ಅಖಿಲ ಭಾರತಕ್ಕೆ ಯಾವ ಸ್ವರಾಜ್ಯದ ಯೋಜನೆ ಬೇಕೋ ಯಾವುದಕ್ಕಾಗಿ ಹೋರಾಡಬೇಕೋ ಅದು ತಿಳಿಯಬೇಕು. ಸರ್ವಪಕ್ಷ ಸಮ್ಮೇಲನದ ಸಮಿತಿಗೆ ಈ ಕೆಲಸವನ್ನು ವಹಿಸಿ ಕೊಟ್ಟಿದ್ದಾರೆ. ಸರ್ವಪಕ್ಷಗಳಿಗೂ ಸಮ್ಮತವಾಗುವ ಒಂದು ಯೋಜನೆಯನ್ನು ಆ ಸಮಿತಿ ತಯಾರಿಸಿತು ಎಂದು ಆಶಿಸೋಣ. ಅದರ ಪರಿಶೀಲನೆಗೆ ಈ ಕೆಳಗಿನ ಅಂಶಗಳನ್ನು ನಾನು ಸೂಚಿಸಲೇ?

೧) ಆಸ್ತಿಗಾಗಲೀ ಅಧಿಕಾರಕ್ಕಾಗಲೀ ಮತದಾನದ ಅರ್ಹತೆ ಇರಬಾರದು. ಶರೀರ ಶ್ರಮದ ಅರ್ಹತೆ ಮತದಾನಕ್ಕೆ ಇರಬೇಕು. ಈಗ ಕಾಂಗ್ರೆಸ್ಸಿಗೆ ಇದ್ದ ಹಾಗೆಯೇ. ಓದು ಬರಹದ ಅಥವಾ ಸೊತ್ತಿನ ನಿಯಮವು ಭ್ರಾಮಕ. ಆಡಳಿತದಲ್ಲಿ ರಾಜ್ಯದ ಯೋಗಕ್ಷೇಮದಲ್ಲಿ ಭಾಗವಹಿಸಬೇಕು ಎನ್ನುವವರಿಗೆಲ್ಲ ಶರೀರ ಶ್ರಮವು ಸಮಾನ ಅವಕಾಶ ಕೊಡುತ್ತದೆ.

೨) ಸಾಮಾನ್ಯ ದಿನಗಳಲ್ಲಿ ಪ್ರಾಣವನ್ನೂ. ಸ್ವತ್ತನ್ನೂ ಕಾಪಾಡಲು ಎಷ್ಟು ಅಗತ್ಯವೋ ಅಷ್ಟು ದಂಡಿನ ವೆಚ್ಚ ಸಾಕು. ಈಗ ಅದು ವಿನಾಶಕಾರಿ. ಅದನ್ನು ತಗ್ಗಿಸಬೇಕು.

೩) ನ್ಯಾಯವಿತರಣೆ ಅಗ್ಗವಾಗಬೇಕು. ಈ ದೃಷ್ಟಿಯಿಂದ ಪರಮೋಚ್ಚ ನ್ಯಾಯಾಲಯವು ಲಂಡನ್ನಿನಲ್ಲಿ ಇರಬಾರದು. ದಿಲ್ಲಿಯಲ್ಲಿರಬೇಕು. ಸಿವಿಲ್ ದಾವೆಗಳಲ್ಲಿ ಸಾಧಾರಣವಾಗಿ ಎರಡೂ ಪಕ್ಷಗಳವರನ್ನೂ ಪಂಚಾಯತಿಗೆ ಒಪ್ಪಿಸುವಂತೆ ಬಲಾತ್ಕರಿಸಬೇಕು. ಲಂಚಕೋರತನ. ಕಾನೂನಿನ ದುರುಪಯೋಗ ಇಲ್ಲದ ಸಂದರ್ಭಗಳಲ್ಲಿ ಪಂಚಾಯತಿಯ ತೀರ್ಪು ಕಟ್ಟಕಡೆಯದಾಗಬೇಕು. ನಡುವೆ ಇರುವ ಎಷ್ಟೋ ಕೋರ್ಟುಗಳು ಎಲ್ಲಿವೂ ಹೋಗಬೇಕು. ಕೇಸ್ ಲಾ ಕೊನೆಗೊಳ್ಳಬೇಕು. ಸಾಧಾರಣ ಕ್ರಮ ಸರಳವಾಗಬೇಕು. ಇಂಗ್ಲೀಷರ ಕ್ರಮ ಬಹಳ ಹಳೆಯದು ಮತ್ತು ಬಹಳ ಬಳಸು. ನಾವು ಅದನ್ನೇ ಅನುಕರಿಸುತ್ತಿದ್ದೇವೆ. ಈ ಕ್ರಮವನ್ನು ಸರಳಮಾಡಿ. ಕೋರ್ಟಿಗೆ ಬರುವವರು ತಮ್ಮ ಪಕ್ಷವನ್ನು ತಾವೇ ಮಂಡಿಸಲು ಸಾಧ್ಯವಾಗುವಂತೆ ಸುಲಭವಾಗುವಂತೆ ನಡೆಸುವುದು ಎಲ್ಲಿ ವಸಾಹತುಗಳಲ್ಲಿ ನಡೆಯುತ್ತಿದೆ.

೪) ಮಾದಕ ಪಾನೀಯಗಳ ಮತ್ತು ಔಷಧಗಳ ಮೂಲಕ ಆಗುವ ರಾಜ್ಯದ ಆದಾಯವನ್ನು ನಿಲ್ಲಿಸಬೇಕು.

೫) ಸಿವಿಲ್ ಮತ್ತು ಸೈನಿಕ ನೌಕರಿಗಳ ಸಂಬಳಗಳನ್ನು ದೇಶದ ಪರಿಸ್ಥಿತಿಗೆ ಅನುಗುಣವಾದ ಮಟ್ಟಕ್ಕೆ ಇಳಿಸಬೇಕು.

೬) ದೇಶವನ್ನು ಭಾಷಾನುಗುಣವಾಗಿ ವಿಂಗಡಿಸತಕ್ಕದ್ದು. ಪ್ರತಿಯೊಂದು ಪ್ರಾಂತಕ್ಕೂ ಒಳಾಡಳಿತವನ್ನೂ, ವಿಕಾಸವನ್ನೂ ಸಾಧಿಸಲು ಪೂರ್ಣ ಸ್ವಾತಂತ್ರ್ಯ ಇರತಕ್ಕದ್ದು.

೭) ಪರದೇಶದವರಿಗೆ ಕೊಟ್ಟಿರುವ ಎಲ್ಲ ಗುತ್ತಿಗೆಗಳನ್ನು ಪರೀಕ್ಷೆ ಮಾಡಲು ಒಂದು ಆಯೋಗ ರಚಿಸಬೇಕು. ಆ ಆಯೋಗದ ವರದಿಗೆ ವಿರೋಧವಾಗದಂತೆ ನ್ಯಾಯವಾಗಿ ಸಂಪಾದಿಸಿದ ಎಲ್ಲ ಹಕ್ಕುಗಳಿಗೂ ಪೂರ್ಣ ಭರವಸೆ ಕೊಡಬೇಕು.

೮) ಸಂಸ್ಥಾನಿಕರಿಗೆ ಅವರ ಸ್ಥಾನಮಾನಗಳ ಬಗ್ಗೆ ಅಭಯ ಕೊಡಬೇಕು. ಕೇಂದ್ರ ಸರಕಾರ ಯಾವ ಆತಂಕವನ್ನೂ ಒಡ್ಡಬಾರದು. ಯಾವ ಅಪರಾಧವನ್ನೂ ಮಾಡದ ಸಂಸ್ಥಾನಿ ಪ್ರಜೆಗಳು ಸ್ವತಂತ್ರ ಭಾರತದಲ್ಲಿ ನೆಲೆಸಲು ಅವಕಾಶ ಇರಬೇಕು.

೯) ಎಲ್ಲ ನಿರಂಕುಶಾಧಿಕಾರವನ್ನೂ ತೆಗೆದುಹಾಕಬೇಕು.

೧೦) ದೇಶದ ಪರಮೋಚ್ಚ ಪದವಿ, ಅರ್ಹರಾದವರೆಲ್ಲರಿಗೂ ಲಭ್ಯ ಇರಬೇಕು. ಸಿವಿಲ್ ಮತ್ತು ಸೈನಿಕ ನೌಕರಿಗಳಿಗೆ ಪರೀಕ್ಷೆಗಳು ಭಾರತದಲ್ಲಿಯೇ ನಡೆಯಬೇಕು.

೧೧) ಸಂಪೂರ್ಣ ಧಾರ್ಮಿಕ ಸ್ವಾತಂತ್ರ್ಯ ಇರಬೇಕು. ಆದರೆ ಪರಸ್ಪರ ಸಹನೆಯೂ ಇರಬೇಕು.

೧೨) ಪ್ರಾಂತೀಯ ಸರಕಾರಗಳಿಗೆ ಶಾಸನ ಸಭೆಗಳಿಗೆ, ಕೋರ್ಟುಗಳಿಗೆ ಇಂತಿಷ್ಟು ಕಾಲದಲ್ಲಿ ಎಂದು ನಿಗದಿ ಮಾಡಿ, ಆ ಕಾಲದೊಳಗಾಗಿ ಆಯಾ ಪ್ರಾಂತೀಯ ಭಾಷೆಯೇ ಅಧಿಕೃತ ಭಾಷೆ ಆಗಬೇಕು. ಪರಮೋಚ್ಚ ಪುನರ್ವಿಮರ್ಶ ನ್ಯಾಯಾಲಯಕ್ಕೆ ಹಿಂದೂಸ್ಥಾನೀ ಭಾಷೆ ಮಾಧ್ಯಮವಾಗಬೇಕು. ಲಿಪಿ ಪಾರಸೀ ಆದರೂ ಆಗಬಹುದು, ದೇವನಾಗರೀ ಆದರೂ ಆಗಬಹುದು. ಕೇಂದ್ರ ಸರಕಾರದ ಮತ್ತು ಕೇಂದ್ರ ಶಾಸನ ಸಭೆಯ ಭಾಷೆಯು ಹಿಂದೂಸ್ಥಾನಿಯೇ ಆಗಬೇಕು. ಅಂತರ್ರಾಷ್ಟ್ರೀಯ ರಾಜ್ಯತಂತ್ರದ ಭಾಷೆ ಇಂಗ್ಲೀಷ್ ಇರಬೇಕು.

ನನ್ನ ಅಭಿಪ್ರಾಯದಲ್ಲಿ ಸ್ವರಾಜ್ಯಕ್ಕೆ ಏನು ಬೇಕೋ ಅದನ್ನು ಹೇಳಿದ್ದೇನೆ. ಇದರಲ್ಲಿ ಕೆಲವು ಅತಿಯಾಯಿತು ಎಂದು ನಗಲಾರಿರಿ ಎಂದು ನಂಬಿದ್ದೇನೆ. ನಾನು ಹೇಳುವ ಈ ಕೆಲಸವನ್ನು ಸಾಧಿಸಲು ಇವತ್ತು ನಮಗೆ ಅಧಿಕಾರವಿಲ್ಲ. ಹೋಗಲಿ, ಸಂಕಲ್ಪಬಲವಾದರೂ ಇದೆಯೇ? ಕನಿಷ್ಠ ಪಕ್ಷ ಹಂಬಲ ಬೆಳಸಿಕೊಳ್ಳೋಣ. ಈ ವಿಚಾರ ಬಹಳ ಆಕರ್ಷಕ. ಏಕೆಂದರೆ, ಇದು ಊಹಾ ಪ್ರಪಂಚದ್ದು. ನನ್ನ ಈ ಸೂಚನೆಗೆ ಬೇರಾವ ವ್ಯಕ್ತಿಯ ಸೂಚನೆಗಿಂತಲೂ ಹೆಚ್ಚು ಗಮನ ಕೊಡಬೇಕೆಂದು ನಾನು ಕೇಳುವುದಿಲ್ಲ ಎಂದು ಸ್ವರಾಜ್ಯ ಯೋಜನೆಯನ್ನು ತಯಾರಿಸುವ ಆ ಸಮಿತಿಗೆ ಭರವಸೆ ಕೊಡುತ್ತೇನೆ. ಈ ಭಾಷಣದಲ್ಲಿ

ಅದನ್ನು ಸೇರಿಸಿರುವ ಕಾರಣ, ಅದಕ್ಕೆ ಹೆಚ್ಚು ಪ್ರಚಾರ ಸಿಗಲಿ ಎಂದು. ಬೇರೆ ರೀತಿಯಿಂದ ಇಷ್ಟು ಪ್ರಚಾರ ಸಿಗಲಿಕ್ಕಿಲ್ಲ.

**ಸ್ವಾತಂತ್ರ್ಯ:**

ಮೇಲೆ ಹೇಳಿದ್ದೆಲ್ಲವು ಬ್ರಿಟಿಷರ ಸಂಬಂಧವು ಸಮಾನತೆಯ ಆಧಾರದ ಮೇಲೆ ಪೂರ್ಣ ಗೌರವದಿಂದ ಇರಬೇಕು ಎಂಬುದನ್ನು ತಿಳಿಸುತ್ತದೆ. ಆದರೆ ಎಂಥ ಸಂದರ್ಭವೇ ಬರಲಿ, ಪೂರ್ಣ ಸ್ವಾತಂತ್ರ್ಯವನ್ನು ಬಯಸಿ ಬ್ರಿಟಿಷಿನ ಸಂಬಂಧವು ಸ್ವಲ್ಪವೂ ಇರಕೂಡದು ಎಂಬ ಜನರು ಕಾಂಗ್ರೆಸ್ಸಿನಲ್ಲಿಯೂ ಇದ್ದಾರೆ. ಅವರಿಗೆ ಸಮಾನತೆಯ ಸಂಬಂಧವೂ ಬೇಡ. ನನ್ನ ಅಭಿಪ್ರಾಯ ಹೀಗೆ: ಬ್ರಿಟಿಷ್ ಸರಕಾರ ತಾನು ಆಡಿದಂತೆ ಮಾಡಬಯಸಿದರೆ, ನಮಗೆ ಸಮಾನತೆ ಸಿಗುವದಾದರೆ, ಸಂಪೂರ್ಣವಾಗಿ ಬ್ರಿಟಿಷರ ಸಂಬಂಧತ್ಯಾಗಕ್ಕಿಂತ ಅದು ಹೆಚ್ಚಿನ ಗೆಲವು. ಆದ್ದರಿಂದ ಸಾಮ್ರಾಜ್ಯದ ಒಳಗೆಯೇ ಸ್ವರಾಜ್ಯಕ್ಕಾಗಿ ಎಂದರೆ ವಸಾಹತು ಸ್ವರಾಜ್ಯಕ್ಕಾಗಿ ಪ್ರಯತ್ನ ಮಾಡುತ್ತೇನೆ. ಆದರೆ ಬ್ರಿಟನ್ನಿನ ತಪ್ಪಿನಿಂದ ಸಂಬಂಧತ್ಯಾಗ ಅಗತ್ಯವಾದರೆ ನಾನು ಅದಕ್ಕೂ ಸಿದ್ಧ: ಹಿಂದೆ ಮುಂದೆ ನೋಡಲಿಕ್ಕಿಲ್ಲ. ಹೀಗೆ ಪರಸ್ಪರ ವಿಯೋಗ ಆದರೆ ಅದರ ಹೋಣೆ ಅವರ ಮೇಲೆಯೇ. ಜಗತ್ತಿನ ಉತ್ತಮ ಬುದ್ಧಿವಂತರು ಎಲ್ಲರೂ ಪರಸ್ಪರ ಅವಲಂಬಿತವಾಗಿರುವ ರಾಜ್ಯ-ಸಮೂಹ ಇರಬೇಕು, ಒಂದರೊಡನೆ ಒಂದು ಸದಾ ಯುದ್ಧ ಮಾಡುತ್ತಿರುವ ಪೂರ್ಣ ಸ್ವತಂತ್ರ ರಾಜ್ಯಗಳು ಬೇಡ ಎನ್ನುತ್ತಾರೆ. ಅಂಥ ದಿನ ಬೇಗ ಬರಲಿಕ್ಕಿಲ್ಲ. ನಮ್ಮ ದೇಶಕ್ಕಾಗಿ ನಾನು ಹೆಚ್ಚು ಏನನ್ನೂ ಹೇಳುವದಿಲ್ಲ. ಆದರೆ ಸ್ವಾತಂತ್ರ್ಯಕ್ಕಿಂತಲೂ ಜಾಗತಿಕ ಅನ್ಯೋನ್ಯ ಅವಲಂಬನೆಗೆ ನಾವು ಸಿದ್ಧರಾಗಿದ್ದೇವೆ ಎಂದು ಹೇಳುವದು ಹೆಚ್ಚುಗಾರಿಕೆಯೂ ಅಲ್ಲ ಅಸಾಧ್ಯವಾದ ಮಾತೂ ಅಲ್ಲ. ಭಾರತದ ಜೊತೆಗೆ ಯಾವ ಸಂಬಂಧವೂ ಬೇಡ ಎಂದು ಬ್ರಿಟನ್ ಬೇಕಾದರೆ ಹೇಳಲಿ; ಸಂಪೂರ್ಣ ಸ್ವಾತಂತ್ರ್ಯವನ್ನು ಘೋಷಿಸದೆಯೇ ಪೂರ್ಣ ಸ್ವತಂತ್ರವಾಗಿರುವ ಸಾಮರ್ಥ್ಯವನ್ನು ನಾನು ಬಯಸುತ್ತೇನೆ. ಸಾಮ್ರಾಜ್ಯದೊಳಗೆ ಭಾರತಕ್ಕೆ ಸಂಪೂರ್ಣ ಸಮಾನತೆ ಎಂದು ಬ್ರಿಟನ್ ಘೋಷಿಸುವದಾದರೆ, ನನ್ನ ಯೋಜನೆಯಲ್ಲಿ ಒಂದು ಸ್ನೇಹ ಸಂಬಂಧ ಇದ್ದೇ ಇರುತ್ತದೆ. ಸಂಬಂಧವಿಲ್ಲದ ಸಂಪೂರ್ಣ ಸ್ವಾತಂತ್ರ್ಯ ಇರದು. ಕಾಂಗ್ರೆಸಿಗರು ಪ್ರತಿಯೊಂದು ಸಂದರ್ಭದಲ್ಲಿಯೂ ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಒತ್ತಾಯ ಮಾಡಬಾರದೆಂದು ಪ್ರತಿಯೊಬ್ಬರನ್ನೂ ಪ್ರಾರ್ಥಿಸುತ್ತೇನೆ. ಅದು ಅಸಾಧ್ಯವೆಂದಲ್ಲ, ಆದರೆ ಅನಾವಶ್ಯಕ. ಬ್ರಿಟನ್ ಸಂಪೂರ್ಣ ಸಮಾನತೆ ಕೊಡುವ ಘೋಷಣೆ ಮಾಡಿದರೂ, ಅವರ ನಿಜವಾದ ಉದ್ದೇಶ ನಮ್ಮನ್ನು ಅಧೀನದಲ್ಲೇ ಇಟ್ಟುಕೊಳ್ಳುವದು ಸ್ಪಷ್ಟ ವ್ಯಕ್ತವಾಗುವವರೆಗೆ ಸಂಪೂರ್ಣ ಸ್ವಾತಂತ್ರ್ಯಕ್ಕೆ ಒತ್ತಾಯ ಪಡಿಸುವುದು ಅನಾವಶ್ಯಕ.

**ಸ್ವರಾಜ್ಯ ಪಕ್ಷ:**

ಇಲ್ಲಿಯವರೆಗೆ ಒಪ್ಪಂದದ ಮೂಲವನ್ನೂ ಅದರಿಂದ ಹುಟ್ಟುವ ಅನೇಕ ಪ್ರಶ್ನೆಗಳನ್ನೂ ಪರಿಶೀಲಿಸಿದ್ದಾಯಿತು. ಸ್ವರಾಜ್ಯ ಪಕ್ಷಕ್ಕೆ ಕೊಟ್ಟ ಸಮಾನತೆಯ ಬಗ್ಗೆ ಹೆಚ್ಚು ಹೇಳಬೇಕಾದ್ದು ಏನೂ ಇಲ್ಲ. ಇದನ್ನು ತಪ್ಪಿಸಿದ್ದರೆ ಚೆನ್ನಾಗಿತ್ತು. ಆ ಪಕ್ಷ ಅಯೋಗ್ಯವೆಂದಲ್ಲ, ಶಾಸನಸಭಾ ಪ್ರವೇಶದ ಬಗ್ಗೆ ಅದರ ಅಭಿಪ್ರಾಯಗಳು ನನಗೆ ಸಮ್ಮತವಿಲ್ಲ ಎಂದು. ಆದರೆ ಕಾಂಗ್ರೆಸ್ಸಿನೊಳಗೆ

ಇದ್ದು, ಮುಂದೆ ನಿಂತು ಅದನ್ನು ನಡೆಸಲೂ ಬೇಕಾದರೆ ಇರುವ ಸಂಗತಿಗಳನ್ನು ಇರುವ ಹಾಗೆಯೇ ಗ್ರಹಿಸಬೇಕು. ಕಾಂಗ್ರೆಸ್ಸನ್ನು ಬಿಟ್ಟು ಹೋಗುವುದೂ ನನಗೆ ಸುಲಭವಾಗಿತ್ತು. ಈ ಅಧ್ಯಕ್ಷ ಪದವಿಯ ಗೌರವವನ್ನು ನಿರಾಕರಿಸಲೂ ಬರುತ್ತಿತ್ತು. ಆದರೆ ಹಾಗೆ ಮಾಡುವುದು ದೇಶಕ್ಕೆ ಹಿತವಲ್ಲ ಎಂದು ನಾನು ಯೋಚಿಸಿದೆ. ಈಗಲೂ ನನ್ನ ಯೋಚನೆ ಹಾಗೆಯೇ ಇದೆ. ಸ್ವರಾಜ್ಯ ಪಕ್ಷಕ್ಕೆ ಕಾಂಗ್ರೆಸ್ಸಿನಲ್ಲಿ ಬಹುಸಂಖ್ಯೆ ಇರದಿದ್ದರೂ, ದಿನೇ ದಿನೇ ಬೆಳೆಯುತ್ತಿರುವ ಬಲಿಷ್ಠವಾದ ಅಲ್ಪ ಸಂಖ್ಯೆ ಅದು. ಆ ಪಕ್ಷದವರ ಗೌರವದ ಪ್ರಶ್ನೆಯ ಮೇಲೆ ಕಾಂಗ್ರೆಸ್ಸನ್ನು ಇಬ್ಭಾಗ ಮಾಡಬಾರದೆಂದು ನಾನೆಂದರೆ ಅವರ ಕರಾರುಗಳಿಗೆ ನಾನು ಒಪ್ಪಲೇಬೇಕು. ಇಷ್ಟೇ, ಆ ಕರಾರು ನನ್ನ ಅಂತರಂಗಕ್ಕೆ ವಿರುದ್ಧವಾಗಿರಬಾರದು. ಅವರೇನೂ ಅವಿಚಾರಿಗಳಲ್ಲ. ತಮ್ಮ ಧೋರಣೆಗೆ ಸ್ವರಾಜ್ಯ ಪಕ್ಷದವರು ಕಾಂಗ್ರೆಸ್ಸಿನ ಹೆಸರನ್ನು ಬಳಸಬಯಸುತ್ತಾರೆ. ಅವರು ಹಾಗೆ ಮಾಡಲು ಅವಕಾಶ ಇರಬೇಕು. ಆದರೆ ಅವರು ತಮ್ಮ ಧೋರಣೆಯಿಂದ ಅಪರಿವರ್ತನವಾದಿಗಳನ್ನು ಬಂಧಿಸಬಾರದು. ಇಂಥ ಒಂದು ಸೂತ್ರವನ್ನು ಹುಡುಕಬೇಕಾಗಿತ್ತು. ಅದನ್ನು ಮಾಡಲು ಒಂದು ಮಾರ್ಗ ಅವರ ಧೋರಣೆಯನ್ನು ಅವರು ಅನುಸರಿಸಲು, ಅದನ್ನು ನಿಶ್ಚಯಿಸಲು, ಅವರಿಗೆ ಆರ್ಥಿಕ ಮತ್ತು ವ್ಯಾವಹಾರಿಕ ಜವಾಬ್ದಾರಿಯನ್ನೂ ಅಧಿಕಾರವನ್ನೂ ಕೊಡುವದು. ಇಡೀ ಕಾಂಗ್ರೆಸ್ಸೇ ಆ ಕೆಲಸ ಮಾಡಬೇಕು ಎಂದರೆ ಆ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ನಾನು ಅದನ್ನು ಹೊರಲಾರೆ. ಅಪರಿವರ್ತನ ವಾದಿಗಳಾರೂ ಹೊರಲಾರರು, ಎಂದು ನನಗೆ ಅನಿಸುತ್ತದೆ. ಅದರ ಧೋರಣೆಯನ್ನು ನಾನು ನಿಶ್ಚಯಿಸಲಾರೆ. ನನಗೆ ಅದರಲ್ಲಿ ಮನಸ್ಸಿಲ್ಲ. ನಂಬಿಕೆ ಇದ್ದರಷ್ಟೇ ಆ ಕಡೆ ಒಲವು. ಹೀಗೆ ಸ್ವರಾಜ್ಯ ಪಕ್ಷಕ್ಕೆ, ತನ್ನ ಶಾಸನಾಸಭಾ ಪ್ರವೇಶದ ಕಾರ್ಯಕ್ರಮಕ್ಕೆ ಕಾಂಗ್ರೆಸ್ಸಿನ ಹೆಸರನ್ನು ಬಳಸಲು ಪೂರ್ಣಾಧಿಕಾರ ಕೊಟ್ಟರೆ ಕಾಂಗ್ರೆಸ್ಸಿಗೆ ಸೇರಬಯಸುವ ಇತರ ಪಕ್ಷಗಳಿಗೆ ಎಡವಟ್ಟಾಗುತ್ತದೆ. ಇದು ಅನಿವಾರ್ಯ ಎಂದು ನನಗೆ ಅಂಜಿಕೆ. ಸ್ವರಾಜ್ಯಪಕ್ಷ ತನಗೆ ಈಗಿರುವ ವಿಶೇಷ ಅನುಕೂಲತೆಯನ್ನು ಬಿಟ್ಟುಕೊಡಲಾರದು. ಅದಕ್ಕೆ ಈ ಅನುಕೂಲ ತನಗಾಗಿ ಬೇಕಾಗಿಲ್ಲ. ದೇಶದ ಸೇವೆಗಾಗಿ ಬೇಕು. ಎಲ್ಲ ಪಕ್ಷಗಳಿಗೂ ಇರಬಹುದಾದ ಆಶೆ ಅದೇ. ಬೇರೆ ಸಾಧ್ಯವಿಲ್ಲ. ಆದ್ದರಿಂದ ಇತರರು ಕಾಂಗ್ರೆಸ್ಸಿಗೆ ಸೇರಿ ಒಳಗೆ ನಿಂತು ಕೆಲಸಮಾಡಿ, ದೇಶದ ಧೋರಣೆಗಳನ್ನು ರೂಪಿಸಬಹುದು. ಡಾ॥ ಬೆಜೆಂಟ ಆ ದಾರಿಯಲ್ಲಿ ಕೆಲಸಮಾಡಿದ್ದಾರೆ. ಇನ್ನೂ ಎಷ್ಟೋ ಕೆಲಸ ಆಗಬೇಕೆಂದು ಆಕೆಯ ಮನಸ್ಸು. ಆದರೆ ಸಂಸ್ಥೆಯ ಒಳಗಡೆ ಇದ್ದುಕೊಂಡು ಕಾಂಗ್ರೆಸ್ಸಿನ ಮತದಾರರನ್ನು ತನ್ನ ಅಭಿಪ್ರಾಯಕ್ಕೆ ತರಬಹುದು ಎಂದು ಆಕೆ ಭಾವಿಸಿದ್ದಾಳೆ. ಅಪರಿವರ್ತನವಾದಿಗಳು ನಿಸ್ಸಂಕೋಚವಾಗಿ ಈ ಒಪ್ಪಂದಕ್ಕೆ ಮತ ಕೊಡಬಹುದು ಎಂದು ನನ್ನ ಅಭಿಪ್ರಾಯ. ಎಲ್ಲರೂ ಎಲ್ಲ ಗುಂಪುಗಳು ಒಟ್ಟುಗೂಡಿ ನಡೆಸಬಹುದಾದ ರಾಷ್ಟ್ರೀಯ ಕಾರ್ಯಕ್ರಮ ಎಂದರೆ ಖಾದಿ, ಹಿಂದೂ ಮುಸ್ಲಿಂ ಐಕ್ಯ, ಹಿಂದೂಗಳಿಗಾಗಿ ಅಸ್ಪೃಶ್ಯತಾ ನಿವಾರಣೆ. ಇಷ್ಟೆ ಅಲ್ಲವೇ ಅವರಿಗೆ ಬೇಕಾದ್ದು.

**ಕೇವಲ ಸಾಮಾಜಿಕ ಸುಧಾರಣೆಯೋ?**

ಈ ಕಾರ್ಯಕ್ರಮವು ಕಾಂಗ್ರೆಸ್ಸನ್ನು ಕೇವಲ ಸಾಮಾಜಿಕ ಸುಧಾರಣೆಯ ಸಂಸ್ಥೆಯಾಗಿ

ಮಾಡುತ್ತದೆ ಎನ್ನುತ್ತಾರೆ, ನನ್ನ ಅಭಿಪ್ರಾಯ ಬೇರೆ. ಸ್ವರಾಜ್ಯಕ್ಕೆ ಬೇಕಾದ ಅತ್ಯಗತ್ಯ ವಿಷಯಗಳು ಸಮಾಜ ಸುಧಾರಣೆಗಿಂತ ಹೆಚ್ಚಿನವು. ಅವನ್ನು ಕಾಂಗ್ರೆಸ್ಸು ಕೈಕೊಳ್ಳಬೇಕು. ಕಾಂಗ್ರೆಸ್ಸು ಯಾವಾಗಲೂ ಇದೊಂದೇ ಕೆಲಸ ಮಾಡುತ್ತ ಇರಬೇಕೆಂದು ನನ್ನ ವಿಚಾರವಲ್ಲ. ಆದರೆ ಬರುವ ವರ್ಷ ಪೂರಾ ತನ್ನ ಶಕ್ತಿಯನ್ನು ರಚನಾತ್ಮಕ ಕಾರ್ಯಕ್ಕೆ ಅಥವಾ ನನ್ನ ವಿವರಣೆಯಂತೆ ಆಂತರಿಕ ವಿಕಾಸಕ್ಕೆ ಕಾಂಗ್ರೆಸ್ಸು ಗಮನ ಕೊಡಬೇಕು.

ಈ ಒಪ್ಪಂದದಲ್ಲಿ ಸೇರಿಸಿದ ರಚನಾತ್ಮಕ ಕಾರ್ಯಗಳಷ್ಟೇ ಕಾಂಗ್ರೆಸ್ ಕೈಕೊಳ್ಳಬೇಕಾದ ರಚನಾತ್ಮಕ ಕಾರ್ಯಕ್ರಮಗಳು ಎಂದರ್ಥವಲ್ಲ. ಅವು ಇನ್ನೂ ಬೇಕಾದಷ್ಟಿವೆ. ಈಗ ನಾನು ಹೇಳಲಿರುವ ಕಾರ್ಯಕ್ರಮಗಳು ಸಹ ಬಹಳ ಮುಖ್ಯವಾದವು. ಅವು ವಿವಾದಾತ್ಮಕ ಅಲ್ಲದ್ದರಿಂದ ಮತ್ತು ಮೇಲೆ ಹೇಳಿದ ಮೂರು ಕಾರ್ಯಕ್ರಮಗಳಷ್ಟು ಸ್ವರಾಜ್ಯಕ್ಕೆ ಅವಶ್ಯಕವಲ್ಲದ್ದರಿಂದ ಅವನ್ನು ಈ ಒಪ್ಪಂದದಲ್ಲಿ ಸೇರಿಸಿಲ್ಲ.

**ರಾಷ್ಟ್ರೀಯ ಶಾಲೆಗಳು:**

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ನಿರ್ವಹಣ ಅಂಥದೊಂದು. ಜನತೆಗೆ ಗೊತ್ತಿದೆಯೋ ಇಲ್ಲವೋ–ಖಾದಿಯ ತರುವಾಯ ಈ ಸಂಸ್ಥೆಗಳ ನಿರ್ವಹಣವೇ ಹೆಚ್ಚು ಯಶಸ್ವಿ ಇದನ್ನು ಕೈಬಿಡಲು ಆಗದು. ಕೆಲವೇ ವಿದ್ಯಾರ್ಥಿಗಳಾದರೂ ಚಿಂತೆ ಇಲ್ಲ, ತಮ್ಮ ಕಾಲೇಜುಗಳನ್ನು ರಾಷ್ಟ್ರೀಯ ಶಾಲೆಗಳನ್ನೂ ಮುಂದುವರಿಸಿಕೊಂಡು ಹೋಗಬೇಕಾದ್ದು ಪ್ರಾಂತಗಳಿಗೆ ಒಂದು ಗೌರವ. ಅಸಹಕಾರವನ್ನು ನಿಲ್ಲಿಸಿದ್ದರಿಂದ ಈ ಸಂಸ್ಥೆಗಳ ಮೇಲೆ ಯಾವ ಕೆಟ್ಟ ಪರಿಣಾಮವೂ ಆಗಬಾರದು. ಅದಕ್ಕೆ ಬದಲು ಇವನ್ನು ಸ್ಥಿರಗೊಳಿಸಿ, ಬಲಪಡಿಸಲು ಹೆಚ್ಚು ಪ್ರಯತ್ನ ನಡೆಯಬೇಕು. ಅನೇಕ ಪ್ರಾಂತಗಳಲ್ಲಿ ರಾಷ್ಟ್ರೀಯ ಶಾಲೆಗಳು ಕಾಲೇಜುಗಳು ಇವೆ. ಗುಜರಾತ್ ಪ್ರಾಂತ ಒಂದರಲ್ಲೇ ರಾಷ್ಟ್ರೀಯ ವಿದ್ಯಾಪೀಠ ಇದೆ. ಸುಮಾರು ೧ ಲಕ್ಷ ರೂಪಾಯಿ ವೆಚ್ಚ ಅವಕ್ಕೆ ವರ್ಷ ವರ್ಷವೂ. ಮೂರು ಕಾಲೇಜು, ಎಪ್ಪತ್ತು ಶಾಲೆಗಳು ಇವೆ, ಇದೆ ಕೈಕೆಳಗೆ. ೯ ಸಾವಿರ ವಿದ್ಯಾರ್ಥಿಗಳಿದ್ದಾರೆ. ಅದು ತನ್ನ ಸ್ವಂತ ನಿವೇಶನವನ್ನು ಸಂಪಾದಿಸಿದೆ. ಈಗಾಗಲೇ ೨,೦೫.೩೨೩ ರೂ. ಗಳನ್ನು ಕಟ್ಟಡಕ್ಕಾಗಿ ವೆಚ್ಚ ಮಾಡಿದೆ. ದೇಶಾದ್ಯಂತ ಈ ಕೆಲಸ ಸದ್ದಿಲ್ಲದೇ ಅತ್ಯುತ್ತಮವಾಗಿ ನಡೆದಿದೆ. ಅಸಹಕಾರ ಮಾಡಿದ ವಿದ್ಯಾರ್ಥಿಗಳ ಕೆಲಸವಿದು. ಅವರ ತ್ಯಾಗವು ಅತ್ಯುತ್ತಮ. ಅತಿ ಶ್ರೇಷ್ಠ. ಪ್ರಾಪಂಚಿಕ ದೃಷ್ಟಿಯಿಂದ ಅವರು ತಮ್ಮ ಉಜ್ವಲ ಭವಿಷ್ಯವನ್ನು ಕಳೆದುಕೊಂಡಿರಬಹುದು. ಆದರೆ ರಾಜಕೀಯ ದೃಷ್ಟಿಯಿಂದ. ಅವರಿಗಾದ ನಷ್ಟಕ್ಕಿಂತ ಲಾಭವೇ ಹೆಚ್ಚು ಎನ್ನುತ್ತೇನೆ. ಈ ವಿದ್ಯಾರ್ಥಿಗಳು ತಮ್ಮ ಮೊದಲಿನ ಶಾಲೆ ಕಾಲೇಜುಗಳನ್ನು ತೊರೆದರು. ಏಕೆಂದರೆ ಈ ಶಾಲೆ ಕಾಲೇಜುಗಳಲ್ಲಿ ತರಬೇತಾದ ಜನರಿಂದಲೇ ರಾಷ್ಟ್ರದ ತರುಣ ಜನಾಂಗಕ್ಕೆ ಪಂಜಾಬಿನಲ್ಲಿ ಉಪಮಾನವಾಯಿತು, ತೇಜೋಭಂಗವಾಯಿತು. ನಮ್ಮ ಗುಲಾಮ ಗಿರಿಯ ಮೊದಲನೆಯ ಕೊಂಡಿ ಈ (ಬ್ರಿಟಿಷ್ ಚಾಲಿತವಾದ) ಶಾಲೆಗಳಲ್ಲಿ ಸಿದ್ಧವಾಗುತ್ತದೆ. ಇದಕ್ಕೆ ವಿರುದ್ಧವಾದ ರಾಷ್ಟ್ರೀಯ ಶಾಲೆಗಳನ್ನು ಎಷ್ಟು ಕ್ಷಮತಾ ಹೀನವಾಗಿ ನಡೆಸಿದರೂ ನಮ್ಮ ಸ್ವಾತಂತ್ರ್ಯದ ಪ್ರಥಮ ಆಯುಧಗಳನ್ನು ತಯಾರು ಮಾಡುವ ಕಾರಖಾನೆ ಅವು. ಮುಂದಿನ ಭವಿಷ್ಯವು ನಮ್ಮ ಈ ರಾಷ್ಟ್ರೀಯ ಸಂಸ್ಥೆಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರ ಕೈಯಲ್ಲೇ ಇದೆ.

ಆದ್ದರಿಂದ ಪ್ರಾಂತೀಯ ಹಣಕಾಸಿನ ವೆಚ್ಚದಲ್ಲಿ ಇವಕ್ಕೆ ಮೊದಲನೆಯ ಸ್ಥಾನ. ಈ ಸಂಸ್ಥೆಗಳು ನಿಜವಾಗಿ ರಾಷ್ಟ್ರೀಯವಾಗಬೇಕಾಗಿದ್ದರೆ, ಅವು ಹಿಂದೂ ಮುಸ್ಲಿಂ ಐಕ್ಯವನ್ನು ಬೆಳೆಸಬೇಕು. ಅಸ್ಪೃಶ್ಯತೆಯು ಹಿಂದೂ ಧರ್ಮಕ್ಕೆ ಒಂದು ಕಲಂಕ, ಮತ್ತು ಮಾನಪೀಯತೆಗೆ ಎಸಗಿದ ಅಪರಾಧ ಎಂದು ಹಿಂದೂ ಬಾಲ ಬಾಲಕಿಯರು ತರಬೇತಿ ಪಡೆಯುವ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ತಿಳಿಯಬೇಕು. ನೂಲುವವರಿಗೆ ನೇಯುವವರಿಗೆ ಅತ್ಯುತ್ತಮ ತಾಂತ್ರಿಕ ಶಿಕ್ಷಣ ಕೊಡಬೇಕು. ರಾಟೆಯಲ್ಲಿ ಖಾದಿಯಲ್ಲಿ ಕಾಂಗ್ರೆಸ್ಸಿಗೆ ವಿಶ್ವಾಸ ಉಳಿದುಕೊಂಡಿದ್ದರೆ ಚರಖಾಶಾಸ್ತ್ರವನ್ನು ಈ ಸಂಸ್ಥೆಗಳು ಒದಗಿಸಬೇಕು ಎಂದು ಅಪೇಕ್ಷಿಸುವ ಅಧಿಕಾರ ನಮಗಿದೆ. ಇವು ಖಾದಿ ನಿರ್ಮಾಣದ ಕಾರಖಾನೆಗಳು ಆಗಬೇಕು. ಹೀಗೆಂದರೆ ವಿದ್ಯಾರ್ಥಿಗಳಿಗೆ ಅಕ್ಷರ ಶಿಕ್ಷಣವೇ ಬೇಡ ಎಂದಲ್ಲ. ಆದರೆ ಹಸ್ತಕೌಶಲದ ಶಿಕ್ಷಣ ಮತ್ತು ಅಂತಃಕರಣ ಶಿಕ್ಷಣ, ಬೌದ್ಧಿಕ ಶಿಕ್ಷಣದ ಜೊತೆಗೆಯೇ ನಡೆಯಬೇಕೆಂದು ನನ್ನ ಅಭಿಪ್ರಾಯ. ರಾಷ್ಟ್ರೀಯ ಸಂಸ್ಥೆಯ ಯೋಗ್ಯತೆ ಅದರ ಪ್ರಯೋಜನ ನಮಗೆ ತಿಳಿಯಬೇಕಾದುದು ವಿದ್ಯಾರ್ಥಿಗಳ ಗ್ರಂಥ ಪಾಂಡಿತ್ಯದ ಹಿರಿಮೆಯಿಂದಲ್ಲ. ರಾಷ್ಟ್ರೀಯ ಚಾರಿತ್ರ್ಯ, ಹಿಂಜುವ ಬಿಲ್ಲನ್ನು ರಾಟೆಯನ್ನು, ಮಗ್ಗವನ್ನು ಉಪಯೋಗಿಸುವ ಕೌಶಲ್ಯಗಳಿಂದ ಅಳೆಯಬೇಕು. ರಾಷ್ಟ್ರೀಯ ಶಾಲೆ ಕಾಲೇಜು ಯಾವುದೂ ಮುಚ್ಚಬಾರದು ಎಂದು ನನ್ನ ಚಿಂತೆ. ಆದರೆ ಹಿಂದೂಗಳಲ್ಲದವರನ್ನು ಸೇರಿಸಿಕೊಳ್ಳಲು ಹಿಂದೆ ಮುಂದೆ ನೋಡುವ, ಅಸ್ಪೃಶ್ಯರನ್ನು ಸೇರಿಸಿಕೊಳ್ಳದ ಅಥವಾ ಹಿಂಜುವುದನ್ನೂ ನೂಲುವುದನ್ನೂ ಶಿಕ್ಷಣದ ಅನಿವಾರ್ಯ ಎಂದು ಕಲಿಸದ ಶಾಲೆ ಕಾಲೇಜುಗಳನ್ನು ಮುಚ್ಚಿಬಿಡಲು ನಾನು ಕಿಂಚಿತ್ತೂ ಹಿಂದೆ ಮುಂದೆ ನೋಡುವದಿಲ್ಲ. ಶಾಲೆಯ ನಾಮಫಲಕದ ಮೇಲೆ ರಾಷ್ಟ್ರೀಯ ಎಂಬ ಶಬ್ದವನ್ನು ಬರೆಯಿಸಿ, ಸರಕಾರಕ್ಕೆ ಇದು ಸಂಬಂಧಿಸಿಲ್ಲ, ಸರಕಾರದ ನಿಯಂತ್ರಣ ಇದಕ್ಕಿಲ್ಲ ಎಂಬಷ್ಟರಿಂದಲೇ ತೃಪ್ತಿ ಹೊಂದುವ ಕಾಲ ಹಿಂದಾಯಿತು. ಅನೇಕ ರಾಷ್ಟ್ರೀಯ ಸಂಸ್ಥೆಗಳಲ್ಲಿ ಇನ್ನೂ ಪ್ರಾಂತೀಯ ಭಾಷೆಗಳಿಗೆ ಮತ್ತು ಹಿಂದೂಸ್ಥಾನಿಗೆ ಗಮನ ಕೊಡುತ್ತಿಲ್ಲ ಎಂಬುದನ್ನು ಹೇಳದೆ ಇರಲಾರೆ. ಪ್ರಾಂತೀಯ ಭಾಷೆಯ ಮೂಲಕ, ಅಥವಾ ಹಿಂದೂಸ್ಥಾನಿಯ ಮೂಲಕ ಶಿಕ್ಷಣ ನೀಡುವ ಅಗತ್ಯವನ್ನು ಇನ್ನೂ ಅನೇಕ ಉಪಾಧ್ಯಾಯರು ಅರಿತುಕೊಂಡಿಲ್ಲ. ರಾಷ್ಟ್ರೀಯ ಶಿಕ್ಷಣಶಾಸ್ತ್ರಜ್ಞರ ಒಂದು ಸಭೆಯನ್ನು ಏರ್ಪಡಿಸಿ, ನಾನು ಈಗ ಹೇಳಿದ ಕೆಲವು ವಿಷಯಗಳ ಬಗ್ಗೆ ತಮ್ಮ ಅನುಭವವನ್ನು ವಿನಿಮಯ ಮಾಡಿಕೊಂಡು, ಸಾಧ್ಯವಿದ್ದರೆ ಒಂದು ಸರ್ವ ಸಾಧಾರಣ ರಾಷ್ಟ್ರೀಯ ಶಿಕ್ಷಣ ಯೋಜನೆಯನ್ನು ಸಿದ್ಧಗೊಳಿಸಲು ಶ್ರೀ ಗಂಗಾಧರರಾಯರು ಏರ್ಪಾಟು ಮಾಡಿದ್ದಾರೆ. ಅದು ನನಗೆ ತುಂಬ ಸಂತೋಷ.

**ನಿರುದ್ಯೋಗಿ ಅಸಹಕಾರಿಗಳು:**

ರಾಷ್ಟ್ರದ ಕರೆಗೆ ಓಗೊಟ್ಟು ವಕೀಲಿಯನ್ನು ಬಿಟ್ಟ ವಕೀಲರ ಬಗ್ಗೆ, ಸರಕಾರಿ ನೌಕರಿಯನ್ನು ಬಿಟ್ಟ ಶಿಕ್ಷಕರ ಬಗ್ಗೆ ಮತ್ತು ಸರಕಾರೀ ನೌಕರರ ಬಗ್ಗೆ ಒಂದು ಮಾತು ಹೇಳಲು ಇದೇ ಸರಿಯಾದ ಸ್ಥಾನ. ನಾನು ಬಲ್ಲೆ–ಅವರಲ್ಲಿ ಅನೇಕರಿಗೆ ಎರಡು ಹೊತ್ತಿನ ಗ್ರಾಸಕ್ಕೆ ಕಷ್ಟವಾಗಿದೆ. ಅವರಿಗೆ ರಾಷ್ಟ್ರದ ಸಹಾಯ ದೊರೆಯಬೇಕು. ಖಾದಿ ಬೋರ್ಡ್, ರಾಷ್ಟ್ರೀಯ ಶಾಲೆ ಕಾಲೇಜುಗಳು ಎರಡೂ ಪ್ರಾಮಾಣಿಕರಾದ ಉದ್ಯೋಗಶೀಲರಾದ ಅನೇಕರನ್ನು ನೇಮಿಸಿ

ಕೊಳ್ಳಬಹುದು. ಆದರೆ ಈ ಜನರು ಕಷ್ಟಪಡಲು, ಕಲಿಯಲು, ಅಲ್ಪತೃಪ್ತರಾಗಿರಲು ಸಿದ್ಧರಾಗಿರಬೇಕು. ರಾಷ್ಟ್ರೀಯ ಸೇವೆಗಾಗಿ ಏನೂ ಪ್ರತಿಫಲವನ್ನು ಸ್ವೀಕರಿಸದ ಮನೋವೃತ್ತಿ ಒಂದು ಬೆಳೆಯುತ್ತಿದೆ. ಪ್ರತಿಫಲವಿಲ್ಲದೇ ಸೇವೆ ಸಲ್ಲಿಸುವುದು ಪ್ರಶಂಸನೀಯವೇ ಸರಿ. ಆದರೆ ಇದು ಎಲ್ಲರಿಗೂ ಸಾಧ್ಯವಿಲ್ಲ. ಪ್ರತಿಯೊಬ್ಬನಿಗೂ ಅವನ ಪಾರಿಶ್ರಮಿಕ ಸಲ್ಲಬೇಕು. ಪ್ರತಿಫಲ ತೆಗೆದುಕೊಳ್ಳದ ಕಾರ್ಯಕರ್ತರನ್ನು ಯಾವ ದೇಶವೂ ಸಾವಿರಗಟ್ಟಲೆ ಉತ್ಪನ್ನ ಮಾಡಲಾರದು. ಆದ್ದರಿಂದ ದೇಶಾಭಿಮಾನಿಗಳು ದೇಶಸೇವೆ ಸಲ್ಲಿಸಿ, ಅದಕ್ಕೆ ತಕ್ಕ ಪ್ರತಿಫಲ ಪಡೆಯುವದು ಒಂದು ಗೌರವ ಎಂಬ ವಾತಾವರಣವು ಬೆಳೆಯಬೇಕು.

**ಮಾದಕ ಪದಾರ್ಥಗಳು:**

ರಾಷ್ಟ್ರೀಯ ಪ್ರಾಮುಖ್ಯತೆಯ ಇನ್ನೊಂದು ಸಂಗತಿ ಎಂದರೆ ಹೆಂಡದ ಮಾರಾಟ ಮತ್ತು ಅಫೀಮಿನ ವ್ಯಾಪಾರ. ಪಾನ ನಿಷೇಧದ ಬಗ್ಗೆ ೧೯೨೧ರಲ್ಲಿ ದೇಶವನ್ನು ಅಲ್ಲಾಡಿಸಿದ ಉತ್ಸಾಹ ತರಂಗ ಅಹಿಂಸಾತ್ಮಕವಾಗಿ ಉಳಿದಿದ್ದರೆ, ಇವತ್ತು ನಮಗೆ ಅದರಲ್ಲಿ ಒಂದು ಪ್ರಗತಿ ಕಾಣುತ್ತಿತ್ತು. ನಮ್ಮ ದುರದೃಷ್ಟ. ನಮ್ಮ ಪಿಕೆಟಿಂಗ್ ಹಿಂಸಾತ್ಮಕವಾಯಿತು. ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪ್ರಚ್ಛನ್ನವಾಗಿ, ಆದ್ದರಿಂದ ಪಿಕೆಟಿಂಗ್‌ನ್ನು ನಿಲ್ಲಿಸಲಾಯಿತು. ಹೆಂಡದ ಗಂಡಂಗಗಳೂ ಅಫೀಮಿನ ಅಂಗಡಿಗಳೂ ಮೊದಲಿನಂತೆಯೇ ಏಳಿಗೆ ಹೊಂದಿದವು. ಆದರೆ ಪಾನನಿಷೇಧದ ಪ್ರಚಾರಕಾರ್ಯ ಪೂರ್ಣ ನಿಂತುಹೋಗಿಲ್ಲ ಎಂಬುದನ್ನು ಕೇಳಿ ನಿಮಗೆ ಸಂತೋಷವಾಗಬಹುದು. ಎಷ್ಟೋ ಜನ ಕೆಲಸಗಾರರು ಸದ್ದಿಲ್ಲದೆ ಸ್ವಾರ್ಥವಿಲ್ಲದೆ ಇನ್ನೂ ಈ ಕೆಸಲವನ್ನು ನಡೆಸುತ್ತಲೇ ಇದ್ದಾರೆ. ಮಾದಕ ಪದಾರ್ಥ ಸೇವನೆಯ ಈ ದುಷ್ಟಪದ್ಧತಿ ಸ್ವರಾಜ್ಯ ಬರುವವರೆಗೆ ಹೋಗಲಾರದು ಎಂಬುದನ್ನು ನಾವು ಅರಿತುಕೊಳ್ಳಬೇಕು. ಈ ದುರ್ನೀತಿಯ ಮೂಲಕ ಬಂದ ಹಣದಿಂದ ನಮ್ಮ ಮಕ್ಕಳಿಗೆ ಶಿಕ್ಷಣ ದೊರೆಯುತ್ತಿದೆ ಎಂಬುದು ನಮಗೆ ಗೌರವದ ಸಂಗತಿ ಅಲ್ಲ. ಕಾಂಗ್ರೆಸ್ಸಿಗರು ಶಾಸನ ಸಭೆಗೆ ಹೋದರೂ ಚಿಂತೆ ಇಲ್ಲ, ಮಾದಕ ಪದಾರ್ಥದಿಂದ ಬರುವ ಈ ಆದಾಯವನ್ನು ಧೈರ್ಯದಿಂದ ಕಿತ್ತುಹಾಕಿಬಿಟ್ಟರೆ ನಾನು ಕ್ಷಮಿಸಿಯೇನು. ಇದರಿಂದ ಶಿಕ್ಷಣ ನಿಂತರೂ ಚಿಂತೆಯಿಲ್ಲ: ಸೇನೆಯ ವೆಚ್ಚವನ್ನು ತಗ್ಗಿಸಲು ಒತ್ತಾಯ ಮಾಡಿದರೆ ಇಂಥ ಪರಿಸ್ಥಿತಿ ಬರುವದೇ ಇಲ್ಲ.

**ಬಂಗಾಳದ ದಬ್ಬಾಳಿಕೆ – ದಮನ :**

ಇಲ್ಲಿಯವರೆಗೆ ಆಂತರಿಕ ವಿಷಯಗಳನ್ನೇ ಪ್ರಸ್ತಾಪ ಮಾಡಿದ್ದೇನೆ. ಆದರೆ ನಮ್ಮ ಬಾಹ್ಯ ಪರಿಸ್ಥಿತಿಗಳು – ಮುಖ್ಯವಾಗಿ ನಮ್ಮ ಆಡಳಿತಗಾರರು ಮಾಡುತ್ತಿರುವ ಕೆಲಸಗಳು ನಮ್ಮ ವಿರುದ್ಧವಾಗಿ ಅದೃಷ್ಟವನ್ನು ರೂಪಿಸುತ್ತಿವೆ. ಆದರೆ ನಮಗೆ ಮನಸ್ಸಿದ್ದರೆ ಅವನ್ನು ನಮ್ಮ ಅನುಕೂಲಕ್ಕೆ ತಿರುಗಿಸಿಕೊಳ್ಳಬಹುದು. ಅಥವಾ ಅದಕ್ಕೆ ತುತ್ತಾಗಲೂಬಹುದು. ನಮ್ಮ ಆಳರಸರ ಇತ್ತೀಚಿನ ಕೃತ್ಯ, ಅಂದರೆ ಬಂಗಾಳದಲ್ಲಿ ಅವರು ಪ್ರಾರಂಭಿಸಿರುವ ದಬ್ಬಾಳಿಕೆ ಮತ್ತು ದಮನ. ಸರ್ವಪಕ್ಷ ಸಮ್ಮೇಲನವು ಅದನ್ನು ಅಸಂದಿಗ್ಧ ಶಬ್ದಗಳಲ್ಲಿ ಖಂಡಿಸಿತು. ಈ ದಬ್ಬಾಳಿಕೆಯು ಬಂಗಾಳದ ಸ್ವರಾಜ್ಯ ಪಕ್ಷಕ್ಕೆ ಕೊಟ್ಟ ಏಟು ಎಂದು ಹೇಳಲು ಆ ಸಮ್ಮೇಲನಕ್ಕೆ ಸಂಕೋಚವಿತ್ತು. ನನಗಂತೂ ಏನೂ ಇಲ್ಲ. ನಾನು ಕಲ್ಕತ್ತೆಗೆ ಹೋಗಿದ್ದೆ. ಭಿನ್ನ ಭಿನ್ನ ಅಭಿಪ್ರಾಯದ ಜನರ

ಪ್ರತಿನಿಧಿಗಳನ್ನು ಭೇಟಿಮಾಡಿದೆ. ಸ್ವರಾಜ್ಯ ಪಕ್ಷ ಕೊಟ್ಟ ಏಟು ಇದು ಎಂಬ ತೀರ್ಮಾನಕ್ಕೂ ಬಂದೆ. ಆಮೇಲೆ ಲಾರ್ಡ ಲಿಟನ್, ಲಾರ್ಡ ರೀಡಿಂಗ್ ಮಾಡಿದ ಭಾಷಣಗಳಿಂದ ಈ ಅಭಿಪ್ರಾಯ ಸ್ಥಿರವಾಯಿತು. ಅವರು ಮಾಡಿಕೊಂಡಿರುವ ಸಮರ್ಥನೆ, ತೀರ ಅಸಮರ್ಪಕ ವಾಗಿತ್ತು. ಯಾರಿಗೂ ಅದು ಒಪ್ಪಿಗೆ ಆಗಲಾರದು. ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯಕ್ಕೆ ಏನೂ ಬೆಲೆಯಿಲ್ಲ. ಆದ್ದರಿಂಧ ಇಂಥಲ್ಲಿ ಮಾತ್ರ ಆ ಸಮರ್ಥನೆ ಸಾಧ್ಯ. ಸೆರೆಯಾಳುಗಳನ್ನು ಬಿಡಲು ಲಾರ್ಡ ಲಿಟನ್ ಹಾಕಿದ ಕರಾರು ನಮ್ಮ ಬುದ್ಧಿಗೇ ಒಂದು ಅವಮಾನ. ಪರಿಸ್ಥಿತಿ ಅಂಥದಿಲ್ಲದಿದ್ದರೂ, ಇದೆ ಎಂದು ಗ್ರಹಿಸಿ, ಪರಿಸ್ಥಿತಿಯ ಮೂಲಕ ಈ ಸುಗ್ರೀವಾಜ್ಞೆಯನ್ನು (ಆರ್ಡಿನನ್ಸ್) ಹೊರಡಿಸ ಬೇಕಾಯಿತು; ೧೮೧೮ರ ನಿಯಮದಂತೆ ಕಾರ್ಯವನ್ನು ಕೈಕೊಳ್ಳ ಬೇಕಾಯಿತು ಎಂದು ಅವರು ಹೇಳಿದ್ದಾರೆ.

**ರಾಷ್ಟ್ರದ ವಾದ ಹೀಗಿದೆ:**

೧. ಅವರು ವರ್ಣಿಸಿರುವ ಪರಿಸ್ಥಿತಿ ಇದ್ದುದಕ್ಕೆ ಪ್ರಮಾಣವಿಲ್ಲ.
೨. ಒಂದು ವೇಳೆ ಅಂಥ ಪರಿಸ್ಥಿತಿ ಇದೆ ಎಂದರೂ ರೋಗಕ್ಕಿಂತ ಮದ್ದೇ ಹೆಚ್ಚು ವಿನಾಶಕಾರಕ.
೩. ಪರಿಸ್ಥಿತಿಯನ್ನು ಹದಕ್ಕೆ ತರಲು ಸಾಧಾರಣ ಕಾನೂನಿನಲ್ಲಿ ಸಾಕಷ್ಟು ಅಧಿಕಾರವಿದೆ.
೪. ಒಂದು ವೇಳೆ ಅಸಾಧಾರಣ ಅಧಿಕಾರ ಬೇಕು ಎನಿಸಿದರೂ ತಾವೇ ರಚಿಸಿರುವ ಶಾಸನ ಸಭೆಯಿಂದ ಅನುಜ್ಞೆ ಪಡೆಯಬೇಕಾಗಿತ್ತು.

ಇಬ್ಬರ ಭಾಷಣಗಳಲ್ಲೂ ಈ ಮಾತುಗಳನ್ನು ಹಾರಿಸಿದ್ದಾರೆ. ಸರಕಾರದ ಹೇಳಿಕೆಗಳಿಗೆ ಏನೂ ಆಧಾರ ಇರುವದಿಲ್ಲ ಎಂಬುದು ಈ ರಾಷ್ಟ್ರಕ್ಕೆ ಬೇಕಾದಷ್ಟು ಅನುಭವ ಆಗಿದೆ. ಆದ್ದರಿಂದ ಅವರ ಮಾತನ್ನು ನಾವು ನಂಬಲಾರೆವು. ನಂಬುವದಿಲ್ಲ ಎಂಬುದು ಅವರಿಗೂ ಗೊತ್ತು. ಕಾರಣ ಅವರ ಹೇಳಿಕೆಗಳು ಬುದ್ಧಿಪುರಸ್ಸರವಾಗಿ ಹೇಳಿದ ಸುಳ್ಳು ಎಂದಲ್ಲ. ಆದರೆ ಅವರ ಹೇಳಿಕೆಗಳಿಗೆ ಆಧಾರವಾದ ಸುದ್ದಿಗಳು ವಿರೂಪಗೊಂಡು ಬಂದಿರುತ್ತವೆ ಎಂದು ಗೊತ್ತಾಗಿದೆ. ಹೀಗಾಗಿ ಅವರು ಕೊಟ್ಟ ಭರವಸೆ ಜನರನ್ನು ಅಣಕಿಸಿದ ಹಾಗೆ. ಆ ಭಾಷಣಗಳು, ನೀವು ಬೇಕಾದದ್ದನ್ನು ಮಾಡಿ ಎಂದು ನಮಗೆ ಸವಾಲು ಹಾಕಿದಂತಿವೆ. ಇದರಿಂದ ನಾವು ರೇಗಲೂ ಬೇಕಾಗಿಲ್ಲ, ಅಸಹನೆ ತೋರಲೂ ಬೇಕಾಗಿಲ್ಲ. ಈ ದಬ್ಬಾಳಿಕೆಯಿಂದ ನಾವು ಕುಗ್ಗದಿದ್ದರೆ, ನಮ್ಮ ಗುರಿಯಿಂದ ನಾವು ವಿಮುಖರಾಗದಿದ್ದರೆ, ಸ್ವರಾಜ್ಯಪ್ರಾಪ್ತಿ ಬೇಗ ಆದೀತು. ದಬ್ಬಾಳಿಕೆಯು ನಮ್ಮ ಶಕ್ತಿಯನ್ನು ಒರೆಗೆ ಹಚ್ಚುತ್ತದೆ. ಸಂಕಟಸಮಯದಲ್ಲಿ ಅದು ಜನರ ತ್ಯಾಗಶಕ್ತಿ ಮತ್ತು ಧೈರ್ಯಗಳನ್ನು ಜಾಗ್ರತಗೊಳಿಸುತ್ತದೆ. ಬಂಗಾರವನ್ನು ಬೆಂಕಿಯಲ್ಲಿ ಪುಟವಿಟ್ಟರೆ ಏನು ಆಗುತ್ತದೆಯೋ ನಿಜವಾದ ಮನುಷ್ಯನಿಗೆ ರಾಷ್ಟ್ರಕ್ಕೆ ದಬ್ಬಾಳಿಕೆ–ದಮನದಿಂದಲೂ ಅದೇ ಆಗುತ್ತದೆ. ೧೯೨೧ರಲ್ಲಿ ದಬ್ಬಾಳಿಕೆಗೆ ಉತ್ತರವಾಗಿ ಸವಿನಯ ಕಾಯಿದೆ ಭಂಗವನ್ನು ಪ್ರಾರಂಭಿಸಿ, ಸರಕಾರವು ಏನು ಮಾಡಿದರೂ ಮಾಡಲಿ ಎಂದು ಆಹ್ವಾನಿಸಿದೆವು. ಇವತ್ತು ನಾವು ದೀನರಾಗಿದ್ದೇವೆ. ಸವಿನಯ ಶಾಸನ ಭಂಗಕ್ಕೆ ನಾವಿನ್ನೂ ಸಿದ್ಧರಾಗಿಲ್ಲ. ಅದಕ್ಕೆ ನಾವು ಸಿದ್ಧತೆ ಮಾಡಿಕೊಳ್ಳಬೇಕು. ಅದರ ಸಿದ್ಧತೆ ಮಾಡಿಕೊಳ್ಳುವುದು ಎಂದರೆ ಶಿಸ್ತು, ಸಂಯಮ,

ಅಹಿಂಸಾತ್ಮಕ ಪ್ರತಿಭಟನಾ ಶಕ್ತಿ ಇವೆಲ್ಲ ಅನಿವಾರ್ಯ. ಎಲ್ಲಕ್ಕಿಂತ ಮಿಗಿಲಾಗಿ, ಸಮಗೆ ತಿಳಿದ ದೈವಕೃತ ನಿಯಮ ಹಾಗೂ ಅದಕ್ಕೆ ಅನುಕೂಲವಾದ ಮಾನವ ರಚಿತ ನಿಯಮಗಳನ್ನು ಕಟ್ಟುನಿಟ್ಟಾಗಿ ನಿಷ್ಠೆಯಿಂದ ಪಾಲಿಸುವದು ಅತ್ಯಗತ್ಯ. ಆದರೆ ದುರ್ದೈವದಿಂದ ಈ ಕೆಲಸಕ್ಕೆ ಬೇಕಾದಷ್ಟು ಶಿಸ್ತಾಗಲೀ ಸಂಯಮವಾಗಲೀ ನಮ್ಮಲ್ಲಿಲ್ಲ. ನಾವು ಹಿಂಸಾಮಯರು ಆಗಿದ್ದೇವೆ. ಇಲ್ಲವೆ ನಮ್ಮ ಅಹಿಂಸೆಯು ಪ್ರತಿಭಟನಾ ಶಕ್ತಿರಹಿತವಾದದ್ದಾಗಿದೆ. ನಮ್ಮಲ್ಲಿ ಸಾಕಷ್ಟು ಸಾಮರಸ್ಯವಿಲ್ಲ. ದೈವನಿರ್ಮಿತವೋ ಅಥವಾ ಮನುಷ್ಯರಚಿತವೋ, ಅಂತೂ ನಾವು ಪಾಲಿಸುವ ಕಾನೂನು ಬಲಾತ್ಕಾರದ್ದು. ಹಿಂದೂ ಮುಸಲ್ಮಾನರ ನಡುವೆ ದಿನವೂ ಶಾಸನಗಳನ್ನು ಮುರಿಯುತ್ತಲಿದ್ದೇವೆ. ಇವು ದೈವನಿರ್ಮಿತವಿರಲಿ ಮನುಷ್ಯರಚಿತವಿರಲಿ ಇವುಗಳನ್ನು ಉಲ್ಲಂಘಿಸುತ್ತಿದ್ದೇವೆ. ಇದು ಸವಿನಯ ಶಾಸನಭಂಗಕ್ಕೆ ಅನುಕೂಲವಾದ್ದಲ್ಲ. ಗುಲಾಮ ಜನಾಂಗಕ್ಕೆ ಇರುವ ಒಂದೇ ಒಂದು ಅಜೇಯವು ಅಪ್ರತಿಹತವೂ ಆದ ಆಯುಧವೆಂದರೆ ಸವಿನಯ ಶಾಸನಭಂಗ ಇದನ್ನು ಬಿಟ್ಟರೆ ಹಿಂಸೆಯೇ ಗತಿ. ವಾತಾವರಣ ಅದಕ್ಕೆ ಅನುಕೂಲ ಇದ್ದಂತೆ: ಹಿಂದೂ ಮುಸ್ಲಿಂ ಜಗಳ ಹಿಂಸೆಗೆ ನಮ್ಮನ್ನು ಸಿದ್ಧಗೊಳಿಸುತ್ತಿದೆ. ಭಾರತದ ವಿಮೋಚನೆಯು ಹಿಂಸೆಯ ಮೂಲಕವೇ ಸಾಧ್ಯ ಎಂದು ನಂಬಿದವರು, ನಮ್ಮಲ್ಲಿ ನಡೆಯುವ ಈ ಸ್ವಚ್ಛಂದ ಕಲಹಗಳನ್ನು ನೋಡಿ ಉಬ್ಬಿ ಹೋಗಬಹುದು. ಆದರೆ ಹಿಂಸೆಯನ್ನು ನಂಬಿದವರಿಗೆ ನಾನು ಹೀಗೆ ಹೇಳಬಯಸುತ್ತೇನೆ :

ನೀವು ಹಿಂದೂಸ್ತಾನದ ಪ್ರಗತಿಗೆ ಅಡ್ಡಿ ಒಡ್ಡುತ್ತಿದ್ದೀರಿ. ಹೊಟ್ಟೆಗಿಲ್ಲದೇ ಸಾಯುತ್ತಿರುವ ಜನಕೋಟಿಯಲ್ಲಿ ನಿಮಗೆ ಸ್ನೇಹ ಕರುಣೆ ಇದ್ದರೆ, ಹಿಂಸೆಯಿಂದ ಅವರಿಗೆ ಏನೂ ಲಾಭವಿಲ್ಲ ಎಂದು ತಿಳಿದುಕೊಳ್ಳಿ. ಯಾರನ್ನು ನೀವು ಉಳಿಸಬಯಸುತ್ತೀರೋ ಅವರ ಕೈಯಲ್ಲಿ ಹೆಚ್ಚು ಶಸ್ತ್ರ ಇವೆ, ಅವರ ಸಂಘಟನೆಯೂ ನಿಮಗಿಂತ ಉತ್ತಮ. ನಿಮ್ಮ ಜೀವದ ಯೋಚನೆ ನಿಮಗೆ ಇಲ್ಲದಿರಬಹುದು. ಆದರೆ ಹುತಾತ್ಮರಾಗಲು ಅಪೇಕ್ಷೆ ಇಲ್ಲದ. ನಮ್ಮ ದೇಶಬಾಂಧವರ ಪ್ರಾಣಗಳನ್ನೂ ನೀವು ದುರ್ಲಕ್ಷ್ಯ ಮಾಡಲಾರಿರಿ. ಜಾಲಿಯಾನ್‌ವಾಲಾಬಾಗಿನ ಕಗ್ಗೊಲೆಯಂಥ ಕೃತ್ಯಗಳಲ್ಲಿ ಸರಕಾರಕ್ಕೆ ವಿಶ್ವಾಸವಿದೆ. ಆತ್ಮರಕ್ಷಣೆಗೆ ಅದೇ ನ್ಯಾಯವಾದ ಮಾರ್ಗ ಎಂದು ಈ ಸರಕಾರ ತಿಳಿಯುತ್ತದೆ. ನಿಮಗೂ ಇದು ಗೊತ್ತು. ಉಳಿದ ದೇಶಗಳ ಬಗ್ಗೆ ಏನೇ ಇರಲಿ, ಈ ದೇಶದಲ್ಲಿ ಮಾತ್ರ ಹಿಂಸೆಯ ಪಂಥವು ಬೆಳೆಯುವ ಸಂಭವವಿಲ್ಲ. ಭಾರತವೇ ಅಹಿಂಸೆಯನ್ನು ಪ್ರತಿಪಾದಿಸಬಲ್ಲದು, ಮತ್ತು ಅದೇ ಅಹಿಂಸೆಗೆ ಆಗರವಾಗಿರಬಲ್ಲದು. ಇದು ನಿರ್ವಿವಾದ. ನಿಮಗೆ ಹುತಾತ್ಮರಾಗುವದೇ ಇದ್ದರೆ ಅಹಿಂಸೆಯ ಪ್ರತಿಪಾದನೆಗಾಗಿ ನಿಮ್ಮ ಜೀವಗಳನ್ನು ಏಕೆ ಮುಡುಪು ಇಡಬಾರದು?

ಅಹಿಂಸಾತ್ಮಕ ಕ್ರಾಂತಿಕಾರಿಗಳಿಗೆ ನನ್ನ ಈ ಬಿನ್ನಹದಿಂದ ಏನೂ ಪ್ರಯೋಜನವಿಲ್ಲ. ಹಿಂಸಾತ್ಮಕ ಅರಾಜಕ ಸರಕಾರಕ್ಕೆ ಬಿನ್ನಯಿಸಿದರೆ ಎಷ್ಟು ಫಲವೋ, ಕ್ರಾಂತಿಕಾರರಿಗೆ ಬಿನ್ನಯಿಸಿದರೂ ಅಷ್ಟೇ ಫಲ.

ಆದ್ದರಿಂದ ನಾವು ಇದಕ್ಕೆ ಪರಿಹಾರವನ್ನು ಕಂಡುಹಿಡಿದು, ಅವರ ಹಿಂಸೆಗಿಂತಲೂ

ಹೆಚ್ಚು ಪರಿಣಾಮಕಾರಿಯಾದ ಶಕ್ತಿ ಇನ್ನೊಂದು ಇದೆ ಎಂದು ಹಿಂಸಾತ್ಮಕ ಕ್ರಾಂತಿಕಾರರಿಗೂ ಹಿಂಸಾತ್ಮಕ ಸರಕಾರಕ್ಕೂ ತೋರಿಸಿಕೊಡಬೇಕು.

**ದಬ್ಬಾಳಿಕೆಯು ರೋಗದ ಲಕ್ಷಣ:**

ಈ ದಬ್ಬಾಳಿಯು ಹಳೆಯ ರೋಗದ ಒಂದು ಹಳೆಯ ಲಕ್ಷಣ ಎನ್ನುತ್ತೇನೆ. ಇದರ ಸೂತ್ರವು ಐರೋಪ್ಯರ ಅಧಿಕಾರ-ಏಶಿಯಾದವರ ಅಧೀನ. ಕೆಲವು ಸಲ ಇನ್ನೂ ರಹಸ್ಯವಾಗಿ, ಬಿಳಿಯರು, ವಿರುದ್ಧ ಕಪ್ಪು ಜನರು ಎನ್ನುತ್ತಾರೆ. ಬಿಳಿಯ ಮನುಷ್ಯನು ಹೊರಿಸಿದ ಸೋಗವನ್ನು ಬಿಳಿಯ ಮನುಷ್ಯ ಹೊತ್ತ ಹೊರೆ ಎಂದು ತಪ್ಪು ಹೇಳಿದ ಕಿಪ್ಲಿಂಗ್. ಮಲಯಾದಲ್ಲಿ ಬಣ್ಣದ ಆತಂಕವು ತಾತ್ಕಾಲಿಕವೆಂದು ತಿಳಿದಿದ್ದರು. ಈಗಂತೂ ಅದು ಶಾಶ್ವತವೇ ಆಗಿದೆ. ಮಾರಿಷಸ್ ತೋಟಗಾರ ಅನಿರ್ಬಂಧವಾಗಿ ಭಾರತದ ಕೂಲಿಕಾರರನ್ನು ಪಡೆಯಲೇಬೇಕು. ಭಾರತೀಯರು ಮೊದಲಿನಿಂದಲೂ ಅಲ್ಲಿ ಇದ್ದರೂ ಕೀನ್ಯಾ ಐರೋಪ್ಯರು ಅವರ ಮೇಲೆ ಸವಾರಿ ಮಾಡುತ್ತಿದ್ದಾರೆ. ಹಿಂದಿನ ಉಪಕಾರವನ್ನು ಕಡೆಗಣಿಸಿ ಸಾಧ್ಯವಾದರೆ ಎಲ್ಲ ಭಾರತೀಯರನ್ನೂ ದಕ್ಷಿಣ ಆಫ್ರಿಕಾ ಹೊರದೂಡಲು ಸಿದ್ಧ. ಈ ಎಲ್ಲ ಸಂದರ್ಭಗಳಲ್ಲೂ ಭಾರತ ಸರಕಾರ ಮತ್ತು ಸಾಮ್ರಾಜ್ಯ ಸರಕಾರ ಕೈಲಾಗದವರೇನಲ್ಲ. ಅವರಿಗೆ ಮನಸ್ಸಿಲ್ಲ ಅಥವಾ ಭಾರತೀಯ ವಲಸೆಗಾರರ ಸಂರಕ್ಷಣೆಯ ಬಗ್ಗೆ ಎಷ್ಟು ಒತ್ತಾಯ ಮಾಡಬೇಕೋ ಅಷ್ಟು ಮಾಡುತ್ತಿಲ್ಲ. ಭಾರತ ಸರಕಾರ ಫಿಜಿ ದ್ವೀಪಗಳ ಬಗ್ಗೆ ತಾವೇ ನೇಮಿಸಿದ ಆಯೋಗದ ವರದಿಯನ್ನು ಪ್ರಕಟಿಸುವಷ್ಟು ಸೌಜನ್ಯ ಅದಕ್ಕೆ ಇಲ್ಲ. ಅಕಾಲಿಗಳ ದುರ್ದಮನೀಯ ವೀರತನವನ್ನು ಮೆಟ್ಟಿಹಾಕಲು ಮಾಡಿದ ಪ್ರಯತ್ನವೂ ಅದೇ ರೋಗದ ಕುರುಹು. ತಮ್ಮ ಪ್ರಾಣದಷ್ಟೆ ಪ್ರಿಯವಾದ ಉದ್ದೇಶಕ್ಕಾಗಿ ನೀರಿನ ಹಾಗೆ ತಮ್ಮ ರಕ್ತವನ್ನು ಅವರು ಸುರಿದಿದ್ದಾರೆ. ಅವರು ತಪ್ಪು ಮಾಡಿರಬಹುದು. ಮಾಡಿದ್ದರೆ ಅವರ ರಕ್ತ ಸುರಿಯಿತು ಅಷ್ಟೆ. ಬೇರೆ ಯಾರಿಗೂ ಅವರು ತೊಂದರೆ ಮಾಡಲಿಲ್ಲ. ಅವರ ಧೈರ್ಯಕ್ಕೆ, ಅವರ ಮೂಕ ಕಷ್ಟ ಸಹನೆಗೆ, ಅವರ ಆತ್ಮಾರ್ಪಣೆಗೆ ನಾನ್‌ಕಾನಾ ಸಾಹೇಬ, ಗುರು ಕಾ ಬಾಗ್, ಜೈತೋಗಳು ಸಾಕ್ಷಿಯಾಗಿ ನಿಂತಿವೆ. ಆದರೂ ಅಕಾಲಿಗಳನ್ನು ಮೆಟ್ಟಿಹಾಕುತ್ತೇನೆ ಎಂದು ಪಂಜಾಬ ಗವರ್ನರ್ ಪ್ರತಿಜ್ಞೆ ಮಾಡಿದ್ದಾನೆಂದು ಹೇಳಲಾಗಿದೆ.

ಬರ್ಮಾದ ವೀರತನವೂ ದಬ್ಬಾಳಿಕೆಯ ತುಳಿತಕ್ಕೆ ಒಳಗಾಗಿದೆ ಎಂದು ಸುದ್ದಿ ಬರುತ್ತಿದೆ. ನಮಗಿಂತ ಈಜಿಪ್ತಿನ ಹಣೆಯ ಬರಹ ಉತ್ತಮವಾಗಿಲ್ಲ. ಯಾರೋ ಒಬ್ಬ ಹುಚ್ಚ ಒಬ್ಬ ಬ್ರಿಟಿಷ್ ಅಧಿಕಾರಿಯನ್ನು ಕೊಂದನಂತೆ. ಇದು ಖಂಡಿತವಾಗಿಯೂ ಬಹು ತುಚ್ಛ ಅಪರಾಧ. ಬಲು ಹೀನಕಾರ್ಯ. ಆದರೆ ಇದಕ್ಕೆ ಕೊಡುತ್ತಿರುವ ಶಿಕ್ಷೆ ಅದಕ್ಕೂ ಹೀನ ಅಪರಾಧ, ಇಷ್ಟೇ ಅಲ್ಲ ಅದು ಒಂದು ಅತ್ಯಾಚಾರ, ಮಾನವತೆಗೆ ಮಾಡಿದ ಅಪಚಾರ. ಈಜಿಪ್ತಿಗೆ ಏನು ಸಿಕ್ಕಿತ್ತೋ ಎಲ್ಲವೂ ಹೋದ ಹಾಗೆಯೇ. ಒಬ್ಬ ಮಾಡಿದ ಅಪರಾಧಕ್ಕಾಗಿ ಇಡೀ ಜನಾಂಗವನ್ನೇ ನಿರ್ದಯೆಯಿಂದ ಶಿಕ್ಷಿಸಲಾಗುತ್ತಿದೆ. ಆ ಕೊಲೆಗೆ ಈಜಿಪ್ತಿಗೆ ಜನ ಸಹಾನುಭೂತಿ ತೋರಿಸಿರಲೂ ಬಹುದು. ಆದರೆ ಅಷ್ಟರಿಂದಲೇ ಹಿಂಸೆ ಇಲ್ಲದಿದ್ದರೂ ತನ್ನನ್ನು ತಾನು ಕಾಪಾಡಿಕೊಳ್ಳಬಲ್ಲ ಸಾಮರ್ಥ್ಯವುಳ್ಳ ಸರಕಾರದ ಈ ಭಯೋತ್ಪಾದಕ ಕೃತ್ಯವು ನ್ಯಾಯಸಮ್ಮತವಾದೀತೇ?

ಆದ್ದರಿಂದ ಬಂಗಾಲದಲ್ಲಿ ನಡೆಯುವ ದೌರ್ಜನ್ಯ ಅಸಾಧಾರಣವೇನೂ ಅಲ್ಲ. ಕಾಲ ಕಾಲಕ್ಕೆ ಇದು ಹೊರಚಿಮ್ಮುತ್ತದೆ. ಅದು ಯಾವುದೋ ರೂಪದಲ್ಲಿ ಯಾವುದೋ ಪ್ರಾಂತದಲ್ಲಿ. ನಾವು ಸ್ವತಂತ್ರರಾಗುವವರೆಗೆ ಇದು ಸಾಮಾನ್ಯವಾದದ್ದೆಂದು ನಾವು ತಿಳಿಯಬೇಕು.

**ಅಂಗೀಕಾರದ ಅಗತ್ಯ:**

ಆದ್ದರಿಂದ ತನ್ನಲ್ಲಿಟ್ಟಿರುವ ನಂಬಿಕೆಯನ್ನು ಕಾಂಗ್ರೆಸ್ ಉಳಿಸಿಕೊಳ್ಳಬೇಕಾದರೆ ತನ್ನ ಬೇಡಿಕೆಗಳಿಗೆ ಒಂದು ಅಂಗೀಕಾರದ ಬೆಂಬಲ ಪಡೆಯಲೇಬೇಕು. ಆ ಬೆಂಬಲವನ್ನು ನಾವು ದೊರಕಿಸಿಕೊಳ್ಳುವ ಮೊದಲು ಹಿಂದೂಗಳೂ, ಮುಸಲ್ಮಾನರೂ, ಶೀಖರೂ, ಪಾರಸಿಗಳೂ, ಕ್ರಿಶ್ಚಿಯನ್ನರೂ ಎಲ್ಲರೂ ಒಂದಾಗಬೇಕು. ಅದೇ ರೀತಿ ಸ್ವರಾಜ್ಯವಾದಿಗಳು, ಅಪರಿವರ್ತನ ವಾದಿಗಳೂ, ಉದಾರಪಂಥಿಗಳೂ ಹೋಂರೂಲಿನವರೂ, ಮುಸ್ಲಿಂ ಲೀಗಿನವರೂ ಇತರರೂ ಒಟ್ಟಾಗಬೇಕು. ನಮ್ಮ ಮನಸ್ಸನ್ನು ನಾವು ಅರಿತುಕೊಂಡು ಎಲ್ಲರೂ ಏಕಕಂಠದಿಂದ ಮಾತ ನಾಡುವುದು ಒಳ್ಳೆಯದು. ನಮ್ಮ ದೇಶಕ್ಕೆ ಪರದೇಶದ ಬಟ್ಟೆ ಬರದಂತೆ ತಡೆಯುವ ಶಕ್ತಿಯನ್ನು ಗಳಿಸಿಕೊಂಡರೆ ನಮಗೆ ಎಷ್ಟೋ ಮೇಲಾದೀತು. ಆಗ ನಿಜವಾಗಿಯೂ ನಮಗೆ ಶಕ್ತಿ ಮೈಗೂಡುತ್ತದೆ.

**ನನ್ನ ನಂಬಿಕೆ:**

ನನ್ನ ವಿಶ್ವಾಸವನ್ನು ಹೇಳುತ್ತೇನೆ: ಕಾಂಗ್ರೆಸ್ಸನ್ನು ಭದ್ರವಾಗಿ ಇಡ ಬಯಸುವ ಕಾಂಗ್ರೆಸ್ಸಿಗನಂತೆ ಅಸಹಕಾರವನ್ನು ನಿಲ್ಲಿಸಲು ಸಲಹೆ ಕೊಡುತ್ತೇನೆ, ನಮ್ಮ ದೇಶ ಅದಕ್ಕಿನ್ನೂ ಸಿದ್ಧವಾಗಿಲ್ಲ ಎಂದು. ಆದರೆ ಈಗಿನ ಈ ಸರಕಾರ ಈಗಿರುವ ಹಾಗೆಯೇ ಇರುವ ತನಕ ವೈಯಕ್ತಿಕವಾಗಿ ನಾನು ಅಸಹಕಾರವನ್ನು ಕೈಬಿಡಲಾರೆ, ಕೈಬಿಡುವುದೂ ಇಲ್ಲ. ನನ್ನ ಮಟ್ಟಿಗೆ ಇದು ಕೇವಲ ಒಂದು ಧೋರಣೆ ಅಷ್ಟೇ ಅಲ್ಲ, ಅದೊಂದು ಶ್ರದ್ಧಾಪೂರ್ಣ ಉದ್ದೇಶ. ಅಸಹಕಾರ, ಸವಿನಯ ಶಾಸನಭಂಗ ಇವು ಸತ್ಯಾಗ್ರಹದ ವೃಕ್ಷಕ್ಕೆ ಬೇರೆ ಬೇರೆ ಶಾಖೆಗಳು ಮಾತ್ರ. ಇದು ನನ್ನ ಕಲ್ಪದ್ರುಮ. ಸತ್ಯಾಗ್ರಹವೆಂದರೆ ಸತ್ಯಶೋಧನೆ: ದೇವರು ಸತ್ಯ. ಆ ಸತ್ಯವನ್ನು ನನಗೆ ತಿಳಿಸಿಕೊಡುವ ಬೆಳಕು ಅಹಿಂಸೆ. ಸ್ವರಾಜ್ಯವು ನನಗೆ ಆ ಸತ್ಯದ ಒಂದು ಅಂಶ. ದಕ್ಷಿಣ ಆಫ್ರಿಕೆಯಲ್ಲಿ, ಖೇಡಾದಲ್ಲಿ, ಚಂಪಾರಣ್ಯದಲ್ಲಿ ಇನ್ನೂ ಹಲವು ಪ್ರಸಂಗಗಳಲ್ಲಿ ಸತ್ಯಾಗ್ರಹವು ನನ್ನನ್ನು ಕೈಬಿಟ್ಟಿಲ್ಲ. ಅದರಲ್ಲಿ ಹಿಂಸೆಗೆ ಅಥವಾ ದ್ವೇಷಕ್ಕೆ ಸ್ವಲ್ಪವೂ ಸ್ಥಾನವಿಲ್ಲ. ಆದ್ದರಿಂದ ನಾನು ಇಂಗ್ಲಿಷ್ ಜನರನ್ನು ದ್ವೇಷಿಸಲಾರೆ, ದ್ವೇಷಿಸುವುದೂ ಇಲ್ಲ. ಹೀಗೆಂದರೆ ಅವರ ನೊಗಕ್ಕೆ ಹೆಗಲನ್ನು ಕೊಡುತ್ತೇನೆ ಎಂದು ಅಲ್ಲ. ಭಾರತದ ಮೇಲೆ ಬ್ರಿಟಿಷ್ ರೀತಿ ನೀತಿಗಳನ್ನೂ, ಬ್ರಿಟಿಶ್ ಸಂಸ್ಥೆಗಳನ್ನೂ ಹೇರುವ ಈ ಅಧಾರ್ಮಿಕ ಪ್ರಯತ್ನಗಳನ್ನು ನನ್ನ ಪ್ರಾಣ ಪಣವಿಟ್ಟು ಕಡೆಯವರೆಗೂ ಹೋರಾಡುತ್ತೇನೆ. ಆದರೆ ನಾನು ಅಹಿಂಸೆಯಿಂದ ಆ ಪ್ರಯತ್ನವನ್ನು ಎದುರಿಸುತ್ತೇನೆ. ಇಂಗ್ಲಿಷ್ ಪ್ರಭುಗಳೊಡನೆ ಅಹಿಂಸಾತ್ಮಕವಾಗಿ ಯುದ್ಧ ಮಾಡಬಲ್ಲ ಸಾಮರ್ಥ್ಯ ಭಾರತಕ್ಕೆ ಇದೆ ಎಂದು ನನ್ನ ವಿಶ್ವಾಸ. ಈ ಪ್ರಯೋಗ ವಿಫಲವಾಗಿಲ್ಲ, ಸಫಲವಾಗಿದೆ. ಎಷ್ಟು ಸಫಲವಾಗಬೇಕೆಂದು ನಾವು ಬಯಸಿದ್ದೆವೋ ಅಷ್ಟು ಸಫಲವಾಗಿಲ್ಲ. ಆದರೆ ನನಗೆ ನಿರಾಶೆ ಆಗಿಲ್ಲ. ಅದಕ್ಕೆ ಬದಲು ಶೀಘ್ರದಲ್ಲಿಯೇ ಭಾರತವು ತನ್ನ ನ್ಯಾಯವಾದ ಹಕ್ಕು

ಬಾಧ್ಯತೆಗಳನ್ನು ಸತ್ಯಾಗ್ರಹದ ಮೂಲಕವೇ ಪಡೆದೀತೆಂದು ನನ್ನ ನಂಬಿಕೆ. ತಾತ್ಪೂರ್ತಿಕವಾಗಿ ಸತ್ಯಾಗ್ರಹವನ್ನು ನಿಲ್ಲಿಸಬೇಕೆಂಬ ಸೂಚನೆ ಕೂಡ ಆ ಪ್ರಯೋಗದ ಒಂದು ಅಂಗವೇ ಆಗಿದೆ. ನಾನು ಹಾಕಿಕೊಟ್ಟ ಕಾರ್ಯಕ್ರಮವನ್ನು ಪೂರೈಸಿದ್ದೇ ಆದರೆ ಅಸಹಕಾರವನ್ನು ಮತ್ತೆ ಪ್ರಾರಂಭಿಸುವ ಅಗತ್ಯವೇ ಬೇಕಾಗುವದಿಲ್ಲ. ಒಂದು ವೇಳೆ ಕಾರ್ಯಕ್ರಮ ನಡೆಯದೇ ಇದ್ದರೆ ಕಾಂಗ್ರೆಸ್ಸಿನ ಮೂಲಕವೋ ಅಥವಾ ಹೊರಗಡೆಯೋ ಯಾವುದೊ ಒಂದು ರೂಪದಲ್ಲಿ ಅಹಿಂಸಾತ್ಮಕ ಅಸಹಕಾರವನ್ನು ಪುನಃ ಪ್ರಾರಂಭಿಸಲೇಬೇಕಾಗುತ್ತದೆ. ಸತ್ಯಾಗ್ರಹಕ್ಕೆ ಎಂದೂ ಸೋಲಿಲ್ಲ ಎಂದು ಪದೇ ಪದೇ ಹೇಳಿದ್ದೇನೆ. ಸತ್ಯವನ್ನು ಎತ್ತಿ ಹಿಡಿಯಲು ಒಬ್ಬನೇ ಒಬ್ಬ ಪೂರ್ಣ ಸತ್ಯಾಗ್ರಹಿ ಆದರೂ ಸಾಕು. ಅಂಥ ಪೂರ್ಣ ಸತ್ಯಾಗ್ರಹಿಗಳಾಗಲು ನಾವೆಲ್ಲರೂ ಪ್ರಯತ್ನಿಸೋಣ. ಇದನ್ನು ಸಾಧಿಸಲು ನಮ್ಮಲ್ಲಿ ಕೆಳಗಿನವನಿಗೂ ಸಾಧ್ಯವಲ್ಲದ ವಿಶೇಷ ಗುಣವೇನೂ ಬೇಕಾಗಿಲ್ಲ. ಏಕೆಂದರೆ ಸತ್ಯಾಗ್ರಹವು ಒಳಗಿರುವ ಆತ್ಮದ ಲಕ್ಷಣ. ಅದು ನಮ್ಮಲ್ಲಿ ಪ್ರತಿಯೊಬ್ಬರ ಒಳಗೂ ಅಡಗಿದೆ. ಸ್ವರಾಜ್ಯದ ಹಾಗೆ ಅದು ಸಹ ನಮ್ಮ ಜನ್ಮಸಿದ್ಧ ಹಕ್ಕು. ಅದನ್ನು ಅರಿತುಕೊಳ್ಳೋಣ.

**ಅಧಿವೇಶನದ ಉಪಸಂಹಾರ**

**(೨೭-೧೨-೧೯೨೪)**

*ಸೋದರರೆ,*

ನಿಮಗೆ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ನೀವು ನನಗೆ ತೋರಿಸಿದ್ದಕ್ಕಿಂತ ಹೆಚ್ಚು ಪ್ರೇಮವನ್ನು ಯಾವ ಅಧ್ಯಕ್ಷನೂ ನಿರೀಕ್ಷಿಸಲಾರ. ನೀವೇನು ಮಾಡಬೇಕು ಎಂದು ನಾನು ಬಯಸಿದೆನೋ ಅದನ್ನೆಲ್ಲ ಮಾಡಿದಿರಿ. ಮೌನವಾಗಿರಬೇಕು. ಎಂದಾಗ ಮೌನವಾಗಿದ್ದಿರಿ. ನಾನು ಮಾಡಿದ ಭಾಷಣವನ್ನೆಲ್ಲ ಕೇಳಿದಿರಿ. ಬರೆದುಕೊಂಡು ಬಂದು ಓದಬೇಕು ಎಂದಿರಿ. ನಾನು ಕ್ಷಮಿಸಿ ಎಂದಾಗ ನೀವು ಅದಕ್ಕೆ ಒತ್ತಾಯ ಮಾಡಲಿಲ್ಲ. ಇಲ್ಲಿ ಹೇಗೆ ಸದ್ದುಗದ್ದಲ ಇಲ್ಲದೆ ನಿಮ್ಮ ಅಭಿಪ್ರಾಯವನ್ನು ಪ್ರಕಟಿಸಿದಿರೋ ವಿಷಯ ನಿಯಾಮಕ ಸಮಿತಿಯಲ್ಲೂ ಹಾಗೇ ಮಾಡಿದಿರಿ. ನಿಮ್ಮ ನಡುವೆ ರಾಟೆ ಬಾಂಬು ಬಿದ್ದಾಗ ಗದ್ದಲವಾಗಬಹುದಾಗಿತ್ತು. ಏನೂ ಆಗಲಿಲ್ಲ. ವಿಷಯ ನಿಯಾಮಕ ಸಮಿತಿಯಲ್ಲೂ ನೀವು ಸಭ್ಯತೆಗೆ ಶೋಭಿಸುವಂತೆ ನಡೆದುಕೊಂಡಿರಿ. ನನ್ನ ಸೋದರರು ತೋರಿಸಿದ ಈ ದಯೆ ಯಾವುದೋ ನನ್ನ ಪೂರ್ವ ಜನ್ಮದ ಫಲ ಎಂದು ತಿಳಿದಿದ್ದೇನೆ. ನನ್ನ ಬಗ್ಗೆ ತೋರಿಸಿದ ಈ ಕರುಣೆಯನ್ನು ಭರತ ಭೂಮಿಯ ಬಗ್ಗೆಯೂ ತೋರಿಸಬೇಕು ಎನ್ನುತ್ತೇನೆ. ನಾನು ಬದುಕಿರುವುದು ಭಾರತಕ್ಕಾಗಿಯೇ. ಸಾಯಬೇಕೆನ್ನುವುದೂ ಭಾರತಕ್ಕಾಗಿಯೇ. ದೇವರ ಇಚ್ಛೆ ಇಲ್ಲದೆ ಒಂದು ಹುಲ್ಲುಕಡ್ಡಿಯೂ ಅಲ್ಲಾಡುವದಿಲ್ಲ. ಆದರೆ ಮಗು ತಂದೆಯನ್ನು ತನಗೆ ಬೇಕಾದ್ದು ಕೇಳುವಂತೆ, ಪ್ರತಿಯೊಬ್ಬರಿಗೂ ದೇವರನ್ನು ಕೇಳಲು ಹಕ್ಕಿದೆ. ನಾನು ಕೇಳಿದ್ದನ್ನು ಅವನು ಕೊಟ್ಟೇ ಕೊಡುತ್ತಾನೆ ಎಂಬುದನ್ನು ನಾನು ಮನಗೊಂಡಿದ್ದೇನೆ. ದೇವರ ಇಷ್ಟಕ್ಕೆ ವಿರುದ್ಧವಾಗಿ ಏನೂ ನಡೆಯಲಾರದು.

ಆದ್ದರಿಂದ, ಸೋದರರೇ, ಭಾರತದ ಸೇವೆಗೆ ಟೊಂಕಕಟ್ಟಿ, ನೀವು ಮಾಡಿರುವ ಶಪಥವನ್ನು ಪಾಲಿಸಿರೆಂದು ನಿಮ್ಮನ್ನು ನಾನು ಕೇಳಿಕೊಳ್ಳುತ್ತೇನೆ. ನಾನು ಅಧ್ಯಕ್ಷತೆ ವಹಿಸಿದೆ, ನೀವೆಲ್ಲರೂ

ಪ್ರೇಮವನ್ನು ಸುರಿದಿರಿ. ಪ್ರತಿಯೊಬ್ಬರೂ ನನ್ನನ್ನು ಹೊಗಳಬೇಕು ಎಂದು ಬಯಸುವುದು ಸ್ವಾಭಾವಿಕ. ಆದರೆ ಅದರಿಂದ ಏನೂ ಸಾಧನೆ ಆಗುವದಿಲ್ಲ. ಸಾಧನೆ ಆಗಬೇಕು ಎಂದರೆ ನೀವೆಲ್ಲರೂ ಮಾತುಕೊಟ್ಟಂತೆ ನಡೆಯಬೇಕು. ಇವೆಲ್ಲ ಕಾರ್ಯಗಳೂ ನಿಮ್ಮ ಅಳವಿಗೆ ಮೀರಿದ್ದೆಂದು ನಾನು ನಂಬಲಾರೆ. ಮೂರನೆಯದು, ನಾಲ್ಕನೆಯದು ಅಥವಾ ಐದನೆಯದು ಯಾವ ಕಾರ್ಯವೂ ನಿಮಗೆ ಅಸಾಧ್ಯವಲ್ಲ.

ಭೋಪಟಕರರ ಭಾಷಣ ಕೇಳಿ ನನಗೆ ಸಂತೋಷವೂ ಆಯಿತು ಆಶ್ಚರ್ಯವೂ ಆಯಿತು. ಹಿಂದೂ ಧರ್ಮ ನಾಶವಾಗಬೇಕು ಎಂದರೆ ಮನುಷ್ಯರನ್ನು ಅಸ್ಪೃಶ್ಯರನ್ನಾಗಿ ನಡೆಸಿಕೊಳ್ಳಿರಿ ಎಂದರು. ನನಗೆ ಬಹಳ ಸಂತೋಷವಾಯಿತು. ಹಿಂದೂ ಧರ್ಮದಲ್ಲಿ ಈಗ ರೂಢಿಯಲ್ಲಿರುವ ಅಸ್ಪೃಶ್ಯತೆಗೆ ಯಾವ ಆಧಾರವೂ ಇಲ್ಲ ಎಂದು ಮೂವರು ಶಾಸ್ತ್ರಿಗಳೂ ಈಗ ನಿಮಗೆ ಹೇಳಿದ್ದಾರೆ. ಹಿಂದೂಗಳು ಮುಸ್ಲಿಂರು ಪರಸ್ಪರ ಶತ್ರುಗಳಾಗಬಾರದು. ಭ್ರಾತೃಗಳಾಗಬೇಕು ಎಂಬಂತೆಯೇ ಇದು. ಶೌಕತ್ ಅಲಿ ಹೇಳಿದ್ದನ್ನು ಕೇಳಲಿಲ್ಲವೇ? ಲಜಪತ್ ರಾಯರು ಏನು ಹೇಳಿದ್ದರು? ಜಾಫರ್ ಅಲಿ ಖಾನರು ಒಂದು ಆಕ್ಷೇಪ ಎತ್ತಿದರು. ಆಕ್ಷೇಪಿಸಬೇಕಾದ್ದು ಅದರಲ್ಲಿ ಏನೂ ಇಲ್ಲ. ಇವರೇನು ಭಾರತಕ್ಕೆ ಶತ್ರು ಅಲ್ಲ. ಯಾರನ್ನೂ ನೀವು ಶತ್ರು ಎಂದು ಭಾವಿಸಬಾರದು ವೈರಿಯನ್ನೂ ಕೂಡ ಸೋದರ ಆಗಿ ಮಾಡಬೇಕು ಎನ್ನುವ ಪ್ರೇರಣೆ ನಿಮ್ಮ ಹೃದಯದಲ್ಲಿರಬೇಕು.

ಲಾಲಾಜಿ ಒಂದು ತತ್ವವನ್ನು ಮಂಡಿಸಿದ್ದಾರೆ. ಇದು ಇಡೀ ಮಾನವ ಜಾತಿಗೆ ಸೇರಿದ ಪ್ರಶ್ನೆ, ಒಂದು ಧರ್ಮಕ್ಕಲ್ಲ. ಹಿಂದೂ ಒಬ್ಬ ಹುಚ್ಚನಾದರೆ, ಮುಸಲ್ಮಾನರು ಅವನನ್ನು ವಿರೋಧಿಸಬೇಡವೇ ಎಂದು ಕೇಳಿದರು. ಮುಸಲ್ಮಾನರು ಕೃಷ್ಣನನ್ನೂ, ರಾಮನನ್ನೂ, ಬೈದರೆ, ಹಿಂದೂಗಳು ಪೈಗಂಬರರನ್ನು ಬೈಯಬೇಡವೇ ಎಂದು. ಈ ಮಾತನ್ನು ಕ್ಷಮಿಸುವವರ ಮೂಲಕ ತೀರ್ಮಾನಿಸಲಾಗದಿದ್ದರೆ, ನ್ಯಾಯಾಲಯಕ್ಕೆ ಹೋಗಿ ಅಥವಾ ಪಂಚಾಯತಿಗೆ ಹೋಗಿ ಎನ್ನುತ್ತೇನೆ. ನಾನಂತೂ ಅಸಹಕಾರಿ. ಯಾರಾದರೂ ಒಬ್ಬ ಮುಸಲ್ಮಾನ ಭಗವಾನ್ ಕೃಷ್ಣನನ್ನು ಬೈದರೆ, ಇಲ್ಲಿ ಹೊಡೆದಾಡಬೇಡ, ನ್ಯಾಯಾಲಯಕ್ಕೆ ಹೋಗು ಎನ್ನುತ್ತೇನೆ. ಇದರಲ್ಲೇನಿದೆ ಹೊಡೆದಾಡಬೇಕಾದ್ದು? ಇದನ್ನು ಒಪ್ಪಿಕೊಳ್ಳಲು ಬಹಳ ಹೊತ್ತು ಬೇಕಾಗಿಲ್ಲ. ಸ್ವರಾಜ್ಯಕ್ಕಾಗಿ ನಮ್ಮಲ್ಲಿ ಒಂದು ಕಾವು ಬೇಕು. ನಮ್ಮ ಹೃದಯಗಳು ಅದಕ್ಕಾಗಿ ಪರಿತಪಿಸಬೇಕು. ಭೋಪಟಕರರು ಮಾತನಾಡುವಾಗ, ಲೋಕಮಾನ್ಯರನ್ನು ನಾನು ನೆನೆದೆ. ನಮ್ಮ ಸ್ವರಾಜ್ಯದ ಶಿಲ್ಪಿ ಅವರು. ಅವರ ಹೆಂಡತಿ ಸಾಯುತ್ತಿರುವಾಗ ಅವರು ಸ್ವರಾಜ್ಯದ ಕೆಲಸದಲ್ಲಿ ತೊಡಗಿದ್ದರಂತೆ. ಇದು ಅವರ ಬಗ್ಗೆ ನಾನು ಕೇಳಿರುವ ಒಂದು ವಿಶೇಷ ಸಂಗತಿ. ಇಂಥ ಜ್ವಾಲಾಮುಖಿಗಳು ನಮ್ಮ ಹೃದಯದಲ್ಲಿ ಹುಟ್ಟುತ್ತಲಿದ್ದರೆ ನಾವು ಮೂರನೆಯದನ್ನೂ, ನಾಲ್ಕನೆಯದನ್ನೂ ಎಲ್ಲವನ್ನೂ ಮಾಡಬಹುದು. ಕಾಂಗ್ರೆಸ್ಸಿಗೆ ಬರುವಾಗ ನೀವು ಖಾದಿ ತೊಟ್ಟು ಬಂದರೆ ಅದೇನೂ ದೊಡ್ಡದಲ್ಲ. ಪರದೇಶೀ ಬಟ್ಟೆ ಬಿಡುವುದೂ ದೊಡ್ಡದಲ್ಲ. ಇವತ್ತು ನಾನು ಪರದೇಶಿ ವಸ್ತ್ರ ದಹನವನ್ನು ಹೇಳುತ್ತಿಲ್ಲ. ೧೯೨೧ರಲ್ಲಿ ಪರದೇಶೀ ವಸ್ತ್ರ ದಹನ ಮಾಡಿಸಿದ ಮನುಷ್ಯ ಇವತ್ತು ನಾನಲ್ಲ. ನಾವು ಶಾಂತಿ ಮಂತ್ರವನ್ನು ಬಿಟ್ಟಿದ್ದೇವೆ. ಈಗಲೂ ಸಂಪೂರ್ಣ ಶಾಂತಿ ಸ್ಥಾಪನೆಯಾದರೆ

೧೯೨೧ರ ಕಾರ್ಯವನ್ನು ಮತ್ತೆ ಕೈಕೊಂಡೇನು. ಪರದೇಶೀ ವಸ್ತ್ರ ದಹನದ ನೆಪದಲ್ಲಿ ಜನಗಳ ಮೇಲೆ ಕಲ್ಲುಬೀರಲಿಕ್ಕೆ ಕಲ್ಲುಗುಡ್ಡೆ ಹಾಕಿದೆವು. ಸತ್ಯದ ಆಹ್ವಾನ, ಅಸತ್ಯಾಚರಣೆ ಇವೆರಡನ್ನೂ ನಾವು ಏಕಕಾಲಕ್ಕೆ ಮಾಡಲಾರೆವು ಎಂಬುದನ್ನು ನಾನು ಬಲ್ಲೆ. ಸತ್ಯವನ್ನು ಆಹ್ವಾನಿಸಿದರೆ, ಅಸತ್ಯವನ್ನು ಆಚರಿಸಲೇಬಾರದು. ಇಲ್ಲದೇ ಹೋದರೆ ನಮ್ಮ ದೇಹಗಳೇ ಸುಟ್ಟು ಹೋದಾವು. ಖಂಡಿತವಾಗಿಯೂ ನನ್ನ ಎದೆಯಂತೂ ಸುಡುತ್ತದೆ. ಯಾರಾದರೂ ಸುಳ್ಳು ಸುಳ್ಳೇ ದೇವರಾಣೆ ಇಟ್ಟರೆ, ಸುಳ್ಳು ಶಪಥ ಮಾಡಿದರೆ ನನಗೆ ಸೈರಣೆಯಾಗದು. ನನ್ನನ್ನು ಬೇಕಾದಷ್ಟು ಬೈಯಿರಿ, ಒದೆಯಿರಿ, ಮೆಟ್ಟಿನಿಂದ ಒದೆಯಿರಿ, ಮುಖದ ಮೇಲೆ ಉಗುಳಿರಿ; ನಾಣು ಸಿಟ್ಟುಗೊಳ್ಳುವುದಿಲ್ಲ ಎಂದ ನಿಮಗೆ ಮಾತು ಕೊಡುತ್ತೇನೆ. ಒಂದು ಶಪಥಮಾಡಿ ಅದರಂತೆ ನಡೆಯದಿದ್ದರೆ, ಸಿಟ್ಟಿನಿಂದ ನನ್ನ ಮೈಯಲ್ಲಾ ಸುಟ್ಟು ಹೋಗುತ್ತದೆ. ಅಪವಿತ್ರಳಾದ ಒಬ್ಬ ಹೆಂಗಸು ನನ್ನ ಮುಂದೆ ತನ್ನ ಪಾವಿತ್ರ್ಯದ ಬಗ್ಗೆ ಜಂಬ ಕೊಚ್ಚಿಕೊಂಡರೆ ಸತ್ತು ಹೋಗಬೇಕು ಎಂದು ನನಗೆನಿಸುತ್ತದೆ. ಅಪವಿತ್ರನಾದ ಗಂಡಸು ನನ್ನ ಇದುರಿಗೆ ತನ್ನ ಪಾವಿತ್ರ್ಯದ ಜಂಬ ಕೊಚ್ಚಿಕೊಂಡರೂ ಅಷ್ಟೇ. ನಾನು ಅದನ್ನು ನೋಡ ಬಯಸುವದಿಲ್ಲ. ಈ ಹೊಣೆಗಾರಿಕೆಯನ್ನು ಹೊರಿಸುವದರ ಮೂಲಕ ನೀವು ನನಗೆ ತೋರಿಸಿದ ಪ್ರೇಮ, ಕರುಣೆ, ಹೀಗೇ ಸಾಗಬೇಕು ಎಂದರೆ ಇಲ್ಲದ ಆಡಂಬರವನ್ನು ಮರೆಯತಕ್ಕದ್ದಲ್ಲ ಎಂಬುದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಈ ಸ್ಥಾನದಲ್ಲಿ ನನ್ನನ್ನು ಇಟ್ಟರೂ ಸರಿ ಬಿಟ್ಟರೂ ಸರಿ. ಸ್ವರಾಜ್ಯ ಪಕ್ಷದವರೂ, ಅಪರಿವರ್ತನವಾದಿಗಳೂ ಒಟ್ಟಿಗೆ ನಡೆದರೆ ಇನ್ನೂ ಉತ್ತಮ. ಡಾ॥ ಬೆಜೆಂಟ ಹೇಳಿದ ಹಾಗೆ ಒಂದೇ ಒಂದು ಮರದ ತುಂಡು ಗಟ್ಟಿಯಾದರೂ ಮುರಿದು ಹೋಗುತ್ತದೆ. ಹಲವನ್ನು ಒಂದು ಹೊರೆಯಾಗಿ ಕಟ್ಟಿದರೆ ಆ ಹೊರೆ ಅಭೇದ್ಯವಾಗುತ್ತದೆ.

ಸ್ವರಾಜ್ಯ ಪಕ್ಷದವರು ಕೆಟ್ಟ ಮನುಷ್ಯರು ಎಂದು ನಾವು ತಿಳಿಯುವದು ಬೇಡ. ಶುದ್ಧ ಹೃದಯಕ್ಕೆ ಎಲ್ಲ ಹೃದಯಗಳೂ ಶುದ್ಧವೇ–ಆತ್ಮದ ಗುಣ ಏನು? ಆತ್ಮ ಅಮೃತಶಿಲೆ ಇದ್ದಂತೆ. ಶಂಕರಾಚಾರ್ಯರು ಹೇಳಿದ್ದಾರೆ, ಕಳಂಕ ಅದರ ಸ್ವಭಾವವಲ್ಲ ಎಂದು. ಕಳಂಕ ಮಾಯೆ. ನಿಮ್ಮ ಹೃದಯ ಶಕ್ತಿವಂತವಾದರೆ, ಇತರರ ಕಳಂಕವನ್ನು, ಅವರ ಬಗ್ಗೆ ಕೆಡುಕನ್ನು ಯೋಚಿಸದೆಯೇ ತೊಡೆದು ಹಾಕಬಲ್ಲುದು. ವಿಶ್ವಾಸದ ಪ್ರತಿಫಲವು ದ್ರೋಹವಾದರೆ ನಂಬಿದವನಿಗೇನಾದರೂ ಕೆಡುಕು ಆಗುತ್ತದೆಯೇ? ದ್ರೋಹ ಮಾಡಿದವನಿಗೆ ಕೆಡುಕು. ಜವಾಹರಲಾಲರು ನನಗೆ ಮಗ ಇದ್ದ ಹಾಗೆ ಎಂದು ಹೇಳಿದರೆ, ಅವರಿಂದ ಕೆಲಸ ಮಾಡಿಸಿಕೊಳ್ಳುವ ಮಟ್ಟಿಗೆ ಮಾತ್ರ ಹೀಗೆ ನಾನು ಹೇಳಿದ್ದಾದರೆ, ಅದು ದೋಷ. ಜವಾಹರಲಾಲರನ್ನು ಗೌರವಿಸಲು ನಾನು ಯಾರು? ಜಗತ್ತು ಗೌರವಿಸುತ್ತದೆ. ಅವರ ಮೇಲೆ ಹೂಮಳೆಗರೆಯುತ್ತದೆ. ಇವತ್ತು ನಾನು ಅವರಿಗೆ ಮಾತ್ರ ಅಥವಾ ಇವರಿಗೆ ಮಾತ್ರ ಹೇಳುವದಿಲ್ಲ. ಇಬ್ಬರಿಗೂ ಹೇಳುತ್ತೇನೆ. ಈ ಒಂದು ವರ್ಷ ಬಹಳ ಕಷ್ಟಪಟ್ಟು ಕೆಲಸ ಮಾಡಬೇಕು. ಅದರಿಂದ ನಮ್ಮ ಶಕ್ತಿ ಬೆಳೆಯಬೇಕು. ಸ್ವರಾಜ್ಯ ನಮ್ಮ ಕೈ ಅಳವಿಗೆ ಬಂದಿದೆಯೆಂದು ನಮಗೆ ಎನಿಸಬೇಕು.

* * *

ಇದುವರೆಗೆ ಗಾಂಧೀಜಿ ಹಿಂದಿಯಲ್ಲಿ ಮಾತಾಡಿ ಆಮೇಲೆ ಇಂಗ್ಲೀಷಿನಲ್ಲಿ ಮುಂದುವರೆಸುತ್ತ ಹೀಗೆ ಹೇಳಿದರು:

ಇದುವರೆಗೆ ಹಿಂದಿಯಲ್ಲಿ ನನ್ನ ಮನಸ್ಸನ್ನು ತೋಡಿಕೊಂಡೆ. ಅದನ್ನೇ ಮತ್ತೆ ಹೇಳುವದು ನನಗೆ ಸಾಧ್ಯವಿಲ್ಲ. ಒಂದು ಮಾತನ್ನು ಮಾತ್ರ ಹೇಳುತ್ತೇನೆ. ಯಾವ ಅಧ್ಯಕ್ಷನೂ, ನೀವು, ಪ್ರತಿನಿಧಿಗಳು, ನನಗೆ ತೋರಿಸಿದ್ದಕ್ಕಿಂತ ಹೆಚ್ಚು ಪ್ರೀತಿಯನ್ನು ಹೆಚ್ಚು ಮರ್ಯಾದೆಯನ್ನು ಹೆಚ್ಚು ಗಮನವನ್ನು ಪಡೆದಿರಲಾರ. ಈ ಕಾಂಗ್ರೆಸ್ ಅಧಿವೇಶನದಲ್ಲಿ ಮತ್ತು ವಿಷಯ ನಿಯಾಮಕ ಸಮಿತಿಯಲ್ಲಿ ಅಧ್ಯಕ್ಷತೆವಹಿಸಿದ್ದು ನನಗೆ ಅತ್ಯಂತ ಹರ್ಷದಾಯಕವಾಗಿದೆ ಎಂದು ನಿಮಗೆ ಭರವಸೆ ನೀಡುತ್ತೇನೆ. ನಾನು ಹೇಳಿದ ಪ್ರತಿಯೊಂದು ಮಾತಿಗೂ ನೀವು ಸಮ್ಮತಿ ನೀಡಿದ್ದೀರಿ. ನಾನು ನಿಮ್ಮ ಮೇಲೆ ಬಹಳ ಭಾರ ಹಾಕಿದ್ದೇನೆ ಎಂಬುದನ್ನು ಬಲ್ಲೆ. ನಿಮ್ಮನ್ನು ನಡೆಯಲೂ ಬಿಟ್ಟಿಲ್ಲ, ಓಡಿಸಿದ್ದೇನೆ, ಏನು ಮಾಡಲಿ? ನಿಮಗೂ ಆತುರ, ನನಗೂ ಆತುರ, ಸ್ವರಾಜ್ಯದ ಗುರಿಯತ್ತ ನಾವು ಮುನ್ನುಗ್ಗಬೇಕು. ಆಮೆ ನಡಿಗೆಯಂತೆ ಹೋದರೆ ಆದೀತೆ? ತುಂಬ ವೇಗವಾಗಿ ಸಾಗಬೇಕು. ನಾವು ಕಷ್ಟಪಟ್ಟು ದುಡಿದು ಮುಂದಕ್ಕೆ ಹೋಗಬೇಕು ಎಂದರೆ ನಿಮ್ಮದಾಗಲೀ ನನ್ನದಾಗಲೀ ಒಂದು ನಿಮಿಷವೂ ಕಾಲಹರಣ ಮಾಡಲಾಗದು. ಆದ್ದರಿಂದ ನನಗೆ ಸಾಮರ್ಥ್ಯವಿದ್ದಷ್ಟೂ ಗತಿ ಕೊಟ್ಟಿದ್ದೇನೆ. ನೀವು ಇಷ್ಟು ಗೌರವದಿಂದ ನನ್ನ ಕರೆಗೆ ಓಗೊಟ್ಟಿರುವದು ನನಗೆ ಹೆಚ್ಚಿನ ಅಚ್ಚರಿ, ತುಂಬ ತೃಪ್ತಿ. ಇದನ್ನು ಕೂಡ ಏನೋ ಶಿಷ್ಟಾಚಾರಕ್ಕೆ ನೀವು ಮಾಡಿಲ್ಲ. ಅದ್ಭುತ ಔದಾರ್ಯ ತೋರಿಸಿದ್ದೀರಿ. ಇದಕ್ಕಿಂತ ಹೆಚ್ಚು ಯಾರೂ ಅಪೇಕ್ಷಿಸಿರಲಾರರು, ಕೇಳಿರಲಾರರು, ಪಡೆದಿರಲಾರರು. ನಾನು ಕೇಳಬಹುದಾದು ದೆಲ್ಲವನ್ನೂ ನೀವು ಕೊಟ್ಟಿದ್ದೀರಿ.

ಆದರೆ ನಾನು ಈಗ ಕೇಳುವುದು ಇದಕ್ಕಿಂತ ಹೆಚ್ಚಿನದು, ಉತ್ತಮ, ಉನ್ನತವಾದದ್ದು. ಅದೆಂದರೆ, ನೀವು ನನಗೆ ತೋರಿದ ಎಲ್ಲ ಪ್ರೀತಿಯನ್ನೂ, ಔದಾರ್ಯವನ್ನೂ ನನಗೂ ನಿಮಗೂ ಅತ್ಯಂತ ಪ್ರಿಯಕರವಾದ ಮತ್ತು ನನ್ನನ್ನು ನಿಮ್ಮನ್ನೂ ಏಕತ್ರ ಬಂಧಿಸುವ ಆ ಸ್ವರಾಜ್ಯಕ್ಕೆ ತೋರಿಸಿರಿ ಎಂದು ಕೇಳಿಕೊಳ್ಳುತ್ತೇನೆ, ಸ್ವರಾಜ್ಯ ಬೇಕಾಗಿದ್ದರೆ ನಾವು ಸ್ವರಾಜ್ಯದ ನಿಯಮಗಳನ್ನು ಅರಿತುಕೊಳ್ಳಬೇಕು. ಠರಾವಿನಲ್ಲಿ ಇರುವ ಎಲ್ಲ ನಿಯಮಗಳನ್ನೂ ನೀವು ಒಪ್ಪಿದ್ದೀರಿ. ಆ ನಿಯಮಗಳೇನು ಎಂಬುದು ಎಲ್ಲರಿಗೂ ಗೊತ್ತಿದೆ. ಈ ನಿಯಮಗಳನ್ನು ಇಲ್ಲಿಯೇ ಬಿಡಬೇಡಿರಿ. ನಿಮ್ಮ ಜೊತೆಯಲ್ಲಿ ಅವನ್ನು ಒಯ್ಯಿರಿ. ಅವನ್ನು ತತ್ವಶಃ, ಅಕ್ಷರಶಃ ಪಾಲಿಸಿರಿ. ಇತರರೂ ಕೂಡ ಪಾಲಿಸುವಂತೆ ಒತ್ತಾಯ ಪಡಿಸಿರಿ. ಬಲಾತ್ಕಾರದಿಂದಲ್ಲ, ಪ್ರೇಮದಿಂದ. ಪ್ರೇಮ ಎಷ್ಟು ಒತ್ತಾಯ ಮಾಡಬಹುದೋ, ಎಷ್ಟು ಪ್ರಭಾವ ಬೀರುವದೋ ನಿಮ್ಮ ಸುತ್ತು ಮುತ್ತಲಿನವರ ಮೇಲೆ, ನೆರೆಹೊರೆಯವರ ಮೇಲೆ ಅಷ್ಟನ್ನು ಬೀರಿ. ನಿಮ್ಮ ನಿಮ್ಮ ಜಿಲ್ಲೆಯಲ್ಲಿ ಎಲ್ಲಾ ಕಡೆಗೆ ಸಂಚರಿಸಿ, ಖಾದಿಯ ಸಂದೇಶವನ್ನು, ಹಿಂದೂ ಮುಸ್ಲಿಂ ಏಕತೆಯ ಸಂದೇಶವನ್ನು, ಅಸ್ಪೃಶ್ಯತೆ ತೊಡೆದು ಹಾಕುವ ಸಂದೇಶವನ್ನು ಹರಡಿರಿ. ನಾಡಿನ ಯುವಕರ ಜೊತೆಗೆ ಕೈ ಹಿಡಿದು ಹೊರಡಿರಿ. ಅವರನ್ನು ನಿಜವಾದ ಸ್ವರಾಜ್ಯ ಸೈನಿಕರನ್ನಾಗಿ ಮಾಡಿರಿ.

ಆದರೆ ಸ್ವರಾಜ್ಯವಾದಿಗಳು, ಅಪರಿವರ್ತನವಾದಿಗಳು ಪರಸ್ಪರ ಅಸೂಯೆ ಪಟ್ಟರೆ ಇದನ್ನು ಮಾಡಲಾರಿರಿ. ದ್ವೇಷವನ್ನು ಸಂಪೂರ್ಣವಾಗಿ ನಾಶಮಾಡಿ, ಸಿಟ್ಟು, ಹೊಟ್ಟೆಉರಿಗಳನ್ನು ಪೂರ್ಣವಾಗಿ ಕೈಬಿಟ್ಟು, ದುಷ್ಟ ಪ್ರಭಾವಗಳನ್ನೆಲ್ಲ ಈಗ ಇಲ್ಲಿಯೇ ಬಿಟ್ಟರೆ ಅದು ಸಾಧ್ಯವಾಗುತ್ತದೆ. ನಿಮ್ಮ ದ್ವೇಷವನ್ನು ಆಳವಾಗಿ ಹೂತುಬಿಡಿರಿ. ಅಸೂಯೆಯನ್ನು ಭೂಗರ್ಭದಲ್ಲಿ ಹೂತುಬಿಡಿರಿ. ಅವನ್ನೆಲ್ಲ ಸಿಕ್ಕಲ್ಲಿ ಸುಟ್ಟುಬಿಡಿರಿ. ಆದರೆ ನೀವು ತೀರ್ಮಾನಿಸಿರುವ ಈ ಪವಿತ್ರ ನಿರ್ಧಾರವನ್ನು ಜೊತೆಗೆ ತೆಗೆದುಕೊಂಡು ಹೋಗಿರಿ. ಬಂದದ್ದೆಲ್ಲ ಬರಲಿ. ಇವತ್ತು ಸ್ವರಾಜ್ಯವಾದಿಗಳನ್ನೂ ಅಪರಿವರ್ತನವಾದಿಗಳನ್ನೂ, ಈ ಗೊತ್ತುವಳಿಗಳ ಸೂತ್ರವು ಬಂಧಿಸಿದ್ದು, ಈ ಬಂಧನ ಎಂದಿಗೂ ಕತ್ತರಿಸದಿರಲಿ. ನನ್ನ ಕೆಲಸ ಮುಗಿಯಿತು.

ವೇದಿಕೆಯಿಂದ ಇಳಿಯುವಾಗ ಸ್ವಾಗತ ಸಮಿತಿಗೆ ಧನ್ಯವಾದ ಕೊಡುವ ನೆನಪಾಗಿ, ಅಧ್ಯಕ್ಷರು ಮತ್ತೆ ಗದ್ದಿಗೆಗೆ ಬಂದು ಹೀಗೆ ಹೇಳಿದರು:

ಡಾ॥ ಹರ್ಡೀಕರರು ತರಬೇತುಮಾಡಿದ ಈ ಸ್ವಯಂ ಸೇವಕರಿಗೆ ಧನ್ಯವಾದಗಳನ್ನು ಅರ್ಪಿಸದೇ ಇದ್ದರೆ, ಸ್ವಾಗತ ಸಮಿತಿಗೆ ಧನ್ಯವಾದ ಅರ್ಪಿಸದೇ ಇದ್ದರೆ, ನನ್ನನ್ನು ನಾನು ಕ್ಷಮಿಸಿಕೊಳ್ಳಲು ಆಗುತ್ತಿದ್ದಿಲ್ಲ. ಸ್ವರಾಜ್ಯದ ಹುಚ್ಚಿನಿಂದಾಗಿ ಸ್ವಯಂ ಸೇವಕರನ್ನೂ, ಸ್ವಾಗತ ಸಮಿತಿಯನ್ನೂ ಮರೆತೇಬಿಟ್ಟೆ.

ಈ ಧನ್ಯವಾದಗಳಿಗಾಗಿ ಅವರು ಸೇವೆಮಾಡಿಲ್ಲ ಎಂಬುದನ್ನು ಬಲ್ಲೆ. ಅವರು ಮಾಡಿದ ಉನ್ನತ ಸೇವೆಯೇ ಅದಕ್ಕೆ ಪ್ರತಿಫಲ. ಆದರೆ ಅದು ನನ್ನ ಹೊಣೆ ನಿಮ್ಮನ್ನೂ ಎಲ್ಲರನ್ನೂ ವಂದಿಸದೇ ಇದ್ದರೆ ನನ್ನದು ಕರ್ತವ್ಯ ಲೋಪವಾಗುತ್ತಿತ್ತು. ಸ್ವಯಂ ಸೇವಕರನ್ನೂ ಸ್ವಾಗತ ಸಮಿತಿಯ ಸದಸ್ಯರನ್ನೂ ದೇವರು ಆಶೀರ್ವದಿಸಲಿ.

* * *

ಅಧಿವೇಶನ ಎರಡು ದಿನ ನಡೆಯಿತು. ಬೆಳಗಾವಿಯಲ್ಲಿ ಕಾಂಗ್ರೆಸ್ಸಿನಲ್ಲಿ ಮುಖ್ಯವಾಗಿ ಆದದ್ದು ಅಪರಿವರ್ತನವಾದಿಗಳಿಗೂ, ಪರಿವರ್ತನವಾದಿಗಳಿಗೂ ನಡೆದ ಒಂದು ಒಪ್ಪಂದ. ಗಾಂಧೀಜಿಗೂ ಸ್ವರಾಜ್ಯ ಪಕ್ಷದ ಮುಖಂಡರಿಗೂ, ಆಗಿದ್ದ ಒಪ್ಪಂದವನ್ನು ಕಾಂಗ್ರೆಸ್ಸು ಒಪ್ಪಿಕೊಂಡಿತು. ಗಾಂಧೀಜಿಯ ರಚನಾತ್ಮಕ ಕಾರ್ಯಕ್ಕೆ ತಮ್ಮ ಇಡೀ ಸಮಯವನ್ನು ಕೊಡಲು ಅಪರಿವರ್ತನವಾದಿಗಳೆಲ್ಲರೂ ಒಪ್ಪಿಕೊಂಡರು. ಕೊನೆಯ ದಿನ ಗಾಂಧೀಜಿ ಉಪಸಂಹಾರ ಭಾಷಣದಿಂದ ಅಧಿವೇಶನವನ್ನು ಮುಕ್ತಾಯಗೊಳಿಸಿದರು.

**ಅಸ್ಪೃಶ್ಯತಾ ನಿವಾರಣೆಯ ಸಮ್ಮೇಳನದಲ್ಲಿ ಗಾಂಧೀಜಿಯ ಭಾಷಣ.**
**ಬೆಳಗಾಂವಿ ಕಾಂಗ್ರೆಸ್ಸು (೨೭-೧೨-೧೯೨೪)**

*ಗೆಳೆಯರೇ,*

ಅಸ್ಪೃಶ್ಯತಾ ನಿವಾರಣೆಯ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ತಿಳಿಸಲು ಕೇಳುವ ಅಗತ್ಯ ಇರಲಿಲ್ಲ. ಎಷ್ಟೋ ಸಲ ಎಷ್ಟೋ ಸಾರ್ವಜನಿಕ ವೇದಿಕೆಗಳಿಂದ ನಾನು ಹೇಳಿದ್ದೇನೆ.

– ಇದೇ ಜನ್ಮದಲ್ಲಿ ನನಗೆ ಮೋಕ್ಷ ಸಿಗದಿದ್ದರೆ, ಮುಂದಿನದರಲ್ಲಿ ನಾನು ಭಂಗಿಯಾಗಿಯೇ ಹುಟ್ಟಬೇಕು ಎಂಬುದು ನನ್ನ ಪ್ರಾರ್ಥನೆ ಎಂದು. ಜನ್ಮತಃ ಕರ್ಮತಃ ವರ್ಣಾಶ್ರಮದಲ್ಲಿ ನನಗೆ ನಂಬಿಕೆ ಇದೆ. ಆದರೆ ಭಂಗಿ ತುಚ್ಛ, ಕೀಳು ಎಂದು ನಾನು ತಿಳಿಯುವದಿಲ್ಲ. ಇಷ್ಟೇ ಅಲ್ಲ, ಎಷ್ಟೋ ಜನ ಭಂಗಿಗಳು ಗೌರವಪಾತ್ರರೆಂಬುದನ್ನು ನಾನು ಬಲ್ಲೆ. ಎಷ್ಟೋ ಜನ ಗೌರವಾರ್ಹರಲ್ಲದ ಬ್ರಾಹ್ಮಣರೂ ಇದ್ದಾರೆ. ಈ ಅಭಿಪ್ರಾಯವಿರುವ ನನಗೆ ಮುಂದಿನ ಜನ್ಮ ಎಂಬುದೊಂದಿದ್ದರೆ ಅಂತ್ಯಜರ ನಡುವೆ ಅಂತ್ಯಜನಾಗಿಯೇ ಹುಟ್ಟಬೇಕೆಂದು ನಾನು ಬಯಸುತ್ತೇನೆ. ಹಾಗಾದರೆ ಅವರಿಗೆ ನನ್ನಿಂದ ಪರಿಣಾಮಕಾರಿ ಸೇವೆ ಸಲ್ಲಬಲ್ಲದು. ಅಲ್ಲದೆ, ಇತರ ಜಾತಿಗಳವರೊಂದಿಗೆ ಅಸ್ಪೃಶ್ಯರ ಪರವಾಗಿ ವಾದಿಸಲು ಹೆಚ್ಚಿನ ಅಧಿಕಾರ ಬರುತ್ತದೆ.

ಆದರೆ ಸವರ್ಣರು ಹೇಗೆ ಈ ಅವರ್ಣರನ್ನು ತಿರಸ್ಕರಿಸಬಾರದು ಎನ್ನುತ್ತೇನೋ ಹಾಗೆಯೇ ಅವರ್ಣರು ಸವರ್ಣರ ವಿಷಯದಲ್ಲಿ ದ್ವೇಷ, ವಿರಸ ತೋರಬಾರದು ಎನ್ನುತ್ತೇನೆ. ಪಾಶ್ಚಾತ್ಯರಂತೆ ಅವರು ಹಿಂಸಾಮೂಲಕ ತಮ್ಮ ಹಕ್ಕುಗಳನ್ನು ಕಸಿಯಬೇಕು ಎಂದು ನಾನು ಹೇಳಲಾರೆ. ಈಗ ಜಾಗತಿಕ ಅಭಿಪ್ರಾಯದ ಒಲವು ಈ ಬಗೆಯ ಹಿಂಸೆಗೆ ವಿರುದ್ಧವಾಗಿದೆ. ಜಗತ್ತಿನಲ್ಲಿ ಯಾರೂ ಯಾವುದನ್ನೂ ಹಿಂಸೆಯಿಂದ ಸಾಧಿಸಿಕೊಳ್ಳಲಾರರು ಎಂಬುದನ್ನು ನಾನು ಸ್ಪಷ್ಟ ಕಾಣುತ್ತೇನೆ. ಆದ್ದರಿಂದ ನನ್ನ ಅಂತ್ಯಜ ಸೋದರರಿಗೂ, ಸರಕಾರಕ್ಕೂ ಹೇಳುತ್ತೇನೆ, – ತಮ್ಮ ಉದ್ದೇಶ ಸಾಧನೆಗಾಗಿ ಹಿಂಸೆಯನ್ನು ಅವಲಂಬಿಸಿದರೆ ಖಂಡಿತವಾಗಿಯೂ ಅವರು ವಿಫಲರಾಗುತ್ತಾರೆ. ಹಿಂದೂ ಧರ್ಮವನ್ನು ಮೇಲಕ್ಕೆತ್ತಬಯಸುತ್ತೇನೆ. ಅಸ್ಪೃಶ್ಯರು ಹಿಂದೂ ಸಮಾಜದ ಅವಿಭಾಜ್ಯ ಅಂಗವೆಂದು ನಾನು ಪರಿಗಣಿಸುತ್ತೇನೆ. ಹಿಂದೂ ಧರ್ಮದಿಂದ ಒಬ್ಬನೇ ಒಬ್ಬ ಭಂಗಿಯನ್ನು ಹೊರತಳ್ಳಿದರೂ ನನಗೆ ನೋವಾಗುತ್ತದೆ. ಆದರೆ ಎಲ್ಲ ವರ್ಗ ಭೇದಗಳೂ ಅಳಿದು ಹೋಗುತ್ತವೆ ಎಂದು ನಂಬಬೇಡಿರಿ. ಗೀತೆಯಲ್ಲಿ ಭಗವಾನ್ ಕೃಷ್ಣನು ಬೋಧಿಸಿದ ಸರ್ವಸಮಾನತೆಯ ಸಿದ್ಧಾಂತದಲ್ಲಿ ನನಗೆ ನಂಬುಗೆ. ನಾಲ್ಕು ವರ್ಣಗಳನ್ನೂ ಸಮತೆಯಿಂದ ಕಾಣಬೇಕು ಎಂದು ಗೀತೆ ಬೋಧಿಸುತ್ತದೆ. ಬ್ರಾಹ್ಮಣರಿಗೂ, ಭಂಗಿಗೂ ಒಂದೇ ಬಗೆಯ ಧರ್ಮವನ್ನು ಅದು ಉಪದೇಶಿಸುವದಿಲ್ಲ. ಆದರೆ ಬ್ರಾಹ್ಮಣನಿಗೆ ತೋರಿವಷ್ಟೇ ಗೌರವಗಳನ್ನು ಭಂಗಿಗೂ ತೋರಿಸಬೇಕು ಎಂದು ಒತ್ತಾಯಮಾಡುತ್ತದೆ. ಆದ್ದರಿಂದ ತಮ್ಮನ್ನು ಕೀಳಾಗಿ ನೀಚವಾಗಿ ಕಾಣುತ್ತಾರೆಂದು ಅಸ್ಪೃಶ್ಯರಿಗೆ ಅನಿಸದಂತೆ ನೋಡಿಕೊಳ್ಳುವದು ನಮ್ಮ ಕರ್ತವ್ಯ. ನಮ್ಮ ಎಂಜಲೆಲೆಯಲ್ಲಿ ಉಳಿದದ್ದನ್ನು ಅವರ ಹೊಟ್ಟೆಯಪಾಡಿಗಾಗಿ ಕೊಡುವುದೂ ಬೇಡ. ನಾನು ಪೂಜಿಸುವ ದೇವರನ್ನೇ ಪೂಜಿಸಿ, ತನ್ನ ದೇಹವನ್ನೂ ಆತ್ಮವನ್ನೂ ಪರಿಶುದ್ಧವಾಗಿ ಸ್ವಚ್ಛವಾಗಿ ಇಟ್ಟುಕೊಳ್ಳುವವನು ಬ್ರಾಹ್ಮಣನೇ ಇರಲಿ, ಭಂಗಿಯೇ ಇರಲಿ, ನಾನು ಹೇಗೆ ಭೇದಭಾವದಿಂದ ನಡೆಸಿಕೊಳ್ಳಲಿ? ಭಂಗಿಗೆ ಭೋಜನಶೇಷದ ಅಶುದ್ಧ ಆಹಾರವನ್ನು ಕೊಟ್ಟರೆ, ಅಥವಾ ಅವನಿಗೆ ಅಗತ್ಯವಿದ್ದಾಗ ವೈಯಕ್ತಿಕ ಸಹಾಯವನ್ನು ನೀಡದೇ ಹೋದರೆ ನಾನು ಪಾಪಮಾಡಿದೆನೆಂದೇ ನನ್ನ ಭಾವನೆ.

ನನ್ನ ನಿಲುವನ್ನು ನಾನು ಇನ್ನೂ ಹೆಚ್ಚು ಸ್ಪಷ್ಟಪಡಿಸುತ್ತೇನೆ. ಇವತ್ತು ರೂಢಿಯಲ್ಲಿರುವ ಅಸ್ಪೃಶ್ಯತೆಯ ವ್ಯವಸ್ಥೆಗೆ ಹಿಂದೂ ಧರ್ಮದಲ್ಲಿ ಆಧಾರವಿಲ್ಲ ಎಂದು ನನ್ನ ಅಭಿಪ್ರಾಯವಾದರೂ

ಕೆಲ ಕೆಲವು ಪರಿಸ್ಥಿತಿಯಲ್ಲಿ ಒಂದು ಪರಿಮಿತ ಅರ್ಥದಲ್ಲಿ ಅಸ್ಪೃಶ್ಯತೆಯನ್ನು ಹಿಂದೂ ಧರ್ಮ ಒಪ್ಪುತ್ತದೆ. ಉದಾಹರಣೆಗೆ, ಹೊಲಸು ಪದಾರ್ಥಗಳನ್ನು ಮುಟ್ಟಿದ ಸಲ ಸಲಕ್ಕೂ ನಮ್ಮ ತಾಯಿ ಅಸ್ಪೃಶ್ಯಳಾಗುತ್ತಾಳೆ. ಅದು ತತ್ಕಾಲ ಮಾತ್ರ. ಆಕೆ ಸ್ನಾನಮಾಡಿದ ಮೇಲೆಯೇ ಶುಚಿಯಾಗುತ್ತಾಳೆ. ನಾನು ವೈಷ್ಣವನಾದ್ದರಿಂದಲೇ ಜನ್ಮತಃ ಯಾರೂ ಅಸ್ಪೃಶ್ಯರು ಎಂದು ನಾನು ನಂಬುವದಿಲ್ಲ. ಧರ್ಮದಲ್ಲಿ ಹೇಳುವ ಅಸ್ಪೃಶ್ಯತೆ ಸ್ವಾಭಾವಿಕವಾಗಿ ಬಹಳ ತಾತ್ಕಾಲಿಕ. ಆದ್ದರಿಂದ ಅದನ್ನು ಸುಲಭವಾಗಿ ನಿವಾರಿಸಬಹುದು. ಆ ಅಸ್ಪೃಶ್ಯತೆಯು ಆ ಕೆಲಸಕ್ಕೆ ಸಂಬಂಧಿಸಿದ್ದೇ ವಿನಃ ಕೆಲಸ ಮಾಡುವವನಿಗಲ್ಲ. ಅಷ್ಟೇ ಅಲ್ಲ, ನಾವು ಎಳೆಯ ಮಕ್ಕಳಾಗಿದ್ದಾಗ ನಮ್ಮ ತಾಯಿ ನಮ್ಮನ್ನು ತೊಳೆದು ಮಾಡಿದ ಸ್ವಚ್ಛತೆಯ ಸೇವೆಗಾಗಿ ಆಕೆಯನ್ನು ಹೇಗೆ ಪೂಜಿಸುತ್ತೇವೋ, ಮತ್ತು ಆಕೆ ಇನ್ನೂ ಹೆಚ್ಚು ಹೆಚ್ಚು ಸೇವೆ ಮಾಡಿದರೆ ಹೇಗೆ ಪೂಜ್ಯಭಾವ ಇನ್ನೂ ಹೆಚ್ಚುತ್ತದೆಯೋ ಹಾಗೆ ಭಂಗಿಗಳೂ ಕೂಡ ಸಮಾಜಕ್ಕಾಗಿ ಅವರು ಮಾಡುವ ಸ್ವಚ್ಛತೆಯ ಕೆಲಸದಿಂದ ಗೌರವ ಪಾತ್ರರಾಗಬೇಕು.

ಈಗ ಇನ್ನೊಂದು ವಿಷಯ. ಸಹಭೋಜನ, ಅಂತರ್‌ಜಾತೀಯ ವಿವಾಹ ಅಸ್ಪೃಶ್ಯತಾ ನಿವಾರಣೆಗೆ ಮುಖ್ಯ ಎಂದು ನಾನು ತಿಳಿದಿಲ್ಲ. ವರ್ಣಾಶ್ರಮ ಧರ್ಮದಲ್ಲಿ ನನಗೆ ನಂಬಿಕೆ ಇದೆ. ಆದರೆ ಭಂಗಿಗಳೊಂದಿಗೆ ನಾನು ಊಟಮಾಡುತ್ತೇನೆ. ನಾನು ಸನ್ಯಾಸಿ ಹೌದೋ ಅಲ್ಲವೋ ನನಗೆ ಗೊತ್ತಿಲ್ಲ. ಏಕೆಂದರೆ ಈ ಕಲಿಯುಗದಲ್ಲಿ ಸನ್ಯಾಸದ ನಿಯಮಗಳನ್ನು ಯಾರಿಗೆ ಆಗಲಿ ಪಾಲಿಸಲು ಸಾಧ್ಯವೋ ಅಲ್ಲವೋ ನನಗೆ ಸಂದೇಹ. ಆದರೆ ಸನ್ಯಾಸದ ಕಡೆ ನಾನು ಉದ್ದೇಶಪೂರ್ವಕ ಹೋಗುತ್ತಿದ್ದೇನೆ. ಆದ್ದರಿಂದ ಈ ಆಚಾರಗಳು ನನಗೆ ಅಗತ್ಯ ಇಲ್ಲ ಇಷ್ಟೇ ಅಲ್ಲ, ಅವುಗಳ ಆಚರಣೆಯಿಂದ ನನಗೆ ಕೆಡುಕೂ ಆಗಬಹುದು. ಅಂತರ್ಜಾತೀಯ ವಿವಾಹದ ಪ್ರಶ್ನೆ ನನ್ನಂಥವರ ವಿಷಯದಲ್ಲಿ ಉದ್ಭವಿಸುವದೂ ಇಲ್ಲ. ನನ್ನ ಯೋಜನೆಯಲ್ಲಿ ಅಂತರ್ಜಾತೀಯ ವಿವಾಹ ಸದ್ಯಕ್ಕಿಲ್ಲ. ನಮ್ಮ ವೈಷ್ಣವ ಪಂಗಡದಲ್ಲಿ ವೈಷ್ಣವರೆಲ್ಲ ಸಹಭೋಜನ ಮಾಡಬೇಕೆನ್ನುವ ಸಂಪ್ರದಾಯವಿಲ್ಲ. ವೈಷ್ಣವ ಕುಟುಂಬದಲ್ಲಿ ಒಬ್ಬರು ಊಟಮಾಡಿದ ಪಾತ್ರೆಯನ್ನು ಇನ್ನೊಬ್ಬರು ಬಳಸುವದಿಲ್ಲ; ಅಲ್ಲದೆ ಇನ್ನೊಬ್ಬರ ಅಡಿಗೆ ಮನೆಯಿಂದ ತಂದ ಬೆಂಕಿಯನ್ನು ಸಹ ಅಡಿಗೆ ಮಾಡಲು ಉಪಯೋಗಿಸುವ ಪದ್ಧತಿ ಇಲ್ಲ. ಇದನ್ನು ಕುರುಡು ಸಂಪ್ರದಾಯ ಎಂದೀರಿ. ನಾನು ಹಾಗೆ ಅನ್ನುವದಿಲ್ಲ. ಅದರಿಂದ ಹಿಂದೂ ಧರ್ಮಕ್ಕೆ ಹಾನಿ ಇಲ್ಲ. ನನ್ನ ಆಶ್ರಮದಲ್ಲಿ ದೂಧಾಭಾಯಿ ಒಬ್ಬ ಅಸ್ಪೃಶ್ಯ ನಿವಾಸಿ. ಎಲ್ಲರ ಜತೆಯಲ್ಲೂ ಯಾವ ತಾರತಮ್ಯ ಇಲ್ಲದೇ ಊಟ ಮಾಡುತ್ತಾನೆ. ಆಶ್ರಮದ ಹೊರಗಡೆ ಇದೇ ರೀತಿ ಮಾಡಿರಿ ಎಂದು ಯಾರಿಗೂ ನಾನು ಹೇಳುವದಿಲ್ಲ. ಪಂಡಿತ ಮಾಲವಿಯರನ್ನು ಕಂಡರೆ ನನಗೆ ಎಷ್ಟು ಗೌರವ ಎಂಬುದನ್ನು ನೀವು ಬಲ್ಲಿರಿ. ಅವರ ಕಾಲನ್ನು ತೊಳೆಯುತ್ತೇನೆ. ಆದರೆ ನಾನು ಮುಟ್ಟಿದ ಅನ್ನವನ್ನು ಅವರು ತಿನ್ನುವದಿಲ್ಲ. ಇದನ್ನು ತಿರಸ್ಕಾರ ಎಂದು, ಹೀನಾಯ ಎಂದು ಮುನಿದುಕೊಳ್ಳಲೇ? ಖಂಡಿತ ಇಲ್ಲ. ಅವರ ಮನಸ್ಸಿನಲ್ಲಿ ಆ ಬಗೆಯ ತಿರಸ್ಕಾರವೂ ಇಲ್ಲ ಎಂದು ನಾನು ಬಲ್ಲೆ. ನನ್ನ ಮತ, ಮರ್ಯಾದಾ ಧರ್ಮವನ್ನು ವಿಧಿಸುತ್ತದೆ. ಹಿಂದಿನ ಋಷಿಗಳು ಧ್ಯಾನದಲ್ಲಿ ಕುಳಿತು ವಿಸ್ತಾರವಾಗಿ

ಪರಿಶೋಧನ ಮಾಡಿದ್ದಾರೆ. ಆ ಪರಿಶೋಧನಗಳ ಫಲವಾಗಿ ಕೆಲವು ಮಹಾನ್ ಸತ್ಯಗಳನ್ನು ಕಂಡುಹಿಡಿದಿದ್ದಾರೆ. ಬಹುಶಃ ಅವಕ್ಕೆ ಸಾಟಿಯಾದವು ಬೇರೆ ಯಾವ ಧರ್ಮದಲ್ಲಿಯೂ ಇಲ್ಲ. ಅವುಗಳಲ್ಲಿ ಒಂದು ಸತ್ಯ. ಮನುಷ್ಯನ ಅಧ್ಯಾತ್ಮಿಕ ಯೋಗಕ್ಷೇಮಕ್ಕೆ ಕೆಲವು ಬಗೆಯ ಆಹಾರ ಬಾಧಕ ಎಂಬುದು. ಆದರಿಂದ ಅವುಗಳ ಸೇವನೆಯನ್ನು ನಿಷೇಧಿಸಿದರು. ಯಾರಾದರೂ ಒಬ್ಬ ಪರದೇಶಗಳಿಗೆ ಪ್ರವಾಸ ಹೋಗಿ, ಬೇರೆ ಸಂಪ್ರದಾಯ ಬೇರೆ ಆಹಾರ ಪದ್ಧತಿ ಇರುವ ವಿಚಿತ್ರ ಜನರ ನಡುವೆ ಇರಬೇಕಾಯಿತು ಎನ್ನಿ. ನಾವು ಯಾರ ನಡುವೆ ಬದುಕುತ್ತೇವೋ ಅಂಥ ಜನರ ಸಾಮಾಜಿಕ ಸಂಪ್ರದಾಯಗಳ ಪ್ರಧಾನ ಒತ್ತಡವನ್ನು ಗಮನಿಸಿ ಅಂಥ ಪರಿಸ್ಥಿತಿಯಲ್ಲಿ ನೆರವು ನೀಡುವಂತೆ ಒಂದು ಮರ್ಯಾದಾ ಧರ್ಮವನ್ನು ನಮ್ಮವರು ಕಲ್ಪಿಸಿದರು. ಈ ಮರ್ಯಾದಾ ಧರ್ಮದಲ್ಲಿ ನಾನು ವಿಶ್ವಾಸವಿಟ್ಟಾಗ್ಯೂ ಅದು ಹಿಂದೂ ಧರ್ಮದ ಅನಿವಾರ್ಯ ಅಂಗ ಎಂದು ನಾನು ಮನ್ನಿಸುವದಿಲ್ಲ. ಈ ಪರಿಮಿತಿಗಳನ್ನು ನಿಸ್ಸಂಕೋಚವಾಗಿ ಪೂರ್ಣ ತೆಗೆದುಹಾಕುವ ಸಂದರ್ಭವನ್ನೂ ನಾನು ಊಹಿಸಿಕೊಳ್ಳಬಲ್ಲೆ. ಆದರೆ ಅಸ್ಪೃಶ್ಯತಾ ನಿವಾರಣಾ ಚಳವಳಿಯಲ್ಲಿ ಅಂತರ್ಜಾತೀಯ ಭೋಜನ. ಅಂತರ್ಜಾತೀಯ ವಿವಾಹಗಳ ನಿರ್ಬಂಧಗಳನ್ನು ತೊಡೆದುಹಾಕುವ ಯೋಚನೆ ಇಲ್ಲ. ಈ ನಿಷೇಧಗಳನ್ನು ಪೂರ್ಣ ತೆಗೆದುಹಾಕಿಬಿಡಿ ಎಂದು ನಾನು ಸಾರ್ವಜನಿಕರಿಗೆ ಹೇಳಲಾರೆ. ಇದಕ್ಕಾಗಿ ನನ್ನನ್ನು ವಂಚಕ, ಅಸಂಗತ ವ್ಯಕ್ತಿ ಎಂದರೂ ಚಿಂತೆ ಇಲ್ಲ. ಉದಾಹರಣೆಗೆ, ನನ್ನ ಮಗನನ್ನು ಮುಸಲ್ಮಾನ ಮನೆಗಳಲ್ಲಿ ಧಾರಾಳವಾಗಿ ಊಟ ಮಾಡಗೊಡುತ್ತೇನೆ. ಏಕೆಂದರೆ ಏನು ತಿನ್ನಬೇಕು, ಏನು ತಿನ್ನಬಾರದು ಇದನ್ನು ಅವನು ಸಾಕಷ್ಟು ಮಟ್ಟಿಗೆ ವಿವೇಚಿಸಬಲ್ಲ. ನನ್ನ ಮಟ್ಟಿಗೆ ನಾನು ಮುಸಲ್ಮಾನರ ಮನೆಗಳಲ್ಲಿ ಊಟಮಾಡಲು ಸಂಕೋಚ ಪಡುವದಿಲ್ಲ. ಎಂದರೆ ನನ್ನ ಆಹಾರದ ಬಗ್ಗೆ ಕೆಲವು ಕಟ್ಟು ನಿಟ್ಟಾದ ನಿಯಮಗಳನ್ನು ಇಟ್ಟುಕೊಂಡಿದ್ದೇನೆ. ಅಲ್ಲಿಗಡದಲ್ಲಿ ನಡೆದ ಒಂದು ಸಂಗತಿ ಹೇಳುತ್ತೇನೆ. ಸ್ವಾಮಿ ಸತ್ಯದೇವರೂ. ನಾನೂ. ಖ್ವಾಜಾ ಸಾಹೇಬರ ಅತಿಥಿಗಳಾಗಿದ್ದೆವು. ನನ್ನ ಅಭಿಪ್ರಾಯಗಳಂತೆ ಸ್ವಾಮಿ ಸತ್ಯದೇವರ ಅಭಿಪ್ರಾಯಗಳು ಇರಲಿಲ್ಲ. ಈ ಬಗ್ಗೆ ಇಬ್ಬರಿಗೂ ವಾದವಾಯಿತು. ನನ್ನ ಅಭಿಪ್ರಾಯಗಳಂತೆ ಮುಸಲ್ಮಾನ ಕೊಟ್ಟ ಆಹಾರವನ್ನು ನಿರಾಕರಿಸುವುದು ತಪ್ಪು. ಅದೇ ಬಗೆಯಾಗಿ ನೀವು ನಿಮ್ಮ ಮರ್ಯಾದಾ ಧರ್ಮವನ್ನು ಮೀರಿ ನಡೆಯುವದು ನಿಮ್ಮ ಮಟ್ಟಿಗೆ ತಪ್ಪು. ಆದ್ದರಿಂದ ಸ್ವಾಮಿ ಸತ್ಯದೇವರಿಗೆ ಪ್ರತ್ಯೇಕ ಅಡಿಗೆಯ ವ್ಯವಸ್ಥೆ ಆಯಿತು. ಬಾರೀ ಸಾಹೇಬರ ಅತಿಥಿಯಾಗಿದ್ದಾಗಲೂ ಅಷ್ಟೇ. ಒಬ್ಬ ಬ್ರಾಹ್ಮಣ ಪರಿಚಾರಕನನ್ನು ಕರೆಸಿ. ಎಲ್ಲ ಪದಾರ್ಥಗಳನ್ನು ಅಂಗಡಿಯಿಂದ ಹೊಸದಾಗಿ ತರಬೇಕೆಂದು ಕಟ್ಟುನಿಟ್ಟಾಗಿ ಅಪ್ಪಣೆಯಾಯಿತು. ಇಷ್ಟೇಕೆ ಕಷ್ಟ ತೆಗೆದುಕೊಂಡಿರಿ ಎಂದು ಕೇಳಿದಾಗ. ತಾನು ಏನೋ ಗುಟ್ಟಾಗಿ ನನ್ನನ್ನೂ. ನನ್ನ ಜತೆಗಾರರನ್ನೂ ಪರಿವರ್ತನೆಮಾಡಲು ಉಪಾಯ ಮಾಡಿದ್ದಾನೆ ಎಂದು ಸಾರ್ವಜನಿಕರು ಸ್ವಲ್ಪವೂ ಸಂದೇಹ ಪಡದಿರಲಿ ಎಂದು ಇಷ್ಟೆಲ್ಲ ಮಾಡಿದೆ ಎಂಬುದಾಗಿ ಬಾರೀ ಸಾಹೇಬರು ಹೇಳಿದರು. ಈ ಒಂದೇ ಸಂಗತಿ ನನಗೆ ಬಾರೀ ಸಾಹೇಬರಲ್ಲಿ ಇದ್ದ ಗೌರವ ಹೆಚ್ಚಿಸಿದ್ದು. ಕೆಲವು ವೇಳೆ ಅವರು ತಪ್ಪು ಮಾಡುತ್ತಾರೆ. ಆದರೆ ಅವರ ಸ್ವಭಾವ ಮಗುವಿನ ಹಾಗೆ ಸರಳ. ಮತ್ತು ಮುಗ್ಧ ಕೆಲವು

ವೇಳೆ ಜನರು ಅವರ ವಿಷಯವಾಗಿ ಎಷ್ಟೋ ಕಟುವಾಗಿ ದೂರುತ್ತಾರೆ. ಆದರೆ ನನಗೆ ಅವರ ಬಗೆಗಿದ್ದ ಮೊದಲಿನ ಅಭಿಪ್ರಾಯವೇ ಸ್ಥಿರವಾಗಿದೆ.

ಈ ವಿಷಯವಾಗಿ ಬಹಳ ದೀರ್ಘವಾಗಿ ಹೇಳಿದ್ದೇನೆ. ನಿಮ್ಮ ಸಂಗಡ (ಅಸ್ಪೃಶ್ಯರು) ಪೂರಾ ಸ್ಪಷ್ಟವಾಗಿ ಇರಬಯಸುತ್ತೇನೆ. ನಿಮ್ಮ ಸಂಗಡ ವ್ಯವಹಾರವಲ್ಲಿ ಯಾವುದೇ ಬಗೆಯ ಧೂರ್ತವರ್ತನೆಯನ್ನು ಅನುಸರಿಸ ಬಯಸುವದಿಲ್ಲ. ಅದೇಕೆ, ಯಾರೊಂದಿಗೂ ಅಂಥ ವರ್ತನೆ ಇಲ್ಲ. ನಿಮಗೆ ನಾನು ಯಾವ ಸುಳ್ಳು ಕಲ್ಪನೆಯನ್ನೂ ಕೊಡುವದಿಲ್ಲ. ಪ್ರಲೋಭನ ತೋರಿಸಿ ನಿಮ್ಮ ಬೆಂಬಲ ಪಡೆಯುವದಿಲ್ಲ. ಸ್ವರಾಜ್ಯ ಪ್ರಾಪ್ತಿಗೆ ಅಸ್ಪೃಶ್ಯತಾ ನಿವಾರಣೆ ಅತ್ಯಗತ್ಯ. ನನಗೆ ಸ್ವರಾಜ್ಯ ಬೇಕು. ಆದ್ದರಿಂದ ಅಸ್ಪೃಶ್ಯತೆಯನ್ನು ನಿವಾರಿಸಬಯಸುತ್ತೇನೆ. ನನ್ನ ಯಾವುದೇ ರಾಜಕೀಯ ಲಾಭಕ್ಕಾಗಿ ನಿಮ್ಮನ್ನು ನಾನು ದುರುಪಯೋಗ ಪಡಿಸಿಕೊಳ್ಳುವುದಿಲ್ಲ. ನನ್ನ ಸಮಸ್ಯೆ ಸ್ವರಾಜ್ಯಕ್ಕಿಂತ ಹಿರಿದಾದುದು. ಅಸ್ಪೃಶ್ಯತೆ ಹೋಗಬೇಕೆಂದು ನನಗೆ ಆತುರ. ಏಕೆಂದರೆ ನನ್ನ ಪಾಲಿಗೆ ಅದೊಂದು ಪ್ರಾಯಶ್ಚಿತ್ತ, ತಪಸ್ಸು. ಅಸ್ಪೃಶ್ಯರ ಶುದ್ಧಿಯನ್ನು ನಾನು ಮಾಡುವದಿಲ್ಲ. ಅದು ಮೂರ್ಖತನವಾದೀತು. ಆದರೆ, ನನ್ನ ಶುದ್ಧಿ ಮತ್ತು ಹಿಂದೂ ಧರ್ಮದ ಶುದ್ಧಿ ಆಗಬೇಕಾಗಿದೆ. ಈ ಕೆಡುಕಿಗೆ ಆಸ್ಪದ ಕೊಟ್ಟು, ಹಿಂದೂ ಧರ್ಮ ಬಹಳ ದೊಡ್ಡ ಪಾಪ ಮಾಡಿದೆ. ಪರರಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವದು ಸಾಧ್ಯವಿದ್ದರೆ ನಾನೇ ಅದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡು ಈ ಪಾಪ ವಿಮೋಚನೆ ಮಾಡಲು ಕಾತರನಾಗಿದ್ದೇನೆ.

ಈ ಉದ್ದೇಶ ಸಾಧನೆಗಾಗಿ ನನಗಿರುವ ಮಾರ್ಗ ಅಹಿಂಸೆಯದು ಮತ್ತು ಸತ್ಯದ್ದು ಮಾತ್ರ. ಒಬ್ಬ ಅಸ್ಪೃಶ್ಯ ಮಗುವನ್ನು ನಾನು ದತ್ತು ಮಾಡಿಕೊಂಡಿದ್ದೇನೆ. ನನ್ನ ಹೆಂಡತಿಯನ್ನು ನನ್ನ ಅಭಿಪ್ರಾಯಕ್ಕೆ ಸಂಪೂರ್ಣವಾಗಿ ಒಲಿಸಿಕೊಳ್ಳಲು ಆಗಿಲ್ಲ ಎಂಬುದನ್ನು ನಾನು ಒಪ್ಪಿಕೊಳ್ಳುತ್ತೇನೆ. ನಾನು ಆ ಮಗುವನ್ನು ಪ್ರೀತಿಸುವಂತೆ ಆಕೆ ಪ್ರೀತಿಸಲು ಸಾಧ್ಯವಾಗಿಲ್ಲ. ಆದರೆ ಸಿಟ್ಟಿನಿಂದ ನನ್ನ ಹೆಂಡತಿಯನ್ನು ಪರಿವರ್ತನೆ ಮಾಡಲು ಆಗದು. ಪ್ರೀತಿಯಿಂದಲೇ ಮಾಡಬೇಕು. ನಮ್ಮವರು ಯಾರಾದರೂ ನಿಮ್ಮ ವಿಷಯದಲ್ಲಿ ತಪ್ಪು ಮಾಡಿದ್ದರೆ ನಿಮ್ಮ ಕ್ಷಮೆ ಬೇಡುತ್ತೇನೆ. ನಾನು ಪೂನಾದಲ್ಲಿದ್ದಾಗ ಕೆಲವು ಅಸ್ಪೃಶ್ಯರು ಬಂದು, ಹಿಂದೂಗಳು ಅಸ್ಪೃಶ್ಯರ ವಿಷಯಕ್ಕೆ ತಮ್ಮ ಮನೋಭಾವವನ್ನು ತಮ್ಮ ವರ್ತನೆಯನ್ನು ಬದಲಿಸಿಕೊಳ್ಳದಿದ್ದ್ರೆ. ತಾವು ಹಿಂಸಾಪ್ರಯೋಗ ಮಾಡಬೇಕಾಗುತ್ತದೆಂದು ಹೇಳಿದರು. ಹಿಂಸೆಯಿಂದ ಅಸ್ಪೃಶ್ಯತೆಯನ್ನು ತೊಡೆದುಹಾಕಲು ಸಾಧ್ಯವೇ? ಅಸ್ಪೃಶ್ಯರ ವಿಮೋಚನೆಯು ಇಂಥ ವಿಧಾನಗಳಿಂದ ಬಂದೀತೇ? ಸರಿಯಾದ ಆಚರಣೆ ಮತ್ತು ಸಹನಶೀಲ ತರ್ಕ ಇವುಗಳಿಂದ ಮಾತ್ರ ಸಂಪ್ರದಾಯಸ್ಥ ಹಿಂದೂಗಳನ್ನು ಮತಾಂಧತೆಯಿಂದ ಪರಾವೃತ್ತಗೊಳಿಸಬಹುದು. ಅವರಲ್ಲಿ ಪರಿವರ್ತನೆ ಬರುವವರೆಗೆ ಈಗಿರುವ ನಿಮ್ಮ ಸ್ಥಿತಿಯನ್ನು ಸಹನೆಯಿಂದ ನುಂಗಿಕೊಂಡಿರಬೇಕೆಂದು ಕೇಳಿಕೊಳ್ಳುತ್ತೇನೆ. ನಿಮ್ಮ ಜೊತೆಯಲ್ಲಿದ್ದು, ನಿಮ್ಮ ಸುಖ ದುಃಖಗಳಲ್ಲಿ ಪಾಲುಗೊಳ್ಳಲು ನಾನು ಸಿದ್ಧ. ಇತರ ಜಾತಿಗಳವರಿಗೆ ಯಾವ ದೇವಸ್ಥಾನದಲ್ಲಿ ಪ್ರವೇಶ ಇದೆಯೋ ಅವುಗಳಲ್ಲಿ ಪೂಜೆ ಮಾಡುವ ಹಕ್ಕು ನಿಮಗೂ ಇರಬೇಕು. ಇತರ ಜಾತಿಗಳವರ ಮಕ್ಕಳಿಗೆ ಯಾವ ಶಾಲೆಯಲ್ಲಿ ಪ್ರವೇಶ ಇದೆಯೋ, ಅಲ್ಲಿಗೆ ಯಾವ ಭೇದವೂ ಇಲ್ಲದೆ ನಿಮ್ಮ ಹುಡುಗರು

ಹೋಗಬೇಕು. ದೇಶದ ಅತ್ಯುನ್ನತ ಪದವಿಗೆ, ವಾಯಿಸ್‌ರಾಯ್ ಪದವಿಗೂ ಕೂಡ ನೀವು ಅರ್ಹರಾಗುವಂತೆ ಆಗಬೇಕು. ಅಸ್ಪೃಶ್ಯತಾ ನಿವಾರಣೆಗೆ ನನ್ನ ವ್ಯಾಖ್ಯೆ ಇದು.

ಆದರೆ ನನ್ನ ಧರ್ಮ ತೋರಿಸಿಕೊಟ್ಟ ಮಾರ್ಗದಲ್ಲಿ ನಡೆದು ಮಾತ್ರ ನಾನು ನಿಮಗೆ ನೆರವಾಗಬಲ್ಲೆ. ಪಾಶ್ಚಾತ್ಯ ಪದ್ಧತಿಗಳನ್ನು ಅನುಸರಿಸಿ ಅಲ್ಲ. ಹಾಗೆ ಮಾಡಿದರೆ ಒಂದೂ ಧರ್ಮವನ್ನು ನಾನು ರಕ್ಷಿಸಲಾರೆ. ನಿಮ್ಮದು ಪವಿತ್ರ ಉದ್ದೇಶ, ಪವಿತ್ರ ಚಳವಳಿ. ದೇವ ವಿರುದ್ಧ ಮಾರ್ಗವನ್ನು ಅನುಸರಿಸಿದರೆ ಪವಿತ್ರ ಕಾರ್ಯ ಸಿದ್ಧಿಸಿತೇ? ಆದ್ದರಿಂದ ಪಾಶವೀ ಶಕ್ತಿಯ ಮೂಲಕ ನಿಮ್ಮ ಪರಿಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಮಾರ್ಗವನ್ನು ಬಿಟ್ಟುಬಿಡಿರಿ ಎಂದು ನಾನು ವಿನಂತಿಸಿಕೊಳ್ಳುತ್ತೇನೆ. ಪ್ರಾಮಾಣಿಕವಾಗಿ, ಹೃದಯಪೂರ್ವಕವಾಗಿ, ತನ್ನ ಹೃದಯಸ್ಥ ಪರಮಾತ್ಮನನ್ನು ಧ್ಯಾನಿಸಿದರೆ ಮನುಷ್ಯನಿಗೆ ಮೋಕ್ಷ ಸಿಗುತ್ತದೆಂದು ಗೀತೆ ಹೇಳುತ್ತದೆ. ಧ್ಯಾನ ಎಂದರೆ ದೇವರ ಬಾಗಿಲ ಕಾಯುವದು. ದೇವರ ಚಿತ್ತವನ್ನು ಕಾಯುತ್ತ ನಿಂತರೆ ಮೋಕ್ಷದ ಅತ್ಯನ್ನತ ಆನಂದವೇ ಸಿಗುತ್ತದೆ ಎಂದ ಮೇಲೆ ಅಸ್ಪೃಶ್ಯತಾ ನಿವಾರಣೆಯೂ ಬೇಗನೇ ಆಗದಿದ್ದೀತೇ? ದೇವರ ಬಾಗಿಲ ಕಾಯುವದು ಎಂದರೆ ಹೆಚ್ಚು ಹೆಚ್ಚು ಪರಿಶುದ್ಧ ಪ್ರಾರ್ಥನೆಮಾಡಿ ಪರಿಶುದ್ಧತೆ ಪಡೆದರೆ ಅಸ್ಪೃಶ್ಯತೆಯೂ ನಿವಾರಣೆಯಾಗುತ್ತದೆ, ಸ್ವರಾಜ್ಯ ಪ್ರಾಪ್ತಿಯೂ ಹತ್ತಿರ ಬರುತ್ತದೆ.

*ಯಂಗ್ ಇಂಡಿಯಾ ೨೨-೧-೧೯೨೫.*

**ಅಖಿಲ ಭಾರತ ಹಿಂದೂಸ್ತಾನೀ ಪರಿಷತ್ತಿನಲ್ಲಿ ಗಾಂಧೀಜಿಯ ಭಾಷಣ**
**೩೦-೧೨-೧೯೨೪**

ಈ ಪರಿಷತ್ತಿಗೆ ಅಧ್ಯಕ್ಷರು ಶ್ರೀ ನರಸಿಂಹ ಚಿಂತಾಮಣಿ ಕೇಳ್ಕರರು. ಗಾಂಧೀಜಿ ಕೂಡಲೆ ಹೊರಡಬೇಕಾಗಿದ್ದುದರಿಂದ ಅಧ್ಯಕ್ಷರು ಗಾಂಧೀಜಿಯನ್ನು ಒಂದೆರಡು ಮಾತು ಹೇಳಲು ಕೇಳಿಕೊಂಡರು.

**ಗಾಂಧೀಜಿಯ ಭಾಷಣ :**

ಕಳೆದ ಕೆಲವುದಿನಗಳಲ್ಲಿ ನೀವು ನನಗೆ ತೋರಿಸಿದ ಪ್ರೀತಿಯಲ್ಲಿ ನಾಣು ಮಿಂದು ಹೋಗಿದ್ದೇನೆ. ಇವತ್ತು ನಿಮ್ಮ ಅಧ್ಯಕ್ಷರು, ಅಧ್ಯಕ್ಷ ಭಾಷಣವನ್ನು ಮುಂದಕ್ಕೆ ಹಾಕಿ, ನನಗೆ ಮಾತಾಡಲು ಒಂದು ಅವಕಾಶ ಕೊಟ್ಟದ್ದು ಅದಕ್ಕೆ ಮತ್ತೊಂದು ಸಾಕ್ಷಿ. ನಾನು ಒಂದು ಸಂಸ್ಥಾನೀ ಗ್ರಾಮದಲ್ಲಿ ಹುಟ್ಟಿದೆ ಎಂಬುದು ನಿಮಗೆ ಗೊತ್ತಿರಬೇಕು. ಕಾಠೇವಾಡದ ಸಂಸ್ಥಾನಗಳನ್ನು ನಾನು ಬಲ್ಲೆ. ನನ್ನ ಮತ್ತು ಅವುಗಳ ಸಂಬಂಧ ಚೆನ್ನಾಗಿದೆ. ನಾನು ಹೆಚ್ಚು ಹೇಳದಿದ್ದರೂ ಸಂಸ್ಥಾನಗಳಲ್ಲಿ ನಡೆಯುವ ಚಟುವಟಿಕೆಗಳನ್ನು ನಿರೀಕ್ಷಿಸುತ್ತಲೇ ಇದ್ದೇನೆ. ಕಾಂಗ್ರೆಸ್ ಅಧ್ಯಕ್ಷ ಭಾಷಣದಲ್ಲಿ ಸಂಸ್ಥಾನಗಳ ಪ್ರಸ್ತಾಪ ಬಂದಿದೆ. ಬೊಂಬಾಯಿಯಲ್ಲಿ ಇತ್ತೀಚೆಗೆ ನಡೆದ ಸರ್ವಪಕ್ಷ ಸಮ್ಮೇಳನ, ಸ್ವರಾಜ್ಯಕ್ಕಾಗಿ ಒಂದು ಯೋಜನೆಯನ್ನು ತಯಾರಿಸಲು ಒಂದು ಸಮಿತಿಯನ್ನು ನೇಮಿಸಿದೆ. ನನ್ನ ಅಧ್ಯಕ್ಷ ಭಾಷಣದಲ್ಲಿ ಬರೆದಿರುವ ಸ್ವರಾಜ್ಯದ

ರೂಪುರೇಖೆಗಳನ್ನು ನನ್ನ ಅಭಿಪ್ರಾಯದಂತೆ ತೋರಿಸಿದ್ದೇನೆ. ಆದಷ್ಟು ಸಂಗ್ರಹವಾಗಿ ಹೇಳಬೇಕಾಗಿತ್ತಾದ್ದರಿಂದ ಭಾರತೀಯ ಸಂಸ್ಥಾನಗಳ ಬಗ್ಗೆ ಕೆಲವೇ ವಾಕ್ಯಗಳನ್ನು ಹೇಳಿದ್ದೇನೆ. ನನ್ನ ವಕೀಲ ಗೆಳೆಯರು ಕೆಲವರು ಭಾರತೀಯ ಸಂಸ್ಥಾನಗಳ ಬಗ್ಗೆ ನನ್ನ ಪ್ರಸ್ತಾಪವನ್ನು ಕುರಿತು ಏನೋ ಹೇಳ ಬಯಸಿದ್ದಾರೆ. ಭಾರತೀಯ ರಾಜರ ಪ್ರಮುಖರ ಸ್ಥಾನಮಾನದ ಬಗ್ಗೆ ನಾನು ಹೇಳಿದ್ದೇನೆ ವಿನಃ ತಮ್ಮ ಪ್ರಜೆಗಳ ಬಗ್ಗೆ ಅವರ ಜವಾಬ್ದಾರಿ ಏನು ಎಂಬುದನ್ನು ಹೇಳಿಯೇ ಇಲ್ಲ ಎನ್ನುತ್ತಾರೆ. ಈ ಗೆಳೆಯರಿಗೆ ನಾನು ನೆನಪು ಕೊಡಬೇಕಾಗಿಲ್ಲ. – ಹಕ್ಕುಗಳ ಜೊತೆಗೆ ಅವುಗಳಿಗೆ ಸಂಬಂಧಿಸಿದ ಹೊಣೆಗಾರಿಕೆಗಳು ಬರುತ್ತವೆ. ಭಾರತೀಯ ಸ್ವರಾಜ್ಯದ ನನ್ನ ಯೋಜನೆಯಲ್ಲಿ ಸಂಸ್ಥಾನಗಳನ್ನು ನಿರ್ನಾಮಗೊಳಿಸುವ ಕಲ್ಪನೆ ಇಲ್ಲ. ಈ ವಿಚಾರವನ್ನು ಸಾರ್ವಜನಿಕರ ಮುಂದೆ ಪ್ರಧಾನವಾಗಿ ನಾನು ಮಂಡಿಸಬೇಕಾಗಿತ್ತು. ಯಾರಾದರೂ ಸಂಸ್ಥಾನಿ ಪ್ರಜೆಗಳು ಸಂಸ್ಥಾನಾಧೀಶರ ದೌರ್ಜನ್ಯದಿಂದ ಬ್ರಿಟಿಷ್ ಭಾರತದ ಪ್ರದೇಶಕ್ಕೆ ಓಡಿಬಂದರೆ, ಯಾವ ಕಾರಣದಿಂದಲೇ ಆಗಲಿ, ಸ್ವರಾಜ್ಯ ಸರಕಾರ ಮತ್ತೆ ಆ ಸಂಸ್ಥಾನಿಕರಿಗೆ ಅಂಥವರನ್ನು ಒಪ್ಪಿಸಿಕೊಡುವದಿಲ್ಲ. ಸಂಸ್ಥಾನ ಪ್ರಜೆಗಳಿಗೆ ಕೊಟ್ಟ ಈ ಭರವಸೆ ಮತ್ತು ಸಂಸ್ಥಾನಿಕರಿಗೆ ಅವರ ಸ್ಥಾನಮಾನದ ಬಗ್ಗೆ ಕೊಟ್ಟ ಭರವಸೆ ಇವುಗಳಿಂದ ಭಾರತೀಯ ಸಂಸ್ಥಾನಗಳಲ್ಲಿ ಒಳ್ಳೆಯ ಸರಕಾರ ನಡೆದಾವೆಂದು ಭಾವಿಸಬಹುದು.

ರೇಖಾ ಗಣಿತದಲ್ಲಿ ಕೆಲವು ಸಿದ್ಧಾಂತಗಳಿವೆ. ರಾಜ್ಯಶಾಸ್ತ್ರದಲ್ಲಿಯೂ ಹೀಗೆಯೇ ಕೆಲವು ಇವೆ. ರಾಜರಿಗೆ ತಮ್ಮ ಸ್ಥಾನದ ಬಗ್ಗೆ ಭರವಸೆ ಕೊಟ್ಟದ್ದೇ ಆದರೆ ತಮ್ಮ ಪ್ರಜೆಗಳ ಮೇಲೆ ಪ್ರಗತಿದಾಯಕ, ಜ್ಞಾನದಾಯಕ ಸರಕಾರವನ್ನು ನಡೆಸುತ್ತಾರೆಂದು ನಂಬಬಹುದಾಗಿದೆ. ಇಷ್ಟರಲ್ಲೇ ಭಾವನಗರದಲ್ಲಿ ಕಾಠೇವಾಡ ಸಂಸ್ಥಾನಗಳ ಪರಿಷತ್ತು ನಡೆಯಲಿದೆ. ಅದಕ್ಕೆ ನಾನು ಅಧ್ಯಕ್ಷ. ಭಾರತೀಯ ಸಂಸ್ಥಾನಗಳ ಬಗ್ಗೆ ನಾನು ಹೇಳಬೇಕಾದ ವಿವರಗಳನ್ನೆಲ್ಲ ಆ ಸಂದರ್ಭಕ್ಕಾಗಿ ಕಾದಿರಿಸಿಕೊಂಡಿದ್ದೇನೆ. ಈ ಪರಿಷತ್ತಿಗೆ ಅಧ್ಯಕ್ಷನಾಗಲು ಎಷ್ಟೋ ಹಿಂದೆ ನನಗೆ ಕರೆ ಬಂದಿತ್ತು. ಆದರೆ ನನ್ನ ಜೈಲುವಾಸಕ್ಕೆ ಮೊದಲು ನಾನು ಸತ್ಯಾಗ್ರಹದ ಬಾವುಟವನ್ನು ಹಾರಿಸಿದ್ದೆ. ಆ ವೇಳೆಯಲ್ಲಿ ನಾನು ಇಂಥ ಪರಿಷತ್ತು ಸಮ್ಮೇಲನಗಳ ಅಧ್ಯಕ್ಷತೆಯನ್ನು ಒಪ್ಪಿಕೊಂಡರೆ, ಸಂಸ್ಥಾನಿಕರ ಸ್ಥಾನಮಾನಗಳಿಗೆ ಅಪಾಯ ಬಂದೀತೆಂದುಕೊಂಡೆ. ಅವರನ್ನು ವಿಷಮ ಸಂಕಟಕ್ಕೆ ಸಿಲುಕಿಸಿ ನನಗೂ ಅವರಿಗೂ ಇದ್ದ ಮಧುರ ಬಾಂಧವ್ಯವನ್ನು ಕೆಡಿಸಿಕೊಳ್ಳಲು ನನಗೆ ಇಷ್ಟವಿರಲಿಲ್ಲ. ನಾನು ಹೇಳಿ ಕೇಳಿ ಸಂಪೂರ್ಣ ಅಹಿಂಸಾವಾದಿ. ಸಂಸ್ಥಾನಿಕರಿಗೂ ಅವರ ಪ್ರಜೆಗಳಿಗೂ ಇದ್ದ ಮಧುರ ಬಾಂಧವ್ಯವನ್ನು ಕಹಿಗೊಳಿಸಲು ನನಗೆ ಇಷ್ಟವಿರಲಿಲ್ಲ. ಅದು ನನ್ನ ತತ್ವಕ್ಕೇ ವಿರುದ್ಧ. ಆದರೆ ಈ ಸಂಸ್ಥಾನೀ ಪ್ರಜೆಗಳನ್ನೂ, ಅವರ ನ್ಯಾಯವಾದ ಬೇಡಿಕೆಗಳನ್ನೂ ನಾನು ಎಂದಿಗೂ ಮರೆಯಲಾರೆ ಎಂದು ಭರವಸೆ ಕೊಡಬೇಕೇ? ಭಾರತೀಯ ಸಂಸ್ಥಾನಗಳ ವಿಷಯಗಳಲ್ಲಿ ವ್ಯವಹರಿಸುವಾಗ ಮಧುರವಾದ ಯುಕ್ತಿ ಯುಕ್ತತೆಯನ್ನು ಕಾಯ್ದುಕೊಳ್ಳಬೇಕೆಂದು ನನ್ನ ಆಸೆ. ಯಾರದೇ ವಿಷಯಕ್ಕೆ ತಪ್ಪು ಕಲ್ಪನೆ ಉಂಟುಮಾಡಲು ನಾನು ಬಯಸಿಲ್ಲ. ಇತ್ತ ರಾಜರ ಸ್ಥಾನಮಾನವನ್ನೂ ಕಾಯಬೇಕು. ಅತ್ತ ಅವರ ಪ್ರಜೆಗಳ ಹಕ್ಕನ್ನೂ ಕಾಯಬೇಕು; ಇದು ನನ್ನ ಏಕೈಕ ಉದ್ದೇಶ. ಖಾದಿಯ ಪ್ರಚಾರ ಕಾರ್ಯದಲ್ಲಿ

ರಾಟೆಯ ಪ್ರಚಾರಕಾರ್ಯದಲ್ಲಿ ರಾಜ ಮಹಾರಾಜರ ಸಹಾನುಭೂತಿಯನ್ನು ಗಳಿಸಬೇಕೆಂದು ನನ್ನ ಹುರುಪಿನ ಉದ್ದೇಶ. ನನ್ನ ಶ್ರದ್ಧೆಯನ್ನೆಲ್ಲ ರಾಟೆಯಲ್ಲಿ ಕೇಂದ್ರೀಕರಿಸಿದ್ದೇನೆ. ಅದರಿಂದಲೇ ಈ ದೇಶಕ್ಕೆ ಮೋಕ್ಷ ಎಂದು ನಂಬಿದ್ದೇನೆ.

ಕಾಂಗ್ರೆಸ್ಸು ಮುಗಿದಮೇಲೆ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಗಾಂಧೀಜಿ ಬೆಳಗಾಂವಿಯ ಈ ಕಾಂಗ್ರೆಸ್ಸಿನ ಬಗ್ಗೆ, ಅದರ ವ್ಯವಸ್ಥೆಯ ಬಗ್ಗೆ ತಮ್ಮ ಕೆಲವು ಅಭಿಪ್ರಾಯಗಳನ್ನು 'ಬೆಳಗಾಂವ ಇಂಪ್ರೆಷನ್ಸ್' ಎಂದು ಬರೆದರು. ಅವರ ಆ ಬರಹಗಳ ಸಾರಾನುವಾದವನ್ನು ಇಲ್ಲಿ ಕೊಡಲಾಗಿದೆ.

*(ಜನೆವರಿ ೧, ಮತ್ತು ೮, ೧೯೨೫)*

**ವಿಜಯನಗರ:**

ದೇಶಪಾಂಡೆ ಗಂಗಾಧರರಾಯರೂ ಅವರ ಕಾರ್ಯಕರ್ತರ ತಂಡವೂ ಅತ್ಯುನ್ನತ ಮಟ್ಟಕ್ಕೆ ಏರಿದರು. ಅವರ ವಿಜಯನಗರ (ಕರ್ನಾಟಕದ ಕಾಂಗ್ರೆಸ್ ನಗರಕ್ಕೆ ಈ ಐತಿಹಾಸಿಕ ಹೆಸರನ್ನಿಟ್ಟಿದ್ದರು), ಅತ್ಯುನ್ನತ ವಿಜಯ; ಇನ್ನೂ ಸ್ವರಾಜ್ಯ ವಿಜಯವಲ್ಲ, ಆದರೆ ಸಂಘಟನ ವಿಜಯ, ಪ್ರತಿಯೊಂದು ವಿವರವನ್ನೂ ಮೊದಲೇ ಆಲೋಚಿಸಿದ್ದರು. ಡಾ॥ ಹರ್ಡೀಕರರ ಸ್ವಯಂ ಸೇವಕರ ದಳ ಬಹಳ ಚುರುಕು, ಬಹಳ ಗಮನಶೀಲವಾಗಿತ್ತು. ರಸ್ತೆಗಳೂ ಬಹಳ ಅಗಲ, ಬಹಳ ಸ್ವಚ್ಛವಾಗಿದ್ದವು. ತಾತ್ಕಾಲಿಕವಾಗಿ ಕೂಡಿದ ಅಂಗಡಿಗಳವರ ಅನುಕೂಲಕ್ಕಾಗಿ, ಪ್ರೇಕ್ಷಕರಾಗಿ ಬಂದ ಸಾವಿರಾರು ಜನರ ಓಡಾಟಕ್ಕಾಗಿ ಇನ್ನೂ ಹೆಚ್ಚು ಅಗಲ ಆಗಬಹುದಾಗಿತ್ತು. ದೀಪದ ವ್ಯವಸ್ಥೆ ಪರಿಪೂರ್ಣವಾಗಿತ್ತು. ಆ ವಿಶಾಲ ಮಂಟಪ, ಅದರ ಮುಂದೆ ಇದ್ದ ಕಾರಂಜಿಯು ನಗರದೊಳಕ್ಕೆ ಬರುವ ಎಲ್ಲರನ್ನೂ ಕೈಬೀಸಿ ಕರೆಯುವಂತಿದ್ದವು. ಮಂಟಪದೊಳಗೆ ಕನಿಷ್ಠ ಪಕ್ಷ ೧೭,೦೦೦ ಜನಕ್ಕೆ ಅವಕಾಶ ಇತ್ತು. ನಿರ್ಮಲೀಕರಣದ ವ್ಯವಸ್ಥೆ ತುಂಬ ಚೆನ್ನಾಗಿತ್ತು. ಇನ್ನೂ ಅಷ್ಟು ವೈಜ್ಞಾನಿಕ ಪದ್ಧತಿ ತರಬಹುದಿತ್ತು. ಬಳಸಿದ ನೀರನ್ನು ಹೊರಗೆ ಚೆಲ್ಲುವ ವಿಧಾನ ಬಹಳ ಹಳೆಯ ಕಾಲದ್ದು. ಮುಂದಿನ ವರ್ಷ (೧೯೨೫) ಕಾಂಗ್ರೆಸ್ ಅಧಿವೇಶನವನ್ನು ನಡೆಸುವ ಕಾನಪೂರದವರು ಶಿಬಿರ ನಿರ್ಮಲೀಕರಣದ ಪರಿಣಾಮಕಾರೀ ಪದ್ಧತಿಗಳನ್ನು ಅಭ್ಯಾಸಮಾಡಲಿ. ಈ ಬಹು ಮುಖ್ಯವಾದ ಕೆಲಸವನ್ನು ಕೊನೆಯ ಗಳಿಗೆಯವರೆಗೆ ಮುಂದಕ್ಕೆ ತಳ್ಳದೇ ಇರಲಿ ಎಂದು ಸೂಚಿಸುತ್ತೇನೆ.

**ಅಧ್ಯಕ್ಷ ಕುಟೀರ:**

ಸಂಘಟನೆ ಕಾಂಗ್ರೆಸ್ ಶಿಬಿರದಲ್ಲಿ ಹೆಚ್ಚು ಕಡಿಮೆ ಪರಿಪೂರ್ಣವಾಗಿತ್ತು. ಇದಕ್ಕೆ ನನ್ನ ಪೂರ್ಣ ಪ್ರಶಂಸೆ. ಆದರೂ ಹೊರಗೆ ಆಡಂಬರವಾಗಿ ಕಾಣಿಸುವಂತೆ ಮಾಡುವ ಹಳೆಯ ಪದ್ಧತಿಯನ್ನು ಗಂಗಾಧರರಾಯರು ಕೈಬಿಡಲಿಲ್ಲ ಎನ್ನದೇ ಇರಲಾರೆ. "ಮೇಲಿನ ಜನಕ್ಕೆ" ಎಲ್ಲ ವಿಶೇಷ ಸೌಕರ್ಯವನ್ನೂ ಒದಗಿಸಿಕೊಡಬೇಕೆನ್ನುವ ಚಪಲ ಅವರಿಗೆ. ಅದನ್ನು ಅವರು ಕೈ ಬಿಟ್ಟಿರಲಿಲ್ಲ. ಅಧ್ಯಕ್ಷರ ಕುಟೀರವನ್ನೇ ನೋಡಿರಿ. ನಾನು ಕೇಳಿದ್ದು ಒಂದು ಖಾದಿ ಗುಡಿಸಲು. ನನಗೆ ದೊರೆತದ್ದು ಒಂದು ಖಾದಿ ಅರಮನೆ. ಅದರಿಂದ ನನಗೆ ಅಗೌರವ ವಾದಂತಾಯಿತು. ಅಧ್ಯಕ್ಷರಿಗಾಗಿ ಕಾದಿರಿಸಿದ ನೆಲ, ಅಷ್ಟು ಬೇಕೇ ಬೇಕು. ಈ ಅರಮನೆಯ

ಸುತ್ತ ಹಾಕಿದ್ದ ಬೇಲಿ ಅತ್ಯಗತ್ಯವಾಗಿತ್ತು, ಇಲ್ಲದೇ ಇದ್ದರೆ ನನ್ನನ್ನು ಕಾಪಾಡಲು ಬೇರೆ ಯಾವ ಸಾಧನವೂ ಇರಲಿಲ್ಲ. ನನ್ನನ್ನು ಮೆಚ್ಚಿದ ಜನರ ಗುಂಪು ನನಗೆ ತೊಂದರೆ ಕೊಡದಂತೆ ಕಾಪಾಡಲು ಇದು ಅಗತ್ಯವಾಗಿ ಬೇಕಾಯಿತು. ಆದರೆ ನಾನೇ ಕಂಟ್ರಾಕ್ಟರ್ ಆಗಿದ್ದರೆ ಇಷ್ಟೇ ಸ್ಥಳದಲ್ಲಿ ಇಷ್ಟೇ ಸೌಕರ್ಯವನ್ನು ಇದರ ಅರ್ಧ ವೆಚ್ಚದಲ್ಲಿ ಅಧ್ಯಕ್ಷರಿಗೆ ಒದಗಿಸುತ್ತಿದ್ದೆ. ಹಣವನ್ನು ನೀರಿನಂತೆ ವೆಚ್ಚ ಮಾಡಿದ ಅನೇಕ ಸಂದರ್ಭಗಳಲ್ಲಿ ಇದೂ ಒಂದು. ವಿಷಯ ನಿಯಾಮಕ ಸಭೆಯ ಸದಸ್ಯರಿಗೆ, ಇತರರಿಗೆ ಕೊಟ್ಟ ಉಪಹಾರ ಅಷ್ಟು ಶ್ರೀಮಂತವಾಗಿ ಇರಬೇಕಾಗಿರಲಿಲ್ಲ. ಪ್ರಮಾಣವು ಅಷ್ಟೇ. ಯಾವ ಔಚಿತ್ಯವೂ ಇರಲಿಲ್ಲ. ನಾನು ಯಾರಲ್ಲಿಯೂ ತಪ್ಪು ಕಂಡುಹಿಡಿಯುತ್ತಿಲ್ಲ. ಈ ವಿಶೇಷ ವೆಚ್ಚ ಎಲ್ಲವೂ ಹೃದಯ ಔದಾರ್ಯದಿಂದ ಬಂದದ್ದು, ಸದುದ್ದೇಶದಿಂದ ಮಾಡಿದ್ದು. ನಲವತ್ತು ವರ್ಷದ ಪರಂಪರೆಯು ಒಂದು ದಿನದಲ್ಲಿ ಕಿತ್ತುಹಾಕಲು ಸಾಧ್ಯವೇ? ಅದರಲ್ಲಿಯೂ ಯಾರು ಮಾತಿಗೆ ಕೇಳುವವರೇ ಸಿಗುವದಿಲ್ಲವೋ ಅವರು ಪದೇ ಪದೇ ಟೀಕೆ ಮಾಡುತ್ತಾರೆ. ೧೯೨೧ರಲ್ಲಿ ನೀವು ಪ್ರಾರಂಭ ಮಾಡಿ (ಮಿತವ್ಯಯ) ಎಂದು ವಲ್ಲಭಭಾಯಿಗೆ ನಾನು ಹೇಳಿದಾಗ ಅವರು ಹೇಳಿದರು – ಅತಿವ್ಯಯ ಮಾಡದಂತೆ ಸರಳತೆ ತರಲು ನಾನು ಪ್ರಯತ್ನಿಸುತ್ತೇನೆ. ಆದರೆ ನನ್ನ ಗುಜರಾತಿಗೆ ಜಿಪುಣ ಎಂದು ಕೆಟ್ಟ ಹೆಸರು ಬರಬಾರದು. ತಾತ್ಕಾಲಿಕವಾಗಿ ಒಂದು ಕಾರಂಜಿ ಕಟ್ಟಿ, ಸಾವಿರಾರು ರೂಪಾಯಿ ವೆಚ್ಚ ಮಾಡದೇ ಹೋದರೆ, ಯಾರೂ ಜಿಪುಣ ಎನ್ನುವದಿಲ್ಲ ಎಂದು ನಾನು ಹೇಳಿದೆ. ನೀವು ಏನು ಮಾಡುತ್ತೀರೋ ಅದನ್ನು ಮುಂದಿನವರು ಅನುಸರಿಸುತ್ತಾರೆ ಎಂದು ಹೇಳಿದೆ. ಜಿಪುಣ ಎನಿಸಿಕೊಳ್ಳುವ ಅಪವಾದ ವಲ್ಲಭಭಾಯಿಗೆ ಇಷ್ಟವಿರಲಿಲ್ಲ. ಕಾನಪುರವಾದರೂ ಇವರಲ್ಲಿ ಮಾರ್ಗದರ್ಶನ ಮಾಡಲಿ ಎಂದು ಸೂಚಿಸುತ್ತೇನೆ. ಕಾನಪುರದ ಜಿಪುಣತನವೇ ನಾಳೆ ಬರುವವರೆಗೆ ಅತಿ ವ್ಯಯ ಎನಿಸೀತು. ವಲ್ಲಭಭಾಯಿ ಎಷ್ಟನ್ನೋ ತ್ಯಜಿಸಿದರು. ಯಾವುದು ಅಗತ್ಯವಿರಲಿಲ್ಲವೋ ಅದನ್ನು ತೆಗೆದು ಹಾಕಿದ್ದಕ್ಕಾಗಿ ಯಾರೂ ಏನೂ ಅನ್ನಲಿಲ್ಲ.

**ಬಡಬಗ್ಗರ ಸಂಸ್ಥೆ ಕಾಂಗ್ರೆಸ್:**

ಕಾಂಗ್ರೆಸ್ಸು ಭಾರತದ ಮೂಲಾಧಾರವಾದ ಬಡರೈತರ ಪ್ರತಿನಿಧಿ ಆಗಬೇಕು. ನಮ್ಮ ವೆಚ್ಚದ ಪ್ರಮಾಣವು ಸಾಧ್ಯವಿದ್ದಮಟ್ಟಿಗೂ ಅವರ ಪ್ರಮಾಣಕ್ಕೆ ಹೊಂದಬೇಕು. ಆದ್ದರಿಂದ ಅಕ್ಷಮತೆಯೂ, ಜಿಪುಣತನವೂ ನಮ್ಮ ಪಾಲಿಗೆ ಬಾರದಂತೆ, ಕ್ರಮೇಣ ನಾವು ಮಿತವ್ಯಯದ ಕಡೆಗೆ ಹೋಗಬೇಕು.

**ಬೆಲೆ ಬಲು ಬಹಳ:**

ನನ್ನ ಅಭಿಪ್ರಾಯದಲ್ಲಿ ವಸತಿಗೆ, ಊಟಕ್ಕೆ ತೆಗೆದುಕೊಂಡ ಶುಲ್ಕ ಸ್ವಲ್ಪ ಹೆಚ್ಚೇ. ಸ್ವಾಮಿ ಶ್ರದ್ಧಾನಂದರ ಕಾರ್ಯದಿಂದ ನಾವು ಒಂದು ಪಾಠ ಕಲಿಬೇಕು. ಅದಕ್ಕಿಂತಲೂ ಕಡಿಮೆ ಯಾವದೂ ಚಿಂತೆ ಇಲ್ಲ; ೧೯೧೬ರಲ್ಲಿ ಅವರ ಗುರುಕುಲದ ವಾರ್ಷಿಕ ಸಮಾರಂಭಕ್ಕೆ ಬಂದ ಅತಿಥಿಗಳಿಗಾಗಿ ಅವರು ಗುಡಿಸಲುಗಳನ್ನು ಕಟ್ಟಿಸಿದ್ದರು. ಬಹುಶಃ ೨ ಸಾವಿರ ರೂಪಾಯಿ ವೆಚ್ಚ ಆಗಿರಬೇಕು. ಆ ಕ್ಷೇತ್ರದಲ್ಲಿ ಉಪಹಾರದ ಅಂಗಡಿಗಳನ್ನು ತೆರೆಯಲು ಕಂಟ್ರಾಕ್ಟರರನ್ನು ಅವರು ಕರೆದರು. ಅವರಿಗೆ ಕೊಟ್ಟ ಸ್ಥಳಕ್ಕೆ ಬಾಡಿಗೆ ಹಾಕಲಿಲ್ಲ. ಯಾರೂ

ಆ ವ್ಯವಸ್ಥೆಯ ಬಗ್ಗೆ ದೂರುವ ಹಾಗೆ ಇರಲಿಲ್ಲ. ತಮಗೆ ಏನು ಸಿಗಬಹುದೋ ಅದು ಅವರಿಗೆ ಗೊತ್ತಿತ್ತು. ಅನಾಯಾಸವಾಗಿ, ಗುರುಕುಲದ ಆವರಣದಲ್ಲಿ ೪೦ ಸಾವಿರ ಜನಕ್ಕೆ ಬಿಡದಿ ಮಾಡಲಾಯಿತು. ವೆಚ್ಚವಂತೂ ಇರಲಿಲ್ಲ. ಬಂದ ಅತಿಥಿಗಳಿಗೆ ಪ್ರತಿಯೊಬ್ಬರಿಗೂ ಅವರವರಿಗೆ ಬೇಕಾದದ್ದು ದೊರೆಯಿತು. ಅಗ್ಗಬೇಕು ಎಂದವರಿಗೆ ಅಗ್ಗ, ತುಟ್ಟಿಬೇಕು ಎಂದವರಿಗೆ ತುಟ್ಟಿ.

ಸ್ವಾಮಿಗಳವರು ಮಾಡಿದ್ದನ್ನು ಪೂರ್ಣವಾಗಿ ಅನುಕರಿಸಬೇಕು ಎಂದು ನಾನು ಹೇಳುವದಿಲ್ಲ. ಆದರೆ ಇದಕ್ಕಿಂತಲೂ ಅಗ್ಗ ಹಾಗೂ ಉತ್ತಮ ಯೋಜನೆಗಳು ಅನಿವಾರ್ಯ ವಾಗಿವೆ. ಪ್ರತಿನಿಧಿ ಶುಲ್ಕವನ್ನು ೧೦ ರೂಪಾಯಿನಿಂದ ೧ ರೂಪಾಯಿಗೆ ಇಳಿಸಿದ್ದು ಸಮಸ್ತರ ಪ್ರಶಂಸೆಗೆ ಪಾತ್ರವಾಯಿತು. ವಸತಿ ಊಟಗಳ ವೆಚ್ಚ ಕಡಿಮೆಯಾದರೆ ಎಲ್ಲರಿಗೂ ಪ್ರಿಯವೇ ಆಗುತ್ತದೆ.

**ವಾರ್ಷಿಕ ಜಾತ್ರೆ:**

ನೋಡಲು ಬರುವ ಎಲ್ಲ ಪ್ರೇಕ್ಷಕರಿಂದಲೂ ಒಂದು ಅಲ್ಪ ಪ್ರವೇಶ ಧನವನ್ನು ತೆಗೆದುಕೊಂಡು, ಹಣದ ವರಮಾನವನ್ನು ಹೆಚ್ಚಿಸಿಕೊಳ್ಳಬಹುದು. ಕಾಂಗ್ರೆಸ್ ಅಧಿವೇಶನ ಎಂದರೆ ಬೇಕಾದಾಗ ಬಂದು, ಮನರಂಜನೆಯನ್ನೂ ಅದರ ಜೊತೆಗೆ ಬೋಧನೆಯನ್ನೂ ಪಡೆಯುವ ವಾರ್ಷಿಕ ಜಾತ್ರೆಯಂತೆ ಇರಬೇಕು. ವಿಚಾರ ಕಾರ್ಯಕ್ರಮ ಮುಖ್ಯವಾಗಿದ್ದು ಅದರ ಸುತ್ತ ಪ್ರದರ್ಶನದ ಕಾರ್ಯಕ್ರಮಗಳು ನಡೆಯುವಂತಾಗಬೇಕು. ಆದ್ದರಿಂದ ಎಲ್ಲವೂ ಕಾಲೋಚಿತವಾಗಿರಬೇಕು. ಕಾರ್ಯಕ್ರಮಗಳನ್ನು ಹೊತ್ತಿಗೆ ಸರಿಯಾಗಿ ನಡೆಸಬೇಕು.

ಕಾಂಗ್ರೆಸ್ಸಿನ ಹೊತ್ತಿಗೆ ಎಲ್ಲ ಸಮ್ಮೇಲನಗಳನ್ನೂ ಕೂಡಿಸುವುದರಿಂದ ರಾಷ್ಟ್ರೀಯ ಉದ್ದೇಶ ಏನೂ ಸಫಲವಾಗುವುದಿಲ್ಲ. ಕಾಂಗ್ರೆಸ್ಸಿಗೆ ಸಂಬಂಧಿಸಿದ, ಅದಕ್ಕೆ ಪೋಷಕವಾದ ಸಮ್ಮೇಲನಗಳು ಮಾತ್ರವೇ ನಡೆಯಬೇಕೆಂದು ನನ್ನ ಅಭಿಪ್ರಾಯ. ಅಧ್ಯಕ್ಷರೂ ಅವರ "ಸಚಿವ ಮಂಡಲವೂ" ಕಾಂಗ್ರೆಸ್ಸಲ್ಲದೆ ಬೇರೆ ಯಾವುದಕ್ಕೂ ಗಮನ ಕೊಡುವಂತೆ ಇರಬಾರದು. ನನ್ನ ವೇಳೆಯ ಮೇಲೆ ಬೇರೆ ಯಾವ ಭಾರವೂ ಬೀಳದೆ ಇದ್ದಿದ್ದರೆ, ನನ್ನ ಮೇಲೆ ಹೊರಿಸಿದ ಹೊಣೆಯನ್ನು ಮತ್ತಷ್ಟು ಗಮನಕೊಟ್ಟು ಮಾಡಬಹುದಾಗಿತ್ತು. ನನಗೆ ಧ್ಯಾನ, ಮನನ ಮಾಡಿಕೊಳ್ಳಲು ಒಂದು ಗಳಿಗೆಯೂ ಬಿಡುವು ಸಿಗಲಿಲ್ಲ. ಮತದಾನ ಸೂತ್ರವನ್ನು ಮತ್ತಿಷ್ಟು ಸಫಲಗೊಳಿಸಲು ನನಗೆ ಸಾಧ್ಯವಾಗಲಿಲ್ಲ. ಅದರ ಮನನವೇ ಆಗಲಿಲ್ಲ. ಇತರ ಸಮ್ಮೇಳನಗಳ ವ್ಯವಸ್ಥಾಪಕರು ತಮಗೆ ಸಂಬಂಧಿಸಿದ ಕಾರ್ಯಭಾರವನ್ನು ಬಹಳ ಹಗುರವಾಗಿ ನೋಡುತ್ತಾರೆ. ಇದು ಒಂದು ಸಂಪ್ರದಾಯವಾಗಿಬಿಟ್ಟಿದೆ. ಆದ್ದರಿಂದ ಈಗ ಸಮ್ಮೇಳನಗಳನ್ನು ನಡೆಸುವುದು ರೂಢಿಯಾಗಿದೆ. ವರ್ಷ ವರ್ಷವೂ ತಮ್ಮ ಸಾಮರ್ಥ್ಯವನ್ನು ಹೀಗೆ ಪೋಲು ಮಾಡಬಾರದೆಂದು ಬೇರೆ ಬೇರೆ ಸಂಸ್ಥೆಗಳ ಕೆಲಸಗಾರರನ್ನು ನಾನು ಆಗ್ರಹಪೂರ್ವಕವಾಗಿ ಬೇಡುತ್ತೇನೆ.

**ಸ್ಥಳೀಯ ಕಲೆ ಕೈಗಾರಿಕೆಗಳ ಪ್ರದರ್ಶನ:**

ಸ್ಥಳೀಯ ಕಲೆ ಕೈಗಾರಿಕೆಗಳ ಪ್ರದರ್ಶನ ವರ್ಷ ವರ್ಷವೂ ಅಭಿವೃದ್ಧಿ ಹೊಂದುತ್ತ

ಹೋಗಬೇಕು; ಸಾವಿರಾರು ಜನ ಸಂತೋಷ ಪಟ್ಟಿರಬೇಕು. ಸಂಗೀತ ಸಮ್ಮೇಲನ, ನಮ್ಮ ರಾಷ್ಟ್ರೀಯ ಕೈಗಾರಿಕೆಯ ವಿನಾಶ, ಅದನ್ನು ಪುನರುಜ್ಜೀವನಗೊಳಿಸುವ ಮಾರ್ಗಗಳು, ಈ ಬಗ್ಗೆ ತೋರಿಸಿದ ಯಕ್ಷಿಣಿ ದೀಪದ ಪ್ರದರ್ಶನ ತುಂಬಾ ಚೆನ್ನಾಗಿತ್ತು, ಬೋಧಪ್ರದ, ಯೋಗ್ಯ ಮನೋರಂಜಕವಾಗಿತ್ತು. ಈ ವ್ಯವಸ್ಥೆಯನ್ನು ವಿಚಾರಪೂರ್ವಕ ಪದ್ಧತಿಯ ಪ್ರಕಾರ ಮಾಡಿದ ಶ್ರೀ ಸತೀಶಬಾಬುವಿಗೆ ನನ್ನ ಅಭಿನಂದನೆ. ನೂಲುವ ಸ್ಪರ್ಧೆಯೂ ವಾರ್ಷಿಕ ಕಾರ್ಯಕ್ರಮ ವಾಗಬೇಕು, ಸ್ಪರ್ಧೆಗೆ ಬಂದ ಸ್ಪರ್ಧಾಳುಗಳ ಸಂಖ್ಯೆ, ಫಲಿತಾಂಶದ ಮಹತ್ವ, ದಾನಿಗಳ ಸಂಖ್ಯೆ ಇವೆಲ್ಲವೂ ಇದರ ಜನಪ್ರಿಯತೆಯ ದ್ಯೋತಕ. ಈ ನೂಲುವ ಚಳವಳಿಯೂ ಹೆಂಗಸರನ್ನು ತಮ್ಮ ಏಕಾಂತವಾಸದಿಂದ ಹೊರಬರುವಂತೆ ಮಾಡಿದೆ. ಬೇರೆ ಯಾವುದೂ ಹೀಗೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ೧೧ ಮಂದಿ ಗೆದ್ದವರಲ್ಲಿ ೪ ಜನ ಮಹಿಳೆಯರು, ವಿಶ್ವವಿದ್ಯಾನಿಲಯದ ಯಾವ ಪದವಿಯೂ ಕೊಡಲಾರದ ಗೌರವ, ಆತ್ಮವಿಶ್ವಾಸಗಳನ್ನು ಇದು ಅವರಿಗೆ ಕೊಟ್ಟಿದೆ. ಗಂಡಸರು ಹೇಗೋ ತಾವೂ ಹಾಗೆಯೇ. ಅವರ ಸಕ್ರಿಯ ಸಹಾಯವೂ ಅಷ್ಟೇ ಅನಿವಾರ್ಯ ಎಂಬುದನ್ನು ಅರಿತುಕೊಳ್ಳುತ್ತಿದ್ದಾರೆ. ಗಂಡಸರಿಗಿಂತ ಹೆಚ್ಚಲ್ಲದಿದ್ದರೂ, ಅವರಷ್ಟೇ ಸಹಾಯ ತಮ್ಮಿಂದ ಆಗಬಲ್ಲದು ಎಂದು ಅರಿತುಕೊಳ್ಳುತ್ತಿದ್ದಾರೆ.

**ಬ್ರಾಹ್ಮಣ ಹುಡುಗರ ಭಂಗೀ ಕೆಲಸ:**

ಇದನ್ನು ಮುಗಿಸುವ ಮೊದಲು ಒಂದು ಮಾತನ್ನು ಹೇಳದೇ ಬಿಡಬಾರದು. ಹೆಚ್ಚಾಗಿ ಬ್ರಾಹ್ಮಣ ಸ್ವಯಂ ಸೇವಕರು - ಸುಮಾರು ೭೫ ಜನ - ಕಾಂಗ್ರೆಸ್ ಶಿಬಿರದಲ್ಲಿ ಸ್ವಚ್ಛತೆಯ ಕೆಲಸವನ್ನು ಮಾಡಿದರು. ಪೌರಸಭೆಯ ಭಂಗಿಗಳನ್ನೂ ಕರೆಸಿದ್ದರು. ಅವರ ಜೊತೆಗೆ ಈ ಸ್ವಯಂ ಸೇವಕರೂ ಬೇಕೆನಿಸಿತು. ಈ ತಂಡಕ್ಕೆ ನಾಯಕರು ಕಾಕಾ ಕಾಲೇಲ್ಕರರು. ಈ ತಂಡವನ್ನು ಏರ್ಪಡಿಸದೇ ಇದ್ದಿದ್ದರೆ ಈ ಕೆಲಸ ಇಷ್ಟು ಸಮರ್ಪಕವಾಗಿ ಆಗುತ್ತಿರಲಿಲ್ಲ ಎಂದು ಕಾಕಾ ನನಗೆ ಹೇಳಿದರು. ಸ್ವಯಂ ಸೇವಕರೆಲ್ಲರೂ ಬಹಳ ಅಕ್ಕರೆಯಿಂದ ಕೆಲಸ ಮಾಡಿದರೆಂದು ಅವರು ನನಗೆ ಹೇಳಿದರು. ಸಾಮಾನ್ಯವಾಗಿ ಯಾರೂ ಒಪ್ಪಿಕೊಳ್ಳದೇ ಇರುವ ಈ ಕೆಲಸಕ್ಕೆ ಅವರಲ್ಲಿ ಒಬ್ಬರೂ ಸಹ ಸ್ವಲ್ಪವೂ ಹಿಂದೆಗೆಯಲಿಲ್ಲ. ಒಂದು ದೃಷ್ಟಿಯಿಂದ ನೋಡಿದರೆ ಇದು ಅತಿ ಶ್ರೇಷ್ಠ ಕಾರ್ಯ. ಸ್ವಚ್ಛತೆಯ ಕಾರ್ಯವೇ ಎಲ್ಲ ಸ್ವಯಂ ಸೇವಕ ತರಬೇತಿಗೂ ತಳಹದಿಯೆಂದು ಭಾವಿಸಬೇಕು.

ಗಾಂಧೀಜಿ ೮-೧-೧೯೨೫ರ ಯಂಗ್ ಇಂಡಿಯಾದಲ್ಲಿ, ಬೆಳಗಾಂವಿಯ ಬಗ್ಗೆ ಬರೆದ ಎರಡನೆಯ ಲೇಖನ ಈ ಮುಂದಿನಂತಿದೆ.

**ನಾಮಧಾರಿಗಳು:**

ಎಲ್ಲರನ್ನೂ ಅಂದರೆ ದೊಡ್ಡವರನ್ನೂ, ಚಿಕ್ಕವರನ್ನೂ ಕೂಡಿಯೇ ಕಂಡು ಅವರಿಗೆ ಸಮಾಧಾನ ಕೊಡುವುದು ತುಂಬ ಕಷ್ಟವಾಯಿತು. ನಾಮಧಾರಿ ಸೀಖರು ಒಂದು ಕಂತೆ ಕಾಗದಗಳನ್ನು ತಂದು ಅಕಾಲಿಗಳ ವಿರುದ್ಧ ತಮ್ಮ ದೂರನ್ನು ನಾನು ಗಮನಿಸಬೇಕು ಎಂದು ಬಯಸಿದರು. ಅವರು ತೋರಿಸಿದ ಮರ್ಯಾದೆ, ಅವರಿಗಿದ್ದ ಸಹನೆ, ನನ್ನ

ಅನಿಚ್ಛೆಯನ್ನು ಹೊಡದೋಡಿಸಿತು. ಅವರ ವಿಷಯಕ್ಕೆ ಗಮನ ಕೊಡುವುದು ಅನಿಚ್ಛೆಗಿಂತಲೂ ನನ್ನ ಅಸಾಮರ್ಥ್ಯಕ್ಕೆ ಸೇರಿತ್ತು. ಅವರು ತೋರಿದ ಮಾನ ಮರ್ಯಾದೆಗೆ ತಕ್ಕಂತೆ ಸಮಯಕೊಡಲು ನನ್ನಿಂದಾಗಲಿಲ್ಲ. ನಾನು ಪೂರ್ಣ ಅಸಹಾಯ ಸ್ಥಿತಿಯಲ್ಲಿ ಇದ್ದುದನ್ನು ಅವರೇ ನೋಡಿದರು. ಅವರಿಗೆ ನಾನು ಕೊಟ್ಟ ಸಮಾಧಾನ ಒಂದೇ. ಮುಂದೆ ಲಾಹೋರಕ್ಕೆ ಬಂದಾಗ ಅವರ ಕಾಗದ ಪತ್ರಗಳನ್ನೆಲ್ಲ ನೋಡಿ ಕಾಂಗ್ರೆಸ್ ಅವರಿಗೆ ಏನೂ ಅನ್ಯಾಯ ಮಾಡದಂತೆ ನೋಡುತ್ತೇನೆ ಎಂದೆ. ಅಕಾಲಿಗಳ ವಾದಸರಣಿ ಮತ್ತು ಧೈರ್ಯ ನನಗೆ ಮೆಚ್ಚುಗೆ ಆದರೂ, ಅವರು ಯಾವುದೇ ಬಗೆಯ ಅನ್ಯಾಯವನ್ನೂ, ದಬ್ಬಾಳಿಕೆಯನ್ನೂ ಮಾಡಿದರೆ ಅದನ್ನು ಎತ್ತಿ ಹಿಡಿಯಲಾರೆ ಎಂದೆ. ಸರದಾರ ಮಂಗಳಸಿಂಗರು ನನ್ನ ಭಾವನೆಗಳನ್ನು ಪ್ರತಿಧ್ವನಿಸಿ, ಅಕಾಲಿಗಳಿಗೆ ಕೇವಲ ನೈತಿಕ ಆಧಾರದ ಮೇಲೆ ಗುರುದ್ವಾರಗಳನ್ನು ಸುಧಾರಣೆ ಮಾಡುವುದೊಂದೇ ಉದ್ದೇಶ ಎಂದರು.

**ಬೌದ್ಧರ ಪರವಾಗಿ:**

ಸಿಲೋನಿನ ಶ್ರೀ ಪೆರೆರಾ, ಬುದ್ಧಗಯಾ ದೇವಾಲಯದ ಬಗ್ಗೆ ಕಾಂಗ್ರೆಸ್ ಆಸಕ್ತಿ ತೋರಿಸುವಂತೆ ಮಾಡಿರಿ ಎಂದರು. ಈಗ ಕೆಲವು ವರ್ಷಗಳಿಂದ ಬುದ್ಧ ಗಯಾದಲ್ಲಿರುವ ಐತಿಹಾಸಿಕ ಮಹಾದೇವಾಲಯವು ಪುನಃ ಬೌದ್ಧರಿಗೆ ಸೇರಬೇಕೆಂಬ ಒಂದು ಚಳವಳಿ ನಡೆಯುತ್ತಿದೆ ಎಂಬುದು ವಾಚಕರ ನೆನಪಿಗೆ ಬರಬಹುದು. ಆದರೆ ಅದು ಪ್ರಬಲವಾಗಿಲ್ಲ. ಕಾಕಿನಾಡದ ಕಾಂಗ್ರೆಸ್ ಅಧಿವೇಶನದಲ್ಲಿ ಈ ವಿಷಯದ ಬಗೆ ವಿಚಾರಿಸಿ ವರದಿ ಮಾಡುವಂತೆ ಬಾಬೂ ರಾಜೇಂದ್ರ ಪ್ರಸಾದರನ್ನು ನೇಮಿಸಲಾಯಿತು. ಇಲ್ಲಿಯವರೆಗೆ ಅವರು ಹಾಗೆ ಮಾಡಲು ಆಗಿಲ್ಲ. ಕಾಂಗ್ರೆಸ್ ಸಪ್ತಾಹದಲ್ಲಿ ಬೆಳಗಾಂವಿಗೆ ಸಿಲೋನಿನ ಬೌದ್ಧನಿಯೋಗ ಒಂದು ಕಾಂಗ್ರೆಸ್ಸಿನ ಮುಂದೆ ಈ ವಿಷಯವನ್ನು ನಿವೇದಿಸಿ ಅನೇಕ ಕಾಂಗ್ರೆಸ್ ನಾಯಕರನ್ನು ನೋಡಿ, ಆಮೇಲೆ ಶ್ರೀ ಪೆರೆರಾ ನನ್ನನ್ನು ನೋಡಿದರು. ಈ ವಿಷಯದ ಬಗ್ಗೆ ನನಗೆ ಆಗಲೇ ಮನವರಿಕೆ ಆಗಿದ್ದುದರಿಂದ ಅವರು ಇದನ್ನೆಲ್ಲ ನನ್ನ ಮುಂದೆ ತಿಳಿಸಿಹೇಳಬೇಕಾದ ಅಗತ್ಯವೂ ಇರಲಿಲ್ಲ. ಇಲ್ಲೂ ನಾನೇನು ಮಾಡಲು ಸಾಧ್ಯ? ನಾನು ಮೊದಲೇ ಒಪ್ಪಿಕೊಂಡದ್ದಕ್ಕಿಂತ ಹೆಚ್ಚು ಯಾವುದಕ್ಕೂ ನನಗೆ ಸಮಯ ಇರಲಿಲ್ಲ. ಆದರೆ ಶ್ರೀ ಪೆರೆರಾ ಇಲ್ಲ ಎನಿಸಿಕೊಳ್ಳುವವರಲ್ಲ. ಈ ವಿಷಯದಲ್ಲಿ ಅವರಿಗಿದ್ದಷ್ಟು ಶ್ರದ್ಧೆ ನನಗೂ ಇದೆ ಎಂದು ಅವರಿಗೆ ಹೇಳಿದೆ. ಆದರೆ ಈ ದಿಶೆಯಲ್ಲಿ ಕಾಂಗ್ರೆಸ್ ಅವರಿಗೆ ಹೆಚ್ಚು ಪ್ರಯೋಜನಕಾರಿ ಆಗಲಿಕ್ಕಿಲ್ಲ ಎಂದೆ. ಅವರು ಬಹಳ ಒತ್ತಾಯ ಮಾಡಿದರು. ಆದ್ದರಿಂದ ವಿಷಯ ನಿಯಾಮಕ ಸಮಿತಿಯಲ್ಲಿ ಅವರನ್ನು ಮಾತನಾಡ ಗೊಡಬೇಕು. ಅಲ್ಲಿ ನನ್ನ ವಾದವನ್ನು ಅವರು ತಿರಸ್ಕರಿಸಿದರೂ ಅಡ್ಡಿ ಇಲ್ಲ ಎಂದು ಹೇಳಿ ಈ ಬಗ್ಗೆ ನನ್ನಿಂದ ಮಾತು ತೆಗೆದುಕೊಂಡುಹೋದ ಶ್ರೀ ಪೆರೆರಾಗೆ ಅಷ್ಟು ಆತ್ಮವಿಶ್ವಾಸ ಇತ್ತು. ಅವರ ಮಧುರ ವರ್ತನೆಯು, ಅವರ ಸಂಕ್ಷಿಪ್ತ ಮಧುರ ಭಾಷಣವೂ ಸಮಿತಿಯಲ್ಲಿ ಒಳ್ಳೆಯ ಪ್ರಭಾವ ಬೀರಿ, ಆಗಲೇ ಅಲ್ಲೇ ಆ ವಿಷಯವನ್ನು ತೀರ್ಮಾನಿಸುವಂತೆ ಮಾಡಿತು. ಆದರೆ ಸ್ವಲ್ಪ ಚರ್ಚೆಮಾಡಿದ ಮೇಲೆ ಶ್ರೀ ಪೆರೆರಾಗೆ ಕಾರ್ಯತಃ ಸಮಿತಿ ಏನೂ ಸಹಾಯ ಮಾಡಲಾರದೆಂದು ಕಂಡುಬಂದಿತು. ಕಾರಣ ತಮ್ಮ ಪ್ರತಿನಿಧಿಯ ವರದಿ ಅವಕ್ಕಿನ್ನೂ

ಬಂದಿರಲಿಲ್ಲ. ಹಿಂದಿನ ಅಧಿವೇಶನದಲ್ಲಿ ವಿಸ್ತಾರವಾಗಿ ಈ ವಿಷಯವನ್ನು ಚರ್ಚೆ ಮಾಡಿ, ಮತಭೇದ ಕಂಡುಬಂದದ್ದರಿಂದ ಅಲ್ಲಿಗೇ ಕೈಬಿಟ್ಟಿತ್ತು. ಆದ್ದರಿಂದ ಸಮಿತಿ ಮಾಡಬಹುದಾಗಿದ್ದದ್ದು, ರಾಜೇಂದ್ರಬಾಬು ತಮ್ಮ ವಿಚಾರಣೆಯನ್ನು ಬೇಗ ಮುಗಿಸಿ ಈ ತಿಂಗಳ ಕೊನೆಯೊಳಗಾಗಿ ವರ್ಕಿಂಗ್ ಕಮಿಟಿಗೆ ತಮ್ಮ ವರದಿಯನ್ನು ಒಪ್ಪಿಸಬೇಕು ಎಂಬ ತೀರ್ಮಾನ. ಈ ದೇವಾಲಯ ಬೌದ್ಧರ ಕೈಯಲ್ಲೇ ಇರಬೇಕು ಎಂಬುದಕ್ಕೆ ಸಂದೇಹ ಇಲ್ಲ. ಕಾನೂನಿನ ತೊಡಕುಗಳು ಬೇಕಾದಷ್ಟು ಬರಬಹುದು. ಅವನ್ನು ನಿವಾರಿಸಿಕೊಳ್ಳಲೇ ಬೇಕು. ಅಲ್ಲಿ ಪ್ರಾಣಿಬಲಿ ನಡೆಯುತ್ತಿದೆ ಎಂಬ ಮಾತು ನಿಜವಾದರೆ, ನಿಜಕ್ಕೂ ಅದು ಅಧಾರ್ಮಿಕವೇ. ಬೌದ್ಧರ ಮನಸ್ಸಿಗೆ ನೋವಾಗುವಂತೆ ಅಲ್ಲಿ ಪೂಜೆ ನಡೆಯುತ್ತಿದ್ದರೆ ಅದು ಕೂಡ ಅಧಾರ್ಮಿಕವೇ. ನ್ಯಾಯವಾದ ಧರ್ಮದರ್ಶಿಗಳಿಗೆ ದೇವಾಲಯ ಸೇರುವಂತೆ ಸಹಾಯಮಾಡುವದು ನಮಗೆ ಹೆಮ್ಮೆ ಎನಿಸಬೇಕು. ರಾಜೇಂದ್ರಬಾಬು ಈ ವಿಷಯದ ಬಗ್ಗೆ ಇರುವ ಎಲ್ಲ ಸಾಹಿತ್ಯವನ್ನೂ ಶೇಖರಿಸಿ, ಬೌದ್ಧ ವಾರಸುದಾರರಿಗೆ ಪರವಾಗಿ ವಾದಿಸುವ ಎಲ್ಲರಿಗೂ ಮಾರ್ಗದರ್ಶಕ ಆಗುವಂಥ ಒಂದು ವರದಿಯನ್ನು ಸಿದ್ಧಮಾಡುತ್ತಾರೆಂದು ನಂಬಿದ್ದೇನೆ. ಶ್ರೀ ಪೆರೆರಾ ಕೂಡ ಭಾರತದಲ್ಲೇ ಇದ್ದು ರಾಜೇಂದ್ರಬಾಬುಗೆ ನೆರವಾಗಲಿ ಎಂದು ಬಯಸುತ್ತೇನೆ.

**ಖಾದೀ ಅರಮನೆ:**

ಸ್ವಾಗತ ಸಮಿತಿಯ ಅಧ್ಯಕ್ಷರಾದ ಗಂಗಾಧರರಾಯರು ಖಾದಿಯ ಅರಮನೆಯ ಬಗ್ಗೆ ಒಂದು ವಿವರಣೆ ಕೊಟ್ಟರು. ಗಾಂಧೀಜಿಗಾಗಿ ನಿರ್ಮಿಸಿದ ಗುಡಿಸಲಿಗೆ ೩೫೦ ರೂಪಾಯಿ ವೆಚ್ಚ ಆಯಿತಂತೆ. ಗುಡಿಸಲು ಸಾದಾ ರೀತಿಯದು. ಆದರೆ ಅದು ಸುಂದರವಾಗಿಯೂ ಕಾಣುವಂತೆ ಸ್ವಲ್ಪ ಅಲಂಕಾರ ಮಾಡಿತ್ತು. ಗಾಂಧೀಜಿಗೆ ಈ ಅಲಂಕಾರ ಸರಿ ಬೀಳಲಿಲ್ಲ. ಗುಡಿಸಲಿಗೆ ಉಪಯೋಗಿಸಿದ್ದ ಸಾಮಾನು ಎಲ್ಲವೂ ಮತ್ತೆ ಮಾರಾಟಮಾಡಲು ಬರುವಂಥದು. ಆದರೂ ವಲ್ಲಭಭಾಯಿ ಹಾಗೆಯೆ ಗಂಗಾಧರರಾಯರೂ ಆಡಂಬರದ ಚಪಲಕ್ಕೆ ಬಲಿಬಿದ್ದರು ಎಂದು ಗಾಂಧೀಜಿ ಹೇಳಿದರು.

ಈ ಅರಮನೆಗೆ ವೆಚ್ಚವಾದ ೩೫೦ ರೂಪಾಯಿನಲ್ಲಿ ೨೫೦ ರೂಪಾಯಿನ ಸಾಮಾನು ಮಾರಾಟವಾಯಿತು. ಇದನ್ನು ಮುಂದೆ ಅಭಿಮಾನಪೂರ್ವಕವಾಗಿ ಗಂಗಾಧರರಾಯರು ಗಾಂಧೀಜಿಗೆ ತಿಳಿಸಿ, ಅವರ ಟೀಕೆ ತಪ್ಪೆಂದು ಮನಗಾಣಿಸಿಕೊಟ್ಟರು.

ದೀಪದ ವ್ಯವಸ್ಥೆ ಅತ್ಯುತ್ತಮವಾಗಿತ್ತು ಎಂದು ಗಾಂಧೀಜಿ ಬರೆದರಲ್ಲ. ಅದಕ್ಕೆ ಕಾರಣ ವಿದ್ಯುದ್ದೀಪದ ಜೊತೆಗೆ, ಅವಶ್ಯವಿದ್ದಲ್ಲೆಲ್ಲ ಕಿಟ್ಸನ್ ಮತ್ತು ಮೆಟ್ರೋಮ್ಯಾಕ್ಸ್ ದೀಪಗಳನ್ನು ಹಚ್ಚಿದ್ದರು. ಅಧಿವೇಶನ ಮುಗಿದಮೇಲೆ ಅವನ್ನೂ ಮಾರಿದರು. ನೂರಕ್ಕೆ ೯೦ರಷ್ಟು ಹಣ ತಿರುಗಿಬಂತು. ವಿದ್ಯುತ್ತನ್ನೇ ಅವಲಂಬಿಸಬಾರದು, ನಡುವೆ ಕೆಟ್ಟರೆ ಏನು ಗತಿ ಎಂದು ಈ ಏರ್ಪಾಟು ಮಾಡಿತ್ತು. ಶೋಭಾಯಮಾನ ಸ್ಥಾನಗಳಲ್ಲಿ ಮಾತ್ರ ವಿದ್ಯುದ್ದೀಪ. ಈ ಕೆಲಸವನ್ನು ಯಾಳಗೀ ಜೀವಣರಾಯರಿಗೆ ಒಪ್ಪಿಸಲಾಗಿತ್ತು.

ಮಂಟಪಗಳನ್ನೂ, ಗುಡಿಸಲುಗಳನ್ನೂ ಕಟ್ಟುವ ಕೆಲಸ ಅಗ್ಗವಲ್ಲಾಯಿತು. ಆದರೂ

ಹೊರಗೆ ನೋಡಲು ಬಹಳ ಅಲಂಕಾರ ಆಗಿದ್ದವು. ಸ್ವಯಂ ಸೇವಕರ ವಿಭಾಗವೂ ಒಂದು ಮುಖ್ಯ ವಿಭಾಗ. ಡಾ. ಹರ್ಡೀಕರರ ಹಿಂದೂಸ್ತಾನೀ ಸೇವಾದಳ ಈ ಕೆಲಸವನ್ನು ಬಹಳ ಸಮರ್ಪಕವಾಗಿ ಮಾಡಿ ಗಾಂಧೀಜಿಯ ಮೆಚ್ಚುಗೆಗೆ ಪಾತ್ರವಾಯಿತು. ಶೌಚಕೂಪ, ಮೂತ್ರದಮನೆ, ನೀರಿನ ಬಚ್ಚಲುಗಳ ಸ್ವಚ್ಛತೆಯ ಹೊಣೆಗಾರಿಕೆ ಸೇವಾದಲದ ಒಂದು ಗುಂಪಿಗೆ ವಹಿಸಿತ್ತು. ಕಾಕಾ ಕಾಲೇಲ್ಕರರ ಸತ್ಯಾಗ್ರಹ ಆಶ್ರಮದ ಅನುಭವ ಲಾಭ ಈ ಗುಂಪಿಗೆ ಸಿಕ್ಕಿದ್ದರಿಂದ ಈ ಕೆಲಸ ಬಹಳ ಚೊಕ್ಕಟ್ಟವಾಯಿತು. ಈ ಕೆಲಸವನ್ನು ಪರಿಶೀಲಿಸಲು ಗಾಂಧೀಜಿ ನಿತ್ಯವೂ ಬೆಳಗ್ಗೆ ಸ್ವಯಂ ಹೋಗುತ್ತಿದ್ದರು.

ಶಿಬಿರದಲ್ಲಿ ಒಂದು ಹಂಗಾಮೀ ಆಸ್ಪತ್ರೆಯೂ ಇತ್ತು. ಒಬ್ಬ ರೋಗಿಯೂ ಈ ಆಸ್ಪತ್ರೆ ಸೇರಲಿಲ್ಲ. ಅಷ್ಟರಮಟ್ಟಿಗೆ ಅಧಿವೇಶನ ಆರೋಗ್ಯಪೂರ್ಣವಾಗಿತ್ತು. ಉತ್ಕಲದ ನಾಯಕರು ಗೋಪಬಂಧುದಾಸ ಬರುವಾಗಲೇ ಜ್ವರದಿಂದ ಬಂದರು. ಬೆಳಗಾಂವಿಗೆ ಬಂದ ಮರುದಿನವೇ ಅವರಿಗೆ ಗುಣವಾಯಿತು.

ಅಡಿಗೆ ಊಟದ ವ್ಯವಸ್ಥೆಯನ್ನೂ ಗುತ್ತಿಗೆ ಕೊಡದೆ ಸ್ವಾಗತ ಸಮಿತಿಯೇ ವಹಿಸಿಕೊಂಡಿತು. ಹೈದರಾಬಾದಿನ ಕಾಂಗ್ರೆಸ್ ಮುಖಂಡ ವಾಮನ ನಾಯಕರು ಒಳ್ಳೆಯ ಅಡಿಗೆಯವರನ್ನು ಕಳಿಸಿಕೊಟ್ಟಿದ್ದರು. ಬೆಳಗಾಂವಿ ಜಿಲ್ಲೆಯಲ್ಲಿ ಬೇಕಾದಷ್ಟು ಬೆಣ್ಣೆ. ಬೆಳಗಾಂವಿಯಲ್ಲಿ ತುಪ್ಪದ ವ್ಯಾಪಾರ ಹೆಚ್ಚು. ಸಾಕಷ್ಟು ಬೆಣ್ಣೆ ಕೊಂಡು, ತುಪ್ಪ ಕಾಸಿ ಇಟ್ಟದ್ದರಿಂದ ವೆಚ್ಚ ಸ್ವಲ್ಪ; ಕೆಲಸ ಚೆನ್ನಾಯಿತು. ಬೆಳಗಾಂವಿಯಲ್ಲಿ ತೋಟಗಾರಿಕೆಯೂ ಹೆಚ್ಚು. ಉತ್ತಮವಾದ ಹೊಸ ಹೊಸ ಕಾಯಿ ಪಲ್ಲೆಗಳನ್ನೂ ಆ ತೋಟಗಾರರು ಅಭಿಮಾನಪೂರ್ವಕ ಕೊಟ್ಟರು. ಸಾಂಗಲಿಯಿಂದ ಹಾಲು ಕೊಂಡು ಅಲ್ಲಿಯೇ ಹೆಪ್ಪು ಹಾಕಿ, ಮೊಸರನ್ನು ತರುವ ವ್ಯವಸ್ಥೆ ಮಾಡಿತ್ತು. ಆ ಮೊಸರೂ ತುಂಬ ಒಳ್ಳೆಯದು ಮತ್ತು ಗಟ್ಟಿ, ಸಾಕಷ್ಟು ಸಿಗುತ್ತಿತ್ತು, ಶ್ರೀಖಂಡದ ಭೋಜನಕ್ಕಂತೂ ಕೊರತೆಯೇ ಇರಲಿಲ್ಲ. ಈ ವಿಭಾಗದಲ್ಲಿ ಸುಮಾರು ೨೦೦ ಜನ ಮಹಿಳಾ ಸ್ವಯಂ ಸೇವಿಕೆಯರು ಕೆಲಸ ಮಾಡಿದ್ದರಿಂದ ಚಟ್ನಿ, ಕೋಸಂಬರಿ, ಪಳದ್ಯ, ಉಪ್ಪಿನಕಾಯಿ ಮುಂತಾದವನ್ನೂ ಮಾಡಿಸಿದರು. ಸರ್ವರಿಗೂ ಊಟಕ್ಕೆ ಸ್ವಚ್ಛ ಸುಂದರ ಬಾಳೆ ಎಲೆ ಮತ್ತು ದೊನ್ನೆ, ಕೂಡಲು ಕಲಾಮಯ ಆಸನ, ಅದರ ಸುತ್ತ ರಂಗೋಲೆ.

ಅಡಿಗೆ ಎಷ್ಟೇ ಚೆನ್ನಾಗಿದ್ದರೂ ಬಡಿಸುವವರು ಚೆನ್ನಾಗಿರದೇ ಹೋದರೆ ಎಲ್ಲವೂ ಕೆಟ್ಟು ಹೋಗುತ್ತದೆ. ಇದುವರೆಗೂ ಆದ ಕಾಂಗ್ರೆಸ್ಸುಗಳಲ್ಲಿ ಅಡಿಗೆ ಚೆನ್ನಾಗಿ ಇದ್ದರೂ ಸ್ವಚ್ಛತೆ ಕಡಿಮೆ. ಇದರಿಂದ ಊಟದ ಪಂಕ್ತಿಯಲ್ಲಿ ಗಲಾಟೆ ಹೆಚ್ಚು. ಬಡಿಸುವದೂ ಕೂಡ ಒಂದು ಕಲೆ. ಈ ಕಲೆಯು ಈ ಅಧಿವೇಶನದಲ್ಲಿ ಚೆನ್ನಾಗಿ ಪ್ರದರ್ಶಿತವಾಯಿತು. ಊಟ ಎರಡೂ ಹೊತ್ತಿನದು ಸೇರಿ ಒಂದೂವರೆ ರೂಪಾಯಿ ಆಯಿತು. ಪಾತ್ರೆಗಳನ್ನು ಸಹ ಮತ್ತೆ ಹೊಸದಾಗಿ ಕಾಣುವಂತೆ ಮಾಡಿ ಮಾರಲಾಯಿತು. ಯಾವ ವಿಧದಲ್ಲಿಯೂ ನಷ್ಟವಾಯಿತು ಎನ್ನುವ ಹಾಗೆ ಇರಲಿಲ್ಲ.

"ಮೈಸೂರು ಸಂಸ್ಥಾನದಿಂದ ಸಾಕಷ್ಟು ಸಹಾಯ ದೊರೆಯಿತು. ಭಾರತದ ರಾಜಕಾರಣದಲ್ಲಿ

ಅವರು ಪ್ರತ್ಯಕ್ಷವಾಗಿ ಭಾಗವಹಿಸಿದ ಪ್ರಸಂಗ ಇದೇ ಮೊದಲನೆಯದು. ಅದರಿಂದ ಅವರಿಗೆ ಬಹಳ ಉತ್ಸಾಹ ಉಂಟಾಯಿತು. ಈ ಕಾಂಗ್ರೆಸ್ಸಿನ ಕಾರಣದಿಂದ ಬ್ರಿಟಿಷ್ ಕರ್ನಾಟಕಕ್ಕೆ ಅವರು ಹೋಗಿಬರುವದು ಸಹ ಈಗಿನಿಂದಲೇ ಪ್ರಾರಂಭವಾಯಿತು. ೧೯೩೦ರ ಮತ್ತು ಅನಂತರದ ಚಳವಳಿಯಲ್ಲಿ ಅಲ್ಲಿಯ ಜನರು ಸಾಕಷ್ಟು ಭಾಗ ತೆಗೆದುಕೊಂಡರು. ಖಾದೀ ಕಾರ್ಯಕ್ಕೂ ತುಂಬ ಸಹಾಯಮಾಡಿದರು.

"ಅಂದಿನ ಮೈಸೂರು ಸಂಸ್ಥಾನದ ಸರಕಾರದವರೂ ಬೆಳಗಾಂವಿ ಕಾಂಗ್ರೆಸ್ಸಿನ ಪ್ರದರ್ಶನಕ್ಕೆಂದು ತಮ್ಮ ಸಂಗ್ರಹಾಲಯದಲ್ಲಿನ ಕೆಲವು ವಸ್ತುಗಳನ್ನು ತಮ್ಮ ವೆಚ್ಚದಿಂದ ಕಳಿಸಿದ್ದರು. ಅದರಲ್ಲಿ ಬೆಲೆಯುಳ್ಳ ಹಳೆಯ ಬಟ್ಟೆಯ ನಮೂನೆಗಳು ಇದ್ದವು. ಅದರಂತೆ ತಮ್ಮ ವೆಚ್ಚದಿಂದ ಸಂಗೀತಗಾರರ, ವಾದ್ಯಗಾರರ, ಬಜಂತ್ರಿಯವರ ಮೇಳವನ್ನೂ ಕಳಿಸಿದ್ದರು. ಅದರಲ್ಲಿ ವೀಣೆ ನುಡಿಸುವುದರಲ್ಲಿ ಭಾರತದಲ್ಲಿಯೇ ಪ್ರಸಿದ್ಧರಾದ ವೀಣೆ ಶೇಷಣ್ಣನವರೂ ಇದ್ದರು. ಅವರಿಗೆ ಸಾಕಷ್ಟು ವಯಸ್ಸು ಆಗಿತ್ತು. ಆದರೂ ಅವರ ವೀಣಾವಾದನ ಕೌಶಲ್ಯವನ್ನು ನೋಡಿ ಎಲ್ಲರೂ ಬೆರಗಾದರು. ಸ್ವತಃ ಗಾಂಧೀಜಿಯವರು ಒಂದುವರೆ ಗಂಟೆಯ ಹೊತ್ತು ಅವರ ವಾದನವನ್ನು ಏಕಾಗ್ರತೆಯಿಂದ ಕೇಳುತ್ತಿದ್ದರು.

"ಸ್ವಾಗತ ಸಮಿತಿಯ ಸಭೆಯಲ್ಲಿ ಕಾಂಗ್ರೆಸ್ ಅಧಿವೇಶನದ ಸ್ಥಳಕ್ಕೆ ಕರ್ನಾಟಕ ಸಾಮ್ರಾಜ್ಯದ ಮುಖ್ಯ ರಾಜಧಾನಿಯಾಗಿದ್ದ ವಿಜಯನಗರದ ಹೆಸರನ್ನೂ ಇಡಬೇಕೆಂದು ನಿರ್ಣಯವಾಯಿತು. ಅದರಂತೆಯೇ ಬೀದಿಗಳಿಗೆ ಆಧುನಿಕ ದೇಶಭಕ್ತರ ಹೆಸರನ್ನಿಡದೇ, ಕರ್ನಾಟಕದ ಇತಿಹಾಸ ಪ್ರಸಿದ್ಧ ಪುರುಷರ ಹೆಸರನ್ನಿಡಲಾಯಿತು. (ಉದಾಹರಣೆಗೆ ವಿದ್ಯಾರಣ್ಯ ಬೀದಿ). ವಿಜಯನಗರದ ವಿರುಪಾಕ್ಷ ಮಂದಿರದ ಪ್ರವೇಶದ್ವಾರದ ಮೇಲೆ ಒಂದು ಎತ್ತರವಾದ ಗೋಪುರ ಇದೆ. ಅದರ ನಿದರ್ಶನ ಎಂದು ಕಾಂಗ್ರೆಸ್ ಡೇರೆಯ ಮಹಾದ್ವಾರಕ್ಕೆ ಗೋಪುರವನ್ನು ಮಾಡಿಸುವ ದೆಂದು ನಿರ್ಣಯವಾಗಿತ್ತು. ಒಟ್ಟಿನಲ್ಲಿ ಕರ್ನಾಟಕದ ವೈಶಿಷ್ಟ್ಯವನ್ನು ತೋರಿಸಬೇಕಾಗಿತ್ತು ಎಂದು ಸ್ವಾಗತಾಧ್ಯಕ್ಷರಾದ ಶ್ರೀ ದೇಶಪಾಂಡೆ ಗಂಗಾಧರರಾಯರು ತಮ್ಮ ಆತ್ಮಕಥೆಯಲ್ಲಿ ಬರೆದಿದ್ದಾರೆ.

ಮಹಾದೇವ ದೇಸಾಯಿಯವರು ಬರೆದ ದಿನಚರಿಯಿಂದ ಬೆಳಗಾಂವಿಯ ಕರ್ನಾಟಕ ಕಾಂಗ್ರೆಸ್ಸಿಗೆ ಸಂಬಂಧಿಸಿದ ಕೆಲವು ಮಾತುಗಳನ್ನು ಎತ್ತಿಕೊಡಲಾಗಿದೆ. "ಬೆಳಗಾಂವಿಯ ಪುಣ್ಯತೀರ್ಥದಲ್ಲಿ" ಎಂಬ ಲೇಖನದಿಂದ ಈ ಮುಂದಿನ ಭಾಗವನ್ನು ಆಯ್ದುಕೊಂಡಿದೆ.

"ಬೆಳಗಾಂವಿಯ ನೆನಪು ಪುಣ್ಯತೀರ್ಥದ ರೂಪದಲ್ಲಿಯೇ ಆಗುತ್ತದೆ. ಗಂಗಾಧರ ರಾಯರ ಪ್ರೇಮದಿಂದ ತುಂಬಿದ ವಾತಾವರಣ, ಶಿಕ್ಷಣ ಹಾಗೂ ಅಜ್ಞಾಪಾಲನೆಯ ರಹಸ್ಯವನ್ನು ತಿಳಿದ ಸ್ವಯಂ ಸೇವಕರ ಭಕ್ತಿ, ಹೆಜ್ಜೆ ಹೆಜ್ಜೆಗೂ ಅಹಿಂಸೆಯ ನೆನಪನ್ನು ಕೊಡುವ ಗಾಂಧೀಜಿ, ಅಹಿಂಸೆಯ ಪರಾಕಾಷ್ಠೆಯನ್ನು ಪ್ರಕಟಿಸುವ ಉದ್ದೇಶದಿಂದ ಸೇರಿದ ಮಹಾಸಮ್ಮೇಳನ. ಇದೆಲ್ಲ ವಾತಾವರಣವನ್ನು ಪವಿತ್ರ ತೀರ್ಥ ಎನ್ನದೇ ಮತ್ತೇನೆನ್ನಬೇಕು? ಬೆಳಗಾಂವಿಯಲ್ಲಿ ಏನಾದೀತು ಏನು ಆಗಲಿಕ್ಕಿಲ್ಲ ಎಂಬುದಕ್ಕಿಂತ ಹೆಚ್ಚಾಗಿ ಗಾಂಧೀಜಿಯವರು ಕಾಂಗ್ರೆಸ್ಸಿಗೆ

ಅಧ್ಯಕ್ಷರಾಗಿ ಬರುವುದು ಕರ್ನಾಟಕದ ಭಾಗ್ಯ ಎನ್ನಬೇಕು. ಏಳೆಂಟುದಿನ ಗಾಂಧೀಜಿಯವರ ವಿಚಾರ, ಕಾರ್ಯಗಳಿಂದ ಬೆಳಗಾಂವಿಯ ವಾತಾವರಣವು ಪುನೀತವಾಯಿತು. ಗಾಂಧೀಜಿಗಾಗಿ ಒಂದು ಸುಂದರ ಖಾದಿ ಕುಟಿಯನ್ನು ಸಿದ್ಧಮಾಡಿದರು. ವಲ್ಲಭಭಾಯಿ, ರಾಜೇಂದ್ರ ಪ್ರಸಾದ. ಶಂಕರ್‌ಲಾಲ, ರೇವಾಶಂಕರ, ರಾಜಗೋಪಾಲಾಚಾರ್ಯರು, ಸರೋಜಿನಿ ನಾಯ್ಡು. ಮೌ.ಶೌಕತ್ ಆಲಿ. ಮೌ. ಮಹಮ್ಮದ ಅಲ್ಲಿ, ಪಂಡಿತ್ ಮೋತೀಲಾಲ, ಚಿತ್ತರಂಜನ ದಾಸ, ಲಾಲಾ ಲಜಪತರಾಯ ಅವರಿವರು ಎನ್ನಲೇಕೆ ಎಲ್ಲ ದೇಶನಾಯಕರೂ ಬಂದಿದ್ದರು. ರಾಜಗೋಪಾಲಾಚಾರ್ಯರು ಶರೀರದಿಂದ ದುರ್ಬಲರು. ಅವರಿಗೂ ಸರೋಜಿನಿ ನಾಯ್ಡು ಅವರಿಗೂ ಬೇರೆ ಏರ್ಪಾಟು ಮಾಡಲಾಗಿತ್ತು."

"ಪವಿತ್ರ ತೀರ್ಥದ ಬಾಹ್ಯ ಪಾವನತೆಯನ್ನು ಹೇಳುವದರಲ್ಲಿ ಆಂತರಿಕ ಪಾವನತೆಯನ್ನು ಮರೆಯಲಾಗದು. ಇಲ್ಲಿಗೆ ಬಂದು ನಾಲ್ಕು ದಿನ ಆಯಿತು. ಒಂದು ಗಂಟೆಯೂ ವ್ಯರ್ಥ ವಾಗಲಿಲ್ಲ. ಹಿಂದೆ ಯಾವ ಕಾಂಗ್ರೆಸ್ಸಿನಲ್ಲೂ ಹೀಗೆ ನಡೆದಿರಲಿಲ್ಲ. ಮೊದಲನೆಯ ದಿನ ಮಾತ್ರ ಮಧ್ಯಾಹ್ನ ೩ ಗಂಟೆಗೆ ಸೇರಬೇಕಾಗಿದ್ದ ಸಭೆ ೫ ನಿಮಿಷ ತಡವಾಗಿ ಸೇರಿತು. ಕಾರಣ ಮೌ.ಮಹಮ್ಮದ ಆಲಿ ೫ ನಿಮಿಷ ತಡಮಾಡಿ ಬಂದರು. ಉಳಿದದ್ದೆಲ್ಲ ಎಂದರೆ ಅವರು ಅಧ್ಯಕ್ಷ ಪದವಿಯನ್ನು ಬಿಟ್ಟುಕೊಡುವದು, ಅವರಿಗೆ ಧನ್ಯವಾದ ಕೊಡುವದು ಎರಡೇ ಎರಡು ನಿಮಿಷ."

"ಕಾಂಗ್ರೆಸ್ಸಿನ ವ್ಯವಸ್ಥೆಯಂತೂ ಬಹಳ ಸೊಗಸಾಗಿತ್ತು. ಎಲ್ಲರಿಗೂ ತೃಪ್ತಿಯಾಯಿತು. ಒಂದೇ – ಬೆಳಗಾಂವಿಯ ಕೆಂಪು ಮಣ್ಣು ಮಾತ್ರ ಎಲ್ಲರ ಬಟ್ಟೆಗೂ ಬಣ್ಣ ಬಳಿಯಿತು. ಇದೊಂದನ್ನು ಬಿಟ್ಟರೆ ಯಾವುದೂ ಯಾರದೂ ದೂರು ಇರಲಿಲ್ಲ. ದಾರಿಯಲ್ಲಿ ಎಡಗಡೆ ಬಲಗಡೆ ಓಡಾಡುವ ಅಚ್ಚು ಕಟ್ಟು, ಸಾವಿರಾರು ಜನರ ಗುಂಪು ನೆರೆದ ದಿನವೂ ಮುರಿಯಲಿಲ್ಲ. ಭಂಗೀ ವಿಭಾಗದಲ್ಲಿ ೮೦ ಜನ ಸ್ವಯಂ ಸೇವಕರು ನಗರಪಾಲಿಕೆಯ ಭಂಗಿಗಳ ಸಹಾಯ ಪಡೆದು ಕೆಲಸ ಮಾಡಿದರು. ಕಾಕಾ ಸಾಹೇಬರ ನೇತೃತ್ವ. ಇದರಲ್ಲಿ ವಿಶೇಷ ಉಲ್ಲೇಖನೀಯ ಮಾತು ಎಂದರೆ ಈ ಸ್ವಯಂ ಸೇವಕರಲ್ಲಿ ಹೆಚ್ಚು ಜನ ಬ್ರಾಹ್ಮಣರು. ನೂಲಬೇಕು ಎಂದು ಬಯಸುವವರಿಗೆ ಚರಖಾ ಮಂಟಪದಲ್ಲಿ ರಾಟೆ ಇದ್ದವು. ಎಲ್ಲಿ ನೋಡಿದರೂ ಖಾದಿಯೇ. ಖಿಲಾಫತ್ ಕಮಿಟಿಯವರೂ ಮುಸಲ್ಮಾನ ಸ್ವಯಂ ಸೇವಕರೇ ಬೇಕು ಎಂದು ಹಟಹಿಡಿಯದೇ ಇದ್ದಿದ್ದರೆ ಇನ್ನೂ ಚೆನ್ನಾಗಿತ್ತು. ಮುಸಲ್ಮಾನರಿದ್ದಲ್ಲಿ ಹಿಂದೂ ಸ್ವಯಂ ಸೇವಕರು ಕೆಲಸ ಮಾಡಿದ್ದರೆ ಎಷ್ಟು ಚನ್ನಾಗಿರುತ್ತಿತ್ತು. ಕಾಂಗ್ರೆಸ್ ಕ್ಷೇತ್ರವನ್ನು ಶೃಂಗಾರ ಮಾಡುವವರಲ್ಲಿ ಏನೂ ಲೋಪವಿರಲಿಲ್ಲ. ಸಭಾಮಂಟಪಕ್ಕೆ ಹೋಗುವಾಗಿನ ಗೋಪುರ ಅದರ ಮೇಲೆ ರಾತ್ರಿ ಬೆಳಗುವ ದೀಪಮಾಲೆ. ಒಳಗಡೆಯ ಸುಂದರ ವಾತಾವರಣ ಗಾಂಧೀಜಿಯ ಕಣ್ಣನ್ನು ತುಂಬಿದವು. ರಾಷ್ಟ್ರ ಕಾರ್ಯವನ್ನು ಸೌಂದರ್ಯಪೂರ್ಣವಾಗಿ ಹೇಗೆ ನಡೆಸಬಹುದೆಂಬುದನ್ನು ಕರ್ನಾಟಕ ಕಾಂಗ್ರೆಸ್ಸು ತಿಳಿಸಿಕೊಟ್ಟಿತು. ಆದರೆ ಗಾಂಧೀಜಿ ಛೇಡಿಸದೇ ಬಿಡಲಿಲ್ಲ. "ನಾನಂತೂ ಬನಿಯಾ. ಕಾಸುಕಾಸನ್ನೂ ಎಣಿಸುವವ. ನನಗೆ ಖಾದಿಕುಟಿಯನ್ನು ಮಾಡಿಸಿದ್ದೇವೆ ಎಂದು ಹೇಳುತ್ತಾರೆ. ಇದನ್ನು ನಿರ್ಮಿಸಲು ಎರಡು ಸಾವಿರ ರೂಪಾಯಿಗಿಂತ ಕಡಿಮೆ ವೆಚ್ಚ

ಆಗಿರಲಾರದು. ಪ್ರತಿನಿಧಿಗಳು ಸಾಮಾನ್ಯ ಚಪ್ಪರಗಳಲ್ಲಿ ಇದ್ದಾರೆ. ಅವರ ಮೇಲೆ ಭಗವಾನ ಸೂರ್ಯನಾರಾಯಣನ ಸ್ಪರ್ಶವೂ ಆಗುತ್ತದೆ. ರಾತ್ರಿ ಚಳಿಗಂತೂ ಮಿತಿಯೇ ಇಲ್ಲ. ಆದ್ದರಿಂದ ನನಗೆ ಖಾದಿಯ ಅರಮನೆಯನ್ನು ಕೊಟ್ಟಿದ್ದೀರಿ ಎಂದರೆ ತಪ್ಪೇನಲ್ಲ."

"ಭೋಜನಾಲಯದ ಸ್ವಚ್ಛತೆಯು ಕಣ್ಣಿಗೆ ಒತ್ತಿಕೊಳ್ಳುವ ಹಾಗಿತ್ತು. ಊಟಕ್ಕೆ ಕುಳಿತು ಕೊಳ್ಳುವ ಸ್ಥಾನ ಕನ್ನಡಿಯ ಹಾಗೆ ಸ್ವಚ್ಛ. ಅದಕ್ಕೆ ಅಲಂಕಾರವಾಗಿ ಸುತ್ತಲೂ ಚೆಂದವಾದ ಸ್ವಸ್ತಿಕದ ರಂಗೋಲೆ. ಗಾಂಧೀಜಿಯ ಖಾದಿಯ ಕುಟಿಯ ಮುಂದೆ ದಿನವೂ ಗುಡಿಸಿ ಸ್ವಚ್ಛಮಾಡಿ ರಂಗೋಲೆ ಹಾಕಲು ಬೆಳಗಾಂವಿ ನಗರದಿಂದ ಎರಡು ಮೈಲಿ ನಡೆದು ಬರುತ್ತಿದ್ದರು ಮಹಿಳೆಯರು. ಸುಂದರವಾದ ಕನ್ನಡ ಅಕ್ಷರಗಳಲ್ಲಿ ರಂಗೋಲೆ ಹಿಟ್ಟಿನಿಂದ - "ಬನ್ನಿರಿ, ಬನ್ನಿರಿ, ರಾಟೆ ತಿರುಗಿಸಿರಿ, ಬಡತನ ಹೋಗಿಸಿರಿ" ಎಂದು ಬರೆದಿರುತ್ತಿತ್ತು. ಅಡಿಗೆ ಮಾಡುವವರು ಅಲ್ಲದೆ ಬಡಿಸುವುದಕ್ಕೆ ಮುನ್ನೂರು ಜನ ಸ್ವಯಂ ಸೇವಕರು. ಇವರೆಲ್ಲರೂ ದೊಡ್ಡ ದೊಡ್ಡ ಮನೆತನದವರು ಇಂಥ ಕೆಲಸವನ್ನು ಇವರು ಯಾವಾಗಲೂ ಮಾಡುತ್ತಾರೆ.

"ಈ ರಾಷ್ಟ್ರೀಯ ಸಪ್ತಾಹದಲ್ಲಿ ಯಾವುದನ್ನು ವರ್ಣಿಸಬೇಕು? ಕಾಂಗ್ರೆಸ್ಸನ್ನು ನೋಡಬೇಕೆ, ಅಥವಾ ಕಾಂಗ್ರೆಸ್ಸಿನ ಮರಕ್ಕೆ ಸುತ್ತಿಕೊಂಡಿರುವ ಅನೇಕ ಶಾಖಾ ಸಭೆ ಸಮ್ಮೇಲನಗಳನ್ನು ನೋಡಬೇಕೆ? ಈ ಸಪ್ತಾಹದಲ್ಲಿ ಕಾಂಗ್ರೆಸ್ಸಲ್ಲದೆ ಬೇರೆ ೧೬ ಸಮ್ಮೇಲನಗಳು ನಡೆದವು. ಸಮಾಜ ಸುಧಾರಣೆಯ ಸಮ್ಮೇಲನ ಯಾವಾಗ ನಡೆಯಿತೋ ಯಾವಾಗ ಮುಗಿಯಿತೋ ಯಾರಿಗೂ ಗೊತ್ತೇ ಆಗಲಿಲ್ಲ. ವಲ್ಲಭಭಾಯಿ ಹಿಂದೀ ಸಮ್ಮೇಲನದ ಅಧ್ಯಕ್ಷರಾಗಬೇಕಾಗಿದ್ದಿತು. ಆದರೆ ಅವರ ಸಮ್ಮೇಲನಕ್ಕೆ ಬೇರೆ ಯಾವುದೂ ತೆರಪಿರಲಿಲ್ಲ. ವಿದ್ಯಾರ್ಥಿ ಸಮ್ಮೇಲನವಂತೂ ಇದ್ದೇ ಇತ್ತು. ಅದರ ಜೊತೆಯಲ್ಲಿ ಶಿಕ್ಷಕರ ಸಮ್ಮೇಲನವೂ ಆಯಿತು. ವಿದ್ಯಾರ್ಥಿಗಳ ತಂದೆತಾಯಿ ಸಮ್ಮೇಲನ ಮಾಡಿಕೊಂಡರೆ ವಿದ್ಯಾರ್ಥಿಗಳೂ ಶಿಕ್ಷಕರೂ ಏಕೆ ಮಾಡಿಕೊಳ್ಳಬಾರದು? ಇದರ ಜೊತೆಗೆ ವಾಚನಾಲಯ ಸಮ್ಮೇಲನ, ರೈಲ್ವೆ ಪ್ರವಾಸಿಗಳ ಸಮ್ಮೇಲನ ಆಯುರ್ವೇದ ಸಮ್ಮೇಲನ, ಪ್ರಕೃತಿ ಚಿಕಿತ್ಸಾ ಸಮ್ಮೇಲನ. ಈ ಹೆಸರುಗಳ ಪಟ್ಟಿಯನ್ನು ಕೇಳಿದರೆ ಸಾಕು. ಮನುಷ್ಯ ಹೆದರಿಕೊಳ್ಳಬೇಕಾಗುತ್ತದೆ. ಪ್ರಕೃತಿ ಚಿಕಿತ್ಸಾ ಸಮ್ಮೇಲನದ ಜನ ಒಂದು ದಿನ ಬೇಗ್ಗೆ ಗಾಂಧೀಜಿ ಬಳಿಗೆ ಬಂದರು. ಪ್ರಕೃತಿ ಚಿಕಿತ್ಸೆಯ ವಿಷಯವಾಗಿ ನಾವು ಒಂದು ಸಮ್ಮೇಲನ ನಡೆಸುವುದಿದೆ. ತಾವು ಅಧ್ಯಕ್ಷರಾಗಬೇಕಲ್ಲ ಎಂದರು. ಮೊದಲು ಗಾಂಧೀಜಿ ಅವರೊಂದಿಗೆ ನಾಲ್ಕು ಮಾತು ಆಡಿದರು. ಆಮೇಲೆ ಅವರನ್ನು ಕೊಡವಿದರು. "ನೀವಂತೂ ಪ್ರಕೃತಿಯ ನಿಯಮ ಪಾಲನಕ್ಕೆ ಹೆಚ್ಚು ಮಹತ್ವ ಕೊಡುವವರು. ನನಗೂ ಪ್ರಕೃತಿ ನಿಯಮ ಪಾಲನಮಾಡಲು ಅವಕಾಶ ಕೊಡಿ. ನಾನು ಇಲ್ಲಿಗೆ ಬಂದದ್ದು ಕಾಂಗ್ರೆಸ್ಸಿನ ಕೆಲಸಕ್ಕಾಗಿ. ನಿಮ್ಮ ಸಮ್ಮೇಲನಕ್ಕಾಗಿ ನಾನು ಬರಲಿಲ್ಲ. ನಿಮ್ಮಲ್ಲಿ ಬಂದು ಮಾತನಾಡುವದು ಅಂದರೆ ನಾನು ಪ್ರಕೃತಿ ನಿಯಮವನ್ನು ಭಂಗಗೊಳಿಸಿದಂತೆ ಆಗಲಿಕ್ಕಿಲ್ಲವೇ? ನಾನಂತೂ ನನ್ನ ಕೊಠಡಿಯಲ್ಲಿ ಕೂಡ ನಿಮ್ಮನ್ನು ತಿರುಗಾಡಲು ಬಿಡುವುದಿಲ್ಲ. ನಿಮ್ಮನ್ನು ಬೀಳ್ಕೊಂಡೇ ಬಿಡುತ್ತೇನೆ. ಈ ಎಲ್ಲ ವಿಷಯಗಳಲ್ಲಿ ನನ್ನ ಮನಸ್ಸನ್ನು ತೊಡಗಿಸುವದು ಎಂದರೆ ನನ್ನ ನಿಯಮಗಳನ್ನು ನಾನೇ ಭಂಗಗೊಳಿಸಿದಂತೆ. ನಿಮ್ಮನ್ನು ಹೊರಗೆ ದಬ್ಬುವದು ಮರ್ಯಾದೆಗೆ ಸಭ್ಯತೆಗೆ ಸರಿಯಲ್ಲ. ಆದ್ದರಿಂದ ಮೊದಲನೆಯ

ನಿಯಮವನ್ನು ಸ್ವಲ್ಪ ಕೈಬಿಟ್ಟೆ. ನನ್ನ ಸಂಗಡ ಮಾತನಾಡಬೇಕು ಎಂದರೆ ಆಶ್ರಮಕ್ಕೆ ಬನ್ನಿ." ಎಂದು ಹೇಳಿದರು.

"ಇನ್ನೊಬ್ಬರು ಬೇರೊಂದು ಸಮ್ಮೇಲನಕ್ಕೆ ಕರೆಯಲು ಬಂದರು. ಅವರನ್ನು ಬೀಳ್ಕೊಟ್ಟು ಸ್ವಲ್ಪ ಖಿನ್ನರಾಗಿ ಹೇಳಿದರು – "ಈ ತಮಾಷೆಗಳಿಂದ ನಾನು ದಣಿದು ಹೋಗಿದ್ದೇನೆ. ದೇವದಾಸನೂ ಮತ್ತು ಬಾ ಇಬ್ಬರೂ ಬರಲಿಲ್ಲ. ಅವರೆಷ್ಟು ಪುಣ್ಯವಂತರು? ಈ ಕೆಲಸ ಕಾರ್ಯಗಳ ರೀತಿ ನನಗೆ ಸರಿ ಹೋಗುವದಿಲ್ಲ. ವ್ಯಭಿಚಾರದ ಹಾಗೆ ಅನಿಸುತ್ತಿದೆ. ಪ್ರತಿಯೊಬ್ಬರಿಗೂ ತಮ್ಮ ತಮ್ಮ ಕುದುರೆಯನ್ನು ಮುಂದೆ ದೂಡುವ ಆಶೆ. ಎಲ್ಲರ ಕುದುರೆಗಳ ಸ್ಪರ್ಧೆಯು ನಡೆಯುತ್ತ ಇದೆ. ಕಾಂಗ್ರೆಸ್ಸಿಗೆ ಪುಷ್ಟಿಕೊಡುವ ಸಮ್ಮೇಲನಗಳು ಹೊರತುಪಡಿಸಿ ಬೇರೆ ಯಾವುದೂ ನಡೆಯಬಾರದು ಎನಿಸುತ್ತದೆ."

ಅಸ್ಪೃಶ್ಯತಾ ನಿವಾರಣಾ ಸಮ್ಮೇಲನ, ಗೋಸಮ್ಮೇಲನಗಳೂ ಈ ಶ್ರೇಣಿಯವು. ಆದ್ದರಿಂದ ಗಾಂಧೀಜಿ ಅವಕ್ಕೆ ಹೋದರು. ಗೋಸಮ್ಮೇಲನಕ್ಕಂತೂ ಅವರೇ ಅಧ್ಯಕ್ಷರು. ಎರಡೂ ಸಮ್ಮೇಲನಗಳ ಭಾಷಣ ಅತ್ಯಂತ ಮಹತ್ವಪೂರ್ಣ. ಖಾದಿ ಪ್ರದರ್ಶನ, ಚರಖಾ ಸ್ಪರ್ಧೆಗಳ ವರ್ಣನೆ ನಾನೇನು ಮಾಡಲಿ?

"೨೬ನೇ ತಾರೀಖು ಕಾಂಗ್ರೆಸ್ ಅಧಿವೇಶನ. ಅಲ್ಲಿಗೆ ಹೋಗುವ ಮೊದಲು ಗಾಂಧೀಜಿ ನೂಲು ತೆಗೆಯುತ್ತಿದ್ದರು. ಎರಡು ಗಂಟೆಗೆ ನೂಲಲು ಕೂತರು. ಎರಡೂವರೆ ಗಂಟೆಗೆ ಎಲ್ಲರನ್ನು ಕರೆದು "ವೈಷ್ಣವ ಜನತೋ ತೇನೆ ಕಹೀಯೆ" ಮತ್ತು 'ಜಾಕೆ ಪ್ರಿಯನ ರಾಮ ವೈದೇಹಿ' ಭಜನೆಗಳನ್ನು ಹಾಡಿಸಿದರು. ದಿನವೂ ಸಂಜೆ ಏಳುವರೆ ಗಂಟೆಗೆ, ಬೆಳಿಗ್ಗೆ ನಾಲ್ಕು ಗಂಟೆಗೆ ಪ್ರಾರ್ಥನೆ ನಡೆಯುತ್ತದೆ. ಆಮೇಲೆ ಸ್ಥಿತಪ್ರಜ್ಞ ಶ್ಲೋಕಗಳನ್ನು ಹೇಳಿಸಿದರು. ಅವರು ಪಕ್ಕದಲ್ಲಿ ಪೋರ್ಟ ನೋವೋದ ಕುಮಾರಿ ಪೀಟರ್‌ಸನ್ ಕುಳಿತಿದ್ದರು. ಆಕೆಯು ಪದ್ಮಜಾ ನಾಯ್ಡು ಇಬ್ಬರೂ "Lead Kindly Light" ಹಾಡಿದರು. ಇದು ಮುಗಿಯುವ ವೇಳೆಗೆ ಪಂಡಿತ್ ಮೋತೀಲಾಲ ನೆಹರು, ದೇಶಬಂಧು ದಾಸರು ಬಂದರು. ಮೂರು ಗಂಟೆಗೆ ಸರಿಯಾಗಿ ಕಾಂಗ್ರೆಸ್ಸಿನ ಅಧಿವೇಶನ ಮೊದಲಾಯಿತು. ಏಳೇ ನಿಮಿಷದಲ್ಲಿ ಸ್ವಾಗತ ಭಾಷಣ. ಗಾಂಧೀಜಿಯ ಹಿಂದೀ, ಇಂಗ್ಲಿಷ ಭಾಷಣ ಮೂವತ್ತು ನಿಮಿಷಗಳಲ್ಲಿ. ಈ ಭಾಷಣದಲ್ಲಿ ಇದ್ದದ್ದು ಒಂದೇ ಮಾತು – 'ಏನೇ ಮಾಡಲಿ ಈಶ್ವರ ಸಾಕ್ಷಿಯಾಗಿ ಮಾಡಿ. ಮಾತು ಕೊಡಬೇಡಿ. ಗೊತ್ತುವಳಿಯನ್ನು ಹಾರಿಸಿಬಿಡಿ. ಅದು ನನಗೆ ಇಷ್ಟವಾದೀತು. ಆದರೆ ವಚನಭಂಗ ಮಾಡಿದರೆ ನನಗೆ ವಿಷ ಉಣಿಸಿದಂತೆ. ನನ್ನನ್ನು ಬೈದರೆ, ಹೊಡೆದರೆ, ನನ್ನ ಮೇಲೆ ಉಗುಳಿದರೆ ನಾನು ಸುಮ್ಮನೆ ಸದ್ದಿಲ್ಲದೆ ಸಹಿಸಿಕೊಂಡೇನು. ಆದರೆ ಕೊಟ್ಟ ಮಾತಿಗೆ ತಪ್ಪಿ ನಡೆದರೆ ಸಹಿಸಲಾರೆ.'

ಗೋರಕ್ಷಣ ಪರಿಷತ್ತಿನಲ್ಲಿ ಗಾಂಧೀಜಿ ಹೇಳಿದ ಅನೇಕ ಮಾತು ರೂಢಿಗೆ ಭಿನ್ನ. ನಾಲ್ಕು ಗಂಟೆಗೆ ಪ್ರಾರಂಭ ಆಗಬೇಕಾಗಿದ್ದ ಆ ಸಭೆ ಆರು ಗಂಟೆಗೆ ಪ್ರಾರಂಭವಾಯಿತು. ಆದ್ದರಿಂದ ಸಮ್ಮೇಲನವನ್ನು ಬೇಗ ಮುಗಿಸಿದರು. ಅಧ್ಯಕ್ಷ ಭಾಷಣದಲ್ಲಿ ಅವರು ಹೇಳಿದ ಮಾತಿನ ಸಾರಾಂಶ ಇಷ್ಟು.

"ಸ್ವರಾಜ್ಯ ಪ್ರಶ್ನೆಗಿಂತಲೂ ಗೋರಕ್ಷಣ ಪ್ರಶ್ನೆ ಕಡಿಮೆ ಮಹತ್ವದ್ದಲ್ಲ. ಅದಕ್ಕಿಂತ ಹೆಚ್ಚು. ಅಸ್ಪೃಶ್ಯತೆಯನ್ನು ಹೊಗಲಾಡಿಸುವವರೆಗೆ ಹಿಂದೂ ಮುಸ್ಲಿಂ ಐಕ್ಯ ಆಗುವದಿಲ್ಲ. ಎಲ್ಲರೂ ಖಾದಿ ತೊಡುವವರೆಗೆ ಸ್ವರಾಜ್ಯ ಸಿಗುವದಿಲ್ಲ ಎಂದು ನಾನು ಹೇಗೆ ಹೇಳುತ್ತೇನೆಯೋ, ಹಾಗೆಯೇ ಗೋರಕ್ಷಣೆಯ ನೀತಿ ನಮಗೆ ತಿಳಿಯುವವರೆಗೆ ಸ್ವರಾಜ್ಯ ಬಂದರೂ ಪ್ರಯೋಜನವಿಲ್ಲ ಎನ್ನುತ್ತೇನೆ. ಚಿಕ್ಕ ಬಾಯಿಂದ ದೊಡ್ಡ ಮಾತು ಆಡುತ್ತೇನೆ. ನಾನು ಸಂಪ್ರದಾಯಕ್ಕೆ ಎಷ್ಟೇ ವಿರುದ್ಧವಾಗಿದ್ದರೂ ಸನಾತನೀಯ ಹೌದು. ನನಗೆ ಗೋರಕ್ಷಣೆ ಬಹಳ ಪ್ರಿಯ.

"ಹಿಂದೂತ್ವದ ಬಗ್ಗೆ ನಾನು 'ಯಂಗ್ ಇಂಡಿಯಾ'ದಲ್ಲಿ ಬರೆದಿದ್ದೇನೆ. ನನಗೆ ವೇದಾದಿಗಳೂ ಒಪ್ಪಿಗೆ. ಗಾಯತ್ರಿಯ ಬಗ್ಗೆಯೂ ಬರೆದಿದ್ದೇನೆ. ಆದರೆ ಸಾಮಾನ್ಯ ಹಿಂದೂವಿನ ಲಕ್ಷಣ ಎಂದರೆ ಗೋರಕ್ಷಣೆ. ವೇದದಲ್ಲಿ ಗೋಮೇಧದ ಮಾತು ಇದೆ ಎಂದು ಹೇಳುತ್ತಾರೆ. ಒಂದು ವೇಳೆ ಇದ್ದರೆ ಅದರ ಅರ್ಥವೇ ಬೇರೆ. ಗೋರಕ್ಷಣೆ ಮಾಡದವನು ಹಿಂದೂವೇ ಅಲ್ಲ ಎಂದು ನನ್ನ ಭಾವನೆ.

"ಆದರೆ ಈಗ ಮಾಡುತ್ತಿರುವ ಗೋ ರಕ್ಷಣೆ ನೀತಿ ನನಗೆ ಒಪ್ಪಿಗೆಯಿಲ್ಲ. ಏಕಾಂತದಲ್ಲಿ ನನ್ನ ಹೃದಯ ಅಳುತ್ತದೆ. ಅತ್ತು, ಏನು ಪ್ರಯೋಜನ? ಇದಕ್ಕೆ ಬಲು ದೊಡ್ಡ ಬಲಿದಾನ ಬೇಕು. ನನ್ನ ವಿಚಾರವನ್ನು ನಿಮ್ಮ ಮುಂದೆ ಇಡಲು ನನಗೆ ಹೆದರಿಕೆ ಆಗುತ್ತದೆ. ಗೋರಕ್ಷಣೆ ಕ್ರಿಸ್ತಾನರಿಂದ, ಮುಸಲ್ಮಾನರಿಂದ ಆದೀತು ಎಂಬ ಮಾತನ್ನು ಮರೆತುಬಿಡಿ. ಇತರ ಮತಗಳವರು ಗೋಮಾಂಸ ತಿನ್ನುವದನ್ನು ಬಿಟ್ಟರೆ ಅಲ್ಲಿಗೆ ಗೋರಕ್ಷಣೆ ಮುಗಿಯಿತು ಎಂದು ನಾನು ತಿಳಿಯುತ್ತೇನೆ. ಇದು ಹುರುಳಿಲ್ಲದ ಮಾತು. ಹಸುವನ್ನು ಕಡಿದರೆ ನನಗಾಗುವಷ್ಟು ದುಃಖ ಬೇರೆ ಯಾವ ಹಿಂದೂವಿಗೂ ಆಗಲಿಕ್ಕಿಲ್ಲ.

"ಆದರೆ ನಾನು ಏನು ಮಾಡಲಿ? ನನ್ನ ಮಾತನ್ನು ನಾನೇ ನಡೆಸಲೊ. ಅಥವಾ ಬೇರೆಯವರು ನಡೆಸುವಂತೆ ಮಾಡಲೋ? ಬೇರೆಯವರಿಂದ ಬ್ರಹ್ಮಚರ್ಯಪಾಲನ ಮಾಡಿಸಿ ನಾನು ಮಾತ್ರ ಚ್ಯುತನಾದರೆ ಅದು ಶ್ರೇಯಸ್ಕರವೇ? ನಾನು ದಿನವೂ ಗೋಮಾಂಸ ತಿನ್ನುತ್ತ, ನೀವು ತಿನ್ನಬೇಡಿ ಎಂದು ಮುಸಲ್ಮಾನರಿಗೆ ಹೇಳುವದು ಉಚಿತವೇ? ಹಿಂದೂ ರಾಜ್ಯಗಳಲ್ಲಿ ಗೋವಧೆಗೆ ದಂಡನೆ ಇಲ್ಲ. ಗೋರಕ್ಷಣೆಯ ಪ್ರತಿಜ್ಞೆ ಮಾಡಿದರೆ ಕೇವಲ ಹಿಂದೂಗಳ ಹಸುಗಳನ್ನೇ ಕಾಪಾಡಬೇಕೇ? ಕರ್ಮಮಾಡಿ ಅದರಿಂದ ತೋರಿಸಬೇಕು ಎನ್ನುತ್ತದೆ ಧರ್ಮ. ಈ ಕೆಲಸ ಕತ್ತಿಯಿಂದಾಗುವದಿಲ್ಲ. ಇಡೀ ಲೋಕದ ಜನ ಹಸುವನ್ನು ಕಾಪಾಡಬೇಕು ಎಂದು ನನ್ನ ಇಚ್ಛೆ

"ಆದರೆ ಮೊದಲು ನನ್ನ ಮನೆ ಸ್ವಚ್ಛ ಆಗಿರಬೇಡವೇ? ಎತ್ತನ್ನು ಹಿಂಸಿಸಿದರೆ ಅದು ಗೋಹತ್ಯ ಅಲ್ಲವೇ? ಹಿಂಸೆ ಎಂದರೆ ಇತರರಿಗೆ ದುಃಖ ಕೊಡುವದು. ನಾವು ಎತ್ತಿಗೆ ಕೊಡುವ ಹಿಂಸೆಗಿಂತ ಅದನ್ನು ಕೊಲ್ಲುವದೇ ಲೇಸು. ಚಂಪಾರಣ್ಯದ ಹಿಂದೂಗಳು ಗೋಭಕ್ತರು. ಆದರೆ ಎತ್ತಿನ ಮೇಲೆ ಹೇರುತ್ತಿದ್ದ ಸಾಮಾನನ್ನು ನೋಡಿದರೆ ಅದಕ್ಕೇನೆನ್ನಬೇಕು? ಹಾಲು ಹಿಂಡುವ ಸ್ಥಳದಲ್ಲಿ ಊದಿ ಊದಿ ಹಾಲು ತೆಗೆಯುತ್ತಾರಲ್ಲ. ಇದು ಕೊಲೆ ಅಲ್ಲದಿದ್ದರೆ ಮತ್ತೇನು? ಇದನ್ನೆಲ್ಲ ಮಾಡುವವರು ಹಿಂದೂಗಳೇ ಆಗಿದ್ದಾರೆ.

"ನಮ್ಮ ದನಕ್ಕೆ ಸುಖವಿಲ್ಲ. ಜಗತ್ತಿನಲ್ಲಿ ಎಲ್ಲಿಯೂ ಇಷ್ಟು ಕಷ್ಟ ಅದಕ್ಕಿಲ್ಲ. ಬರೀ ಮೂಳೆ. ಚರ್ಮ. ಬೇರೆ ಏನೇನೂ ಇಲ್ಲ. ಇಷ್ಟಿದ್ದರೂ ನಾವು ಅದರ ಮೇಲೆ ಹೊರಿಸುವ ಭಾರವೋ! ನಾವು ಇದೆಲ್ಲವನ್ನು ಮಾಡುತ್ತಿರುವಾಗ ಗೋವಧೆ ಮಾಡಬೇಡಿರೆಂದು ಹೇಗೆ ಹೇಳುವದು?"

"ಹಿಂದೂಸ್ತಾನ ಏಕೆ ದುಃಖಿಯಾಗಿದೆ? ಗೋರಕ್ಷಣೆಯನ್ನು ಕೈ ಬಿಟ್ಟಿದ್ದರಿಂದ. ಹಿಂದೂಸ್ತಾನದ ಜನ ಹಳಸಿದ ಅನ್ನ ತಿಂದು, ಹಿಟ್ಟು ಮೆಣಸಿನಕಾಯಿ ಉಪ್ಪು ತಿಂದು ಬದುಕುತ್ತಿದ್ದಾರೆ. ನಾವೇನೋ ಪಟ್ಟಣಗಳಲ್ಲಿ ಇರುವವರು. ನಮಗೆ ಸ್ವಲ್ಪ ಸುಖವಿದೆ. ಆದ್ದರಿಂದ ನಮಗೆ ಅವರ ದುಃಖ ಗೊತ್ತಾಗುವದಿಲ್ಲ,. ಹಿಂದೂ ಧರ್ಮದಲ್ಲಿ ಗೋರಕ್ಷಣೆ ಇಲ್ಲ. ಏಕೆಂದರೆ ಗೋಹತ್ಯ ನಡೆಯುತ್ತಿದೆ. ಪಿಂಜರಾ ಪೋಲುಗಳನ್ನು ಎಷ್ಟೋ ನೋಡಿದ್ದೇನೆ. ಜೈನರಿಗೆ ಅದರ ಸಂಬಂಧ ಬಹಳ. ಅವರೆಲ್ಲರೂ ಹಿಂದೂಗಳೆ. ಅವರ ಪಿಂಜರಾ ಪೋಲುಗಳಲ್ಲಿ ಯಾವ ಅನುಕೂಲವೂ ಇಲ್ಲ, ವ್ಯವಸ್ಥೆಯೂ ಇಲ್ಲ."

"ನಮ್ಮಲ್ಲಿ ಸೊಗಸಾದ ಕ್ಷೀರಕ್ಷೇತ್ರ ಇರಬೇಕು. ಬೊಂಬಾಯಿಯಲ್ಲಿ ಒಳ್ಳೆಯ ಹಾಲು ಸಿಗುವದಿಲ್ಲ. ಮಕ್ಕಳಿಗೆ ಕುಡಿಯಲಿಕ್ಕೆ ಸಿಗುವದಿಲ್ಲ. ಇಪ್ಪತ್ತು ವರ್ಷಗಳ ಕೆಳಗೆ ಅಹಮದಾಬಾದನಲ್ಲಿ ಹಾಲು ಯಥೇಚ್ಛ ಆಗಿತ್ತು. ಇವತ್ತು ತಾಯಂದಿರು ನೀರಲ್ಲಿ ಹಿಟ್ಟು ಕಲಸಿ, ಅದನ್ನೇ ಹಾಲು ಎಂದು ಮಕ್ಕಳಿಗೆ ಕುಡಿಸುತ್ತಾರೆ. ಹಿಂದೂಸ್ತಾನದಲ್ಲಿ ಹಾಲು ಸಿಗುವದಿಲ್ಲ ಎಂದರೆ ಗೋರಕ್ಷಣೆ ನಡೆಯುತ್ತಿಲ್ಲ ಎಂದ ಹಾಗೆ."

"ಇವತ್ತು ಮುಸಲ್ಮಾನರ ಕೈಯಲ್ಲಿ ನನ್ನ ಕೊರಳನ್ನು ಇಡುತ್ತಿದ್ದೇನೆ ಏಕೆ? ದನವನ್ನು ಕಾಪಾಡಲಿಕ್ಕೆ. ನರವಧೆಯೂ ಗೋವಧೆಯೂ ಎರಡೂ ಒಂದೇ. ಇವೆರಡನ್ನೂ ನಿಲ್ಲಿಸಬೇಕೆಂದರೆ ಅಹಿಂಸೆಯೇ ಉಪಾಯ. ನಿಜವಾಗಿ ಸ್ವರಾಜ್ಯಕ್ಕಿಂತಲೂ ದನವನ್ನು ಕಾಪಾಡುವದೇ ದೊಡ್ಡ ಕೆಲಸ. ಇದು ಕಾನೂನಿಂದ ಆಗುವ ಕೆಲಸವಲ್ಲ. ಪ್ರೇಮದಿಂದ ಆಗಬೇಕು. ಗೋರಕ್ಷಣೆಯ ಸೂಕ್ಷ್ಮ ಅರ್ಥ ಪ್ರಾಣಿ ಮಾತ್ರದ ರಕ್ಷಣೆ. ಅಹಿಂಸೆಯ ಪರಿಣಾಮ ಏನು ನಮಗಿನ್ನೂ ತಿಳಿಯದು. ಅದರಿಂದ ಮೋಕ್ಷ ಸಿಗುತ್ತದೆ ಎನ್ನುತ್ತಾರೆ. ಆದರೆ ಬರೀ ಗೋರಕ್ಷಣೆಯಿಂದಲೇ ಮುಕ್ತಿ ಸಿಗುವದಿಲ್ಲ. ರಾಗ ದ್ವೇಷವನ್ನು ಬಿಡಬೇಕು. ಯಾರಿಗಾದರೂ ದುಃಖ ಆಗುವಂತೆ ಮಾಡಿದರೆ ಕಠಿಣ ಮಾತಿನಿಂದ ಹೆಂಗಸರಿಗೆ, ಅಣ್ಣ ತಮ್ಮಂದಿರಿಗೆ ಯಾರಿಗಾದರೂ ನೋವು ಕೊಟ್ಟರೆ ಅದು ಗೋರಕ್ಷಣೆ ಅಲ್ಲ, ಗೋಭಕ್ಷಣೆಯೆಂದೇ ಅನ್ನಬೇಕು. ಗೋರಕ್ಷಣೆಯ ಅರ್ಥ ಬಹಳ ವಿಸ್ತಾರವಾದುದು. ಗೋಪೂಜೆ ಮಾಡಬೇಕೆಂದು ಹಿಂದೂ ಧರ್ಮ ಹೇಳುತ್ತದೆ. ಆದರೆ ಅಲ್ಲಿಗೆ ಗೋರಕ್ಷಣೆ ಮುಗಿಯಿತು ಎಂದು ಅಲ್ಲ. ದನಗಳನ್ನು ಮಾತ್ರವೇ ಅಲ್ಲ, ಕುರಿ ಮೇಕೆಗಳನ್ನೂ ಕಾಪಾಡಬೇಕು. ಎಲ್ಲ ಪ್ರಾಣಿಗಳನ್ನೂ ಕಾಪಾಡಬೇಕು. ಹಿಂದೂಗಳಲ್ಲಿ ಮಾಂಸಭಕ್ಷಕರಿದ್ದಾರೆ. ಆದರೆ ಗೋಮಾಂಸವನ್ನು ಮುಟ್ಟುವದಿಲ್ಲ. ಇಷ್ಟು ಮಾತ್ರಕ್ಕೇ ನಾನು ಅವರನ್ನು ಹಿಂದೂಗಳು ಎನ್ನಲಾರೆ.

"ಹಸುವಿನಿಂದ ಕೆಲಸಮಾಡಿಸಿಕೊಳ್ಳಬಾರದು ಎನ್ನುತ್ತಾರೆ. ಹಿಂದೂಗಳೇ ಹಸುಗಳನ್ನು ಮಾರಿದಿದ್ದರೆ ಅವನ್ನು ಕಡಿಯುವವರು ಯಾರು? ಕಟುಕನಿಗೆ ಪ್ರಾಣಿಯನ್ನು ಕೊಟ್ಟರೆ

ತಾನೇ ಕಡಿಯುತ್ತಾನೆ. ಇದು ಆರ್ಥಿಕ ಪ್ರಶ್ನೆ. ಗೋಮಾಳದ ಭೂಮಿ ಎಲ್ಲವೂ ಸರಕಾರದ ಪಾಲಾಗಿದೆ. ಇದೊಂದು ಕಾರಣ. ಹಾಲು ಕೊಡದಿರುವ ಹಸುವನ್ನು ಬ್ರಾಹ್ಮಣರು ಮಾರುತ್ತಾರೆ. ಇದು ಒಂದು ಕಾರಣ. ಹಸುವಿಗೂ ಸರಿಯಾದ ಆಹಾರ ಕೊಟ್ಟು, ದಿನವೂ ಬೆಳಿಗ್ಗೆ ಅದನ್ನು ಪೂಜಿಸಿ, ಅದರಿಂದ ಸ್ವಲ್ಪ ಕೆಲಸ ಮಾಡಿಕೊಂಡರೆ ಏನು ತಪ್ಪು ಎನ್ನುತ್ತಾರೆ. ಸ್ವಲ್ಪ ಕೆಲಸ ಮಾಡಿಸಿಕೊಂಡರೆ ಅದಕ್ಕೆ ಗರ್ಭನಿಂತು ಕರು ಆಗುತ್ತದಂತೆ. ಹೀಗಿದ್ದರೆ, ಅದಕ್ಕೆ ಸರಿಯಾದ ರಕ್ಷಣೆ ದೊರೆತರೆ ಏನು ತಪ್ಪು?

"ಈ ಸಮ್ಮೇಲನದಲ್ಲಿ ಗೊತ್ತುವಳಿಯನ್ನು ಇಡಲು ವೇಳೆ ಇಲ್ಲ. ಒಂದು ವೇಳೆ ಗೊತ್ತುವಳಿ ಇಟ್ಟು, ನೀವೆಲ್ಲರೂ ಅದಕ್ಕೆ ಸಮ್ಮತಿ ಕೊಟ್ಟರೆ ಏನು ಬಂತು? ಧರ್ಮಶಾಸ್ತ್ರಜ್ಞರ ಜೊತೆಯಲ್ಲಿ ಮಾತನಾಡಿ, ಒಂದು ಸಮಿತಿಯನ್ನು ರಚಿಸಿ. ಗೋರಕ್ಷಣೆಗೆ ಒಂದು ಸಂಸ್ಥೆ ಮಾಡಿ. ನಾನು ಮುಂದೆ ಶಹಾಪುರಕ್ಕೆ ಹೋಗಬೇಕಾಗಿದೆ. ನೀವೊಂದು ಸಮಿತಿಮಾಡಿ ಮಾಲವೀಯರನ್ನು ಅಧ್ಯಕ್ಷರನ್ನಾಗಿ ಮಾಡಿಕೊಳ್ಳಿ."

ಅಲ್ಲಿಂದ ಗಾಂಧೀಜಿ ಶಹಾಪುರಕ್ಕೆ ಹೋಗಿ ಪೌರಸಭೆಯಿಂದ ಮಾನಪತ್ರ ಪಡೆದರು.

**ಶಿಕ್ಷಕರ ಪರಿಷತ್ತು:**

ಕಾಂಗ್ರೆಸ್ಸಿನ ಸಮಯಕ್ಕೆ ಅನೇಕ ಬೇರೆ ಪರಿಷತ್ತುಗಳು ನಡೆದವು. ಅದರಲ್ಲಿ ಶಿಕ್ಷಣ ಪರಿಷತ್ತಿನ ಉಪಕ್ರಮ ಹೊಸದು. ಕಾಕಾಸಾಹೇಬ ಕಾಲೇಲ್ಕರ ಅವರು ಅದರ ಜೀವಾಳ. ಹಿಂದೂ ಮಹಾಸಭೆಯು ಪಂಡಿತ ಮಾಲವೀಯ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಾಮಾಜಿಕ ಪರಿಷತ್ತಿಗೆ ಶ್ರೀ ಶಂಕರನ್ ನಾಯರ್ ಅವರು ಅಧ್ಯಕ್ಷರು. ಶಿಕ್ಷಣ ಪರಿಷತ್ತು ಎಂದರೆ ರಾಷ್ಟ್ರೀಯ ಶಿಕ್ಷಕರ ಪರಿಷತ್ತು. ಅವರ ಬಗ್ಗೆ ಗಾಂಧೀಜಿ ಹೀಗೆ ಬರೆದಿದ್ದಾರೆ:

"ಚರ್ಚೆ ಬಲು ಸ್ವಾರಸ್ಯವಾಗಿತ್ತು. ರಾಟೆಯೇ ಅವರ ವಿಷಯ. ನಮ್ಮ ರಾಷ್ಟ್ರೀಯ ಜೀವನದ ದೌರ್ಬಲ್ಯವೆಂದರೆ ಠರಾವು ಮಾಡುತ್ತೇವೆ. ಅದರಂತೆ ನಡೆಯುವುದಿಲ್ಲ. ವ್ಯರ್ಥ ಪ್ರತಿಜ್ಞೆ ಮಾಡಲು ಶಿಕ್ಷಕರು ಎಲ್ಲರಿಗಿಂತ ಹಿಂದೆ ಇರಬೇಕು. ಮಕ್ಕಳಿಗೆ ಸರಿಯಾದ ಶಿಕ್ಷಣ ಕೊಡುವದು ಅವರ ಕರ್ತವ್ಯ. ಇವರು ಎಷ್ಟೇ ಉದ್ಬೋಧಕ ಭಾಷಣ ಮಾಡಿದರೂ ಮಕ್ಕಳು ಇವರು ನಡೆದಂತೆ ನಡೆಯುತ್ತಾರೆ ಶಿಕ್ಷಕರು ಮಾತಿಗೆ ತಪ್ಪಿ ನಡೆದರೆ ಮಕ್ಕಳೂ ತಪ್ಪಿ ನಡೆಯುತ್ತಾರೆ. ಈ ವರ್ಷ ರಾಷ್ಟ್ರವು ಖಾದಿಯ ಕೆಲಸವನ್ನು ಕೈಕೊಂಡಿದೆ. ಖಾದಿ ಉತ್ಪತ್ತಿಯ ಎಲ್ಲ ವಿಧಾನಗಳನ್ನೂ ವಿದ್ಯಾರ್ಥಿಗಳು ಕಲಿಯುವಂತೆ ಮಾಡಬೇಕು. ಅವರು ಖಾದಿ ಧರಿಸಬೇಕು. ಇದರಿಂದ ಅವರ ಅಭ್ಯಾಸಕ್ಕೆ ತಡೆ ಆಗಬೇಕಾಗಿಲ್ಲ. ಶಿಕ್ಷಕರೆಲ್ಲರೂ ಬಹುಸಂಖ್ಯೆಯಲ್ಲಿ ಈ ಕಾರ್ಯಕ್ರಮ ಒಪ್ಪಿದ್ದು ಬಲು ಸಂತೋಷ."

**ವಿದ್ಯಾರ್ಥಿಗಳು:**

ವಿದ್ಯಾರ್ಥಿಗಳು ಸಭೆ ಸೇರಿದ್ದರು. ಅವರ ಸಮ್ಮೇಲನದಲ್ಲಿ ಬರೀ ರಾಷ್ಟ್ರೀಯ ಶಾಲೆ ಕಾಲೇಜುಗಳ ಹುಡುಗರು ಮಾತ್ರ ಇರಲಿಲ್ಲ. ಸರಕಾರೀ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳೇ ಹೆಚ್ಚು. ಅವರ ಅಧ್ಯಕ್ಷರಾದ ಶ್ರೀ ರೆಡ್ಡಿ ವಿದ್ಯಾರ್ಥಿಗಳ ಬಿಡುವಿನ ವೇಳೆಯನ್ನು, ರಜಾ

ದಿನಗಳನ್ನು ಉಪಯೋಗಿಸಿಕೊಳ್ಳುವ ಒಂದು ಯೋಜನೆ ಸಿದ್ಧಪಡಿಸಿದ್ದರು. ವರ್ಷಕ್ಕೆ ೨೮ ಸಂಜೆಗಳನ್ನು ವಿದ್ಯಾರ್ಥಿಗಳು ದೇಶಕ್ಕೆ ನೀಡಬೇಕು ಎಂಬುದು ಅವರ ಯೋಜನೆ. ಒಬ್ಬೊಬ್ಬನು ನಾಲ್ಕು ಹಳ್ಳಿ ಆರಿಸಿಕೊಂಡು ಕೆಲಸ ಮಾಡಬೇಕು. ನಾನಾ ವಿಷಯಗಳ ಮೇಲೆ ಒಂದು ಭಾಷಣಮಾಲೆ ನಡೆಯಬೇಕು. ಇದು ಅವರ ಯೋಜನೆ. ಸದ್ಯ ಈ ವಿದ್ಯಾರ್ಥಿಗಳ ಬಿಡುವಿನ ವೇಳೆಯನ್ನು ಖಾದಿ ಪ್ರಚಾರಕ್ಕಾಗಿ ಉಪಯೋಗಿಸಬೇಕು. ಆದರೆ ಇದಕ್ಕಿಂತ ಹೆಚ್ಚಿನದು ಎಂದರೆ ವಿದ್ಯಾರ್ಥಿಗಳೂ ವಕೀಲರೂ ದಿನವೂ ಒಂದು ಗಂಟೆ ನೂಲಬೇಕು, ಖಾದಿ ಧರಿಸಬೇಕು.

ಗಾಂಧೀಜಿಯ ಇಷ್ಟದಂತೆ ಎರಡೇ ದಿನಗಳಲ್ಲಿ ಕಾಂಗ್ರೆಸ್ ಅಧಿವೇಶನ ಮುಗಿಯಿತು. ಇದು ಬೆಳಗಾಂವಿಯ ಕಾಂಗ್ರೆಸ್ಸಿನ ವೈಶಿಷ್ಟ್ಯ ಎನ್ನಬಹುದು. ಆಮೇಲೆ ಒಂದು ದಿನ ಗಾಂಧೀಜಿ ವಿಜಯನಗರದಲ್ಲಿಯೇ ಇದ್ದರು. ಅಧಿವೇಶನಕ್ಕಾಗಿ ಪ್ರತಿನಿಧಿಗಳಿಂದ ಶುಲ್ಕವನ್ನು ತೆಗೆದುಕೊಳ್ಳಲಾಗುತ್ತದೆ. ಅದರಲ್ಲಿ ಸ್ವಲ್ಪ ಭಾಗವನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿಗೆ ಕೊಡಬೇಕಾಗುತ್ತದೆ. ಅನೇಕ ಕಡೆ ಈ ಹಣವನ್ನು ಕೊಡುವದೇ ಇಲ್ಲ. ಕೊಟ್ಟರೂ ಹೊತ್ತಿಗೆ ಸರಿಯಾಗಿ ಕೊಡುವುದಿಲ್ಲ. ಕರ್ನಾಟಕದ ಕಾಂಗ್ರೆಸ್ಸಿನಲ್ಲಿ ಹಾಗೆ ನಡೆಯಲಿಲ್ಲ. ಬಹುಶಃ, ಇಷ್ಟು ವ್ಯವಸ್ಥಿತ ರೀತಿಯಿಂದ ಎಲ್ಲೂ ಕೆಲಸ ನಡೆದಿರಲಿಲ್ಲ. ಕಾಂಗ್ರೆಸ್ ಕೋಶಾಧಿಕಾರಿಗಳು ಶ್ರೀ ಸೇಟ್ ಜಮುನಾಲಾಲ ಬಜಾಜ ಅವರು ವಿಜಯನಗರವನ್ನು ಬಿಟ್ಟು ಹೋಗುವ ಮೊದಲೇ ಅವರ ಕೈಗೆ ಹಣ ಮುಟ್ಟಿತ್ತು.

## ಅಧ್ಯಾಯ ೩



# ಖಾದಿ ಪ್ರಚಾರ ಪ್ರವಾಸ, ೧೯೨೭

**ನಂದಿಬೆಟ್ಟದಲ್ಲಿ ಗಾಂಧೀಜಿ (೧೯೨೭)**

೧೯೨೭ರಲ್ಲಿ ಗಾಂಧೀಜಿ ಕರ್ನಾಟಕದಲ್ಲಿ ಸುಮಾರು ೪ ತಿಂಗಳ ಕಾಲ ಇದ್ದರು. ಅವರ ಆರೋಗ್ಯ ಬಹಳ ಕೆಟ್ಟಿತ್ತು. ರಕ್ತದ ಒತ್ತಡ ಹೆಚ್ಚಾಗಿತ್ತು. ವಿಶ್ರಾಂತಿ ಬೇಕು ಎಂಬುದು ವೈದ್ಯರ ಅಭಿಪ್ರಾಯವಾಗಿತ್ತು. ಮೈಸೂರು ಸರ್ಕಾರ ಆಗಿನ ವಾತಾವರಣದಲ್ಲಿ ಧೈರ್ಯ ಮಾಡಿ, ಅವರಿಗೆ ನಂದಿದುರ್ಗದಲ್ಲಿ ವಿಶ್ರಾಂತಿ ಕೊಡಲು ನಿರ್ಧರಿಸಿ, ಆಹ್ವಾನಿಸಿತು. ಆಗ ಅವರು ಬೆಂಗಳೂರಿನ ಬಳಿ ಇರುವ ನಂದಿಬೆಟ್ಟಕ್ಕೆ ಬಂದು ಕೆಲವು ಕಾಲ ಇದ್ದರು. ಸ್ವಲ್ಪ ಗುಣ ಆದ ಮೇಲೆ ಬೆಂಗಳೂರಿಗೆ ಬಂದು ಅಲ್ಲಿಂದ ತಮ್ಮ ಕರ್ನಾಟಕ ಪ್ರವಾಸವನ್ನು ಮುಂದುವರೆಸಿದರು.

ಆ ಸಂದರ್ಭದಲ್ಲಿ ಅವರ ಜೊತೆ ಮಹದೇವ ದೇಸಾಯಿ ಇದ್ದರು. ವಾರವಾರವೂ ಅವರು 'ಯಂಗ್ ಇಂಡಿಯಾ' ಎಂಬ ಪತ್ರಿಕೆಯಲ್ಲಿ, 'weekly letter' (ಸಾಪ್ತಾಹಿಕ ಪತ್ರ) ಎಂಬ ಶೀರ್ಷಿಕೆಯಲ್ಲಿ ಗಾಂಧೀಜಿಯ ಚಲನವಲನಗಳನ್ನು ವಿವರಿಸುತ್ತ ಇದ್ದರು. ಅವರ ಆ ಟಿಪ್ಪಣಿಗಳನ್ನು ಇದ್ದಕ್ಕಿದ್ದ ಹಾಗೆಯೇ ಇಲ್ಲಿ ಎತ್ತಿಕೊಳ್ಳಲಾಗಿದೆ.

**ಗಾಂಧೀಜಿಯ ಅನಾರೋಗ್ಯ :**

"ಹರಿದ್ವಾರವನ್ನು ಬಿಟ್ಟು ನಾವು ಕರ್ನಾಟಕದ ಪ್ರವಾಸಕ್ಕೆ ಹೊರಟಾಗ, ಎರಡು ಮೂರು ದಿನಗಳಲ್ಲಿ, ಏಕಾಏಕಿ ಗಾಂಧೀಜಿ ಜೇನೆ ಬಿದ್ದ ದುಃಖದ ಸುದ್ದಿಯನ್ನು ಎಲ್ಲರಿಗೂ ತಿಳಿಸುತ್ತ ಎಲ್ಲ ಕಾರ್ಯಕ್ರಮಗಳನ್ನು ರದ್ದುಮಾಡಿದ ಸುದ್ದಿ ತಿಳಿಸುತ್ತೇನೆ ಎಂದು ನನಗೆ ಕನಸು ಮನಸಿನಲ್ಲಿಯೂ ಇರಲಿಲ್ಲ. ಮಹಾರಾಷ್ಟ್ರದ ಪ್ರವಾಸ ಬಹಳ ಆಯಾಸಕರ ಆಗಿತ್ತು. ಅದರೂ ಗಾಂಧೀಜಿಗೆ ಐದು ಪೌಂಡು ತೂಕ ಹೆಚ್ಚು ಬಂದಿತ್ತು. ನಮಗೆಲ್ಲರಿಗೂ ಭ್ರಾಂತಿ. ಇಷ್ಟು ಆಯಾಸ ಆದರೂ ಅವರಿಗೆ ಆರೋಗ್ಯ ಅನುಕೂಲ ಆಯಿತು ಎಂದುಕೊಂಡೆವು. ಆಮೇಲಿನ

ಸಂಗತಿಗಳು– ಈ ಪ್ರಗತಿ ಕೇವಲ ಮಿಥ್ಯೆ, ನಿಜವಾಗಿ ಅವರಿಗೆ ಆರೋಗ್ಯ ಕೆಟ್ಟಿತ್ತು– ಎಂಬುದು ಅರ್ಥ ಆಯಿತು.

ದಾರಿಯಲ್ಲಿ ಅಕಸ್ಮಾತ್ ತಲೆ ತಿರುಗಿದಂತೆ ಆಯಿತು. ದೇಹದ ಎಡಮಗ್ಗಲು ಭಾರವಾಗಿ ಚೇತನಾ ರಹಿತವಾಯಿತು. ನಾವು ಏನೇನೋ ಯೋಚಿಸಿದೆವು. ಪೂನಾದಲ್ಲಿ ಅವರನ್ನು ರೈಲಿಗೆಹೊತ್ತು ತರಬೇಕಾಯಿತು. ದೃಷ್ಟಿ ಮಂಜು ಆಗಿ ಹೇಗೆ ಹೇಗೋ ಒಂದೆರಡು ಸಾಲು ಬರೆದರು. ಅದೂ ಬಹಳ ಪ್ರಯಾಸಪಟ್ಟು. ಸ್ವಲ್ಪ ನಿದ್ದೆ ಮಾಡಿ ಎದ್ದ ಮೇಲೆ ಆರೋಗ್ಯ ಮರಳಿದಂತೆ ಕಂಡಿತು. ಕರ್ನಾಟಕ ಕಾರ್ಯಕ್ರಮದಲ್ಲಿ ನಿಪ್ಪಾಣಿ ಮೊದಲನೆಯ ಸ್ಥಳ. ೧೯೨೭ ಮಾರ್ಚ್ ಕೊನೆಯ ವಾರ. ಅಲ್ಲಿಗೆ ಬಂದಾಗ ಆರೋಗ್ಯ ಬಹಳ ಕೆಟ್ಟು ಹೋಗಿತ್ತು. ಡಾಕ್ಟರನ್ನು ಕರೆಸಿದೆವು. ಅಪೊಪ್ಲೆಕ್ಸಿ (ಲಕ್ವಾಗೆ ಸಂಬಂಧಿಸಿದ ಜಾಡ್ಯ) ಆಗಿತ್ತು. ದೈವವಶಾತ್ ಅದರ ಹೊಡೆತ ತಪ್ಪಿತ್ತು. ಇದೆಲ್ಲವೂ ಅತಿ ಪರಿಶ್ರಮಗಳ ಫಲ. ಎಲ್ಲ ಕಾರ್ಯಕ್ರಮಗಳನ್ನೂ ನಿಲ್ಲಿಸಿ ಸಂಪೂರ್ಣ ವಿಶ್ರಾಂತಿ ಪಡೆಯಬೇಕು ಎಂದು ಡಾಕ್ಟರು ಹೇಳಿದರು.

**ಡಾ. ಜೀವರಾಜ್ ಮೆಹ್ತಾ:**

"ಪೂನಾದಿಂದ ಇಲ್ಲಿಯವರೆಗೂ ಮೋಟಾರಿನಲ್ಲಿ ಬಂದರು, ಡಾ ಜೀವರಾಜ್ ಮೆಹ್ತಾ. ಗಾಂಧೀಜಿಯನ್ನು ಪರೀಕ್ಷಿಸಿದರು. ಕಟ್ಟಕಡೆಗೂ ಗಾಂಧೀಜಿ ವೈದ್ಯರ ಸಲಹೆಯನ್ನು ಒಪ್ಪಿ, ಎರಡು ತಿಂಗಳು ವಿಶ್ರಾಂತಿ ಪಡೆಯಲು ಒಪ್ಪಿದರು. ಶೀಘ್ರವಾಗಿ ಗುಣವಾಗುತ್ತ ಇದೆ ಗಾಂಧೀಜಿಗೆ. ನಂದಿಬೆಟ್ಟದ ಒಳ್ಳೆಯ ಹವಾಗುಣ, ಶಾಂತ ವಾತಾವರಣಗಳಿಂದ ಗಾಂಧೀಜಿಯ ಆರೋಗ್ಯವರ್ಧನಕ್ಕೆ ಬಹಳ ಅನುಕೂಲವಾಗಿದೆ. ಅವರು ಪಡೆಯುತ್ತಿರುವ ವಿಶ್ರಾಂತಿಗೆ ನಂದಿಬೆಟ್ಟದ ಹವಾಗುಣವು ಪೋಷಕವಾಗಿಯೇ ಇದೆ.

ಆದರೆ ದಕ್ಷಿಣದಲ್ಲಿಯೇ ಏಕೆ ವಿಶ್ರಾಂತಿ ಪಡೆಯಬೇಕು? ಸಾವಂತವಾಡಿಯ ಅಂಬೋಲಿ ಗಿರಿಧಾಮದಲ್ಲಿ ಕೆಲವು ದಿನ ವಿಶ್ರಾಂತಿ ಪಡೆದರು. ಅಲ್ಲಿ ಹೆಚ್ಚು ಕಾಲ ಇರುವುದು ಅವರಿಗೆ ಇಷ್ಟವಿರಲಿಲ್ಲ. ಆಶ್ರಮಕ್ಕೆ ಹೋಗೋಣ ಎಂದರು. ಬಿಸಿಲು ಹೆಚ್ಚು ಅಲ್ಲಿ ಎಂದರೆ "ನಮ್ಮ ಜನ ಇಂಥ ಉರಿಬಿಸಿಲಿನಲ್ಲಿಯೇ ಕೆಲಸ ಮಾಡುತ್ತಾರಲ್ಲ. ಅವರಿಗೆ ಖಾಯಿಲೆ ಆದರೆ ಎಲ್ಲಿ ಹೋಗುತ್ತಾರೆ?" ಎಂದು ಕೇಳಿದರು. "ಹಾಗೆ ಸುಮ್ಮನೆ ಇರುವುದಾದರೆ ನಮ್ಮ ಆಶ್ರಮದಲ್ಲಿಯೇ ಇರುತ್ತೇನೆ" ಎಂದರು.

ಕಟ್ಟಕಡೆಗೆ ಗಿರಿಧಾಮಕ್ಕೆ ಆರೋಗ್ಯಧಾಮಕ್ಕೆ ಹೋಗಲು ಒಪ್ಪಿಕೊಂಡಾಗ. ಗುಣವಾದ ಮೇಲೆ ಮತ್ತೆ ನನ್ನ ಪ್ರವಾಸವನ್ನು ಮುಂದುವರೆಸಬೇಕು ಎಂದು ಕರಾರು ಹಾಕಿದರು. ಡಾ. ಜೀವರಾಜ ಮೆಹ್ತಾ ಹೇಳಿದರು "ನಿಮಗೆ ಸದಾ ಕೆಲಸ ಇದ್ದೇ ಇರುತ್ತೆ. ನಿಮ್ಮ ದಿನಚರಿಗೆ ಅಡ್ಡ ಬರುವುದಿಲ್ಲ ನಾನು, ಆದರೆ ನಿಮಗೆ ಆಗುತ್ತಿದ್ದ ಆಯಾಸ ಹೆಚ್ಚಿನದು. ಸ್ವಲ್ಪ ಗುಣ ಆದ ಮೇಲೆ. ಜನರು ಬಂದು ನೋಡಲಿ ನಿಮ್ಮನ್ನು. ತಾವು ಸಂಗ್ರಹಿಸಿದ ನಿಧಿಯನ್ನು ಕೊಡಲಿ. ಕೆಲಸಗಾರರು ವರದಿ ಹೇಳಲಿ. ನಿಮ್ಮಿಂದ ಸಲಹೆ ಪಡೆಯಲಿ. ನೀವು ಸ್ವತಃ

ಕೆಲಸ ಮಾಡದೆ ಬರೀ ಮಾರ್ಗದರ್ಶನ ಮಾಡಿದರೆ ಸಾಕು. ಹಗುರವಾಗಿ ಏನಾದರೂ ಓದಿ. ಆತ್ಮಕಥೆ ಬರೆಯಿರಿ. ಪತ್ರವ್ಯವಹಾರವನ್ನು ಮಾತ್ರ ಮಾಡಬೇಡಿ."

"ಬಹಳ ಸಂತೋಷ. ಹಗುರವಾದ ಓದು ಎಂದರೆ ಏನು? ಶ್ರಮ ಇಲ್ಲದ ಓದು ಅಲ್ಲವೆ? ಡಾಕ್ಟರಿಗೆ ಹಗುರವಾದ ಓದು ಎಂದರೆ ಯಾವುದೋ ಒಂದು ವಿನೋದದ ಪುಸ್ತಕ ಆಗಬಹುದು. ಆದರೆ ಗಾಂಧೀಜಿಗೆ ಆಸನ–ಪ್ರಾಣಾಯಮಾದ ಪುಸ್ತಕವೋ ಸಾಧ್ಯವಾದರೆ ಜೈನ ಸಿದ್ಧಾಂತದ ಪುಸ್ತಕವೋ ಆದೀತು. ಒಂದು ರೀತಿಯಲ್ಲಿ ಈ ಖಾಯಿಲೆ ಅವರಿಗೆ ಒಂದು ವರದಂತೆ ಆಗಿದೆ. ಇಲ್ಲದೆ ಇದ್ದರೆ ಅವರಿಗೆ ಈ ಪುಸ್ತಕಗಳನ್ನು ಓದಲು ಬಿಡುವು ಎಲ್ಲಿದೆ? ಅವರು ಓದಿದ್ದೆಲ್ಲ ಹೆಚ್ಚಾಗಿ ಸೆರೆಮನೆಯಲ್ಲಿ ಇದ್ದಾಗ ಅಥವಾ ಆರೋಗ್ಯ ಸಂವರ್ಧನೆಗಾಗಿ ವಿಶ್ರಾಂತಿ ಪಡೆದಾಗ.

**ನೂಲದೆ ನಾನು ಬದುಕಲಾರೆ:**

ಡಾಕ್ಟರೊಂದಿಗೆ ಬಹಳ ದೀರ್ಘಕಾಲ ಮಾತುಕತೆ ಆಯಿತು. ಅದರ ಪರಿಣಾಮ ಆಗಿ ಈ ಕೆಳಗಿನ ಸಂಗತಿಗಳನ್ನು ಬರೆದಿದ್ದೇನೆ. ಎಷ್ಟೋ ಸಲ ಡಾಕ್ಟರರು ಗಾಂಧೀಜಿಯನ್ನು ಒಪ್ಪಿಸಿದ್ದಾರೆ ದೈವವಶಾತ್. ಎಷ್ಟೋ ಸಲ ಒಪ್ಪಿಸಲು ಆಗಿಲ್ಲ. ಗಾಂಧೀಜಿ ಒಳ್ಳೆಯ ಆದರ್ಶ ರೋಗಿ ಎಂದು ಅನೇಕ ಡಾಕ್ಟರರು ಹೇಳಿದ್ದಾರೆ. ಆದರೂ ಕೆಲವು ವೇಳೆ ಅವರಿಗೆ ದಿಕ್ಕುತೋಚದ ಹಾಗೆ ಮಾಡಿಬಿಡುತ್ತಾರೆ. ಆರೋಗ್ಯ ಕೆಟ್ಟ ಕೂಡಲೆ ಸಂಪೂರ್ಣ ದೈಹಿಕ ವಿಶ್ರಾಂತಿ ಎಂದು ಡಾಕ್ಟರ್ ವಿಧಿಸಿದರು. ನೂಲುವುದೂ ಕೂಡದು ಎಂದರು. ಹಾಗಾದರೆ ನೂಲುವುದಕ್ಕೆ ಮೊದಲು, ನೂತ ಮೇಲೆ ನನ್ನ ರಕ್ತದ ಒತ್ತಡವನ್ನು ತೆಗೆದುಕೊಳ್ಳಿ, ಆ ಮೇಲೆ ನನಗೆ ತೋರಿಸಿ–ನೂಲುವುದರಿಂದ ನನ್ನ ರಕ್ತದ ಒತ್ತಡ ಹೆಚ್ಚು ಆಯಿತು ಅದರಿಂದ ಭಯ ಇದೆ ಎಂದು. ಆ ಮೇಲೆ ನಿಮ್ಮ ಸಲಹೆ ಕೇಳುತ್ತೇನೆ. ಆದರೆ ಇಲ್ಲಿ ನೋಡಿ, ನೂಲುವುದು ನನಗೆ ವಿಶ್ರಾಂತಿಯೆ; ನನ್ನ ನರಗಳಿಗೆ ಅದರಿಂದ ಶಾಂತಿ ಸಿಗುತ್ತದೆ. ಅಲ್ಲದೆ ನನ್ನ ಜೀವನಕ್ರಮವೇ ಬೇರೆ. ನಿಮ್ಮ ಜೀವನ ಕ್ರಮವೇ ಬೇರೆ. ಉದಾಹರಣೆಗೆ–ನೀವು ಏನೇನೋ ಔಷಧಿಗಳನ್ನು ವಿಧಿಸುತ್ತೀರಿ. ನೋಡಿ ನನ್ನ ಜೀವನ ಒಂದು ಕ್ರಮವನ್ನು ಅನುಸರಿಸುತ್ತಿದೆ. ನಾನು ಅದನ್ನು ಸುಲಭವಾಗಿ ಬದಲಾಯಿಸಲಾರೆ. ಐದು ದ್ರವ್ಯಗಳಿರುವ ಒಂದು ಔಷಧವನ್ನು ನೀವು ಕೊಟ್ಟರೆ ನಾನು ತೆಗೆದುಕೊಂಡರೂ ತೆಗೆದುಕೊಂಡೇನು; ಆದರೆ ಅವತ್ತು ಊಟ ಬಿಡುತ್ತೇನೆ. ಏಕೆಂದರೆ ಏನೇ ಆಗಲಿ, ದಿನಕ್ಕೆ ಐದು ಪದಾರ್ಥಗಳಿಗಿಂತ ಹೆಚ್ಚು ನಾನು ತಿನ್ನುವುದಿಲ್ಲ ಎಂಬ ವ್ರತ ಇದೆ. ನನಗೆ ಗುಣ ಆಗಬೇಕಾದರೆ ನನ್ನ ಆಹಾರಕ್ಕಿಂತ ಹೆಚ್ಚು ಅಗತ್ಯ ಈ ಔಷಧ ಎಂದು ನನಗೆ ಮನದಟ್ಟು ಮಾಡಬೇಕು. ಇಲ್ಲದೆ ಇದ್ದರೆ ಔಷಧವನ್ನೇ ಕೊಡದೆ ಇರಬೇಕು. ಇನ್ನೂ ಒಂದು ಮಾತು. ನೂಲದೆ ನಾನು ಬದುಕಲಾರೆ. ನಾನು ಊಟ ಮಾಡಬೇಕು ಬದುಕ ಬೇಕು ಎಂದರೆ ನೂಲಲೇ ಬೇಕು. ಒಂದು ವೇಳೆ ನೂಲುತ್ತ ನೂಲುತ್ತ ಹಾಗೆಯೆ ನಾನು ಕುಸಿದು ಬೀಳುವುದಾದರೆ, ಆಗ ನೀವು ಬಂದು ನೋಡಿದರೆ ಆ ಸಾವು ಎಂಥ ಸಾವು! ನನ್ನ ಸುತ್ತಲೂ ಇದ್ದವರು ನಿಮ್ಮ ನಿಯಮಗಳನ್ನು ಪಾಲಿಸಲಿಲ್ಲ ಎಂದು ಮನಸಾರೆ ನೀವು ಅವರನ್ನು ಬಯ್ಯಬಹುದು. ಆದರೆ ನೀವು

ಒಳ್ಳೆಯವರಾದರೆ ಎಂಥ ಅದ್ಭುತ ಮರಣ ಎಂದೀರಿ. ನಾನು ಬದುಕಿ ಇದ್ದೂ ನೂಲದೇ ಹೋದರೆ ಬಹಳ ವ್ಯಥೆಗೊಂಡೇನು. ನನ್ನ ಅಂತರಂಗಕ್ಕೆ ಬಹಳ ಘಾಸಿ ಆದೀತು. ಹೌದು ವೈದ್ಯರೆ ನಾನು ಓದುವುದನ್ನು ಬರೆಯುವುದನ್ನು, ನೂಲುವುದನ್ನು ಕೂಡ ಬಿಟ್ಟೇನು; ಊಟವನ್ನು ಬಿಟ್ಟುಬಿಟ್ಟರೆ ಇದಕ್ಕೆ ನಿಮ್ಮ ಒಪ್ಪಿಗೆ ಇದೆಯೆ?

"ಇಲ್ಲ ಡಾಕ್ಟರೆ ನಿಮ್ಮ ಅಪ್ಪಣೆಯನ್ನು ಅಕ್ಷರಶಃ ಪಾಲಿಸಲಾರೆ ನಾನು. ನೀವು ದೋಷಾತೀತ ರಾದರೆ ಆ ಮಾತು ಬೇರೆ". ಡಾಕ್ಟರು ಹೇಳಿದರು "ಹಾಗೆ ಮಾಡಬಲ್ಲವರಾದರೆ ನಾವು ಔಷಧಿ ಕೊಡುತ್ತ ಇರಬೇಕಾದ್ದಿಲ್ಲ. ಭವಿಷ್ಯ ಹೇಳುತ್ತ ಗುಡಿಗಳಲ್ಲಿ ಕುಳಿತಿರಬಹುದು" ಹೀಗಾಗಿ "ಇವರಿಗೆ ಔಷಧಿ ಏನೂ ಬೇಡ, ಅನಿರ್ದಿಷ್ಟ ಕಾಲದವರೆಗೆ (೧೪-೪-೨೭) ವಿಶ್ರಾಂತಿ ಸಾಕು" ಎಂದು ಡಾಕ್ಟರು ಹೇಳಿದರು.

ನಿಪ್ಪಾಣಿಯಲ್ಲಿ ಶ್ರೀ ರಾಜಗೋಪಾಲಚಾರಿ ಹೇಳಿದರು "ಭಗವಂತ ನಮ್ಮ ಶ್ರದ್ಧೆಯನ್ನು ಪರೀಕ್ಷಿಸಬೇಕೆಂದ. ಗಾಂಧೀಜಿಯೆ ನಮ್ಮ ಮನೆ ಬಾಗಿಲಿಗೆ ಬಂದು ಬೇಡುವವರೆಗೆ ನಮ್ಮ ಕಾಣಿಕೆ ಕೊಡುತ್ತೇವೋ ಇಲ್ಲವೋ-ನಿಪ್ಪಾಣಿ ಈ ಪರೀಕ್ಷೆಯಲ್ಲಿ ತೇರ್ಗಡೆ ಆಯಿತು, ಅಲ್ಲಿ ೪ ದಿನ ಇರಬೇಕಾಯಿತು ನಾವು. ಆ ಕಾಲದಲ್ಲಿ ಅಲ್ಲಿನ ಜನ ನಡೆದುಕೊಂಡ ರೀತಿ ಅನುಕರಣ ಯೋಗ್ಯ ಆಗಿತ್ತು. ಘೋಷಣೆ ಇಲ್ಲ, ಸದ್ದು ಇಲ್ಲ, ಯಾವ ಒತ್ತಾಯವೂ ಇಲ್ಲ. ದರ್ಶನ ಅಥವಾ ವ್ಯರ್ಥ ಕುತೂಹಲ ಯಾವುದೂ ಇಲ್ಲ. ಇದ್ದಕ್ಕಿದ್ದಂತೆ ಗಾಂಧೀಜಿಯ ಆರೋಗ್ಯ ಕೆಟ್ಟಿತು ಎಂಬುದು ಎಲ್ಲರಿಗೂ ತಿಳಿಯಿತು. ಗಾಂಧೀಜಿ ತಂಗಿದ್ದ ಮನೆಯ ಹೊರಬಾಗಿಲ ಬಳಿಗೆ ಪ್ರತಿಯೊಬ್ಬರೂ ಬರುತ್ತಿದ್ದರು ಸದ್ದಿಲ್ಲದೆ. ದಿನವೂ ಗಾಂಧೀಜಿಯ ಆರೋಗ್ಯದ ಬಗ್ಗೆ ಒಂದು ಸಮಾಚಾರ ಪತ್ರವನ್ನು ಗೋಡೆಗೆ ಅಂಟಿಸುತ್ತಿದ್ದೆವು. ಅದನ್ನು ಓದಿಕೊಳ್ಳುತ್ತಿದ್ದರು. ನಿಪ್ಪಾಣಿಯಿಂದ ಹೊರಟುಹೋಗುವ ದಿನ ನಮ್ಮ ಅತಿಥೇಯರು, ಒಂದು ನಿಮಿಷ ಕೈಸಾಲೆಯಲ್ಲಿ ಮೇಲುಗಡೆ ಗಾಂಧೀಜಿ ಕುಳಿತುಕೊಳ್ಳಲಿ, ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರು ಅಂಗಳದಿಂದ ಅವರ ದರ್ಶನ ಮಾಡಿಕೊಳ್ಳಲಿ, ಕೆಲಸಗಾರರ ಪ್ರತಿನಿಧಿಗಳು ಇಬ್ಬರು ಮೇಲೆ ಹೋಗಿ ನಿಧಿಯನ್ನು ಅರ್ಪಿಸಲಿ-ಎಂದು ಏರ್ಪಾಟು ಮಾಡಿದರು.

**ನಿಪ್ಪಾಣಿಯಲ್ಲಿ :**

ಎಲ್ಲವೂ ನಿಶ್ಶಬ್ದ ಆಗಿ ನಡೆಯಿತು. ಶ್ರೀಮತಿ ಕಸ್ತೂರಬಾ ಗಾಂಧೀ ಹೆಂಗಸರ ನಡುವೆ ಕುಳಿತು ಒಂದೆರಡು ಮಾತು ಹೇಳಿದರು. ಮಾರನೆಯ ದಿನ ಬೆಳಿಗ್ಗೆ ನಾವು ಬೆಳಗಾಂವಿಗೆ ಹೋಗಬೇಕಾಗಿತ್ತು. ನಮಗೆ ಆತಿಥ್ಯ ನೀಡಿದ ಶ್ರೀ ಮೂಲಜೀ ಸುಮ್ಮನೆ ಸಭಾ ಸ್ಥಳಕ್ಕೆ ಹೋಗಿ, ಅಲ್ಲಿ ಒಂದೆರಡು ನಿಮಿಷ ಸುಮ್ಮನೆ ಕುಳಿತು ಗಾಂಧೀಜಿ ನಿಧಿಯನ್ನು ಸ್ವೀಕರಿಸಬೇಕು. ಉಳಿದ ಕಾರ್ಯಕ್ರಮ ಎಲ್ಲವನ್ನೂ ಗಂಗಾಧರರಾಯರು ನಡೆಸಬೇಕು ಎಂದು ಸೂಚಿಸಿದರು. ಗಾಂಧೀಜಿಯ ಮೋಟಾರನ್ನು ಒಂದು ವೇದಿಕೆಯ ಬಳಿಗೇ ಒಯ್ದರು. ಅಲ್ಲಿ ಸದ್ದಿಲ್ಲದೆ ಗಾಂಧೀಜಿ ಒಂದು ಕುರ್ಚಿಯಲ್ಲಿ ಕುಳಿತರು. ಒಂದು ಬಿನ್ನವತ್ತಳೆ ಓದಿ, ೮೪೫೭ ರೂಪಾಯಿಗಳ ನಿಧಿಯನ್ನು ಅರ್ಪಿಸಿದರು. ಎಲ್ಲವೂ ೮-೧೦ ನಿಮಿಷಗಳಲ್ಲಿ ಮುಗಿಯಿತು. ಗಾಂಧೀಜಿ

ಗಂಗಾಧರರಾಯರ ಕಿವಿಯಲ್ಲಿ ವಂದನೆಗಳನ್ನು ಹೇಳಿದರು. ಅವರು ಸಭೆಗೆ ಅದನ್ನು ಗಟ್ಟಿಯಾಗಿ ತಿಳಿಸಿದರು. ಪ್ರೇಕ್ಷಕರಿಗೆ ಬಹಳ ಸಂತೋಷ ಆಯಿತು. ಭಾಷಣವನ್ನು ಕೇಳಲಿಲ್ಲ ಎಂಬ ಕೊರತೆಯನ್ನು ಪ್ರದರ್ಶಿಸಲಿಲ್ಲ. ವ್ಯವಸ್ಥೆ ಅಷ್ಟು ಚೆನ್ನಾಗಿತ್ತು.

**ನಂದೀದುರ್ಗದ ವರ್ಣನೆ :**

ನಂದೀದುರ್ಗಕ್ಕೆ ಬಂದ ಮೇಲೆ (೭-೮-೨೭) ಮಹದೇವದೇಸಾಯಿ ಹೀಗೆ ಬರೆದರು "ನಂದಿದುರ್ಗ ಬೆಂಗಳೂರಿನಿಂದ ೩೫ ಮೈಲಿ ದೂರ. ಸಮುದ್ರದ ಮಟ್ಟಕ್ಕೆ ೪೮೫೦ ಅಡಿ ಎತ್ತರ. ಗಟ್ಟಿಕಲ್ಲಿನ ಗುಡ್ಡ. ಇದ್ದಕ್ಕಿದ್ದಂತೆ ಮೇಲೆ ಎದ್ದು, ದೂರದಿಂದ ನೋಡುವವರಿಗೆ ವಿಸ್ತಾರವಾದ ಮೈದಾನ ಮಧ್ಯೆ ಒಂದು ಪಿರಮಿಡ್ಡಿನ ಹಾಗೆ. ಅಥವಾ ಮೇಲೆದ್ದ ಒಂದು ಗುಮ್ಮಟದ ಹಾಗೆ ಕಾಣುತ್ತದೆ. ಇದರ ಇತಿಹಾಸ ೧೧ ಶತಮಾನದವರೆಗಂತೂ ಹಿಂದಕ್ಕೆ ಹೋಗುತ್ತದೆ. ಬೆಟ್ಟದ ಮೇಲೆ ಇರುವ ಗುಡಿಯ ಶಿಲಾಶಾಸನಗಳು ಹೀಗೆ ತಿಳಿಸುತ್ತವೆ. ಮೊದಲಿನಿಂದಲೂ ಈ ಪ್ರದೇಶ ಹಿಂದೂ ರಾಜರ ಅಧೀನದಲ್ಲಿತ್ತು. ನಡುವೆ ಕೆಲವು ದಿನ ಟಿಪ್ಪು ಸುಲ್ತಾನ್ ಆಳಿದ ಕಾಲದಲ್ಲಿ ಮಾತ್ರ ಆಗಿರಲಿಲ್ಲ. ಟಿಪ್ಪು ಸುಲ್ತಾನ್ ಈ ದುರ್ಗವನ್ನು ಅಭೇದ್ಯವನ್ನಾಗಿ ಮಾಡಿದ್ದನಂತೆ. ೧೭೯೧ರಲ್ಲಿ ಲಾರ್ಡ್ ಕಾರ್ನ್‌ವಾಲಿಸ್ ನೇತೃತ್ವದಲ್ಲಿ ಇದನ್ನು ವಶಮಾಡಿಕೊಳ್ಳಲು ೨೧ ದಿನ ಹಿಡಿಯಿತಂತೆ. ಈ ಆಕ್ರಮಣದ ಕತೆಯನ್ನು ಮೈಸೂರಿನ ಇತಿಹಾಸಕಾರ ವಿಲ್ಕ್ಸ್ ಬಹಳ ಸ್ವಾರಸ್ಯವಾಗಿ ವರ್ಣಿಸಿದ್ದಾನೆ. ವಿಶೇಷ ಸೈನ್ಯಪಡೆಯ ಬ್ರಿಟಿಶ್ ದಳಪತಿ ಒಬ್ಬನ ಜಾಣತನದ ಧೈರ್ಯದ ಕತೆಯನ್ನು ಇಲ್ಲಿ ಹೇಳಬಹುದು.

ಎಲ್ಲರೂ ಅಪ್ಪಣೆಗಾಗಿ ಕಾಯುತ್ತಿದ್ದರು. ಸದ್ದೇ ಇರಲಿಲ್ಲ. ಸ್ವಲ್ಪ ವೇಳೆಗೆ ಮೊದಲು ಒಬ್ಬ ಸಿಪಾಯಿ ಹೆಚ್ಚು ಯೋಚನೆ ಮಾಡದೆ ಒಂದು ಗಣಿಯ ಬಗ್ಗೆ ಏನೋ ಹೇಳಿದ. ದಳಪತಿ ಮೆಡೋಸ್ ಅದಕ್ಕೆ ಹೇಳಿದ "ಖಂಡಿತ ಇದು ಬಂಗಾರದ ಗಣಿ". ಆಗ ಒಂದು ಹುಸಿನಗೆ ಎಲ್ಲರ ಮುಖದಲ್ಲೂ ಅರಳಿ, ಸರಿಯಾದ ವಾತಾವರಣವನ್ನು ನಿರ್ಮಿಸಿತು. ಕೋಟೆಯ ಗೋಡೆಯಲ್ಲಿ ಬಿಟ್ಟಿರುವ ಬಿರುಕು ಈಗಲೂ ಕಾಣುತ್ತದೆ. ನಮ್ಮ ಜನರ ಪರಾಕ್ರಮದ ಕಥೆಗಳನ್ನು ನಾವು ಕೇಳಲಾರದೆ ಹೋದೆವು ಎನಿಸುತ್ತದೆ. ಪೂನಾದ ಬಳಿ ಇರುವ ಸಿಂಹಗಡದ ಕೋಟೆಯ ಕತೆಗಳನ್ನು ಕೇಳಿದರೆ ರೋಮಾಂಚನವಾಗುತ್ತದೆ. ನಂದಿಬೆಟ್ಟದ ಮೇಲೆ ಇರುವ ಯೋಗ ನಂದೀಶ್ವರ ದೇವಸ್ಥಾನ ಚೌಕವಾಗಿ ಕಲ್ಲಿನ ಮೆಟ್ಟಿಲುಗಳಿಂದ ಅಮೃತ ಸರೋವರವನ್ನು ಬಿಟ್ಟರೆ, ಹಿಂದಿನ ಕಾಲದ ಹಿಂದೂ ವೈಭವದ ನೆನಪನ್ನು ಕೊಡುವ ಬೇರೆ ಯಾವ ಅವಶೇಷಗಳೂ ಇಲ್ಲ. ಇಲ್ಲಿ ಇರುವ ಸೊಗಸಾದ ವೃಕ್ಷಗಳ ಹಣ್ಣಿನ ತೋಟ ಬ್ರಿಟಿಶ್ ದಳಪತಿ ಒಬ್ಬ ನೆಟ್ಟಿದ್ದು. ಇಲ್ಲಿರುವ ಬಂಗಲೆಗಳೂ ಅಷ್ಟೆ. ಬ್ರಿಟಿಶ್ ಅಧಿಕಾರಿಗಳು ಬೇಸಗೆಯಲ್ಲಿ ಈ ತಣ್ಣನೆಯ ಗಾಳಿಗೆ ಮನಸೋತು ಕಟ್ಟಿಸಿಕೊಂಡರು. ಸಿಂಹಗಡಕ್ಕಿಂತ ಈ ಬೆಟ್ಟ ಚಿಕ್ಕದೇ. ಆದರೂ ಇದು ಒಂದು ಅಧಿಕೃತ ಗಿರಿಧಾಮ. ಅಂಬೋಲಿಯಲ್ಲಿ ಕಾಣಬರುವ ನೀರವತೆ ಇಲ್ಲಿ ಸಿಗುವುದಿಲ್ಲ. ಅಂಬೋಲಿಯಲ್ಲಿ ಇರುವ ದೃಶ್ಯಗಳ ಹಾಗೆ ಮನೋಹರತೆ ಇಲ್ಲ ಈ ದೃಶ್ಯಗಳಲ್ಲಿ. ಆದರೂ ಸಂಜೆಯ ಸೂರ್ಯಾಸ್ತದ ವೇಳೆ ಮೋಡಗಳು ತೋರಿಸುವ ಬಣ್ಣಬಣ್ಣದ ನೋಟ ಕಣ್ಣಿಗೆ ಬೀಳುತ್ತದೆ. ಇಲ್ಲಿನ ಗಾಳಿ ನಿಜವಾಗಿ ಆರೋಗ್ಯವರ್ಧಕ. ೧೮೫೮ರಷ್ಟು

ಹಿಂದೆಯೇ ಇಲ್ಲಿಂದ ಲೇಡಿ ಕ್ಯಾನಿಂಗ್ ಬರೆದಳು– "ಸುತ್ತಲೂ ೧೫೦ ಮೈಲಿ ದೂರದ ಸೀಮೆ ಕಾಣುತ್ತದೆ. ಇಲ್ಲಿನ ಗಾಳಿಯೊ ಬಹಳ ತಣ್ಣಗೆ. ಬಹಳ ಸರ್ವೋನವ. ಈ ಸ್ಥಳ ಸಾಕಷ್ಟು ಆನಂದದಾಯಕ."

ಇನ್ನು ಈ ಸ್ಥಳದ ವರ್ಣನೆ ಸಾಕು. ಇಲ್ಲಿನ ವಾತಾವರಣಕ್ಕೆ ಹೊಂದಿಕೊಳ್ಳಲು ಗಾಂಧೀಜಿಗೆ ೫–೬ ದಿನ ಬೇಕಾಯಿತು. ಮತ್ತೆ ಏನೋ ಹಿಮ್ಮುಖ ಎಂದು ಗಾಬರಿ ಆಗಿತ್ತು. ಈಗ ೩ ದಿನಗಳಿಂದ ಗಾಂಧೀಜಿಗೆ ತ್ರಾಣ ಹೆಚ್ಚುತ್ತಿದೆ. ಮೊದಲಿನಂತೆ ಓಡಾಡುತ್ತಾರೆ. ವಿಶ್ರಾಂತಿಯನ್ನು ಎಷ್ಟು ಪಡೆಯಬೇಕೋ ಅಷ್ಟು ಪಡೆದರೆ ಅವರು ಬೇಗನೆ ತಮ್ಮ ದಿನಚರಿಯ ಕೆಲಸಕ್ಕೆ ಸಿದ್ಧ ಆಗಬಹುದು.

**ಸ್ವಾಗತ ಸಮಿತಿ :**

ಗಾಂಧೀಜಿ ಬೆಂಗಳೂರಿಗೆ– ನಂದಿ ಬೆಟ್ಟಕ್ಕೆ ಬರುವ ಮೊದಲೇ ಆಗ ಕಾಂಗ್ರೆಸ್ ನಾಯಕರು ಆಗಿದ್ದ ಡಾ। ಟಿ. ಕೆ. ಭಾಷ್ಯಂ ಅವರೂ, ಶ್ರೀ ಎಮ್. ಜಿ ಲಕ್ಷ್ಮೀನರಸೂ ಅವರೂ ಒಂದು ಸ್ವಾಗತ ಸಮಿತಿಯನ್ನು ರಚಿಸಲು ಸಭೆ ಕರೆದಿದ್ದರು. ವೈ.ಎಮ್.ಸಿ.ಎ. ಅಲ್ಲಿ ಈ ಸಭೆ ನೆರೆಯಿತು. ಭಾಷ್ಯಂ ಅವರು ಬೆಂಗಳೂರಿನ ೫೦ ಜನ ಪ್ರಮುಖರನ್ನು ಚಹಾಕ್ಕೆ ಕರೆದಿದ್ದರು. ಸಭೆಗೆ ಪ್ರಮುಖರು ಯಾರೂ ಬರಲಿಲ್ಲ. ಆಗ ತಾನೆ ಹಂಗಾಮಿ ದಿವಾನ್ ಗಿರಿಯಿಂದ ನಿವೃತ್ತರಾಗಿದ್ದ ಮೀರ್ ಹಂಜಾಹುಸೇನ್ ಸಾಹೇಬರೂ ಮುಂದೆ ಸಚಿವರಾಗಿದ್ದ ರಾಜಸೇವಾಸಕ್ತ ಸುಬ್ಬರಾಮ ಶೆಟ್ಟರೂ, ಈಗ ನಿವೃತ್ತರಾಗಿರುವ ನ್ಯಾಯಮೂರ್ತಿ ನಾಗೇಶ್ವರ ಅಯ್ಯರ್ ಅವರೂ ಬಂದಿದ್ದರು. 'ಮಹಾತ್ಮ ಗಾಂಧಿ ಸ್ವಾಗತ ಸಮಿತಿ' ಒಂದನ್ನು ರಚಿಸಲಾಯಿತು. ಮೀರ್ ಹಂಜಾಹುಸೇನ್ ಅಧ್ಯಕ್ಷರು. ಸುಬ್ಬರಾಮ ಶೆಟ್ಟರೂ, ನಾಗೇಶ್ವರ ಅಯ್ಯರ್ ಅವರೂ ಖಜಾಂಚಿಗಳು, ಭಾಷ್ಯಂ ಮತ್ತು ಲಕ್ಷ್ಮೀನರಸು ಕಾರ್ಯದರ್ಶಿಗಳು. ಮೆಜೆಸ್ಟಿಕ್ ಸಿನಿಮಾದ ಮುಂದೆ ಇದ್ದ ಆರ್ಯನ್ ಲೋಯರ ಸೆಕೆಂಡರಿ ಸ್ಕೂಲಿಗೆ ಎದುರಾಗಿ ಒಂದು ಕೊಠಡಿಯಲ್ಲಿ ಸ್ವಾಗತ ಸಮಿತಿ ಕಚೇರಿ ಪ್ರಾರಂಭ ಆಯಿತು. ಆಮೇಲೆ ಇಡೀ ಸಂಸ್ಥಾನಕ್ಕೆ ಒಂದು ಸ್ವಾಗತ ಸಮಿತಿ ಆಯಿತು.

ಗಾಂಧೀಜಿ ಬೆಂಗಳೂರಿಗೆ ಬಂದದ್ದು ಏಪ್ರಿಲ್ ೨೯, ೧೯೨೭. ಪೂರ್ಣ ಖಾದೀಧಾರಿ ಆದ ಹಂಜಾಹುಸೇನ್ ಸಾಹೇಬರ ನೇತೃತ್ವದಲ್ಲಿ ಬೆಂಗಳೂರು ನಗರದ ರೈಲು ನಿಲುಮನೆಯಲ್ಲಿ ಸ್ವಾಗತ ಸಮಿತಿ ಅವರನ್ನು ಬರಮಾಡಿಕೊಂಡು ನೇರವಾಗಿ ನಂದಿಬೆಟ್ಟಕ್ಕೆ ಕರೆದುಕೊಂಡು ಹೋಯಿತು.

**ವೈದ್ಯರೊಡನೆ ಸಂಭಾಷಣೆ :**

ಆದರೆ ವೈದ್ಯರದು ಎಲ್ಲರದೂ ಒಂದೇ ಅಭಿಪ್ರಾಯ–ಸ್ವಲ್ಪ ನಿಧಾನ ಮಾಡಿ. ವೈದ್ಯರು ಅನೇಕರು ಗಾಂಧೀಜಿಯನ್ನು ಪರೀಕ್ಷಿಸಲು ದಯಮಾಡಿದ್ದಾರೆ. ನಿವೃತ್ತರಾಗಿರುವ ಡಾ। ಜಿ.ಸಿ. ರಾಮರಾಯರು ಇಲ್ಲಿರುವಷ್ಟು ದಿನ, ದಿನವೂ ಬರುತ್ತಿದ್ದರು. ಲಂಡನ್ ಮಿಶನ್ನಿನ ದಯಾಜೀವಿ ಡಾ। ಥಾಂಪ್ಸನ್ ಎರಡು ಸಲ ಬಂದಿದ್ದರು. ಬೆಂಗಳೂರಿನ ವಿಕ್ಟೋರಿಯಾ

ಆಸ್ಪತ್ರೆಯ ಡಾ। ಸುಬ್ಬರಾಯರೂ, ಕೃಷ್ಣಸ್ವಾಮಿಯವರೂ ಹೊತ್ತಿಗೆ ಸರಿಯಾಗಿ ಬಂದರು. ಅವತ್ತು ಅವರು ಬರುವ ವೇಳೆಗೆ ನಮಗೆಲ್ಲ ಗಾಬರಿ ಆಗಿತ್ತು. ಬಂದವರು ಪದೇ ಪದೇ ಬರುವುದಾಗಿ ಮಾತು ಕೊಟ್ಟರು. ಗಾಂಧೀಜಿ ಅಂಥವರ ಸಂಯಮಶೀಲ ಜೀವನದಲ್ಲಿ ಇಷ್ಟು ಹೆಚ್ಚು ರಕ್ತದ ಒತ್ತಡ ಹೇಗೆ ಬಂತು ಎಂದು ಎಲ್ಲರಿಗೂ ಆಶ್ಚರ್ಯ. ಪರಿಹಾರಕ್ಕಾಗಿ ಅನೇಕ ಉಪಯುಕ್ತ ಸೂಚನೆಗಳನ್ನು ಕೊಟ್ಟರು. "ಇಷ್ಟು ಎತ್ತರದ ಸ್ಥಳದಲ್ಲಿ ವಾಸಮಾಡುವುದು ನನ್ನ ಆರೋಗ್ಯಕ್ಕೆ ಬಾಧಕ ಅಲ್ಲ ಎಂದು ನಿಮಗೆ ನಂಬಿಕೆಯೋ" ಎಂದು ಗಾಂಧೀಜಿ ಒಬ್ಬ ವೈದ್ಯರನ್ನು ಕೇಳಿದರು. "ಗ್ರಂಥಗಳಿಂದಲೂ ನಿಮಗೆ ಭರವಸೆ ಕೊಡಬಲ್ಲೆ" ಎಂದರು ವೈದ್ಯರು. 'ನನಗೆ ಅದರ ಚಿಂತೆ ಇಲ್ಲ. ಆದರೆ ಇಲ್ಲಿಗೆ ಕರೆತಂದೆನಲ್ಲ ಎಂದು ರಾಜಗೋಪಾಲಚಾರಿಗೆ ಚಿಂತೆ ಆಗಬಹುದು. ಅವರ ಚಿಂತೆ ಕಳೆದಿದ್ದೀರಿ ನೀವು ಎಂದು ನನಗೆ ಸಂತೋಷ'.

'ಆದರೆ ಪತ್ರ ಪುಸ್ತಕಗಳನ್ನು ಹೇಗೆ ನಂಬಬೇಕು?'

'ಅನೇಕ ಪ್ರಯೋಗ-ಪ್ರಮಾಣಗಳ ಆಧಾರಗೊಂಡಿವೆ ಅವು'

'ಇನ್ನೊಬ್ಬ ವೈದ್ಯ ಬಂದು ಬೇರೆ ಒಂದು ಪ್ರಮಾಣವನ್ನು ನನ್ನ ಮುಖಕ್ಕೆ ಎಸೆದರೆ ಹೇಗೆ? ಈ ಜೀವಂತ ಪ್ರಮಾಣದ ಮುಂದೆ ಆ ಪ್ರಮಾಣಗಳದು ಏನು ಮಹಾ?'

ವೈದ್ಯರು ಬಹಳ ಸ್ನೇಹಪೂರ್ಣ ಆಗಿದ್ದರು. ಗಾಂಧೀಜಿಗೂ ಸ್ವಲ್ಪ ವಿನೋದ ಮಾಡಬೇಕು ಎನಿಸಿತು.

ಗಾಂಧೀಜಿ ಅವರಿಗೆ ಒಂದು ಕತೆ ಹೇಳಿದರು – "ಶ್ರೀಮತಿ ಮೇಬ್ರಿಕ್ ವಿಷಯ ನಿಮಗೆ ಗೊತ್ತೆ? ಒಬ್ಬ ಕೋಟೀಶ್ವರನ ಮಗಳು. ಅವಳ ಗಂಡ ಇನ್ನೊಬ್ಬ ಕೋಟೀಶ್ವರ. ಗಂಡನನ್ನು ಕೊಲೆ ಮಾಡಿದಳು ಎಂಬ ಆರೋಪಕ್ಕೆ ಗುರಿಯಾದಳು" ಎರಡೂ ಕಡೆ ಭಾರೀ ವಕೀಲರು ಬಂದರು. ವೈದ್ಯರು ಅನೇಕರನ್ನು ಪರೀಕ್ಷಿಸಿದರು. ಆಕೆ ಕೊಟ್ಟ ವಿಷದ ಪ್ರಮಾಣ (ಆರ್ಸೆನಿಕ್ ಡೋಸ್) ಕೊಲ್ಲುವಷ್ಟು ಅಲ್ಲ ಎಂದು ಒಂದು ಕಡೆಯ ವಾದ. ಕೊಲ್ಲುವಷ್ಟು ಎಂದು ಇನ್ನೊಂದು ಕಡೆಯ ವಾದ. ನ್ಯಾಯಾಧೀಶ ಎರಡೂ ಕಡೆಯ ವಾದಗಳನ್ನು ಸಂಕ್ಷೇಪವಾಗಿ ಹೇಳಿ ಪಂಚಾಯ್ತಿಗೆ ಹೇಳಿದ. 'ಲೋಕಾನುಭವದ ಗೃಹಸ್ಥರಂತೆ ತೀರ್ಪನ್ನು ಕೊಡಿ. ಮನುಷ್ಯ ಸ್ವಭಾವ ನಿಮಗೆ ಗೊತ್ತು. ವೈದ್ಯರ ಸಾಕ್ಷ್ಯಕ್ಕೆ ಎಳ್ಳಷ್ಟೂ ಬೆಲೆ ಕೊಡಬೇಡಿ. ಅವರು ಕೊಡುವ ಔಷಧದ ಬಗ್ಗೆ ಅವರಿಗೆ ಗೊತ್ತಿರುವುದು ಬಹಳ ಸ್ವಲ್ಪ. ಯಾರಿಗೆ ಕೊಡುತ್ತಾರೋ ಅವರ ದೇಹದ ಬಗ್ಗೆ ಗೊತ್ತಿರುವುದು ಇನ್ನೂ ಸ್ವಲ್ಪ'. ಎಲ್ಲರೂ ಗಟ್ಟಿಯಾಗಿ ನಕ್ಕರು. 'ಆ ಕಾಲಕ್ಕೆ ಅದು ನಿಜವೋ ಏನೋ. ಈಗಂತೂ ಅಲ್ಲ-ಎಂದು ಒಬ್ಬ ವೈದ್ಯರು ಹೇಳಿದರು.' 'ಏಕೆ ಅಲ್ಲ? ಏಳನೇ ಎಡ್ವರ್ಡನ ರಾಜವೈದ್ಯ ಸರ್ ಫ್ರೆಡರಿಕ್ ಟ್ರೀವ್ಸ್ ಇದನ್ನೇ ತಾನೇ ಹೇಳಿದ.' ಎಂದು ಗಾಂಧೀಜಿ ಹೇಳಿದರು. ರಾಜಗೋಪಾಲಾಚಾರಿಯವರು ಹೇಳಿದರು 'ಅದೆಲ್ಲ ಹಳೆಯ ಕಾಲ ಆಗ ಸುಬ್ಬರಾಯರು ಇನ್ನೂ ವಿದ್ಯಾರ್ಥಿಗಳು'. ಮತ್ತೆ ನಗು. ಹೀಗೆಂದರೆ ವೈದ್ಯರ ಸಲಹೆಯನ್ನು ಕೇಳುವುದಿಲ್ಲ ಗಾಂಧೀಜಿ ಎಂದಲ್ಲ. ಕೆಲವು ಸಲ ಸ್ವಂತ ತಾವೇ ತೀರ್ಮಾನಿಸಿಕೊಳ್ಳುತ್ತಾರೆ. ಆ ತೀರ್ಮಾನಗಳು ನಮ್ಮನ್ನು ಗಾಬರಿಗೊಳಿಸುತ್ತವೆ. ವೈದ್ಯರದು

ಎಲ್ಲರದೂ ಏಕಾಭಿಪ್ರಾಯ-ಮನಸ್ಸಿಗೆ ಅತ್ಯಧಿಕ ಶ್ರಮ ಆಗಿ ಈ ದುರವಸ್ಥೆ ತಲೆ ಹಾಕಿತು. ಹೀಗೆ ಹೇಳಿದರೆ ಸಹಜವಾಗಿ ನಮಗೆ ಹೊಳೆಯುವುದು ಇಷ್ಟು, ಶ್ರಮ ಕೊಡುವ ಕಾರ್ಯಗಳನ್ನು ಕೈಗೊಂಡುದು ತಪ್ಪು, ಮುಂದೆ ಇಂಥದನ್ನು ಕೈಗೊಳ್ಳದಂತೆ ಶಕ್ತಿಗೆ ಮೀರದಂತೆ ಎಚ್ಚರಿಕೆ ವಹಿಸಬೇಕು. ಆದರೆ ಗಾಂಧೀಜಿಗೆ ತೋಚುವುದೇ ಬೇರೆ. ಕೆಲವು ದಿನಗಳ ಹಿಂದೆ ಗಾಂಧೀಜಿ ಒಂದು ಪತ್ರದಲ್ಲಿ ಹೀಗೆ ಬರೆದರು.

**ಉಪವಾಸದ ಪ್ರಸ್ತಾಪ;**

"ಉಪವಾಸ ಮಾಡುವುದು ಒಳ್ಳೆಯದು. ನರಗಳಿಗೆ ಶ್ರಮ ಹೆಚ್ಚಾದಾಗಲಂತೂ ಶಾರೀರಿಕ ದೃಷ್ಟಿಯಿಂದ ಒಳ್ಳೆಯದು., ಸಂದೇಹ ಇಲ್ಲ. ಈ ದುರವಸ್ಥೆ ಬರುವ ಮೊದಲೇ ನಾನು ಉಪವಾಸ ಮಾಡಿದ್ದರೆ ಚೆನ್ನಾಗಿತ್ತು. ಅವತ್ತಿನ ಶ್ರಮ ಬಲು ಭಯಂಕರ. ಆದರೆ ಕೆಟ್ಟ ಮೇಲೆ ಬುದ್ಧಿ ಬಂದಂತೆ ಇದು. ನನ್ನ ಈ ಬುದ್ಧಿ ಇಲ್ಲದ ತಪ್ಪಿನಿಂದ ಇತರರೂ ಲಾಭ ಪಡೆಯಬಹುದು. ನನ್ನದು ಮೂರ್ಖತನ. ಏಕೆಂದರೆ ಶ್ರಮದ ಭಾರವೂ ನನಗೆ ಗೊತ್ತಿತ್ತು. ಅಂಥ ಪ್ರಸಂಗದಲ್ಲಿ ಉಪವಾಸ ಮಾಡುವುದರ ಮಹತ್ವವೂ ನನಗೆ ಗೊತ್ತಿತ್ತು. ಕಲಿ ಯಾವಾಗಲೂ ನಮ್ಮ ಬೆನ್ನ ಹಿಂದೆಯೇ ಇರುತ್ತಾನೆ. ನಾವು ಸ್ವಲ್ಪ ಎಚ್ಚರ ತಪ್ಪಿದರೆ ಸಾಕು ಹಿಡಿದುಕೊಳ್ಳುತ್ತಾನೆ. ನಾನು ಎಚ್ಚರ ತಪ್ಪಿದೆ, ದುರ್ಬಲ ಆಗಿದ್ದೆ. ನೋಡಿ ನನಗೆ ಬಲೆ ಬೀಸಿದ.

ಇಷ್ಟೆಲ್ಲ ಆದ ಮೇಲೆ ಏನು ಹೇಳಬಹುದು? ಗಾಂಧೀಜಿಗೆ ಅಧಿಕ ಶ್ರಮವನ್ನು ಕೊಟ್ಟು, ಅವರ ಕಾರ್ಯವನ್ನು ವಿಸ್ತರಿಸುವ ಮೂಲಕ ಸಹಾನುಭೂತಿ ಇಲ್ಲದ ಮೂರ್ಖತನದ ತಪ್ಪನ್ನು ಮತ್ತೊಮ್ಮೆ ಮಾಡಬಾರದು.

**ಆರ್ಥಿಕ ದಾಹ :**

ಸಂಸ್ಥಾನದ ಹಿರಿಯ ಅಧಿಕಾರಿ ಬಂದು ಮೊನ್ನೆಯ ದಿನ ಗಾಂಧೀಜಿಗೆ ಒಂದು ಪ್ರಶ್ನೆ ಕೇಳಿದರು. ಆ ಪ್ರಶ್ನೆ ಅವರನ್ನು ಬಹು ಕಾಲದಿಂದ ಕಾಡುತ್ತಿತ್ತು. "ಜನರ ಆಧ್ಯಾತ್ಮಿಕ ದಾಹ ಹೆಚ್ಚಿನದು ಎಂದು ನಿಮಗೆ ಗೊತ್ತಿದೆ. ಆದರೂ ಆರ್ಥಿಕ ದಾಹದ ವಿಷಯವನ್ನು ಒತ್ತಿ ಹೇಳುತ್ತೀರಿ? ವಾತಾವರಣದಲ್ಲಿ ವಿದ್ವೇಷ, ವಿರಸ, ಕಲಹ ವಂಚನೆ ತುಂಬಿದೆ. ಬಡವರಿಗಂತೂ ಈ ಜನ್ಮದಲ್ಲಿ ಯಾವ ಆಶೆಯೂ ಇಲ್ಲ, ಮುಂದಿನ ಜನ್ಮಕ್ಕೂ ಇಲ್ಲ. ನಿಮ್ಮಂಥ ಉನ್ನತ ಆಧ್ಯಾತ್ಮಿಕ ವ್ಯಕ್ತಿಗಳು ಆಧ್ಯಾತ್ಮಿಕ ಅವಶ್ಯಕತೆಯನ್ನು ತುಂಬಬೇಕು." ಗಾಂಧೀಜಿಗೆ ಶ್ರಮ ಕೊಡಬೇಕು ಎಂದು ಬಂದಿರಲಿಲ್ಲ ಆ ಸಜ್ಜನ. ಏನೋ ಸಹಜವಾಗಿಯೇ ಕೇಳಿದೆ ಎಂದು ತಿಳಿದುಕೊಂಡ. ಗಾಂಧೀಜಿ ಹಾಸಿಗೆಯಲ್ಲಿ ಮಲಗಿದ್ದರು. ಮಲಗಿಯೇ ಬಹಳ ಹುರುಪಿನಿಂದ ಉತ್ತರ ಕೊಟ್ಟರು: "ನೀವು ಹೇಳುವುದು ವಿದ್ಯಾವಂತ ವರ್ಗದ ಬಗ್ಗೆ ನಿಜ ಇರಬಹುದು. ಅವರ ಮುಂದೆ ರಾಟೆಯ ಆರ್ಥಿಕ ವಿಷಯವನ್ನು ನಾನು ಪ್ರಸ್ತಾಪಿಸುವುದೇ ಇಲ್ಲ. ಅವರೂ ಈ ವಿಷಯದ ಈ ಆಧ್ಯಾತ್ಮಿಕ ಭಾಗವನ್ನು ಅರಿತುಕೊಂಡರೆ ಸಾಕು. ರಾಟೆಯಿಂದ ನೂತು ಖಾದಿ ಧರಿಸಿದರೇನೇ ಬಡವರಲ್ಲಿ ಅವರಿಗೆ ಇರುವ ಸಹಾನುಭೂತಿ ಪ್ರಕಟ ಆಗುತ್ತದೆ.

ಬಡವರ ಪಾಲಿಗೆ ಆರ್ಥಿಕ ವಿಷಯವೇ ಆಧ್ಯಾತ್ಮಿಕ ವಿಷಯ. ಹೊಟ್ಟೆಗೆ ಇಲ್ಲದೆ ಸಾಯುತ್ತಿರುವ ಈ ಬಡ ಜನರಿಗೆ ಬೇರೆ ಯಾವ ಬಗೆಯ ಪ್ರಚೋದನೆಯೂ ಇಲ್ಲ. ಹಾಗೆ ಮಾಡಿದರೆ ನಿರರ್ಥಕ. ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ. ಅದೇ ಅವರಿಗೆ ಆಹಾರ ತೆಗೆದುಕೊಂಡು ಹೋಗಿ. ನಿಮ್ಮನ್ನು ದೇವರು ಎನ್ನುತ್ತಾರೆ. ಅವರಿಗೆ ಬೇರೆ ಯೋಚನೆಯೇ ಬರುವುದಿಲ್ಲ. ದಕ್ಷಿಣ ಆಫ್ರಿಕಾಕ್ಕೆ ದಳಪತಿ ಬೂತ್ ಬಂದಾಗ ಅವರ ಮೇಲೆ ಸಮಾಜವಾದಿಗಳು ಪ್ರಶ್ನೆಗಳ ಸುರಿಮಳೆ ಕರೆದರು. ತನ್ನ ಬಳಿಗೆ ಬಂದವರನ್ನು ತನ್ನ ಬೆಂಕಿ ಪೆಟ್ಟಿಗೆಯ ಕಾರಖಾನೆಯಲ್ಲಿ ಕೆಲಸ ಮಾಡಲು ನೇಮಿಸಿ ಕೇವಲ ಐಹಿಕ ಅಂಶವನ್ನು ಮುಂದೆ ಮಾಡುತ್ತೀರಿ ಎಂದರು. 'ನಾನು ಬೇರೆ ಏನು ಮಾಡಲಿ? ಎಲ್ಲ ಬಗೆಯ ಜನಗಳು ನನ್ನ ಬಳಿಗೆ ಬರುತ್ತಾರೆ. ನಿರುದ್ಯೋಗಿ, ತಿರುಕ, ಒರಟ, ಲಫಂಗ ಎಲ್ಲರೂ. ಅವರಿಗೆ ನೀತಿಯನ್ನು ನಾನು ಉಪದೇಶಿಸಲೆ? ನಾನು ಮೊಟ್ಟಮೊದಲು ಅವರಿಗೆ ಕೊಡುವ ಭರವಸೆ ಅನ್ನದ್ದು. ಇಲ್ಲಿ ಕೆಲಸ ಇದೆ. ಮಾಡಿ ಒಂದು ಹಿಡಿ ಹಿಟ್ಟು ಗಳಿಸಿಕೊಳ್ಳಿ ಎನ್ನುತ್ತೇನೆ' ಇನ್ನೂ ಹೀಗೆಯೇ ಹೇಳುತ್ತಾರೆ ಬೂತ್.

ಗಾಂಧೀಜಿಗೆ ತುಂಬಾ ಆಯಾಸ ಆಯಿತು ಎಂದು ಆ ಸ್ನೇಹಿತರಿಗೆ ಅರ್ಥ ಆಯಿತು. ಅವರು ಅಪ್ಪಣೆ ಪಡೆದು ಹೊರಟುಬಿಟ್ಟರು. ಗಾಂಧೀಜಿಗೆ ಅರ್ಥವಾಯಿತು. ಈ ಮಾತುಕತೆಯಿಂದ ತಮಗೆ ಆಯಾಸವಾಯಿತು ಎಂದು ಸಂಜೆ ಹೇಳಿದರು: "ಅತಿ ಶ್ರಮ ಮೂಲಕವಾಗಿಯೂ ಇರಬಹುದು ನನ್ನ ಈ ರಕ್ತದ ಒತ್ತಡ. ನಾನು ವಿಶ್ರಾಂತಿ ಪಡೆಯುತ್ತ ಇಲ್ಲವೇ? ಆದರೆ ರಾಟೆಯ ವಿಷಯದಂಥ ಮಾತು ಬಂದರೆ ನಾನು ಹೇಗೆ ನುಂಗಿಕೊಳ್ಳಲಿ? ಯಾರಾದರೂ ಆ ಪ್ರಸ್ತಾಪಮಾಡಿದರೆ ಸಾಕು. ನನ್ನ ಒಳಗಡೆ ಒಂದು ಜ್ವಾಲಾಮುಖಿಯೆ ಆಡುತ್ತದೆ. ನಾನು ಏನು ಮಾಡಲಿ? ರಾಷ್ಟ್ರದ ಈ ದಾರಿದ್ರ್ಯ, ರೋಗ-ಸೋಮಾರಿತನ-ಮನಸ್ಸಿಗೆ ಬಂತೋ, ನನ್ನ ಕಾಯಿಲೆ ಅವರ ಮುಂದೆ ಏನು ಮಹಾ? ನನ್ನ ಹೃದಯದಲ್ಲಿ ಆಳವಾಗಿ ನಾಟ ಹೋಗಿದೆ ಈ ದುರವಸ್ಥೆಯ ಪ್ರಜ್ಞೆ"

**ಗಾಂಧೀಜಿಯ ಆರೋಗ್ಯ :**

ಮುಂದಿನ ವಾರ (೫-೫-೨೭) ಮಹದೇವ ದೇಸಾಯಿ ಬರೆದರು: 'ಗಾಂಧೀಜಿ ಈಗ ಗುಣಮುಖರಾದರು ಎಂದು ಖಂಡಿತ ಹೇಳಬಹುದು. ಗಾಂಧೀಜಿ ಊಹಿಸಿದ್ದ ಒಂದು ಮಾತನ್ನು ಕಳೆದ ಸಲ ಬರೆದಾಗ ನನಗೆ ಸ್ವಲ್ಪ ಗಾಬರಿಯೇ ಇತ್ತು. ರಕ್ತದ ಒತಡ ಹೆಚ್ಚು ಆದರೆ ದೀರ್ಘೋಪವಾಸ ಅದಕ್ಕೆ ಪರಿಹಾರ ಎಂದು ಅವರು ಬಹು ಕಾಲದಿಂದ ಯೋಚಿಸುತ್ತ ಇದ್ದಂತೆ ಇದೆ. ಡಾ। ಅನ್ಸಾರಿ ಬರೀ ಮೈಗೆ ಮಾತ್ರವೇ ಅಲ್ಲ, ಮನಸಿಗೂ ವಿಶ್ರಾಂತಿ ಕೊಡಿ ಎಂದು ಬರೆದರು. ಚಿಂತೆ ಮಾಡುವುದನ್ನು ಬಿಡದೆ, ಅಥವಾ ಆಲೋಚನೆ ಮಾಡುವುದನ್ನು ಬಿಡದೆ ಹೇಗೆ ಕೊಡಬೇಕು ಮನಸ್ಸಿಗೆ ವಿಶ್ರಾಂತಿ? ಇದು ಒಂದು ಸಮಸ್ಯೆ. ಅನ್ಸಾರಿಗೆ ಒಂದು ದೀರ್ಘ ಪತ್ರ ಬರೆದು ತಮ್ಮ ಈ ಸಮಸ್ಯೆಯನ್ನು ತಿಳಿಸಿದರು ಗಾಂಧೀಜಿ.

"ಹಿಂದೂಗಳು-ಮುಸಲ್ಮಾನರು ಮಾಡುತ್ತಿರುವ ಈ ಕೃತ್ಯಗಳನ್ನು ನೋಡಿ ನಾನು ತೀವ್ರವಾಗಿ ವಿಚಾರ ಮಾಡದೆ ಹೇಗೆ ಇರಲಿ? ಕೋಟ್ಯಂತರ ಜನ ದಿನೇ ದಿನೇ ಅಡ್ಡಡ್ಡ ನಡೆದು

ಹೋಗುತ್ತಿರಲು ನನ್ನ ಮನಸ್ಸು ಯೋಚಿಸದೆ ಹೇಗೆ ಇದ್ದೀತು? ಈ ವಿಷಯಗಳನ್ನು ನಿರಂತರವೂ ಯೋಚಿಸಲು ನಾನು ಪತ್ರಿಕೆ ಓದಬೇಕಾಗಿಲ್ಲ, ಸುದ್ದಿ ತಿಳಿದುಕೊಳ್ಳಬೇಕಾಗಿಲ್ಲ. ನಾನು ಈ ವಿಷಯಗಳನ್ನು ಯೋಚಿಸಬಾರದು ಎಂದಿದ್ದರೆ ಹಿಂದೂಗಳು ಮುಸಲ್ಮಾನರು ಮನುಷ್ಯರಂತೆ ವರ್ತಿಸಬೇಕು ಮನುಷ್ಯೇತರ ಪ್ರಾಣಿಗಳಂತೆ ವರ್ತಿಸಬಾರದು; ನಮಗೆ ನಿತ್ಯವೂ ಬೇಕಾದುದಕ್ಕಿಂತ ಯಾವ ಯಾವ ಜನಕ್ಕೆ ಪ್ರಾಪ್ತಿ ಸಿಗುತ್ತದೆಯೋ ಅವರು ನಮ್ಮ ದೇಶದ ಜನಕೋಟಿಯ ಬಗ್ಗೆ ಯೋಚನೆ ಮಾಡಲಿ ಮತ್ತು ಅವರಿಗೋಸ್ಕರ ಪರದೇಶೀ ಬಟ್ಟೆಗಳನ್ನು ಬಹಿಷ್ಕರಿಸಿ ಜನಕ್ಕೆ ಪ್ರೋತ್ಸಾಹ ಸಿಗಲಿ ಎಂದು ವಿರಾಮ ಕಾಲದಲ್ಲಿ ನೂಲಲಿ.

ಆದರೆ ಡಾಕ್ಟರಿಗೆ ಈ ಸಮಸ್ಯೆಯನ್ನು ಪರಿಹರಿಸಲು ಆಗಲಿಲ್ಲ. ಗಾಂಧೀಜಿ ತಾವೇ ಒಂದು ಪರಿಹಾರವನ್ನು ಸೂಚಿಸಿ ಡಾಕ್ಟರ ಅಭಿಪ್ರಾಯವನ್ನು ಕೇಳಿದರು. ೧೯೨೪ರ ಉಪವಾಸದಲ್ಲಿ ಡಾ। ಅನ್ಸಾರಿ ಶುಶ್ರೂಷೆ ಮಾಡುತ್ತಿದ್ದರು. ಆದ್ದರಿಂದ ಏನಾದರೂ ಕಠಿಣ ಕಾರ್ಯಕ್ರಮ ಕೈಗೊಳ್ಳುವ ಮೊದಲು ಡಾಕ್ಟರರನ್ನು ಕೇಳೋಣ ಎನಿಸಿತು. ಆಗ ಗಾಂಧೀಜಿ ಡಾಕ್ಟರಿಗೆ ಬರೆದರು.

"ಹೆಚ್ಚು ಮಾನಸಿಕ ಪರಿಶ್ರಮ ಆದರೇನೆ ರಕ್ತದ ಒತ್ತಡ ಹೆಚ್ಚಾಗುತ್ತದೆ. ಎಂದರೆ ಈ ಬಿಗಿತವನ್ನು ತಪ್ಪಿಸಲು ಒಂದೇ ದಾರಿ–ಉಪವಾಸ ಮಾಡುವುದು ಎನ್ನುತ್ತೇನೆ. ನನ್ನ ಒಳಗಡೆ ಆಳದಲ್ಲಿ ಇದಕ್ಕೆ ದೀರ್ಘೋಪವಾಸವೇ ಚಿಕಿತ್ಸೆ ಎನಿಸುತ್ತದೆ. ೨೧ ದಿನ ಉಪವಾಸ ಮಾಡಿದಾಗ ನೋಡಿದೆನಲ್ಲ. ೧೦ ದಿನಗಳ ನಂತರ ಹೊರ ಜಗತ್ತಿನ ಆಲೋಚನೆಯೇ ನಿಂತುಹೋಯಿತು. ಉಪವಾಸದಿಂದ ತಾತ್ಕಾಲಿಕವಾಗಿ ಮನಸ್ಸು ಸಮಸ್ಥಿತಿಗೆ ಬಂತು. ನಾನು ಊಟ ಮಾಡುವಾಗಲೂ ಮನಸ್ಸು ಆಲೋಚಿಸಿದೇ ಇರಲು ನಿರಾಕರಿಸುತ್ತದೆ. ಇದು ಸಾಧ್ಯವೂ ಇಲ್ಲ. ಆದರೆ ಉಪವಾಸ ಮಾಡಿದಾಗ ಮನಸ್ಸು ಆಲೋಚನೆ ಮಾಡದೆ ಇರಲು ಸಹಕರಿಸುತ್ತದೆ. ವೈದ್ಯರು–ದಂಡಿಗೆ ದಂಡೇ–ನನ್ನನ್ನು ಪರೀಕ್ಷಿಸುತ್ತ ಇದ್ದಾರೆ. ನಾನೂ ಅಳಲೆಕಾಯಿ ಪಂಡಿತರ ಅಭಿಪ್ರಾಯಗಳನ್ನು ಕೇಳುತ್ತೇನೆ. ಶುಶ್ರೂಷೆ ಮಾಡುವವರ ಶ್ರದ್ಧೆಯಲ್ಲಿ ಕಿಂಚಿತ್ತೂ ಕೊರತೆ ಇಲ್ಲ. ಏಕಾಗ್ರವಾಗಿ ನಿಷ್ಠೆಯಿಂದ ಶುಶ್ರೂಷೆ ನಡೆಯುತ್ತಿದೆ–ಇಷ್ಟೆಲ್ಲ ಇದ್ದರೂ ರಕ್ತದ ಒತ್ತಡ ಕಡಿಮೆ ಆಗದಿದ್ದರೆ, ನನ್ನ ಸ್ನೇಹಿತರಿಗೆ ತಾತ್ಕಾಲಿಕ ಆಗಿ ನೋವು ಎನಿಸಿದರೂ ಇತ್ತಲೂ ಇಲ್ಲದ ಅತ್ತಲೂ ಅಲ್ಲದ ಬಾಧೆಯನ್ನು ತಗ್ಗಿಸಲು ಅಥವಾ ಕೊನೆಗಾಣಿಸಲು ಒಂದು ಉಪವಾಸ ಮಾಡಬೇಕು ಎನಿಸುತ್ತದೆ. ಆಗ ಈ ಒತ್ತಡ ತಗ್ಗುತ್ತವೆ".

ಇಂಥ ದುರಂತ ವಿಚಾರಗಳನ್ನು ರೋಗಿ ಒಳಗೊಳಗೇ ಮಾಡುತ್ತಿದ್ದರೆ. ನಾವು ಎಷ್ಟು ಗಾಬರಿ ಆಗಬೇಡ? ಆದರೆ ನಮ್ಮ ಪುಣ್ಯ. ಪ್ರಕೃತಿ ಗೆದ್ದಿತು. ದೀರ್ಘೋಪವಾಸಕ್ಕೆ ಅವಕಾಶ ಇಲ್ಲದಂತೆ ಮಾಡಿತು. ಕಳೆದ ವಾರ ಅನಿರೀಕ್ಷಿತವಾಗಿ ರಕ್ತದ ಒತ್ತಡ ಬಹಳ ತಗ್ಗಿತು. ಈಗ ಅಂಥ ತೀಕ್ಷ್ಣ ಕ್ರಮಕ್ಕೆ ಅಗತ್ಯ ಉಳಿಯಲಿಲ್ಲ. ಈಗಿನ ಅವರ ದೇಹ ಸ್ಥಿತಿಯನ್ನು ಗಾಂಧೀಜಿಯವರ ಮಾತಿನಲ್ಲೇ ಹೇಳಬಹುದು : ಈಗಾಗಲೇ ನನಗೆ ಎಷ್ಟು ಸಾಮರ್ಥ್ಯ ಬಂದಿದೆ ಎಂಬುದನ್ನು ನೀವು ಊಹಿಸಲಾರಿರಿ. ಈ ವಾರ ನವಜೀವನಕ್ಕೆ ನಾಲ್ಕು ಲೇಖನ

ಬರೆದಿದ್ದೇನೆ. ನನ್ನ ದಿನಚರಿಯ ಕೆಲಸ ಮಾಡುತ್ತಲೇ ಇದ್ದೇನೆ. ಸ್ವಲ್ಪ ಮಟ್ಟಿಗೆ ಸ್ನೇಹ ಪತ್ರಗಳನ್ನು ಬರೆಯುತ್ತಿದ್ದೇನೆ. ನಿನ್ನೆ ವೈದ್ಯರು ಪರೀಕ್ಷೆ ಮಾಡಿದರು. ಅದರ ಫಲ ಬಹಳ ಸಮಾಧಾನಕರ. ರಕ್ತದ ಒತ್ತಡ ೧೮೦ರಿಂದ ೧೫೦ಕ್ಕೆ ಇಳಿದಿದೆ. ೧೫೫-೧೬೦°. ನನ್ನ ವಯಸ್ಸಿಗೆ ಸಹಜ. ಈಗ ಮೂರು ದಿನಗಳಿಂದ ದಿನವೂ ಒಂದು ಮೈಲಿಗಿಂತ ಹೆಚ್ಚು ನಡೆಯುತ್ತಿದ್ದೇನೆ. ಅರ್ಧ ಅರ್ಧ ಗಂಟೆ ಎರಡು ಸಲ. ಅಂಬೋಳಿಯಲ್ಲಿನಗಿಂತ ಹೆಚ್ಚಿನ ತಿರುಗಾಟ ಇದು. ನನ್ನ ಆರೋಗ್ಯದ ಚಿಂತೆ ಏನೂ ಇಲ್ಲ. ನಂದೀದುರ್ಗವನ್ನು ಬಿಟ್ಟು ಹೋಗುವ ಮಾತೇ ಇಲ್ಲ. ಹಿಂದಿನ ಹಾಗೆ ಮತ್ತೆ ನನಗೆ ಶಕ್ತಿ ಬರುವವರೆಗೆ ಇಲ್ಲಿಂದ ಹೋಗುವ ವಿಚಾರವೇ ಮೂರ್ಖತನ. ಹಿಂದಿನ ಹಾಗೆ ನನಗೆ ಸಾಮರ್ಥ್ಯ ಬರಬೇಕು. ಇಲ್ಲವೆ ನಂದೀದುರ್ಗದ ಈ ಋತುಗುಣ ಮುಗಿಯಬೇಕು. ಜುಲೈ ತಿಂಗಳಲ್ಲಿ ಅದು ಮುಗಿಯುತ್ತದೆ".

ಈ ಅತ್ತಲೂ ಇಲ್ಲದ ಇತ್ತಲೂ ಇಲ್ಲದ ದುರವಸ್ಥೆಯ ಬದುಕು ಕಳೆದು ತಮ್ಮ ದಿನದ ಕೆಲಸವನ್ನು ಸ್ವಲ್ಪ ಮಟ್ಟಿಗಾದರೂ ಮಾಡುವಂತೆ ಕೃಪೆ ಮಾಡಿತು ಪ್ರಕೃತಿ ಎನ್ನುತ್ತಲ್ಲ ಗಾಂಧೀಜಿಗೆ ಅದೇ ಒಂದು ಸಮಾಧಾನ. ಪ್ರಕೃತಿ ತನ್ನ ಕೆಲಸ ಮಾಡಲಿ ನಾವು ಸ್ವಲ್ಪ ಸಾವಧಾನವಾಗಿರೋಣ.

**ಆರೈಕೆ**

ತಮ್ಮ ಸುಂಟರಗಾಳಿಯಂಥ ಪ್ರವಾಸಗಳಲ್ಲಿ ಜೈಲರುಗಳು ಎಂದು ಗಾಂಧೀಜಿ ಯಾರನ್ನು ಕರೆಯುತ್ತಿದ್ದರೋ, ಅವರು ಈಗ ಗಾಂಧೀಜಿಗೆ ದಾದಿಯರ ಶುಶ್ರೂಷೆ ಮಾಡುತ್ತಿದ್ದಾರೆ. ಈಗಲೂ ಸ್ವಲ್ಪ ರೇಗಿಬಿಟ್ಟಾಗ ಗಾಂಧೀಜಿ ಆ ಹಿಂದಿನ ಹೆಸರನ್ನೇ ಬಳಸುತ್ತಾರೆ. ಏಪ್ರಿಲ್ ೨೦ನೇ ತಾರೀಖಿನ ವರೆಗೆ ಗಂಗಾಧರರಾಯರು ಆರೈಕೆ ಮಾಡುತ್ತಿದ್ದರು. ಅವರಿಗೆ ಈ ಸಂಕಟದ ಭಾರವನ್ನು ಹೊರುವುದು ಕಷ್ಟ ಆಗಿತ್ತು. ಸಾವಂತವಾಡಿಯ ಸಂಸ್ಥಾನಾಧೀಶರು ಇವರಿಗೆ ಕೊಟ್ಟ ಬಂಗಲೆಯಲ್ಲಿ ವ್ಯವಸ್ಥೆ ಮಾಡುತ್ತೇನೆ ಎಂದು ಗಂಗಾಧರರಾಯರು ಹಠ ಮಾಡಿದರು. ಗಾಂಧೀಜಿಯನ್ನು ಬಹಳ ಜೋಪಾನವಾಗಿ ಆರೈಕೆ ಮಾಡಿದರು. ರಾಜಗೋಪಾಲಚಾರ್ಯರ ಜೊತೆಗೆ ಆರೈಕೆ ಮಾಡಲು ನಂದಿಗೂ ಬಂದುಬಿಟ್ಟರು. ಈಗ ರಾಜಗೋಪಾಲಾಚಾರ್ಯರೇ ಮುಖ್ಯ ದಾಯಿ. ಆದರೆ ಅವರ ಕೈಕೆಳಗೆ ಕೆಲಸ ಮಾಡುತ್ತಿರುವ ಆರೈಕೆಗಾರರ ಬಗ್ಗೆ ನಾನು ಈಗ ಬರೆಯುತ್ತಿದ್ದೇನೆ. ಚಿಕ್ಕಬಳ್ಳಾಪುರದಿಂದ, ಬೆಂಗಳೂರಿನಿಂದ ಗಾಂಧೀಜಿಯನ್ನು ಆರೈಕೆ ಮಾಡಲು ಅವರ ಜೊತೆಗಾರರಿಗೆ ಸೇವೆ ಮಾಡಲು ಬಂದಿದ್ದಾರೆ. ಈ ಸ್ವಯಂ ಸೇವಕರ ಶ್ರದ್ಧೆ ಅಪಾರ. ನಂದಿಯಲ್ಲಿ ವಸತಿ ಮಾಡಿದಾಗ ತಗಲುವ ವೆಚ್ಚವನ್ನು ತಾವು ಕೊಡುವುದಾಗಿ ಗಾಂಧೀಜಿಗೆ ಚಿಕ್ಕಬಳ್ಳಾಪುರದ ಜನ ಒತ್ತಾಯ ಮಾಡಿದರಂತೆ. ರಾಜಗೋಪಾಲಾಚಾರಿಯವರ ಸಲಹೆಯ ಮೇರೆಗೆ ಕೆಲಸಗಾರರ ಒಂದು ವಸತಿಯನ್ನೇ ಏರ್ಪಾಡು ಮಾಡಿದ್ದಾರೆ. ಇಲ್ಲಿನ ವ್ಯವಸ್ಥೆ ನೋಡಿಕೊಳ್ಳಲು. ಆ ಗುಂಪಿನಲ್ಲಿ ವಕೀಲರೂ ಇದ್ದಾರೆ. ಅಡಿಗೆಯ ಮನೆಯ ಕೆಲಸಕ್ಕೂ ಅವರು ಹಿಂಜರಿದಿಲ್ಲ. ಬೆಂಗಳೂರಿನ ವಿಜ್ಞಾನ ಸಂಸ್ಥೆಯನ್ನು ಬಿಟ್ಟುಕೊಟ್ಟು ಖಾದಿ ಕೆಲಸಕ್ಕೆ ಧುಮುಕಿದ ಶ್ರೀ ರಾಜಾರಾಮ ಅಯ್ಯಂಗಾರ್ಯರು ಈ ಸ್ವಯಂ ಸೇವಕರ ಗುಂಪಿಗೆ ಮುಖಂಡರು. ಅವರ ಕೈಕೆಳಗೆ ಸಕೆಲಸ ಮಾಡುತ್ತಿರುವ ಸ್ವಯಂ ಸೇವಕರೆಲ್ಲರೂ ಬೆಂಗಳೂರಿನ

ಶಾಲಾ ಕಾಲೇಜು ವಿದ್ಯಾರ್ಥಿಗಳು. ಅವರ ಉತ್ಸಾಹ ಶ್ರದ್ಧೆಗಳು ತುಳುಕಿ ಚೆಲ್ಲಾಡುತ್ತಿವೆ. ಎಂಥಾ ಕೀಳು ಕೆಲಸವನ್ನಾದರೂ ಮಾಡಲು ಅವರು ಸಿದ್ಧ. ಈ ಸೇವೆ ಮಾಡಲು ನೂರಾರು ಜನ ವಿದ್ಯಾರ್ಥಿಗಳು ಹೆಸರು ಕೊಟ್ಟಿದ್ದಾರೆ. ಪ್ರತಿ ವಾರವೂ ಒಂದೊಂದು ಹೊಸ ತಂಡ ಬಂದು, ಹಳೆಯ ತಂಡಕ್ಕೆ ವಿಶ್ರಾಂತಿ ಕೊಡುತ್ತದೆ. ಚಿಕ್ಕಬಳ್ಳಾಪುರದ ಜನರಂತೂ ಪ್ರತಿಯೊಂದು ಚಿಕ್ಕ ಪುಟ್ಟ ವಿಷಯಕ್ಕೂ ಗಮನ ಕೊಡುತ್ತಿದ್ದಾರೆ. ಗಾಂಧೀಜಿಯನ್ನು ಈ ಬೆಟ್ಟಕ್ಕೆ ಹೊತ್ತು ತಂದ ಕುರ್ಚಿಯ ಮೇಲೆ ಕಟ್ಟಿದ್ದ ಬಟ್ಟೆ ಖಾದಿಯದು. ಈ ಕುರ್ಚಿಯನ್ನು ಹೊತ್ತು ತಂದವರೆಲ್ಲರೂ ಖಾದಿಧಾರಿಗಳು. ಇವರಿಗಾಗಿ ಈ ಊರಿನ ಪೌರಸಭೆ ಕಳಿಸಿದ ಭಂಗಿಯೂ ಖಾದಿಧಾರಿ. ಚಿಕ್ಕಬಳ್ಳಾಪುರದಿಂದ ಬರುವ ಕ್ಷೌರಿಕನೂ ಖಾದೀಧಾರಿ. ಗಾಂಧೀಜಿಗೆ ಅನುಮಾನ. ಸ್ವಾಗತ ಸಮಿತಿ ಅವನಿಗೆ ತೊಡಿಸಿ ಕಳಿಸಿದರೊ ಏನೋ ಎಂದು. – "ಈ ಖಾದಿ ಬಟ್ಟೆಯನ್ನು ನಿನಗೆ ಯಾರು ಹೊಲಿಸಿಕೊಟ್ಟರು" ಎಂದು ಕೇಳಿದರು ಗಾಂಧೀಜಿ. ನಾಯಿಂದನಿಗೆ ಆಶ್ಚರ್ಯ ಆಯಿತು. ಈ ಪ್ರಶ್ನೆಯನ್ನು ಅವನಿಗೆ ವಿವರಿಸಿ ಹೇಳಿದ ಮೇಲೆ, ಗಾಂಧೀಜಿಯ ಮೇಲಿನ ಭಕ್ತಿಗಾಗಿ ತಾನೇ ಹೊಲಿಸಿಕೊಂಡದ್ದು ಎಂದು ಹೇಳಿದ. ಈ ತರುಣರ ಶ್ರದ್ಧಾವಂತ ಸೇವೆ, ಜನರ ಶುಶ್ರೂಷೆಯ ಶ್ರದ್ಧೆ ಗಾಂಧೀಜಿಯನ್ನು ಮತ್ತೆ ಎಂದಿನಂತೆ ತಮ್ಮ ಕೆಲಸ ಮಾಡಲು ಹುರಿದುಂಬಿಸುತ್ತಿವೆ.

"ನಾವು ಏನು ಮಾಡಿದೇವೆ ಇಷ್ಟೆಲ್ಲ ಸೇವೆ ಮಾಡಿಸಿಕೊಳ್ಳಲು" ಗಾಂಧೀಜಿಯ ಮನಸ್ಸಿನಲ್ಲಿ ಈ ಪ್ರಶ್ನೆ ಸದಾ ಏಳುತ್ತಿರುತ್ತದೆ. ಸುತ್ತಲಿನವರನ್ನು ಯಾವಾಗಲೂ ಈ ಪ್ರಶ್ನೆ ಕೇಳುತ್ತಿರುತ್ತಾರೆ. ಸ್ವಯಂ ಸೇವಕರಿಗೋ ಈ ಸೇವೆಯೇ ಒಂದು ಮಹದಾನಂದ.

**ಆರೈಕೆಗಾರರ ಕೆಲಸ**

ಇದರಿಂದ ಆರೈಕೆಗಾರರ ಕೆಲಸ ಮತ್ತಷ್ಟು ಕಷ್ಟಕರ ಆಗುತ್ತದೆ. ಗಾಂಧೀಜಿಯ ಭಾವನೆಯನ್ನು ಕಂಡು ಅವರಿಗೆ ಸಂತೋಷವೇ. ಆದರೆ ಸಾರ್ವಜನಿಕರ ಭಾವನೆ ಇನ್ನೂ ಹೆಚ್ಚು ಸಂತೋಷಕರ. ಪೂರ್ಣ ಗುಣ ಆಗುವವರೆಗೆ ಗಾಂಧೀಜಿ ಯಾವ ಕೆಲಸವನ್ನೂ ಮಾಡಬಾರದು ಎಂದು ಸಾರ್ವಜನಿಕರ ಭಾವನೆ. ಅವರಿಗೆ ಇರುವ ಕಷ್ಟ ಸಾಲದೊ ಎಂಬಂತೆ ಮೊನ್ನೆ ಬಂದಿದ್ದ ವಯೋವೃದ್ಧರಾದ ಡಾ। ಆರ್ಮುಗಂ ಗಾಂಧೀಜಿಯನ್ನು ಪರೀಕ್ಷೆ ಮಾಡಿ ಹೀಗೆ ಸಲಹೆ ನೀಡಿದರು. ನಿಮಗೆ ಈಗ ಆರೋಗ್ಯ ಚೆನ್ನಾಗಿದೆ; ಎಷ್ಟು ಬೇಕಾದರೂ ಓಡಾಡಬಹುದು ನೀವು ನಿಮಗೆ ಇಷ್ಟ ಬಂದ ಕೆಲಸ ಮಾಡಬಹುದು. ನಿಮಗೆ ಆರೈಕೆಗಾರರು ಅಡ್ಡಿ ಮಾಡಬಾರದು. ನೀವು ಅನಗತ್ಯವಾಗಿ ಗಾಬರಿಯಾಗಿದ್ದೀರಿ. ಅವರಿಗೇ ಚಿಕಿತ್ಸೆ ಬೇಕು ಎಂದು ಕಾಣಿಸುತ್ತದೆ" ಎಂದರು. ಗಾಂಧೀಜಿಯನ್ನೂ ಆರೈಕೆಗಾರರನ್ನೂ ಹುರುಪುಗೊಳಿಸಲು ಹೇಳಿದ್ದು ಇದು. ಆದರೆ ಗಾಂಧೀಜಿ ಇದನ್ನು ಅಕ್ಷರಶಃ ಅರ್ಥ ಮಾಡಿಕೊಂಡರು. ತನ್ನ ಮಾತಿಗೆ ಬೆಲೆ ಕೊಡದಿದ್ದುದಕ್ಕಾಗಿ ಆರೈಕೆಗಾರರನ್ನು ದಂಡಿಸಿದರು. ಆ ಗಳಿಗೆ ಬಹಳ ಭಯಾನಕ. ಅವರು ಆಡಿದ ಮಾತು ತುಂಬ ಆತ್ಮೀಯ. ಇಲ್ಲಿ ವರದಿ ಮಾಡುವಂತಹುದಲ್ಲ. ಆದರೆ ಅದರಿಂದ ಇಷ್ಟು ಪರಿಣಾಮ ಆಯಿತು. ಸ್ವಯಂ ಸೇವಕರು ಇನ್ನು ಮುಂದೆ ಇರಬೇಕೋ ಹೋಗಬೇಕೋ ಎಂದು ಕಾವಿನಿಂದ ಚರ್ಚಿಸತೊಡಗಿದರು "ನಾನೇನೋ ಜೈಲರು. ಆದರೆ ಈ ವೈದ್ಯ

ಯಾವಾಗ ಬೇಕಾದರೂ ನನ್ನನ್ನು ಮನೆಗೆ ಕಳುಹಿಸಬಹುದು. ಆದರೆ ಒಂದು ನಾನು ಜೈಲರು ಆಗಿರುವವರೆಗೂ ನಿಮ್ಮ ಆರೋಗ್ಯ ಯಾವ ರೀತಿ ಉತ್ತಮಗೊಂಡೀತೋ, ಅದಕ್ಕೆ ಬೇಕಾದ ಎಲ್ಲ ಎಚ್ಚರಿಕೆಯನ್ನೂ ವಹಿಸಬೇಕು." ಎಂದರು ರಾಜಗೋಪಾಲಚಾರ್ಯರು. ಗಾಂಧೀಜಿ ತುಂಬಾ ಇಳಿದು ಹೋದರು. "ಮನೆಗೆ ಕಳುಹಿಸುವುದು ಏನು ಬಂತು? ನಾನು ಅನುಸರಿಸಿಕೊಂಡು ಹೋಗುವಂಥ ರೋಗಿ. ಆರೈಕೆಗಾರರ ಇಷ್ಟದಂತೆ ನಡೆಯಬೇಕು. ಒಂದೊಂದು ಸಲ ಸ್ವಲ್ಪ ಪ್ರತಿಭಟಿಸುತ್ತೇನೆ ಅಷ್ಟೆ" ಎಂದರು ಗಾಂಧೀಜಿ. ಆದರೆ ಪ್ರತಿಭಟನೆ ಎಂದರೆ ಸದಾಕಾಲವೂ ಆ ಆಲೋಚನೆಯಲ್ಲೇ ಮುಳುಗಿರಬೇಕು ಎಂದಲ್ಲ ನೀವು ಏನೋ ಬಯಸುತ್ತೀರಿ. ಅದನ್ನು ಪೂರೈಸಲು ಸಾಧ್ಯ ಇಲ್ಲ ಎಂದು ಹೇಳಿದ ಮೇಲೆ ನೀವು ಅದರ ಬಗ್ಗೆ ಆಲೋಚನೆ ಮಾಡಬಾರದು. ಹಾಗಿದ್ದರೆ ನೀವು ಒಳ್ಳೆಯ ರೋಗಿ. ಇಲ್ಲದೆ ಇದ್ದರೆ ನಿಮ್ಮ ಬಯಕೆಯನ್ನು ಪೂರೈಸಲು ಹೋಗಿ ನಾವು ವಿಪತ್ತಿಗೆ ತಲೆ ಒಡ್ಡಬೇಕಾದೀತು. "ಸರಿ ಅದರ ಬಗ್ಗೆ ಆಲೋಚನೆ ಮಾಡುವುದಿಲ್ಲ ಎಂದು ಮಾತು ಕೊಡುತ್ತೇನೆ. ಆದರೆ ಕೆಲವು ವಿಷಯಗಳ ಬಗ್ಗೆ ನಾನು ಬಿಟ್ಟುಕೊಡುವುದಿಲ್ಲ. ಏನು ಬೇಕಾದರೂ ಆಗಲಿ ಕರ್ನಾಟಕದ ಪ್ರವಾಸವನ್ನು ಮುಗಿಸಿಯೇ ತೀರಬೇಕು. ಅವರು ಎಷ್ಟು ಸಿದ್ಧತೆ ಮಾಡಿಕೊಂಡರು. ಅವರನ್ನು ನಿರಾಶೆಗೊಳಿಸಲೆ? ಉಹೂಂ ಬೇರೆ ಕಾರ್ಯಕ್ರಮಗಳನ್ನು ಈ ವರ್ಷ ಹಾಕಿಕೊಳ್ಳದಿದ್ದರು ಚಿಂತೆ ಇಲ್ಲ. ಇದನ್ನು ಮಾತ್ರ ಮುಗಿಸಲೇ ಬೇಕು. ಎಷ್ಟು ದಿನ ಬೇಕೋ ಅಷ್ಟು ದಿನ ಈ ಪ್ರಾಂತದಲ್ಲಿ ಇರುತ್ತೇನೆ" ಎಂದರು ಗಾಂಧೀಜಿ.

**ವಿರಾಮ:**

ಅದೆಲ್ಲವೂ ಸರಿ. ಗಾಂಧೀಜಿಯೇನೋ ಆರೈಕೆಗಾರರು ನಿರೀಕ್ಷಿಸಿದುದಕ್ಕಿಂತ ಹೆಚ್ಚು ಮೃದುವಾಗಿದ್ದರು. ಇದರಿಂದ ಹುರುಪುಗೊಂಡ ಒಬ್ಬರು ಸೂಚನೆ ಮಂಡಿಸಿದರು. "ಬಾಪೂ ನೀವು ಸದಾ ಏನಾದರೊಂದು ಕೆಲಸ ಹಚ್ಚಿಕೊಂಡು ಕೂಡುತ್ತೀರಿ. ಒಂದು ದಿನವಾದರೂ ಬಿಡುವು ಬೇಡವೆ.? ಸೋಮವಾರ "ಬಿಡುವು" ಎಂದು ಹೆಸರು; ಆ ದಿನವೂ ನೀವು ಏನಾದರೂ ಒಂದು ಕೆಲಸ ಮಾಡುತ್ತಲೇ ಇರುತ್ತೀರಿ. ಅವತ್ತು ಮೌನ ಎಂದು ಇನ್ನೂ ಕೆಲಸ ಹೆಚ್ಚೇ. ವಾರಕ್ಕೆ ಒಂದು ದಿನವಾದರೂ ಬಿಡುವು ಬೇಡವೇ? ಒಂದೇ ದಿನ. ಅವತ್ತು ಓದಬಾರದು, ಬರೆಯಬಾರದು ಸುಮ್ಮನೆ ಆಟ ಆಡಬೇಕು."

ಈ ಉಪದೇಶ ಕೇಳಿ ಗಾಂಧೀಜಿ ನಕ್ಕರು. "ಏನು ಆಟ ಆಡಬೇಕು? ಇಸ್ಪೀಟು ಆಡೋಣವೋ – ಅಥವಾ ಪಿಂಗ್-ಪಾಂಗ್ ಆಡೋಣವೋ?"

ಪರ್ಣಕುಟಿಯಲ್ಲಿ ಈ ಪ್ರಸಂಗದ ವರ್ಣನೆ ಸರಿಯಾಗಿದೆ. "ಕಾಲು ಜಾರಿದ ಹಾಗಾಯಿತು. ಏನು ಹೇಳಬೇಕು ಈ ಪ್ರಶ್ನೆಗೆ. ಕೈ ಸೋಕಿದ್ದೆ ತಡ, ಬೆನ್ನು ಮಣ್ಣು ಮಾಡಿದ ಹಾಗಾಯಿತು. ಈ ಕುಸ್ತಿ. ಯೋಚನೆ ಮಾಡಿ ಹೇಳುತ್ತೇನೆ ಎನ್ನಬೇಕಾಯಿತು" ಅಂದದ್ದಷ್ಟೇ; ಯೋಚನೆ ಹರಿಯಲಿಲ್ಲ. ಮೌನವೇ ಉತ್ತರ.

ಅವರನ್ನು ಗೇಲಿ ಮಾಡುತ್ತ ಗಾಂಧೀಜಿ ಹೇಳಿದರು. "ಏನು ಮತ್ತೆ? ನಿಮ್ಮ ಸೂಚನೆ

ಗಾಳಿಗೆ ಹಾರಿ ಹೋಯಿತಲ್ಲ. ಅಷ್ಟೇ-ಮತ್ತೇಕಾದೀತು; ಕೆಲಸ ಎಂದರೆ ಆಟ, ಆಟ ಎಂದರೆ ಕೆಲಸ ಆಗಬೇಕು. ಹಾಗಿರುವಾಗ ನೀವು ಏನು ತಾನೇ ಹೇಳೀರಿ?"

"ಉಹೂಂ ಹಾಗಲ್ಲ. ಆಟ ಎಂದರೆ ಪೂರಾ ಬಿಡುವು. ಕೆಲಸ ಗಿಲಸ ಏನೂ ಇಲ್ಲ."

"ಸರಿ ಹಾಗಾದರೆ ನಾನೇ ಹೇಳಲೆ? ಬಡಗಿಯ ಸಾಮಾನು ತಂದುಕೊಡಿ. ಮುರುಕು ರಾಟೆ, ಸೊಟ್ಟ ಕದಿರು ಇಲ್ಲಿವೆ. ಅವನ್ನೆಲ್ಲ ಸರಿ ಮಾಡುತ್ತೇನೆ."

"ಇಲ್ಲ-ಇಲ್ಲ. ಅದಾಗದು. ನಿಮಗೆ ಸದಾ ಖಾದಿಯ ಚಿಂತೆ ಹಿಡಿದಿದೆ. ರಾಟೆ ಕೊಟ್ಟರೆ ಮತ್ತೆ ಅದೇ ಧ್ಯಾನವೇ. ಏನಾದರೂ ಹೊಸದು ಬೇಕು".

"ಬಿಡುವು ಎಂದರೆ ಏನು ಗೊತ್ತೇ? ಅದೇನು ಮೈಗಳ್ಳತನವೇ? ವಿಶ್ರಾಂತಿ ಎಂದರೆ ಇರುವ ಕೆಲಸ ಬಿಟ್ಟು ಬೇರೆ ಕೆಲಸ ಮಾಡುವುದು. ಇದು ನೋಡಿ. ದಕ್ಷಿಣ ಆಫ್ರಿಕಾದಲ್ಲಿ ಮಾಡಿದ ಹಾಗೆ ಮೇಜು ಬೀರುಗಳನ್ನು ಮಾಡಲೇನು? ಅಥವಾ ಟೋಪಿಗಳನ್ನು ಹೊಲಿದು ಕೊಡಲೇ?"

"ಹುಂ. ಅದು ಸರಿ. ಆಗ ನಾವು ನಿಜವಾಗಿಯೂ 'ಗಾಂಧೀ ಟೋಪಿ'ಯನ್ನು ಮಾರಬಹುದು" ಎಂದರು ರಾಜಗೋಪಾಲಚಾರಿಯವರು.

"ಆಗಬಹುದು, ಅದು ಉತ್ತಮ. ದಕ್ಷಿಣ ಆಫ್ರಿಕಾದಲ್ಲಿ, ಕಸ್ತೂರಬಾಗೆ ಜಾಕೆಟ್ ಹೊಲಿದು ಕೊಟ್ಟಿದ್ದೆ, ಆಕೆಯನ್ನೇ ಕೇಳಿ ನೋಡಿ ಬೇಕಾದರೆ. ಆಕೆಗೆ ಅದು ಸರಿಯಾಗಿತ್ತೋ ಇಲ್ಲವೋ ಅಂತೂ ತೊಡುತ್ತಿದ್ದಳು. ಒಂದು ವೇಳೆ ತೊಡದೇ ಇದ್ದರೆ ನಾನು 'ಹೊಲಿದು ಕೊಟ್ಟಿದ್ದನ್ನು ಮರೆತಾಳೆಯೇ? "ಈ ಸೂಚನೆ ಗಾಳಿಗೆ ಹಾರಿಹೋಗಲಿಲ್ಲ. ಮನಸಾರೆ ನಗುವ ನಗೆಯಾಗಿ ಅವತರಿಸಿತು. ರೋಗಿಗೆ ನಗೆ ಪಥ್ಯ ಅಲ್ಲವೇ? ಆರೈಕೆಗಾರರಿಗೆ ಏಷ್ಟೋ ಸಮಾಧಾನ.

ಮುಂದಿನ ವಾರ ( ೧೨-೫-೨೭) ಮಹಾದೇವ ದೇಸಾಯಿ ಬರೆದರು; ಗಾಂಧೀಜಿಯ ಆರೋಗ್ಯ ಉತ್ತಮಗೊಳ್ಳುತ್ತಿದೆ. ರಕ್ತದ ಒತ್ತಡ ಸಾಮಾನ್ಯ ಮಟ್ಟದಲ್ಲಿದೆ. ಪ್ರಗತಿ ಸಮಾಧಾನಕರವಾಗಿದೆ.

**ಮತ್ತೆ ಅದೇ ಸಂದೇಶ:**

ಕೆಲವರು ಅಧಿಕಾರಿಗಳು, ಕೆಲವರು ಅಧಿಕಾರೇತರರು, ಗಾಂಧೀಜಿಯನ್ನು ನೋಡಲು ಬಂದಿದ್ದರು. ಎಲ್ಲರೂ ಸುಮ್ಮನೆ ನಮಸ್ಕಾರ ಮಾಡಿ, ನೋಡಿ ಹೋಗಲು ಬಂದಿದ್ದರೇ ವಿನಾ ಯಾರೂ ಗಾಂಧೀಜಿಯ ಸಂಗಡ ಚರ್ಚೆ ಮಾಡಲು ಬಂದಿರಲಿಲ್ಲ. ಇದು ಪ್ರಶಂಸನೀಯವೇ ಸರಿ. ಸಂಜೆಗೆ ದರ್ಶಕರು ಬರುವ ವೇಳೆಗೆ ಸಾಧಾರಣವಾಗಿ ಗಾಂಧೀಜಿ ನೂಲುತ್ತಿರುತ್ತಾರೆ. ಬಂದವರು ಪ್ರತಿಯೊಬ್ಬರಿಗೂ ತಮ್ಮ ಸಂದೇಶವನ್ನು ನೀಡದೇ ಇರಲು ಅವರಿಗೆ ಸಾಧ್ಯವೇ ಇಲ್ಲ. ಗ್ಲಾಡ್‌ಸ್ಟನ್ನಿನ ಜೀವನ ಚರಿತ್ರೆ ಬರೆದ ವ್ಯಕ್ತಿ ತಾನೇ ಹೇಳಿದಾನೆ: ಎಲ್ಲ ಪಾದರಿಗಳ ಹಾಗೆ ಗ್ಲಾಡ್‌ಸ್ಟನ್ ಕೂಡ, ತಾನು ನಂಬಿದ ಸತ್ಯ, ತಾನು ಮಾಡುವ ವಾದ ಕೇಳಿದವರ ಎಲ್ಲರ ಮನಸ್ಸಿನಲ್ಲೂ ಕಾವನ್ನು ಸೃಷ್ಟಿ ಮಾಡುತ್ತದೆ ಎಂದು ನಂಬಿದ್ದ. ಬಲ್ಗೇರಿಯದಲ್ಲಿ

ಭಯಂಕರ ದುರಂತ ಆಗಿತ್ತು. ಗ್ಲಾಡ್‌ಸ್ಟನ್ ಅದರ ವಿಷಯದಲ್ಲಿ ಬೆಂಕಿ ಬೆಂಕಿ ಆಗಿದ್ದ. ಗಾಂಧೀಜಿಯೂ ಹಾಗೆಯೇ. ಒಂದು ಸ್ವಲ್ಪ ನಿಮಿತ್ತ ದೊರೆತರೆ ಸಾಕು ಅವರ ಸಮಸ್ತ ಚಿತ್ತ ಹೊರಹೊಮ್ಮ ತೊಡಗುತ್ತದೆ.

ಸಹಕಾರ ಸಂಘಗಳ ರಿಜಿಸ್ಟ್ರಾರ್ ತನ್ನ ಆಂದೋಲನದ ಪ್ರಗತಿಯ ಬಗ್ಗೆ ಹೇಳುತ್ತಿದ್ದರು. ಕೂಡಲೇ ಪ್ರಶ್ನೆ ಬಂತು "ನಿಮ್ಮ ರೈತರ ಬಿಡುವಿನ ವೇಳೆಗೆ ಏನು ಕೆಲಸ ಒದಗಿಸುತ್ತೀರಿ? ಒಬ್ಬ ಮುಖ್ಯೋಪಾಧ್ಯಾಯರು ಬರೆದರು ತಮ್ಮ ವಿದ್ಯಾರ್ಥಿಗಳು ಎಲ್ಲರೂ ವಿಶ್ವವಿದ್ಯಾನಿಲಯದ ಪದವಿಗಾಗಿ ನುಗ್ಗಿ ನಿರುದ್ಯೋಗಿಗಳ ಗುಂಪನ್ನು ಹೆಚ್ಚಿಸದಂತೆ ಹೇಗೆ ತಡೆಯಬೇಕು–ಎಂಬುದು ಆತನ ಪ್ರಶ್ನೆ.

"ಅವರು ತಾಂತ್ರಿಕ ಯಾಂತ್ರಿಕ ವಿದ್ಯೆಯನ್ನು ಕಲಿಯುವಂತೆ ಮಾಡಲು ಆಗದೆ?"

ಗಾಂಧೀಜಿ ಹೇಳಿದರು "ಅವರ ಮನಸ್ಸಿನಲ್ಲಿ ಯಂತ್ರದಿಂದಲೇ ಗಿರಣಿಯಿಂದಲೇ ನಮಗೆ ಮೋಕ್ಷ ಎಂಬ ನಂಬಿಕೆ ಇದ್ದರೆ, ಅವರು ಯಾಂತ್ರಿಕ ವಿದ್ಯೆಯನ್ನು ಕಲಿಯಬೇಕಾದ್ದೆ. ಇನ್ನೂ ಆ ನಂಬಿಕೆ ಹುಟ್ಟಿರದಿದ್ದರೆ ಅವರನ್ನು ಖಾದಿ ಸೇವೆಗೆ ಸೇರಲು ಹೇಳಿ, ಅಥವಾ ಗೋಪಾಲನೆ, ಕ್ಷೀರವೃದ್ಧಿ ಮತ್ತು ಚರ್ಮಗಾರಿಕೆಗಳಲ್ಲಿ ತಜ್ಞರಾಗಿ ದನಗಳನ್ನು ಉಳಿಸುವಂತೆ ಹೇಳಿ"

ಒಬ್ಬ ನ್ಯಾಯಾಧಿಕಾರಿ ಬಂದಿದ್ದ. "ಪೂರ ಗುಣ ಆಗುವವರೆಗೆ ಇಲ್ಲಿಯೇ ನಂದಿ ಬೆಟ್ಟದಲ್ಲೇ ಇರಬೇಕು ನೀವು. ಪೂರಾ ಗುಣ ಆದ ಮೇಲೆಯೇ ಹೋಗಬೇಕು. ಹಾಗಾದರೆ ಈ ಬೆಟ್ಟದ ಕೀರ್ತಿ ಹೆಚ್ಚಿ, ಹೆಚ್ಚು ಹೆಚ್ಚು ಜನ ಇಲ್ಲಿಗೆ ಬಂದಾರು" ಎಂದ. ಗಾಂಧೀಜಿ ಮುಗುಳುನಗೆ ನಗುತ್ತ ಹೇಳಿದರು "ಅಗತ್ಯವಾಗಿ ಆಗಬಹುದು. ಆದರೆ ಅದರಿಂದ ಹೆಚ್ಚಾಗಿ ಬರುವ ಆದಾಯದಲ್ಲಿ ಅರ್ಧದಷ್ಟು ಖಾದಿ ನಿಧಿಗೆ ಕೊಡಬೇಕು". ಒಬ್ಬ ಸ್ನೇಹಿತ ಬಂದ. ತನಗೆ ಇಷ್ಟವಾದ ಹಣ್ಣನ್ನು ತಂದ. ಅದನ್ನು ಗಾಂಧೀಜಿಗೆ ತಿನ್ನಿಸಬೇಕು ಎಂದು ಒತ್ತಾಯ ಮಾಡಿದ. "ಆಗಲಿ ಆದರೆ ಗೆಳೆಯ ಖಾದಿ ನಿಧಿಗೆ ಕೈ ತುಂಬ ದಾನ ಮಾಡುತ್ತಾನೆಯೋ? ಇದು ಗಾಂಧೀಜಿಯ ಪ್ರತಿಕ್ರಿಯೆ. ಬಂದವರ ಮುಂದೆ ಎಷ್ಟೋ ವಿನೋದ ಹಾಸ್ಯ ಮಾಡುತ್ತಾರೆ ಗಾಂಧೀಜಿ. ಆದರೆ ಅದರ ತಳದಲ್ಲಿ ಬೆಂಕಿ ಉರಿಯುತ್ತಾ ಇರುತ್ತದೆ, ಆಗಾಗ ಕಾಣಿಸಿಕೊಳ್ಳುತ್ತದೆ.

ಮೊನ್ನೆ ಒಬ್ಬ ಡಾಕ್ಟರೂ ಒಬ್ಬ ಮಹಿಳೆಯೂ ಬಂದಿದ್ದರು. ಅವರಿಬ್ಬರೂ ಸತತ ಖಾದಿ ಧಾರಿಗಳು. ಆ ಡಾಕ್ಟರು ಬೆಂಗಳೂರಿನಲ್ಲಿಯೇ ಇದ್ದರೂ, ಇದುವರೆಗೆ ಗಾಂಧೀಜಿಯನ್ನು ನೋಡಬೇಕೆಂಬ ಆಸೆಯನ್ನು ಬಿಗಿ ಹಿಡಿದಿದ್ದರು. ಸದ್ದಿಲ್ಲದೆ ಕೆಲಸ ಮಾಡುವ ಜನ ಇವರು. ಖಾದಿ ಕೆಲಸಗಾರರಿಗೆ ಒಂದು ಆಧಾರ ಸ್ತಂಭ. ಈ ಮಹಿಳೆಯೂ ಅಷ್ಟೆ. ಸಂಪೂರ್ಣ ಖಾದಿ ಶ್ರದ್ಧೆ ಇರುವುದು ಕೆಲವೇ ಹೆಂಗಸರಲ್ಲಿ. ಅವರಲ್ಲಿ ಈಕೆ ಒಬ್ಬರು–ಎಂದು ಪರಿಚಯ ಮಾಡಿಕೊಟ್ಟರು. ಈ ಮಾತಿನಿಂದ ಗಾಂಧೀಜಿಯ ಹೃದಯಕ್ಕೆ ಆನಂದ ಆಯಿತು. 'ಓ ಮರಳುಗಾಡಿನಲ್ಲಿ ನೀರಿನ ಚಿಲುಮೆ' ಅವರ ಎದೆಯಲ್ಲಿ ಯಾವ ದಾಹ ಸುಡುತ್ತ ಇದೆಯೋ ಇದರಿಂದ ತಿಳಿಯುತ್ತದೆ.

**ಗುಡ್ಡ-ಮೈದಾನ :**

ಇಲ್ಲಿ ಸಂಜೆ ಹೊತ್ತು ಪ್ರಶಾಂತ ಆಗಿ ಇರುತ್ತದೆ. ದಿಲ್ಲಿಯಲ್ಲಿ ಉಪವಾಸ ಮುಗಿದ ಮೇಲೆ ದಿನವೂ ಸಂಜೆಗೆ ಪ್ರಾರ್ಥನೆಯಲ್ಲಿ ನಾನಾ ಜಾತಿ ನಾನಾ ಪಂಥಗಳ ಜನರ ಗುಂಪು ಬಂದು ಸೇರುತ್ತಿತ್ತು. ಅದು ನೆನಪಾಗುತ್ತದೆ. ಇಲ್ಲಿ ಕೆಲವು ಹೊಸ ಲಕ್ಷಣಗಳು ಕೂಡಿಕೊಂಡಿವೆ. ದಿಲ್ಲಿಯಲ್ಲಿ ಪ್ರಾರ್ಥನೆ ಹಿಂದೂ ಪದ್ಧತಿಯದು ಸರಿಯಾಗಿ ಹೇಳಬೇಕು ಎಂದರೆ ಆಶ್ರಮ ಪದ್ಧತಿಯದು-ಭಗವದ್ಗೀತೆಯ ಪಠಣ ಆ ಮೇಲೆ ದಿನವೂ ಹೇಳುತ್ತಿದ್ದ ಕೀರ್ತನೆಗಳು ಹಿಂದಿಯವು. ಅಲ್ಲಿ ಎಲ್ಲರಿಗೂ ಅರ್ಥ ಆಗುತ್ತಿತ್ತು. ದೈವ ಕೃಪೆಯಿಂದ ನಂದಿಬೆಟ್ಟಕ್ಕೆ. ಇಬ್ಬರು ಮೂವರು ಹೆಂಗಸರು ದಿನವೂ ಪ್ರಾರ್ಥನೆಗೆ ಬಂದೇ ಬರುತ್ತಾರೆ. ತಮ್ಮ ಮಧುರ ಕಂಠದಿಂದ ಒಂದು ಹಾಡು ಹೇಳುತ್ತಾರೆ. ಸುಶಿಕ್ಷಿತ ಹಿಂದೂಗಳ ಸಾಮಾನ್ಯ ಭಾಷೆ ಆದ ಸಂಸ್ಕೃತದಲ್ಲಿ, ತಮಿಳು-ತೆಲುಗುಗಳಲ್ಲಿ ಹಾಡುಗಳನ್ನು ಹಾಡುತ್ತಾರೆ. ಪಶ್ಚಿಮ ತೀರದಲ್ಲಿ-ಇರುವ ನಮಗೆ ತೆಲುಗು-ತಮಿಳು ಒಂದು ಅಕ್ಷರವೂ ತಿಳಿಯುವುದಿಲ್ಲ. ಆದರೆ ತ್ಯಾಗರಾಜರ ಆತ್ಮಪೂರ್ಣ ಮಧುರ ಗಾಯನ, ಅವರ ಮಧುರ ಸಂಗೀತ ತೆಲುಗರಿಗೆ ಎಷ್ಟೋ, ತಮಿಳರಿಗೂ. ಮಲೆಯಾಳಿಗಳಿಗೂ ಅಷ್ಟೇ ಮಟ್ಟಿಗೆ ಆಸ್ತಿ. ಬಿಟೋವೆನ್ ಇಲ್ಲವೆ! ಯೂರೋಪಿನ ಆಸ್ತಿ ಆತ. ಆದರೆ ನಮ್ಮೆಲ್ಲರ ಹೃದಯ ವೀಣೆಯೂ ಮಿಡಿಯುತ್ತದೆ ಆತನ ಹಾಡಿಗೆ. ಇಲ್ಲಂತೂ ಜಲಜಶಯನ, ಜಲಜನಯನ ಶ್ಯಾಮ ಅಥವಾ ಸಕಲ ಮನರಂಜಕ ರಾಮ. ಎರಡೂ ಇಡೀ ಭಾರತದ ಪ್ರಿಯ ಹಿಂದೂಗಳ ನಾಮಗಳು.

ಇನ್ನೂ ಒಂದು ಸಂತೋಷದ ಲಕ್ಷಣ ಇದೆ. ಈ ಜಿಲ್ಲೆಯ ಡೆಪ್ಯುಟಿ ಕಮೀಷನರ್ ಒಬ್ಬ ಸಜ್ಜನ ಮುಸಲ್ಮಾನ. ನಂದಿಬೆಟ್ಟವನ್ನು ಬಿಟ್ಟುಹೋಗುವ ದಿನ ನಮ್ಮ ಪ್ರಾರ್ಥನೆಗೆ ಬಂದಿದ್ದ. ಪವಿತ್ರ ಕುರಾನಿನಿಂದ ಒಂದೆರಡು ಆಯಾತಗಳನ್ನು ಹೇಳಲು ಗಾಂಧೀಜಿಯ ಅಪ್ಪಣೆಯನ್ನು ಕೇಳಿದ. ಗಾಂಧೀಜಿ ಸಂತೋಷದಿಂದ ಅನುಮತಿ ನೀಡಿ. ಆ ಆಯಾತಗಳನ್ನು ಭಾಷಾಂತರ ಮಾಡಿ ಹೇಳಿ, ಸಭೆಗೆ ತಿಳಿಯಲಿ ಎಂದರು. ಆಮೇಲೆ ಒಬ್ಬ ಕ್ರಿಶ್ಚಿಯನ್ ಗೆಳೆಯ ಬಂದ. ತಾನೂ ಭಾಗವಹಿಸಬಹುದೇ ಎಂದ. ತನ್ನ ಸವಿದನಿಯಲ್ಲಿ ಮಧುರ ಗೀತೆಗಳನ್ನು ಹಾಡಿ. ಈ ಪ್ರಶಾಂತ ಸಮಯದಲ್ಲಿ ಎಲ್ಲರನ್ನೂ ಒಟ್ಟಿಗೆ ಕಲೆಹಾಕಿದ. ಭಗವಂತನನ್ನು ವಂದಿಸಿದ.

ಇದು ಗುಡ್ಡದ ಕಥೆ ಆಯಿತು. ಮೈದಾನದಲ್ಲಿ. ಬಹುಶಃ ಅದೇ ವೇಳೆಗೆ ಹಿಂದೂಗಳು ತಮ್ಮ ವೀರಾಧಿವೀರ ಒಬ್ಬನ ತ್ರಿಶತಮಾನೋತ್ಸವವನ್ನು ಆಚರಿಸುತ್ತಿದ್ದ ದಿನ ನಡೆದ ಭೀಕರ ದುರಂತ ದೃಶ್ಯಗಳ ಮಾತು ಏನು ಹೇಳಬೇಕು. "ನಾನೇನೋ ಶಾಂತವಾಗಿದ್ದೇನೆ. ಇದೇನು ಶಾಂತಿ ಇಂಥ ಗುಡ್ಡದ ಮೇಲೆ ಕೂತರೆ ಹಳೇ ಮುದುಕಿಯೂ ಶಾಂತವಾಗಿರಬಲ್ಲಳು. ನೀವೋ ಸುಡುವ ಬೆಂಕಿಯ ನಡುವೆ ಇದ್ದೀರಿ. ಆ ಬೆಂಕಿಯಲ್ಲಿಯೂ ಕೂಡ ನಿಮ್ಮ ತಲೆ ತಣ್ಣಗಿದ್ದರೆ ಆ ಗೌರವ ನಿಮ್ಮದೇ."

**ಇತಿಹಾಸದ ಒಂದು ಪುಟ:**

ಬಂದ ಅಧಿಕಾರಿಗಳಲ್ಲಿ ಇಬ್ಬರು ಮುಖ್ಯರು. ಒಬ್ಬರು ಪ್ರಸ್ತುತ ಎಕ್ಸೈಜ್ ಕಮೀಷನರ್.

ಇನ್ನೊಬ್ಬ ನಿವೃತ್ತ ಎಕ್ಸೈಜ್ ಕಮೀಷನರ್. ಈಗಿನ ಕಮೀಷನರನ್ನು ಚುಚ್ಚುವಂತೆ "ಸ್ವಾಮಿ. ನಾನು ಈಗ ಎಕ್ಸೈಜ್ ಕಮೀಷನರ್ ಅಲ್ಲ"-ಎಂದರು. ಗಾಂಧೀಜಿ ಬಿಡಬೇಕಲ್ಲ. "ಅದು ಸರಿ, ಆದರೆ ನಿಮ್ಮ ನಿವೃತ್ತಿ ವೇತನವನ್ನು ನನ್ನ ಸಂಗಡ ಹಂಚಿಕೊಳ್ಳುತ್ತೀರೋ" ಎಂದರು. ಈಗಿನ ಎಕ್ಸೈಜ್ ಕಮೀಷನರ ಸಂಗಡ ಮಾತನಾಡಿದೆವು. ಕುಡಿತದಿಂದ ಬರುವ ಹಣ ಅಗತ್ಯ, ಅದು ಅನಿವಾರ್ಯ. ೬೦ ಲಕ್ಷ ರೂಪಾಯಿ ಪ್ರಾಪ್ತಿ ಕಳೆದುಕೊಂಡು ಸರ್ಕಾರ ಹೇಗೆ ನಿರ್ವಹಿಸಬಲ್ಲುದೋ ಆತನಿಗೆ ಅನುಮಾನ. ಇಷ್ಟು ಏಕೆ ಹಠ ನಿಮಗೆ? ಈ ಕುಡಿತದ ಹಣ ಬ್ರಿಟಿಷ್ ಭಾರತಕ್ಕಾಗಲೀ ಸಂಸ್ಥಾನಿ ಭಾರತಕ್ಕಾಗಲೀ ವಿಶಿಷ್ಟ ಆದದ್ದೇನೂ ಅಲ್ಲ. ಬಹಳ ಪುರಾತನ ಕಾಲದಿಂದಲೂ ಇವೆ. ಕೌಟಿಲ್ಯ ಅದನ್ನು ವಿವರವಾಗಿ ಹೇಳಿದ್ದಾನೆ" ಎಂದು ವಾದ ಮಾಡಿದ. ಹೀಗೆ ತಾನೇ ಈಗಿರುವ ಅಬಕಾರಿ ಪದ್ಧತಿಯ ಎಲ್ಲ ಸಮರ್ಥಕರು ಹೇಳುವುದು. ಬಹಳ ಪುರಾತನ ಎಂಬುದೂ ಒಂದು ವಾದವೇ? ಹಳೇ ಕಾಲದ್ದು ಎಂದರೆ ನ್ಯಾಯವಾಗುತ್ತದೆಯೊ? ಯಾರಾದರೂ ಸಂಶೋಧಕರು ಹಿಂದೂ ಮತ್ತು ಮುಸಲ್ಮಾನ ರಾಜ ವಂಶಗಳ ಕಾಲದಲ್ಲಿ ಹೆಂಡದ ಹಣ ಯಾವ ರೀತಿ ಬರುತ್ತಿತ್ತು ಎಂದು ಪರಿಶೋಧನೆ ಮಾಡಿ ಹೇಳಬಾರದೆ? ಇಲ್ಲಿರುವ ಪುಸ್ತಕ ಭಂಡಾರದಲ್ಲಿ ಟಿಪ್ಪು ಸುಲ್ತಾನನ ಬಗ್ಗೆ ಕೆಲವು ಪುಸ್ತಕ ಇವೆ. ವಿಲ್ಕ್ಸ್ ಬರೆದ ದೀರ್ಘ ಕಥನದಲ್ಲಿ ಟಿಪ್ಪು ಈ ಚಟಕ್ಕೆ ಬಲಿಯಾಗಿದ್ದ ಎಂಬ ಮಾತೇ ಬರುವುದಿಲ್ಲ. ಅಷ್ಟೇ ಅಲ್ಲ, ಎಲ್ಲ ಇತಿಹಾಸಕಾರರೂ ಟಿಪ್ಪು ಹೆಂಡ ಮಾರುವುದನ್ನು ನಿಷೇಧಿಸಿದ್ದ ಎಂದು-ಬರೆಯುತ್ತಾರೆ. ಅಡಿಗೆ ಮಾಡುವಾಗ ಹುಣಿಸೇಹಣ್ಣು-ಮೆಣಸಿನಕಾಯಿ ಉಪಯೋಗಿಸಬಾರದು. ಹೆಂಡಕ್ಕೆ ತವರು ಆದ ಈಚಲು ಗಿಡಗಳನ್ನೆಲ್ಲ ಕಡಿದು ಹಾಕಬೇಕು ಎಂದು ಟಿಪ್ಪು ಅಪ್ಪಣೆ ಮಾಡಿದನಂತೆ. ಆದರೆ ಈ ರಾಜಾಜ್ಞೆ ಶ್ರೀರಂಗಪಟ್ಟಣದ ಸುತ್ತುಮುತ್ತು ಮಾತ್ರ ಜಾರಿಗೆ ಬಂತಂತೆ. ವಿಲ್ಕ್ಸ್ ಟಿಪ್ಪು ಸುಲ್ತಾನನನ್ನು ಬಹಳ ಕಟುವಾಗಿ ತೆಗಳಿದ್ದಾನೆ. ಅವನ ಕ್ರೌರ್ಯ. ಮತಾಂಧತೆ, ಅವನ ದಬ್ಬಾಳಿಕೆಗಳನ್ನು ಎತ್ತಿ ತೋರಿಸಿದ್ದಾನೆ. ವಿಧಿ ಇಲ್ಲದೆ ಕೆಲವು ಅಂಶಗಳನ್ನು ಹೊಗಳಿದ್ದಾನೆ. ಇಷ್ಟೆಲ್ಲ ದುಷ್ಟತನ ಇದೆ ಎಂದರೂ ಇತಿಹಾಸಕಾರನಿಗೆ ಸಮಾಜದ ಆರೋಗ್ಯ-ನೀತಿಗಳನ್ನು ಗಮನಿಸದೆ ಇರಲು ಆಗಲಿಲ್ಲ. ಪ್ರಾರಂಭದಲ್ಲಿಯೇ ಹೆಂಡದಂಗಡಿಗಳನ್ನು ಕಡಿಮೆ ಮಾಡಿದ. ಅವಕ್ಕೆ ನಿಯಮಗಳನ್ನು ಹಾಕಿದ. ಕಟ್ಟಕಡೆಗೆ ಹೆಂಡವನ್ನೂ ಎಲ್ಲ ಮಾದಕ ಪದಾರ್ಥಗಳನ್ನೂ ಮಾರದಂತೆ ನಿಷೇಧಿಸಿದ. ಹೆಂಡದ ಗಿಡಗಳು ಆದ ಈಚಲು, ತಾಳೆ ಮುಂತಾದ ಎಲ್ಲವನ್ನೂ, ಖಾಸಗಿ ತೋಟಗಳಲ್ಲಿ ಕೂಡ ನಾಶ ಮಾಡಿಸಿದ. ಈ ವ್ಯಾಪಾರದಿಂದ ಬರುವ ಅಪಾರ ಹಣವನ್ನು ಅವನು ತ್ಯಾಗ ಮಾಡಿದ್ದು ಪವಿತ್ರ ಕೊರಾನಿನ ಆಧಾರದ ಮೇಲೆ. ಕೊರಾನಿನಲ್ಲಿ ಯಾವ ಬಗೆಯ ಮಾದಕ ದ್ರವ್ಯವನ್ನೂ ಸೇವಿಸಬಾರದು ಎಂದು ಹೇಳಿದೆ. ಟಿಪ್ಪು ಸುಲ್ತಾನ್ ತನ್ನ ನಾಗರಿಕ ಪ್ರಜೆಗಳಲ್ಲಿ ಮಾತ್ರವೇ ಅಲ್ಲ ದಂಡಿನಲ್ಲಿಯೂ ಕುಡಿಯದಂತೆ ನಿಷೇಧಿಸಿದ.

ಟಿಪ್ಪು ಸುಲ್ತಾನನ ಪತನ ಆದ ಮೇಲೆ, ಕರ್ನಲ್ ಕಿರ್ಕ್‌ಪ್ಯಾಟ್ರಿಕ್ ಅವನ ಪತ್ರಗಳನ್ನೆಲ್ಲ ಸಂಗ್ರಹಿಸಿ, ೧೮೧೧ರಲ್ಲಿ ಅಚ್ಚು ಮಾಡಿದ. ಅದರಲ್ಲಿ ಲಾಲಿಗೆ ಬರೆದ ಪತ್ರ ಹೀಗಿದೆ:

"ನಿಮ್ಮ ಶಿಬಿರದಲ್ಲಿ ಒಂದೇ ಒಂದು ಹೆಂಡದಂಗಡಿಗೆ ಅಪ್ಪಣೆ ಕೊಡಬಹುದು. ಇನ್ನೊಂದು

ಕೂಡದು, ಅಲ್ಲಿಯೂ ಕೂಡ ಸರ್ಪಕಾವಲು ಹಾಕಬೇಕು. ನಿಮ್ಮ ಕೈಕೆಳಗಿರುವ (ಫ್ರೆಂಚ್ ಸೈನಿಕರಿಗೆ) ಯೂರೋಪಿಯನ್ನರಿಗೆ ಮಾತ್ರ ಅದನ್ನು ಮಾರಬಹುದು. ನಮ್ಮಲ್ಲಿ ಒಂದು ನಿಯಮ ಇದೆ. ನಮ್ಮ ದಂಡು ಗೆದ್ದರೂ ಕೂಡ ಇಂಥ ಅಂಗಡಿಯನ್ನು ತೆರೆಯುವ ಹಾಗಿಲ್ಲ." ಇನ್ನೊಂದು ಪತ್ರ ಬೆಂಗಳೂರಿನ ಅಮೀಲ್ ಗುಲಾಮ್ ಹೈದರಿಗೆ ಬರೆದದ್ದು. ೧೭೮೭ರಲ್ಲಿ ಮಾದಕ ದ್ರವ್ಯ ತಯಾರಕರಿಂದಲೂ ಮಾರಾಟಗಾರರಿಂದಲೂ ಕರಾರು ಬರೆಸಿ ಕೊಳ್ಳುವಂತೆ ಟಿಪ್ಪು ಸುಲ್ತಾನ್ ಅವರಿಗೆ ಅಪ್ಪಣೆ ಕೊಟ್ಟ. ಅವರು ತಮ್ಮ ಕಸುಬನ್ನು ಬಿಟ್ಟು ಬೇರೆ ಉದ್ಯೋಗವನ್ನು ಹಿಡಿಯಬೇಕು. ಇಂಥದೇ ಅಪ್ಪಣೆಗಳನ್ನು ದೇಶಾದ್ಯಂತವೂ ಹೊರಡಿಸಿದ." (ಬೌರಿಂಗ್).

ಮುಂದಿನ ವಾರದ ವೇಳೆಗೆ (೧೯-೫-೨೭) ಗಾಂಧೀಜಿಯ ರಕ್ತದ ಒತ್ತಡ ಬಹಳ ಕಡಿಮೆ ಆಗಿತ್ತು. ಅದಕ್ಕೆ ತಕ್ಕಂತೆ ತ್ರಾಣ ಹೆಚ್ಚಲಿಲ್ಲ. ರೋಗ ಬರಬೇಕಾದರೆ ಸುಂಟರಗಾಳಿ. ಹೋಗಬೇಕಾದರೆ ಮಣ್ಣಿನ ಹುಳದಂತೆ.

**ಏಕೆ ಮೌನ?**

ಯಾರೇ ಬರಲಿ ಗಾಂಧೀಜಿಯ ಖಾದಿ ವಿಚಾರ ಹೊರಹೊಮ್ಮುತ್ತಲೇ ಇರುತ್ತದೆ. ಒಂದೆರಡು ಸಲ ಸಂಯಮಪೂರ್ವಕ ಅವರು ಈ ಪ್ರಸ್ತಾಪ ಮಾಡದೇ ಇರುವುದನ್ನೂ ಕಂಡೆ. ಈಗಾಗಲೇ ಎಲ್ಲರಿಗೂ ಗೊತ್ತಾಗಿದೆ. ನಾ॥ ಶ್ರೀನಿವಾಸ ಶಾಸ್ತ್ರಿಗಳು ಸರಕಾರದ ಪ್ರತಿನಿಧಿಯಾಗಿ ನೇಮಕಗೊಳ್ಳುವ ಮೊದಲೂ, ನೇಮಕಗೊಂಡ ಮೇಲೂ ಎರಡು ಸಲ ಇಲ್ಲಿಗೆ ಬಂದಿದ್ದರು. ಮೊದಲನೆ ಸಲವಂತೂ ದಕ್ಷಿಣ ಆಫ್ರಿಕಾದ ಹೊರತು ಬೇರೆ ಯಾವ ವಿಚಾರವೂ ಸಾಧ್ಯ ಇರಲಿಲ್ಲ. ಸಂಭಾಷಣೆ ಆವೇಗದಿಂದ ಕೂಡಿತ್ತು. ಆದರೆ ಬೇರೆ ಯಾವ ವಿಷಯವೂ ಬರಲಿಲ್ಲ. ಎರಡನೇ ಸಲ ಬಂದಾಗ ಅದು ಬೀಳ್ಕೊಡುಗೆಯ ಭೇಟಿ. ದಕ್ಷಿಣ ಆಫ್ರಿಕಾಕ್ಕೆ ಹೋಗುವ ಮೊದಲು, ನಮ್ಮ ರಾಯಭಾರಿ ಮತ್ತೆ ಬೆಂಗಳೂರಿಗೆ ಬರುವಂತಿಲ್ಲ. ಈ ಪ್ರಸಂಗದಲ್ಲಿ ಬರೀ ಸಂತೋಷದ ಹರಟೆ ನಡೆಯಿತು. ಮೊದಲನೆ ಸಲ ಬಂದಾಗ ಶಾಸ್ತ್ರಿಗಳ ಹೆಂಡತಿಯೂ ಬಂದಿದ್ದರು. ಕೈ ನೂಲು, ಕೈ ಮಗ್ಗದ ರವಿಕೆಗಳನ್ನು ಶ್ರೀಮತಿ ಶಾಸ್ತ್ರಿಗಳಿಗೆ ತೋರಿಸಿ, ಆಕೆಯ ಮನವೊಲಿಸಿ ಎರಡು ರವಿಕೆ ಬಟ್ಟೆಯನ್ನು ಆಕೆಗೆ ಮಾರಿದರು ಕಸ್ತೂರಿಬಾ. ಆದರೆ ಗಾಂಧೀಜಿ ಮಾತ್ರ ಖಾದಿಯ ಬಗ್ಗೆ ಮಾತೇ ಎತ್ತಲಿಲ್ಲ. ನನಗೆ ತುಂಬಾ ಅಚ್ಚರಿ ಆಯಿತು. ಒಂದು ಸಲ ಕೇಳಿಯೂಬಿಟ್ಟೆ. ಗಾಂಧೀಜಿಯ ಉತ್ತರ ಹೀಗಿತ್ತು: "ಶಾಸ್ತ್ರಿಗಳು ನಮಗೆ ಅಪರಿಚಿತರೇನಲ್ಲ. ಕೆಲವು ತಿಂಗಳ ಹಿಂದೆ ಅವರು ಆಶ್ರಮಕ್ಕೆ ಬಂದಿದ್ದಾಗ ಈ ಬಗ್ಗೆ ದೀರ್ಘವಾಗಿ ಮಾತನಾಡಿದೆ. ನಮ್ಮ ನೇಯುವ ಗುಡಿಸಲನ್ನೂ, ಕಮ್ಮಾರಿಕೆ ಗುಡಿಸಲನ್ನೂ, ನಮ್ಮ ತಾಂತ್ರಿಕ ಶಾಖೆಯನ್ನೂ ಅವರಿಗೆ ತೋರಿಸಿದೆ. ನಾವು ಏನೆಲ್ಲ ಸಾಧಿಸಿದ್ದೇವೆಯೋ ಅದನ್ನು ಹೇಳಿ, ಇನ್ನೂ ಮಾಡಬೇಕಾದ್ದು ಬಹಳ ಇದೆ ಎಂದೆ. ಅಷ್ಟು ಸಾಕು ಅವರಿಗೆ ಪದೇ ಪದೇ ಹೇಳಬೇಕಾದರೂ ಏಕೆ? ಅವರ ಮನಸ್ಸಿಗೆ ಹಿಡಿಸಿದರೆ ಅದನ್ನು ಒಪ್ಪಿಕೊಂಡು ಎಲ್ಲರಿಗೂ ಸಾರಿ ಹೇಳುತ್ತಾರೆ. ಒಂದು ಗಳಿಗೆಯೂ ತಡ ಆಗುವುದಿಲ್ಲ. ದೇಶವು ಒಪ್ಪಿಕೊಳ್ಳುವ ಹಾಗೆ ಒತ್ತಾಯವನ್ನೂ ಮಾಡಿಯೂ ಮಾಡುತ್ತಾರೆ. ಆದರೆ ನನ್ನ ಅನುಭವಕ್ಕೆ ಬಂದಿರುವ

ಸತ್ಯ ಅವರ ಮನಸ್ಸನ್ನು ಕಾವುಗೊಳಿಸುತ್ತಿಲ್ಲ ಅದಕ್ಕಾಗಿ ನಾನು ಕಾಯಲೇಬೇಕು. ಅವರ ಸಂಗಡ ಪ್ರತಿಯೊಂದು ಸಂದರ್ಭದಲ್ಲಿಯೂ ಈ ಮಾತನ್ನು ಪ್ರಸ್ತಾಪಿಸಲಾರೆ.'

**ದಿವಾನರ ಭೇಟಿ :**

ಶ್ರೀ ಮಿರ್ಜಾ ಮೈಸೂರಿನ ದಿವಾನರು. ಅವರಿಗಿಂತ ಹಿಂದೆ ಇದ್ದವರು ಶ್ರೀ ವಿಶ್ವೇಶ್ವರಯ್ಯ ನವರು. ಮೀರ್ ಹಂಜಾಹುಸೇನ್ ಸಾಹೇಬರು ಕೆಲವು ದಿನ ದಿವಾನಗಿರಿ ಮಾಡಿದವರು. ದಿವಾನ್ ಮಿರ್ಜಾ ಸಾಹೇಬರು ಇವರಿಬ್ಬರನ್ನೂ ಕರೆದುಕೊಂಡು ಬಂದರು. ಮಿರ್ಜಾ ಸಾಹೇಬರನ್ನು ಪರಿಚಯ ಮಾಡಿಕೊಡುತ್ತ ವಿಶ್ವೇಶ್ವರಯ್ಯನವರು – "ಇವರು ಈಗಿನ ದಿವಾನರು. ನನ್ನ ಕಾಲ ಆಗಲೇ ಹಿಂದೆ ಬಿತ್ತು" ಎಂದರು. ಆದರೆ ಅವರ ದೀರ್ಘ ಸಂಭಾಷಣೆಯಿಂದ ಅವರು ಹಿಂದೆ ಬಿದ್ದಿಲ್ಲ. ರಾಜ್ಯದ ವ್ಯವಹಾರದಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದಾರೆ ಎಂದು ತಿಳಿದುಬಂತು. ಗಾಂಧೀಜಿ ಸ್ವಲ್ಪ ನಿಧಾನವಾಗಿ ಹೋಗಬೇಕು. ದೇಶ ಅವರಿಂದ ಇನ್ನೂ ಎಷ್ಟೋ ವರ್ಷಕಾಲ ಸೇವೆ ಬಯಸುತ್ತಿದೆ. ಆದ್ದರಿಂದ ಅವರು ತಮ್ಮ ಶಕ್ತಿಯನ್ನು ಕಾಪಾಡಿಕೊಳ್ಳಬೇಕು ಎಂದು ಪದೇ ಪದೇ ವಿಶ್ವೇಶ್ವರಯ್ಯನವರು ಒತ್ತಾಯ ಮಾಡಿದರು. ಅವರ ಅನುಭವ ಅವರ ವಯಸ್ಸುಗಳಿಂದ ಈ ಸೂಚನೆ ಬಂದದ್ದು ಒಂದು ಮಹತ್ವದ ಮಾತು.

ಗಾಂಧೀಜಿ ಮೈಸೂರಿನ ಆಡಳಿತವನ್ನು ಒಮ್ಮೆ ರಾಮರಾಜ್ಯ ಎಂದಿದ್ದರು. ಅದು ಯಾವ ಕಾಲ – ಎಂದು ವಿಶ್ವೇಶ್ವರಯ್ಯನವರು ತಿಳಿದುಕೊಳ್ಳಲು ಬಯಸಿದರು. ಆಮೇಲೆ ರಾಮರಾಜ್ಯ ವಾಗಿ ಉಳಿಯಲಿಲ್ಲ ಎಂದಿದ್ದರು ಗಾಂಧೀಜಿ. "ನೀವು ದಿವಾನರಿ ಆಗಿದ್ದಾಗ, ರಾಮರಾಜ್ಯ ವಾಗಿತ್ತು, ಆಮೇಲೆ ಹಾಗೆ ಉಳಿಯಲ್ಲ ಎನ್ನುತ್ತೀರೇನು ನೀವು?" ನಗುನಗುತ್ತ ಗಾಂಧೀಜಿ ಕೇಳಿದರು. ಗಾಂಧೀಜಿಗೆ ಹೀಗೆ ಹೇಳಿದ್ದುದು ನೆನಪಿರಲಿಲ್ಲ. ಏನೇ ಇರಲಿ, ಇದರಿಂದ ರಾಮರಾಜ್ಯದ ಬಗ್ಗೆ ಮಾತು ಹೊರಟು ಅದರ ಗುಣಗಳ ಬಗ್ಗೆ ಚರ್ಚೆ ಆದೀತು, ಅದರಲ್ಲಿ ಖಾದಿ ಬಂದೇ ಬರುತ್ತದೆ ಎಂದುಕೊಂಡೆವು ನಾವು. ಈ ಚರ್ಚೆ ಕೈನೂಲು ಕೈಮಗ್ಗಗಳ ಸುತ್ತ ತಿರುಗೀತು ಎಂದುಕೊಳ್ಳಲು ನಮಗೆ ಆಧಾರಗಳಿದ್ದವು.

ಶಾಸನ ಸಭೆಯಲ್ಲಿ ಆರಂಭ ಭಾಷಣ ಮಾಡುವಾಗ ದಿವಾನರು ಕೈಮಗ್ಗದ ಬಗ್ಗೆ ಕುಟೀರೋದ್ಯೋಗಗಳ ಬಗ್ಗೆ ಒತ್ತಿ ಹೇಳಿದ್ದರು. ಹಿಂದೆ ಉದ್ಯೋಗ ಶಾಖೆ ಅಧ್ಯಕ್ಷರಾಗಿದ್ದ ಮೆಕ್ಕಾಯ್ ಒಂದು ಚರಕಾ (ರಾಟೆ) ಪ್ರದರ್ಶನದಲ್ಲಿ ಅಧ್ಯಕ್ಷರಾಗಿ ಕುಳಿತು ಕೈ ನೂಲಿನ ಬಗ್ಗೆ ಬಹಳ ಬಲವಾಗಿ ಒತ್ತಾಯ ಮಾಡಿದ್ದರು. ಇದೆಲ್ಲಕ್ಕೂ ಕಿರೀಟಪ್ರಾಯ ಆಗಿ ಒಂದು ಮಾತು ಕೇಳಿದ್ದೆವು ನಾವು. ಸ್ವತಃ ಮಹಾರಾಜರೇ ನೂಲುವುದರಲ್ಲಿ ಆಸಕ್ತಿ ತೆಗೆದುಕೊಂಡು, ತಾವೇ ಸ್ವತಃ ನೂಲುತ್ತಾರೆ. ಈಚೆಗೆ ಅನೇಕ ರಾಟೆಗಳನ್ನು ಪ್ರವೇಶ ಮಾಡಿಸಿದೆ ಸರ್ಕಾರ. ಈಗ ಉದ್ಯೋಗ ಶಾಖಾಧ್ಯಕ್ಷ ಶ್ರೀ ರಂಗನಾಥರಾವ್ ಸಾಹೇಬ್ ಆರೇಳು ಜನರನ್ನು ಖಾದಿ ಕ್ರಮವನ್ನು ಕಲಿಯಲು ಪುದುಪಾಳಯಕ್ಕೆ ಸರಕಾರದ ಪರವಾಗಿ ಕಳಿಸಿ ಕೊಟ್ಟಿದ್ದಾರೆ ಎಂದೂ ಕೇಳಿದ್ದೆವು. ಆದ್ದರಿಂದ ಖಾದಿ ಮತ್ತು ರಾಟೆಗಳನ್ನು ರಾಜ್ಯದಲ್ಲಿ ಸ್ಥಿರಗೊಳಿಸಲು ಏನೇನು ಮಾಡಬೇಕೋ ಎಂಬ ಮುಖ್ಯ ಚರ್ಚೆ ಆದೀತು ಎಂದು ಇದಿರು ನೋಡುತ್ತಿದ್ದೆವು.

ಈ ಎಲ್ಲ ಸೂಚನೆಗಳಿಂದ ನಮ್ಮ ಮನಸ್ಸನ್ನು ಒಂದು ವಿಷಯ ಕಾಡುತ್ತಿತ್ತು. ರಾಜ್ಯದ ಮುಖ್ಯಾಧಿಕಾರಿಗಳು ಎಷ್ಟೋ ಜನ ಇಲ್ಲಿ ಬಂದಿದಾರೆ. ಯಾರ ಮೈಮೇಲೂ ಖಾದಿ ಇರಲಿಲ್ಲ. ಸಹಕಾರ ಸಂಘಗಳ ರಿಜಿಸ್ಟ್ರಾರ್ ಒಬ್ಬರು ಮಾತ್ರ ಸ್ಪಷ್ಟವಾಗಿ ಒಪ್ಪಿಕೊಂಡರು: ತಮ್ಮಲ್ಲಿರುವುದು ಒಂದೇ ಖಾದಿ ಉಡುಪು, ಅದು ವಿಶೇಷ ಸಂದರ್ಭಗಳಿಗೆ ಮಾತ್ರ, ಉಳಿದವರು ಎಲ್ಲರೂ ಕಂಠದಿಂದ ಕಾಲುಬೆರಳಿನವರೆಗೆ ಶುದ್ಧ ಐರೋಪ್ಯ ವೇಷ ಧರಿಸಿದ್ದರು. ಅವರ ಕಾಲರು, ನೆಕ್ ಟೈ, ಕಿರಿಕೋಟು, ಇಜಾರ ಎಲ್ಲವನ್ನೂ ನೋಡಿದರೆ, ಈ ರಾಜ್ಯದ ಅಧಿಕೃತ ವೇಷವೋ ಏನೋ ಇದು ಎನಿಸುತ್ತಿತ್ತು. ಕಂಠದಿಂದ ಕಾಲುಬೆರಳಿನವರೆಗೆ ಎಂದು ಹೇಳಿದೆನಲ್ಲ, ಏಕೆಂದೇ. ಏಕೆಂದರೆ–ಇವರ ಪರದೇಶೀ ಪದ್ಧತಿ ಎಷ್ಟೇ ವಿಚಿತ್ರ ಆಗಿದ್ದರೂ ಎಲ್ಲರೂ ಒಂದೇ ಬಗೆಯ ರುಮಾಲನ್ನು ಸುತ್ತುತ್ತಾರೆ.

ಇದೆಲ್ಲದರಿಂದ ಖಾದಿಯ ಬಗ್ಗೆ ಸ್ವಾರಸ್ಯವಾದ ಪ್ರಸ್ತಾಪ ಬಂದೀತು ಎಂದು ನಿರೀಕ್ಷಿಸುತ್ತಿದ್ದೆವು. ಏನೂ ಬರಲಿಲ್ಲ. ಮೈಸೂರು ತಳಿಯ ಬಗ್ಗೆ ಅಥವಾ ಗೋರಕ್ಷಣೆಯ ಬಗ್ಗೆ ಯಾರೋ ಪ್ರಸ್ತಾಪ ಮಾಡಿದರು. ಅಷ್ಟೇ ಸಾಕು, ಗಾಂಧೀಜಿ ಉದ್ವೇಗದಿಂದ, ಗೋರಕ್ಷಣೆ, ಗೋಸಂವರ್ಧನೆ, ಸಂಸ್ಥಾನದ ಕ್ಷೀರಕ್ಷೇತ್ರಗಳು, ಚರ್ಮಾಲಯಗಳು ಇದರ ಬಗ್ಗೆ ಮಾತಾಡಿದರು. "ನಿಮ್ಮದೇ ಸಾಬೂನ್ ಕಾರ್ಖಾನೆ ಇದೆ, ಬಹಳ ಸಂತೋಷ. ಗಂಧದ ಮರದ ಸರ್ವಮಾನ್ಯ ಇದೆ ನಿಮಗೆ. ನಿಮ್ಮದೇ ಕ್ಷೀರಶಾಲೆಗಳನ್ನು ಮಾಡಿಕೊಂಡು. ಇಡೀ ಸಂಸ್ಥಾನದಲ್ಲಿ ಶುದ್ಧವಾದ ಹಾಲನ್ನು ಸರಬರಾಜು ಮಾಡಲು ಆಗದೇ? ಆಗ ನಿಮ್ಮ ದನಗಳನ್ನು ಸರಿಯಾಗಿ ನೋಡಿಕೊಳ್ಳುತ್ತೀರಿ. ಅದರ ಚರ್ಮ ಎಲುಬನ್ನೂ ಸರಿಯಾಗಿ ಉಪಯೋಗಿಸುತ್ತೀರಿ. ಇವತ್ತಿನ ಪರಿಸ್ಥಿತಿ ಬಹಳ ದುಃಖದಾಯಕ. ಪರದೇಶಿ ಶಿಕ್ಷಣ ಪದ್ಧತಿಯಿಂದ ನಾವೆಲ್ಲರೂ ಬೌದ್ಧಿಕ ಪಂಗುಗಳು ಆಗಿದ್ದೇವೆ. ಯಾವುದರಲ್ಲೂ ನಮ್ಮ ಬುದ್ಧಿ ಕೆಲಸ ಮಾಡುತ್ತಿಲ್ಲ. ಸತ್ತ ದನದ ಚರ್ಮವನ್ನು, ಎಲುಬನ್ನು ವ್ಯವಸ್ಥೆ ಮಾಡುವುದು ಹಿಂದೂಗಳಿಗೆ ಸಲ್ಲದು ಎಂಬ ತಪ್ಪು ಕಲ್ಪನೆ ಹೋಗಬೇಕು. ಈಗ ಇದೆಲ್ಲವನ್ನೂ ರಫ್ತು ಮಾಡುತ್ತಿದ್ದೇವೆ. ಯಾರೋ ಹೇಳಿದ್ದಾರೆ– ಎಲುಬನ್ನು ರಫ್ತು ಮಾಡಿದಾಗ ಬರೀ ಸತ್ತ ಎಲುಬನ್ನು ಮಾತ್ರವೇ ಕಳುಹಿಸುವುದಿಲ್ಲ. ನಮ್ಮ ಪ್ರಾಣವನ್ನೇ ಕಳಿಸುತ್ತೇವೆ. ಈ ಜೀವಂತ ದನವನ್ನು ನಮ್ಮ ದೇಶದಲ್ಲಿಯೇ ಉಳಿಸಿಕೊಳ್ಳಬೇಕಾದರೆ, ನಮ್ಮ ಜನ ತರಪೇತಾಗಬೇಕು. ಈಗೇನು–ಬೇಕಾದಷ್ಟು ಜನ ಪ್ರತಿ ವರ್ಷವೂ ವಿಶ್ವವಿದ್ಯಾನಿಲಯಗಳಿಂದ ಹೊರಬರುತ್ತಿದ್ದಾರೆ. ಅವರಿಗೆ ಉದ್ಯೋಗ ಆಯಿತು. ನಮ್ಮ ರಾಷ್ಟ್ರದ ಸಂಪತ್ತು ಇಲ್ಲಿಯೇ ಉಳಿಯಿತು" ಇನ್ನೇನು ಖಾದಿ ಬರುತ್ತದೆ ಮುಂದೆ ಎಂದುಕೊಂಡೆ. ಬರಲಿಲ್ಲ. ಸೇರಿದ್ದವರೆಲ್ಲರೂ ಹೊರಡಲು ಎದ್ದರು. ಖಾದೀ ಚರ್ಚೆಗೆ ಇದ್ದ ಅವಕಾಶವೂ ಹೋದಂತೆ ಆಯಿತು.

**ದಿವಾನರ ಭರವಸೆ:**

ಆದರೆ ದೈವವಶಾತ್ ದಿವಾನರ ಬಾಯಿಂದ ಈ ಮಾತು ಹೊರಟಿತು. ಅವರನ್ನು ಏನೋ ಕೇಳಬೇಕೆಂದು ಇದ್ದರು ಗಾಂಧೀಜಿ. ದಿವಾನರು ಹೊರಟುಹೋಗಲು ಎದ್ದಾಗ

ಗಾಂಧೀಜಿ ಕೇಳಿದರು "ಇನ್ನೊಂದು ಗಳಿಗೆ ಇರುತ್ತೀರಾ? ರಾಜ್ಯದ ಉನ್ನತ ಅಧಿಕಾರಿಗಳು ಕೆಲವರು ತಾವು ಖಾದಿ ಹಾಕಲು ಸರಕಾರವೇ ಅಡ್ಡಿ ಎನ್ನುತ್ತಾರೆ. ಇದು ಆಶ್ಚರ್ಯ ಅಲ್ಲವೇ?"

"ಹಾಗೆಯೇ, ಯಾರು ಆ ಅಧಿಕಾರಿ? ರಾಟೆಯನ್ನು ಜನಪ್ರಿಯಗೊಳಿಸಲು ಪ್ರಯತ್ನಿಸುತ್ತಿರುವ ಅಧಿಕಾರಿಗಳು ಖಾದಿ ಹಾಕಿದರೆ ಬೇಡ ಎನ್ನುತ್ತೇವೆಯೆ? ನಾನು ಅದನ್ನು ಪ್ರೋತ್ಸಾಹಿಸುತ್ತೇನೆ". ಎಂದು ದಿವಾನರು ಒತ್ತಿ ಹೇಳಿದರು. "ನಾನು ಹಾಗೆಯೇ ಅಂದುಕೊಂಡೆ. ನಿಮ್ಮ ಅಪ್ಪಣೆ ಇದ್ದರೆ ಅಧಿಕಾರಿಗಳು ಖಾದಿ ಧರಿಸಲು ಸರಕಾರದ ಆಕ್ಷೇಪಣೆ ಏನೂ ಇಲ್ಲ ಎಂದು ತಿಳಿಸಿಬಿಡುತ್ತೇನೆ. ಕೊಲ್ಹಾಪುರದಲ್ಲಿ ಹಾಗೆಯೇ ಮಾಡಿದೆ" ಎಂದರು ಗಾಂಧೀಜಿ. "ಖಂಡಿತ ತಿಳಿಸಿ" ಎಂದರು ದಿವಾನರು.

ಒಂದು ಸಲ ಮೆಕ್ಕಾಯ್ ಬಂದು "ನಾನು ಖಾದಿ ತೊಡಲೆ" ಎಂದು ಕೇಳಿದ. 'ಅಗತ್ಯವಾಗಿ' ಎಂದೆ ನಾನು. ನನ್ನನ್ನು ಕೇಳಬೇಕಾದ ಆವಶ್ಯಕತೆಯೇ ಇರಲಿಲ್ಲ. ಈ ಚಳವಳಿ ಒಳ್ಳೆಯ ದಾರಿ ಹಿಡಿದಿದೆ. ಇದನ್ನು ಪ್ರೋತ್ಸಾಹಿಸಿ ಎಂದು ಬ್ರಿಟಿಷ್ ಸರಕಾರದ ಅಧಿಕಾರಿಗಳಿಗೇ ಹೇಳುತ್ತೇನೆ–ಎಂದರು ದಿವಾನರು. "ನಿಮಗೆ ಧನ್ಯವಾದ" ಎಂದರು ಗಾಂಧೀಜಿ. ಮೈಸೂರು ಸರಕಾರದ ಅಧಿಕಾರಿಗಳು ಇದನ್ನು ಗಮನಿಸುವರೇ? (೨೬–೫–೨೭).

ನಂದೀಬೆಟ್ಟದ ಮೇಲೆ ಗಾಳಿ ಸವಾರಿ ಹೋಗಲು ಬಹಳ ಸೊಗಸಾದ ಸ್ಥಳ ಇದೆ. ಒಂದು ದಿನ ಮಹದೇವ ದೇಸಾಯಿ ಅವರ ಜೊತೆಗಾರರೊಂದಿಗೆ ಹೋಗುತ್ತಿದ್ದಾಗ, ನಡುವೆ ಗಾಂಧೀಜಿ ಕೂಡ ಸಿಕ್ಕರು ಗಹಗಹಿಸಿ ನಗುತ್ತ ನಾನು ನಡೆಯುವಷ್ಟರಲ್ಲಿ ಅರ್ಧದಷ್ಟು ವೇಗ ಕೂಡ ಇಲ್ಲವಲ್ಲ ನಿಮ್ಮದು ಎಂದರು ಗಾಂಧೀಜಿ. ನಿಜ, ಇತ್ತೀಚೆಗೆ ಗಾಂಧೀಜಿಯ ನಡಿಗೆಯಲ್ಲಿ ಒಂದು ಹೊಸ ನೆಗೆತ ಕಾಣಬರುತ್ತ ಇದೆ ಎನ್ನುತ್ತಾರೆ ದೇಸಾಯಿ. ಮಳೆ ಗಾಳಿ ಪ್ರಾರಂಭ ಆಗಿದೆ. ಒಂದೆರಡು ವಾರಗಳಲ್ಲೇ ಬೆಂಗಳೂರಿಗೆ ಹೋಗಬೇಕಾಗಬಹುದು ಎನ್ನುತ್ತಾರೆ.

**ಹಕ್ಕಿಗಳಿಗೆ ಉಪದೇಶ :**

ಬೆಂಗಳೂರು ಬಾಲಿಕಾ ಪಾಠಶಾಲೆಯ ಹುಡುಗಿಯರು ಗಾಂಧೀಜಿಯನ್ನು ನೋಡಿ ಹೋಗಲು ಬಂದಿದ್ದರು. ಅವರು ಇದ್ದಷ್ಟು ಹೊತ್ತು ಬಾಪೂಗೆ ಸ್ವರ್ಗವೇ ಕೈಗೆ ಸಿಕ್ಕ ಹಾಗಾಯಿತು. ಆ ಹುಡುಗಿಯರು ಬೆಂಗಳೂರಿಗೆ ಹಿಂದಿರುಗಿ ಹೋದ ಮೇಲೆ ಗಾಂಧೀಜಿಗೆ ಒಂದು ಪತ್ರವನ್ನು ಬರೆದರು. ದಿನವೂ ತಮ್ಮ ಸಾಮೂಹಿಕ ಪ್ರಾರ್ಥನೆಯಲ್ಲಿ–ನಿಮಗೆ ಬೇಗ ಗುಣವಾಗಲಿ. ಎಂದು ದೇವರನ್ನು ಬೇಡಿಕೊಳ್ಳುತ್ತೇವೆ ಎಂದರು. ಗಾಂಧೀಜಿ ಅವರಿಗೆ ಮಾರೋಲೆ ಬರೆದಾಗ ಆ ಮಕ್ಕಳನ್ನು 'ಪ್ರೀತಿಯ ಪುಟ್ಟ ಹಕ್ಕಿಗಳು' ಎಂದು ಕರೆದರು. "ಪ್ರೀತಿಯ ಪುಟ್ಟ ಮರಿಗಳೇ, ನಿಮ್ಮ ಪತ್ರ ನನಗೆ ಬಲ ಕೊಡುವ ಪೌಷ್ಟಿಕ ಔಷಧ ಇದ್ದ ಹಾಗೆ ಇದೆ".

ಆ ಪುಟ್ಟ ಮರಿಗಳು ಮತ್ತೊಂದು ಸಲ ನಂದೀಬೆಟ್ಟಕ್ಕೆ ಬಂದವು. ತಮ್ಮ ಸಂಗೀತವನ್ನು ಕೇಳಿಸಿ ಹೋಗೋಣ ಎಂದು. ಅವರಲ್ಲಿ ಹಲವು ಗುಂಪು. ಒಂದೊಂದು ಗುಂಪಿಗೂ ಒಂದೊಂದು ಪಕ್ಷಿಯ ಹೆಸರು. ಆ ಗುಂಪುಗಳನ್ನು ಮಾಡಿರುವುದು ಶಿಸ್ತಿಗಾಗಿ ಎಂದು

ಅವರ ಪ್ರಿನ್ಸಿಪಾಲರು ಹೇಳಿದರು. ಬೆಟ್ಟಕ್ಕೆ ಬಂದಾಗ ಎಲ್ಲವೂ ಶಿಬಿರದ ಪದ್ಧತಿ. ಅವರದೇ ಅಡಿಗೆ. ಅವರದೇ ಕೆಲಸ, ಅವರದೇ ರಾತ್ರಿಯ ಕಾವಲು. ಬಿಡುವಿನ ದಿನಗಳಲ್ಲಿಯೂ ಕೂಡ ಆಟ-ಪಾಠಗಳು ಬೆರೆತುಕೊಂಡು ಹೋಗಿದ್ದವು. ಅವರಲ್ಲಿ ಯಾರಿಗೂ ವೈಯಕ್ತಿಕ ಬಹುಮಾನ ಇರಲಿಲ್ಲ. ಏನು ಮಾಡಿದರೂ ಗುಂಪಿಗಾಗಿ. ಅವರ ಪ್ರಿನ್ಸಿಪಾಲ್ ಮಿಸ್ ರಾಬಿನ್ಸನ್ ಹೇಳಿದಳು–"ನೂಲುವುದನ್ನು ಕಲಿಯುತ್ತಿದ್ದಾರೆ ಹುಡುಗಿಯರು". ಹುಡುಗಿಯ ರೊಡನೆ ವಿನೋದ ಮಾಡುತ್ತ ಬಾಪೂ ಕೇಳಿದರು–ಖಾದಿ ಎಂದರೆ ಏನು ನಿಮಗೆ ಗೊತ್ತಿದೆಯೆ? ಅದು ಚಲೋ ಪಕ್ಷಿ ಇರಬಹುದೇ? ಅಥವಾ ಒಂದು ಆಟದ ಸಾಮಾನೋ?

ಈ ಪ್ರಶ್ನೆ ಕೇಳಿದ ಮುದುಕನ ವಿನೋದಕ್ಕೆ ಗಿಳಿಯ ಮರಿಗಳು ನಕ್ಕವು. ಒಬ್ಬಳು ನಗುತ್ತ "ಖಾದಿ ಎಂದರೆ ಬಟ್ಟೆ" ಎಂದಳು. ಬಾಪೂ ಕೇಳಿದರು: 'ಎಂಥ ಬಟ್ಟೇ ಅದು' ವಿನೋದ ಹೋಗಿ ಪರೀಕ್ಷೆ ಆಯಿತು. ಇದಕ್ಕೇನು ಹೇಳಬೇಕು? ಅವರಿಗೆ ಗೊತ್ತಾಗಲಿಲ್ಲ. ಕೊನೆಗೆ 'ಒರಟು ಬಟ್ಟೆ' ಎಂದಳು. ಈಗ ಬಾಪೂನ ಸರತಿ ನಗುವುದು. ಪ್ರಶ್ನೆಗಳನ್ನು ಹಾಕಿ ಹಾಗೂ ಹೀಗೂ ಖಾದೀ ಎಂದರೆ ಕೈನೂಲಿನ ಬಟ್ಟೆ ಎಂದು ಹುಡುಗಿಯರಿಗೆ ತಿಳಿಸಿದುದು ಆಯಿತು. ಇನ್ನು ಅದರ ಉಪಯೋಗ–

'ಸರಿ ಆ ಬಟ್ಟೆ ಯಾಕೆ ಉಡಬೇಕು ಗೊತ್ತೆ? ಹೇಳಿ ನೋಡೋಣ'

'ಚಾಳಿಕೆ ಬರುತ್ತೆ ಅಂತ' ಒಬ್ಬ ಹುಡುಗಿ ಹೇಳಿದಳು

'ಅಲ್ಲ. ಅದು ಸರಿಯಾದ ಕಾರಣ ಅಲ್ಲ. ಅದಕ್ಕಿಂತ ಒಳ್ಳೆಯ ಕಾರಣ ಹೇಳಬೇಕು.'

'ಆ ಬಟ್ಟೆ ಒಗೆದರೆ ಬೆಳ್ಳಗೆ ಆಗುತ್ತೆ' ಇನ್ನೊಬ್ಬ ಹುಡುಗಿಯ ಉತ್ತರ.

'ಅದೂ ಸರಿಯಲ್ಲ. ಚೆನ್ನಾಗಿ ಯೋಚನೆ ಮಾಡಿಕೊಂಡು ಉತ್ತರ ಹೇಳಿ'

'ನಿಮ್ಮಲ್ಲಿ ಎಲ್ಲರಿಗಿಂತ ಯಾರು ಹೆಚ್ಚು ಬುದ್ಧಿವಂತರೋ ಅವರು ಹೇಳಿ ನೋಡೋಣ' ತಿರುಗಿ ಅವರನ್ನು ಸರಿಯಾದ ಉತ್ತರಕ್ಕೆ ಕರೆದೊಯ್ಯಬೇಕಾಯಿತು.

'ಈ ಖಾದಿ ನೂಲು ಯಾರು ತೆಗೆಯುತ್ತಾರೆ ಗೊತ್ತೆ? ನಿಮ್ಮ ತಂದೆ – ನಿಮ್ಮ ತಾಯಿಯ ಹಾಗೆ ತಮ್ಮ ಮಕ್ಕಳ ಓದು ಬರಹಕ್ಕಾಗಿ ತಿಂಗಳಿಗೆ ೪೦–೫೦ ರೂಪಾಯಿ ವೆಚ್ಚ ಮಾಡುವ ಭಾರೀ ಜನರಲ್ಲಿ ಬಡವರು' 'ನಮ್ಮ ದೇಶದ ತೀರಾ–ಎಲ್ಲಿ ಆ ವಾಕ್ಯ ಮುಗಿಸಿ'

ತಲೆಗೊಂದು ಉತ್ತರ. ಒಂದು ಹುಡುಗಿ ಸರಿಯಾದ ಉತ್ತರ ಹೇಳಿ ವಾಕ್ಯ ಮುಗಿಸಿದಳು.

'ತಿಳಿಯಿತೆ? ನಮ್ಮ ದೇಶದ ತೀರಾ ಬಡವರು. ನಿಮಗೆ ಇದ್ದ ಹಾಗೆ ಅವರಿಗೆ ಓದು-ಬರಹ ಇಲ್ಲ. ನೀವು ಹಳ್ಳಿಗಳಿಗೆ ಯಾವಾಗಲಾದರೂ ಹೋಗಿದ್ದೀರಾ? ಆ ಜನರಿಗೆ ಹೊಟ್ಟೆ ತುಂಬ ಹಿಟ್ಟಿಲ್ಲ, ಹಾಲಿಲ್ಲ, ತುಪ್ಪ ಇಲ್ಲ. ಅಂಥ ಜನರೇ ನೂಲುವುದು. ಅವರಿಂದ ಒಂದು ದುಗ್ಗಾಣಿ ಬಂದರೆ ಅದೇ ಭಾಗ್ಯ. ಆ ಖಾದಿ ಬಟ್ಟೆ ನೀವು ಕೊಂಡರೆ ಅವರಿಗೆ ಆ ದುಗ್ಗಾಣಿ

ಸಿಗುತ್ತದೆ. ಆ ದುಗ್ಗಾಣಿಗೆ ಉಪ್ಪೋ, ಮೆಣಸಿನಕಾಯೋ, ಹಾಲೋ ಹಣ್ಣೋ ಕೊಳ್ಳುತ್ತಾರೆ. ಗೊತ್ತಾಯಿತೇ ಖಾದಿ ಬಟ್ಟೇ ಯಾಕೆ ಉಡಬೇಕು ಎನ್ನುವುದು?'

ಹುಡುಗರಿಗೆಲ್ಲ ಹರುಷವಾಯಿತು. ಅವರಲ್ಲಿ ಅಳ್ಳೆದೆಯ ಸರಕಾರಿ ನೌಕರರ ಮಕ್ಕಳು ಎಷ್ಟು ಜನವೋ! ಈ ಮಕ್ಕಳ ಕಾಟ ಅವರಿಗೆಲ್ಲ ಪ್ರಾಣಸಂಕಟವಾಗಿರಬೇಕು.

**ದರ್ಶಕರು :**

ಮಕ್ಕಳ ಸಾನ್ನಿಧ್ಯ ಗಾಂಧೀಜಿಗೆ ಪೌಷ್ಟಿಕ ಔಷಧ. ಕಾಂಗ್ರೆಸ್ ಅಧ್ಯಕ್ಷರ (ಎಸ್ ಶ್ರೀನಿವಾಸಯ್ಯಂಗಾರ್ಯರ) ಆಗಮನ ಬಹಳ ಸಂತೋಷದಾಯಕ, ಸ್ವಾರಸ್ಯಕರ ಆಗಿತ್ತು. ಅವರ ಹಗುರಾದ ಹೃದಯವಂತಿಕೆ, ಧೈರ್ಯ ಇವು ಜೊಂಬಾಯಿಯಲ್ಲಿ ನಡೆದ ಅ.ಭಾ. ಕಾಂಗ್ರೆಸ್ ಸಮಿತಿಯಲ್ಲಿ ಅಪಸ್ವರ, ವಿರೋಧ ಬೇಕಾದಷ್ಟು ಇದ್ದರೂ ಅದನ್ನೆಲ್ಲ ಲೀಲಾಜಾಲವಾಗಿ ಗಾಳಿಗೆ ಹಾರಿಸಿಬಿಟ್ಟವು. ಅವರು ಇಲ್ಲಿಗೆ ಬಂದಾಗ "ಅಂತೂ ಒಂದು ಪವಾಡವನ್ನೇ ಮೆರೆದಿರಿ" ಎಂದು ಗಾಂಧೀಜಿ ಅವರನ್ನು ಬರಮಾಡಿಕೊಂಡರು. ಆರು ತಿಂಗಳ ಕೆಳಗೆ ಗೌಹಾತಿಯಲ್ಲಿ ಭೇಟಿಯಾದಾಗ ಅವರ ಮುಂದೆ ಇದ್ದ ಗಂಭೀರ ಕಾರ್ಯವನ್ನು ಗಮನಿಸಿ, ಗಾಂಧೀಜಿ ಅವರಿಗೆ ಹೇಳಿದ್ದರು, "ಅನೇಕರು ಸೋತು ಹೋಗಿದ್ದಾರೆ. ನೀವು ಗೆಲ್ಲಬಹುದು. ನಿಮ್ಮ ಶ್ರದ್ಧೆ ಅಜೇಯ ಆದುದು" ಅಧ್ಯಕ್ಷರು ಅದಕ್ಕೆ ಸರಿಯಾದ ಉತ್ತರ ಕೊಟ್ಟರು "ಮಹಾತ್ಮಾಜಿ, ನನ್ನ ಜಂಬದ ಮಾತು ನಿಮಗೆ ನೆನಪು ಇರಬಹುದು. 'ಮಾಡುತ್ತೇನೆ ಇಲ್ಲವೆ ಮಡಿಯುತ್ತೇನೆ' ಎಂದಿದ್ದೆ. ಅವರು ಹೊರಡುವಾಗ ಗಾಂಧೀಜಿ ಅವರನ್ನು ನಗುಮೊಗದಿಂದ ಬೀಳ್ಕೊಂಡು ಅವರಿಗೆ ಈ ಸಂದೇಶವನ್ನು ಕೊಟ್ಟರು "ಬೇಕಾದುದು ಆಗಲಿ, ನೀವಂತೂ ಹಿಂದೂ-ಮುಸ್ಲಿಮ್ ಐಕ್ಯದ ಬಗ್ಗೆ ಹೇಳುತ್ತ ಹೋಗಿ. ಮತ್ತೆ ಮತ್ತೆ ಅದೇ ಪಲ್ಲವಿ ಹೇಳುತ್ತಾ ಇರಿ."

ಮದರಾಸಿನ ಮಿತವಾದಿ ವೃದ್ಧ ಎಲ್ ಎ ಗೋವಿಂದರಾಘವ ಅಯ್ಯರ್ ಬಂದಿದ್ದರು. ಈ ಇಪ್ಪತ್ತು ವರ್ಷಗಳಿಂದಲೂ ಅವರು ಬೇಸಿಗೆಯನ್ನು ಈ ಬೆಟ್ಟದ ಮೇಲೆಯೇ ಕಳೆಯುತ್ತಿದ್ದರು. ಅವರು ಇದ್ದರೆ ಸಾಕು. ಒಂದು ಬಗೆಯ ಗಾಂಭೀರ್ಯ, ಶಾಂತಿ ತೊಟ್ಟಿಕ್ಕುತ್ತದೆ. ಸುತ್ತಲೂ ಶುಭಾಶಯದ ಸ್ಫೂರ್ತಿ ಸೆಲೆ ಒಡೆಯುತ್ತದೆ. ದಿವಾನರು ಬಂದಿದ್ದರಲ್ಲ, ಅವತ್ತು ಇವರೂ ಇದ್ದರು "ನೀವು ಚರ್ಚೆ ಮಾಡಬಾರದು ಮಹಾತ್ಮಾಜಿ. ನಾನು ಹಿಂದೆ ಬಂದಿದ್ದಾಗ ಗೋರಕ್ಷಣೆಯ ವಿಷಯವಾಗಿ ಉದ್ವೇಗದಿಂದ ಮಾತಾಡುತ್ತಿದ್ದಿರಿ. ಅಸಾಧ್ಯ ಕಾರ್ಯ ಅನೇಕ ಮಾಡಬಹುದು. ಆದರೆ ಮನಸ್ಸನ್ನು ಶಾಂತವಾಗಿ ಇಟ್ಟುಕೊಳ್ಳುವುದು ಕಷ್ಟ. ಈಗ ನಿಮ್ಮನ್ನು ಚರ್ಚೆಗೆ ಎಳೆಯುವುದಿಲ್ಲ ನಾನು. ಆಗಾಗ ಬಂದು ನೋಡಿಕೊಂಡು ಹೋಗುತ್ತೇನೆ. ಅಷ್ಟಕ್ಕೆ ಅನುಮತಿ ಕೊಡಿ" ಎಂದರು. ಹೃದಯದ ಅಂತರಾಳದಿಂದ ಬಂದ ಮಾತು ಇವು.

**ಮೂಲೋದ್ಯೋಗ :**

ಮೈಸೂರಿನ ನೆಲದಲ್ಲಿ ಈ ಬೀಜ ಬೇರು ಬಿಡುತ್ತಿದೆ. ಶಿವಮೊಗ್ಗದಲ್ಲಿ ಒಂದು ಜಿಲ್ಲಾ ಸಮ್ಮೇಳನ, ಒಂದು ಪ್ರದರ್ಶನ ನಡೆಯಿತು. ಬೆಂಗಳೂರು ಖಾದಿ ವಸ್ತ್ರಾಲಯದ ಸಾಮಾನಿಗೆ ಒಂದು ಬಂಗಾರದ ಪದಕ ಬಂತು. ಮೊದಲನೆಯ ದಿನ

ಒಂದು ಸಾವಿರ ರೂಪಾಯಿನ ಖಾದಿ ಮಾರಾಟ ಆಯಿತು. ಡೆಪ್ಯೂಟಿ ಕಮೀಷನರರು ಅಧ್ಯಕ್ಷರಾಗಿದ್ದರು. ಅವರೂ ಖಾದಿ ಕೊಂಡದ್ದಲ್ಲದೆ ಗೆಳೆಯರನ್ನೂ ಮನ ಒಲಿಸಿದರು. ತಮ್ಮ ಭಾಷಣದಲ್ಲಿ ರಾಟೆಯ ಸ್ಥಾನವನ್ನು ವರ್ಣಿಸಿ, ಅದರ ಸಾಧ್ಯತೆಯನ್ನು ಹೀಗೆ ವರ್ಣಿಸಿದರು

"ರಾಟೆ ನಮ್ಮ ಬದುಕಿನಲ್ಲಿ ನೆಲೆಯಾಗಿ ಬಂದು ಹೋಯಿತು. ಮುಂದೆ ಗ್ರಾಮ ಸಮಾಜ ಜೀವನದ ಅಭಿವೃದ್ಧಿಯಲ್ಲಿ ಅದಕ್ಕೆ ಬಹಳ ಮುಖ್ಯ ಪಾತ್ರ ಕಾದ್ದಿದೆ. ಈ ಸರಳವಾದ ರಾಟೆ, ಸೇವೆಯ ಆದರ್ಶ ಯಾವ ರೀತಿ ನೋಡಿದರೂ ಅದರದೇ ಸಳೆತ ಇದ್ದೇ ಇದೆ. ಈಗ ೨೦೬ ರಾಟೆಗಳು ತಿರುಗುತ್ತಿವೆ. ಇದರಲ್ಲಿ ಸುಮಾರು ೧೨೫ ಸೊರಬ ತಾಲ್ಲೂಕಿನಲ್ಲಿವೆ. ನೂಲುವಿಕೆ ಸ್ವತಂತ್ರ ಅಲ್ಲ. ಎಲ್ಲಾ ಕಡೆಯಲ್ಲಿಯೂ ಇದನ್ನು ಒಂದು ಗೃಹೋದ್ಯೋಗ ಆಗಿ ಸ್ವೀಕರಿಸಿದರೆ ಅದರಿಂದ ಏಷ್ಟೋ ಗ್ರಾಮೋದ್ಯೋಗಗಳಿಗೆ ಚಾಲನೆ ಸಿಗುತ್ತದೆ. ಮಗ್ಗವೂ ಕೂಡ ಚುರುಕು ಆಗುತ್ತದೆ. ಬಣ್ಣ ಹಾಕುವವರಿಗೂ, ಬಡಿಗರಿಗೂ ಕೆಲಸ ಸಿಗುತ್ತದೆ. ನಿಜವಾಗಿ ನೋಡಿದರೆ ನೂಲುವುದು ಹಳ್ಳಿಯ ಮೂಲೋದ್ಯೋಗ. ಕೆಲಸವನ್ನು ಹಂಚುವ ಅದ್ಭುತ ಶಕ್ತಿ ಇದಕ್ಕಿದೆ. ಹಳ್ಳಿಯ ಬಡವರ ಮನೆಯಲ್ಲಿ ಹಣವನ್ನು ಹಂಚಿ ಇಡುವ ಇದರ ಶಕ್ತಿ ಊಹಾತೀತ."

ರಾಟೆಯ ಅದ್ಭುತ ಶಕ್ತಿಯ ಪ್ರದರ್ಶನವನ್ನು ಗಾಂಧೀಜಿಯ ಸಾನ್ನಿಧ್ಯದಿಂದ ಸಾಧಿಸಿಕೊಳ್ಳಲಿ ಮೈಸೂರು.

ಅಮೆರಿಕದ ರಿಚರ್ಡ್ ಗ್ರೆಗ್ ಭಾರತಕ್ಕೆ ಬಂದಿದ್ದಾರೆ. ಈ ದೇಶದ ನಿವಾಸಿ ಯಾರಾದ ರೊಬ್ಬರು ಎಷ್ಟು ಭಕ್ತಿಯಿಂದ ಈ ದೇಶದ ಅನೇಕ ಸಮಸ್ಯೆಗಳನ್ನು ಅಭ್ಯಾಸ ಮಾಡಬಹುದೋ ಹಾಗೆ ಮಾಡುತ್ತಿದ್ದಾರೆ. ಕೈನೂಲಿನ ಬಗ್ಗೆ ಅವರು ಮಾಡುತ್ತಿರುವ ಅಭ್ಯಾಸ-ಪ್ರಯೋಗ ಅವಿರತವಾಗಿ ನಡೆಯುತ್ತಿದೆ. ಹಿಂದುಳಿದವರ ಮಕ್ಕಳ ಶಿಕ್ಷಣದಲ್ಲಿ ಈಗ ನಡೆಯುತ್ತಿದೆ ಅವರ ಪ್ರಯೋಗ. ಹಿಂದುಳಿದವರ ಹಿತಾಕಾಂಕ್ಷಿಗಳು ಅವರು. ಈ ದೃಷ್ಟಿಯಿಂದ ವ್ಯವಸಾಯ ವನ್ನು ಅವರು ಅಭ್ಯಾಸ ಮಾಡುತ್ತಿದ್ದಾರೆ. ಸಾಬರಮತಿಯ ಸತ್ಯಾಗ್ರಹಾಶ್ರಮದಲ್ಲಿ ಆರೋಗ್ಯಶಾಸ್ತ್ರದ ಪ್ರಕಾರ ಮಿತವ್ಯಯದಿಂದ ಹೊಲಸನ್ನು ಗೊಬ್ಬರ ಮಾಡುವುದು ಅವರಿಗೆ ತುಂಬಾ ಆಕರ್ಷಕ ಆಯಿತು. ಈ ಪ್ರಶ್ನೆಯನ್ನು ಅವರು ಈಗ ಶಾಸ್ತ್ರೀಯ ದೃಷ್ಟಿಯಿಂದ ಅಭ್ಯಾಸ ಮಾಡುತ್ತಿದ್ದಾರೆ. ಪ್ರಯೋಗಾರ್ಥ ಒಂದು ಕ್ಷೇತ್ರವನ್ನು ಏರ್ಪಡಿಸಬೇಕು – ಎಂದು ಪತ್ರ ಬರೆದಿದ್ದಾರೆ.

"ಈ ಕ್ಷೇತ್ರದಲ್ಲಿ ವಿಶಿಷ್ಟ ಲಕ್ಷಣ ಎಂದರೆ ಸತ್ಯಾಗ್ರಹಾಶ್ರಮದಲ್ಲಿ ಮಾಡಿದ ಹಾಗೆ ಮನುಷ್ಯನ ಮಲವನ್ನು ಗುಂಡಿಯಲ್ಲಿ ಹುಗಿದು ಗೊಬ್ಬರ ಮಾಡುವುದು. ಅಥವಾ ಚೀನ, ಜಪಾನ್‌ನ ರೈತರು ಮಾಡುವಂತೆ ಮಾಡುವುದು. ಈ ಪ್ರಯೋಗದ ಕ್ಷೇತ್ರಗಳಲ್ಲಿ ಇರುವ ಎಲ್ಲ ಭಂಗಿಗಳನ್ನೂ ಸಂಘಟಿಸಿ ಈ ಗೊಬ್ಬರವನ್ನು ಮಾಡುವ ಅತ್ಯುತ್ತಮ ವಿಧಾನವನ್ನು ಅವರಿಗೆ ಕಲಿಸುವುದು."

"ಅತ್ಯಲ್ಪ ಕಾಲದಲ್ಲಿ ಈ ಕ್ಷೇತ್ರ ಅತ್ಯದ್ಭುತವಾಗಿ ಉತ್ಪಾದನೆ ಮಾಡಬಲ್ಲುದು. ಕಾಳು-ಕಡ್ಡಿ, ದನಕ್ಕೆ ಮೇವು, ಕೆಲವು ಬಗೆಯ ಹಣ್ಣು ಅಥವಾ ತರಕಾರಿ ಅಲ್ಲಿಯೇ ಸ್ಥಳದಲ್ಲಿಯೇ

ಮಾರಬಹುದಾದ ಪದಾರ್ಥಗಳನ್ನು ಬೆಳೆಯಬಹುದು ಸ್ಥಳದಲ್ಲಿಯೇ ಮಾರುವುದರಿಂದ ಸಾಗಾಣಿಕೆಯ ವೆಚ್ಚ ತಪ್ಪಿ, ಈ ಯೋಜನೆಗಾಗಿ ಅಥವಾ ಈ ಭಂಗಿಯ ಜನರ ಮಕ್ಕಳ ಶಿಕ್ಷಣಕ್ಕಾಗಿ ಲಾಭವೂ ಬರಬಹುದು. ಹೀಗೆ ಈ ಹೊಲಸನ್ನು ಉಪಯೋಗಿಸಿದರೆ, ಗೊಬ್ಬರದ ಸಾಮಗ್ರಿ ಆಗುವುದಲ್ಲದೆ, ವ್ಯರ್ಥ ಪದಾರ್ಥ ಒಂದನ್ನು ಸರಿಯಾಗಿ ಬಳಸಿದಂತೆ ಆಗುತ್ತದೆ. ಇದರಿಂದ ಅಷ್ಟು ಪದಾರ್ಥ ಉಳಿತಾಯ ಆಗುತ್ತದೆ. ಬರೀ ಲಾಭ ಮಾತ್ರವೇ ಅಲ್ಲ. ಅಲಕ್ಷಿತ ಮಲದಿಂದ ಕಾಯಿಲೆಗಳಿಗೆ ಅವಕಾಶವಾಗಿ ಅದರಿಂದ ನೊಣಗಳು ಅಪಾರ ಆಗಿ ಬೆಳೆದು ಕ್ರಿಮಿಕೀಟಗಳಿಗೆ ಆಗರ ಆಗುವ ಅಪಾಯ ತಪ್ಪುತ್ತದೆ"

ಬೆಟ್ಟದ ಮೇಲೆ ಈಗ ಚಳಿಗಾಳಿ ಹೆಚ್ಚುತ್ತಿದೆ. ಇನ್ನು ಬೆಂಗಳೂರಿಗೆ ಹೋಗಬೇಕು. ನಮ್ಮನ್ನು ಚೆನ್ನಾಗಿ ನೋಡಿಕೊಳ್ಳುತ್ತಿರುವ ಚಿಕ್ಕಬಳ್ಳಾಪುರದ ಜನ, ಬೆಂಗಳೂರಿಗೆ ಹೋಗಬೇಡಿ ನಮ್ಮೂರಿನಲ್ಲೇ ಉಳಿದುಕೊಳ್ಳಿ ಎಂದು ಬೇಡಿಕೊಂಡರು. ಇದು ಸಾಧ್ಯ ಇಲ್ಲ. ಆದರೆ ಅರ್ಧ ಗಂಟೆ ಚಿಕ್ಕಬಳ್ಳಾಪುರದಲ್ಲಿ ನಿಂತು ಮುಂದಕ್ಕೆ ಹೋಗುವ ತೀರ್ಮಾನ ಆಗಿದೆ.'

**ರಂಗೂನಿಂದ :**

ಈ ವಾರ ಬಂದ ದರ್ಶನಾರ್ಥಿಗಳು ಸ್ವಲ್ಪ ಹೆಚ್ಚೇ. ರಂಗೂನಿಂದ ಬಂದ ಒಬ್ಬ ಮಹಿಳೆಯ ಮಾತನ್ನು ಮೊದಲು ಹೇಳಬೇಕು. ತನ್ನ ಹೊಟ್ಟೆ ಹೊರೆಯಲು ಆಕೆಯ ಮಗ ಅಲ್ಲಿ ಇದ್ದಾನೆ. ಆಕೆ ಉಟ್ಟಿದ್ದ ಖಾದಿ ಸೀರೆ ತುಂಬಾ ಒರಟು. ಆದರೂ ಆಕೆ ಅದನ್ನು ತುಂಬ ಹೆಮ್ಮೆಯಿಂದ, ಮನಃಪ್ರೀತಿಯಿಂದ ಧರಿಸಿದ್ದಳು. ನೂಲುವುದು ಮಾತ್ರ ಅಲ್ಲ, ನೇಯುವುದೂ ಆಕೆಗೆ ಗೊತ್ತು. ಏನೂ ಅಚ್ಚರಿ ಅಲ್ಲ. ಆಕೆಯ ಮಗ ಬೇರೆ ಕಸುಬಿನಿಂದ ಸಂಪಾದನೆ ಮಾಡುತ್ತಿದ್ದರೂ ರಂಗೂನಿನಲ್ಲಿ ಖಾದಿ ಪ್ರಚಾರ ಮಾಡುತ್ತಿದ್ದಾನೆ. ಅವನ ತಾಯಿಯ ತವರು ಬೆಂಗಳೂರು. ಅಲ್ಲಿಗೆ ಆಕೆ ಹೋದಾಗ ಗಾಂಧೀಜಿಯನ್ನು ನೋಡಿ ಬರಲಿ ಎಂದು ಅವನು ಇಷ್ಟಪಟ್ಟಿದ್ದ. ಮೂರು ೫೫ ರೂಪಾಯಿಗಳನ್ನು ಗಾಂಧೀಜಿಯ ಪದತಲದಲ್ಲಿಟ್ಟು, "ಇದು ನನ್ನ ಮಗನದು, ಇದು ನನ್ನ ಗೆಳತಿಯದು" ಎನ್ನುತ್ತ ಇನ್ನೂ ಹೆಚ್ಚು ಕೊಡಬೇಕು ಎನಿಸುತ್ತದೆ. ಆದರೆ ನಮ್ಮ ಬಡತನಕ್ಕೆ ಇಷ್ಟೇ ಸಾಧ್ಯ ಎಂದಳು ಆಕೆ. ಗಾಂಧೀಜಿ ಹೇಳಿದರು "ಒಂದೇ ರೂಪಾಯಿ ಆದರೂ ಸಾಕಾಗಿತ್ತು. ಕೊಟ್ಟಿದ್ದು ಹೃದಯಪೂರ್ವಕ ಕೊಡುತ್ತಿದ್ದೀಯಲ್ಲ. ಆದರೆ ನನಗೆ ಬೇರೆ ಏನಾದರೂ ಕೊಡಬಹುದಲ್ಲ. ನಿನ್ನ ಮಗಳಿಗೆ ಇಷ್ಟರಲ್ಲೆ ಮದುವೆ ಆಗುತ್ತದೆ. ನಿನ್ನ ಅಳಿಯ ಈಗ ಏನೂ ಮಾಡುತ್ತಿಲ್ಲ (ಆತನೂ ಬಂದಿದ್ದ). ನಿನ್ನ ಮಗಳನ್ನೂ ಅಳಿಯನನ್ನೂ ಖಾದಿ ಕೆಲಸಕ್ಕೆ ನನಗೆ ಕೊಟ್ಟುಬಿಡು. ನಾನು ತಮಾಷೆ ಮಾಡುತ್ತಿಲ್ಲ, ದಕ್ಷಿಣ ಆಫ್ರಿಕಾದಿಂದ ನಾನು ಹೊರಟುಬರುವಾಗ, ಬೀಳುಕೊಡುವ ಸಮಾರಂಭದಲ್ಲಿ ಅನೇಕ ಸ್ನೇಹಿತರು ಏನೇನೋ ಉಡುಗೊರೆ ಕೊಟ್ಟರು. ಆಗ ಶ್ರೀ ನಾಯಿಡು ಎದ್ದು ನಿಂತು "ನನ್ನ ನಾಲ್ಕು ಜನ ಮಕ್ಕಳನ್ನು ನಾನು ಗಾಂಧೀಜಿಗೆ ಕಾಣಿಕೆಯಾಗಿ ಸಲ್ಲಿಸುತ್ತೇನೆ" ಎಂದರು. ಅವರು ನನ್ನ ಜೊತೆಯಲ್ಲಿ ಭಾರತಕ್ಕೆ ಬಂದರು". ಅದಕ್ಕೆ ಆ ಮಹಿಳೆ ಹಸನ್ಮುಖಿಯಾಗಿ ಖಂಡಿತವಾಗಿ ಇವರು ನಿಮ್ಮವರೇ" ಎಂದಳು. "ಅದು ಸರಿ. ಅವರು ಖಾದಿ ಕೆಲಸ ಮಾಡಬೇಕು" "ಆಗಲಿ ಅವರು ಖಾದಿ ಕೆಲಸವನ್ನೇ ಮಾಡುತ್ತಾರೆ".

**ಬಂಡವಾಳ-ಕೂಲಿ:**

ನಂದಿಯಲ್ಲಾದರೂ ಗಾಂಧೀಜಿಗೆ ಬಂಡವಾಳ-ಕೂಲಿಯ ತಾಪತ್ರಯ ತಪ್ಪೀತು ಎಂದುಕೊಂಡಿದ್ದೆವು. ಆದರೆ ಇಬ್ಬರು ಗಿರಣಿ ಮಾಲಿಕರು ತಮ್ಮ ದುಃಖದ ಕಥೆಯನ್ನು ಬಂದು ಹೇಳಿದರು. ನಮ್ಮ ಗಿರಣಿಯ ಕೆಲಸಗಾರರು ಏಕೆ ಅತೃಪ್ತರಾಗಿದ್ದಾರೋ ನಮಗೆ ಗೊತ್ತಿಲ್ಲ. ನಮಗಂತೂ ಏನೂ ಲಾಭ ಇಲ್ಲ. ಆದರೂ ಅವರಿಗೆ ಲಾಭ ಕೊಡುತ್ತಿದ್ದೇವೆ. ನಾವು ಮಾಡದೆ ಇರುವುದು ಏನೂ ಇಲ್ಲ. ಆದರೂ ಅವರಿಗೆ ಅತೃಪ್ತಿ. ಅವರ ಹಿಂದೆ ನಿಂತು ಅವರನ್ನು ಆಡಿಸುವವರಂತೂ ಸಿಕ್ಕಿಯೇ ಸಿಗುತ್ತಾರೆ. ಹೀಗೆಯೇ ಗಾಂಧೀಜಿ ಹೇಳಿದರು. "ನನಗೆ ಅವರ ದೂರು ತಿಳಿಯುತ್ತದೆ. ಸೊಲ್ಲಾಪುರದಲ್ಲಿ ಕಲ್ಯಾಣಕಾರ್ಯ ಅದ್ಭುತವಾಗಿ ನಡೆಯುತ್ತಿದೆ. ಎಲ್ಲರಿಗೂ ಸೊಗಸಾದ ಮನೆ. ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದಾರೆ. ಅಲ್ಲಿಯೂ ಕೂಡ ಗಿರಣಿ ಕೆಲಸಗಾರರು ಅತೃಪ್ತರಾಗಿ ಇನ್ನೂ ಹೆಚ್ಚು ಬೇಡಿದರೆ ಏನೂ ಅಚ್ಚರಿಯಲ್ಲ. ಅವರ ಅತೃಪ್ತಿಯನ್ನು ತಗ್ಗಿಸಲು ಅಲ್ಲಿನ ಆಡಳಿತಗಾರರು ಹಲವು ಉಪಾಯಗಳನ್ನು ಮಾಡಿದ್ದಾರೆ. ನೀವು ಅವರ ಸಂಗಡ ಸಮಾಲೋಚಿಸಿ ನೋಡಿ. "ಆಗಲಿ ಮಾತನಾಡುತ್ತೇನೆ. ಆದರೆ ಯಾವ ರೀತಿಯಲ್ಲಿ ನಮ್ಮ ಜನಕ್ಕೆ ಏಕೆ ಅತೃಪ್ತಿ ಉಂಟಾಗಿದೆಯೋ ತಿಳಿಯದು".

"ನಾನು ಬಂಡವಾಳಗಾರ ಆಗಿದ್ದರೆ, ಒಂದು ದಿನವೂ ನನ್ನ ಉದ್ಯೋಗವನ್ನು ಮುಂದುವರಿಸುತ್ತಿರಲಿಲ್ಲ. ನನ್ನ ಕೆಲಸಗಾರರು ತಮ್ಮ ಶೋಷಣೆ ಆಗುತ್ತಿದೆ. ತಮಗೆ ಸಿಗಬೇಕಾದ ಕನಿಷ್ಠ ಮಿತಿಯ ಅನುಕೂಲಗಳು ಸಿಕ್ಕಿಲ್ಲ ಎನಿಸಿದರೆ ನಾನಂತೂ ಮುಂದುವರಿಸುವುದಿಲ್ಲ. ನನಗೆ ಸ್ವಲ್ಪ ಬಲ ಬರಲಿ, ಆಮೇಲೆ ನಿಧಾನವಾಗಿ ಮಾತಾಡೋಣ" ಎಂದರು ಗಾಂಧೀಜಿ.

ಇನ್ನೊಬ್ಬ ಬಂದ. ಆತ ಗಿರಣಿ ಮಾಲೀಕನಲ್ಲ. ಆದರೆ ಗಿರಣಿಯ ಕೆಲಸಗಾರರ ಸಂಪರ್ಕ ಇಟ್ಟುಕೊಂಡವ. "ಕೆಲಸಗಾರರಿಗೆ ಬಟ್ಟೆ ಬಹಳ ಬೇಗ ಹರಿಯುತ್ತದೆ. ಆದ್ದರಿಂದ ಖಾದಿ ಬಟ್ಟೆಗಿಂತ ಗಿರಣಿ ಬಟ್ಟೆಯೇ ಅಗ್ಗ ಎನಿಸುತ್ತದೆ. ಖಾದಿಯನ್ನು ಕೆಲಸಗಾರರು ತೊಡುವಂತೆ ಏನು ಮಾಡಬೇಕೋ ಗೊತ್ತಿಲ್ಲ" ಎಂದ. 'ಖಾದಿ ಬಟ್ಟೆಯನ್ನು ಕೊಂಡು ಸ್ವಲ್ಪ ಅಗ್ಗವಾಗಿ ಮಾರಬೇಕು' ಎಂದರು ಗಾಂಧೀಜಿ. 'ಅವರಿಗೆ ಒಳ್ಳೆಯ ಖಾದಿ ಬೇಕಾದರೆ ಅವರೇ ಸ್ವತಃ ನೂಲುವಂತೆ ಮನ ಒಲಿಸಬೇಕು. ಒಳ್ಳೆಯ ನೂಲು ನೂಲಲಿ. ಅವರಿಗೆ ಅದನ್ನು ನೇಯಿಸಿ ಕೊಡಬಹುದು. ತನ್ನ ಜನರನ್ನು ಸಂತೋಷವಾಗಿ. ತೃಪ್ತರು ಆಗಿ ಇಡಬೇಕು ಎಂದರೆ ಹಲವಾರು ಮಾರ್ಗಗಳು ಇವೆ. ಲಿವರ್ ಬ್ರದರ್ಸ್ ಗೊತ್ತೇ ನಿಮಗೆ? ಪೋರ್ಟ್‌ಸನ್ ಲೈಟ್ ಎಂಬುದೆ ಆದರ್ಶ ಜಿಡಾರ. ಆ ಗೆಳೆಯ ಸೂಚನೆಗಾಗಿ ಬಂದಿರಲಿಲ್ಲ. ಗಾಂಧೀಜಿ ಸಂಗಡ ಚರ್ಚೆ ಮಾಡುವ ಸಂತೋಷಕ್ಕಾಗಿ ಬಂದಿದ್ದ. ಆತ ಕೇಳಿದ ಇನ್ನೊಂದು ಪ್ರಶ್ನೆ ಹಾಗೇ ಇತ್ತು - ಫೋರ್ಡ್ ಅಂತ ಒಬ್ಬ ಬಂಡವಾಳಗಾರ ಒಂದು ಗಿರಣಿ ಹಾಕಿ. ತನ್ನ ಕೂಲಿಗಾರರನ್ನು ಆದರ್ಶ ಸ್ಥಿತಿಯಲ್ಲಿ ಇಟ್ಟರೆ ಆಗ ಅದೇ ಗಿರಣಿಯಲ್ಲಿ ತಯಾರಾದ ಬಟ್ಟೆಗಳನ್ನು ಉಪಯೋಗಿಸಬಹುದಲ್ಲವೇ?'

'ಅಲ್ಲಿ ನಮ್ಮ ನೂಲುವ ಚಳವಳಿ ಗಿರಣಿ ಕೂಲಿಗಾರರ ದುರ್ದೆಶೆಯನ್ನು ಅವಲಂಬಿಸಿಲ್ಲ. ಹಸಿದು ಕಂಗಾಲಾಗಿರುವ ನಮ್ಮ ಬಡ ಕೋಟಿ ಕೋಟಿ ಜನಕ್ಕೆ ಗಿರಣಿಗಳು ಉದ್ಯೋಗ ಕೊಡಲಾರವು ಎಂಬ ಮಾತು ಈ ಚಳವಳಿಗೆ ಆಧಾರ. ಎಷ್ಟೇ ಆದರ್ಶ ರೀತಿಯಲ್ಲಿ ದೇಶಾದ್ಯಂತ ಗಿರಣಿಗಳ ಒಂದು ಬಲೆಯನ್ನೇ ಹಬ್ಬಿಸಿದರೂ ಬಡಜನರ ಸಮಸ್ಯೆ ಪರಿಹಾರ ಆಗದು.

**ನೂಲುವ ಶಾಸನ ಸಭಾ ಸದಸ್ಯ:**

ಈ ವಾರ ದರ್ಶಕರೂ ಹೆಚ್ಚು. ಖಾದೀಧಾರಿಗಳೂ ಹೆಚ್ಚು. ಅವರ ಪೈಕಿ ಚಿತ್ತೂರಿನ ಶ್ರೀ ಸಿ. ದೊರೆಸ್ವಾಮಿ ಅಯ್ಯಂಗಾರ್ಯರು (ಎಮ್.ಎಲ್.ಎ.) ಮುಖ್ಯರು. ಹಿಂದಿನ ಕಾಲದಿಂದಲೂ ಅವರು ಖಾದಿಧಾರಿಗಳು. ಕಾಂಗ್ರೆಸ್ ಸದಸ್ಯರಿಗೆ ನೂಲುವುದು ಕಡ್ಡಾಯ ಎಂದು ಮಾಡಿದಾಗ ಅವರು ನೂಲುವುದನ್ನು ಮೊದಲು ಮಾಡಿದರು. ಅಂದಿನಿಂದಲೂ ಅವರು ನೂಲುತ್ತಲೇ ಇದ್ದಾರೆ. ತಮ್ಮಲ್ಲಿದ್ದ ಕೆಲವು ಅತ್ಯುತ್ತಮ ಹಂಜಿಗಳನ್ನು ಗಾಂಧೀಜಿಗೆ ಅರ್ಪಿಸಿದರು.

'ಇದು ನೀವೋ ಮಾಡಿದ್ದು?' ಇದು ಮೊದಲನೆಯ ಪ್ರಶ್ನೆ.

ಅಯ್ಯಂಗಾರ್ಯರು ಹೇಳಿದರು 'ಇಲ್ಲ ನಾನು ಮಾಡಿದ್ದಲ್ಲ. ನನ್ನ ಗೆಳೆಯ ಒಬ್ಬ ನನಗಾಗಿ ಮಾಡಿಕೊಡುತ್ತಾನೆ.'

'ದಿನವೂ ಎಷ್ಟು ಹೊತ್ತು ನೂಲುತ್ತೀರಿ? ಎಷ್ಟು ದಾರ? ಒಂದು ಗಂಟೆಯೋ, ಅರ್ಧ ಗಂಟೆಯೋ?'

'ಅರ್ಧ ಗಂಟೆ. ಅದೂ ನಿಯಮಿತವಾಗಿ ಅಲ್ಲ. ಕೆಲವು ವೇಳೆ ಯಾವುದೋ ಕಾರಣಕ್ಕಾಗಿ ಅರ್ಧ ಗಂಟೆ ಕೂಡ ನೂಲಲಾಗುವುದಿಲ್ಲ. ಆ ಮೇಲೆ ಒಂದು ದಿನ ಕೂತು, ಗಂಟೆಗಟ್ಟಲೆ ಕೂತು ಹಳೆಯ ಬಾಕಿಯನ್ನೆಲ್ಲ ತೀರಿಸಿಬಿಡುತ್ತೇನೆ'

'ಇದು ಸರಿಯಲ್ಲ. ದಿನದಲ್ಲಿ ಅರ್ಧ ಗಂಟೆ ಬಿಡುವು ಮಾಡಿಕೊಳ್ಳಲು ಆಗುವುದಿಲ್ಲವೇ?'

'ಕೆಲವು ಸಲ ನನ್ನ ಹತ್ತಿರ ರಾಟೆಯೇ ಇರುವುದಿಲ್ಲ'

'ನಿಮಗೆ ಮೋಟಾರು ಇಲ್ಲವೆ?'

'ಇದೆ. ಯಾವಾಗಲೂ ನನ್ನ ಸಂಗಡವೇ ಇರುತ್ತದೆ'

'ಹಾಗಿದ್ದರೆ ಸ್ವಲ್ಪವೂ ಕಷ್ಟ ಆಗಬಾರದು. ನಿಮ್ಮ ಮೋಟಾರಿನಲ್ಲಿ ರಾಟೆಯನ್ನು ಇಟ್ಟುಕೊಂಡು ಒಯ್ಯಬಹುದಲ್ಲ.'

'ಒಯ್ಯುತ್ತೇನೆ. ಆದರೆ ಕೆಲವು ಸಲ ನನ್ನ ಹಿಂದೆ ಬರುವ ಗಾಡಿಯಲ್ಲಿ ಇರುತ್ತದೆ. ಆದರೆ ಇದು ಯಾವುದೂ ನೆಪ ಅಲ್ಲ, ಬಲ್ಲೆ. ನೂಲಬೇಕು ಎನ್ನುವವನಿಗೆ ದಾರಿ ಸಿಕ್ಕೆ ಸಿಗುತ್ತದೆ.'

'ಹೌದು. ಈಗ ನಾನು ನೂಲುತ್ತಿಲ್ಲವೆ? ಅಂಥದೇ ಒಂದು ಮಡಿಸುವ ರಾಟೆ ತೆಗೆದುಕೊಳ್ಳಿ, ತಕಲಿಯಿಂದ ನೂಲುವುದು ಅತ್ಯುತ್ತಮ. ಅದನ್ನು ಎಲ್ಲಿ ಹೋದರೂ ಜೇಬಿನಲ್ಲಿ ಇಟ್ಟುಕೊಂಡು ಹೋಗಬಹುದು', ಕೊಡುವವನನ್ನೇ ಮತ್ತೆ ಮತ್ತೆ ಕೊಡು ಎಂದು ಕೇಳುವ ನಿಯಮ ಅಕ್ಷರಶಃ ಪಾಲಿಸಲಾಯಿತು.

**ಬರಲಿರುವ ಪುನರುಜ್ಜೀವನ:**

ಹೆಚ್ಚು ದರ್ಶಕರು ಮಾತ್ರವೇ ಅಲ್ಲ. ಅವರಲ್ಲಿ ವೈವಿಧ್ಯವೂ ಹೆಚ್ಚು. ಚಿಕ್ಕಬಳ್ಳಾಪುರದಲ್ಲಿ ೩೫ ವರ್ಷಗಳಿಂದಲೂ ಕೆಲಸ ಮಾಡುತ್ತಿರುವ ಒಬ್ಬ ವೃದ್ಧ ಪಾದ್ರಿ ಸ್ನೇಹಸಮ್ಮಿಲನಕ್ಕಾಗಿ ಬಂದಿದ್ದರು. ತಾನು ಒಂದು ಸಂಸ್ಥೆಯೇ ಆಗಿದ್ದೇನೆ ಎಂದ. ತಾನು ಮಾಡಿದ ಕೆಲಸದ ಬಗ್ಗೆ, ಕನ್ನಡದಲ್ಲೂ, ತೆಲುಗಿನಲ್ಲೂ ತಾನು ಮಾಡಿದ ಅಸಂಖ್ಯ ಧರ್ಮೋಪದೇಶಗಳ ಬಗ್ಗೆ ಆತನಿಗೆ ತುಂಬಾ ಹೆಮ್ಮೆ. ಗಾಂಧೀಜಿ ಕುಟೀರೋದ್ಯೋಗಗಳನ್ನು ಪುನರುಜ್ಜೀವನಗೊಳಿಸಿದ್ದಕ್ಕಾಗಿ ಒಂದು ಒಳ್ಳೆಯ ಮಾತು ಆಡಿದರು. ತನ್ನ ಮಿಶನ್ನಿನ ಶಾಖೆಗಳು ಮಾಡುತ್ತಿರುವ ಜರತಾರಿ ಉದ್ಯೋಗಗಳ ಬಗ್ಗೆ ಹೇಳಿದರು.

ಕೆಲವು ವರ್ಷಗಳ ಕೆಳಗೆ ಒಬ್ಬ ಹೆಂಗಸು-ಒಳ್ಳೆಯವಳು-ಇದನ್ನು ನಾಗರಕೋಯಿಲಿನಲ್ಲಿ ಪ್ರಾರಂಭ ಮಾಡಿದಳು. ಇದರಿಂದ ನಮ್ಮ ಜನಕ್ಕೆ ಯೋಗ್ಯ ರೀತಿಯಲ್ಲಿ ಜೀವನ ನಿರ್ವಾಹ ಆಗುತ್ತಿದೆ. ನಿಮಗೆ ಇದು ಗೊತ್ತೇ, ಗಾಂಧೀಜಿ?

'ನನಗೆ ಯಾರೋ ಹೇಳಿದರು. ಅದನ್ನು ಟೀಕಿಸದೆ ಇರಲು ಆಗಲಿಲ್ಲ.'

ಆ ಗೆಳೆಯನಿಗೆ ಅಚ್ಚರಿ ಆಯಿತು. 'ಏಕೆ? ಇದು ನಿಜವಾಗಿಯೂ ಒಂದು ಕುಟೀರೋದ್ಯೋಗ. ಪ್ರತಿ ವರ್ಷವೂ ೫ ಲಕ್ಷ ರೂಪಾಯಿನ ಜರತಾರಿಯನ್ನು ಹೊರಗೆ ಕಳಿಸುತ್ತೇವೆ. ಇದರಿಂದ ದೇಶಕ್ಕೆ ದುಡ್ಡು ಬರುತ್ತದೆ.'

'ಈ ಉದ್ಯೋಗವನ್ನು ಅವರ ಮುಂದೆ ಮಂಡಿಸಿದಾಗ ಕೇವಲ ನಿಮ್ಮ ಜನರ ಯೋಚನೆಯನ್ನೇ ಮಾಡಿದಿರಿ ನೀವು. ನಮ್ಮ ಬಡ ಜನ ಕೋಟಿಕೋಟಿಯನ್ನು ಕುರಿತು ಯೋಚಿಸಲಿಲ್ಲ. ಈ ಜರತಾರಿಯನ್ನು ಪರದೇಶಕ್ಕೆ ಕಳುಹಿಸಬೇಕೆಂದು ನೀವೇ ಹೇಳುತ್ತೀರಿ. ಅದಕ್ಕೆ ನಿಮ್ಮಲ್ಲಿ ಗಿರಾಕಿ ಇಲ್ಲ ಎಂದಾಯಿತು. ನನ್ನ ಅಭಿಪ್ರಾಯ ಹೀಗೆ. ಹೊರ ದೇಶದ ಗಿರಾಕಿಯನ್ನು ಅವಲಂಬಿಸಿದ ಯಾವ ಉದ್ಯೋಗವೂ-ದೊಡ್ಡ ಪ್ರಮಾಣದ್ದಾದರೆ-ಒಳ್ಳೆಯದಲ್ಲ. ಜರತಾರಿ ಮಾಡಿ ಎಂದು ನಮ್ಮ ಜನಕೋಟಿಗೆ ಹೇಳಬಲ್ಲಿರೇನು ನೀವು? ನಮ್ಮ ದೇಶದಲ್ಲಿ ಸರ್ವತ್ರ ಉಪಯೋಗವಾಗುವ ಪದಾರ್ಥವನ್ನು ಉತ್ಪತ್ತಿ ಮಾಡುವ ಉದ್ಯೋಗವನ್ನು ಅವರಿಗೆ ಹೇಳಬೇಕು'

'ಸರಿ ತಿಳಿಯಿತು. ಈ ದೇಶದಲ್ಲಿ ಒಂದು ಪುನರುಜ್ಜೀವನ ಬರುತ್ತಿದೆ' ಭಾರತ ಅತ್ತ ಕಡೆ ನಿಧಾನವಾಗಿ ಸಾಗಿಸುತ್ತಿದೆ ಎಂದು ನಿಮಗೆ ಅನಿಸುವುದಿಲ್ಲವೆ?'

'ಹೌದು ಅನಿಸುತ್ತದೆ. ಅದಕ್ಕಾಗಿಯೇ ನಾವು ಕೆಲಸ ಮಾಡುತ್ತಿದ್ದೇವೆ' ' ಸರಿ ನಾವು ಪುನರುಜ್ಜೀವನಕ್ಕಾಗಿ ಕೆಲಸ ಮಾಡುತ್ತಿದ್ದೇವೆ.'

ಮುಗುಳು ನಗುತ್ತ ಗಾಂಧೀಜಿ ಹೇಳಿದರು. 'ಆದರೆ ನಾವೀಗ ಒಂದು ಸಂದಿಗ್ಧ ವಿಷಯ ವನ್ನು ಕೆದಕುತ್ತಿದ್ದೇವೆ.'

ಆ ಪಾದ್ರಿ ಈ ಮಾತನ್ನು ಅರ್ಥ ಮಾಡಿಕೊಂಡು 'ಇಲ್ಲ ದೇವರು ಸಂಶಯಾಸ್ಪದ ಅಲ್ಲ. ನಾವು ಒಬ್ಬನೇ ದೇವರನ್ನು ಪೂಜಿಸುತ್ತೇವೆ. ವಿಧಾನ ಬೇರೆ ಬೇರೆ ಅಷ್ಟೆ.'

'ಅದು ಸರಿ. ಆದರೂ ಕಲ್ಕತ್ತೆಯಿಂದ ಒಬ್ಬ ಗೆಳೆಯ ನನಗೆ ಬರೆದಿದ್ದಾನೆ : ಏಸುವೇ ನನ್ನ ಉದ್ಧಾರಕ ಎಂದು. ನಾನು ಏಸುವನ್ನು ನಂಬಿ ಆತನನ್ನು ಅಂಗೀಕರಿಸುವವರೆಗೆ ನಾನು ಮಾಡಿದ್ದೆಲ್ಲ ವ್ಯರ್ಥ ಮತ್ತು ಅಪೂರ್ಣವಂತೆ.'

"ಅಮುಖ್ಯವಾದ ಮಾತನ್ನು ಆಲೋಚಿಸುತ್ತ ನಿಜವಾದುದನ್ನೇ ಕಡೆಗಣಿಸುವ ಜನ ಇದಾರಲ್ಲ. ಇದು ನಮ್ಮ ದುರದೃಷ್ಟ. ನೀವು ಮಾಡಿದ ಕೆಲಸ ಅಪಾರ. ನಾವು ಎಲ್ಲರೂ ಎಷ್ಟು ಮಟ್ಟಿಗೆ ನಂಬುತ್ತೇವೋ, ನೀವು ಅಷ್ಟು ಮಟ್ಟಿಗೆ ನಂಬುತ್ತೀರಿ ಈ ಸೂತ್ರವನ್ನು. ಪರಿಶುದ್ಧ ಹೃದಯರೇ ಪುಣ್ಯಾತ್ಮರು. ಅವರೇ ದೇವರನ್ನು ನೋಡಬಲ್ಲರು. ನಿಮ್ಮ ಸೇವೆ ಬಲು ದೊಡ್ಡದು. ಜನರ ಮನಸ್ಸನ್ನು ಐಹಿಕದಿಂದ ಪಾರಮಾರ್ಥಿಕದ ಕಡೆ ತಿರುಗಿಸಿದ್ದೀರಿ. ಕಳೆದು ಹೋದುದನ್ನು ಮತ್ತೆ ತರಲು ಮತ್ತು ಕಾಪಾಡಲು ಭಗವಂತ ಬಂದನಂತೆ. ನಿಮ್ಮ ಪ್ರಯತ್ನವೂ ಅದೇ ದಾರಿಯದು. ಮಾನವ ಚೈತನ್ಯವೂ ತನ್ನ ಸತತ ಪ್ರಯತ್ನದಿಂದ ದೇವ ಚೈತನ್ಯದೊಂದಿಗೆ ಸಂಪರ್ಕ ಹೊಂದಬಲ್ಲುದು ಎಂಬುದನ್ನು ನೀವು ತೋರಿಸಿ ಕೊಟ್ಟಿದ್ದೀರಿ. ಜನರಲ್ಲಿ ನೆಲೆಗೊಂಡಿದ್ದ ಆಲಸ್ಯ ಅಮಲುಗಳನ್ನು ಕಳೆದು, ಅವರಲ್ಲಿ ಚೇತನ ತುಂಬಿದ್ದೀರಿ. ಅದೃಷ್ಟ ಎಂದು ಇರುವ ಪರಿಸ್ಥಿತಿಯಲ್ಲಿ ತೃಪ್ತರಾಗುವ ಸೋಮಾರಿತನವನ್ನು ಅಲುಗಾಡಿಸಿದ್ದೀರಿ. ಮೂಲ ವಿಷಯಗಳನ್ನೇ ಕೆದಕಿದ್ದೀರಿ. ಒಂದು ಪುನರುಜ್ಜೀವನಕ್ಕಾಗಿ ನಾವು ಕೆಲಸ ಮಾಡು ತ್ತಿರುವುದು ಖಂಡಿತ. ಏಸುವಿನ ಮಹತ್ತಾದ ವ್ಯಕ್ತಿಮತ್ತೆಯನ್ನು ನಿಕಟವಾಗಿ ಕಾಣುವ ಅಗತ್ಯ ಭಾರತಕ್ಕೆ ಬಹಳವಾಗಿದೆ." ಮತ್ತೆ ಆ ಪಾದ್ರಿಯು ಅದೇ ಸಂಶಯಾಸ್ಪದ ವಿಷಯದೊಂದಿಗೆ ತನ್ನ ಮಾತು ಮುಗಿಸಿದ.

**ಮದರಾಸಿನ ವಕೀಲರು:**

ಮದರಾಸ್ ವಿಶ್ವವಿದ್ಯಾಲಯದ ಕಾನೂನು ಪರೀಕ್ಷೆಯ ಮಂಡಲಿಯ ಸಭೆ ಬೆಂಗಳೂರಿನಲ್ಲಿ ಆಯಿತು. ಅವರೂ ಒಂದು ಸಂಜೆ ಇಲ್ಲಿಗೆ ಬಂದಿದ್ದರು. ಅವರನ್ನು ಪರಿಚಯ ಮಾಡಿಕೊಡುತ್ತ ಶ್ರೀ ರಾಜಗೋಪಾಲಚಾರಿಯವರು, ಮದರಾಸಿನ ವಕೀಲರು ನಮಗೆ ತುಂಬಾ ಒಳ್ಳೆಯದನ್ನು ಮಾಡಿದ್ದಾರೆ ಎಂದರು. ಅವರಲ್ಲಿ ಕೆಲವರು ಖಾದಿ ತೊಟ್ಟಿದ್ದರು. ಎಲ್ಲರ ಉಡುಪೂ ಸರಳ ಆಗಿತ್ತು. ಉಳಿದ ಕಡೆಯ ಹಾಗೆ ಆಡಂಬರದ್ದು ಅಲ್ಲ. 'ಏನು ಒಳ್ಳೆಯದು ಮಾಡಿದ್ದಾರೆ? ಖಾದಿ ತೊಟ್ಟಿದ್ದಾರೋ ಅಥವಾ ಹಣ ಕೊಟ್ಟಿದ್ದಾರೊ?

'ಎರಡೂ' ಎಂದರು ರಾಜಗೋಪಾಲಚಾರಿಯವರು.

'ಬಹಳ ಒಳ್ಳೆಯದು. ಇತರ ಪ್ರಾಂತಗಳ ವಕೀಲರು ಹೀಗಿಲ್ಲ'

ಮುಂದೆ ಮಾತು ಆಡಿದ ಮೇಲೆ ಇತರ ಕಡೆ ವಕೀಲರಿಗಿಂತ ಖಾದಿಯನ್ನು ಪ್ರೋತ್ಸಾಹಿಸುವ ವಿಷಯದಲ್ಲಿ ಮದರಾಸಿನ ವಕೀಲರು ಬಹಳ ವ್ಯವಹಾರ ಚತುರರು ಆಗಿದ್ದಾರೆ ಎಂದು ತಿಳಿದುಬಂತು. ಕೆಲವರು ಖಾದಿ ತೊಡುತ್ತಾರೆ, ಖಾದಿ ಮೇಲಂಗಿಯನ್ನೂ ತೊಡುತ್ತಾರೆ. ಕೆಲವರು ಪರದೇಶಿ ಬಟ್ಟೆ ಉಟ್ಟರೂ ಖಾದಿ ಮೇಲಂಗಿಯನ್ನು ತೊಡುತ್ತಾರೆ. ಯಾಕೆಂದರೆ ಖಾದಿ ಮೇಲಂಗಿಯ ಬೆಲೆ ೧೩½ ರೂಪಾಯಿ. ಇತರ ಮೇಲಂಗಿಯ ಬೆಲೆ ೩೫ ರೂಪಾಯಿ. ಖಾದಿ ರುಮಾಲು ಕೂಡ ಹೆಚ್ಚು ಬಳಕೆಯಲ್ಲಿವೆ. ಇದಕ್ಕೂ ಅದೇ ಕಾರಣ. ವಕೀಲರು ರೇಷ್ಮೆ ಮತ್ತು ಆಲ್ಪಾಕಾ ಉಡುಪಿನ ಮೋಹವನ್ನು ಬಿಟ್ಟು ಸಂಪೂರ್ಣವಾಗಿ ಖಾದಿಧಾರಿಗಳು ಆದರೆ ಎಷ್ಟು ಚೆನ್ನ! ಎಂದಿದ್ದರೂ ಇದು ಅಗ್ಗವೇ.

**ಬಡವರ ಕಾಣಿಕೆ:**

ಕೆಲವರು ದರ್ಶಕರು ಬಂದಿದ್ದರು. ಚಿಕ್ಕಬಳ್ಳಾಪುರದ ದಟ್ಟ ದರಿದ್ರ ಗುಂಪಿನವರು. ಕೆಲವು ಹಣ್ಣೂ ತಂದಿದ್ದರು. ಪ್ರಾರ್ಥನೆಯ ಸಮಯದಲ್ಲಿ ಗಾಂಧೀಜಿಗೆ ಅವನ್ನು ಅರ್ಪಿಸಬೇಕು ಎಂದು ಕಾದಿದ್ದರು. ಅವರನ್ನು ವಂದಿಸಿ 'ನಾವೇ ಇದನ್ನು ತಿನ್ನುವುದಕ್ಕಿಂತ ಅಸ್ಪೃಶ್ಯರಿಗೆ ಇದನ್ನು ಹಂಚಬಹುದಲ್ಲ' ಎಂದರು ಗಾಂಧೀಜಿ. ಈ ಮಾತನ್ನು ಅವರಿಗೆ ಹೇಳುವುದು ಯೋಗ್ಯವಲ್ಲ ಎಂದರು ರಾಜಗೋಪಾಲಚಾರಿಯವರು. ಆದರೆ ಗಾಂಧೀಜಿಯ ಬಯಕೆಯನ್ನು ಅವರಿಗೆ ತಿಳಿಸಿದರು. ಅವರ ಜೊತೆಯಲ್ಲಿದ್ದ ಅವರ ಗುರು 'ನಿಮ್ಮ ಮನಸ್ಸಿಗೆ ಬಂದ ಹಾಗೆ ಮಾಡಿ. ನಿಮ್ಮ ಶಿಷ್ಯರಿಗೆ ಹಂಚಿಬಿಡಿ' ಎಂದ.

'ನಮಗೆ ಎನ್ನುತ್ತಾನೆ ಆತ' ಎಂದರು ರಾಜಗೋಪಾಲಚಾರಿಯವರು. ಎಲ್ಲರೂ ಗೊಳ್ಳೆಂದು ನಕ್ಕರು.

'ಆದರೆ ಅಸ್ಪೃಶ್ಯರೇ ನನಗೆ ಶಿಷ್ಯರು ಎಂದು ಅವರಿಗೆ ಹೇಳಿ. ಅವರಿಗೆ ಹಂಚಬೇಕು'

ಅಷ್ಟು ಪ್ರೀತಿಯಿಂದ ಕೊಟ್ಟ ಪದಾರ್ಥವನ್ನು ಹಿಂತಿರುಗಿಸುವುದು ಉಚಿತ ಅಲ್ಲ ಎನಿಸಿತು ರಾಜಗೋಪಾಲಚಾರಿಯವರಿಗೆ. ಈ ಸೂಚನೆ ಅವರಿಗೆ ಸಮ್ಮತ ಆಗಲಾರದು ಎಂದರು.

'ನನಗೆ ಗೊತ್ತು, ನನಗೆ ಗೊತ್ತು. ಆ ಮಾವಿನ ಹಣ್ಣಿನ ಮೇಲೆ ನಿಮ್ಮ ದೃಷ್ಟಿ ಬಿದ್ದಿದೆ' ಎಂದರು ಗಾಂಧೀಜಿ.

**ಯಂಗ್ ಇಂಡಿಯಾ ೯-೬-೧೯೨೭) ಬೆಂಗಳೂರು:**

ಮುಂದಿನ ವಾರದ ಹೊತ್ತಿಗೆ ನಂದಿಬೆಟ್ಟದಿಂದ ಇಳಿದು ಗಾಂಧೀಜಿ ಬೆಂಗಳೂರಿಗೆ ಬಂದರು. ದಾರಿಯಲ್ಲಿ ಚಿಕ್ಕಬಳ್ಳಾಪುರದಲ್ಲಿ ಸ್ವಲ್ಪ ಹೊತ್ತು ತಂಗಿದ್ದರು. ಚಿಕ್ಕಬಳ್ಳಾಪುರದ ಜನಕ್ಕೆ ಸೂಚನೆ ಮೊದಲೇ ಕೊಟ್ಟಿರಲಿಲ್ಲ. ಆದರೂ ಅವರು ಶಕ್ತಿ ಮೀರಿ ಪ್ರಯತ್ನ ಮಾಡಿ

ಒಂದು ನಿಧಿಯನ್ನು ಕೂಡಿಹಾಕಿದರು. ಬೆಂಗಳೂರಿನ ಒಂದು ರಾಜೋಚಿತ ಸರಕಾರಿ ಅತಿಥಿ ಗೃಹದಲ್ಲಿ (ಈಗಿನ ಕುಮಾರ ಕೃಪ) ಗಾಂಧೀಜಿ ತಂಗಿದ್ದಾರೆ. ಹಿಂದೆ ದಿವಾನ ಶೇಷಾದ್ರಿ ಅಯ್ಯರರ ಮನೆ ಇದು. ಈಗ ಅದು ಸರ್ಕಾರದ್ದು. ಸರ್ ಹಂಟರ್, ಶೇಷಾದ್ರಿ ಅಯ್ಯರರನ್ನು ಹೀಗೆ ವರ್ಣಿಸಿದ್ದಾರೆ. 'ಅವರ ಬುದ್ಧಿ ಹರ್ಬರ್ಟ್ ಸ್ಪೆನ್ಸರ್‌ಗೆ ಅರ್ಪಿತ. ಅವರ ಹೃದಯ ಪರಬ್ರಹ್ಮನಿಗೆ. ಇಂಥ ಬುದ್ಧಿ ಮುತ್ಸದ್ದಿ ಇವರು. ಗಾಳಿ ಬಹಳ ಸುಖಕರ. ತಂಪು ಆಗಿದೆ. ದರ್ಶಕರು ಇಲ್ಲಿ ಹೆಚ್ಚು ಆದರೂ ಗಾಂಧೀಜಿಗೆ ಸಾಕಷ್ಟು ವಿಶ್ರಾಂತಿ ದೊರೆಯುತ್ತಿದೆ'.

**ಪ್ರಾರ್ಥನಾ ಸಭೆಗಳು:**

ನಾವು ಬೆಂಗಳೂರಿಗೆ ಬಂದಾಗಿನಿಂದ ದಿನವೂ ಸಂಜೆಗೆ ಸಾಯಂಕಾಲದ ಪ್ರಾರ್ಥನೆ ಹೊತ್ತಿಗೆ ಕೆಲವರು ಬರುತ್ತಿದ್ದಾರೆ. ಪ್ರಾರ್ಥನೆಯಲ್ಲಿ ಭಾಗವಹಿಸುತ್ತ ಈ ಗುಂಪು ದಿನೇ ದಿನೇ ಬೆಳೆಯುತ್ತಿದೆ. ನನಗೇನೋ ಚಿಂತೆ. ಕಡೆಗೆ ಒಂದು ದಿನ ಪ್ರಾರ್ಥನೆ ಮುಗಿದ ಮೇಲೆ ಗಾಂಧೀಜಿ ಕೆಲವು ಹಿತವಚನಗಳನ್ನು ಆಡಿದರು. ನಾನು ಹೇಳುವುದನ್ನು ನೀವು ಸ್ವಲ್ಪ ತಾಳ್ಮೆಯಿಂದ ಕೇಳಿಕೊಳ್ಳಬೇಕೆಂದು ನನ್ನ ಬಯಕೆ. ಸುತ್ತ ಗುಂಪು ಕಟ್ಟಬಾರದು. ನಾನು ಸಂಜೆಗೆ ಗಾಳಿ ಸೇವನೆಗೆ ಹೋಗುವಾಗ ನನ್ನ ಹಿಂದೆ ಹಿಂದೆ ಬರಬಾರದು. ನಾನು ಇನ್ನೂ ರೋಗಿ. ನನ್ನ ಧ್ವನಿ ಇನ್ನೂ ಸುಧಾರಿಸಬೇಕಾಗಿದೆ. ಶಕ್ತಿಯೂ ಬರಬೇಕು. ಇಲ್ಲಿ ವಿಶ್ರಾಂತಿಗಾಗಿ ಬಂದಿದ್ದೇನೆ. ನನಗೆ ಗುಣವಾದ ಮೇಲೆ ನನ್ನ ಕೈಲಾದ ಸೇವೆಯನ್ನು ಮೈಸೂರಿನ ಜನತೆಗೆ ಮಾಡುತ್ತೇನೆ. ಆದ್ದರಿಂದ ನನಗೆ ಎಷ್ಟು ವಿಶ್ರಾಂತಿ ಬೇಕೋ ಅಷ್ಟನ್ನೂ ಕೊಡಿ. ಶಾಂತವಾಗಿ ನಾನು ತಿರುಗಾಡಲು ಹೊರಟಾಗ ನೀವು ತೊಂದರೆ ಕೊಡಬೇಡಿ. ಇದಿಷ್ಟೂ ನನ್ನ ವಿಷಯಕ್ಕೆ. ಇನ್ನು ನಿಮ್ಮ ಬಗ್ಗೆ ಹೇಳುತ್ತೇನೆ. ನೀವು ಯಾವ ಪಂಥಕ್ಕೆ ಸೇರದಿದ್ದರೂ ಚಿಂತೆಯಿಲ್ಲ. ಪ್ರಾರ್ಥನೆಯಲ್ಲಿ ಸೇರಿಕೊಳ್ಳಬಹುದು. ಒಂದೆರಡು ನಿಯಮ. ನೀವು ಪ್ರಾರ್ಥನೆಗೆ ಬರುವಾಗ ಅನುಕೂಲ ಮನಸ್ಸು, ಅನುಕೂಲ ಹೃದಯ ಇರಲಿ; ಹಿಂದೂ, ಮುಸ್ಲಿಮ್, ಕ್ರಿಸ್ತಾನ ಮುಂತಾದ ಯಾವುದೇ ಪಂಥದವರೇ ಆಗಲಿ ಎಲ್ಲರೂ ಪ್ರಾರ್ಥನೆಯಲ್ಲಿ ಭಾಗವಹಿಸಬಹುದು. ಶ್ಲೋಕಗಳ ಪಠಣವಾದ ಮೇಲೆ 'ರಘುಪತಿ ರಾಘವ ರಾಜಾರಾಂ ಪತಿತ ಪಾವನ ಸೀತಾರಾಮ್' ಭಜನೆ ಮಾಡುತ್ತೇನೆ. ಧ್ವನಿ ಕೂಡಿಸಬೇಕೆನ್ನುವವರೆಲ್ಲ ಭಾಗವಹಿಸಬಹುದು. ಅದರಿಂದ ನಮ್ಮ ಪ್ರಾರ್ಥನೆ ಹೆಚ್ಚು ಬಲಿಷ್ಠ ಆಗಿ, ನಮ್ಮ ಪ್ರಾರ್ಥನೆಗೆ ಕಿವಿಗೊಡುವ ಭಗವಂತ ಒಬ್ಬ ಇದ್ದರೆ ಆತನನ್ನು ಸಂತೋಷಗೊಳಿಸಬಹುದು. 'ಪತಿತಪಾವನ ಸೀತಾರಾಂ' ಏನೋ ನಿಮಗೆ ಗೊತ್ತಿದೆ. ದೀನದಲಿತ ಪತಿತರನ್ನು ಕಾಪಾಡುವ ದೇವರನ್ನು ನಾವು ಪ್ರಾರ್ಥಿಸುತ್ತೇವೆ. ಆದ್ದರಿಂದ ನೀವು ಖಾದಿ ಧರಿಸಿ ಬನ್ನಿ. ಏಕೆಂದರೆ ದೀನದಲಿತ ಪತಿತರೊಂದಿಗೆ ನಮ್ಮನ್ನು ಖಾದಿ ಜೋಡಿಸುತ್ತದೆ. ನಿಮಗೆ ಅವರಿಗೆ ಸಹಾಯ ಮಾಡಬೇಕೆಂಬ ಮನಸ್ಸು ಇದ್ದರೆ, ನೀವು ಯಾವ ಮತದವರೇ ಆಗಲಿ ಖಾದಿ ಧರಿಸಿ ಬನ್ನಿ. ಅದಕ್ಕಿಂತ ಕಣ್ಣಿಗೆ ಕಾಣುವ ಸಾಕ್ಷಿ ಬೇರೆ ಇಲ್ಲ. ಆ ಭಜನೆಯನ್ನು ಜಪಿಸಲು ಇಷ್ಟು ಮಾಡಿದರೆ ಸಾಕು. ನಿಮಗೆ ಅರ್ಹತೆ ಬರುತ್ತದೆ. 'ರಘುಪತಿ ರಾಘವ ರಾಜಾರಾಮ್, ಪತಿತ ಪಾವನ ಸೀತಾರಾಮ್' ಈ ಭಜನೆಯಲ್ಲಿ ಹಿಂದೂಗಳು, ಮುಸಲ್ಮಾನರು, ಮತ್ತು ಇನ್ನುಳಿದವರು ಎಲ್ಲರೂ ಸೇರಬಹುದು. ಇದೇನೂ

ರಾಜರ ಸ್ತೋತ್ರ ಅಲ್ಲ. ರಾಜಾಧಿರಾಜನ, ದೇವಾಧಿದೇವನ, ನಾವು ಎಲ್ಲರೂ ಪೂಜಿಸುವ ಭಗವಂತನ ಸ್ತೋತ್ರ.'

ಈಗ ಜನರ ಗುಂಪು ಐನೂರನ್ನೂ ಮೀರಿದೆ. ಎಲ್ಲರೂ ಶಾಂತಿಯಿಂದ ಇರುತ್ತಾರೆ. ಖಾದಿಯ ಸಂದೇಶ ಮಾತ್ರ ಎಲ್ಲರನ್ನೂ ಇನ್ನೂ ತಲುಪಿಲ್ಲ.

**ಮಾಲವೀಯರ ಭೇಟಿ:**

ಪಂಡಿತ ಮಾಲವೀಯರಿಗೂ ಆರೋಗ್ಯ ಸ್ವಲ್ಪ ಕೆಟ್ಟಿದೆ. ಅದಕ್ಕಾಗಿ ಅವರು ಉದಕಮಂಡಲಕ್ಕೆ ಹೋಗಿದ್ದಾರೆ. ಇಲ್ಲಿ ದಾರಿಯಲ್ಲಿ ಒಂದು ದಿನ ತಂಗಿದ್ದರು. ದಾರಿಯಲ್ಲಿ ಆರೋಗ್ಯದ ವಿಷಯ ಮಾತಾಡುತ್ತಿದ್ದರೆ ನಗೆ ಬರುತ್ತಿತ್ತು. ಇಬ್ಬರೂ ತಮ್ಮ ತಮ್ಮ ಆರೋಗ್ಯದ ಬಗ್ಗೆ ಬಹಳ ಎಚ್ಚರಿಕೆ ವಹಿಸಿದ್ದೇವೆ–ಎಂದುಕೊಂಡಿದ್ದಾರೆ. ಇನ್ನೊಬ್ಬರಿಗೆ ಎಚ್ಚರವಾಗಿರಲು ಹೇಳುತ್ತಾರೆ. ಯಾರದು ಹೆಚ್ಚು ತಪ್ಪು? ಕಾಗೆಯದೋ? ಕಾಡಿಗೆಯದೋ? ಈ ಕಥೆ ನೆನೆಪಿಗೆ ಬರುತ್ತದೆ. ಅವರು ಇಬ್ಬರೂ ತಮ್ಮ ತಮ್ಮ ದುಃಖಗಳನ್ನು ಹೇಳಿಕೊಳ್ಳುತ್ತಿದ್ದರೆ ಕೇಳುವುದು ಬಹಳ ಕಷ್ಟ ಆಗಿತ್ತು. ಮಾಲವೀಯರು ಹೇಳಿದರು: ಖಾದಿ ಪುಸ್ತಕದ ಎರಡು ಪ್ರಕರಣಗಳನ್ನು ಓದಿದ್ದೇನೆ. ನಮ್ಮ ಪುರಾತನ ಕೈಗಾರಿಕೆ ಹೇಗೆ ನಾಶ ಆಯಿತೋ ನನಗೆ ಗೊತ್ತಿದ್ದರೂ ಅದನ್ನು ಮತ್ತೆ ಮತ್ತೆ ಓದಬೇಕೆನಿಸಿತು. ಬೊಂಬಾಯಿಗೆ ಹೋದಾಗ ನನ್ನಲ್ಲಿ ಪ್ರತಿ ಇರಲಿಲ್ಲ. ಬೆಳಗಾಂವಿಗೆ ಬಂದು ಮತ್ತೊಂದು ಪ್ರತಿ ತೆಗೆದುಕೊಂಡೆ. ಮತ್ತೆ ಮೊದಲಿನಿಂದಲೂ ಓದಲು ಮೊದಲಿಟ್ಟೆ. ಎಂಥ ದುಃಖದಾಯಕ ಕಥೆ. ನಮ್ಮ ದೇಶದಲ್ಲಿ ಗಂಡಸರಿಗೂ ಹೆಂಗಸರಿಗೂ ಮಕ್ಕಳಿಗೂ ಎಲ್ಲರಿಗೂ ಈ ಕಥೆ ಮುಟ್ಟಬೇಕು. ಆಗ ಅವರು ತಮ್ಮ ನಿದ್ದೆಯಿಂದ ಎದ್ದು ತಮ್ಮ ಬಟ್ಟೆಯನ್ನು ತಾವೇ ಮಾಡಿಕೊಂಡಾರು. ದಿನದಿನವೂ ಖಾದಿಯ ಬಗೆಗೆ ನಿನ್ನ ಶ್ರದ್ಧೆ ಬಲಗೊಳ್ಳುತ್ತಿದೆ ಖಾದಿಯ ಬಗ್ಗೆ ನಮ್ಮ ಜನ ಸ್ಪಷ್ಟ ಸರಳ ಅರ್ಥ ಮಾಡಿಕೊಳ್ಳುತ್ತಿಲ್ಲವಲ್ಲ ಎಂದು ದಿನದಿನವೂ ನನ್ನ ದುಃಖ ಹೆಚ್ಚುತ್ತಿದೆ. ಸರಕಾರದ ನಾಣ್ಯ ವಿನಿಮಯ ಧೋರಣೆ ಅವರ ಹೃದಯವನ್ನು ಆಳವಾಗಿ ಚುಚ್ಚಿದೆ. 'ಎಷ್ಟು ಕಾಲ ನಾವು ಹೀಗೆ ಸುಮ್ಮನೆ ದೌರ್ಜನ್ಯಕ್ಕೆ ತುತ್ತಾಗಿ ನೋಡುತ್ತ ಇರಬೇಕು? ಒಂದರ ಮೇಲೆ ಒಂದು ತಪ್ಪನ್ನು ಹೇರುತ್ತಲೇ ಇದ್ದಾರಲ್ಲ? ಆದರೆ ಸರಕಾರದ ತಪ್ಪು ಅಷ್ಟು ಹೆಚ್ಚಾಗಿ ಅವರನ್ನು ಬಾಧಿಸುತ್ತಿರಲಿಲ್ಲ. ನಮ್ಮ ಜನರು ಈ ಬಗ್ಗೆ ತೋರುವ ಔದಾಸೀನ್ಯದ ಗಾಯವೇ ಬಲವಾಗಿತ್ತು. 'ನಮ್ಮ ಅಸ್ಪೃಶ್ಯತೆಯ ಪ್ರಶ್ನೆ ನೋಡಬಾರದೆ? ನಮ್ಮ ವಿಧವೆಯರ ಪರಿಸ್ಥಿತಿಯನ್ನು ನೋಡಬಾರದೆ? ಈಗ ನಾವು ಹೋಗುತ್ತಿರುವ ದಾರಿ ಆತ್ಮಹತ್ಯದ ದಾರಿ. ಇದನ್ನು ಹೇಗೆ ತಿಳಿಸಿಕೊಡಬೇಕು ನಮ್ಮ ಸಂಪ್ರದಾಯವಾದಿಗಳಿಗೆ–ನಮಗೆ ತಿಳಿದಿಲ್ಲ.

'ಈ ಶಾಸ್ತ್ರಿಗಳನ್ನೂ ಈ ಪಂಡಿತರನ್ನೂ ಅವರ ಪಾಡಿಗೆ ಅವರನ್ನು ಬಿಟ್ಟುಬಿಡೋಣ. ಸ್ವತಂತ್ರವಾಗಿ ನಾವೇ ಏನಾದರೂ ಮಾಡಿದರೆ ಆಗದೆ? ಎಂದು ಮಾಲವೀಯರನ್ನು ಕೇಳಬೇಕು ಎನಿಸಿತು. ಎಂದಿನಂತೆ ಅವರಿಗೆ ಆತ್ಮವಿಶ್ವಾಸ. ಸಂಪ್ರದಾಯದ ಕೋಟೆಯನ್ನು ಒಡೆದು, ಶಾಸ್ತ್ರ ವಾಕ್ಯಗಳನ್ನು ಹೆಚ್ಚು ಉದಾರ ಆಗಿ ಅರ್ಥಮಾಡಿಕೊಂಡು, ಸುಧಾರಣೆಯನ್ನು ಪ್ರಾರಂಭಿಸಬಹುದು' ಎಂದು.

**ರಾಜ್ಯದಲ್ಲಿ ನೂಲುವಿಕೆ:**

‘ಹಿಂದು’ ಸಂಪಾದಕ ಶ್ರೀನಿವಾಸನ್, ವಾಣಿಜ್ಯ ಶಾಖಾಧ್ಯಕ್ಷ ರಂಗನಾಥರಾವ್ ಸಾಹೇಬ್ ಇಬ್ಬರೂ ಬಂದಿದ್ದರು. ಶ್ರೀನಿವಾಸನ್ ಬಂದದ್ದು ಸುಮ್ಮನೆ ನೋಡಿಕೊಂಡು ಹೋಗಲಿಕ್ಕೆ. ಆದರೂ ಎದ್ದು ಹೋಗುವಾಗ ‘ಗಾಂಧೀಜಿ ನೀವು ರಾಜಕಾರಣಕ್ಕೆ ಮತ್ತೆ ಯಾವಾಗ ಬರುತ್ತೀರಿ?’ ಎಂದು ಕೇಳಿದರು. ನನಗೆ ಪಾರ ಕಂಡ ಕೂಡಲೆ ಅಥವಾ ಈಗ ನಡೆಸುತ್ತಿರುವ ಚಳವಳಿಯಲ್ಲಿ ಯಶಸ್ಸು ದೊರೆತಾಗ. ಇವತ್ತಿಗೂ ಯಶಸ್ಸು ಇದೆ. ಆರು ವರ್ಷಗಳ ಹಿಂದೆ ಉತ್ಪತ್ತಿಯಾದ ಖಾದಿಗಿಂತ ಇಪ್ಪತ್ತು ಪಟ್ಟು ಹೆಚ್ಚು ಉತ್ಪತ್ತಿ ಮಾಡುತ್ತಿದ್ದೇವೆ ಇವತ್ತು. ಇದು ಸಾಲದು ಬದುಕಿದ್ದರೆ ನಾನು ಮತ್ತೆ ರಾಜಕೀಯ ಕ್ಷೇತ್ರಕ್ಕೆ ಬರುತ್ತೇನೆ. ಆದರೆ ಅದು ಅಂತಿಮ ಸಂಗ್ರಾಮ. ಅದಕ್ಕೆ ಮೊದಲು ನಾವು ಏನನ್ನಾದರೂ ಮಾಡಿ ತೋರಿಸಬೇಕು. ಹಾಗೆ ಮಾಡಿ ತೋರಿಸುವುದೆಂದರೆ ನಮ್ಮ ಬಟ್ಟೆಯನ್ನು ನಾವೇ ಉತ್ಪಾದನೆ ಮಾಡಿಕೊಳ್ಳುವುದು’ ಎಂದರು ಗಾಂಧೀಜಿ.

ರಾಜ್ಯದ ಕಾರ್ಯಾಲಯದಲ್ಲಿ ರಾಟೆ ತಯಾರಾಗುತ್ತಿದೆ. ಅದನ್ನು ಗಾಂಧೀಜಿಗೆ ತೋರಿಸಿ ನೂಲುವಿಕೆಯನ್ನು ಹೇಗೆ ಜನಪ್ರಿಯಗೊಳಿಸಬೇಕು ಎಂಬುದನ್ನು ಚರ್ಚಿಸಲು ಬಂದಿದ್ದರು ರಂಗನಾಥರಾವ್ ಸಾಹೇಬ್. ಅವರಿಗೆ ಅದರಲ್ಲಿ ತುಂಬಾ ಆಸಕ್ತಿ. ನಿಧಾನವಾಗಿ ಎಲ್ಲವನ್ನೂ ಕೇಳಿದರು, ಚರ್ಚೆ ಮಾಡಿದರು. “ಇಂಥಾ ೧೫೦೦ ರಾಟೆಗಳನ್ನು ಮಾರಿದ್ದೇವೆ. ಇದರಲ್ಲಿ ಏನಾದರೂ ಸುಧಾರಣೆ ಮಾಡಬೇಕಾದರೆ ಹೇಳಿ. ಆಶ್ರಮದ ರಾಟೆಯ ಮಾದರಿ ಒಂದನ್ನು ರಾಜಗೋಪಾಲಾಚಾರ್ಯರಿಂದ ತೆಗೆದುಕೊಂಡಿದ್ದೇನೆ. ಇನ್ನು ಮೇಲೆ ಅದರಂತೆ ಮಾಡಿಸುತ್ತೇನೆ “ಪ್ರತಿಯೊಂದು ಚಿಕ್ಕ ಪುಟ್ಟ ಕ್ರಿಯೆಯೂ ಚರ್ಚೆಗೆ ಬಂತು. ರಾಟೆಗೆ ಸಂಬಂಧಪಟ್ಟ ತೀರ ಚಿಕ್ಕ ಪುಟ್ಟ ವಿವರಗಳನ್ನೂ ಗಾಂಧೀಜಿ ಚರ್ಚಿಸಿದರು. ಗಂಟು ಕಟ್ಟಿದ ಅರಳೆಯಿಂದ ಇವನ್ನು ಮಾಡಬೇಡಿ. ಜನರು ತಮ್ಮ ಹತ್ತಿಯನ್ನು ತಾವೇ ಪಿಂಜಿಕೊಳ್ಳಲಿ. ಯಂತ್ರದ ಪಿಂಜಣದಲ್ಲಿ ಹತ್ತಿಯ ಜೀವಾಳ ಹೋಗುತ್ತದೆ. ಕೈ ಪಿಂಜಣದಲ್ಲಿ ಅದು ಉಳಿಯುತ್ತದೆ.’

‘ನೂಲುವವರೇ ತಮ್ಮ ಹಂಜಿ ಮಾಡಿಕೊಳ್ಳಬೇಕೆ? ಶ್ರಮ ವಿಭಜನೆ ಇದ್ದರೆ ಒಳ್ಳೆಯದಲ್ಲವೆ?’

‘ಈ ಎರಡು ಕ್ರಿಯೆಗಳಲ್ಲಿ ಶ್ರಮ ವಿಭಜನೆ ಮಾಡಲೇ ಕೂಡದು. ಎರಡೂ ಒಂದಕ್ಕೊಂದು ಹೆಣೆದುಕೊಂಡಿವೆ. ರೊಟ್ಟಿ ಮಾಡಲು ಹಿಟ್ಟು ಹೇಗೋ ಹಾಗೆ.’

‘ತಿಳಿಯಿತು. ನೂಲುವುದರ ಜೊತೆಗೆ ಹಂಜಿ ಮಾಡುವುದನ್ನೂ ಕಲಿಸಬೇಕು. ನಾವು ಕಳಿಸಿದ ಪ್ರಚಾರಕರಿಗೆ ಎರಡೂ ಕ್ರಮಗಳು ತಿಳಿದಿವೆ. ಇಲ್ಲಿ ಪ್ರದರ್ಶನ ಮಾಡಿಸಬೇಕು ಎಂದು ಇದ್ದೀರಲ್ಲ ಅದು ಬಹಳ ದೊಡ್ಡ ಕೆಲಸ. ಬೇರೆ ಯಾವುದರಿಂದಲೂ ಸಿಗದಂಥ ಶಿಕ್ಷಣ ನಮ್ಮ ಜನರಿಗೆ ಇದರಿಂದ ಸಿಗುತ್ತದೆ.’

‘ಹತ್ತಿಯ ಬಗ್ಗೆ ತಮಗೇನಾದರೂ ಸುಚನೆ ಕೊಡುವುದಿದೆಯೆ?’

‘ಪ್ರತಿಯೊಂದು ಹಳ್ಳಿಯೂ ತನ್ನ ಹತ್ತಿಯನ್ನು ಬೆಳೆದುಕೊಳ್ಳಬೇಕು. ಈಗ ಸರಕಾರ

ರಫ್ತಿಗಾಗಿ ಹತ್ತಿ ಬೆಳೆಯನ್ನು ಕೇಂದ್ರೀಕರಿಸುತ್ತಿದೆ. ಇದು ತಪ್ಪಿ ಹಳ್ಳಿ ಹಳ್ಳಿಯಲ್ಲಿಯೂ ಹತ್ತಿ ಬೆಳೆಯುವಂತಾಗಿ ಅದು ವಿಕೇಂದ್ರೀಕೃತವಾಗಬೇಕು. ನನಗೆ ಕಂಡ ಸಂಸ್ಥಾನಾಧಿಕಾರಿಗಳಿಗೆಲ್ಲ ಹೇಳುತ್ತಿದ್ದೇನೆ; ನಮ್ಮ ದನವನ್ನೂ ನೂಲುವಿಕೆಯನ್ನೂ ನೀವೇ ಕಾಪಾಡಬೇಕು. ನಮ್ಮ ಜನ ತೀರಾ ಬಡವರು, ಬುದ್ಧಿ ಇಲ್ಲದವರು. ತಾವೇ ಏನನ್ನೂ ಮಾಡಿಕೊಳ್ಳಲಾರರು. ಆದ್ದರಿಂದ ಸಂಸ್ಥಾನ ಎಲ್ಲ ದನಗಳ ಯೋಗಕ್ಷೇಮವನ್ನು ವಹಿಸಿಕೊಳ್ಳಬೇಕು. ಜನರಿಗೆ ಶಾಸ್ತ್ರೀಯ ಗೋರಕ್ಷಣೆಯನ್ನು ಕಲಿಸಬೇಕು. ಹಳ್ಳಿಯ ಅರ್ಥಶಾಸ್ತ್ರವನ್ನು ಕ್ರಮವಾಗಿ ತಿಳಿಸಿಕೊಡಬೇಕು. ಇದರ ಫಲ ಬೇಗ ಕಾಣಬರುತ್ತದೆ. ಈ ಅರ್ಥಶಾಸ್ತ್ರದಿಂದ ಯಾರೂ ಲಕ್ಷಾಧೀಶರು ಆಗುವಂತಿಲ್ಲ. ಖಾದಿಯ ಮೂಲಕ ಲಕ್ಷಾಧೀಶರಾಗುವ ಅವಕಾಶ ಇಲ್ಲದ್ದರಿಂದ ಜನರಿಗೆ ಖಾದಿಯ ಬಗ್ಗೆ ಆಕರ್ಷಣೆ ಇಲ್ಲ. ಆರ್ಥಿಕ ದೃಷ್ಟಿಯಿಂದ ನಮಗೆ ಸರಿಸಮಾನತೆ ಬೇಕಾಗಿದೆಯೇ ಹೊರತು ಶ್ರೀಮಂತಿಕೆಯ ದೊಡ್ಡಸ್ತಿಕೆ ಅಲ್ಲ.

**ಮಾಡಿಕೊಳ್ಳಿ, ಕೊಳ್ಳಬೇಡಿ:**

ಈ ವಿಚಾರ ಜನರಲ್ಲಿ ಹರಡಲು ಸಮಯ ಬೇಕು. ಇವತ್ತು ಅವರಿಗೆ ಇದು ಗೊತ್ತೇ ಇಲ್ಲ. ಪ್ರಾರ್ಥನೆ ಗಾಂಧೀಜಿಗೆ ಇಷ್ಟ ಎಂದು ಜನ ಪ್ರಾರ್ಥನಾ ಸಭೆಗೆ ಬರುತ್ತಾರೆ. ಅವರ ಪ್ರಾರ್ಥನೆ ಅಂತರಾಳದಿಂದ ಬಂದದ್ದು ಎಂದು ಸೂಚಿಸಲು ಖಾದಿ ಧರಿಸಿ ಬನ್ನಿ ಎಂದು ಗಾಂಧೀಜಿ ಹೇಳಿದಾಗ ಅಚ್ಚರಿಯಿಂದ ಅವರು ಕಣ್ಣು ಕಣ್ಣು ಬಿಡುತ್ತಾರೆ. ಒಬ್ಬ ಮನುಷ್ಯ ಬಂದಿದ್ದ. ಪರದೇಶಿ ಉಡುಪು, ಪರದೇಶಿ ಥಾಟು. ಇಬ್ಬರು ಹುಡುಗರು ಬಂದಿದ್ದರು ಅವರ ಜೊತೆಯಲ್ಲಿ. ಅವರು ಗಾಂಧೀಜಿಗೆ ನೂಲನ್ನು ಸಮರ್ಪಿಸಿದರು. ಅವರ ತಾಯಿ ನೂತದ್ದು. 'ನಿಮ್ಮ ಮನೆಯಲ್ಲಿ ನೀವು ನೂಲು ನೂಲುತ್ತೀರಾ?' ಗಾಂಧೀಜಿ ಕೇಳಿದರು.

'ಹೌದು'

'ಖಾದಿ ಧರಿಸುವುದಿಲ್ಲ ಅಲ್ಲವೆ'

'ಹೌದು'

ಖಾದಿಯನ್ನು ಧರಿಸುವ ವಿಚಾರ ಅವರ ಗಮನಕ್ಕೆ ಬಂದಿಲ್ಲ. ಹೂವಿನ ಬದಲು ನೂಲು ತಂದರೆ ಆಯಿತು. ಖಾದಿ ಏಕೆ ಧರಿಸಬೇಕು ಎಂದು ಅವರ ಮನೋಭಾವ ಇರಬೇಕು.

ಒಂದು ದಿನ ವಿಜ್ಞಾನ ಮಂದಿರದ ಆವರಣದಲ್ಲಿ ಓಡಾಡುತ್ತಿದ್ದೆವು. ಹುಡುಗರಿಗೆ ಇದು ಹೇಗೋ ಗೊತ್ತಾಯಿತು. ಅವರು ಓಡಿ ಬಂದು ತಮ್ಮ ನಿಲಯಕ್ಕೆ ಬರಬೇಕೆಂದು ಗಾಂಧೀಜಿಯನ್ನು ಕರೆದರು.

'ನಿಮ್ಮನ್ನು ನೋಡಲು ಬಂದಿಲ್ಲ ನಾನು. ನಿಮ್ಮ ಮಂದಿರದ ಬಯಲನ್ನು ನೋಡಲು ಬಂದಿದ್ದೇನೆ' ಎಂದು ನಗುತ್ತ ಗಾಂಧೀಜಿ ಹೇಳಿದರು. ನೀವೆಲ್ಲರು ಖಾದಿ ತೊಟ್ಟು ಆಮಂತ್ರಿಸಿದರೆ ನಾನು ಬರುತ್ತೇನೆ' ಎಂದರು. ಅವರಲ್ಲಿ ಒಬ್ಬ ಹೇಳಿದ

'ನಮ್ಮಲ್ಲಿ ಕೆಲವರು ಖಾದಿ ತೊಡುತ್ತೇವೆ' 'ಸರಿ, ಎಲ್ಲರೂ ತೊಡಬಾರದೇಕೆ? ನಿಧಿಯನ್ನು ಸಂಗ್ರಹಿಸಿ ಒಂದು ದಿನ ಕರೆಯಿರಿ' 'ನಿಧಿ ಸಿದ್ಧ. ನಾಳೆಗೇ ನಾವು ಸಿದ್ಧ ಆಗಬಹುದು' ಎಂದರು. ನಿಧಿ ನಾಳೆಗೆ ಸಿದ್ಧ ಆಗಬಹುದು ಆದರೆ ಖಾದಿಯೋ?' 'ನಿಧಿಗೆ ನಾವು ಹಣ ಕೊಟ್ಟಿದ್ದೇವೆ. ಅದು ಖಾದಿಗೆ ಹೋಗುತ್ತದೆ ಎಂದ ಮೇಲೆ ನಾವೇಕೆ ಖಾದಿ ಹಾಕಬೇಕು' ಎಂದ ಒಬ್ಬ.

ನೇರಾಗಿ ಬಂತು ಉತ್ತರ 'ಏಕೆಂದರೆ ನಿಮ್ಮ ಸ್ವಾತಂತ್ರ್ಯವನ್ನು ನೀವು ದುಡಿದು ಗಳಿಸಿ ಕೊಳ್ಳಬೇಕು, ಅದನ್ನು ಕೊಂಡು ತರಕೂಡದು'

ಇಲ್ಲಿನ ಗಾಳಿ ಅತ್ಯುತ್ತಮ ಎನ್ನಲಿಕ್ಕೆ ಬೇರೆ ಸಾಕ್ಷಿಯೇ ಬೇಡ. ಬೊಂಬಾಯಿಯಿಂದ ಬಂದಾಗ ಮಾಳವೀಯರು ತುಂಬ ಇಳಿದುಹೋಗಿದ್ದರು. ಮೈಸೂರಿನಲ್ಲಿ ಒಂದು ವಾರ ಭಾಷಣ ಮಾಡಿಯೂ ಕೂಡ ಈಗ ತುಂಬ ಚೆನ್ನಾಗಿದ್ದಾರೆ. ಗಾಂಧೀಜಿ ಕೂಡ ಈಗ ತುಂಬ ಚೆನ್ನಾಗಿದ್ದಾರೆ. ಗಾಂಧೀಜಿ ಜುಲೈ ತಿಂಗಳಲ್ಲಿ ತಮ್ಮ ಪ್ರವಾಸವನ್ನು ಮುಂದುವರೆಸ ಬಹುದು ಎಂದು ವೈದ್ಯರು ಭರವಸೆ ಕೊಟ್ಟಿದ್ದಾರೆ–ಹೀಗೆ ಬರೆದಿದ್ದಾರೆ ಮಹದೇವ ದೇಸಾಯಿ.

**ಪವಿತ್ರ ಸಂಗೀತ :.**

ನಂದಿಯ ಪ್ರಾರ್ಥನಾ ಸಭೆಗಳಲ್ಲಿ ಒಳ್ಳೆಯ ಸಂಗೀತ ನಮಗೆ ಸಿಕ್ಕಿತ್ತು. ಇಲ್ಲಂತೂ ಅದಕ್ಕಿಂತ ಉತ್ತಮ. ಇದು ಸಂಗೀತದ ದೇಶ. ಹಾಡು ಹಾಡು ಎಂದು ಯಾರನ್ನು ಕೇಳಿದರೂ ಅವರು ಇಲ್ಲ ಎನ್ನುವುದಿಲ್ಲ. ಮೊನ್ನೆ ಮಳೆ ಬಂದು ಮನೆಯ ಒಳಗಡೆ ನಡೆಯಿತು ಪ್ರಾರ್ಥನಾ ಸಭೆ. ಕೆಲವರು ಹೆಂಗಸರು ಬಂದಿದ್ದರು. ಹಾಡುತ್ತೀರಾ ಎಂದು ಸಹಜವಾಗಿ ಕೇಳಿದರು. ಕೂಡಲೇ ಆ ತಂಗಿ ಆಕೆಯ ಅತ್ತಿಗೆ ಇಬ್ಬರೂ ಮೃದು ಮಧುರ ಸಂಗೀತ ಹಾಡಿದರು. ಅದು ಒಂದು ರಾಮನ ಸ್ತೋತ್ರ, ಅದು ಮುಗಿದ ಕೂಡಲೇ

ಕೂಜಂತಂ ರಾಮರಾಮೇತಿ । ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾ ಶಾಖಾಂ । ವಂದೇ ವಾಲ್ಮೀಕಿ ಕೋಕಿಲಂ ।

ಆ ಪುರಾತನ ಕೋಗಿಲೆಯ ಗಾನ ಮಾಧುರ್ಯವನ್ನು ಈ ಆಧುನಿಕ ಕೋಗಿಲೆಗಳು ಪ್ರತಿಧ್ವನಿಸುತ್ತಿವೆಯೋ ಎನಿಸಿತು ನಮಗೆ. ಬಾಲಕಾಂಡದ ಪ್ರಥಮ ಸರ್ಗದ ಕೆಲವು ಶ್ಲೋಕಗಳನ್ನು ಹೇಳಿ ನಿಲ್ಲಿಸಿದರು. ಅವರ ಜೊತೆಗೆ ಬಂದಿದ್ದ ಗೃಹಸ್ಥ ಮುಂದಕ್ಕೆ ಹಾಡಿ ಎಂದು ಹೇಳಿದ. ಎಲ್ಲರಿಗೂ ಅಚ್ಚರಿ. ಪಶ್ಚಿಮ ಭಾರತದಿಂದ ಬಂದ ನಮಗಂತೂ ತುಂಬ ಅಚ್ಚರಿ. ಕಡೆಯವರೆಗೂ ತಡವರಿಸದೆ ಸ್ಪಷ್ಟವಾಗಿ ಅನುಷ್ಟುಪ್ ಛಂದಸ್ಸಿನಲ್ಲಿ ಆನಂದದಾಯಕ ಸ್ವರಗಳನ್ನೆತ್ತಿ ಒಂದು ನೂರು ಶ್ಲೋಕ ಹೇಳಿದರು. 'ಅತ್ಯದ್ಭುತ' ಎಂದು ಗಾಂಧೀಜಿ ಅನ್ನುತ್ತ ದಕ್ಷಿಣದ ಹೆಂಗಸರಲ್ಲಿ ಈ ಪಾಠ ಸರ್ವಸಾಮಾನ್ಯವೇ?' ಎಂದು ಕೇಳಿದರು. 'ಹೌದು ಈ ಸಂಗ್ರಹ ರಾಮಾಯಣ (ಶತಃ ಶ್ಲೋಕೀ) ಎಲ್ಲ ಬ್ರಾಹ್ಮಣರ ಗೃಹಗಳಲ್ಲಿಯೂ ಸರ್ವಸಾಮಾನ್ಯ. ಪ್ರತಿ ಶನಿವಾರವು ನಮ್ಮ ಹೆಂಗಸರು ಇದನ್ನು ಹೇಳುವುದುಂಟು' ಎಂದು ಅವರಿಗೆ ಹೇಳಿದರು. ಏಕೆ ಹೇಳಬಾರದು ಈ ಸಂಗ್ರಹವನ್ನು 'ಯಃ ಪಠೇತ್ ರಾಮಚರಿತಮ್ ಸರ್ವ ಪಾಪೈಃ ಪ್ರಮುಚ್ಯತೆ' ಎಂಬ

ಶ್ರದ್ಧೆಯಿಂದ ಹೇಳುತ್ತಿದ್ದರೆ, ಆ ಪುರಾತನ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದ್ದರೆ ಏನಾಶ್ಚರ್ಯ!

**ದುಃಖದ ಕಥೆ :**

ದುಃಖದ ಕಥೆಯನ್ನು ಹೇಳುವ ಹಾಡೆ ಅತಿ ಮಧುರ ಎನ್ನುತ್ತಾರೆ. ಪಾಪಮುಕ್ತರು ಆದರೂ ದುಃಖಮುಕ್ತರು ಅಲ್ಲ–ಎಂಬುದನ್ನು ತೋರಿಸಲಿಕ್ಕೋ ಏನೋ. ಇನ್ನೊಬ್ಬ ತಂಗಿಯನ್ನು ಕೇಳಿದಾಗ ಆಕೆ ತನ್ನ ದುಃಖದ ಕಥೆಯನ್ನು ಹೇಳಿದಳು. ಮೊದಲನೆ ಪ್ರಶ್ನೆಗೆ ಉತ್ತರವಾಗಿ ಕಾಲೇಜ್ ಶಿಕ್ಷಣ ಮುಗಿಯುತ್ತ ಬಂದಿದೆ. ತನಗೂ ಶ್ಲೋಕಗಳು ಗೊತ್ತು. ತನ್ನ ತಂದೆ ಕಡು ಬಡವ. ಆದರೂ ವಿದ್ಯಾಭ್ಯಾಸ ನಡೆಸುತ್ತಿದ್ದಾರೆ–ಎಂದು ಹೇಳಿದಳು.

ಗಾಂಧೀಜಿ ಆಕೆಯನ್ನು ಕೇಳಿದರು; ಹಾಗಾದರೆ ನೀನು ಯಾವಾಗ ಮದುವೆ ಮಾಡಿ ಕೊಳ್ಳುತ್ತೀ? ಈಗೇನೋ ಓದುತ್ತಿದ್ದೀಯಲ್ಲ–ಎಂದರು ನಗುನಗುತ್ತ. ಏನೋ ಮನಸ್ಸು ಇಲ್ಲದವಳ ಹಾಗೆ ಬಹಳ ಸಂಕೋಚದಿಂದ ಆಕೆ ತನ್ನ ದುಃಖದ ಕಥೆಯನ್ನು ಹೇಳಿದಳು. ಹತ್ತು ವರ್ಷದ ಅವಮಾನ. ಹತ್ತು ವರ್ಷದ ಕೆಳಗೆ ಆಕೆಗೆ ಮದುವೆಯಾಗಿತ್ತು. ಒಂದೆರಡು ತಿಂಗಳು ಗಂಡನ ಜೊತೆಯಲ್ಲಿ ಇದ್ದಳೋ ಹೇಗೋ, ವರದಕ್ಷಿಣೆ ಕೊಡಲಿಲ್ಲವೆಂದು ಹೊರಗೆ ಹಾಕಿದರು. ಆಗ ಇನ್ನೂ ಹನ್ನೆರಡು ವರ್ಷ ಆಕೆಗೆ: ಆಗಲೆ ಪರಿತ್ಯಕ್ತೆ. ಆ ಮನುಷ್ಯ ಭಾರೀ ವರದಕ್ಷಿಣೆ ಸಮೇತ ಇನ್ನೊಬ್ಬಳನ್ನು ಕೈಹಿಡಿದ. ಇದೆಲ್ಲವೂ ನಡೆದು ಹತ್ತು ವರ್ಷ ಆಗಿತ್ತು. ಈಗ ಆ ಮನುಷ್ಯ ಎಲ್ಲಿದ್ದಾನೋ ಏನೋ ಒಂದೂ ಗೊತ್ತಿಲ್ಲ. ಅವಳ ತಂದೆ ಮಾತ್ರ ಅವಳಿಗೆ ಸಂಸ್ಕೃತಿ ಮತ್ತು ವಿದ್ಯಾಭ್ಯಾಸದ ಮೂಲಕ ಶಾಶ್ವತ ನಿಧಿಯನ್ನು ಕೊಟ್ಟಿದ್ದ.

'ನಿನ್ನ ವಿದ್ಯಾಭ್ಯಾಸ ಮುಗಿದ ಮೇಲೆ ಏನು ಮಾಡುತ್ತೀಯಾ?' ಎಂಬುದು ಒಂದು ಪ್ರಶ್ನೆ. ಅದಕ್ಕೆ ಅವಳ ಉತ್ತರ 'ನನ್ನಂತೆಯೇ ಇರುವ ಅಭಾಗಿನಿಯರ ದುಃಖವನ್ನು ಪರಿಹರಿಸುವ ಪ್ರಯತ್ನ ಮಾಡುತ್ತೇನೆ'.

ನಿನ್ನ ಅವಸ್ಥೆಗೆ ನಿನಗೆ ದುಃಖ ಆಗುತ್ತದೆಯೇ?'

'ಇಲ್ಲ ದೇವರು ನನ್ನನ್ನು ಸಂರಕ್ಷಿಸುತ್ತಾನೆ'

ಇನ್ನೂ ಪ್ರಶ್ನೆ ಕೇಳಿದ್ದರೆ ಆಕೆ ಉತ್ತರ ಹೇಳುತ್ತಿದ್ದಳೋ ಏನೋ. ಆದರೆ ಕೇಳುವ ಮನಸ್ಸು ಯಾರಿಗೆ?

**ಕೆಲಸ :**

ಹಾಡು ಆದ ಮೇಲೆ ಕೆಲಸ, ಕೆಲಸ ಆದ ಮೇಲೆ ಹಾಡು. ಇಡೀ ಬಾಳು ಹೀಗೇ ಇದ್ದರೆ ಎಷ್ಟು ಚೆನ್ನ! ಹಾಡಿಗೂ ಕೆಲಸಕ್ಕೂ ಸಾಮರಸ್ಯ ಉಂಟಾದರೆ ಎಷ್ಟು ಸೊಗಸು!

ಈ ವಾರದಲ್ಲಿ ಭೇಟಿಗೆ ಬಂದವರಲ್ಲಿ ಸ್ವತಃ ನೂತು, ತಮ್ಮ ನೂಲಿನಿಂದಲೇ ಬಟ್ಟೆ ಮಾಡಿಸಿಕೊಂಡು ತೊಟ್ಟುಕೊಳ್ಳುವ ಸರಕಾರೀ ನೌಕರರು ಹೆಚ್ಚು. ಇಷ್ಟೇ ಅಲ್ಲ, ಬಿಡುವಿನ

ಕಾಲದಲ್ಲಿ ಖಾದಿ ಪ್ರಚಾರವನ್ನೂ ಮಾಡುತ್ತಾರೆ. ಕೆಲವರಂತೂ ನೂಲುವ ಬಗ್ಗೆ ಹುಚ್ಚರು. ಸಾವಿರ ಜನ ನೂಲುಗಾರರ ದಂಡನ್ನು ಕಟ್ಟಬೇಕು ಎಂದು ಕನಸು ಕಾಣುತ್ತಾರೆ. ಅವರಿಗೆ ಶುಭ ಆಗಲಿ. ಒಬ್ಬ ಮನುಷ್ಯ ಬಂದ, ತಾನೇ ಆರು ಕದಿರು ರಚಿಸಿ, ಅದನ್ನು ರಾಟೆಗೆ ಹೂಡಿಕೊಂಡು ಬಂದ. ಗಾಂಧೀಜಿ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು. ಅಲ್ಪ ತೃಪ್ತಿ ಬೇಡ, ನೂಲುವುದೇ ಗೊತ್ತಿಲ್ಲದವರ ಪ್ರಶಸ್ತಿ ಪತ್ರ ಬೇಡ. ಇನ್ನೂ ಪ್ರಯೋಗಾವಸ್ಥೆಯಲ್ಲೇ ಇರುವುದನ್ನು ನನ್ನ ಮುಂದೆ ಏಕೆ ತರುತ್ತೀರಿ? ಸಮನಾದ, ಹುರಿಯುಳ್ಳ ಇಪ್ಪತ್ತು ನಂಬರಿನ ಎರಡು ಪೌಂಡು ದಾರ ಒಂದು ದಿನದಲ್ಲಿ ಬರಬೇಕು. ನಿಮಗಿಂತಲೂ ಉತ್ತಮವಾದ ಫಲಗಳನ್ನು ತೋರಿಸಿದ ಪ್ರವರ್ತಕರು ಎಷ್ಟೋ ಜನ ಇದ್ದಾರೆ. ಅವರ ಪ್ರಯೋಗಗಳನ್ನು ಪರೀಕ್ಷಿಸಿ ಅದರ ಲಾಭ ಪಡೆಯಬೇಕು. ಒಂದು ಮಾತು, ಯಾರೂ ಇನ್ನೂ ಯಶಸ್ವಿ ಆಗಿಲ್ಲ.

'ನಾನು ಇದನ್ನು ಮುಂದುವರೆಸಲೋ ಅಥವಾ ಇಲ್ಲಿಗೇ ಕೈಬಿಡಲೋ ಎಂದು ಕೇಳಲು ಬಂದೆ' 'ಖಂಡಿತ ಕೈಬಿಡಬಾರದು. ಆತ್ಮವಿಶ್ವಾಸ ಮನೋಧಾರ್ಢ್ಯ ಇದ್ದರೆ ಇದನ್ನು ಮುಂದುವರೆಸಬೇಕು' ಎಂದರು ಗಾಂಧೀಜಿ.

ಬೆಂಗಳೂರಿನಲ್ಲಿ ಬೇಕಾದಷ್ಟು ಗೋಕ್ಷೀರ ಶಾಲೆಗಳಿವೆ ಎಂದು ಕೇಳಿ ಗಾಂಧೀಜಿ ಇಂಪೀರಿಯಲ್ ಡೈರಿಗೆ ಭೇಟಿ ಕೊಡುತ್ತಿದ್ದಾರೆ. ಅಲ್ಲಿನ ದನಗಳನ್ನು ಪರೀಕ್ಷಿಸಿ, ಪ್ರತಿಯೊಂದು ಸಣ್ಣ ವಿವರವನ್ನೂ ಕೇಳಿ ತಿಳಿದುಕೊಂಡು, ಅವು ಕೊಡುವ ಹಾಲು, ಅವಕ್ಕೆ ಆಗುವ ಖರ್ಚು, ಅವಕ್ಕೆ ಕೊಡುವ ಮೇವು–ಎಲ್ಲವನ್ನೂ ವಿಚಾರಿಸಿಕೊಳ್ಳುತ್ತಿದ್ದಾರೆ. ಆ ದನದ ಗೊಬ್ಬರ, ಅದರ ಬೆಲೆ ವರ್ಷಕ್ಕೆ ಎಷ್ಟು ಎಲ್ಲವನ್ನೂ ತಿಳಿದುಕೊಳ್ಳುತ್ತಿದ್ದಾರೆ. ಎಷ್ಟಾದರೂ ಅ.ಭಾ. ಗೋರಕ್ಷಾ ಸಮಿತಿಯ ಅಧ್ಯಕ್ಷರಲ್ಲವೆ?

**ಗಾಂಧೀಜಿಯ ಆರೋಗ್ಯ :**

ಗಾಂಧೀಜಿಯ ಆರೋಗ್ಯ ಉತ್ತಮಗೊಳ್ಳುತ್ತಿದೆ. ಆದರೆ ಖಾದಿ ಪ್ರದರ್ಶನ ಸಪ್ತಾಹ ಬರುತ್ತಿದೆಯಲ್ಲ–ನನಗೆ ಅಂಜಿಕೆ. ಶಾಲೆ, ಕಾಲೇಜು, ಸಾರ್ವಜನಿಕ ಸಂಸ್ಥೆ ಎಲ್ಲವೂ ಗಾಂಧೀಜಿಯ ಭೇಟಿಗೆ ಹಾತೊರೆದರೆ ಎಲ್ಲವನ್ನೂ ಕೈಬಿಡಬೇಕಾದೀತು. ಇತ್ತ ಪ್ರದರ್ಶನ ಅತ್ತ ಅ. ಭಾ. ಚರಖಾ ಸಂಘದ ಸಭೆ. ಇದನ್ನೆಲ್ಲ ನೋಡಿದರೆ ಈ ಸಪ್ತಾಹ ಬಹಳ ಶ್ರಮದ್ದಾಗಿಯೇ ಕಾಣುತ್ತದೆ. ಆದ್ದರಿಂದ ಎಲ್ಲ ಶಾಲೆ–ಕಾಲೇಜುಗಳ ಮುಖ್ಯರನ್ನೂ ನಾನು ಬೇಡಿಕೊಳ್ಳುತ್ತೇನೆ. ಗಾಂಧೀಜಿಯನ್ನು ತಮ್ಮಲ್ಲಿ ಬರಮಾಡಿಕೊಳ್ಳುವ ವಿಷಯದಲ್ಲಿ ಅವರು ಸಂಯಮದಿಂದ ಇರಬೇಕು. ಬಹಳವಾದರೆ ಒಂದು ಹುಡುಗಿಯರ ಶಾಲೆ ಇನ್ನೊಂದು ಹುಡುಗರ ಶಾಲೆ ಎರಡನ್ನು ಗಾಂಧೀಜಿ ನೋಡಬಹುದು. ಇವು ಎರಡು ಯಾವುವು ಎಂಬುದನ್ನು ಗಂಗಾಧರರಾಯರೂ ಸ್ವಾಗತ ಸಮಿತಿಯೂ ನಿರ್ಣಯಿಸಬೇಕು. ಇದಕ್ಕೆ ಒಂದೇ ನಿಯಮ: ಯಾವ ಶಾಲೆಯಲ್ಲಿ ಖಾದಿ ವಾತಾವರಣವನ್ನು ತರಲು ಆತುರತೆ ಇದೆಯೋ ಅಂಥವು.

**ಬಲು ದೀರ್ಘಕಾಲ– 'ಇನ್ನು ಮುಂದೆ':**

ಈ ವಾರ ಮಹಿಳಾ ಸಪ್ತಾಹ ಎನ್ನಬಹುದು. ಈ ಮಹಿಳೆಯರು ಎಲ್ಲರೂ ಬಣ್ಣ

ಬಣ್ಣದ ಸೊಗಸಾದ ರೇಷ್ಮೆ ಸೀರೆಯನ್ನು ಉಟ್ಟು ಬರುತ್ತಾರೆ. ನೀವು ಯಾವಾಗ ಖಾದಿ ಸೀರೆ ಉಡುತ್ತೀರಿ ಎಂಬುದೇ ಗಾಂಧೀಜಿಯ ಪ್ರಶ್ನೆ. ಸಾಧಾರಣವಾಗಿ ಎಲ್ಲರದೂ ಒಂದೇ ಉತ್ತರ–'ಇನ್ನು ಮುಂದೆ' 'ಈಗಲೇ ಏತಕ್ಕೆ ಬೇಡ" ಇದು ಗಾಂಧೀಜಿಯ ಮುಂದಿನ ಪ್ರಶ್ನೆ. ಇದಕ್ಕೆ ಉತ್ತರ ಕೊಡಲು ಈ ತಂಗಿಯರಿಗೆ ಬಲು ಕಷ್ಟ. ಆದರೆ ಇಬ್ಬರು ತಂಗಿಯರು ಒಂದು ದಿನ ಒಳ್ಳೆಯ ಉತ್ತರ ಕೊಟ್ಟರು. ಎಂದೆಂದಿಗೂ ನನ್ನ ಮನಸ್ಸಿನಲ್ಲಿ ಅದು ನಿಂತಿದೆ. ಆ ಸಂದರ್ಭ ಬಂದದ್ದು ಹೀಗೆ : ಬೆಂಗಳೂರಿನಿಂದ ಎರಡು ಗುಂಪು ಹೆಂಗಸರು ಬಂದಿದ್ದರು. ಒಂದು ತುಳು ಮಾತಾಡುವ ಜನ, ಇನ್ನೊಂದು ಕನ್ನಡ. ಕನ್ನಡದ ಕೃಷ್ಣಮ್ಮನ ಗಂಡ ಗಾಂಧೀಜಿ ನೋಡಲಿ ಎಂದು ತನ್ನ ನೂಲುಗಾರರ ದಂಡಿನ ಯೋಜನೆಯ ಹಸ್ತಪ್ರತಿಯನ್ನು ಬಿಟ್ಟು ಹೋಗಿದ್ದರು. ಅದರಲ್ಲಿ ನೂಲುವವರು ತೆಗೆದುಕೊಳ್ಳಬೇಕಾದ ಪ್ರತಿಜ್ಞೆ ಇತ್ತು. ಗಾಂಧೀಜಿಯವರೇ ಆ ಪ್ರತಿಜ್ಞೆಯ ಪಾಠವನ್ನು ಆಶೀರ್ವಾದ ರೂಪದಲ್ಲಿ ಹಿಂದೀಗೆ ಅನುವಾದಿಸಿಕೊಡಬೇಕೆಂದು ಆತನ ಆಶೆ. ಆ ಪುಸ್ತಕವನ್ನು ಗಾಂಧೀಜಿಯಿಂದ ತೆಗೆದುಕೊಂಡು ಬರಲು ಕೃಷ್ಣಮ್ಮನನ್ನು ಆತ ಕಳಿಸಿಕೊಟ್ಟಿದ್ದ. ಆಕೆ ಗಾಂಧೀಜಿಯ ಬಳಿಗೆ ಬಂದಳು. ಸರಿ. ಯಥಾ ಪ್ರಕಾರ ಪ್ರಶ್ನೋತ್ತರ ಆಯಿತು. ಪ್ರಶ್ನೋತ್ತರಗಳು ವಾಡಿಕೆಯವೇ. ಖಾದಿ ಸೀರೆ ಉಟ್ಟು ಬರದಿದ್ದರೆ ಪುಸ್ತಕ ಕೊಡುವುದಿಲ್ಲ ಎಂದರು ಗಾಂಧೀಜಿ. ಒಳ್ಳೆಯ ಸಂಕಟಕ್ಕೆ ಬಂತು. ಮರ್ಯಾದೆಯ ಪ್ರಶ್ನೆ ಆಯಿತು. ಆಕೆ ತುಂಬಾ ಯೋಚಿಸ ತೊಡಗಿದಳು. ಆಕೆಯ ಜೊತೆಯಲ್ಲಿ ಡಾ. ರಾಮರಾಯರ ಮೊಮ್ಮಗಳು ಇನ್ನೊಂದು ಚಿಕ್ಕ ಹುಡುಗಿ ಶ್ರೀಮತಿ ಕಾನಿತಬಾಯಿ ಇದ್ದಳು. ಆಕೆಗೆ ಕೂಡ ಈಕೆಯ ಒತ್ತಾಸೆ. ತಮಿಳು ಹೆಂಗಸರಿಗೆ ರಾಜಗೋಪಾಲಚಾರ್ಯರು ದುಭಾಷಿ. ಅವರೂ ಆಲೋಚನೆ ಮಾಡಹತ್ತಿದರು.

'ಹಾಗಾದರೆ ನೋಡಿ. ನಿಮ್ಮಲ್ಲಿ ಒಬ್ಬರೊನ್ನೊಬ್ಬರು ಸೋಲಿಸಬೇಕು'–ಎಂದರು ಗಾಂಧೀಜಿ.

ಶ್ರೀಮತಿ ಕಾನೀತಬಾಯಿ ಎಂದಳು–'ಈ ತಮಿಳರನ್ನು ನಾವು ಸೋಲಿಸಿಬಿಡುತ್ತೇವೆ' ತಮಿಳರೇಕೆ ಹಿಂದೆ ಬಿದ್ದಾರು. ಅವರೂ ಇವರನ್ನು ಸೋಲಿಸುವ ಮಾತನ್ನು ಆಡಿದರು. ಗಾಂಧೀಜಿ ಈ ಮೇಲಾಟವನ್ನು ನೋಡಿ ನಕ್ಕರು. 'ಹಾಗಾದರೆ ಕನ್ನಡ–ತಮಿಳು ಎಲ್ಲ ಹೆಂಗಸರು ಒಳ್ಳೆಯವರು. ಗಂಡಸರೇ ಕೆಟ್ಟವರು. ತಮಿಳು ಹೆಂಗಸು ಒಬ್ಬಾಕೆ ಗಂಡಸರ ಪರವಾಗಿ ಮಾತಾಡಿದಳು. 'ಅವರೂ ಒಳ್ಳೆಯವರೇ. ಎಷ್ಟೋ ಜನ ಖಾದಿ ತೊಡುತ್ತಾರೆ.' ಈ ಸಮಯದಲ್ಲಿ ಕೃಷ್ಣಮ್ಮನೂ ಆಕೆಯ ಗೆಳತಿಯೂ ಏನೋ ಆಲೋಚಿಸುತ್ತ ನಿಂತಿದ್ದರು. ಗಾಂಧೀಜಿಗೆ ಅವರ ಯೋಚನೆ ಅರ್ಥವಾಯಿತೋ ಏನೋ! ಅವರು ಹೇಳಿದರು 'ಕೆಳಗಡೆಗೆ ಒಂದು ಖಾದಿಯ ಭಂಡಾರವಿದೆ. ಅಲ್ಲಿ ಹೋಗಿ ಸೀರೆ ಕೊಂಡುಕೊಳ್ಳಿ. ಇಲ್ಲಿ ಯಾವುದಾದರೂ ಒಂದು ಕೊಠಡಿಗೆ ಹೋಗಿ ಸೀರೆ ಬದಲಿಸಿಕೊಂಡು ಬನ್ನಿ' ಎಂದು.

**ಸಂದೇಶ ಬೇಕು;**

ಹೀಗೆ ಸದಾಕಾಲವೂ ನಗುತ್ತ, ವಿನೋದ ಆಡುತ್ತ ಇರಲು ಸಾಧ್ಯವೇ? ಆ ಹೊತ್ತಿಗೆ ಕಾಲೇಜು ಶಿಕ್ಷಕರು ಯಾರೋ ಕಾದಿದ್ದರು. ಸುಮಾರು ಇಪ್ಪತ್ತು ಜನ ಶಿಕ್ಷಕರು ಬಂದಿದ್ದರು. ಗಾಂಧೀಜಿ ಕೇಳಿದರು 'ನಿಮ್ಮ ಶಾಲೆಯಲ್ಲಿ ಖಾದಿಯ ವಾತಾವರಣ ಇದೆಯೇ' ಎಂದು.

ನಿಧಾನವಾಗಿ ಬರುತ್ತಿದೆ ಎಂದ ಅವರಲ್ಲೆ ಒಬ್ಬ.

ದಿವಾನರ ಭರವಸೆ ಏಷ್ಟರ ಮಟ್ಟಿಗೆ ಪರಿಸ್ಥಿತಿಯನ್ನು ಸುಲಭ ಮಾಡಿದೆ. ಸರಕಾರ ಈಗ ವಿರೋಧಿಸುವುದಿಲ್ಲ ನೀವು ಖಾದಿ ಹಾಕಿದರೆ. ಆದ್ದರಿಂದ ನೀವೂ ಈಗ ಖಾದಿ ಹಾಕದಿರಲು ಯಾವ ನೆವವೂ ಇಲ್ಲ ಎಂದರು ಗಾಂಧೀಜಿ.

ಅವರಲ್ಲೆ ಒಬ್ಬ ಖಾದಿಧಾರಿ, 'ಇದು ಇಲ್ಲದಿದ್ದರೆ ಅವರು ಬೇರೆ ಹೊಸ ನೆಪ ಹೂಡುತ್ತಾರೆ' ಎಂದ.

'ನೂಲುವುದರಿಂದ ಯಾರಾದರೂ ಹೊಟ್ಟೆ ಹೊರೆಯಬಲ್ಲರೆ?' ಇನ್ನೊಬ್ಬ ಕೇಳಿದ.

ಗಾಂಧೀಜಿ ನುಡಿದರು. "ಬಹಳ ಹಳೆಯ ಪ್ರಶ್ನೆ. ಆದರೆ ಎಷ್ಟು ಸಲ ಕೇಳಿದರೆ ಅಷ್ಟು ಸಲವೂ ಉತ್ತರ ಕೊಡಬೇಕು. ನೂಲುವುದು ಪೂರ್ಣ ಸಮಯದ ಉದ್ಯೋಗವಲ್ಲ. ಒಂದೆರಡು ಸಂದರ್ಭ ಬಿಟ್ಟರೆ ಇದು ಜೀವನೋಪಾಯ ಅಲ್ಲವೆಂದು ಗ್ರಾಮಸ್ಥರಿಗೂ ತಿಳಿದಿದೆ. ಆದರೆ ಬೇರೆಯವರು ಮಾತ್ರ ಯಜ್ಞಾರ್ಥವಾಗಿ ನೂಲಬೇಕು.'

'ನಾವು ಹೇಗೆ ನೆರವಾಗಬಹುದು.'

'ಗಾಂಧೀಜಿ : ತಕಲಿ ನೂಲುವುದನ್ನು ಎಲ್ಲ ಹುಡುಗರಿಗೆ ಕಡ್ಡಾಯ ಮಾಡಬೇಕು. ದಿನದ ಕೆಲಸವನ್ನು ವಿನಯದಿಂದ ನಡೆಸಲು ಶಾಲೆ ಪ್ರಾರಂಭ ಆಗುವಾಗ ಕೆಲವು ಕಡೆ ಪ್ರಾರ್ಥನೆ ಮಾಡುವುದಿಲ್ಲವೇ? ಹಾಗೆಯೇ ಅರ್ಧ ಗಂಟೆ ನೂಲುವಿಕೆಯಿಂದಲೂ ಶಾಲೆ ಪ್ರಾರಂಭಿಸಬಹುದು.'

'ಕಾಲೇಜು ವಿದ್ಯಾರ್ಥಿಗಳೂ ಇದನ್ನು ಮಾಡಬೇಕೆ'.

ಗಾಂಧೀಜಿ 'ಖಂಡಿತ. ಎಲ್ಲರೂ. ಪ್ರತಿಯೊಬ್ಬರೂ. ನಾನೆ ವೈಸರಾಯ ಆಗಿದ್ದರೆ ಪ್ರತಿಯೊಬ್ಬ ಸರಕಾರೀ ನೌಕರನೂ ಮೇಜಿನ ಮುಂದೆ ಕೂಡುವ ಮೊದಲು ತಕಲಿಯಿಂದ ನೂಲಲೇಬೇಕು ಎಂದು ಕಡ್ಡಾಯ ಮಾಡುತ್ತಿದ್ದೆ.'

'ನೀವೇ ವೈಸರಾಯ ಆಗಿದ್ದರೆ ಎಷ್ಟು ಚೆನ್ನಾಗಿತ್ತು?' ಎಂದರು ಅವರಲ್ಲಿ ಕೆಲವರು.

ಗಾಂಧೀಜಿ : ಆಗ ನೀವು ನನ್ನನ್ನು ಹರಸುತ್ತಿರಲಿಲ್ಲ. ಶಪಿಸುತ್ತಿದ್ದಿರಿ. ಏಕೆಂದರೆ ನಾನು ಇನ್ನೂ ಕೆಲವು ವಿಚಿತ್ರಗಳನ್ನು ಹೇರುತ್ತಿದ್ದೆ.

ಅವರಲ್ಲಿ ಇದ್ದ ಖಾದಿಧಾರಿ, 'ಈಗಲೇ ಎಷ್ಟು ವಿಚಿತ್ರಗಳನ್ನು ನಮ್ಮ ಮೇಲೆ ಹೇರುತ್ತಿದ್ದಾರೆ. ಒಂದೆರಡು ಹೊಸವೂ ಬರಲಿ' ಎಂದ.

'ಉಪಾಧ್ಯಾಯರು ಹೇಗೆ ಇರಬೇಕೆಂದು ನಿಮ್ಮ ಅಭಿಪ್ರಾಯ.'

ಗಾಂಧೀಜಿ: ಒಳ್ಳೆಯವರಾಗಿರಲಿ. ಬಲಿಷ್ಠರೂ, ಪರಿಶುದ್ಧರೂ ನಿರ್ಭೀತರೂ ಆಗಿರಲಿ. ಹುಡುಗರೊಡನೆ ಹೆಚ್ಚು ಹೆಚ್ಚು ತಾದಾತ್ಮ್ಯ ಬರಲಿ.

ವರ್ಗಗಳ ಗಾತ್ರ ಎಷ್ಟಿರಬೇಕು ಎಂಬಿವೇ ಮೊದಲಾದವುಗಳ ಬಗ್ಗೆ ಪ್ರಶ್ನೆ ಕೇಳಿದರು. ಗಾಂಧೀಜಿ ಮಾತನ್ನು ಮುಕ್ತಾಯಗೊಳಿಸುತ್ತ, ಯಾವುದೇ ಏನೇ ಇದ್ದರೂ, ಶಿಕ್ಷಕರು ಮತ್ತು ನಮ್ಮ ನಡುವೆ ಒಂದು ಜೀವಂತ ಸಂಬಂಧವಿದೆ ಎಂಬ ಭಾವನೆ ಬಾಲಕರಲ್ಲೆ ಬರಬೇಕು, ಇದು ಮುಖ್ಯ ಎಂದರು.

**ಸಂಕ್ಷಿಪ್ತ ಸಂದೇಶ:**

ಉಪಾಧ್ಯಾಯರು ಮಾತನಾಡತೊಡಗಿದರೆ ಅದಕ್ಕೆ ಕೊನೆಯೇ ಇರುವುದಿಲ್ಲ. ಇದನ್ನು ನಿಲ್ಲಿಸಲು ಅದೃಷ್ಟವಶಾತ್ ಒಂದು ಪ್ರಸಂಗ ಬಂತು. ಕೃಷ್ಣಮ್ಮನೂ, ಕಾನಿತಬಾಯಿಯೂ ಖಾದಿ ತೊಟ್ಟು ಬಂದರು. ಗಾಂಧೀಜಿ ನಿರೀಕ್ಷಿಸಿದುದಕ್ಕಿಂತ ಹೆಚ್ಚೇ ಆಗಿತ್ತು. ಕನ್ನಡ ಈ ಹೆಂಗರಳನ್ನೂ ಅವರ ಈ ಖಾದಿ ವೇಷವನ್ನೂ ನೋಡಿ ಗಾಂಧೀಜಿಗೆ ಬಹಳ ಹರ್ಷವಾಯಿತು. ಉಪಾಧ್ಯಾಯರು ಆ ವೇಳೆಗೆ ಹೊರಡಲು ಅನುವಾದರು. ತಮ್ಮ ಶಾಲೆಗೆ ಬರಬೇಕೆಂದು ಗಾಂಧೀಜಿಯನ್ನು ಕೇಳಿದರು. ನಿಮ್ಮ ಹುಡುಗರು ಎಲ್ಲರೂ ಖಾದಿ ತೊಡುವಂತೆ ಮಾಡಿರಿ, ಆಮೇಲೆ ಬನ್ನಿರಿ ಎಂದರು ಗಾಂಧೀಜಿ.

ಹುಡುಗರಿಗೆ ಏನಾದರೂ ಸಂದೇಶ ಬೇಕು. ಸಂಕ್ಷಿಪ್ತವಾದರೂ ಚಿಂತೆ ಇಲ್ಲ, ಸಂದೇಶ ಕೊಡಿ.

ಗಾಂಧೀಜಿ ಖಾದಿಧಾರಿಗಳಾದ ಈ ಮಹಿಳೆಯರನ್ನು ತೋರಿಸುತ್ತ, ಇವರೇ ನನ್ನ ಸಂಕ್ಷಿಪ್ತ ಪ್ರತ್ಯಕ್ಷ ಸಂದೇಶ... ನಿಮ್ಮ ಹುಡುಗರು ಇವರಿಗಿಂತ ಹಿಂದೆ ಬೀಳದ ಹಾಗೆ ಇರಲಿ ಎಂದರು.

ಒಡನೆಯೇ ಆ ಪ್ರತಿಜ್ಞೆಯ ಹಿಂದೀ ಭಾಷಾಂತರ ಮಾಡಿ, ಆ ಪುಸ್ತಕವನ್ನು ಗಾಂಧೀಜಿ ಕೃಷ್ಣಮ್ಮನಿಗೆ ಕೊಟ್ಟರು. ಆ ಮೇಲೆ ಆಕೆಯ ಗಂಡನಿಗೆ ಒಂದು ಪತ್ರ ಬರೆದರು.

'ನಿನ್ನ ಹೆಂಡತಿಯ ಸಂಕಲ್ಪ ಶಕ್ತಿಗೂ, ಸಜ್ಜನಿಕೆಗೂ ಮೆಚ್ಚಿ ಈ ಭಾಷಾಂತರ ಕಾರ್ಯ ಆಕೆಯ ಎದುರಿಗೇ ಮಾಡಲಾಯಿತು.'

ಕೃಷ್ಣಮ್ಮನಿಗೆ ಮನಸ್ಸು ಕರಗಿತು. ಆನಂದವಾಯಿತು. ಗಾಂಧೀಜಿಗೂ ಕೂಡ. ಆಕೆ ಹೊರಡುವ ಮುನ್ನ, ಎಂದೆಂದಿಗೂ ತಾನು ಖಾದಿಯಲ್ಲದೆ ಮತ್ತೇನನ್ನೂ ಉಡುವುದಿಲ್ಲವೆಂದು ಸಂಕಲ್ಪ ಮಾಡಿದಳು.

ಗಾಂಧೀಜಿ ಶ್ರೀಮತಿ ಕಾನಿತಬಾಯಿಗೆ : 'ನಿನ್ನನ್ನು ದತ್ತು ತೆಗೆದುಕೊಳ್ಳಬೇಕೆಂದು ಅನಿಸುತ್ತದೆ ಮಗು. ನೀನು ಹೋಗಿ ನಿಮ್ಮ ಶಾಲೆಯಲ್ಲಿ ಹುಡುಗಿಯರೆಲ್ಲ ಖಾದಿ ಧರಿಸುವಂತೆ ಮಾಡುತ್ತೀಯಾ?' ಎಂದು ಕೇಳಿದರು. ಗಾಂಧೀಜಿಯ ಆಶೀರ್ವಾದ ಇದ್ದರೆ ಅದೇನು ಮಹಾ ಕೆಲಸ ಎಂತಲೋ ಏನೋ ಆ ಹುಡುಗಿ 'ಆಗಲಿ' ಎಂದಳು. ಮತ್ತೆ ಬನ್ನಿ ಎಂದರು ಗಾಂಧೀಜಿ. ಅವರ ಭೇಟಿ ಗಾಂಧೀಜಿಗೆ ಒಂದು ಪ್ರಕಾರದ ಬಲವರ್ಧಕ ಎನಿಸಿತು.

**ಇಂಪೀರಿಯಲ್ ಕ್ಷೀರ ಕ್ಷೇತ್ರದಲ್ಲಿ:**

ಇಂಪೀರಿಯಲ್ ಕ್ಷೀರ ಕ್ಷೇತ್ರಕ್ಕೆ ಮಿ॥ ಸ್ಮಿತ್ ಯಜಮಾನರು. ಅವರು ಗಾಂಧೀಜಿಗೆ ಆ ವಿಷಯವನ್ನು ತಿಳಿಸಿ ಹೇಳಲು ಪಾಠವನ್ನೇ ಪ್ರಾರಂಭಿಸಿದರು. ಅಲ್ಲಿದ್ದವರೂ ತಮಗೆ ತಿಳಿದದ್ದನ್ನೆಲ್ಲ ತಿಳಿಸಲು ಉತ್ಸುಕರಾಗಿದ್ದರು. ಅದು ಅಲ್ಲದೆ ಒಂದೆರಡು ಸಲ ಗಾಂಧೀಜಿಯ ಜೊತೆಯಲ್ಲಿ ಪಂಡಿತ್ ಮಾಲವೀಯ ಕೂಡ ಇದ್ದರು. ಆದ್ದರಿಂದ ಎಲ್ಲವೂ ಮತ್ತಷ್ಟು ಸ್ವಾರಸ್ಯವಾಯಿತು. ಒಂದೆರಡು ದಿನ ಕ್ಷೀರೋತ್ಪಾದನೆಯ ಕ್ರಮವನ್ನು ತೋರಿಸಿ ಆ ಮೇಲೆ ದನಗಳನ್ನು ತೋರಿಸಿದರು. ಅವುಗಳಲ್ಲಿ ಅನೇಕ ತಳಿಯ ದನಗಳು ಇದ್ದವು. ಇದನ್ನು ಪರಿಶೀಲಿಸುತ್ತ ಒಂದೊಂದು ಲೋಟ ಹಾಲನ್ನು ಪರೀಕ್ಷಿಸುತ್ತ ಒಬ್ಬ ತಜ್ಞ ಇದ್ದಾನೆ. ಯಾವ ಆಹಾರ ಅವಕ್ಕೆ ಅನುಕೂಲ. ಯಾವುದರಿಂದ ಹೆಚ್ಚು ಹಾಲು ಬರುತ್ತದೆ ಇತ್ಯಾದಿ ಎಲ್ಲವನ್ನೂ ಆ ತಜ್ಞ ನಿರ್ಧರಿಸುತ್ತಾನೆ. ಸ್ಮಿಥ್ ಸ್ವತಃ ಎಲ್ಲಕ್ಕಿಂತಲೂ ಹೆಚ್ಚು ಸುಲಭವಾದ, ಸರಳವಾದ ಆದರೆ ಅತಿ ಮುಖ್ಯವಾದ ಹಸಿರು ಹುಲ್ಲು ಮತ್ತು ಮೇವು ದೀರ್ಘಕಾಲ ಸಂಗ್ರಹಿಸಿ ಇಡುವ ಪದ್ಧತಿಯನ್ನು ತಿಳಿಸಿ ಹೇಳಿದ. ಇದರಿಂದ ಮೇವಿನ ಸಮಸ್ಯೆ ಬಗೆಹರಿಯುತ್ತದೆ. ಇದು ಬಹಳ ಮುಖ್ಯ. ಆದರೂ ಬಹಳ ಸರಳ. ಇಷ್ಟು ಸರಳವೆಂದೇ ಜನಕ್ಕೆ ಆದರ ಬೆಲೆ ತಿಳಿಯುವುದಿಲ್ಲ ಎಂದು ಆತ ಹೇಳಿದ. ಆಮೇಲೆ ಬೇರೆ ಬೇರೆ ಬಗೆಯ ಸೈಲೋಗಳನ್ನು ತೋರಿಸಿ ಎಲ್ಲ ಸೂಕ್ಷ್ಮ ಅಂಶಗಳನ್ನೂ ತಿಳಿಸಿದ. ಸ್ವಲ್ಪ ಗಮನ ಕೊಟ್ಟು ತಿಳಿದುಕೊಂಡದ್ದಾದರೆ ಎಂಥ ಕಾಲ ಬಂದರೂ ರೈತನಿಗೆ ದನದ ಮೇವಿನ ಕೊರತೆ ಇಲ್ಲದಂತೆ ಆಗುತ್ತದೆ ಎಂಬುದನ್ನು ತಿಳಿಸಿದ. ಆತ ತನ್ನ ದನಗಳನ್ನು ತೋರಿಸಿದ ರೀತಿ, ಅವುಗಳ ಇತಿಹಾಸ ಹೇಳುವುದರಲ್ಲಿ ಇದ್ದ ಆಸಕ್ತಿ, ಆತನಿಗೆ ದನಗಳ ಮೇಲೆ ಎಷ್ಟು ಪ್ರೀತಿ ಇದೆ ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. 'ನಾನು ಹುಟ್ಟಿದ್ದೂ ಬೆಳೆದದ್ದೂ ದನಗಳ ನಡುವೆ. ನಮ್ಮ ತಂದೆ ರೈತರು. ಕ್ಷೀರೋತ್ಪತ್ತಿಯ ಪ್ರಶಸ್ತಿಗೆ ಪರೀಕ್ಷಕರಾಗಿ ಇಪ್ಪತ್ತು ವರ್ಷ ಕೆಲಸ ಮಾಡಿದರು. ನಮ್ಮ ತಾಯಿ ನಮ್ಮ ಮನೆಯ ಗೋಶಾಲೆಯನ್ನು ತಾನೇ ನೋಡಿಕೊಳ್ಳುತ್ತಿದ್ದಳು' ಎಂದು ಹೊಗಳಲು ತಕ್ಕುದಾದ ಹೆಮ್ಮೆಯಿಂದ ಆ ಸ್ಕಾಟ್ಲೆಂಡ್ ಮನುಷ್ಯ ಹೇಳಿದರು. ಹಿಂದೂಸ್ಥಾನದ ಪ್ರತಿಯೊಬ್ಬ ಮನುಷ್ಯನೂ ಗೋಸಂವರ್ಧನೆಯ ಹಾಗೂ ಗೋರಕ್ಷಣೆಯ ಬೆಲೆಯನ್ನು ಅರಿತುಕೊಳ್ಳಬೇಕು. ದನಗಳಿಗಾಗಿ ಆಹಾರವನ್ನು ಹೊರಗಿನಿಂದ ಎಳ್ಳಷ್ಟೂ ಆಮದು ಮಾಡುವುದು ಬೇಡ. ದನ ಹೆಚ್ಚಿಗೆ ಹಾಲು ಕೊಟ್ಟರೆ ಅದರಿಂದ ಹೋರಿಕರುಗಳ ಶಕ್ತಿ ಕಡಿಮೆ ಆಗುತ್ತದೆ ಎಂಬುದು ತಪ್ಪು. ಇದು ಸತ್ಯಕ್ಕೆ ದೂರ. ನನ್ನ ಮುಂದೆ ಕೆಲವು ಎತ್ತುಗಳನ್ನು ಬಿಡಿ. ಹೆಚ್ಚು ಹಾಲು ಕೊಡುವ ಹಸುವಿನ ರಾಸು ಒಳ್ಳೆಯದು ಎಂದು ತೋರಿಸಿಬಿಡುತ್ತೇನೆ ಎಂದ.

ಕಟ್ಟ ಕಡೆಯ ದಿನ ಪಂಡಿತ ಮಾಳವೀಯ ಅವರೂ ಗಾಂಧೀಜಿಯೂ ತನ್ನ ಐರ್‌ಷೈರ್–ಮಾಂಗಾಮರಿ ಮಿಶ್ರತಳಿಯ ಹಸುವಿನ (ಜಿಲ್) ಜೊತೆಗೆ ನಿಂತು ಛಾವಚಿತ್ರ ತೆಗೆಸಿಕೊಳ್ಳಬೇಕು ಎಂದು ಕೋರಿದ. ಆ ಹಸುವಿಗೆ ೧೬ ಸೂಲು ಆಗಿತ್ತು. ವರ್ಷಕ್ಕೆ ಸರಾಸರಿ ಹತ್ತು ಸಾವಿರ ಪೌಂಡು ಹಾಲು ಕೊಡುತಿತ್ತು. ಸಹಜವಾಗಿಯೇ ಈ ಕ್ಷೀರಶಾಲೆಯಲ್ಲಿ ಎಲ್ಲರಿಗೂ ಇಷ್ಟವಾದ ಹಸು ಆ ಜಿಲ್. ಹಸು ಇಲ್ಲೇ ಹುಟ್ಟಿದ್ದು. ನನ್ನ ಕಣ್ಣೆದುರಿಗೆ ಇಷ್ಟು ವರ್ಷವೂ ಅದರ

ಬೆಳವಣಿಗೆಯನ್ನು ನಾನು ಲಕ್ಷ್ಯಪೂರ್ವ ನೋಡುತ್ತಲೇ ಬಂದಿದ್ದೇನೆ. ದನಗಳ ಖಾಯಿಲೆ ಇಲ್ಲಿ ಬೇಕಾದಷ್ಟು ಬಂದಿವೆ. ಈ ಹಸುಪಿಗೆ ಮಾತ್ರ ಎಂದೂ ಏನೂ ಬಂದಿಲ್ಲ.

**ಖಾದಿ ವಸ್ತ್ರಾಲಯ :**

ಇಲ್ಲಿಗೆ ಒಂದು ವರ್ಷದ ಕೆಳಗೆ ಗಂಗಾಧರರಾಯರು ಪ್ರಾರಂಭಿಸಿದ ಖಾದಿ ವಸ್ತ್ರಾಲಯ ಚೆನ್ನಾಗಿ ಪ್ರಗತಿ ಆಗುತ್ತಿದೆ. ಹೋದ ವರ್ಷ ಜುಲೈ ತಿಂಗಳಲ್ಲಿ ಅದೇ ವರ್ಷ ಮೊದಲ ತಿಂಗಳು-ಎರಡು ಸಾವಿರದ ಎಂಟುನೂರ ತೊಂಬತ್ತು ರೂ. ಎರಡು ಆಣೆ, ಹತ್ತು ಪೈ (೨,೮೯೦-೨-೧೦) ವ್ಯಾಪಾರ ಆಯಿತು. ಈ ವರ್ಷ ಮೇ ತಿಂಗಳಲ್ಲಿ ೫,೭೪೮-೭-೯ ಪೈ. ಮಾರ್ಚ್ ತಿಂಗಳಲ್ಲಿ ಎಲ್ಲಕ್ಕಿಂತ ಹೆಚ್ಚು ವ್ಯಾಪಾರ ರೂ ೬,೮೫೫-೯-೯ ಪೈ. ಅದು ಸಹಜ. ಏಪ್ರಿಲ್ ತಿಂಗಳಲ್ಲಿ ಗಾಂಧೀಜಿ ಇಲ್ಲಿ ಪ್ರವಾಸ ಮಾಡಬೇಕಾಗಿತ್ತು. ಈ ತಿಂಗಳು ಗಾಂಧೀಜಿ ಇದ್ದರಲ್ಲ. ಈಗ ರೂ ೬,೩೨೬-೧೪-೦ ಪೈ ವ್ಯಾಪಾರ

*(ಯಂಗ್ ಇಂಡಿಯಾ: ೩೦-೬-೧೯೨೭)*

ಹಿಂದಿನ ವಾರ ಪ್ರೇಕ್ಷಕರ ದಟ್ಟಣಿ ಕಡಿಮೆ ಇದ್ದುದರಿಂದ ಗಾಂಧೀಜಿಗೆ ತಕ್ಕಷ್ಟು ವಿಶ್ರಾಂತಿ ಸಿಕ್ಕಿತೆಂದೇ ಹೇಳಬೇಕು. ಆದರೆ ವಿಶ್ರಾಂತಿ ಎಂದು ಬಹಳ ಒತ್ತಿ ಹೇಳಿದರೂ ತಪ್ಪೇ. ಒಂದೇ ಸಮನೆ ಕೆಲಸ ಮಾಡಿದರೆ ಅಥವಾ ಮಾತನಾಡಿದರೆ ಈಗಲೂ ಅವರಿಗೆ ಸ್ವಲ್ಪ ಆಯಾಸ ವೆನಿಸುತ್ತದೆ.

**ಹೆಚ್ಚು ಮಹಿಳಾ ದರ್ಶಕರು :**

ಕಳೆದ ವಾರ ಮಹಿಳಾ ಸಪ್ತಾಹ ಎಂದು ನಾನು ಅದನ್ನು ಕರೆದಾಗ ಉತ್ಪ್ರೇಕ್ಷೆ ಮಾಡಲಿಲ್ಲ. ಹೋದ ವಾರ ನಡೆದ ಎಷ್ಟೋ ಸಂಗತಿಗಳು ಹಾಗೆಯೇ ಉಳಿದುಹೋಗಿವೆ. ಆದ್ದರಿಂದ ಮಿಕ್ಕವುಗಳ ವಿಷಯವನ್ನು  ಈ ವಾರ ಮುಂದುವರಿಸುತ್ತಿದ್ದೇನೆ. ಮೊನ್ನೆ ಒಂದು ಸರಳ ಸ್ವಭಾವದ ಮಹಿಳೆ ಒಳಗೆ ಬಂದಳು. ಆಕೆಯನ್ನು ಪರಿಚಯ ಮಾಡಿಕೊಟ್ಟ ರೀತಿ ಮಾತ್ರ ಬಲು ಸೋಜಿಗ. ಕೆಲವು ಬಾಳೇ ಹಣ್ಣೂ, ದ್ರಾಕ್ಷೆ ಹಣ್ಣೂ ಆಕೆ ತಂದಿದ್ದಳು. ಅವನ್ನು ಗಾಂಧೀಜಿಯ ಮುಂದಿಟ್ಟರು. 'ಈ ಮಹಿಳೆಗೆ ಮಕ್ಕಳಾಗಬೇಕೆಂಬ ಬಯಕೆ ತುಂಬ ಇದೆ. ಇದನ್ನು ತಮಗೆ ತಿಳಿಸಿ ತಮ್ಮ ಆಶೀರ್ವಾದ ಪಡೆಯಬೇಕು ಎಂಬುದು ಆಕೆಯ ಆಶೆ' ಎಂಬುದಾಗಿ ಆಕೆಯ ಪರವಾಗಿ ಹೇಳಿದರು. ಎದುರಿಗೆ ಗಂಡಸರೂ, ಹೆಂಗಸರೂ ಕುಳಿತಿದ್ದರೂ ಆಕೆಗೆ ಸಂಕೋಚವೆನಿಸಲಿಲ್ಲ. ತನ್ನ ಮನೋಗತ ಗಾಂಧೀಜಿಗೆ ತಿಳಿಯಿತಲ್ಲ ಎಂದು ಸಮಾಧಾನ. ಗಾಂಧೀಜಿ ಒಂದು ಪ್ರಶ್ನೆ ಕೇಳಿದರು.

'ಮೈಸೂರಿನಲ್ಲಿ ಸುಂದರವಾದ ಮಕ್ಕಳು ಇಷ್ಟು ಇವೆಯಲ್ಲ. ಯಾರನ್ನಾದರೂ ಒಬ್ಬರನ್ನು ದತ್ತು ತೆಗೆದುಕೊಳ್ಳಬಾರದೇ? 'ಆಕೆ ಮುಗುಳು ನಕ್ಕಳು. ತುಂಬು ಗಾಂಭೀರ್ಯದಿಂದ ಗಾಂಧೀಜಿ ಹೇಳಿದರು. 'ಹೇಳಿ ಆಕೆಗೆ ಹೇಳಿ. ಈ ದೇಶದಲ್ಲಿರುವ ಅನೇಕ ಜನ ಮಕ್ಕಳಲ್ಲಿ ಯಾರನ್ನಾದರೂ ಒಬ್ಬರನ್ನು ಅಥವಾ ಹಲವರನ್ನು ಆರಿಸಿಕೊಳ್ಳಲಿ. ಹಸಿದ ಮಕ್ಕಳಿಗೆ ಅನ್ನ ನೀಡಲಿ, ಬಟ್ಟೆ ಇಲ್ಲದ ಮಕ್ಕಳಿಗೆ ಬಟ್ಟೆ ಕೊಡಲಿ. ನೆಲೆ ಇಲ್ಲದ ಮಕ್ಕಳಿಗೆ ನೆಲೆ ಕಲ್ಪಿಸಲಿ. ಆಗ

ಆಕೆಯ ಸುಖಕ್ಕೆ ಇಡೀ ಮೈಸೂರಿನಲ್ಲಿಯೇ ಸಾಟಿಯಾದ ತಾಯಿ ಇನ್ನೊಬ್ಬರಿಲ್ಲ.. ಈ ಮಾತನ್ನು ಆಕೆಯ ಭಾಷೆಯಲ್ಲಿಯೇ ತಿಳಿಸುತ್ತಿದ್ದಾಗ, ಗಾಂಧೀಜಿಯ ಕಣ್ಣಿನಲ್ಲಿ ತುಳುಕುತ್ತಿದ್ದ ಕನಿಕರವನ್ನು ಆಕೆ ಅರ್ಥ ಮಾಡಿಕೊಂಡಂತೆ ಇತ್ತು. ಆಕೆಗೆ ಸಮಾಧಾನವಾಯಿತೋ ಹೇಗೆ ಕೇಳಿ ಎಂದರು ಗಾಂಧೀಜಿ. ಆಕೆ ನಿರ್ವ್ಯಂಜನೆಯಿಂದ ಸಮಾಧಾನ ಸೂಚಿಸುತ್ತ ತಲೆ ಬಾಗಿ ಹೊರಟು ಹೋದಳು.

ಬೆಂಗಳೂರಿನಂಥ ನಾಗರಿಕ ಪ್ರದೇಶದಲ್ಲಿ ಹಸ್ತಾಕ್ಷರದ ಬೇಟೆ ಮಾಡುವ ತರುಣ ಜನರನ್ನು ಕಾಣುವುದು ಅಚ್ಚರಿಯೇನಲ್ಲ. ಆದರೆ ಸೋಜಿಗವೆಂದರೆ ಅವರೆಲ್ಲ ತರುಣಿಯರೇ ಆಗಿದ್ದರು. ಎಲ್ಲರಿಗೂ ಒಂದೇ ಉತ್ತರ.

ಗಾಂಧೀಜಿ : ಈ ಬಗ್ಗೆ ನನ್ನ ನಿಯಮ ಗೊತ್ತೇ? ಹಸ್ತಾಕ್ಷರ ಬೇಕಾದರೆ ಅದಕ್ಕೆ ಬೆಲೆ ಕೊಡಬೇಕು. ಬೇರೆ ಏನೂ ಅಲ್ಲ. ಆ ಬೆಲೆ ಎಂದರೆ ಖಾದಿ ತೊಡಬೇಕು, ದಿನವೂ ಅರ್ಧ ಗಂಟೆ ನೂಲುವ ವ್ರತ ತೊಡಬೇಕು.

ಈ ದೇಶದ ಎಷ್ಟೋ ಶ್ರೇಷ್ಠ ಪುರುಷರ ಹಸ್ತಾಕ್ಷರ ನಮ್ಮ ಪುಸ್ತಕಗಳಲ್ಲಿ ಇವೆ ನಿಮ್ಮದೇನು ಎಂದು ಕೆಲವರು ವಾದಿಸುತ್ತಾರೆ.

ಗಾಂಧೀಜಿ : ಇರಬಹುದು. ಆದರೆ ನನ್ನ ಹಸ್ತಾಕ್ಷರಕ್ಕೆ ನಾನು ಬೆಲೆ ಕಟ್ಟಿದ್ದೇನೆ. ನಾನು ಯೂರೋಪಿಯನ್ ಗೆಳೆಯರನ್ನೂ ಬಿಟ್ಟಿಲ್ಲ. ಅವರಿಗೆ ನೂಲಬೇಕೆಂದು ಹೇಳಲಿಲ್ಲ. ಆದರೆ ಖಾದಿ ಉಟ್ಟರೆ ಅಷ್ಟೇ ಸಾಕು ಎಂದು ಹೇಳಿದ್ದುಂಟು. ಇಷ್ಟು ಹೇಳಿದರೂ ಕೆಲವರಿಗೆ ನಿರ್ಧಾರ ಮಾಡುವದಾಗುವುದಿಲ್ಲ. ತಮ್ಮ ಹಸ್ತಾಕ್ಷರದ ಪುಸ್ತಕಗಳನ್ನು ಇಲ್ಲಿಯೇ ಬಿಟ್ಟು ಹೋಗುತ್ತಾರೆ.

ಒಬ್ಬಾಕೆ ಮಾತ್ರ ಕೇಳಿದ ಬೆಲೆ ಕೊಟ್ಟು ಹಸ್ತಾಕ್ಷರ ತೆಗೆದುಕೊಂಡಳು. ಆದರೆ ಆಕೆ ಕೇಳಿದ್ದೇ ಬೇರೆ ಗಾಂಧೀಜಿ ಬರೆದದ್ದೇ ಬೇರೆ. ತಲೆ ಒಡೆಯುವುದು ಎಂದರೆ ಏನು ಗೊತ್ತೇ ಎಂದು ಕೇಳಿದರು ಗಾಂಧೀಜಿ. ಆಕೆ ಬೆರಗಾದಂತೆ ಕಂಡಳು. ಮಾತಿಲ್ಲದೇ ಮಿಕಿ ಮಿಕಿ ನೋಡುತ್ತ ನಿಂತಳು. 'ಒಂದು ಸಲ ಮಾತು ಕೊಟ್ಟ ಮೇಲೆ ಅದನ್ನು ನಡೆಸಬೇಕು. ಮಾತು ಮುರಿಯುವುದು ತಲೆ ಒಡೆಯುವುದಕ್ಕಿಂತ ಅತಿ ಘೋರ' – ಹೀಗಿತ್ತು ಹಸ್ತಾಕ್ಷರ. ಗಾಂಧೀಜಿ ಹೇಳಿದರು–ತಲೆ ಒಡೆಯುವುದೂ ಆತ್ಮಹತ್ಯೆ. ಮಾತು ಮುರಯುವುದು ಆತ್ಮಹತ್ಯೆಗಿಂತಲೂ ಘೋರ ಎಂದು.

**ಒಬ್ಬ ಭಕ್ತ:**

ಒಂದು ದಿನ ಒಬ್ಬ ವಯಸ್ಸಾದ ಗೃಹಸ್ಥ ಒಂದು ದೊಡ್ಡ ಫೋಟೋ ಚೌಕಟ್ಟನ್ನು ತೆಗೆದುಕೊಂಡು ಬಂದ. ಅದರಲ್ಲಿ ಒಂದು ದೊಡ್ಡ ಕಾಗದ. ಬೇಕಾದಷ್ಟು ಚಿತ್ರ, ಅದರ ನಡುವೆ ಗಾಂಧೀಜಿಯ ಭಾವಚಿತ್ರ, ಸುತ್ತಲೂ ಸ್ಪಷ್ಟವಾಗಿ ಇರುವೆಯಂತಹ ಅಕ್ಷರಗಳಲ್ಲಿ ಏನೇನೋ ಬರೆದಿತ್ತು. ಆತ ಹೇಳಿದ, – ನೀವು ಖಾಯಿಲೆ ಬಿದ್ದಾಗ ಈ ರಾಮನಾಮ

ಮಂತ್ರವನ್ನು ಬರೆಯತೊಡಗಿದೆ. ಈಗ ಮುಗಿಸಿದ್ದೇನೆ ಎಂದು. ಗಾಂಧೀಜಿ ನುಡಿದರು– ನೀನು ಅದನ್ನು ಮುಗಿಸಿದ್ದರಿಂದ ನನಗೆ ಗುಣವಾಯಿತು ಎಂದಲ್ಲವೇ ನಿನ್ನ ಅಭಿಪ್ರಾಯ. ಗಾಂಧೀಜಿ ನಗತೊಡಗಿದರು. ಗಾಂಧೀಜಿಗೆ ತನ್ನ ಇಂಗಿತ ಅರ್ಥವಾಯಿತಲ್ಲ ಎಂದು ಆ ಗೃಹಸ್ಥನಿಗೆ ತುಂಬಾ ಸಂತೋಷ. ಆತ ಹೌದು ಹೌದು ಎಂದ.

ಆ ಮೇಲೆ ಗಾಂಧೀಜಿ ಅದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು. 'ಎಷ್ಟು ಸಲ ಬರೆದಿದ್ದೀಯ ರಾಮನಾಮ?' 'ನನಗೆ ಗೊತ್ತಿಲ್ಲ.' ಗಾಂಧೀಜಿ ಹೇಳಿದರು : ಇದು ಎಲ್ಲವೂ ರಾಮನಾಮ ಅಲ್ಲವಲ್ಲ. ಬೇರೆ ಬೇರೆ ಏನೋ ಬರೆದಿದ್ದೀಯೆ. ಅದರಲ್ಲಿ ಬೇರೆ ಬೇಕಾದಷ್ಟು ವಾಕ್ಯಗಳು ಇದ್ದವು. ಅದರಲ್ಲಿ ಮುಖ್ಯವಾದದ್ದು ಖಾದಿ ತೊಡಬೇಕು ಎಂಬುದು. ಗಾಂಧೀಜಿ : 'ನಿಮ್ಮ ಮೇಲೆ ಖಾದಿ ಇಲ್ಲವಲ್ಲ. ಖಾದಿಯನ್ನು ಸ್ತುತಿಸಿ ಒಮ್ಮೆ ಗುಜರಾತಿನಲ್ಲಿ ಹುಡುಗಿಯರು ಹಾಡು ಹೇಳುತ್ತಿದ್ದರು. ಆದರೆ ಆ ಹುಡುಗಿಯರ ಮೈ ಮೇಲೆ ನವಿರಾದ ಪರದೇಶೀ ಬಟ್ಟೆ ಇತ್ತು.' ಎಂದರು. ಆ ಮುದುಕನಿಗೆ ತಾನು ಏನು ಮಾಡುತ್ತಿದ್ದೇನೆ ಎಂಬುದೇ ಅರ್ಥವಾಗಲಿಲ್ಲ. ಹೇಗೆ ಆದೀತು.? ಇಡೀ ಜಗತ್ತೇ ಹಾಗೆ. ದೇವರ ಹೆಸರನ್ನು ಎಲ್ಲರೂ ಹೇಳುತ್ತಾರೆ. ಅವನ ಬಗ್ಗೆ ವಿಚಾರ ಮಾಡುವವರು ಯಾರೂ ಇಲ್ಲ.

ಗಾಂಧೀಜಿ ಕೇಳಿದರು : 'ಹಾಗಾದರೆ ನೀನು ಖಾದಿ ಧರಿಸುತ್ತೀಯ? ಗಂಗಾಧರರಾಯರ ಸ್ಥಳವಾದ ಹುದಲಿಗೆ ಹೋಗು. ಅಲ್ಲಿ ನೆಲೆಸು. ಇಡೀ ದಿನ ನೂಲಬೇಕು. ಖಾದಿ ಕೆಲಸ ಕಲಿತು ಈ ಚಿತ್ರಗಳನ್ನೆಲ್ಲ ಅದರ ಮೇಲೆ ಮಾಡು.'

'ಆದರೆ ನಾನು ಏನು ತಿನ್ನಲಿ?'

ಅದರ ಬಗ್ಗೆ ನಿನಗೆ ಯೋಚನೆ ಬೇಡ. ನೀನು ಕೆಲಸ ಮಾಡು. ಗಂಗಾಧರರಾಯರು ನಿನಗೆ ಅನ್ನ ಕೊಡುತ್ತಾರೆ. ಅಲ್ಲಿ ನಿನಗೆ ಎಲ್ಲವೂ ಸಿಗುತ್ತದೆ. ಮಾವಿನ ಹಣ್ಣು ಕೂಡ. ಆಗಬಹುದೇ?

ಆತ ಒಪ್ಪಿಕೊಂಡ ಹಾಗಿತ್ತು.

**ಸರ್ ಬ್ರಜೇಂದ್ರನಾಥ್ ಸೀಲ**

ಸರ್ ಬ್ರಜೇಂದ್ರನಾಥ್‌ರು ಕಲ್ಕತ್ತೆಗೆ ಹೋಗಿದ್ದರು. ಹಿಂದಿರುಗುವಾಗ ಗಾಂಧೀಜಿಯನ್ನು ನೋಡಲು ಬೆಂಗಳೂರಿಗೆ ಇಳಿದು ಬಂದರು. ಎಲ್ಲರಿಗೂ ಸಂತೋಷ, ಆಶ್ಚರ್ಯ. ಆ ಪೂಜ್ಯ ವಿದ್ವಾಂಸರ ಪಾಂಡಿತ್ಯ ಎಷ್ಟು ಆಳವೋ ಅದಕ್ಕಿಂತ ಹೆಚ್ಚು ಆಳ ಅವರ ವಿನಯ. ಅದೇ ತಾನೇ ನಿಜವಾದ ಸಂಸ್ಕೃತಿ. ಅವರನ್ನು ನೋಡಲು ಅವಕಾಶ ಸಿಕ್ಕಿದ್ದು ನನ್ನ ಭಾಗ್ಯ ಎನ್ನುತ್ತಾರೆ ಮಹದೇವ ದೇಸಾಯರು.

ನಿಮಗೆ ಕಾಯಿಲೆ ಆಗಿದ್ದಾಗ ತೊಂದರೆ ಕೊಡುವ ಮನಸ್ಸಾಗಲಿಲ್ಲ. ಆದರೆ ಈಗ ನಿಮಗೆ ನನ್ನ ಗೌರವ ಸಲ್ಲಿಸಬೇಕೆಂದು ಬಂದೆ ಎಂದರು ಬ್ರಜೇಂದ್ರನಾಥ.

ನಿಮ್ಮನ್ನು ನೋಡದೆಯೇ. ಆ ಸಂತೋಷವನ್ನು ಅನುಭವಿಸದೆಯೇ ನಾನು ಮೈಸೂರನ್ನು

ಬಿಡಬೇಕಾಗುತ್ತದೆಯೋ ಏನೋ ಎಂದು ನಾನು ಆಶ್ಚರ್ಯಗೊಳ್ಳುತ್ತಿದ್ದೆ. ಸದ್ಯ ಬಂದಿರಲ್ಲ. ಬಹಳ ಸಂತೋಷ ಎಂದರು ಗಾಂಧೀಜಿ.

ಬ್ರಜೇಂದ್ರನಾಥರ ಗಡ್ಡವನ್ನು ನೋಡುತ್ತ ಗಾಂಧೀಜಿ ಮುಗುಳು ನಗೆ ನಗುತ್ತ ಹೇಳಿದರು. ಇನ್ನು ನಾನು ಎಷ್ಟು ವರ್ಷ ಬದುಕಬಹುದು ಎನ್ನುತ್ತೇನೆ? ಸಾ ಏವ ಮುನ್ನ ನಾನು ಸುರೇಂದ್ರನಾಥರನ್ನು ನೋಡಿದ್ದೆ. ಅವರಿಗೆ ಆಗ ೭೫ ವರ್ಷ ಆಗಿತ್ತು. ಅವರಿಗೆ ೯೧ ವರ್ಷಗಳವರೆಗೂ ಬದುಕಬೇಕು ಎಂದು ಆಶೆ ಇತ್ತು.

ಸಾವೇ ಇಲ್ಲದವರಿಗೆ, ಅಮರರಾಗಿರುವ ನಿಮಗೆ ನಾನು ಏನು ಹೇಳಲಿ? ಎಂದರು ಬ್ರಜೇಂದ್ರರು. ವಿಚಾರಮಥನ ನಡೆದಾಗ ಮೌನ ಸಹಜ. ಒಂದು ಗಳಿಗೆ ಇಬ್ಬರು ಮೌನವಾಗಿದ್ದರು ಗಾಂಧೀಜಿ ಕುತೂಹಲದಿಂದ ಆ ಪ್ರಕಾಂಡ ಪಂಡಿತರನ್ನು ಕೇಳಿದರು. 'ಬಂಗಾಳದ ಯುವಕರಿಗೂ, ಈ ಪ್ರದೇಶಗಳ ಯುವಕರಿಗೂ ಏನು ವ್ಯತ್ಯಾಸ? ಹೇಳುತ್ತೀರಾ?' ಎಂದು.

ಒಂದು ಗಳಿಗೆ ಆಲೋಚನೆ ಮಾಡಿ ಬ್ರಜೇಂದ್ರರು ಹೇಳಿದರು 'ಬಂಗಾಳಿ ಯುವಕ ಭಾವನಾಪೂರ್ಣ, ಧ್ಯೇಯವಾದಿ. ಅವನಗೆ ಊಹಾಶಕ್ತಿ ಇದೆ. ಅದರ ಜೊತೆಯಲ್ಲಿ ಕೋಮಲತನವೂ ಇದೆ. ಆದರೆ ಮನೋಧಾರ್ಢ್ಯ ಕಡಿಮೆ. ಇದರಿಂದ ಆದರ್ಶವಾದಕ್ಕೆ ಧಕ್ಕೆ ಬರಬಹುದೆಂದು ತೋರುತ್ತದೆ. ದಕ್ಷಿಣದ ಯುವಕ ಹೆಚ್ಚು ವ್ಯವಹಾರ ಸಮರ್ಥ. ಎಲ್ಲವನ್ನೂ ಕಲಿಯಬಯಸುತ್ತಾನೆ. ವ್ಯವಹಾರದ ಸೂಕ್ಷ್ಮ ಎಲ್ಲವನ್ನೂ ವಶಮಾಡಿಕೊಳ್ಳಬಯಸುತ್ತಾನೆ.

ಗಾಂಧೀಜಿಗೆ ಆಸಕ್ತಿ ಕೆರಳಿತು 'ನಿಮ್ಮ ಅಭಿಪ್ರಾಯ ಇದೇನೇ?'

'ಹೌದು ಇದಕ್ಕೆ ಒಂದು ಕಾರಣ ಇದೆ. ಬಂಗಾಲ ಬೌದ್ಧ ಪ್ರಭಾವಕ್ಕೆ ಒಳಗಾಗಿತ್ತು. ಒಂದುಸಾವಿರ ವರ್ಷ ಬೌದ್ಧ ಸಂಸ್ಕೃತಿಯ ಪ್ರಭಾವ ಅದರ ಮೇಲೆ ಬಿದ್ದಿತ್ತು. ಬಂಗಾಳದ ಮನಸ್ಸಿನ ಮೇಲೆ ಇದನ್ನು ನೋಡಬಹುದು. ಆ ಪ್ರಭಾವ ಉದಾರ ವಿಶಾಲ. ಈ ಭಾಗದಲ್ಲಿ ಕಾಣಬರುವ ಅಸ್ಪೃಶ್ಯತೆಯ ಬಿರುಕು ಅಲ್ಲಿ ಕಾಣಬರುವುದಿಲ್ಲ. ಆದರೆ ಒಂದು ಆಗಿದೆ. ಬಂಗಾಳೀ ಯುವಕರು ಬೇರೆಯವರೊಂದಿಗೆ ಸುಲಭವಾಗಿ ಸೇರಿಕೊಳ್ಳದವರು. ಆದರೆ ಆಗಾಗ ಕೆಲವು ವಿಶೇಷ ಅಪವಾದವಾಗಿ ಪ್ರತಿಭಾವಂತರು ಉದಯಿಸುತ್ತಾರೆ. ಸಾಧಾರಣ ಯುವಕ ಇತರ ಭಾಗಗಳ ಯುವಕರಿಗಿಂತ ಸ್ವಲ್ಪ ಕೆಳಗೆಯೇ.

ಬ್ರಜೇಂದ್ರರು ಹೇಳಿದ ಪ್ರತಿಭಾವಂತರಲ್ಲಿ ತಾವೇ ಒಬ್ಬರು ಎಂಬುದು ಅವರಿಗೆ ಗೊತ್ತಿತ್ತೋ ಇಲ್ಲವೋ? ಈ ಸಂದೇಹಕ್ಕೆ ಎಡೆಕೊಡದಂತೆಯೇ ಏನೋ ಅವರು ಮುಂದುವರೆಸಿ ಹೇಳಿಬಿಟ್ಟರು: 'ಸಾಧಾರಣ ಯುವಕ ಎಂದಾಗ ನನ್ನ ಮನಸ್ಸಿನಲ್ಲಿ ನನ್ನದೇ ಉದಾಹರಣೆ ಇದೆ. ನನ್ನಲ್ಲೆ ದೋಷವಿದೆ ಎಂದು ನನಗೆ ಗೊತ್ತು. ನನ್ನ ಬಗ್ಗೆ ಇತರರಿಗಿಂತ ನನಗೇ ಹೆಚ್ಚು ಗೊತ್ತಿಲ್ಲವೇ? ದಕ್ಷಿಣ ಭಾರತದ ಯುವಕನಿಗೆ ಒಂದು ವಿಶಿಷ್ಟ ವ್ಯಕ್ತಿತ್ವವಿದೆ. ಒಂದು ಧಾರ್ಢ್ಯ, ದೊಡ್ಡ ದೊಡ್ಡ ಸಮಸ್ಯೆಗಳನ್ನು ಬಿಡಿಸುವ ಶಕ್ತಿ ಇದೆ. ಗಣಿತಶಾಸ್ತ್ರ ನ್ಯಾಯಶಾಸ್ತ್ರ

ಇಂಥ ವಿಷಯಗಳಲ್ಲಿ ಮುಳುಗಿ ತೇಲುತ್ತಾನೆ. ಸ್ವಲ್ಪ ಹಟವೂ ಇದೆ, ಧೈರ್ಯವೂ ಇದೆ ಉಳಿದ ಕಡೆ ಇದು ಕಾಣುವುದಿಲ್ಲ. ಇದರಿಂದ ಹೋರಾಟ ಮನೋಭಾವವು ಅವನಲ್ಲಿ ಬರುತ್ತದೆ. ಇತರರ ಅಭಿಪ್ರಾಯಕ್ಕೆ ಸಮ್ಮತಿ ಇಲ್ಲದ್ದು ತನ್ನದು ಎಂದು ದಕ್ಷಿಣ ಭಾರತದ ವಿದ್ಯಾರ್ಥಿ ಎಷ್ಟು ಬಲವಾಗಿ, ಭಾವೋದ್ವೇಗದಿಂದ ಹೇಳುತ್ತಾನೆ ನೋಡಿ 'ಇಲ್ಲ'. 'ಇಲ್ಲ' ನಾವು ನೋಡುವ ಸ್ಪಷ್ಟ ಭೇದಕ್ಕೆ ಇದೇ ಕಾರಣ. ಉದಾಹರಣೆಗೆ ವೈಷ್ಣವ ಧರ್ಮದ ಬೇರೆ ಬೇರೆ ಪಂಥಗಳಲ್ಲಿ ಇರುವ ಭೇದ.

'ದಕ್ಷಿಣ ಭಾರತದ ಧೈರ್ಯದ ಬಗ್ಗೆ ನೀವು ಹೇಳುತ್ತೀರಿ. ಬಂಗಾಳದ ಅದ್ಭುತ ತ್ಯಾಗ, ಅದ್ಭುತ ಧೈರ್ಯ ಇವುಗಳ ಬಗ್ಗೆ ಏನನ್ನೋಣ?' ಎಂದರು ಗಾಂಧೀಜಿ.

ಬ್ರಜೇಂದ್ರರು ಕೇಳಿದರು. – 'ಸಾಯುವ ಧೈರ್ಯ ಎಂದು ನಿಮ್ಮ ಅಭಿಪ್ರಾಯವೇ?'

ಗಾಂಧೀಜಿ–'ಹೌದು'

'ಆದರೆ ಬಂಗಾಳದಲ್ಲಿ ಬದುಕುವ ಧೈರ್ಯ ಯಾರಿಗಿದೆ?'

ಗಾಂಧೀಜಿ ಹೇಳಿದರು – 'ನಿಮ್ಮ ಗಡ್ಡ ನೋಡಿ. ಸುರೇಂದ್ರನಾಥ ಬ್ಯಾನರ್ಜೀ. ಈ ವಯಸ್ಸಿನಲ್ಲಿಯೂ ಹದಿನೇಳು ವರ್ಷದ ತರುಣನಂತೆ ಕುಣಿಯುತ್ತಿರುವ ರವೀಂದ್ರರನ್ನು ನೋಡಿ. ಬರೋದಾದಾ ಏನು ಕಡಿಮೆಯೇ? ಹೀಗೆಲ್ಲ ಇರುವಾಗ ನೀವು ಹಾಗೆ ಹೇಳ ಬಹುದೇ?'

ಬರೋದಾದಾನ ಹೆಸರನ್ನು ಕೇಳಿ ಬ್ರಜೇಂದ್ರರು ಒಂದು ಗಳಿಗೆ ಮೈಮರೆತರು. ತಾವು ಏನು ಮಾತಾಡುತ್ತಿದ್ದೇವೆಂಬುದೇ ನೆನಪಿರಲಿಲ್ಲ. ಆ ವಿಚಾರವಂತ ಮಹಾತ್ಮನಿಗೆ ತಮ್ಮ ಗೌರವವನ್ನು ಮುಕ್ತ ಕಂಠದಿಂದ ಸಲ್ಲಿಸಿದರು. ಬರೋದಾದ ವೈಚಾರಿಕ, ಕವಿ, ಋಷಿ. ಪಕ್ಷಿಗಳಿಗೆ ಕೂಡ ಅವರನ್ನು ಕಂಡರೆ ನಿರ್ಭಯ. ಅವರೊಡನೆ ಆಡಿಕೊಳ್ಳುತ್ತ ಪ್ರೀತಿಯಿಂದ ತಮ್ಮ ಚುಂಚಗಳನ್ನು ಚುಚ್ಚುತ್ತಿದ್ದವು. ಬ್ರಜೇಂದ್ರರು ತಮ್ಮ ವಿಚಾರದ ಎಳೆಯನ್ನು ಮುಂದುವರೆಸಿ, ಅವರ ಪ್ರೌಢ, ಪಕ್ವ ವಿಚಾರಗಳ ಲಾಭವನ್ನು ನಮಗೆ ನೀಡಬಹುದೆಂದು ತಿಳಿದಿದ್ದೆವು. ಕೆಲವು ವರ್ಷಗಳ ಕೆಳಗೆ ವಿಶ್ವ ಜಾತೀಯ ಪರಿಷತ್ತಿನ ಸದಸ್ಯರನ್ನು ಹೀಗೆಯೇ ಹೇಳಿ ತಲೆದೂಗಿಸಿದ್ದರು, ಆದರೆ ಇವತ್ತು ಮಾತನ್ನು ಮುಗಿಸಿಬಿಟ್ಟರು.

'ಭಾರತದ ಅನುಭವ ಇಷ್ಟು ಅಪಾರವಾಗಿದೆ. ನಿಮಗೆ ಇದನ್ನು ಹೇಳಲು ನಾನು ಯಾರು?'

ಧನ್ಯವಾದಗಳನ್ನರ್ಪಿಸಿ ಅವರು, ನನಗೆ ಬರಲು ಅವಕಾಶವಾಯಿತಲ್ಲ ಎಂದು ಮೃದುವಾಗಿ ಗಾಂಧೀಜಿಯ ಕಾಲನ್ನು ಮುಟ್ಟಿದರು. ಗಾಂಧೀಜಿ ಹಾಸಿಗೆಯಲ್ಲಿದ್ದರು.

ದಯವಿಟ್ಟು ನನಗೆ ಅಪಮಾನ ಮಾಡಬೇಡಿರಿ. ನನಗೆ ಸಂಕೋಚವಾಗುತ್ತದೆ. ಎಂದರು ಗಾಂಧೀಜಿ. ಅವರಿಗೆ ಬಹಳ ಗಾಢ ಸ್ಪರ್ಷವಾಯಿತು. ನಮಸ್ಕಾರ ಮಾಡಿದರು.

*(ಯಂಗ್ ಇಂಡಿಯಾ : ೭-೭-೧೯೨೭)*

ಮುಂದಿನ ವಾರ ಬೆಂಗಳೂರಿನಲ್ಲಿ ಖಾದಿ ಪ್ರದರ್ಶನ ನಡೆಯಿತು. ಅಖಿಲ ಭಾರತ ಚರಖಾ ಸಂಘ ಇತ್ಯಾದಿ ಸಂಸ್ಥೆಗಳ ಸಭೆಗಳು ನಡೆದವು. ಎಲ್ಲರಿಗೂ ಬಲು ಎಚ್ಚರಿಕೆ. ಅತ್ಯಂತ ಅಗತ್ಯವಾದದ್ದನ್ನು ಬಿಟ್ಟು ಯಾವುದರ ಬಗ್ಗೆಯೂ ಯಾರೂ ಗಾಂಧೀಜಿಗೆ ತೊಂದರೆ ಕೊಡಲಿಲ್ಲ. ಇದರಿಂದಾಗಿ ಗಾಂಧೀಜಿ ಎಲ್ಲವನ್ನೂ ತಡೆದುಕೊಂಡರು. ಗಾಂಧೀಜಿಯ ಪ್ರವಾಸದ ಕಾರ್ಯಕ್ರಮ ನಿಶ್ಚಿತವಾಗಿದೆ. ಆಗಸ್ಟ್ ೨೦ರ ವರೆಗೆ ಗಾಂಧೀಜಿ ಮೈಸೂರು ಪ್ರಾಂತದಲ್ಲೆ ಇರುತ್ತಾರೆ. ಅಷ್ಟರೊಳಗೆ ಎಲ್ಲ ದೊಡ್ಡ ದೊಡ್ಡ ಊರುಗಳನ್ನು ನೋಡಿಬರುತ್ತಾರೆ. ನಡುನಡುವೆ ಸ್ವಲ್ಪ ವಿಶ್ರಾಂತಿ.

**ದಕ್ಷಿಣ ಭಾರತ ಖಾದಿ ಪ್ರದರ್ಶನ:**

ಈ ವಾರದ ಮುಖ್ಯ ಸಂಗತಿ ಎಂದರೆ ದಕ್ಷಿಣ ಭಾರತದ ಖಾದಿ ಪ್ರದರ್ಶನ. (ಅದು ಬೆಂಗಳೂರು ನ್ಯಾಷನಲ್ ಹೈಸ್ಕೂಲಿನಲ್ಲಿ ಏರ್ಪಾಡಾಗಿತ್ತು). ಗಾಂಧೀಜಿಗೆ ಇದರ ಮೇಲೆ ಪೂರಾ ಮನಸ್ಸಿತ್ತು. ತಮ್ಮ ಆರೋಗ್ಯ ಸುಧಾರಣೆಯಾದ ಮೇಲೆ ಈ ಶುಭ ಕಾರ್ಯದಿಂದಲೇ ಕೆಲಸ ಪ್ರಾರಂಭಿಸಬೇಕು ಎಂದಿತ್ತು. ಅಲ್ಲದೆ ಅದು ಸರಿಯಾದ ಪ್ರೇರಣೆ ಎಂದು ಅವರ ಅಭಿಪ್ರಾಯ. ಪ್ರದರ್ಶನದ ವ್ಯವಸ್ಥಾಪಕರು ಸ್ವಲ್ಪವೂ ಕೊರತೆ ಮಾಡಲಿಲ್ಲ. ಗಾಂಧೀಜಿ ಈ ಮುಂದಿನ ಮಾತುಗಳಿಂದ ಪ್ರದರ್ಶನವನ್ನು ಉದ್ಘಾಟನೆ ಮಾಡಿದರು.

'ಖಾದಿ ಚಳವಳಿಯ ಉದ್ದೇಶ ಏನು ಮತ್ತು ಅದು ಇದುವರೆಗೆ ಏನು ಮಾಡಿದೆ ಎಂಬುದನ್ನು ಅಧ್ಯಯನ ಮಾಡಲು ಈ ಪ್ರದರ್ಶನದ ಏರ್ಪಾಟು ಅವಕಾಶ ಮಾಡಿಕೊಡುತ್ತಿದೆ. ಪ್ರದರ್ಶನದ ಅಂಗಳದಿಂದ ಹೊರಗೆ ಹೋದ ಕೂಡಲೇ ಎಲ್ಲ ಮರೆತುಬಿಡುವಂಥ ಬರೀ ಕಣ್ಣಿಗೆ ಹಬ್ಬ ಅಲ್ಲ ಈ ಪ್ರದರ್ಶನ. ಇದೇನು ಕೇವಲ ಸಿನೆಮಾ ಚಿತ್ರವಲ್ಲ. ಒಬ್ಬ ವಿದ್ಯಾರ್ಥಿ, ಮಾನವಪ್ರೇಮಿ ದೇಶಪ್ರೇಮಿ ಬಂದು ತಾನೇ ಕಣ್ಣಾರೆ ಎಲ್ಲವನ್ನೂ ನೋಡಿಕೊಳ್ಳಬಹುದಾದ ಒಂದು ಬಗೆಯ ಸಸಿಗಳ ಪಾತಿ ಇದ್ದಂತೆ ಈ ಪ್ರದರ್ಶನ. ನಂಬಿಕೆ ಇಲ್ಲದವರನ್ನು ನಾನು ಕರೆಯುತ್ತೇನೆ. ಇಲ್ಲಿ ಒಂದೆರಡು ನಿಮಿಷ ಅಲ್ಲ, ಒಂದೆರಡು ಗಂಟೆ ಕಾಲ ಕಳೆಯಲಿ. ಅವರಿಗೆ ವಿಶೇಷ ಫಲ ಸಿಕ್ಕುತ್ತದೆ. ಅವರ ಅಪನಂಬಿಕೆಯೂ ಅಳಿಯುತ್ತದೆ. ಸ್ಪಷ್ಟವಾದ ವಿಮರ್ಶೆ ಮಾಡುವವರನ್ನೂ ಅಲ್ಲಿಗೆ ಹೋಗಲು ಆಹ್ವಾನಿಸುತ್ತೇನೆ. ಅಲ್ಲಿ ಅವರಿಗೆ ಅಪೂರ್ಣತೆ ಕಾಣಬಹುದು. ನಕ್ಷೆಗಳನ್ನು ಕಲಾವಂತಿಕೆಯಿಂದ ಬರೆಯದೇ ಇರಬಹುದು. ಆದರೆ ಎಲ್ಲದರಲ್ಲಿಯೂ ಒಂದು ಹೃದಯವಂತಿಕೆ ತುಂಬಿ ತುಳುಕುತ್ತಿರುವುದನ್ನು ನೋಡಬಹುದು.'

ಗಾಂಧೀಜಿಯ ಇಂಥ ಮಾತು ವಿದ್ಯಾರ್ಥಿಗಳಿಗೆ ಟೀಕಾಕಾರರಿಗೆ. ವಿಶ್ವಾಸವಿಲ್ಲದವರಿಗೆ ಮನಮುಟ್ಟಲಿಲ್ಲ ಎನ್ನುವ ಹಾಗಿರಲಿಲ್ಲ. ಪ್ರತಿಯೊಬ್ಬರೂ ನಕ್ಷೆಗಳನ್ನು ಬಲು ಜಾಗರೂಕತೆಯಿಂದ ನೋಡುತ್ತಿದ್ದುದು, ಅಧ್ಯಯನ ಮಾಡುತ್ತಿದ್ದುದು ಬಹಳ ಸ್ವಾರಸ್ಯವಾಗಿತ್ತು. ತಮ್ಮತಮ್ಮೊಳಗೆ ಚರ್ಚೆ ಮಾಡಿಕೊಳ್ಳುತ್ತಿದ್ದರು. ಪ್ರದರ್ಶನದ ವ್ಯವಸ್ಥಾಪಕರೊಡನೆ ಚರ್ಚಿಸುತ್ತಿದ್ದರು. ಟಿಪ್ಪಣಿ ಬರೆದುಕೊಳ್ಳುತ್ತಿದ್ದರು. ಬೇರೆ ಬೇರೆ ಕ್ರಮಗಳನ್ನು ಕೂಲಂಕಷವಾಗಿ ಪರಿಶೀಲಿಸುತ್ತ, ಅಲ್ಲಿ ಇಟ್ಟಿದ್ದ ಸರಳ ಉಪಕರಣಗಳನ್ನೂ ಸಾಹಿತ್ಯವನ್ನೂ ಕೊಳ್ಳುತ್ತಿದ್ದರು. ಇಷ್ಟೇ ಅಲ್ಲ, ಭಾಷಣಗಳನ್ನು

ಕೇಳಲು ಸಾವಿರಾರು ಜನ ಕಿಕ್ಕಿರಿದು ತುಂಬಿರುತ್ತಿದ್ದರು. ಮಾಡಿದ ಭಾಷಣ, ಓದಿದ ನಿಬಂಧ ಎಲ್ಲವನ್ನು ಅಕ್ಕರೆಯಿಂದ ಶಾಂತಿಯಿಂದ ಕೇಳಿ ಪ್ರತಿ ಸಂಜೆಯೂ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಇದೆಲ್ಲವೂ ಬೆಂಗಳೂರಿನ ಸಂಸ್ಕೃತಿ ಸೌಜನ್ಯಗಳಿಗೆ ಸ್ಪಷ್ಟ ಸಾಕ್ಷಿ.

ವಿದ್ಯಾರ್ಥಿ, ವಿಮರ್ಶಕ, ಅವಿಶ್ವಾಸಿ ಪ್ರದರ್ಶನಕ್ಕೆ ಬಂದಿದ್ದರೋ ಇಲ್ಲವೋ, ಭಾಷಣಗಳನ್ನು ಕೇಳಿ ಲಾಭ ಪಡೆದರೋ ಇಲ್ಲವೋ, ಗಾಂಧೀಜಿ ಹೇಳಿದಂತೆ ನೂಲುವವರ ಹಿಂಜುವವರ ಭಾಷೆಯನ್ನು ಅರ್ಥಮಾಡಿಕೊಂಡರೋ ಇಲ್ಲವೋ, ಈ ಅನೇಕ ಕ್ರಮಗಳ ಒಳ ಅರ್ಥವನ್ನು ತಿಳಿದುಕೊಂಡರೋ ಇಲ್ಲವೋ ಬೆಂಗಳೂರು ಕಾಲಾನುಕ್ರಮದಲ್ಲಿ ತಿಳಿಸೀತು. ದೇಶಪಾಂಡೆ ಗಂಗಾಧರರಾಯರೇ ಒಂದು ಭಾಷಣದಲ್ಲಿ ಹೀಗೆ ಹೇಳಿದರು:

‘ಈ ಪ್ರದರ್ಶನದ ಪ್ರಭಾವ ಬೆಂಗಳೂರಿನ ಮೇಲೆ ಆಗದಿದ್ದರೆ ಭಾರತವೇ ಸೋತ ಹಾಗೆ. ಏಕೆಂದರೆ, ಬೆಂಗಳೂರಿಗೆ ಸಿಕ್ಕಂಥ ಈ ಅವಕಾಶ, ಈ ಗೌರವ ಬೇರೆ ಯಾವ ಊರಿಗೂ ಪ್ರಾಂತಕ್ಕೂ ದೊರೆತಿಲ್ಲ. ಬೆಂಗಳೂರಿನವರ ನಡುವೆ ಗಾಂಧೀಜಿ ಎರಡು ತಿಂಗಳೂ ಇದ್ದರು. ರಾಜರೋ ಬಹಳ ಸಹಾನುಭೂತಿಪರರು; ವಾತಾವರಣವೂ ಖಾದಿಗೆ ಬಹಳ ಅನುಕೂಲ. ಇಂಥದರಲ್ಲಿ ಬೆಂಗಳೂರು ಹಿಂದೆ ಉಳಿಯಬಾರದು, ಹಿಂದೆ ಉಳುಯುವುದಿಲ್ಲ. ಹಂಜಾ ಹುಸೇನ ಸಾಹೇಬರು ಒಂದು ಸೊಗಸಾದ ಮಾತನ್ನು ಉಪಯೋಗಿಸಿದರು. ಮನೆಯಲ್ಲೇ ಮಾಡಿದ ಬಟ್ಟೆಯನ್ನು ಮುಟ್ಟಕೂಡದು ಎಂಬ ಈ ಅಸ್ಪೃಶ್ಯತಾಭಾವ ಮೈಸೂರಿಂದ ತೊಲಗಿಹೋದರೆ ಎಷ್ಟು ಒಳ್ಳೆಯದು. ಮೈಸೂರು ದೇಶದಲ್ಲೇ ಅಲ್ಲ, ಎಲ್ಲಾ ಕಡೆಯಲ್ಲೂ ಹೀಗೇ ಆಗಿ, ಖಾದಿ ಬಟ್ಟೆಯು ಗಿರಣಿ ಬಟ್ಟೆಯ ಸ್ಥಾನವನ್ನು ಆಕ್ರಮಿಸಿ ಪ್ರತಿಯೊಂದು ಮನೆಯ, ಗುಡಿಸಿಲಿನ ಪಾವಿತ್ರ್ಯ ಮತ್ತು ನಿಷ್ಠೆಗಳನ್ನು ಪುನರುಜ್ಜೀವನಗೊಳಿಸಿದರೆ ಎಷ್ಟು ಚೆನ್ನ.’

**ಆದಿಕರ್ನಾಟಕ ಹುಡುಗರೊಡನೆ:**

ಮೈಸೂರು ಸಂಸ್ಥಾನದ ಒಟ್ಟು ಜನಸಂಖ್ಯೆ ೫೮ ಲಕ್ಷ. ಅದರಲ್ಲಿ ೧೩ ಲಕ್ಷ ದಲಿತ ವರ್ಗ. ಅವರ ಉದ್ಧಾರಕ್ಕಾಗಿ ಈ ಸಂಸ್ಥಾನ ಮಾಡಿದಷ್ಟು ಮಾಡುತ್ತಿರುವಷ್ಟು ಕೆಲಸ ಬೇರೆ ಯಾವ ಸಂಸ್ಥಾನವೂ ಮಾಡಿಲ್ಲ. ಆಯವ್ಯಯ ಪಟ್ಟಿಯಲ್ಲಿ ಸಾಕಷ್ಟು ಹಣವನ್ನು ಅವರ ಶಿಕ್ಷಣಕ್ಕಾಗಿ, ಅವರಲ್ಲಿ ಸಹಕಾರೋದ್ಯಮ ಬೆಳೆಸಲಿಕ್ಕಾಗಿ ತೆಗೆದಿಟ್ಟಿದೆ. ಅವರ ನೈತಿಕ ಅಭ್ಯುದಯಕ್ಕಾಗಿ, ಶಾಲಾ ಕಾಲೇಜುಗಳಿಗೆ ಹೋಗುವ ದಲಿತ ವಿದ್ಯಾರ್ಥಿಗಳಿಗಾಗಿ ದೇಶದ ನಾನಾ ಕಡೆ ಉಚಿತ ವಿದ್ಯಾರ್ಥಿನಿಲಯಗಳಿವೆ. ಬೆಂಗಳೂರಿನ ನಿಲಯದ ಆದಿಕರ್ನಾಟಕ ಹುಡುಗರನ್ನು ಮೊನ್ನೆ ಶ್ರೀ ಕೆ. ಶಂಕರನಾರಾಯಣರು (ಆಗಿನ ನ್ಯಾಯಾಧೀಶರು) ಕುಮಾರಾಪಾರ್ಕಿಗೆ ಕರೆತಂದಿದ್ದರು. ಸುಮಾರು ೧೦೦ ಜನ ಎಲ್ಲರ ಮುಖಗಳಲ್ಲೂ ಚುರುಕು, ಬುದ್ಧಿವಂತಿಕೆ ಕಾಣುತ್ತಿತ್ತು. ಪ್ರಾತಃಸ್ನಾನ ಆಹ್ನಿಕ ಮಾಡಿದ್ದರ ಗುರುತಾಗಿ ಕೆಲವರ ಹಣೆಯ ಮೇಲೆ ವಿಭೂತಿ ಇತ್ತು. ಗಾಂಧೀಜಿಯ ಮುಂದೆ, ಮಾಲವೀಯರ ಮುಂದೆ ಕುಳಿತು ಆ ಹುಡುಗರು ಸಂಸ್ಕೃತ ಶ್ಲೋಕಗಳನ್ನು ಹೇಳಿದರು. ಹಿಂದಿ, ಕನ್ನಡ, ತಮಿಳುಗಳಲ್ಲಿ

ಭಜನೆಗಳನ್ನು ಹಾಡಿದರು. ಉಚ್ಚಾರಣೆಯಲ್ಲಿ ಏನೂ ತಪ್ಪು ಇರಲಿಲ್ಲ. ಧ್ವನಿಯೂ ಸೊಗಸಾಗಿತ್ತು. ಕೇಳಿದ ಪ್ರಶ್ನೆಗೆಲ್ಲ ಜಾಣ್ಮೆಯಿಂದ ಉತ್ತರ ಕೊಟ್ಟರು. ಹಿಂದೂ ಸಮಾಜ ಇಂಥ ಒಂದು ತನ್ನ ಅಂಗವನ್ನು ಕಡಿದುಹಾಕಿಕೊಂಡು ತನ್ನ ಮಾನಭಂಗ ತಾನೇ ಹೇಗೆ ಮಾಡಿಕೊಂಡಿತೋ ನಮಗೆಲ್ಲರಿಗೂ ಅಚ್ಚರಿ ಆಯಿತು.

ಒಬ್ಬ ಬ್ರಾಹ್ಮಣ ಪಂಡಿತ ಅವರಿಗೆ ತಮಿಳು ವೇದವನ್ನು ಕಲಿಸುತ್ತಾನಂತೆ. ಹಿಂದೂ ಧರ್ಮದ ಮುಖ್ಯ ವಿಷಯಗಳನ್ನು ತಿಳಿಸುತ್ತಾನಂತೆ. ಅವರಿಗೆ ಅನ್ನ ವಸತಿ ಮಾತ್ರವೇ ಅಲ್ಲ, ಬಟ್ಟೆ ಬರೆ ಪುಸ್ತಕ ಎಲ್ಲವನ್ನೂ ಕೊಡುತ್ತಾರೆ. ಸರಕಾರ ಪ್ರತಿಯೊಬ್ಬ ವಿದ್ಯಾರ್ಥಿಗೂ ಎರಡುನೂರು ರೂಪಾಯಿ ವೆಚ್ಚ ಮಾಡುತ್ತದೆ. ಈಗ ೧೪೫ ಹುಡುಗರು ಇದ್ದಾರೆ. ಅವರಿಗೆ ತಿಂಗಳಿಗೆ ೧ ರೂ. ಸ್ವಂತ ವೆಚ್ಚಕ್ಕೆ ಕೊಡುತ್ತೇವೆ. ಅದನ್ನು ತಪ್ಪಿಸಿ ಹೆಚ್ಚು ಜನರನ್ನು ತೆಗೆದುಕೊಳ್ಳುವ ವಿಚಾರವಿದೆ. ಈ ಸಲಹೆಗೆ ಹುಡುಗರು ವಿರುದ್ಧ, ಎಂದು ಹೇಳಲಾಯಿತು. ಈ ಮಾತು ಹುಡುಗರು ಎಂತಹ ಸ್ವತಂತ್ರ ವಾತಾವರಣದಲ್ಲಿ ಬೆಳೆಯುತ್ತಿದ್ದಾರೆ ಎಂಬುದನ್ನು ತೋರಿಸುತ್ತದೆ. ಇದರ ಜೊತೆಗೆ ಒಂದು ಅಸಮಾಧಾನಕರ ಅಂಶವನ್ನೂ ಈ ಮಾತು ತೋರಿಸಿಕೊಟ್ಟಿತು. ಗಾಂಧೀಜಿಯನ್ನು ನಾಲ್ಕು ಮಾತು ಹೇಳಲು ಕೇಳಿದರು. ಗಾಂಧೀಜಿ ಈ ಅಸಮಾಧಾನಕರ ಅಂಶಗಳನ್ನೇ ಎತ್ತಿ ಹೀಗೆ ಹೇಳಿದರು:

'ನನಗೆ ಬಹಳ ದುಃಖವಾಯಿತು. ನಿಮ್ಮ ಸರಳ ಪದ್ಧತಿಗಳನ್ನು ಮರೆತುಬಿಟ್ಟಿದ್ದೀರಿ. ನಿಮ್ಮ ಅಣ್ಣ ತಮ್ಮಂದಿರಿಗಾಗಿ ನಿಮ್ಮ ಸ್ವಂತದ ವೆಚ್ಚದ ದುಡ್ಡನ್ನು ಕಳೆದುಕೊಳ್ಳಲು ಹಿಂದೆಗೆಯುತ್ತಿದ್ದೀರಿ. ನನ್ನ ತಂದೆ ನನಗೆ ಸ್ವಂತ ವೆಚ್ಚಕ್ಕೆ ಏನೂ ಕಾಸು ಕೊಡುತ್ತಿರಲಿಲ್ಲ. ಭಾರತದ ಬೇರೆ ಯಾವ ಕಡೆಯಲ್ಲಿಯೂ ಮಧ್ಯಮ ತರಗತಿಯ ಹುಡುಗರಿಗೆ ಹೀಗೆ ಸೌಕರ್ಯಗಳಿಲ್ಲ. ಆದರೆ ನಿಮಗೆ ವಸತಿ ನೀಡಿ, ಅನ್ನ ನೀಡಿ, ರಾಜ್ಯ ಶಿಕ್ಷಣ ಕೊಡುತ್ತಿದೆ. ನೀವು ಸೋಮಾರಿಗಳಾಗಬೇಕು, ಸ್ವಸಹಾಯವನ್ನು ಮರೆಯಬೇಕು ಎಂದು ಇಷ್ಟೆಲ್ಲ ಮಾಡುತ್ತಿಲ್ಲ. ನಿಮ್ಮ ಬಟ್ಟೆಯನ್ನು ನೀವೇ ಒಗೆದುಕೊಳ್ಳಬೇಕು, ಅಡಿಗೆ ನೀವೇ ಮಾಡಿಕೊಳ್ಳಬೇಕು. ನಿಮ್ಮ ಎಲ್ಲ ಕೆಲಸವನ್ನೂ ನೀವೇ ಮಾಡಿಕೊಳ್ಳಬೇಕು. ನಿಮ್ಮನ್ನು ನೋಡಿದರೆ ನನಗೆ ಪರದೇಶಿಗಳಂತೆ ಕಾಣುತ್ತೀರಿ ಏಕೆ? ಹೇಳಿ ನೋಡೋಣ?"

ಹುಡುಗರೆಲ್ಲ ಚುರುಕಾಗಿ ಕೂಡಲೇ ಉತ್ತರ ಕೊಟ್ಟರು: "ನಾವು ಪರದೇಶಿ ಬಟ್ಟೆ ಉಟ್ಟಿದ್ದೇವೆ, ಆದ್ದರಿಂದ." .

ಗಾಂಧೀಜಿ, ಬಲು ಒಳ್ಳೆಯದು. ನೀವು ಖಾದಿಯನ್ನು ತೊಡದಿರಲು ಏನೂ ಕಾರಣವಿಲ್ಲ. ಈಗ ನೀವು ಹಾಕಿಕೊಂಡಿರುವ ಟೋಪಿಗಳಿಗಿಂತ ಒಂದು ಕಾಲು ಬೆಲೆಯಲ್ಲಿ ನಾನು ಒಳ್ಳೆಯ ಟೋಪಿಗಳನ್ನು ಕೊಡಬಲ್ಲೆ. ನಿಮ್ಮ ಉಪಾಧ್ಯಾಯರೂ, ನಿಮಗಿಂತ ಮೇಲಿನವರೂ, ಖಾದಿ ಹಾಕಿರುವುದಿಲ್ಲ ಎಂಬುದು ನಿಮಗೆ ಅಡ್ಡಿ ಆಗಬಾರದು. ನಿಮ್ಮ ತಂದೆ, ತಾಯಿ ಅಥವಾ ಆದಿಕರ್ನಾಟಕದವರು ಹೆಂಡ ಕುಡಿಯುತ್ತಾರೆ, ಗೋಮಾಂಸ ತಿನ್ನುತ್ತಾರೆ ಎಂದು ನೀವು ಅವರಂತೆ ಮಾಡಬಾರದು. ಇವೆಲ್ಲವನ್ನೂ ನೀವು ಬಿಟ್ಟುಬಿಡಬೇಕು. ನಿಮ್ಮ ನಿಲಯದ

ವ್ಯವಸ್ಥಾಪಕರು ನಿಮಗೆ ಖಾದಿ ಬಟ್ಟೆ ಕೊಡುವಂತೆ ಒತ್ತಾಯ ಮಾಡಬೇಕು. ಆ ಬಟ್ಟೆ ತುಟ್ಟಿ ಆದರೆ ಕಡಿಮೆಯದನ್ನು ಕೊಡಿ ಎನ್ನಬೇಕು. ನಿಮಗೆ ಸಿಗುವ ಶಿಕ್ಷಣ ನಮ್ಮ ದೇಶದ ಕೋಟಿ ಕೋಟಿ ಮಕ್ಕಳಿಗೆ ಸಿಗುವುದಿಲ್ಲ. ನಿಮಗೆ ಸ್ವಂತ ವೆಚ್ಚಕ್ಕೆ ಕೊಡುವ ದುಡ್ಡನ್ನು ಆ ಮಕ್ಕಳಿಗೆ ಕೊಡುವವರು ಯಾರೂ ಇಲ್ಲ. ಆ ಹಣದಿಂದ ಸಿಗುವ ಆಹಾರ ಕೂಡ ಅವರಿಗಿಲ್ಲ. ಅವರಿಗಾಗಿ ನೀವು ಖಾದಿ ತೊಡಬೇಕು, ನೂಲುವುದನ್ನು ಕಲಿಯಬೇಕು. ಖಾದಿ ಪ್ರದರ್ಶನಕ್ಕೆ ಹೋಗಿ, ಅದು ಏನು ತೋರಿಸುತ್ತದೆಯೋ ನೋಡಿ ಬನ್ನಿ.

**ಪಾದ್ರಿಗಳ ಜೊತೆಯಲ್ಲಿ:**

ಪಾದ್ರಿಗಳು ಎಷ್ಟೋ ಜನ ಗಾಂಧೀಜಿಗೆ ಗೆಳೆಯರಾಗಿದ್ದಾರೆ. ಅವರಲ್ಲಿ ಹೊಸದಾಗಿ ಗೆಳೆಯರಾದವರು ಡೇನಿಸ್ ದಂಪತಿಗಳು. ಶ್ರೀಮತಿ ಮತ್ತು ಶ್ರೀ ಜೆರೂಮ್‌ಗೆ (B.Jerrum) ತುಂಬ ಸಹಾನುಭೂತಿ. ತಮಗೂ ತಾವು ಸೇವೆ ಮಾಡುವ ಜನಕ್ಕೆ ನಡುವೆ ಅಂತರ ಇರಬಾರದು ಎಂದು ಅವರ ಅಭಿಪ್ರಾಯ. ಗೆಳೆಯರು ಬಂದಾಗ, ಗಾಂಧೀಜಿ ರಾಟೆ ತಿರುಗಿಸುತ್ತಿದ್ದರು. ನಾವು ಪ್ರದರ್ಶನದಲ್ಲಿ ನೋಡಿದ್ದೇ ಬೇರೆ. ಇಲ್ಲಿ ಇರುವ ರಾಟೆಯೇ ಬೇರೆ. ಗಾಂಧೀಜಿ ಹೇಳಿದರು: 'ಹೌದು. ಇದು ಪ್ರವಾಸಿಗಳ ರಾಟೆ. ಮಡಿಸಿಬಿಟ್ಟರೆ ಔಷಧದ ಪೆಟ್ಟಿಗೆ ಕಂಡಹಾಗೆ ಕಾಣುತ್ತದೆ. ನಮ್ಮ ಬಡಜನರಿಗೆ ಇದು ಔಷಧದ ಪೆಟ್ಟಿಗೆಯೇ ಸರಿ.'

ಪ್ರದರ್ಶನವನ್ನು ನೋಡಿದ ಅಭಿಪ್ರಾಯವನ್ನು ಹೇಳುತ್ತ ಜೆರೂಮ್ ತಮ್ಮ ಕಾಲೇಜಿನ ವಿದ್ಯಾರ್ಥಿಗಳ ಬಗ್ಗೆ ಮಾತನಾಡುತ್ತ ಸ್ವಲ್ಪ ದುಃಖದಿಂದ ಹೇಳಿದರು:'ಅನೇಕ ವಿದ್ಯಾರ್ಥಿಗಳ ಉಡುಗೆ ತೊಡುಗೆ ಯೂರೋಪಿಯನ್ ತರದ್ದು, ಏನು ಮಾಡಬೇಕು, ದುರದೃಷ್ಟ. ಪರದೇಶೀ ವೇಷ ಭೂಷಣ, ಪರದೇಶೀ ತಿಂಡಿ ತೀರ್ಥದ ನೀತಿ ಹೇಗೋ ಕ್ರಿಶ್ಚನ್ ಮತಕ್ಕೆ ಗಂಟು ಬಿದ್ದಿದೆ.' ಶ್ರೀಮತಿ ಜೆರೂಮ್ ಹೇಳಿದರು: 'ನಿಜ, ಆದರೆ ಒಂದು ಬದಲಾವಣೆ ಆಗಲೇ ಪ್ರಾರಂಭ ಆಗಿಲ್ಲವೆ?' ಗಾಂಧೀಜಿ ಅಂದರು: 'ವಿಚಾರದಲ್ಲಿ ಒಂದು ಪರಿವರ್ತನೆಯೇನೋ ಬರುತ್ತದೆ. ಆದರೆ ಜೊತೆಯಲ್ಲಿ ಆಚಾರ ಬದಲಾಗುತ್ತಿಲ್ಲ.' ಕಲ್ಕತ್ತೆಯ ತಮ್ಮ ವೈ.ಎಂ.ಸಿ.ಎ. ಗೆಳೆಯರ ಬಗ್ಗೆ ತಮಗೆ ಬಂದ ಅನುಭವಗಳನ್ನು ಗಾಂಧೀಜಿ ಹೇಳಿದರು. ಜೆರೂಮ್ ಕೇಳಿದರು : "ಪಾದ್ರಿಗಳು ಈ ದೇಶದಲ್ಲಿ ಇರಬೇಕೆಂದರೆ ಅವರು ಯಾವ ರೀತಿ ಕೆಲಸ ಮಾಡಬೇಕು ಎಂದು ನಿಮ್ಮ ಅಭಿಪ್ರಾಯ?"

ಗಾಂಧೀಜಿ: ತಮ್ಮ ಮನೋಧರ್ಮವನ್ನು ಅವರು ಬದಲಾಯಿಸಬೇಕು. ಇತರ ಮತಗಳನ್ನು ಹಳಿದು ತಮ್ಮ ಮತ ಒಂದೇ ಮೋಕ್ಷದಾಯಕ ಎಂದು ಹೇಳುವುದು ನಿಮ್ಮ ಪರಿಪಾಠ. ಇದನ್ನು ಪೂರ್ಣ ಬದಲಾಯಿಸಬೇಕು. ತಮ್ಮ ಸ್ವಸ್ವರೂಪವನ್ನು ಜನರಿಗೆ ತೋರಿಸಿಕೊಳ್ಳಲಿ. ಹಿಂದೂಗಳು ಉತ್ತಮ ಹಿಂದೂಗಳಾಗಲಿ. ಮುಸಲ್ಮಾನರು ಉತ್ತಮ ಮುಸಲ್ಮಾನರಾಗಲಿ. ಆನಂದಿಸಲಿ. ಮೂಲದಿಂದಲೇ ಕೆಲಸ ಪ್ರಾರಂಭವಾಗಬೇಕು. ಜನರ ಜೀವನಗತಿ ಉತ್ತಮವಾದದ್ದು ಏನಿದೆಯೇ ಅದನ್ನು ಅರಿತು ಅದಕ್ಕೆ ಪ್ರತಿಯಾಗಿ ಏನನ್ನೂ ಹೇಳದಿರಲಿ. ಇದರಿಂದ ಪಾದ್ರಿಗಳ ಕೆಲಸ ಹೆಚ್ಚು ಪರಿಣಾಮಕಾರಿ ಆದೀತು. ಆಗ ಅವರು ಆಡುವ ಮಾತು ಅವಿರೋಧವಾಗಿ ನಿಸ್ಸಂದೇಹವಾಗಿ ಪ್ರಶಂಸೆ ಪಡೆದೀತು. ಒಂದು ಮಾತಿನಲ್ಲಿ ಹೇಳುತ್ತೇನೆ.

ಜನರ ಬಲಿಗೆ ಗುರುಗಳಂತೆ, ಪೋಷಕರಂತೆ ಹೋಗಬಾರದು. ಅವರಲ್ಲಿಯೇ ಒಬ್ಬರಂತೆ ಹೋಗಿ, ಅವರ ನಡುವೆ ಕೆಲಸ ಮಾಡಬೇಕು. ಅವರಿಗೆ ಉಪಕಾರ ಮಾಡಲು ಹೋಗಬಾರದು. ಅವರ ಸೇವೆ ಮಾಡಲು ಹೋಗಬೇಕು.

'ನಿಮಗೆ ವಂದನೆಗಳು. ಮುಂದಿನ ವರ್ಷ ಡೆನ್ಮಾರ್ಕಿಗೆ ಹೋಗುತ್ತೇವೆ. ನಿಮ್ಮ ಸಂದೇಶ ಒಯ್ಯಲು ನಮಗೆ ತುಂಬ ಇಷ್ಟ.'

ಗಾಂಧೀಜಿ: ನಿಮಗೆ ನನ್ನ ಸಂದೇಶ ಕೊಟ್ಟಿದ್ದೇನಲ್ಲ.

"ಇದನ್ನಂತೂ ಹೇಳುತ್ತೇವೆ. ಅದರೆ ನಮ್ಮ ಜನಕ್ಕೇ ಎಂದು ಏನಾದರೂ ವಿಶೇಷವಾದದ್ದು ಹೇಳುವದಿಲ್ಲವೆ?"

ಗಾಂಧೀಜಿ: ಹೊರಗಿನದು ಯಾವಾಗಲೂ ಒಳಗಿನದರ ಆವಿರ್ಭಾವ. ಡೆನ್ಮಾರ್ಕಿನ ಜನಕ್ಕೆ ನಮ್ಮ ಜನರ ಸೇವೆ ಮಾಡಲು ಇಷ್ಟವಿದ್ದರೆ ಜೀವನಪ್ರದವಾದ ಅವರ ಸಹಕಾರೀ ಪಶುಪಾಲನಾ ಪದ್ಧತಿ, ಗೋಸಂವರ್ಧನೆಗಳ ಉದ್ಯೋಗ ನಮಗೆ ಕಲಿಸಲಿ. ನೀವು ಊರಿಗೆ ಹೊರಡುವ ಮುಂಚೆ ಒಂದೆರಡು ವಾರ ಆಶ್ರಮಕ್ಕೆ ಬಂದು ಇರಿ ಎಂದು ಗಾಂಧೀಜಿ ಹೇಳಿದರು. ಅವರೂ ಅದನ್ನು ವಿನಯದಿಂದ ಒಪ್ಪಿಕೊಂಡರು. ಪಾದ್ರಿಗಳು ಮೂಲದಿಂದಲೇ ಕೆಲಸ ಮಾಡಬೇಕು ಎಂದಾಗ ಶ್ರೀಮತಿ ಜೆರೂಮ್ ನೂಲುವದನ್ನು ಕಲಿಯಲು ಅಪೇಕ್ಷಿಸಿದರು. ಆಶ್ರಮಕ್ಕೆ ಆಕೆ ಬಂದರೆ ಒಳ್ಳೆ ನೂಲುಗಾತಿ ಆಗುವುದರಲ್ಲಿ ಸಂದೇಹವಿಲ್ಲ ಎಂದರು ಗಾಂಧೀಜಿ.

*(ಯಂಗ್ ಇಂಡಿಯಾ : ೧೪-೭-೧೯೨೭)*

**ಖಾದಿಗಾಗಿ ಹಿಂದಿ ನಾಟಕ: ೨೧-೭-೧೯೨೭:**

ಈ ವಾರದಲ್ಲಿ ಗಾಂಧೀಜಿ, ಅಮೇಚೂರ್ ನಾಟಕ ಸಂಸ್ಥೆಯವರು ಏರ್ಪಡಿಸಿದ್ದ ನಾಟಕಕ್ಕೆ ಪ್ರೇಕ್ಷಕರಾಗಿ ಹೋಗಿದ್ದರು. ಆಗ ದಿ॥ ಪಂಡಿತ್ ತಾರಾನಾಥರಾಯರು ಅಮೆಚೂರ್ ನಾಟಕ ಅಸೋಸಿಯೇಶನ್ ನಾಟಕದಲ್ಲಿ ಪಾತ್ರ ವಹಿಸಿದ್ದರು. ಬಹುಶಃ ಗಾಂಧೀಜಿ ನೋಡುವ ನಾಟಕಗಳಲ್ಲೆ, ಇತ್ತೀಚೆಗೆ ಇದೇ ಮೊದಲನೆಯದ್ದೋ ಏನೋ. ಈ ನಾಟಕ ಪ್ರದರ್ಶನ ಉತ್ಪತ್ತಿ ಖಾದಿ ನಿಧಿಗೆ ನೀಡಲ್ಪಟ್ಟಿತು. ನಾಟಕ ಹಿಂದಿ ಭಾಷೆಯದು. ವಸ್ತು ಕಬೀರ್‌ದಾಸ್. ಈ ನಾಟಕದ ಹಣವನ್ನು ಖಾದೀ ನಿಧಿಗೆ ನೀಡಬೇಕೆಂಬ ವಿಚಾರವು ಬಹಳ ಸುಸಂಗತ. ನಾಟಕ ತುಂಬ ಚೆನ್ನಾಗಿತ್ತು. ಪ್ರದರ್ಶನವೂ ಚೆನ್ನಾಗಿತ್ತು. ಕಬೀರ ನಾಟಕವನ್ನು ಆರಿಸಿಕೊಂಡದ್ದು, ಅದನ್ನು ಬರೆದು ಆಡಿದ್ದು, ಅನೇಕ ನಟರು ಖಾದಿಧಾರಿಗಳಾಗಿದ್ದು ತಾರಾನಾಥರಾಯರ ಉಚಿತ ಭಾವಕೋಮಲತೆಯ ಅಭಿನಯ ಎಲ್ಲ ಉತ್ತಮ ಅಭಿರುಚಿ ತೋರಿಸಿತ್ತು. ತಾರಾನಾಥರಾಯರು ತಮ್ಮ ಹಿಂದೀ ಪ್ರಚಾರ, ಖಾದೀ ಪ್ರಚಾರ, ಎರಡನ್ನೂ ಸಾಧಿಸಿದರು: ಈ ತ್ರಿವೇಣಿ ಸಂಗಮ ಗಾಂಧೀಜಿಗೆ ತುಂಬ ಇಷ್ಟವಾಯಿತೋ ಏನೋ ಕೊನೆಯವರೆಗೆ ಕುಳಿತೇಬಿಟ್ಟರು. ಯಾರಾದರೂ ವಿಮರ್ಶಕರಿದ್ದರೆ ಅಲ್ಲಿ ಇಲ್ಲಿ ಏನಾದರೂ ಲೋಪಗಳು ಕಾಣುತ್ತಿದ್ದವೋ ಏನೋ. ರಂಗಮಂಟಪ ಇನ್ನೂ ಸರಳವಾಗಿ ನಟರಿಂದ

ಮಾಡಿಸಿದ ದೀರ್ಘ ಭಾಷಣಗಳು ಕಡಿಮೆ ಆಗಿ, ತಾರಾನಾಥರಾಯರು ಈಗಿನ ನಾಟಕದ ವಿರುದ್ಧ ಬಂಡೆಬ್ಬಿಸಿದ್ದರೆ ಚೆನ್ನಾಗಿತ್ತು. ಆದರೆ ಅವರ ಉದ್ದೇಶ ಅದಲ್ಲ. ನಾಟಕದ ಕೊನೆಯಲ್ಲಿ, ಸಂಘದ ಅಧ್ಯಕ್ಷರಾದ ಮೈಸೂರಿನ ಮಂತ್ರಿ ಮಂಡಲದ ಸದಸ್ಯ ದಿ॥ ಸಿ. ಬಾಲಸುಂದರಂ ಐಯ್ಯರ್‌ರವರು ೫೦೦ ರೂಪಾಯಿ ನಿಧಿಯನ್ನು ಗಾಂಧೀಜಿಗೆ ಅರ್ಪಿಸಿದರು. ಗಾಂಧೀಜಿ ಆ ನಿಧಿಯನ್ನು ಸ್ವೀಕರಿಸುತ್ತ ಎಲ್ಲರಿಗೂ ವಂದನೆಗಳನ್ನು ಅರ್ಪಿಸಿ, ತಮಗೆ ತ್ರಿವಿಧ ಸಂತೋಷ ಕೊಟ್ಟದ್ದಕ್ಕಾಗಿ ಹೊಗಳಿದರು. ದರಿದ್ರ ನಾರಾಯಣನ ಪ್ರತಿನಿಧಿಯಾದ ನನಗೆ ಒಂದು ನಿಧಿಯನ್ನು ಕೊಟ್ಟಿರಿ. ದಕ್ಷಿಣ ದೇಶದಲ್ಲಿ ಸುಸ್ಪಷ್ಟವಾಗಿ, ಸ್ವಚ್ಛವಾಗಿ, ಹಿಂದಿಯನ್ನು ಉಚ್ಚರಿಸಿದಿರಿ. ನಟರಲ್ಲಿ ಅನೇಕರು ಖಾದಿಧಾರಿಗಳಾಗಿದ್ದಿರಿ. ನಮ್ಮ ದೇಶದ ನಿವಾಸಿಗಳಲ್ಲಿ ಯಾರೊಬ್ಬರೂ, ರಾಯರಾಗಲಿ, ರಂಕರಾಗಲಿ, ಹೆಂಗಸಾಗಲಿ, ಗಂಡಸಾಗಲಿ, ವಕೀಲರಾಗಲಿ, ವೈದ್ಯರಾಗಲಿ, ವರ್ತಕರಾಗಲಿ ಖಾದಿಧಾರಿಗಳಾಗದಿದ್ದರೆ ನನಗೆ ಎಷ್ಟು ದುಃಖವೋ ನಟರಿಗೆ ಅದು ಅರ್ಥವಾದಂತಿತ್ತು. ನಮ್ಮ ದೇಶದ ಸಾಮಾನ್ಯ ಧರ್ಮವಾದ ಇದನ್ನು ಎಲ್ಲರೂ ಅನುಸರಿಸು ವಂತಾಗಬೇಕು. ಇವತ್ತು ನಟರು ನಟನೆ ಮಾಡಿದ್ದಾರೆ. ಇದನ್ನೇ ಅವರು ತಮ್ಮ ಬದುಕಿನ ಶಾಶ್ವತ ಭಾಗವಾಗಿ ಮಾಡಿಕೊಳ್ಳಲಿ. ನಾನು ಕರ್ನಾಟಕವನ್ನು ಬಿಟ್ಟುಹೋಗುವವರೆಗೆ ಬದುಕಿದ್ದರೆ, ನನ್ನ ನೆನಪಿನಲ್ಲಿ ಉಳಿಯುವ ಅನೇಕ ಸಂತೋಷದ ಸಂಗತಿಗಳಲ್ಲಿ ಇವತ್ತಿನ ಸಂಜೆಯ ಈ ಅನುಭವವೂ ಪ್ರಧಾನವಾಗಿರುವುದು ಎಂದು ಮೊದಲಾಗಿ ಗಾಂಧೀಜಿ ಮಾತನಾಡಿದರು.

**ದಕ್ಷಿಣ ಭಾರತ ಹಿಂದೀ ಸಮ್ಮೇಲನ**
**(ಯಂಗ್ ಇಂಡಿಯಾ, ೧೮-೮-೧೯೨೭)**

ದಕ್ಷಿಣ ಭಾರತದಲ್ಲಿ ಹಿಂದೀ ಪ್ರಚಾರದ ಮುಖಂಡರು ಹರಿಹರಶರ್ಮ. ಗಾಂಧೀಜಿ ಬೆಂಗಳೂರಿನಲ್ಲಿ ಇದ್ದದ್ದನ್ನು ಉಪಯೋಗ ಮಾಡಿಕೊಳ್ಳಬೇಕೆಂದು, ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಪ್ರಥಮ ಹಿಂದೀ ಪ್ರಚಾರ ಸಮ್ಮೇಲನ ಒಂದನ್ನು ಏರ್ಪಡಿಸಿದರು. ಆ ಕಾಲದಲ್ಲಿ ಹಿಂದೀ ಪ್ರಚಾರ ಮನ ಒಲಿಸುವುದರ ಮೂಲಕ, ರಾಷ್ಟ್ರೀಯ ಭಾವನೆಯಿಂದ ನಡೆಯುತ್ತಿತ್ತು. ದಕ್ಷಿಣ ಭಾರತದಲ್ಲಿ ಹಿಂದೀ ಪ್ರಚಾರದ ಕೆಲಸ ಸಾಕಷ್ಟು ನಡೆದಿತ್ತು. ಮದರಾಸಿನಲ್ಲಿದ್ದ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯ ಕಚೇರಿ ವರ್ಷಕ್ಕೆ ಐದು ಪರೀಕ್ಷೆಗಳನ್ನು ನಡೆಸಿ, ಶಾಲಾ ಕಾಲೇಜುಗಳಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಆಕರ್ಷಿಸಿತ್ತು. ಪಂಡಿತ ಹರಿಹರ ಶರ್ಮರು ದಕ್ಷಿಣ ಭಾರತದಲ್ಲಿಯೇ ಹಿಂದೀ ಪ್ರಚಾರಕ್ಕಾಗಿ ನಲವತ್ತುಸಾವಿರ ರೂಪಾಯಿ ಸಂಗ್ರಹಿಸಿದ್ದರು. ಉತ್ತರದಲ್ಲಿ ಗಾಂಧೀಜಿಯ ಮತ್ತು ಜಮುನಾಲಾಲರ ಪ್ರಯತ್ನದಿಂದ ಒಂದುಲಕ್ಷ ರೂಪಾಯಿ ಸಂಗ್ರಹ ಆಗಿತ್ತು. ದಕ್ಷಿಣ ದೇಶದಲ್ಲಿ, ಇಂಟರ್ ಮೀಡಿಯೆಟ್ ಪರೀಕ್ಷೆಯಲ್ಲಿ ಹಿಂದೀ ಒಂದು ಐಚ್ಛಿಕ ಭಾಷೆ ಆಗಿತ್ತು. ಎಷ್ಟೋ ಶಾಲೆಗಳಲ್ಲಿ ಹಿಂದೀ ಭಾಷೆ ಪಾಠಕ್ರಮದಲ್ಲಿಯೇ ಸೇರಿಕೊಂಡುಬಿಟ್ಟಿದೆ. ಸಮ್ಮೇಲನದ ಕಟ್ಟಕಡೆಯ ದಿನ ಗಾಂಧೀಜಿ, ದಕ್ಷಿಣ ಭಾರತೀಯರಿಗೆ ಹಿಂದೀ ಪ್ರಚಾರವನ್ನು ಹೆಚ್ಚು ದಕ್ಷತೆಯಿಂದ, ಒಳ್ಳೆಯ ತಳಹದಿಯಮೇಲೆ ನಡೆಸುವಂತೆ ತೀವ್ರವಾಗಿ ವಿನಂತಿ ಮಾಡಿದರು.

ಗಾಂಧೀಜಿ ಹೇಳಿದರು: ಭಾರತ ಇವತ್ತು ಎರಡು ಭಾಗವಾಗಿದೆ. ವಿಂಧ್ಯದ ಉತ್ತರದವರೆಗೆ ದಕ್ಷಿಣ ಭಾಗದೊಡನೆ ಹಾರ್ದಿಕ ಸಂಬಂಧವಿಲ್ಲ. ಉತ್ತರದ ಭಾಗ ದೊಡ್ಡದು. ಹೆಚ್ಚು ವಿಶಾಲ. ದಕ್ಷಿಣದವರು ಉತ್ತರದ ಭಾಷೆ ಕಲಿಯಬೇಕಾದದ್ದು ಕರ್ತವ್ಯ. ಉತ್ತರದಲ್ಲಿ ಸಿಂಧದಿಂದ ಬಂಗಾಳದವರೆಗೆ ನನ್ನ ಹರಕು ಮುರುಕು ಹಿಂದಿ ಉಪಯೋಗಿಸಿ ಪ್ರವಾಸ ಮಾಡುತ್ತೇನೆ. ಇಲ್ಲಿಗೆ ಬಂದಾಗ ಇಂಗ್ಲೀಷಿಲ್ಲದೆ ನಡೆಯುವುದಿಲ್ಲ. ನೀವು ಹಿಂದಿಯನ್ನು ಕಲಿಯದೆ ಇದ್ದರೆ ಉತ್ತರ ದಕ್ಷಿಣಗಳಿಗೆ ನಡುವೆ ಅಡ್ಡವಾಗಿರುವ ವಿಂಧ್ಯ ಪರ್ವತವನ್ನು ದಾಟಲು ಆಗುವುದಿಲ್ಲ. ನಿಮ್ಮ ದೇಶ ಭಾಷೆಗಳನ್ನು ಮರೆಯಬೇಡಿರಿ. ನನಗೂ ನನ್ನ ಭಾಷೆ ಎಂದರೆ ಹೆಮ್ಮೆಯೇ. ಆದರೆ ನೀವು ಬರೀ ಗುಜರಾತಿಗಳು, ಬಂಗಾಲಿಗಳು, ಕರ್ನಾಟಕರು, ತಮಿಳರು ಆಗಿರದೇ ಭಾರತೀಯರಾಗಬೇಕು ಎಂದರೆ ನಾವು ಹಿಂದಿಯನ್ನು ಕಲಿಯಬೇಕು. ಅದನ್ನು ಕಲಿಯುವುದೂ ಅಷ್ಟು ಕಷ್ಟವಲ್ಲ. ವಾರಕ್ಕೆ ಎರಡು ಗಂಟೆ ಮಾತ್ರ ಕಲಿತು, ಎಷ್ಟೋ ಜನ ಆರು ತಿಂಗಳಲ್ಲೆ ಹಿಂದೀ ಕಲಿತಿದ್ದಾರೆ. ಇಷ್ಟು ಅಲ್ಪ ಅವಕಾಶವನ್ನು ನೀವು ದೇಶ ಸೇವೆಗಾಗಿ ವಿನಿಯೋಗಿಸಬೇಕೆಂದು ಬಿನ್ನಯಿಸುತ್ತೇನೆ.

ಸಂಪರ್ಕ ಭಾಷೆಯ ಮಾತು ಬೇರೆ, ಏಕಲಿಪಿಯ ಮಾತು ಬೇರೆ. ಹಿಂದೀ ಜ್ಞಾನ ಉತ್ತರದವರ ಸಂಗಡ ಸಂಪರ್ಕ ನೀಡುವುದಲ್ಲದೆ ನಿಮ್ಮ ಹೃದಯವನ್ನು ಅವರಿಗೆ ಬಿಚ್ಚಿ ತೋರಿಸುತ್ತದೆ. ಅದೆ ರೀತಿ ನಿಮ್ಮ ಭಾಷೆಗಳಿಗೆ ದೇವನಾಗರಿಯ ಲಿಪಿಯನ್ನು ಬಳಸಿದರೆ, ಉತ್ತರದವರು ನಿಮ್ಮ ಸಂಗಡ ಹೆಚ್ಚು ಸಂಪರ್ಕ ಬೆಳೆಸಲು ಅನುಕೂಲವಾಗುತ್ತದೆ.

**ವಿದ್ಯಾರ್ಥಿಗಳ ನಡುವೆ:**

೧೨ನೆ ತಾರೀಖು ಬೆಂಗಳೂರಿನ ವಿದ್ಯಾರ್ಥಿಗಳದು ಒಂದು ದೊಡ್ಡ ಸಭೆ ನಡೆಯಿತು. ವಿದ್ಯಾರ್ಥಿಗಳು ೧,೨೦೦ ರೂಪಾಯಿಗಳ ನಿಧಿಯನ್ನು ಅರ್ಪಿಸಿದರು. ಕನ್ನಡದಲ್ಲಿ ಒಂದು ಬಿನ್ನವತ್ತಳೆ ಬರೆದಿತ್ತು. ಅದನ್ನು ದೇವನಾಗರಿ ಲಿಪಿಯಲ್ಲಿ ಬರೆದು ಗಾಂಧೀಜಿಗೆ ಕೊಟ್ಟರು. ವಿದ್ಯಾರ್ಥಿಗಳಲ್ಲಿ ಎಲ್ಲರಿಗಿಂತ ಕಿರಿಯನು ಅದನ್ನು ಓದಿದನು. ಸಭಾಭವನ ಕಿಕ್ಕಿರಿದು ತುಂಬಿತ್ತು. ಗಾಂಧೀಜಿಯ ಹಿಂದೀ ಭಾಷಣವನ್ನು ವಿದ್ಯಾರ್ಥಿಗಳು ಬಹಳ ಗಮನಕೊಟ್ಟು ಕೇಳಿದರು. ಹಿಂದಿಯನ್ನು ಅಭ್ಯಾಸಮಾಡಲು ಒಂದು ಕಳಕಳಿಯ ವಿನಂತಿ, ಮತ್ತು ೧,೨೦೦ ರೂಪಾಯಿ ಕೊಟ್ಟು ಅವರು ಮಾಡಿಕೊಂಡ ಪ್ರಾಯಶ್ಚಿತ್ತಕ್ಕಿಂತ ಹೆಚ್ಚು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂಬ ಸಲಹೆ ಇವೇ ಗಾಂಧೀಜಿಯ ಭಾಷಣದ ಮುಖ್ಯ ಸಾರ. ವಿದ್ಯಾರ್ಥಿಗಳ ಶಿಕ್ಷಣಕ್ಕೆ ಬರುವ ಹಣವು ಬಡವರಿಂದ ಅದರಲ್ಲೂ ಕುಡಿತದ ಕೆಟ್ಟ ಚಾಳಿಯಿಂದ, ಮಾದಕದ್ರವ್ಯ ಸೇವನೆಯಿಂದ ಬಂದಂಥ ಪಾಪಿಷ್ಟ ಹಣ. ನಾಲಗೆಯನ್ನು ನಿಗ್ರಹಿಸಿ, ಬ್ರಹ್ಮಚರ್ಯವನ್ನು ನಡೆಸಿ ಎಂದು ಹೇಳಿದರು. ಹಿಂದಿನ ಕಾಲದಲ್ಲಿ ವಿದ್ಯಾರ್ಥಿಯನ್ನು ಬ್ರಹ್ಮಚಾರಿ ಎನ್ನುತ್ತಿದ್ದರು. ಏಕೆಂದರೆ ಅವನ ಅಧ್ಯಯನ, ಕರ್ಮ, ಎಲ್ಲವೂ ಬ್ರಹ್ಮ ಶೋಧನೆಗಾಗಿ ನಡೆಯುತ್ತಿತ್ತು. ಅತ್ಯಂತ ಸರಳ ಜೀವನ ಮತ್ತು ಇಂದ್ರಿಯ ನಿಗ್ರಹ ಇವುಗಳ ತಳಹದಿಯ ಮೇಲೆ ವಿದ್ಯಾರ್ಥಿ ತನ್ನ ಬಾಳನ್ನು ಕಟ್ಟುತ್ತಿದ್ದ. ಎಲ್ಲ ಧರ್ಮಗಳು ಹೇಳುವದು ಇದನ್ನೇ. ಮೌನದಲ್ಲಿ ಇಂದ್ರಿಯಗಳಿಗೆ ತನ್ನನ್ನು ಸಡಿಲಬಿಟ್ಟು, ಬಾಳಿದವನಿಗೆ ಮುಪ್ಪಿನಲ್ಲಿ ನಿಗ್ರಹ ಬಂದೀತೇ?

ಆಟ ಆಡುವದನ್ನು ಬಿಟ್ಟು, ಬರೀ ಪುಸ್ತಕ ಹಿಡಿಯಿರಿ ಎಂದು ನಾನು ಹೇಳುವದಿಲ್ಲ. ಆದರೆ ಆಟ, ಕೆಲಸ ಎಲ್ಲ ನಿಗ್ರಹದ ನೆಲಗಟ್ಟಿನ ಮೇಲೆ ನಿಲ್ಲಲಿ. ಅವು ನಿಮ್ಮನ್ನು ದೇವರಿಗೆ ಸಮೀಪ ಒಯ್ಯುವಂತೆ ಇರಬೇಕು.

*ವಿಜ್ಞಾನ ಸಂಸ್ಥೆಯಲ್ಲಿ:*
*(೧೩-೮-೧೯೨೧)*

ಮರುದಿನ ಗಾಂಧೀಜಿ ವಿಜ್ಞಾನದ ಸಂಸ್ಥೆಗೆ ಹೋಗಿ ಬಂದರು. ಅಲ್ಲಿಯ ಅಧಿಕಾರ ಬೇರೆ ಬೇರೆ ಶಾಖೆಗಳನ್ನು ಅವರಿಗೆ ತೋರಿಸುತ್ತಿದ್ದರು. ಅಲ್ಲಿನ ಅಧ್ಯಾಪಕರು ಎಲ್ಲವನ್ನೂ ವಿಚಾರಿಸುತ್ತಿದ್ದಾಗ ಗಾಂಧೀಜಿ ಕಿವಿಗೊಟ್ಟಿದ್ದರೂ, ಅವರ ಮನಸ್ಸು ಮಾತ್ರ ವಿಚಾರದಲ್ಲಿ ಮುಳುಗಿತ್ತು. ಈ ಪ್ರಯೋಗ ಎಷ್ಟು ತುಟ್ಟಿ. ತೆರಿಗೆದಾರ ಈ ಹಣವನ್ನೆಲ್ಲ ಕೊಡಬೇಕು. ಅವನಿಗೆ ಇದರಿಂದ ಪ್ರತಿಫಲ ಅತಿ ದೂರ. ಈ ಹುಡುಗರು ಎಂಥ ಭಸ್ಮಾಸುರನನ್ನು ಸೃಷ್ಟಿಸುತ್ತಿದ್ದಾರೆ ಎಂದುಕೊಳ್ಳುತ್ತಿದ್ದಾರೋ ಏನೋ. ವಿದ್ಯಾರ್ಥಿಗಳು ಸೇರಿ ೩೨೫ ರೂಪಾಯಿ ನಿಧಿಯನ್ನು ಕೊಟ್ಟರು. ಸುಮ್ಮನೇ ಸ್ವೀಕರಿಸಬೇಕೋ, ವಂದನೆ ಅರ್ಪಿಸಬೇಕೋ, ಮತ್ತೇನೂ ಹೇಳಬಾರದು ಎಂದುಕೊಂಡಿದ್ದರೋ ಏನೋ-ಆದರೆ ಮಾತನಾಡಲು ಪ್ರಾರಂಭಿಸಿದ ಮೇಲೆ ಅವರ ಕೈಯಲ್ಲಿ ತಡೆಯಲು ಆಗಲಿಲ್ಲ. ಹುಡುಗರೂ ಕೂಡ ಹೃದಯಾಂತರಾಳದಿಂದ ಬಂದ ಅವರ ಕಹಿ ಮಾತನ್ನು ಮುಗ್ಧರಾಗಿ ಕೇಳಿದರು. ಒಂದು ರೀತಿಯಾಗಿ ಅದೂ ಸರಿಯಾಗಿಯೇ ಇತ್ತು.

ನಿಟ್ಟುಸಿರು ಬಿಡುತ್ತ ಗಾಂಧೀಜಿ ಹೇಳಿದರು : 'ಇದರಲ್ಲಿ ನನಗೆ ಏನು ಸ್ಥಾನ ಎಂದು ನನಗೇ ಅಚ್ಚರಿ. ನನ್ನಂಥ ಹಳ್ಳಿಗನಿಗೆ ಇಲ್ಲಿ ಯಾವ ಸ್ಥಾನವೂ ಇಲ್ಲ. ಅಚ್ಚರಿ ಗಾಬರಿಗಳ ನಡುವೆ ಮೂಕನಾಗಿ ನಿಲ್ಲಬೇಕಾದ್ದೇ. ಹೆಚ್ಚು ಹೇಳುವ ಮನಸ್ಸು ಇಲ್ಲ. ಇಷ್ಟು ಮಾತ್ರ ಹೇಳುತ್ತೇನೆ. ನೀವು ಇಲ್ಲಿ ಕಾಣುವ ದೊಡ್ಡ ಪ್ರಯೋಗ ಶಾಲೆಗಳು, ವಿದ್ಯುತ್ ಉಪಕರಣಗಳು ಎಲ್ಲವೂ ನಮ್ಮ ಜನಕೋಟಿಯ ದುಡಿತದಿಂದ-ಅದೂ ಇಷ್ಟ ಇಲ್ಲದ ಬಲಾತ್ಕಾರದ ದುಡಿತದಿಂದ ಬಂದದ್ದು. ಟಾಟಾ ಅವರ ಮೂವತ್ತು ಲಕ್ಷ ಹಣ ಹೊರಗಿನಿಂದ ಬರಲಿಲ್ಲ. ಮೈಸೂರು ಸರಕಾರದ ಸಹಾಯ ಧನವೂ ಹೊರಗಿನಿಂದ ಬರುವುದಿಲ್ಲ. ಎಲ್ಲವೂ ಬಿಟ್ಟಿಯದು. ಜನಕೋಟಿಯ ಹಣವನ್ನು ಹೇಗೆ ವೆಚ್ಚ ಮಾಡುತ್ತಿದ್ದೇವೆ. ಕಟ್ಟಡಗಳ ಮೇಲೆ ಯಂತ್ರಗಳ ಮೇಲೆ ಹೇಗೆ ವೆಚ್ಚವಾಗುತ್ತಿದೆ ಎಂಬುದನ್ನು ತಿಳಿಸಿ ಹೇಳಿದರೆ ಅವರಿಗೆ ಇದು ಅರ್ಥವಾಗಲಿಕ್ಕಿಲ್ಲ. ತಮಗೆ ಕೂಡಲೇ ಲಾಭಕಾರಿ ಆಗದ ಈ ವೆಚ್ಚದ ವಿಷಯವನ್ನು ಮನಗಾಣಿಸಿಕೊಡುವುದು ದುಸ್ತರವೇ ಸರಿ. ಭವಿಷ್ಯದ ಸಂತತಿಗೆ ಇದರಿಂದ ಲಾಭ ಉಂಟು ಎಂದರೆ ಹಳ್ಳಿಗರಿಗೆ ಹೇಗೆ ಅರ್ಥವಾಗಬೇಕು? ಇದಕ್ಕೆ ಅವರು ವಿಮುಖರಾದಾರು.'

'ಜನತೆಯನ್ನು ನಾವು ಎಂದೂ ಕೇಳುವುದಿಲ್ಲ. ಪ್ರಾತಿನಿಧ್ಯ ಇಲ್ಲದೇ ತೆರಿಗೆ ಇಲ್ಲ ಎಂಬ ಮಾತು ಅವರಿಗೆ ಅನ್ವಯಿಸುತ್ತದೆ. ಇದನ್ನು ಅವರಿಗೆ ಅನ್ವಯಿಸಿದ್ದೇ ಆದರೆ,

ಅವರಿಗೆ ಈ ಲೆಕ್ಕವನ್ನು ಒಪ್ಪಿಸಿದರೆ, ಈ ಎಲ್ಲ ನೌಕರಿಗಳಿಗೆ ಇನ್ನೊಂದು ಮುಖ ಇದೆ ಎಂಬುದು ತಿಳಿದುಬರುತ್ತದೆ. ಆಗ ನಿಮ್ಮ ಹೃದಯದಲ್ಲಿ ಒಂದು ಸ್ಥಾನ ಜನಸಾಮಾನ್ಯರಿಗಾಗಿ ಮೀಸಲಾಗುತ್ತದೆ. ಆ ಸ್ಥಾನವನ್ನು ಶುದ್ಧವಾಗಿ ಇಟ್ಟುಕೊಂಡರೆ, ನಿಮ್ಮ ಜ್ಞಾನವನ್ನೆಲ್ಲ ಅವರ ಉಪಕಾರಕ್ಕಾಗಿ ಉಪಯೋಗಿಸುತ್ತೀರಿ. ಅವರ ದುಡಿತವೇ ಅಲ್ಲವೇ ನಿಮ್ಮ ಶಿಕ್ಷಣಕ್ಕೆ ಆಧಾರ? ನೀವು ಕೊಟ್ಟ ನಿಧಿಯನ್ನು ದರಿದ್ರ ನಾರಾಯಣರಿಗಾಗಿ ಉಪಯೋಗಿಸುತ್ತೇನೆ. ನಿಜವಾದ ದರಿದ್ರ ನಾರಾಯಣನನ್ನು ನಾನು ನೋಡಿಲ್ಲ. ಆದರೆ ಊಹಿಸಿಕೊಂಡಿದ್ದೇನೆ. ಈ ಹಣವನ್ನು ಪಡೆಯುವ ನೂಲುಗಾತಿಯೂ ಕೂಡ ನಿಜವಾದ ದರಿದ್ರ ನಾರಾಯಣ ಅಲ್ಲ. ಯಾರೋ ಶೋಧನೆ ಮಾಡದ, ದೇಶದ ದೂರದ ಮೂಲೆಗಳಲ್ಲಿ ದರಿದ್ರ ನಾರಾಯಣ ಇದ್ದಾನೆ. ಈ ಪ್ರಯೋಗ ಶಾಲೆಯಲ್ಲಿ ಇರುವ ಕೆಲವು ರಾಸಾಯನಿಕ ವಸ್ತುಗಳನ್ನು ಪರಿಶೋಧಿಸಲು, ಸಂಶೋಧಿಸಲು ಅನೇಕ ವರ್ಷಗಳು ಬೇಕು ಎಂದು ನಿಮ್ಮ ಅಧ್ಯಾಪಕರು ಹೇಳಿದರು. ಆದರೆ ಈ ಹಳ್ಳಿಗಳಲ್ಲಿ ಸಂಶೋಧಿಸಲು ಯಾರು ಪ್ರಯತ್ನಿಸಿದ್ದಾರೆ? ನಿಮ್ಮ ಪ್ರಯೋಗ ಶಾಲೆಯಲ್ಲಿ ೨೪ ಘಂಟೆ ಪ್ರಯೋಗ ನಡೆಯುವಂತೆ, ನಿಮ್ಮ ಹೃದಯದಲ್ಲಿ ಒಂದು ಮೂಲೆಯು ದರಿದ್ರ ಜನಕೋಟಿಯ ಲಾಭಕ್ಕಾಗಿ ಸದಾ ತೆರೆದಿರಲಿ.'

'ಸಾಮಾನ್ಯ ಮನುಷ್ಯನಿಗಿಂತ ನಿಮ್ಮಿಂದ ಹೆಚ್ಚು ನಾನು ನಿರೀಕ್ಷಿಸುತ್ತೇನೆ. ಈಗ ನೀವು ಕೊಟ್ಟಿದ್ದರಿಂದ ತೃಪ್ತರಾಗಬೇಡಿ. ಯಥಾಶಕ್ತಿ ಕೊಟ್ಟಿದ್ದೇವೆ, ಇನ್ನು ಹೋಗಿ ಆಟವಾಡೋಣ ಎಂದುಕೊಳ್ಳಬೇಡಿ. ದಿನದಿನವೂ ನೀವು ಭರಿಸಬೇಕಾದ ಸಾಲ ಹೆಚ್ಚುತ್ತಿದೆ. ಆದರೆ ಅಪಾರತೆಯನ್ನು ಚಿಂತಿಸಿರಿ. ನೀವು ಕೊಟ್ಟಿದ್ದಕ್ಕೆ ಸಂತೋಷ. ನನ್ನ ಜನ್ಮಹ ಕೇಳಿದ್ದೀರಲ್ಲ, ಅದನ್ನು ಕೃತಿಗೆ ಇಳಿಸಿರಿ. ಬಡ ಹೆಂಗಸರು ನಿಮಗಾಗಿ ಮಾಡಿಕೊಡುವ ಬಟ್ಟೆ ತೊಡಲು ಅಂಜಬೇಡಿರಿ. ಖಾದಿ ತೊಟ್ಟರೆ ನಿಮ್ಮ ಮೇಲಧಿಕಾರಿಗಳು ನಿಮ್ಮನ್ನು ಹೊರಗೆ ಕಳುಹಿಸ ಬಹುದೆಂದು ಹೆದರಬೇಡಿರಿ. ಗಂಡಸರಾಗಿ ನಿಲ್ಲಿರಿ. ನಿಮ್ಮ ದೃಢ ವಿಶ್ವಾಸವನ್ನು ಲೋಕದ ಮುಂದೆ ಎತ್ತಿ ಹಿಡಿಯಿರಿ. ಮೂಕ ಜನಜಂಗುಳಿಗಾಗಿ ನಿಮ್ಮಲ್ಲಿರುವ ಕನಿಕರ, ಉತ್ಸಾಹ, ಹಣದ ಬೇಟೆಯಲ್ಲಿ ಬಾಡಿಹೋಗದಿರಲಿ. ನಿಮ್ಮ ತಂತಿ ಇಲ್ಲದ ಈ ಉಪಕರಣಕ್ಕಿಂತ ಮಿಗಿಲಾದ ಉಪಕರಣವನ್ನು ನೀವು ಕಂಡುಹಿಡಿಯಬಹುದು. ಅದಕ್ಕೆ ಬಾಹ್ಯ ಸಂಶೋಧನೆಯ ಅವಶ್ಯಕತೆ ಬೀಳುವುದಿಲ್ಲ. ಅಂತರಂಗದ ಸಂಶೋಧನೆಯು ಅದಕ್ಕೆ ಅಗತ್ಯ. ಈ ಅಂತರಂಗದ ಸಂಶೋಧನೆಯ ಸಂಬಂಧವಿಲ್ಲದಿದ್ದರೆ ಎಲ್ಲ ಸಂಶೋಧನೆಯೂ ವ್ಯರ್ಥ. ಈ ಬಗೆಯ ಸಂಶೋಧನೆ ಮಾತ್ರ ಜನಕೋಟಿಯ ಹೃದಯದೊಂದಿಗೆ ನಿಮ್ಮ ಹೃದಯ ಬೆರೆಯುವಂತೆ ಮಾಡಬಲ್ಲದು. ನೀವು ಮಾಡುವ ಎಲ್ಲ ಸಂಶೋಧನೆಗಳೂ, ಎಲ್ಲ ಅನ್ವೇಷಣೆಗಳೂ ಬಡವರ ಕಲ್ಯಾಣಕ್ಕಾಗಿ ಆಗಲಿ. ರಾಜಗೋಪಾಲಚಾರ್ಯರು ವಿನೋದದಲ್ಲಿ ಈಗ ಹೇಳಿದರಲ್ಲ–ಹಾಗೆ ಸೈತಾನಿನ ಕರ್ಮಾಲಯಗಳಾಗಿ ನಿಮ್ಮ ಪ್ರಯೋಗ ಶಾಲೆಗಳನ್ನು ಮಾಡಬೇಡಿರಿ. ನೀವು ಸಂಶೋಧನೆಯ ವಿದ್ಯಾರ್ಥಿಗಳು. ನಿಮ್ಮ ಚಿಂತನೆಯ ಸಲುವಾಗಿ ನಿಮಗೆ ಬೇಕಾದಷ್ಟು ಆಹಾರ ಈಗ ನಾನು ಕೊಟ್ಟಿದ್ದೇನೆ.'

(ಯಂಗ್ ಇಂಡಿಯಾ- ೨೧-೭-೧೯೨೭)

**ಮಹಿಳಾ ಸಮಾಜದಲ್ಲಿ:**

ಅದೇ ದಿನ ಎಂದರೆ ತಾ॥ ೧೩ ಸಂಜೆ ಮಹಿಳಾ ಸಮಾಜದಲ್ಲಿ ಗಾಂಧೀಜಿಗಾಗಿ ಸೊಗಸಾದ ಸಂಗೀತವನ್ನು ಏರ್ಪಡಿಸಿ ೨೨೫ ರೂಪಾಯಿ ನಿಧಿಯನ್ನು ಕೊಟ್ಟರು. ಅಂದು (ಜುಲೈ ೧೩) ಶ್ರೀಮತಿ ಪಾರ್ವತಮ್ಮ ಚಂದ್ರಶೇಖರ ಐಯ್ಯರ್–ಮೈಸೂರು ಶ್ರೇಷ್ಠ ನ್ಯಾಯಾಧೀಶರ ಪತ್ನಿ ಸಭೆಯನ್ನು ಏರ್ಪಡಿಸಿದ್ದರು. ಆ ಸಂಗೀತ, ಆ ನಿಧಿ ಗಾಂಧೀಜಿಯನ್ನು ತೃಪ್ತಿಗೊಳಿಸಲಿಲ್ಲ.

'ದರಿದ್ರ ನಾರಾಯಣನಿಗೆ ಹೊಟ್ಟೆ ತುಂಬುವುದೇ ಇಲ್ಲ. ನೀವು ಎಷ್ಟು ಹಣ ಕೊಟ್ಟರೂ ಒಡವೆ ಕೊಟ್ಟರೂ ಅವನ ಹೊಟ್ಟೆಯಲ್ಲಿ ಇನ್ನೂ ಸ್ಥಳ ಇದ್ದೇ ಇರುತ್ತದೆ. ನಿಮ್ಮ ಒಡವೆಗಳು ನಿಮ್ಮ ಸ್ತ್ರೀಧನ. ನಿಮ್ಮ ಮನಸ್ಸಿಗೆ ಬಂದ ಹಾಗೆ ಕೊಟ್ಟುಬಿಡಲು ನಿಮಗೆ ಅಧಿಕಾರವಿದೆ. ನಿಮ್ಮ ಸದ್ಗುಣವೇ ನಿಮಗೆ ನಿಜವಾದ ಭೂಷಣ. ಈ ಒಡವೆಗಳನ್ನು ದಾನ ಮಾಡಿದರೆ, ಬಡವರಿಗಾಗಿ ನಿಮ್ಮ ಸೇವೆ ಸಾರ್ಥಕವಾಗುತ್ತದೆ.' ಎಂದರು ಗಾಂಧೀಜಿ.

ಇದಕ್ಕೆ ಆ ಹೆಂಗಸರ ಪ್ರತಿಕ್ರಿಯೆಯು ಸಮಯೋಚಿತವೂ ಆಗಿತ್ತು, ಬಹಳ ಸಂತೋಷಕರವೂ ಆಗಿತ್ತು. ಹೃತ್ಪೂರ್ವಕವಾಗಿ ಅವರು ಮಾಡಿದ ಸ್ಪರ್ಧೆಯು ಬಹಳ ಆನಂದದಾಯಕ. ತಮ್ಮ ಉಂಗುರಗಳನ್ನೂ, ಬಳೆಗಳನ್ನೂ ಹಣವನ್ನೂ ಕೊಡಲು ನಾ ಮುಂದೆ ತಾ ಮುಂದೆ ಎಂದು ಈ ಅಕ್ಕತಂಗಿಯರು ಸೆಣೆಸಾಡಿದರು. ೧೯೨೧ರ ದೃಶ್ಯ ಮತ್ತೆ ಕಣ್ಣಮುಂದೆ ಬಂದಂತಿತ್ತು.

*(ಯಂಗ್ ಇಂಡಿಯಾ– ೨೧-೭-೧೯೨೭)*

ಶಂಕರಪುರದ ಮಹಿಳಾ ಸಮಾಜದ ಆವರಣದಲ್ಲಿ ತುಂಬಿದ್ದ ಆ ಮಹಿಳೆಯರ ದೇಶ ಭಕ್ತಿಯನ್ನು ಕಂಡು ಗಾಂಧೀಜಿಗೆ ಬಹಳ ಸಂತೋಷವಾಯಿತು. ಅವರು ವೇದಿಕೆಯ ಮೇಲೆ ಕುಳಿತು ಶಾಂತಮನಸ್ಕರಾಗಿ ದರಿದ್ರ ನಾರಾಯಣನ ನಿಧಿಗೆ ಕಾಣಿಕೆ ಬೇಡಿದಾಗ ಎಂಥ ಅದ್ಭುತವಾದ ಪ್ರತಿಕ್ರಿಯೆ! ಹುಡುಗಿಯರೂ, ಮುದುಕಿಯರೂ, ಮಧ್ಯ ವಯಸ್ಸಿನವರೂ ಎಲ್ಲರೂ ಸ್ವಯಂ ಪ್ರೇರಣೆಯಿಂದ ಹಿಂದುಮುಂದು ನೋಡದೆ ತಾವು ಧರಿಸಿದ್ದ ಆಭರಣಗಳನ್ನು ಅರ್ಪಿಸಿದರು. ೯ ವರ್ಷದ ಹುಡುಗಿಯೊಬ್ಬಳು ತನ್ನ ಕಾಣಿಕೆ ಕೊಡಲು ಗಾಂಧೀಜಿಯ ಬಳಿಗೆ ಬಂದಳು. ಗಾಂಧೀಜಿ 'ನಿನ್ನ ತಂದೆ ತಾಯಿಯ ಅನುಮತಿ ಪಡೆದಿದ್ದೀಯಾ?' ಎಂದು ಕೇಳಿದರು. ಹೌದು ಎಂದು ಆ ಹುಡುಗಿ ತಲೆ ತೂಗಿಸಿದಳು. ಆ ಒಡವೆಗಳ ಜತೆಯಲ್ಲಿ ನೋಟುಗಳೂ ನಾಣ್ಯಗಳೂ ಸಭೆಯಲ್ಲಿ ರಾಶಿ ರಾಶಿ ಬಿದ್ದುವು. ಗಾಂಧೀಜಿ ಮಾತನಾಡುವುದಿಲ್ಲ ಎಂದು ಸಮಾಜದ ಕಾರ್ಯಕರ್ತರಿಗೆ ಹೇಳಿದ್ದ ಮಾತನ್ನು ಮುರಿದು ಮಾತನಾಡಿದರು.

ಸಮಾಜಕ್ಕೆ ಗಾಂಧೀಜಿಯನ್ನು ಆಹ್ವಾನಿಸಬೇಕೆಂಬ ಆಸೆ ಮೂಡಿದ್ದೆ ಒಂದು ಸ್ವಾರಸ್ಯವಾದ ಸಂಗತಿ. ಸುಮಾರು ಅದೆ ಸಮಯದಲ್ಲಿ ವಾಯಿಸ್‌ರಾಯ್ ಲಾರ್ಡ್ ಇರ್ವಿನ್ ಅವರು ಮೈಸೂರಿಗೆ ಬರುವವರಿದ್ದರು. ಶ್ರೀಮತಿ ಇರ್ವಿನ್ ಅವರು ಭೇಟಿಕೊಡಲಿದ್ದ ಸಂಸ್ಥೆಗಳಲ್ಲಿ ಮಹಿಳಾ ಸಮಾಜವೂ ಒಂದಾಗಿತ್ತು.

ರಾಷ್ಟ್ರೀಯ ಭಾವನೆಯಿಂದ ಕೂಡಿದ ಸಮಾಜದ ಸದಸ್ಯೆಯರು ವಾಯಿಸ್‌ರಾಯರ ಪತ್ನಿ ತಮ್ಮ ಸಂಸ್ಥೆಗೆ ಭೇಟಿ ಕೊಡುವುದನ್ನು ಒಪ್ಪಲಿಲ್ಲ. ಅವರು ಗಾಂಧೀಜಿಯನ್ನು ಕರೆಸಬೇಕೆಂದು ಅಧ್ಯಕ್ಷಿಣಿಗೆ ಸಲಹೆ ಮಾಡಿದರು.

ಎರಡು ವಾರಗಳ ನಂತರ ೧೯೨೭ನೇ ಜುಲೈ ೨೮ರಂದು ವಾಯಿಸ್‌ರಾಯರ ಪತ್ನಿ ಸಮಾಜಕ್ಕೆ ಭೇಟಿ ಇತ್ತರು. ಗಾಂಧೀಜಿ ೧೯೩೪ರಲ್ಲಿ ಸಮಾಜಕ್ಕೆ ಮತ್ತೆ ಭೇಟಿ ಕೊಟ್ಟಾಗ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಅವರ ಸುತ್ತುವರಿದು ಅವರ ಪಾದ ಸ್ಪರ್ಶಿಸಲು ನುಗ್ಗಿದರು.

'ಕುಮಾರ ಕೃಪಾ'ದ ಮಹಡಿಯ ವರಾಂಡಾದಲ್ಲಿ ನೂಲುತ್ತ ಕುಳಿತ ಬಾಪೂವಿನ ದರ್ಶನಕ್ಕಾಗಿ ಜನರ ಕೊನೆಯಿಲ್ಲದ ಸಾಲು ಇರುತ್ತಿತ್ತು. ಪೋಲಂಡಿನ ಕಲಾವಿದೆಯರಾ ಜ್ಯೋನೋ ಸಹೋದರಿಯರು ನೂಲುತ್ತಾ ಕುಳಿತ ಗಾಂಧೀಜಿಯ ತೈಲಚಿತ್ರ ಬರೆದರು.

ಬರುವವರಿಗೆ ಯಾರಿಗೂ ಬೇಡ ಎನ್ನುವ ಸ್ವಭಾವ ಗಾಂಧೀಜಿಯವರದು ಆಗಿರಲಿಲ್ಲ. ಒಂದು ದಿನ ಸ್ವಯಂ ಸೇವಕನೊಬ್ಬ ಗಾಂಧೀಜಿಯ ಪರಿವಾರದವರೊಬ್ಬರ ಕ್ಷೌರಕ್ಕಾಗಿ ಕರೆತಂದಿದ್ದ ಕ್ಷೌರಿಕನಿಗೆ ಅವರು ತಲೆಬಾಗಿಸಬೇಕಾಯಿತು. ಆ ಸ್ವಯಂ ಸೇವಕನ ಕೆಲಸ ಅವಧಿ ಮುಗಿದಿತ್ತು. ಅವನ ನಂತರ ಬಂದ ಸ್ವಯಂ ಸೇವಕನು ಕ್ಷೌರಿಕನನ್ನು ಮಹಡಿಯ ಮೇಲೆ ಹೋಗುವಂತೆ ಕಳುಹಿಸಿದ. ಬಳೇಪೇಟೆಯಿಂದ ಬಂದಿದ್ದ ಆ ಕ್ಷೌರಿಕ ನೂಲುತ್ತ ಕುಳಿತಿದ್ದ ವ್ಯಕ್ತಿಯೇ ತನ್ನ ಗಿರಾಕಿ ಎಂದು ಭಾವಿಸಿ ತನ್ನ ಕೆಲಸ ಮುಗಿಸಿದ.

**ಮೈಸೂರು ಸಂಸ್ಥಾನದಲ್ಲಿ ಪ್ರವಾಸ :**

ಜುಲೈ ತಿಂಗಳ ಮಧ್ಯದಲ್ಲಿ ಗಾಂಧೀಜಿಯ ಕರ್ನಾಟಕದ ಪ್ರವಾಸ ಮುಂದುವರೆಯಿತು. ಸಾಧ್ಯವಾದಷ್ಟು ಅನಾಯಾಸವಾಗಿ ಪ್ರವಾಸಮಾಡುವ ಸೌಕರ್ಯವನ್ನು ಮಿತವಾದ ಕಾರ್ಯವನ್ನು ಕೇಂದ್ರದ ಮತ್ತು ಜಿಲ್ಲಾ ಮಟ್ಟದ ಸ್ವಾಗತ ಸಮಿತಿಗಳು ವ್ಯವಸ್ಥೆ ಮಾಡಿದ್ದವು. ಕಾರ್ಯದರ್ಶಿಗಳಾದ ಶ್ರೀ ಲಕ್ಷ್ಮೀನರಸು ಅವರು ಗಾಂಧೀಜಿಯ ಪ್ರವಾಸದಲ್ಲಿ ಜೊತೆಗೆ ಇದ್ದು ಎಲ್ಲ ಕಡೆಯಲ್ಲೂ ಓಡಾಡಿದರು. ಶ್ರೀ ಲಕ್ಷ್ಮೀ ನರಸು ಆಗಲೂ ಸಂಪೂರ್ಣ ಖಾದಿಧಾರಿ ಅಲ್ಲ. ವಿಶ್ವೇಶ್ವರಯ್ಯನವರ ಅರ್ಥಶಾಸ್ತ್ರದ ಗೀಳು ಅವರಿಗೆ. ಎಷ್ಟೋ ಸಲ ಈ ಬಗ್ಗೆ ಗಾಂಧೀಜಿಯವರನ್ನು ಲೇವಡಿ ಮಾಡುತ್ತಿದ್ದರಂತೆ. ಆದರೆ ರಾಜಗೋಪಾಲಚಾರ್ಯರು ತಮ್ಮ ಸವಿಮಾತಿನಿಂದ ಅವರ ಮನವೊಲಿಸಿ, ಈ ಗುಂಪಿನಲ್ಲಿದ್ದಾಗ ಖಾದಿ ಹಾಕುವಂತೆ ಮಾಡಿದ್ದರು.

**ತುಮಕೂರು**

ಜುಲೈ ೧೪ರ ದಿನ ನಸುಕಿನಲ್ಲಿ ಗಾಂಧೀಜಿಯವರ ಜೊತೆಗೆ ೧೬ ಜನರ ಒಂದು ತಂಡ ತುಮಕೂರಿಗೆ ಹೊರಟಿತ್ತು. ಕಸ್ತೂರಬಾ ಗಾಂಧೀ, ಗಂಗಾಧರರಾಯರು, ಮಹದೇವ ದೇಸಾಯಿ, ಮಣಿಬಹನ್ ಪಟೇಲ್, ದೇವದಾಸ್, ಮೃದುಲಾ ಸಾರಾಭಾಯಿ ಇವರು, ಆ ತಂಡದಲ್ಲಿ ಇದ್ದರು. ಮೈಸೂರು ಸರಕಾರ ಗಾಂಧೀಜಿಯ ಬಳಿಗೆ ಒಂದು ಮೋಟಾರನ್ನು ಬಿಟ್ಟಿತ್ತು. ಇನ್ನೂ ಮೂರು ಕಾರು ಬೇಕಾಯಿತು ಈ ತಂಡಕ್ಕೆ. ದಿ. ಸ್ವಾಮೂ. ಶಂಕರನಾರಾಯಣ

ರಾಯರು, ದಿ.ಜಹರುದ್ದೀನ್ ಮಕ್ಕೆ, ಅವರೂ, ದಿ. ಕೆ.ಹೆಚ್. ರಾಮಯ್ಯ ನವರೂ ತಮ್ಮ ಮೋಟಾರುಗಳನ್ನು ಈ ಪ್ರವಾಸಕ್ಕೆ ಕೊಟ್ಟರು.

ದಾರಿ ಉದ್ದಕ್ಕೂ ಸಾವಿರಾರು ಜನರು ಸ್ನಾನಮಾಡಿ ಸ್ವಚ್ಛವಾದ ಮಡಿಬಟ್ಟೆ ಉಟ್ಟು ಗಾಂಧೀಜಿಯ ದರ್ಶನಕ್ಕಾಗಿ ತಮ್ಮ ತಮ್ಮ ಹಳ್ಳಿಗಳ ಮುಂದೆ ಕಾದಿರುತ್ತಿದ್ದರು. ಗಾಂಧೀಜಿಗೆ ಹೂವು ಹಣ್ಣು ಕಾಯಿ ಸಮರ್ಪಿಸಿ. ಕೃತಾರ್ಥರಾದೆವು ಎಂದುಕೊಳ್ಳುತ್ತಿದ್ದರು.

ತುಮಕೂರಿನಲ್ಲಿ ಸ್ಥಳೀಯ ಸ್ವಾಗತ ಸಮಿತಿಯ ಮುಖಂಡರಾದ ಶ್ರೀ ರಂಗಯ್ಯಂಗಾರ್ಯರೂ, ಜಿಲ್ಲಾಧಿಕಾರಿಗಳೂ ಊರ ಹೊರಗೆ ಕಾದು ನಿಂತಿದ್ದು, ಗಾಂಧೀಜಿಯನ್ನು ಸ್ವಾಗತಿಸಿದರು. ಎಲ್ಲಾ ಸ್ವಾಗತ ಸಮಿತಿಗಳೂ ಒಂದೇ ಸಭೆ ಮಾಡಿ, ಪದೇ ಪದೇ ಅದೇ ಜನರಿಗೆ ಗಾಂಧೀಜಿ ಮಾತನಾಡುವಂತೆ ಮಾಡಬೇಡಿ ಎಂದು ತಿಳಿಸಿದ್ದರೂ. ತುಮಕೂರಿನಲ್ಲಿ ಮೂರು ಸಭೆಗಳಾದವು. ತುಮಕೂರಿನ ಪೌರಸಭೆ ಒಂದು ಬಿನ್ನವತ್ತಳೆ ಕೊಟ್ಟಿತು. ಗಾಂಧೀಜಿ ಅದಕ್ಕೆ ಉತ್ತರ ಕೊಡುತ್ತ ಪುರಸಭೆಯ ಪ್ರತಿನಿಧಿಗಳಿಗೆ ಊರಿನ ಮಕ್ಕಳಿಗೆ ಶುದ್ಧವಾದ ನೀರನ್ನೂ, ಅಗ್ಗವಾದ ಹಾಲನ್ನೂ ಸರಬರಾಜು ಮಾಡುವಂತೆ ಭರವಸೆ ಕೊಡಲು ಹೇಳಿದರು. ನೀರನ್ನೂ ವಿದ್ಯುತ್ತನ್ನೂ ಒದಗಿಸಿದರೆ ಸಾಲದು; ನೀರಿನಷ್ಟೆ ಸುಲಭವಾಗಿ ಜನರಿಗೆ ಹಾಲು ಸಿಗುವಂತೆ ಗೋಶಾಲೆಯನ್ನು ನಡೆಸಬೇಕೆಂದು ಹೇಳಿದರು. ಪುರಸಭೆಯವರು ಆರೋಗ್ಯವಂತ ಸನ್ನಿವೇಶವನ್ನು ಉಂಟುಮಾಡುವಂತೆ ಒತ್ತಿ ಹೇಳಿ ಹರಿಜನರು ಹೆಂಡ ಕುಡಿಯುವುದನ್ನೂ, ಗೋಮಾಂಸ ಭಕ್ಷಣವನ್ನು ಬಿಡಬೇಕೆಂದು ಹೇಳಿದರು.

'ನೀವೇ ಸ್ವತಃ ಕೈಯಲ್ಲಿ ಪೊರಕೆ ಬಕೆಟ್ಟುಗಳನ್ನು ಹಿಡಿಯದೆ ಈ ಊರು ಸ್ವಚ್ಛವಾಗದು. ಮೈಸೂರಿನಲ್ಲಿ ಜನ ಬಹಳ ಸೋಮಾರಿಗಳಂತೆ. ಏಳು ಗಂಟೆಯಾದರೂ ಬೆಳಗ್ಗೆ ಹಾಸಿಗೆ ಬಿಟ್ಟು ಏಳರಂತೆ. ಇದು ಕೂಡದು. ನೀವು ಉದ್ಯೋಗಶೀಲರಾಗಬೇಕು. ನಿಮ್ಮ ಮುಂದೆ ನಾನು ಇಡುತ್ತಿರುವ ರಾಟೆಯು ಉದ್ಯೋಗ ಮತ್ತು ಚಟುವಟಿಕೆ ಕುರುಹು. ಸೋಮಾರಿಗಳಿಂದ ರಾಟೆ ಕೆಲಸ ನಡೆಯದು. ನಿಜವಾಗಿ ಕಾಲ ಎಂದರೆ ಧನ. ಗೀತೆಯಲ್ಲಿ ಹೇಳುವುದಿಲ್ಲವೆ- ಸರ್ವನಾಶಕನಾದ ಕಾಲಪುರುಷ ಸೋಮಾರಿಗಳನ್ನೂ ನಾಶಮಾಡುತ್ತಾನೆ.

ತುಮಕೂರಿನ ಚಿಕ್ಕಪುಟ್ಟ ಸಭೆಗಳಲ್ಲಿ ಕಂಡುಬಂದ ನಿಶ್ಶಬ್ದ ವ್ಯವಸ್ಥೆ ಬಹಳ ಚೆನ್ನಾಗಿತ್ತು. ತುಮಕೂರಿನಲ್ಲಿ ಬೇಕಾದಷ್ಟು ಜನರು ಖಾದಿ ತೊಟ್ಟಿದ್ದರು. ಆದರೆ ಆ ಸಮಯಕ್ಕೆ ಮಾತ್ರ. ಇದನ್ನು ಬಹಿರಂಗವಾಗಿ ಅವರು ಒಪ್ಪಿಕೊಂಡಿದ್ದರಿಂದ ಇದು ಒಂದು ದೋಷವಾಗಲಿಲ್ಲ. ಅವರಲ್ಲಿ ಕೆಲವರು ನಿರಂತರ ಖಾದಿಧಾರಿಗಳು. ತುಮಕೂರಿನ ನಾಗರಿಕರು ೨.೨೫೦ ರೂಪಾಯಿಗಳನ್ನೂ, ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಕೂಡಿ ೨೫೦-ರೂಪಾಯಿಗಳನ್ನೂ, ಗೋಸಂರಕ್ಷಣೆಗಾಗಿ ಪ್ರಾಣಿ ದಯಾ ಸಂಘಗಳು ೨೦೦ ರೂಪಾಯಿ ನಿಧಿಯನ್ನೂ ಅರ್ಪಿಸಿದರು.

ತುಮಕೂರಿನಲ್ಲಿ ಒಂದು ಆದಿಕರ್ನಾಟಕ ವಸತಿ. ಅಲ್ಲಿ ಒಂದು ಔದ್ಯೋಗಿಕ ವಸತಿ ಶಿಕ್ಷಣ ಶಾಲೆ ಇತ್ತು. ಅಲ್ಲಿ ಹೋಗಿ ಗಾಂಧೀಜಿ ಅದನ್ನು ನೋಡಿಬಂದರು. ಅವರ ಅಡಿಗೆ

ಮನೆ, ಊಟದ ಮನೆ, ಪಾಯಖಾನೆಗಳು–ಎಲ್ಲವನ್ನೂ ನೋಡಿ ಬಂದು ಅವರ ಸ್ವಚ್ಛತೆಯನ್ನು ಕೊಂಡಾಡಿದರು. ಅಲ್ಲಿ ಮಾಡಿದ ರಾಗಿ ರೊಟ್ಟಿ ಕೆಲವನ್ನು ತೆಗೆದುಕೊಂಡು ಬಂದು ಊಟದ ಹೊತ್ತಿನಲ್ಲಿ ಸ್ವಾಗತ ಸಮಿತಿಯ ಸದಸ್ಯರಿಗೆ ಬಡಿಸುವಂತೆ ಕೇಂದ್ರ ಸಮಿತಿಯ ಕಾರ್ಯದರ್ಶಿಗೆ ಹೇಳಿದರು. ಸದಸ್ಯರಿಗೆ ಇದರಿಂದ ತುಂಬ ಕಿರುಕುಳ ಎನಿಸಿತು. ಅನಿವಾರ್ಯವಾಗಿ ಕೆಲವರು ಬಡಿಸಿಕೊಂಡು ಊಟ ಮಾಡಿದರು. ಆಮೇಲೆ ಪ್ರಾಯಶ್ಚಿತ್ತ ಮಾಡಿಕೊಂಡರೋ ಏನೋ!

ತುಮಕೂರಿನಲ್ಲಿ ಗಾಂಧೀಜಿ ಪೌರಸಭೆಯ ಬಿನ್ನವತ್ತಳೆಗೆ ಉತ್ತರ ಕೊಡುತ್ತ ದೀರ್ಘವಾಗಿ ಭಾಷಣಮಾಡಿ ಗೋರಕ್ಷಣೆಯ ಮಹತ್ವವನ್ನೂ ಅಗ್ಗದ ಹಾಲಿನ ಸರಬರಾಜಿನ ಅಗತ್ಯವನ್ನು ಒತ್ತಿ ಹೇಳಿದರು. ನೀರಿನ ಸರಬರಾಜಿಗೆ ಮೂರುಲಕ್ಷ ರೂಪಾಯಿ ವೆಚ್ಚ ಮಾಡಿದ್ದನ್ನು ಪುರಸಭೆಯ ಬಿನ್ನವತ್ತಳೆಯಲ್ಲಿ ಹೇಳಿತ್ತು. ಬಹಳ ಕಡಿಮೆ ಹಣದಲ್ಲಿ ಒಂದು ಕ್ಷೀರಕ್ಷೇತ್ರವನ್ನು ಏರ್ಪಡಿಸಬಹುದೆಂದು ಗಾಂಧೀಜಿ ಹೇಳಿದರು. ಪಶ್ಚಿಮದವರನ್ನು ಎಷ್ಟೋ ನಿಂದನೆ ಮಾಡಿದ್ದರೂ, ಅವರ ಸ್ವಚ್ಛತೆ ಅನುಕರಣನೀಯ ಎಂದು ಹೇಳಿದರು. ಅಸ್ವಚ್ಛತೆಗೆ ಸಾಕ್ಷಿ ಎಂದರೆ ನಮ್ಮ ಕಕ್ಕಸುಗಳ ಸ್ಥಿತಿ. ನಮ್ಮ ಕಕ್ಕಸುಗಳು ಬಹಳ ಘೋರ ಸ್ಥಿತಿಯಲ್ಲಿವೆ. ಅವನ್ನು ಸರಿಮಾಡಿಕೊಳ್ಳದೆ ಶುಚಿ ಸಾಧ್ಯವಿಲ್ಲ ಎಂದರು. ಮರುದಿನ ಮಧುಗಿರಿಗೆ, ಕೊರಟಗೆರೆಗೆ, ಗಾಂಧೀಜಿ ಹೋಗಿಬಂದರು. ಮಧುಗಿರಿಯಲ್ಲಿ ಒಂದುಸಾವಿರ ರೂಪಾಯಿ ದರಿದ್ರ ನಾರಾಯಣನ ನಿಧಿಗೆ ಕೊಟ್ಟರು. ಅಲ್ಲಿಂದ ಕೊರಟಗೆರೆಯಲ್ಲಿ ನೂರು ರೂಪಾಯಿ, ಹಾದಿಯ ಒಂದು ಹಳ್ಳಿಯಲ್ಲಿ ಮೂವತ್ತು ರೂಪಾಯಿ ಕೊಟ್ಟರು. ಹಿಂದಕ್ಕೆ ಬೆಂಗಳೂರಿಗೆ ಬಂದು ಹದಿನೆಂಟರವರೆಗೆ ಇದ್ದರು. ಬೆಂಗಳೂರಿನಲ್ಲಿ ಹೆಂಚಿನ ಕಾರಖಾನೆ ಒಂದರ ಕೂಲಿಗಳು ಗಾಂಧೀಜಿಯನ್ನು ಕರೆದು ಐದುನೂರು ರೂಪಾಯಿ ನಿಧಿಯನ್ನು ಕೊಟ್ಟರು. ಅವರಿಗೆ ಗಾಂಧೀಜಿಯ ಭಾಷಣಕ್ಕಿಂತಲೂ ದರ್ಶನ ಹೆಚ್ಚು ಬೇಕಾಗಿತ್ತು. ಮಹಾರಾಜಾ ಗಿರಣಿಯ ಕಾರ್ಮಿಕರೂ ಇನ್ನೂರಐವತ್ತು ರೂಪಾಯಿ ನಿಧಿ ಕೊಟ್ಟರು. ಬೆಂಗಳೂರಿನ ಗುಜರಾಥಿ ಬಂಧುಗಳು ೧೨೦೦ ರೂಪಾಯಿ ನಿಧಿ ಕೊಟ್ಟರು. ಈ ಗುಜರಾಥಿಗಳು, ಮಾರವಾಡಿಗಳು ಭಾರತದ ಆರ್ಥಿಕ ದಾಸ್ಯಕ್ಕೆ ಕಾರಣ ಎಂದು ಗಾಂಧೀಜಿ ಹೇಳುತ್ತಿದ್ದರು.

ಈ ಪ್ರವಾಸದಲ್ಲಿ ಗಾಂಧೀಜಿ ಪ್ರತಿಯೊಂದು ಸಭೆಯಲ್ಲಿಯೂ ಹಿಂದಿಯಲ್ಲಿ ಭಾಷಣ ಮಾಡಿದರು. ಶ್ರೀ ಗಂಗಾಧರರಾಯರು ಪ್ರತಿಯೊಂದು ವಾಕ್ಯವನ್ನೂ ಸರಿಯಾಗಿ ಭಾಷಾಂತರಿಸುತ್ತ ಹಿಂದೀ ಕಲಿಯಬೇಕೆಂದು ಗಾಂಧೀಜಿ ಮಾಡಿದ ಬಿನ್ನಹಕ್ಕೆ ತಮ್ಮ ಕಳಕಳಿಯ ಬಲವನ್ನು ಸೇರಿಸುತ್ತಿದ್ದರು. ಎಲ್ಲರಿಗೂ ಸಾಮಾನ್ಯವಾಗಿ ಇಂಗ್ಲೀಷ್ ರೂಢಿ ಇದ್ದರೂ ಸಭೆಗೆ ಬಂದವರಲ್ಲಿ ಅನೇಕರಿಗೆ ಇಂಗ್ಲೀಷಿಗಿಂತ ಹಿಂದಿಯೇ ಹೆಚ್ಚು ಗೊತ್ತಿದ್ದಂತಿತ್ತು.

ಬೆಂಗಳೂರಿನಲ್ಲಿದ್ದಾಗ ಬೆಂಗಳೂರಿನ ಪೌರಸಭೆಯ ಚೌಕದಲ್ಲಿ ಸಾವಿರಾರು ಜನ ಬೆಂಗಳೂರಿನ ನಾಗರಿಕರು ಗಾಂಧೀಜಿಯ ಭಾಷಣವನ್ನು ಕೇಳಿದರು. ಪುರಸಭೆಯ ಪ್ರತಿನಿಧಿಗಳಿಂದ ಏನನ್ನು ನಿರೀಕ್ಷಿಸಬೇಕೆಂದು ಗಾಂಧೀಜಿ ಹೇಳಿದ್ದಾಗ ತೆರಿಗೆದಾರರು ಒಳಗೊಳಗೇ

ಸಂತೋಷ ಪಟ್ಟಿರಬೇಕು. ಗಾಂಧೀಜಿ ಹೇಳಿದರು, –'ನೀವು ಕಡ್ಡಾಯದ ಪ್ರಾಥಮಿಕ ವಿದ್ಯಾಭ್ಯಾಸ ವನ್ನು ತಂದಿದ್ದೀರಿ. ನಿಮ್ಮ ರಸ್ತೆಗಳು ಅಗಲವಾಗಿವೆ, ನಿಮ್ಮ ಉದ್ಯಾನಗಳು ಸುಂದರ. ವಿದ್ಯುತ್ ವ್ಯವಸ್ಥೆ ಚೆನ್ನಾಗಿದೆ. ನಿಮ್ಮ ಚಿನ್ನವತ್ತಳೆಯನ್ನು ನೋಡಿದರೆ ನಿಮ್ಮಲ್ಲಿ ಬಡವರ ವರ್ಗ ಇದೆಯೇ ಎನಿಸುತ್ತದೆ. ಇದ್ದರೆ ಅವರಿಗೆ ನೀವು ಏನು ಮಾಡಿದ್ದೀರಿ? ಅವರ ಮನೆಗಳನ್ನು, ಕಕ್ಕಸುಗಳನ್ನು ಸ್ವಚ್ಛವಾಗಿಟ್ಟುಕೊಳ್ಳಲು ಸಹಾಯ ಮಾಡಿದ್ದೀರಾ? ಅಗ್ಗವಾಗಿ ಬಡವರಿಗೆ ಹಾಲು ಸಿಗುವಂತೆ ವ್ಯವಸ್ಥೆ ಮಾಡಿದ್ದೀರಾ? ದಿನಸಿ ಮಾರುವ ನಿಮ್ಮ ಅಂಗಡಿಗಳು ಶುದ್ಧ ಪದಾರ್ಥವನ್ನು ಮಾರುತ್ತವೆಯೇ? ಬಡವರನ್ನೂ, ಭಾಗ್ಯವಂತರನ್ನೂ ಸಮನಾಗಿ ಅವರು ನೋಡುತ್ತಾರೆಯೇ? ನಿಮಗೆ ದಿನಜೀವನಕ್ಕೆ ಬೇಕಾಗುವ ಆಹಾರ ಧಾನ್ಯವನ್ನು ಒದಗಿಸುವ ಹಳ್ಳಿಗರ ಚಿಂತೆ ನಿಮಗಿದೆಯೇ? ಜೂಜಿನ ಕಟ್ಟೆ, ಹೆಂಡದಂಗಡಿ ನಿಮ್ಮಲ್ಲಿ ಇವೆಯೇ? ಇದ್ದರೆ ಅವುಗಳಿಂದ ಕಾಪಾಡಿಕೊಳ್ಳಲು ನಿಮ್ಮ ಜನರಿಗೆ ಏನು ರಕ್ಷಣೆ ಒದಗಿಸಿದ್ದೀರಿ? ನಿಮ್ಮ ದನಗಳ ಸ್ಥಿತಿ ಏನು? ಇಂಥ ಪ್ರಶ್ನೆ ಇನ್ನೂ ನೂರಾರು ಕೇಳಬಹುದು. ಇವಕ್ಕೆ ಉತ್ತರ ಕೊಡಿರಿ. ಇದ್ದದ್ದೇ ಆದರೆ ಚೆನ್ನಾಗಿ ಯೋಚಿಸಿ ನೋಡಿರಿ.

*(ಯಂಗ್ ಇಂಡಿಯಾ– ೪–೮–೧೯೨೭)*

**ಅರಮನೆಗಳ ನಗರ ಮೈಸೂರಿನಲ್ಲಿ :**

ಗಾಂಧೀಜಿಯು ಅವರ ಪರಿವಾರವೂ ೧೯ನೆ ತಾರೀಖು ಮೈಸೂರಿಗೆ ಹೋದರು. ೨೩ರ ವರೆಗೂ ಅಲ್ಲಿ ಕಾರ್ಯಕ್ರಮ. ಗಾಂಧೀಜಿಗೂ ಅವರ ಪರಿವಾರಕ್ಕೂ ಶೇಷಾದ್ರಿ ಗೃಹದಲ್ಲಿ ತಂಗಲು ಸರಕಾರ ಎಲ್ಲ ವ್ಯವಸ್ಥೆಯನ್ನೂ ಮಾಡಿತ್ತು. ರೈಲು ನಿಲುಮನೆಯಲ್ಲಿ ಜಿಲ್ಲಾಧಿಕಾರಿಯೂ, ಮಹಾರಾಜರ ಹುಜೂರು ಕಾರ್ಯದರ್ಶಿಯೂ ಅವರನ್ನು ಇಳಿಸಿಕೊಂಡರು. ಮೈಸೂರು ನಗರದಲ್ಲಿ ಒಂದು ಸ್ವಾಗತ ಸಮಿತಿ ರಚಿತವಾಗಿತ್ತು. ಅದರ ಮುಖ್ಯಸ್ಥರಾಗಿ ದಿ. ವಕೀಲ ಲಕ್ಷ್ಮಿನಾರಾಯಣ ರಾಯರು, ಸಿ. ನರಸಿಂಹಯ್ಯನವರೂ, ಅಗರಂ ರಂಗಯ್ಯನವರೂ ಬಂದಿದ್ದು ನಿಲುಮನೆಯಲ್ಲಿ ಸ್ವಾಗತ ನೀಡಿದರು. ಸ್ವಾಗತ ಸಮಿತಿಯು ಪುರಭವನದಲ್ಲಿ ಅವರಿಗೆ ಅದ್ಭುತವಾದ ಸ್ವಾಗತ ನೀಡಿತು. ಜಗನ್ಮೋಹನ ಅರಮನೆಯಲ್ಲಿ ಒಂದು ಹೆಂಗಸರ ಸಭೆ ನಡೆಯಿತು. ಸಂಸ್ಥಾನದಲ್ಲಿ ನಡೆದ ಎಲ್ಲಾ ಮಹಿಳಾ ಸಭೆಗಳಲ್ಲಿ ಇದೇ ದೊಡ್ಡದು. ಇಷ್ಟೇ ಅಲ್ಲ, ೧೯೨೧ರಲ್ಲಿ ಕೂಡ ಇಷ್ಟು ದೊಡ್ಡ ಮಹಿಳೆಯರ ಸಭೆ ನಡೆದಿರಲಿಲ್ಲ. ಹೆಂಗಸರ ಕಾಲೇಜಿನ ಪ್ರಿನ್ಸಿಪಾಲ್ ಶ್ರೀಮತಿ ರುಕ್ಮಿಣಿ ಅಮ್ಮನವರು ಅದನ್ನು ಏರ್ಪಡಿಸಿದ್ದರು.

ಸಭೆ ಬಹಳ ವ್ಯವಸ್ಥಿತವಾಗಿ ನಡೆಯಿತು. ಸಭೆ ನಡೆಯುವಾಗ ಸಂಪೂರ್ಣ ನಿಶ್ಶಬ್ದ. ಗಾಂಧೀಜಿಯ ಭಾಷಣವನ್ನು ಎಲ್ಲರೂ ಮನಗೊಟ್ಟು ಕೇಳಿದರು. ಸಭೆ ಮುಗಿದಾಗ ಗಾಂಧೀಜಿಯ ಪಾದಗಳನ್ನು ಮುಟ್ಟಲು ಅಥವಾ ಅವರ ಮೈಮೇಲಿದ್ದ ಬಟ್ಟೆಗಳನ್ನು ತಾಕಲು ಎಲ್ಲರೂ ವೇದಿಕೆಯ ಕಡೆಗೆ ನುಗ್ಗಿ ಬಂದರು. ಗಾಂಧೀಜಿಗೆ ಇನ್ನೊಂದು ಭೇಟಿ ಕಾದಿತ್ತು. ಅರಮನೆಗೆ ಹೋಗಿ ಮಹಾರಾಜರ ಕುಟುಂಬದವರನ್ನೆಲ್ಲ ಕಂಡು ಬರಬೇಕಾಗಿತ್ತು. ಆ

ಗದ್ದಲದಲ್ಲಿ ಬಿಡಿಸಿಕೊಂಡು ಹೋಗಲು ಒಂದೇ ಉಪಾಯ ಇದ್ದದ್ದು. ಮೋಟಾರು ವ್ಯಾನು ಹಿಂಭಾಗಕ್ಕೆ ಬರಬೇಕು. ಗಾಂಧೀಜಿ ಅದರಲ್ಲಿ ಹೋಗಿ ಕೂಡಬೇಕು. ಅವರು ಹೋಗಲು ಕೂಡ ಸಾಧ್ಯವೇ ಇರಲಿಲ್ಲ. ಆಗ ಕೇಂದ್ರ ಸ್ವಾಗತ ಸಮಿತಿಯ ಕಾರ್ಯದರ್ಶಿ ಅವರ ಜೊತೆಯಲ್ಲೆ ಇದ್ದರು. ಅವರು ಗಾಂಧೀಜಿಯನ್ನು ಹೆಗಲಮೇಲೆ ಹೊತ್ತುಕೊಂಡು ಹೋಗಿ ಗಾಡಿಯಲ್ಲಿ ಕೂಡಿಸಿದರು. ಇದರಿಂದ ಹೊತ್ತಿಗೆ ಸರಿಯಾಗಿ ಅವರು ಹೋಗುವಂತಾಯಿತು.

ಮೈಸೂರಿನ ಪುರಸಭೆಯವರು ಒಂದು ಬಿನ್ನವತ್ತಳೆ ಅರ್ಪಿಸಿದರು. ಅದಕ್ಕೆ ಉತ್ತರ ಕೊಡುವಾಗ ಪುರ ಸಮಸ್ಯೆಗಳನ್ನು ದಾಟಿ ದೂರ ಹೊರಟುಹೋದರು. ಮೈಸೂರಿನಲ್ಲಿ ಸೊಗಸಾದ ಕಾಲೇಜುಗಳಿವೆ. ಸುಸಜ್ಜಿತ ಪ್ರಾಚ್ಯ ಪುಸ್ತಕಭಂಡಾರ ಅಂದವಾದ ಉದ್ಯಾನಗಳಿವೆ. ಚಾಮುಂಡಿಬೆಟ್ಟ ಇದೆ. ಅದರ ಮೇಲೆ ಕಾಣುವ ವಿದ್ಯುದ್ದೀಪಗಳ ಸಾಲು ಆಕಾಶದಲ್ಲಿ ಒಂದು ನಕ್ಷತ್ರಗಳ ಕಂಠಮಾಲೆ ಇದ್ದ ಹಾಗೆ ಇದ್ದವು. ಈ ಪರಿಸರದಲ್ಲಿ ಬೆಂಗಳೂರಿನ ವಿಜ್ಞಾನ ಸಂಸ್ಥೆಯಲ್ಲಿ, ಹೊಲಗೆಲಸ ಮಾಡುತ್ತ ಕಷ್ಟಪಡುತ್ತಿರುವ ಹಳ್ಳಿಯ ಬಡ ರೈತನ ನೆನಪು ಅವರಿಗೆ ಆಗಿ ಬಹಳ ಕಸಿವಿಸಿ ಎನಿಸಿರಬೇಕು. ಗಾಂಧೀಜಿ ಸಭೆಯಲ್ಲಿ ಹೇಳಿದರು:

'ನೀವೇನೋ ಖಾದಿ ಕೈಕೊಳ್ಳುವುದಾಗಿ ಭರವಸೆ ಕೊಟ್ಟಿದ್ದೀರಿ. ಇಂಥ ಭರವಸೆಗಳಿಗೆ ಮರುಳಾಗಬಾರದೆಂದು ನನಗೆ ಅನುಭವವಾಗಿದೆ. ನಮ್ಮ ಕಾಲ ಬರೀ ಮಾತಿನ ಕಾಲ. ಆಡಿದಂತೆ ಮಾಡುವದು ಇನ್ನೂ ಬಹಳ ದೂರವಿದೆ. ನಿಮ್ಮೂರಿನ ಭವ್ಯ ಅರಮನೆಗಳನ್ನೂ, ಸುಂದರ ವಾತಾವರಣವನ್ನೂ ನೋಡಿ ಸಂತೋಷವಾದರೂ ಹೊಲದಲ್ಲಿ ಕಷ್ಟಪಡುತ್ತಿರುವ ರೈತನ ನೆನಪು ನನಗೆ ಆಗುತ್ತದೆ. ಈಗ ರಾಜ್ಯ ಆಳುತ್ತಿರುವ ವರ್ಗವು ರಾಜಕಾರಿಣಿಗಳ ವರ್ಗವು ತನ್ನ ಬದುಕನ್ನು ಬಡರೈತನ ದೃಷ್ಟಿಯಿಂದ ಸರಿಪಡಿಸಿಕೊಳ್ಳಬೇಕೆಂದು ನಾನು ಹಾತೊರೆಯುತ್ತಿದ್ದೇನೆ. ಇಂದು ಬಡವರಿಗೂ ನಿಮಗೂ ದೊಡ್ಡ ಅಂತರವಿದೆ. ಈ ಅಂತರ ಹೋಗಬೇಕು. ಶ್ರೀಮಂತರ ಬಂಗಲೆಗಳನ್ನೂ, ಮಹಾರಾಜರ ಅರಮನೆಗಳನ್ನೂ ನೋಡಿ ನನಗೆ ಹೊಟ್ಟೆ ಉರಿ ಇಲ್ಲ. ಆದರೆ ರೈತರಿಗೂ ಅವರಿಗೂ ನಡುವೆ ಇರುವ ಈ ಅಗಾಧ ಅಂತರವನ್ನು ಕಡಿಮೆ ಮಾಡಲು ಏನಾದರೂ ಮಾಡಬೇಕೆಂದು ನಾನು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ. ಅವರ ಸುತ್ತಲೂ ಇರುವ ಬಡವರ ಬದುಕಿನ ಗುರುತು ಅವರ ಜೀವನದಲ್ಲಿ ಕಂಡುಬರಬೇಕು. ಇಂಥ ಸೇತುವೆ ಒಂದನ್ನು ಕಟ್ಟಲು ನನ್ನ ರೀತಿಯಿಂದ ನಾನು ಹೆಣಗುತ್ತಿದ್ದೇನೆ. ನಿಮ್ಮ ಬಂಗಾರದ ಗಣಿಗಳೂ, ನಿಮ್ಮ ಭದ್ರಾವತಿ ಕಾರಖಾನೆಯೂ ಇದನ್ನು ಕಟ್ಟಲಾರವು. ಈ ಬಂಗಾರ, ಈ ಕಬ್ಬಿಣ ನಮಗೆ ಬೇಕು. ಒಳ್ಳೆಯದಾವುದನ್ನೂ ಕೆಡಿಸುವ ಉದ್ದೇಶ ನನಗಿಲ್ಲ. ಹೊಸದನ್ನು ಕಟ್ಟಿ ಇದ್ದದ್ದನ್ನು ಉತ್ತಮಗೊಳಿಸಿ ಸುಧಾರಿಸುವುದು ನನ್ನ ಉದ್ದೇಶ. ಈ ರೀತಿ ನಿಮ್ಮನ್ನು ಬಂಧಿಸಬಹುದಾದ ಧರ್ಮಬಂಧ ಎಂದರೆ ಖಾದಿನೂಲು. ಗಂಗಾನದಿಗೆ ಒಂದು ಕಾಲದಲ್ಲಿ ಋಷಿಕೇಶದ ಬಳಿ ಗಂಗೋತ್ರಿಯವರೆಗೆ ಒಂದು ಹಗ್ಗದ ಸೇತುವೆ ಇತ್ತು (ಲಕ್ಷ್ಮಣ ಝೂಲಾ). ಹಾಗೆ ದರಿದ್ರ ನಾರಾಯಣನನ್ನು ತಲುಪಲು ನೀವು ಒಂದು ಸೇತುವೆ ಕಟ್ಟಿಕೊಳ್ಳಿರಿ. ನಿಮ್ಮ ಮಹಾರಾಜರು ನೂಲುತ್ತಾರೆ ಎಂದು ಕೇಳಿದಾಗ ನನಗೆ ಬಹಳ ಸಂತೋಷವಾಯಿತು.

(ಯಂಗ್ ಇಂಡಿಯಾ- ೪-೮-೧೯೨೭)

**ವಿದ್ಯಾರ್ಥಿಗಳ ನಡುವೆ:**

ಮೈಸೂರು ವಿದ್ಯಾರ್ಥಿಗಳಿಂದ ಗಾಂಧೀಜಿ ಬಹಳ ಪ್ರಭಾವಿತರಾದರು. ನಿಧಿಗೂ ಸಾಕಷ್ಟು ಹಣ ಕೂಡಿಸಿ ಕೊಟ್ಟಿದ್ದಲ್ಲದೆ ಸಭೆಗಳಲ್ಲಿ ಬಹಳ ಶಿಸ್ತಿನಿಂದ ವ್ಯವಸ್ಥೆಯಿಂದ ನಡೆದುಕೊಂಡರು. ಗಾಂಧೀಜಿಯನ್ನು ಇಂಗ್ಲೀಷಿನಲ್ಲೇ ಮಾತಾಡಬೇಕೆಂದು ಅವರು ಒತ್ತಾಯ ಮಾಡಲಿಲ್ಲ. ಸಾಕಷ್ಟು ವಿನಯದಿಂದ, ಗೌರವದಿಂದ ಅವರು ನಡೆದುಕೊಂಡರು. ವಿದ್ಯಾರ್ಥಿಗಳು ಗುಣವನ್ನು ಬೆಳೆಸಿಕೊಳ್ಳಬೇಕೆಂದು ಒತ್ತಿ ಒತ್ತಿ ಬಿನ್ನಹ ಮಾಡಿದರು. ಗಾಂಧೀಜಿ ಹೇಳಿದರು : 'ಕಳೆದ ಹತ್ತು ವರ್ಷಗಳಲ್ಲಿ ಸಾವಿರಾರು ವಿದ್ಯಾರ್ಥಿಗಳ ಪರಿಚಯ, ಸಂಪರ್ಕ ನನಗೆ ಆಗಿದೆ. ಅವರ ಅಂತರಾಳದ ರಹಸ್ಯಗಳನ್ನು ಬಿಚ್ಚಿ ಹೇಳಿದ್ದಾರೆ. ಅವರ ಹೃದಯದ ಒಳ ಹೋಗುವ ಅಧಿಕಾರವನ್ನು ನನಗೆ ನೀಡಿದ್ದಾರೆ. ಆದ್ದರಿಂದ ನಿಮ್ಮ ಕಷ್ಟ ನಿಷ್ಠುರ ಎಲ್ಲವೂ ನನಗೆ ಗೊತ್ತು. ನಿಮ್ಮ ದೌರ್ಜನ್ಯಗಳೂ ನನಗೆ ಪರಿಚಿತ. ನಿಮಗೆ ನಾನು ಎಷ್ಟು ಮಟ್ಟಿಗೆ ಸಹಾಯ ಮಾಡಬಲ್ಲೆನೋ ನನಗೆ ತಿಳಿಯದು. ಆದರೆ ನಿಮ್ಮ ಗೆಳೆಯನಾಗಿ, ನಿಮ್ಮ ಮಾರ್ಗದರ್ಶಕನಾಗಿ ನಿಮ್ಮ ದುಃಖಗಳನ್ನು ಹಂಚಿಕೊಂಡು ನನ್ನ ಅನುಭವದ ಲಾಭಗಳನ್ನು ನಿಮಗೆ ಕೊಟ್ಟೇನು. ಆದರೆ ಒಂದು ನೆನಪಿರಲಿ. ಅಸಹಾಯಕರಿಗೆ ದೇವನೊಬ್ಬನೇ ಸಹಾಯಕ. ದೇವರಲ್ಲಿರಬೇಕಾದ ಭಕ್ತಿ ಹಾರಿ ಹೋದರೆ ಅದಕ್ಕಿಂತ ಮನುಷ್ಯನಿಗೆ ಹೆಚ್ಚಿನ ದುಃಖ, ಹೆಚ್ಚಿನ ಶಿಕ್ಷೆ ಏನೂ ಇರಲಾರದು. ಆ ಶ್ರದ್ಧೆ, ಆ ಭಕ್ತಿ, ವಿದ್ಯಾರ್ಥಿ ಲೋಕದಲ್ಲಿ ಕ್ರಮೇಣ ಮಾಯವಾಗುತ್ತಿದೆ. ಹೀಗೆ ಹೇಳಲು ನನಗೆ ಬಹಳ ದುಃಖವಾಗುತ್ತದೆ. ರಾಮನಾಮವನ್ನು ನಂಬಿರಿ ಎಂದು ಹಿಂದೂ ಹುಡುಗರಿಗೆ ಹೇಳಿದರೆ ನನ್ನ ಕಡೆ ದಿಟ್ಟಿಸಿ ನೋಡಿ, ಈ ರಾಮ ಯಾರು ಎಂದು ಬೆರಗಾಗುತ್ತಾರೆ. ಮುಸಲ್ಮಾನ್ ಹುಡುಗನಿಗೆ ಕುರಾನ್ ಓದು. ದೇವರಿಗೆ ಅಂಜಿ ನಡೆ ಎಂದು ಹೇಳಿದರೆ, ಕುರಾನ್ ಓದಲು ತನಗೆ ಬಾರದು ಎಂದು ಆತ ಅನ್ನುತ್ತಾನೆ. ದೇವರ ಭಯ ಬರೀ ಆಚಾರ. ಇಂಥ ಹುಡುಗರಿಗೆ ಶುದ್ಧ ಹೃದಯವೇ ನಿಜವಾದ ಶಿಕ್ಷಣದ ತಳಹದಿ. ಅದೇ ಮೊದಲನೆಯ ಹೆಜ್ಜೆ ಎಂದು ಹೇಗೆ ತಿಳಿಸಲಿ? ನಿಮ್ಮ ಶಿಕ್ಷಣ ನಿಮ್ಮನ್ನು ದೇವರಿಂದ ವಿಮುಖರನ್ನಾಗಿ ಮಾಡಿದರೆ, ನಿಮಗೆ ಅದರಿಂದ ಏನು ಸಹಾಯ ಆದೀತೋ. ಜಗತ್ತಿಗೆ ನೀವು ಏನು ಸಹಾಯ ಮಾಡೀರೋ ನನಗಂತೂ ತಿಳಿಯದು. ಬಿನ್ನವತ್ತಳೆಯಲ್ಲಿ ಮಾನವ ಸೇವೆಯ ಮೂಲಕ ನಾನು ಭಗವದ್ದರ್ಶನದ ಪ್ರಯತ್ನ ಮಾಡುತ್ತಿದ್ದೇನೆ ಎಂದು ಹೇಳಿದ್ದೀರಿ. ನಿಜವಾದ ಮಾತನ್ನು ಹೇಳಿದಿರಿ. ದೇವರು ಕೆಳಗೂ ಇಲ್ಲ. ಮೇಲೂ ಇಲ್ಲ. ಎಲ್ಲರ ಹೃದಯದಲ್ಲಿ ಇದ್ದಾನೆ. ಹಿಂದೂ ಏನು, ಬ್ರಾಹ್ಮಣ ಏನು. ಕ್ಷತ್ರಿಯ. ವೈಶ್ಯ, ಶೂದ್ರ ಅಥವಾ ಪಂಚಮ ಯಾರಾದರೇನು, ಮುಸಲ್ಮಾನ. ಪಾರಸಿ ಕ್ರಿಶ್ಚಿಯನ್. ಗಂಡಸು ಹೆಂಗಸು ಎಲ್ಲರಲ್ಲೂ ದೇವರಿದ್ದಾರೆ ಎಂಬುದನ್ನು ನಾನು ಬಲ್ಲೆ.'

*(ಯಂಗ್ ಇಂಡಿಯಾ-೪-೮-೧೯೨೭)*

**ಬಂಡವಾಳ ಮತ್ತು ದುಡಿಮೆ:**

ಇದೇ ಸಂದರ್ಭದಲ್ಲಿ ಬೆಂಗಳೂರು ಮಹಾರಾಜಾ ಮಿಲ್ಸ್‌ನ ಕೆಲಸಗಾರರು ಮುಷ್ಕರ ಹೂಡಿದ್ದರು. ಈ ಕೆಲಸಗಾರರು ಗಾಂಧೀಜಿಯವರನ್ನು ಕಂಡು ಅವರಿಗೆ ತಮ್ಮ ಕಾಣಿಕೆ

ಸಲ್ಲಿಸಿ, ಅವರಿಂದ ಉಪದೇಶ ಪಡೆದರು. ಆಗ ಅವರ ವಿಷಯಕ್ಕೆ ಗಾಂಧೀಜಿ ತಮ್ಮ ಪ್ರೀತಿಯನ್ನೂ, ಸಹಾನುಭೂತಿಯನ್ನೂ ವ್ಯಕ್ತಪಡಿಸುತ್ತ ಕೆಲವು ಮಾತುಗಳನ್ನು ಹೇಳಿದರು. ಆ ಮಾತುಗಳ ಸಾರಾಂಶ ಹೀಗೆ :

'ಸಾರ್ವಜನಿಕ ಸೇವೆಗೆ ಕಾಲಿಟ್ಟಾಗಿನಿಂದ ನಾನು ನಿಮ್ಮಂತೆಯೇ ಒಬ್ಬ ದುಡಿಮೆಗಾರನೇ ಆಗಿದ್ದೇನೆ. ಎಂದೇ ನನಗೆ ನಿಮ್ಮ ಸುಖ ದುಃಖ ಗೊತ್ತು. ದಕ್ಷಿಣ ಆಫ್ರಿಕಾದಲ್ಲಿ ಕೂಡ ಈ ಸಮಸ್ಯೆಯನ್ನು ಎದುರಿಸಿ ನಾನು ಕೆಲವೊಂದು ನಿರ್ಧಾರಕ್ಕೆ ಬಂದಿದ್ದೇನೆ. ಅದೆಂದರೆ ದುಡಿಮೆಗಾರರು ತಮ್ಮ ಸಾಮರ್ಥ್ಯದಿಂದ ತಾವೇ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬೇಕು. ದಕ್ಷಿಣ ಆಫ್ರಿಕಾದಲ್ಲಿ ಆದರೂ ಅಲ್ಲಿಯ ಕೂಲಿಕಾರರಿಗೆ ನಾನೇನು ಮಾಡಿದೆ? ಅವರಿಗೆ ಸಹಾಯ ಮಾಡುವ ಶಕ್ತಿ ನನಗಿತ್ತೇ? ಅವರೇ ಸ್ವಸಾಮರ್ಥ್ಯದಿಂದ ತಮ್ಮ ತೊಡಕುಗಳನ್ನು ಬಿಡಿಸಿಕೊಂಡರು. ಚಂಪಾರಣ್ಯದಲ್ಲಿ ಕೂಡ ಇದೇ ರೀತಿ ಕೂಲಿಕಾರರು ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಂಡರು. ದಕ್ಷಿಣ ಆಫ್ರಿಕಾದಲ್ಲಾಗಲಿ, ಚಂಪಾರಣ್ಯದಲ್ಲಾಗಲಿ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹಿಂಸೆಯನ್ನು ಅವಲಂಬಿಸಲಿಲ್ಲ. ಬಂದ ಕಷ್ಟ ನಷ್ಟಗಳನ್ನೆಲ್ಲ ಸಹಿಸಿ, ಅಹಿಂಸೆಯ ಮೂಲಕವೇ ತಮ್ಮ ಹೋರಾಟವನ್ನು ಸಾಗಿಸಿದರು. ಇದೇ ನಿಜವಾದ ಸತ್ಯಾಗ್ರಹ. ಇಂಥ ಸತ್ಯಾಗ್ರಹಿ ನೀವು ಆಗಬೇಕಾದ್ದಲ್ಲಿ ನಿಮ್ಮಲ್ಲಿರುವ ಕುಡಿತ, ಜೂಜು, ಅಂತಃಕಲಹ ಇವೇ ಮೊದಲಾದ ದುಶ್ಚಟಗಳನ್ನು ಬಿಟ್ಟು ನೀವು ನಿಮ್ಮ ನಡೆ ನುಡಿಯನ್ನು ತಿದ್ದಿಕೊಳ್ಳಬೇಕು. ನೀವು ಖಾದಿ ಧರಿಸಬೇಕೆಂದೂ ನನ್ನ ಬಯಕೆ. ಏಕೆಂದರೆ ಇದನ್ನು ಸಿದ್ಧಗೊಳಿಸುವವರು ಬಡವರು. ಗಿರಣಿ ಬಟ್ಟೆಗಳಿಗೆ ನಿಮ್ಮ ಬೆಂಬಲದ ಆವಶ್ಯಕತೆ ಇಲ್ಲ. ಆದರೆ ಖಾದಿಗೆ ನಿಮ್ಮ ಬೆಂಬಲ ಅಗತ್ಯ.'

'ಬಂಡವಾಳಗಾರ ಮತ್ತು ಕೂಲಿಕಾರ ಇವರ ನಡುವೆ ಯಾವದೇ ತಿಕ್ಕಾಟ ಇರಬೇಕಾದ ಅವಶ್ಯಕತೆ ಇಲ್ಲ. ಏಕೆಂದರೆ, ಇವರಿಬ್ಬರೂ ಒಬ್ಬರನ್ನೊಬ್ಬರು ಅವಲಂಬಿಸಿಕೊಂಡಿರುತ್ತಾರೆ. ಬಂಡವಾಳಗಾರ ಕೂಲಿಕಾರನ ಮೇಲೆ ಅಧಿಕಾರ ನಡೆಸಿಕೊಳ್ಳಬಾರದು ಎಂಬುದು ಇಂದು ಎಂದಿಗಿಂತ ಅಗತ್ಯ. ನನ್ನ ಅಭಿಪ್ರಾಯದ ಪ್ರಕಾರ ಗಿರಣಿಯ ಕೆಲಸಗಾರರು ಕೂಡ ಮಾಲಿಕರಂತೆ ಗಿರಣಿಯ ಪಾಲುಗಾರರೇ ಆಗಿದ್ದಾರೆ. ಆ ಗಿರಣಿ ಇಬ್ಬರಿಗೂ ಸಂಬಂಧಿಸಿದ್ದು. ಇದನ್ನು ತಿಳಿದು ನಡೆದದ್ದಾದರೆ ಇವರಿಬ್ಬರಲ್ಲಿ ಜಗಳ ಬರಲು ಕಾರಣವಿಲ್ಲ. ಹಕ್ಕು ಬಾಧ್ಯತೆಗಳ ಜೊತೆಗೆ ಕರ್ತವ್ಯದ ಹೊಣೆ ಇದ್ದೇ ಇರುತ್ತದೆ. ಒಡೆಯನಾದವನು ತನ್ನ ಆತ್ಮವನ್ನು ಎಂದೂ ನಷ್ಟ ಪಡಿಸಿಕೊಳ್ಳಲಾರ. ಮಾಲಿಕನಷ್ಟೇ ಗಿರಣಿಯು ನಿಮ್ಮದಾಗಿದೆ ಎಂಬುದನ್ನು ತಿಳಿದುಕೊಂಡರೆ, ನೀವು ನಿಮ್ಮ ಆಸ್ತಿಯಾದ ಗಿರಣಿಗೆ ನಷ್ಟವನ್ನು ಉಂಟುಮಾಡಲಾರಿರಿ. ಅದೇ ಪ್ರಕಾರ, ಸಿಟ್ಟಿನ ಭರದಲ್ಲಿ ಬಟ್ಟೆಯನ್ನಾಗಲೀ, ಯಂತ್ರವನ್ನಾಗಲೀ ನಾಶಮಾಡಿ ಗಿರಣಿಯ ಮಾಲಿಕರೊಂದಿಗೆ ನಿಮ್ಮ ಜಗಳಗಳನ್ನು ಬಗೆಹರಿಸಿಕೊಳ್ಳುವುದು ಯುಕ್ತವಲ್ಲ. ಅಗತ್ಯ ಬಿದ್ದರೆ ಹೋರಾಟ ನಡೆಸಬಹುದು. ಆದರೆ ಅದು ನೀತಿ ಮತ್ತು ಧರ್ಮಗಳ ತಳಹದಿಯ ಮೇಲೆ ನಡೆಯಬೇಕು. ಆಗ ದೇವರೆ ನಿಮ್ಮ ಜೊತೆಗೆ ಇರುವನು. ಪುನರುಕ್ತಿಯಾದರೂ ಚಿಂತೆ

ಇಲ್ಲ, ನಾನು ಪುನಃ ಹೇಳುತ್ತೇನೆ, ನಿಮ್ಮ ಹಕ್ಕು ಬಾಧ್ಯತೆಗಳನ್ನು ಪಡೆಯಲು ಒಳ್ಳೆಯ ನಡತೆ ಮತ್ತು ಕಷ್ಟ ಸಹನೆ ಇವುಗಳಿಂದ ಉತ್ತಮವಾದ ಬೇರೊಂದು ರಾಜಮಾರ್ಗವಿಲ್ಲ.'

**ಕರ್ನಾಟಕದ ಹುಡುಗರೊಡನೆ:**

ಮೈಸೂರು ಸಂಸ್ಥಾನದಲ್ಲಿ ಆ ಕಾಲಕ್ಕೆ ದಲಿತವರ್ಗದ ಉದ್ಧಾರಕ್ಕಾಗಿ ಮಾಡಿದ ಪ್ರಯತ್ನಗಳು ಬಹಳ ಸ್ತುತ್ಯ. ಉದಾರಿಯಾದ ಮಹಾರಾಜರು, ಸುಧಾರಕರಾದ ದಿವಾನರು ಇಬ್ಬರೂ ಸೇರಿ ಈ ಕೆಲಸವನ್ನು ಮಾಡಿದರು. ಔದ್ಯೋಗಿಕ ಪಾಠಶಾಲೆಗಳನ್ನು ಸ್ಥಾಪಿಸಿ, ಅವನ್ನು ವಸತಿ ಶಾಲೆಗಳಾಗಿ ಏರ್ಪಡಿಸಿದ್ದ ಎರಡು ಸಂಸ್ಥೆಗಳನ್ನು ನೋಡಿ ಬಂದು ಗಾಂಧೀಜಿ ಆ ಪ್ರಯತ್ನವನ್ನು ತುಂಬ ಮೆಚ್ಚಿಕೊಂಡರು. ಬೆಂಗಳೂರಿನ ಸಂಸ್ಥೆ ವಿದ್ಯಾರ್ಥಿನಿಲಯ ಮಾತ್ರ, ತುಮಕೂರು ಮತ್ತು ಮೈಸೂರಿನಲ್ಲಿ ವಿದ್ಯಾರ್ಥಿ ನಿಲಯದೊಂದಿಗೆ ಔದ್ಯೋಗಿಕ ಶಿಕ್ಷಣ ಶಾಲೆಗಳಿದ್ದವು. ಇಂಥ ಸಂಸ್ಥೆಗಳು ಭಾರತದಲ್ಲಿ ಬೇರೆಲ್ಲೂ ಇರಲಿಲ್ಲ. ಮೈಸೂರಿನ ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ; ಊಟ ವಸತಿ, ವಸ್ತ್ರ ಎಲ್ಲವೂ ಉಚಿತ. ಮೈಸೂರಿನಲ್ಲಿ ೨೨೩ ವಿದ್ಯಾರ್ಥಿಗಳಿದ್ದರು. ತುಮಕೂರಿನಲ್ಲಿ ೭೫ ವಿದ್ಯಾರ್ಥಿಗಳಿದ್ದರು. ಮೈಸೂರಿನ ಶಾಲೆಗಾಗಿ ಸರಕಾರಕ್ಕೆ ೨೨ ಸಾವಿರ ರೂಪಾಯಿ ವಾರ್ಷಿಕ ವೆಚ್ಚ. ತುಮಕೂರಿನ ಶಾಲೆಗಾಗಿ ೮ ಸಾವಿರ ರೂಪಾಯಿ ವೆಚ್ಚ. ಶಾಲೆಯಲ್ಲಿ ಬಡಗಿತನ, ಕಮ್ಮಾರಿಕೆ, ಚಿಪ್ಪಿಗೆ ಕೆಲಸ (ಸಿಂಪಿ), ನೇಕಾರಿಕೆ, ಚಿತ್ತದ ಕೆಲಸ ಮುಂತಾದ ಶಾಖೆಗಳಿವೆ. ಯಾವುದಾದರೂ ಒಂದನ್ನು ಹುಡುಗರು ಕಡ್ಡಾಯವಾಗಿ ಕಲಿಯಲೇ ಬೇಕು. ಆದರೂ ನೂರಕ್ಕೆ ಐದು ಜನ ಮಾತ್ರ ಈ ಕಸುಬಿನ ಶಿಕ್ಷಣಕ್ಕೆ ಹೋಗುತ್ತಾರೆ. ಈ ಶಾಲೆಗಳಲ್ಲಿ ಬಂದು ಓದುವ ಅನೇಕ ವಿದ್ಯಾರ್ಥಿಗಳು ತಮ್ಮ ಹಳ್ಳಿಗಳನ್ನೇ ಮರೆತು ಕೃತ್ರಿಮ ನಾಗರಿಕತೆಗೆ ಬಲಿಯಾಗಿ ತಮ್ಮ ಸಮಾಜಕ್ಕೇ ಸೊನ್ನೆ ಆಗಿದ್ದಾರೆ. ಇದು ಅನಿವಾರ್ಯ. ಮೈಸೂರಿನಲ್ಲಿ ಆದಿಕರ್ನಾಟಕರಿಗಾಗಿಯೇ ಒಂದು ಬೇರೆ ವಿಶೇಷ ವಸತಿಯನ್ನು ಏರ್ಪಡಿಸಿದ್ದರು. ಸರಕಾರ ಮನೆಗಳನ್ನು ಕಟ್ಟಿಕೊಟ್ಟಿತ್ತು. ಗಾಂಧೀಜಿ ಅವರ ನಡುವೆ ಹೋಗಿ ಮಾತನಾಡಿದರು:

'ನಾನು ನಿಮ್ಮ ಮಧ್ಯದಲ್ಲಿ ಬಂಧು, ನಿಮ್ಮ ಕಲ್ಯಾಣಕ್ಕೋಸ್ಕರ ಸೇವೆ ಸಲ್ಲಿಸಲು ಅನೇಕರು ಮುಂದೆ ಬರುತ್ತಾರೆಂದು ಆಶ್ವಾಸನೆ ಕೊಡುತ್ತೇನೆ. ನಿಮ್ಮ ಸೇವೆಗಾಗಿ ತನ್ನನ್ನೇ ತಾನು ಅರ್ಪಿಸಿಕೊಂಡಿರುವ ಬ್ರಾಹ್ಮಣ ಮಹಿಳೆಯನ್ನು ನಾನು ಅಭಿನಂದಿಸುತ್ತೇನೆ. ಅಸ್ಪೃಶ್ಯತೆಯ ಕಳಂಕ ದೇಶದಿಂದ ಬಲುಬೇಗ ಅಳಿದು ಹೋಗುತ್ತದೆ. ದೇವರ ಕಣ್ಣಿನಲ್ಲಿ ಯಾರೂ ದೊಡ್ಡವರಿಲ್ಲ. ಚಿಕ್ಕವರಿಲ್ಲ. ಮೇಲು ಇಲ್ಲ ಕೆಳಗೂ ಇಲ್ಲ. ಇತರರಿಗಿಂತ ತಾನು ಮೇಲೆ ಎಂದುಕೊಂಡವನು ಅತಿ ಮೂರ್ಖ ಎನ್ನುತ್ತವೆ ಶಾಸ್ತ್ರಗಳು. ಅದು ಹೇಗಾದರೂ ಇರಲಿ. ನಿಮ್ಮ ಉದ್ಧಾರ ನಿಮ್ಮ ಕೈಯಲ್ಲೇ ಇದೆ. ನಿಮ್ಮನ್ನು ನೀವು ಶುಚಿಯಾಗಿ ಇಟ್ಟುಕೊಳ್ಳಿರಿ. ನಿಮ್ಮನ್ನು ನೀವೇ ಮೇಲಕ್ಕೆ ಎತ್ತಿಕೊಳ್ಳಬೇಕು. ನಿಮ್ಮ ಮಟ್ಟಿಗೆ ನೀವು ಪರಿಶುದ್ಧರಾದರೆ ನನ್ನ ಕೆಲಸ ಬಹಳ ಹಗುರಾಗುತ್ತದೆ. ನೀವು ಪರಿಶುದ್ಧರಾದರೆ ನಿಮ್ಮ ಪ್ರಗತಿಗೆ ಅಡ್ಡಬರುವ ಶಕ್ತಿ ಈ ಭೂಲೋಕದಲ್ಲಿ ಯಾವುದೂ ಇಲ್ಲ.'

*(ಯಂಗ್ ಇಂಡಿಯಾ-೪-೭-೧೯೨೭)*

**ಬೀಳುಕೊಡುಗೆ:**

ಮೈಸೂರಿನ ಅವರ ಪ್ರವಾಸ ತುಂಬ ಹರ್ಷದಾಯಕವಾಗಿತ್ತು. ಅವರು ಅಲ್ಲಿದ್ದ ಮೂರು ದಿನಗಳಲ್ಲಿ ಎಡತೊರೆಗೆ (ಕೃಷ್ಣರಾಜನಗರ), ಶ್ರೀರಂಗಪಟ್ಟಣಕ್ಕೆ ಹೋಗಿಬಂದರು. ಎಡತೊರೆಯಲ್ಲಿಯೂ ಶ್ರೀರಂಗಪಟ್ಟಣದಲ್ಲಿಯೂ ನಿಧಿಯನ್ನು ಅರ್ಪಿಸಿದರು. ಒಟ್ಟು ಮೈಸೂರು ಜಿಲ್ಲೆಯಿಂದ ೭,೨೯೬ ರೂ. ೫ ಆ ೭ ಪೈಸೆ ಅರ್ಪಿಸಿದರು. ಗಾಂಧೀಜಿ ಹೊರಡುವ ಮುಂಚೆ ಮೈಸೂರಿನಲ್ಲಿ ಪುರಜನರ ದೊಡ್ಡ ಸಭೆ ಒಂದು ನಡೆಯಿತು. ಅಲ್ಲಿಯೂ ನಿಧಿಯನ್ನು ಅರ್ಪಿಸಿದರು. ಸಾಧಾರಣವಾಗಿ, ಗಾಂಧೀಜಿ ಉದ್ದುದ್ದ ಭಾಷಣ ಮಾಡುವವರಲ್ಲ. ಆದರೆ ರೂಢಿಗೆ ವಿರುದ್ಧವಾಗಿ, ನಿರೀಕ್ಷೆ ಮೀರಿ, ಮೈಸೂರಿನ ಬಗ್ಗೆ ತಮ್ಮ ಆಶೋತ್ತರಗಳನ್ನು ಪ್ರಸ್ತಾಪಿಸುತ್ತ ದೀರ್ಘವಾಗಿ ಬೀಳ್ಕೊಡುಗೆಯ ಭಾಷಣ ಮಾಡಿದರು :

'ಕರ್ನಾಟಕದಲ್ಲಿ ಕಾರ್ಯಕ್ಷಮತೆಗೆ ಏನೂ ಕೊರತೆ ಇಲ್ಲ. ನಿಮ್ಮಲ್ಲಿ ಒಬ್ಬ ಸುಪ್ರಸಿದ್ಧ ಇಂಜಿನಿಯರ್ ಇದ್ದಾರೆ, ಬಹಳ ಹೆಸರುವಾಸಿಯಾದ ಸಂಗೀತಗಾರರಿದ್ದಾರೆ, ಬಹಳ ಪ್ರತಿಭಾಶಾಲಿ ಸುಪ್ರಸಿದ್ಧ ಕಲಾವಿದರೊಬ್ಬರು ಇದ್ದಾರೆ. ಹೀಗೆಯೇ ಬೇರೆ ಬೇರೆ ಕ್ಷೇತ್ರಗಳಲ್ಲಿ ದೊಡ್ಡವರು ಬಹಳ ಜನ ಇದ್ದಾರೆ. ಇದರ ಜೊತೆಗೆ ಒಬ್ಬ ಸುಪ್ರಸಿದ್ಧ ನೂಲುಗಾರನನ್ನೂ ಸಿದ್ಧಗೊಳಿಸಿರಿ. ನಿಮ್ಮಲ್ಲಿ ಖಾದಿ ಪ್ರೇಮ ಇದೆ. ಆದರೆ ಇನ್ನೂ ನೀವು ಖಾದಿ ತೊಟ್ಟಿಲ್ಲ. ಈ ಸಭೆ ಅದಕ್ಕೆ ಸಾಕ್ಷಿ. ಮಹಾರಾಜರ ಅಂಗರಕ್ಷಕರು ನೂಲುತ್ತಾರೆ ಎಂದು ಕೇಳಿದ್ದೇನೆ. ಮತ್ತು ಈ ಕೆಲಸ ಎಷ್ಟು ಸಮರ್ಪಕವಾಗಿ ನಡೆದಿದೆ ಎಂಬುದನ್ನು ತಿಳಿದಿದ್ದೇನೆ. ಈ ಎಲ್ಲ ಸಂಸ್ಥೆಗಳಿಗೋಸ್ಕರ ಮತ್ತು ಅಂಗರಕ್ಷಕರಿಗೋಸ್ಕರ ಒಬ್ಬ ನಿಪುಣ ನೂಲುಗಾರನನ್ನು ನಿಯಮಿಸುವದು ಅತ್ಯಗತ್ಯ. ಕೆಟ್ಟ ಸಂಗೀತದಂತೆ ಕೆಟ್ಟ ನೂಲು ನಿಷ್ಪ್ರಯೋಜಕ. ನಿಜವಾಗಿ ದರಿದ್ರ ನಾರಾಯಣ ಸೇವೆ ಮಾಡಿದರೆ, ಈ ರಾಟೆಯಲ್ಲಿ ಸಂಗೀತ ಕೇಳಬರುತ್ತದೆ, ಕಲೆ ಇದೆ, ಅರ್ಥಶಾಸ್ತ್ರದ ಪರಿಚಯವಾಗುತ್ತದೆ. ಸಂತೋಷವಂತೂ ಇದ್ದೇ ಇದೆ. ಮೈಸೂರಿನಲ್ಲಿ ಅನೇಕ ಸಂಸ್ಥೆಗಳಿಗೆ ನಾನು ಹೋಗಿದ್ದೆ. ರಾಜಕುಮಾರಿ ಕೃಷ್ಣರಾಜಮ್ಮಣ್ಣಿ ಸೆನಿಟೋರಿಯಂನಲ್ಲಿ ನಾನು ಏನನ್ನೂ ನಿರೀಕ್ಷಿಸಿರಲಿಲ್ಲ. ಅಲ್ಲಿಯ ರೋಗಿಗಳು ಪ್ರೀತಿಯಿಂದ ಬಡವರ ಸಲುವಾಗಿ ತಮ್ಮ ಹೃತ್ಪೂರ್ವಕವಾದ ಕಾಣಿಕೆಯನ್ನು ಸಲ್ಲಿಸಿದರು. ಅಂಧ ಮೂಕರ ಶರಣಾಲಯವಲ್ಲಿ ಸೊಗಸಾದ ಮನ ಕರಗಿಸುವ ಸಂಗೀತವನ್ನು ಆ ಕುರುಡ ಮಕ್ಕಳು ನನಗೆ ಕೇಳಿಸಿದ್ದಾರೆ. ಅನಾಥಾಲಯವನ್ನು ನೋಡಿದ್ದೇನೆ. ಆದಿಕರ್ನಾಟಕದ ವಸತಿಯನ್ನು ನೋಡಿದ್ದೇನೆ. ಇವೆಲ್ಲವೂ ನಿಮ್ಮ ಮಹಾರಾಜರ ಮಾನವೀಯತೆಯ ಗುರುತು ಆದರೆ ನಿಮ್ಮ ಕರುಣೆ ಇನ್ನೂ ಹೆಚ್ಚಬೇಕು. ನಮ್ಮಲ್ಲಿರುವ ಕುಂಟ, ಕುರುಡರಿಗೆ, ಅಂಗಹೀನರಿಗೆ ಅನ್ನವಿಲ್ಲದೆ ಸಾಯುವ ಗತಿ ಬಂದಿಲ್ಲ. ಆದರೆ ನಮ್ಮ ಹಳ್ಳಿಗಳಲ್ಲಿ ಕೋಟ್ಯಂತರ ಬಡ ಜನರಿದ್ದಾರೆ. ತಿರುಪೆಗಾಗಿ ಅವರು ಹೊರಗೆ ಹೋಗಲು ಸಾಧ್ಯವಿಲ್ಲ. ಒಬ್ಬೊಬ್ಬರಿಗೆ ಒಂದು ಎಕರೆಗಿಂತ ಕಡಿಮೆ ಇರುವ ಭೂಮಿಯಿಂದ ಹೊಟ್ಟೆ ಹೊರಲು ಸಾಧ್ಯವಿಲ್ಲ. ಎಷ್ಟೋ ದಿನ ಜನ ಉಪವಾಸ ಸಾಯುತ್ತಾರೆ. ಇದಕ್ಕೆಲ್ಲ ನಾವೇ ಕಾರಣ. ಅವರ ಬಡತನಕ್ಕೆ ಅವರ ಉಪವಾಸಕ್ಕೆ ಒಂದೇ ಮದ್ದು. ಅವರಿಗೆ ಉದ್ಯೋಗ ಸಿಗಬೇಕು.'

ಮುಂದುವರಿದು ಗಾಂಧೀಜಿ ಮೈಸೂರನ್ನು ಬಹಳವಾಗಿ ಪ್ರಶಂಸಿಸಿ ಹೇಳಿದರು: 'ನೀವು ಎರಡು ವಿಧದಲ್ಲಿ ಅದೃಷ್ಟವಂತರು. ನಿಮ್ಮ ಹವಾಗುಣ ಅದ್ಭುತವಾದದ್ದು, ನಿಮ್ಮ ಸುತ್ತಲಿನ ನೈಸರ್ಗಿಕ ದೃಶ್ಯ ಅತ್ಯಂತ ಸುಂದರವಾಗಿದೆ. ನಿಮ್ಮ ದೊರೆ ತುಂಬ ಒಳ್ಳೆಯವರು, ಉದಾರ ಹೃದಯರು. ಸದಾ ಅವರಿಗೆ ಜನರ ಯೋಗಕ್ಷೇಮದ ಚಿಂತೆಯೇ ಚಿಂತೆ. ಇಂಥ ಸಂಸ್ಥಾನದಲ್ಲಿ ಇಂಥ ಪ್ರಕೃತಿ ಸೌಂದರ್ಯದಲ್ಲಿ ಒಬ್ಬನೂ ಭಿಕ್ಷುಕನಿರಬಾರದು. ಬಡತನದಿಂದ ಹೊಟ್ಟೆಗಿಲ್ಲದೇ ಸಾಯುವ ಒಬ್ಬ ವ್ಯಕ್ತಿಯೂ ಇರಕೂಡದು. ನಿಮ್ಮ ಕೃಷ್ಣರಾಜಸಾಗರ ಅಣೆಕಟ್ಟನ್ನು ನೋಡಿ ಬಂದೆ. ಶ್ರೀ ವಿಶ್ವೇಶ್ವರಯ್ಯನವರ ಇಂಜಿನಿಯರಿಂಗ್ ವಿದ್ಯೆಯ ಅಸಾಧಾರಣ, ಅದ್ಭುತ ಫಲ ಅದು. ಪ್ರಪಂಚದಲ್ಲೇ ಇಂಥದು ಎರಡನೆಯದು ಎಂದು ಕೇಳಿದ್ದೇನೆ. ಇಂಥ ಸಾಹಸವಂತ ದೇಶದಲ್ಲಿ ದರಿದ್ರ ನಾರಾಯಣನಿಗೂ ಒಂದಿಷ್ಟು ಸ್ಥಳ ಮಾಡಿಕೊಡಿರಿ. ನಿಮ್ಮ ಪ್ರೀತಿ ಅಭಿಮಾನಗಳಿಗೆ ನಾನು ತುಂಬ ಋಣಿ.'

ಮೈಸೂರಿನ ಸಭೆಯಲ್ಲಿಯೇ ಹರಿಜನ ಅಭಿವೃದ್ಧಿಗಾಗಿ ತಾವು ಹಾಕಿಕೊಂಡಿರುವ ಕಾರ್ಯಕ್ರಮವನ್ನು ವಿವರಿಸಿದರು. ಹರಿಜನರಿಗೆ ಆರ್ಥಿಕ ಅಭಿವೃದ್ಧಿ ಮಾತ್ರ ಆದರೆ ಪ್ರಯೋಜನವಿಲ್ಲ. ಅವರಿಗೆ ಇರುವ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಪ್ರತಿಕೂಲ ಪರಿಸ್ಥಿತಿಯನ್ನು ನಿವಾರಿಸಬೇಕು. ಸವರ್ಣೀಯರು ಅವರ ಸಂದೇಶದ ಅರ್ಥವನ್ನು ಅರಿತುಕೊಳ್ಳುವಂತೆ ತಿಳಿಸಿದರು. ಮೈಸೂರಿನಲ್ಲಿ ಗಾಂಧೀಜಿ ಇದ್ದಾಗಲೇ ಜಗತ್ಪ್ರಸಿದ್ಧ ಶ್ರೀ ವೆಂಕಟಪ್ಪನವರು ಸುಪ್ರಸಿದ್ಧ ವಿದ್ವಾಂಸರೂ ಪ್ರಾಕ್ತನ ಪರಿಶೋಧಕರೂ ಆದ ಡಾ. ಶಾಮಾಶಾಸ್ತ್ರಿಗಳೂ ಗಾಂಧೀಜಿಯನ್ನು ಭೇಟಿ ಮಾಡಿದರು.

*(ಯಂಗ್ ಇಂಡಿಯಾ: ೧೧-೮-೧೯೨೭)*

**ಕುರುಡು ಹುಡುಗಿಯ ಸಂಗೀತ:**

ಮೈಸೂರಿನಲ್ಲಿದ್ದಾಗ ಎಷ್ಟೋ ಸವಿಯಾದ ಸಂಗೀತವನ್ನು ಗಾಂಧೀಜಿ ಕೇಳಿದರು. ಮೈಸೂರಿನ ಅಂಧ ಮೂಕರ ಶಾಲೆಯ ಆ ಕುರುಡು ಹುಡುಗಿಯ ಸಂಗೀತದ ಸವಿ ಅವರನ್ನು ದಂಗು ಬಡಿಸಿತು. ಅವಳ ಕಂಠ ತುಂಬಾ ಮನೋಹರ, ಅತ್ಯಂತ ಮಧುರ. ಅವಳು ಹಾಡುವಾಗ ಯಾವದೋ ಅಲೌಕಿಕ ಮಂದಹಾಸ ಅವಳ ತುಟಿಯ ಮೇಲೆ ಮಿನುಗುತ್ತ ಮನಸ್ಸನ್ನು ಸೂರೆಗೊಳ್ಳುತ್ತಿತ್ತು. ಇಂಥ ಮಂದಹಾಸ ಬರಲು ಸುತ್ತಲಿನ ಪ್ರಪಂಚದ ಪರಿಜ್ಞಾನವಿಲ್ಲದ್ದೇ ಇರಬೇಕು. ಶಾಲೆಯ ಕುರುಡು ಹುಡುಗರು ಅವಳ ಜೊತೆಗೆ ವೀಣೆ ಬಾರಿಸಿದರು. ಆ ಪಕ್ಕವಾದ್ಯವನ್ನು ಅನುಸರಿಸಿಕೊಂಡು ಆ ಹುಡುಗಿ ಹಾಡುತ್ತಿದ್ದರೆ ಏನೋ ಒಂದು ಅದ್ಭುತ ಆನಂದ-ಎಂದು ಶ್ರೀ ಮಹದೇವ ದೇಸಾಯಿ ಹೇಳಿದ್ದಾರೆ.

ಆ ಶಾಲೆಯ ಪ್ರಿನ್ಸಿಪಾಲ್ ಕೇಳಿದ : 'ಏನಾದರೂ ಸಲಹೆ ಕೊಟ್ಟರೆ ಬಹಳ ಸಂತೋಷದಿಂದ ಸ್ವೀಕರಿಸುತ್ತೇವೆ.'

'ನನ್ನದು ಎರಡು ಸಲಹೆ ಇವೆ' ಎಂದರು ಗಾಂಧೀಜಿ. 'ನಿಮ್ಮ ಉಪಯೋಗ ಮತ್ತಿಷ್ಟು ಹೆಚ್ಚಬೇಕು ಎಂದರೆ ಇಲ್ಲಿರುವ ಮಂದಭಾಗ್ಯರಿಗಿಂತ ಇನ್ನೂ ಹೆಚ್ಚು ದುರ್ಭಾಗ್ಯರನ್ನು ಇವರು

ಪ್ರೀತಿಸುವಂತೆ ಮಾಡಿ. ನಿಮ್ಮಲ್ಲಿರುವ ಅನಾಥರು ಅನಾಶ್ರಿತರು ಹಳ್ಳಿಗಳಲ್ಲಿ ಉಪವಾಸ ಸಾಯುವ ರೈತನಿಗಿಂತ ಎಷ್ಟೋ ಚೆನ್ನಾಗಿದ್ದಾರೆ. ಅಲ್ಲಿ ಅವರನ್ನು ನೋಡಿಕೊಳ್ಳಲು ಯಾರೂ ದಿಕ್ಕು ಇಲ್ಲ. ಇವರು ಊರಲ್ಲಿ ದಯೆ ತೋರಲಿ. ನಿಮ್ಮ ಶಾಲೆಯಲ್ಲಿ ರಾಟೆಗೆ ಸ್ಥಾನ ಇಲ್ಲ ಎಂಬುದನ್ನು ನಾನು ಬಲ್ಲೆ. ಇವರ ಜೀವನೋಪಾಯಕ್ಕೆ ನೀವು ಅವರಿಗೆ ಉದ್ಯೋಗವನ್ನು ಕಲಿಸುತ್ತಿದ್ದೀರಿ. ಬಹಳ ಸಂತೋಷ. ಇವರೆಲ್ಲರಿಗೂ ಖಾದಿ ಸಮವಸ್ತ್ರ ಕೊಡಬಾರದೆ? ಪ್ರತಿಯೊಂದು ಕ್ರಿಶ್ಚಿಯನ್ ಶಾಲೆಯಲ್ಲಿಯೂ ಒಂದೊಂದು ಸಮವಸ್ತ್ರ ಇದ್ದೇ ಇರುತ್ತದೆ. ಅವರ ಉದ್ದೇಶ ತಮ್ಮ ಪಂಥಕ್ಕೆ ಅವರನ್ನು ಸೆಳೆದಿಡಬೇಕು ಎಂಬುದು. ಏನೇ ಇರಲಿ, ಸಮವಸ್ತ್ರದಲ್ಲಿ ಏನೋ ಒಂದು ಮೋಡಿ ಇದೆ. ನಿಮ್ಮ ಪಾಲಿಗೆ ಸಮವಸ್ತ್ರ ಬಡವರೊಡನೆ ತಾದಾತ್ಮ್ಯದ ಸಂಕೇತ ಆಗಲಿ. ಮೊದಲು ನೀವು ನೂಲಲು ಪ್ರಾರಂಭಿಸಿ. ನಿಮ್ಮಲ್ಲಿ ಈ ಪರಿಶುದ್ಧತೆ ಬರಬೇಕು ಎಂದರೆ ನಿಮ್ಮಲ್ಲಿ ಸಮಸ್ತರೂ ಶಿಕ್ಷಕರೂ ವ್ಯವಸ್ಥಾಪಕರೂ ಯಜ್ಞಾರ್ಥ ವಾಗಿ ನೂತರೆ ಬಹುಶಃ ಈ ಮಕ್ಕಳೂ ನೂಲಬಹುದು.'

*(ಯಂಗ್ ಇಂಡಿಯಾ: ೧೧-೮-೧೯೨೭)*

**ಡಾ. ಶಾಮಾಶಾಸ್ತ್ರಿಗಳು:**

ಡಾ. ಶಾಮಾಶಾಸ್ತ್ರಿಗಳು ಕೌಟಿಲ್ಯನ ಅರ್ಥಶಾಸ್ತ್ರದ ಭಾಷಾಂತರಕಾರರೆಂದು ಪ್ರಸಿದ್ಧ ರಾಗಿದ್ದಾರೆ. ಅವರ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಸಿಕ್ಕ ಹಸ್ತಪ್ರತಿಯಿಂದ ಈ ಭಾಷಾಂತರ ಮಾಡಿದರು. ಪ್ರಾಚೀನ ಪುಸ್ತಕ ಭಂಡಾರದಲ್ಲಿ ೧೧,೦೦೦ ಹಸ್ತಪ್ರತಿಗಳು ಇವೆ. ಶಾಮಾಶಾಸ್ತ್ರಿಗಳ ಇಂಗ್ಲೀಷ ವಿದ್ಯಾಭ್ಯಾಸ ಬಹಳ ತಡವಾಗಿಯೇ ಆಯಿತು. ಅಲ್ಲಿಯವರೆಗೆ ಅವರು ಸಂಸ್ಕೃತ ವಿದ್ಯೆಯಲ್ಲಿ ನಿಷ್ಣಾತರಾದರು. ಡಾ. ಶಾಮಾಶಾಸ್ತ್ರಿಗಳು ತಮ್ಮ ಕೌಟಿಲ್ಯನ ಅರ್ಥಶಾಸ್ತ್ರದ ಪ್ರತಿಯನ್ನೂ ಮತ್ತು ವಾರ್ಷಿಕ ವರದಿಯನ್ನೂ ಗಾಂಧೀಜಿಗೆ ಅರ್ಪಿಸಲು ಬಂದಿದ್ದರು.

ಶಾಸ್ತ್ರಿಗಳು ಗಾಂಧೀಜಿ ಬಳಿಗೆ ಬಂದು, 'ಹಿಂದಿನಕಾಲದ ಆಶ್ರಮಗಳಂತೆ ಕೆಲವು ಸಂಸ್ಕೃತಿ ಕೇಂದ್ರಗಳನ್ನು ಸ್ಥಾಪನೆ ಮಾಡಿ' ಎಂದು ಗಾಂಧೀಜಿಯನ್ನು ಬೇಡಿಕೊಂಡರು. ಅಶೋಕನಿಗೆ ಒಬ್ಬ ಉಪಗುಪ್ತನಿದ್ದ. ಪುಷ್ಯಮಿತ್ರನಿಗೆ ಒಬ್ಬ ಪತಂಜಲಿ, ಕುಮಾರಪಾಲನಿಗೆ ಒಬ್ಬ ಹೇಮಚಂದ್ರ, ವಿಜಯನಗರದ ದೊರೆಗಳಿಗೆ ವಿದ್ಯಾರಣ್ಯರು ಇದ್ದರು. ಇಂಥವರೆಲ್ಲ ಆಗಿನ ಕಾಲದ ರಾಜರು ಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಅದೇ ರೀತಿ ಸುಶಿಕ್ಷಿತರು, ಸಂಸ್ಕೃತಿ ಸಂಪನ್ನರು, ನಿಸ್ವಾರ್ಥಿಗಳೂ ಆದ ವ್ಯಕ್ತಿಗಳ ಒಂದು ದಂಡು ಕಟ್ಟಿ, ಅವರು ಹೋದಲ್ಲೆಲ್ಲಾ ಸ್ವಾರ್ಥ ತ್ಯಾಗದ ಆದರ್ಶವನ್ನು ಉಪದೇಶ ಮಾಡಬಾರದೇ ಎಂದು ಕೇಳಿಕೊಂಡರು. ಅದರಿಂದ ಶಾಂತಿ, ಸಮೃದ್ಧಿಗಳು ದೇಶದಲ್ಲಿ ನೆಲೆಗೊಂಡಾವು ಎಂದು ಶಾಸ್ತ್ರಿಗಳ ಆಸೆ.

'ಸರಿ. ನೀವು ಹೇಳಿದ್ದು ಸರಿ' ಎಂದು ಹೇಳುತ್ತ ಗಾಂಧೀಜಿ ನಗುತ್ತ ಎಂದರು–'ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರು ಯಾರು?'

ಶಾಮಾಶಾಸ್ತ್ರಿಗಳು ಹೇಳಿದರು–'ಬುದ್ಧನ ಕಾಲದಲ್ಲಿ ೫೦೦೦ ವಿಹಾರಗಳಿದ್ದವಂತೆ. ಇವತ್ತು ಏಕೆ ಸಾಧ್ಯವಾಗಬಾರದು?'

'ನನಗಂತೂ ಸಾಧ್ಯವಿಲ್ಲ. ನನ್ನ ತತ್ವ ಭದ್ರ ಎಂಬುದರ ಬಗ್ಗೆ ನನಗೆ ಸಂದೇಹವಿಲ್ಲ. ಆದರೆ ನಾನು ಅದನ್ನು ಆಚರಣೆಗೆ ಬರುವಂತೆ ಮಾಡಲಾರೆ. ಜನಗಳ ಮೇಲೆ ಪ್ರಭಾವ ಬೀರಲು ನನ್ನ ತಪಸ್ಸು ಸಾಲದು. ಅಲ್ಲದೆ ಆ ಕಾಲಕ್ಕೂ ಈ ಕಾಲಕ್ಕೂ ಎಷ್ಟು ವ್ಯತ್ಯಾಸ. ಆಗ ಜೀವನ ಸುಗಮವಾಗಿತ್ತು. ಆಗ ಮಕ್ಕಳು ತಂದೆ ತಾಯಿಗಳ ಕಾಮದ ಸಂತಾನವಾಗಿರಲಿಲ್ಲ. ಇಂದು ಅವರ ಮೈ ಹೊಲಸು, ಅವರ ಮನಸ್ಸು ಇನ್ನೂ ಕೆಟ್ಟ. ಎಲ್ಲಾ ಮುರಿದುಬಿದ್ದಿವೆ. ಈ ತುಂಡುಗಳಿಂದ ಏನೋ ಒಂದನ್ನು ಮತ್ತೆ ನಿರ್ಮಿಸಬೇಕೆಂದು ನೋಡುತ್ತಿದ್ದೇನೆ.'

ಪುಸ್ತಕ ಪಂಡಿತರಂತೆ ಪಟ್ಟು ಹಿಡಿದು, ಡಾ. ಶಾಸ್ತ್ರಿಗಳು ಮತ್ತೆ ಅದನ್ನೇ ಹೇಳಿದರು– 'ಆ ಕೆಲಸಕ್ಕೆ ಗಾಂಧೀಜಿಯೇ ಸರಿ. ಬೇರೆ ಯಾರೂ ಅಲ್ಲ' ಎಂದರು.

ಗಾಂಧೀಜಿ ಅಂದರು–'ನನ್ನ ಆಶ್ರಮವನ್ನೇ ತೆಗೆದುಕೊಳ್ಳಿರಿ. ಅದನ್ನು ಒಂದು ವಿಹಾರವೆಂದು ಕರೆದರೂ ಕರೆಯಬಹುದು. ಅದಕ್ಕೆ ತಕ್ಕ ಸ್ತ್ರೀ ಪುರುಷರನ್ನು ಹುಡುಕಲು, ನನಗೆಷ್ಟು ಕಷ್ಟವೋ ಹೇಳಲಾರೆ. ಮೂಲಭೂತ ಆದರ್ಶವನ್ನು ಸ್ವಲ್ಪ ತಡಮಾಡಿದರೂ ಇವರನ್ನೆಲ್ಲಾ ಒಟ್ಟಿಗೇ ಹಿಡಿದಿಡುವುದು ಎಷ್ಟು ಕಷ್ಟ. ೧೯೦೭ರಲ್ಲಿ ಫೀನಿಕ್ಸನಲ್ಲಿ ಪ್ರಾರಂಭಿಸಿದ ಆಶ್ರಮದಲ್ಲೂ ಇದೇ ಗತಿ. ಮೂರು ಪೌಂಡು ತೆರಿಗೆ ಹೋಗಬೇಕು–ಮುಂತಾದ ತಾತ್ಕಾಲಿಕ ಗುರಿಗಳನ್ನು ಇಟ್ಟುಕೊಂಡು ಜನ ಬಂದರು. ಅವ್ಯಕ್ತವಾದ, ಅಗೋಚರವಾದ ಆದರ್ಶವನ್ನು ಅವರು ಅನುಸರಿಸಲಾರರು. ಈಗ ಗೊತ್ತಾಗಿರುತ್ತೆ ಎಷ್ಟು ಅಪಾರ ಕಷ್ಟ ಎಂದು!

ಆದರೆ ಶಾಸ್ತ್ರಿಗಳು ತಮ್ಮ ಕನಸನ್ನು ಕೈಬಿಡಲಿಲ್ಲ. ವಿದ್ಯಾವಂತರ, ಅನಾಸಕ್ತರ, ಸ್ವಾರ್ಥರಹಿತರ ಆಶ್ರಮಗಳನ್ನು ಬುದ್ಧನ ಕಾಲದಲ್ಲಿ ಇದ್ದಂತೆ ಮತ್ತೆ ನೆಲೆಗೊಳಿಸಬೇಕು ಎಂಬುದು ಅವರ ಕನಸು.

**ಕಲಾಕಾರ ವೆಂಕಟಪ್ಪ:**

ಕಲಾಕಾರ ವೆಂಕಟಪ್ಪನವರು ಗಾಂಧೀಜಿಯನ್ನು ಭೇಟಿ ಮಾಡಿ, ಅವರಿಗೆ ತಮ್ಮ ಚಿತ್ರಗಳನ್ನು ತೋರಿಸಿದರು. ವೆಂಕಟಪ್ಪ ಸದಾ ಸರಳಜೀವಿ. ಇನ್ನೂ ಹರೆಯ ಬರುವದರೊಳಗೆ ಕಲೆಗಾಗಿ ತಮ್ಮ ಬದುಕನ್ನು ಮುಡಿಪು ಮಾಡಿಕೊಂಡರು. ಮೈಸೂರಿನಲ್ಲಿ ಅವರ ಮನೆ ಬಹಳ ಸಾಮಾನ್ಯವಾದುದು. ಯಾವಾಗಲೂ ಕೆಲಸದಲ್ಲಿ ಮುಳುಗಿರುವ ಸ್ವಭಾವ ಅವರದು. ಪ್ಲಾಸ್ಟಿಕ್ ಶಿಲ್ಪದಲ್ಲಿಯೂ (ಮೂರ್ತಿಶಿಲ್ಪ) ಕೈಯಾಡಿಸಿ ಅವರು ಕೆಲವು ಸೊಗಸಾದ ಕೃತಿಗಳನ್ನೂ ನಿರ್ಮಿಸಿದ್ದಾರೆ. ಮೈಸೂರು ಮಹಾರಾಜರ ಅರಮನೆಯ ಗೋಡೆಗಳ ಮೇಲೆ ಅವನ್ನು ನೋಡಬಹುದು. ವೀಣೆ ಶೇಷಣ್ಣನವರು ಈಗ ಇಲ್ಲ. ಅವರಲ್ಲಿ ಹೋಗಿ ವೆಂಕಟಪ್ಪ ಎಂಟು ವರ್ಷ ವೀಣೆ ಪಾಠ ಹೇಳಿಸಿಕೊಂಡರು. ಆಮೇಲೆ ಮತ್ತೆ ಚಿತ್ರಕಲೆಗೆ ಹಿಂದಿರುಗಿದರು. ಪ್ರಕೃತಿಯ ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಬೇರೆ ಬೇರೆ ದೃಶ್ಯಗಳನ್ನು ಅವರು ಕಂಡು ಅನುಭವಿಸಿ. ಅದನ್ನು ಸೂಕ್ಷ್ಮವಾಗಿ ತಮ್ಮ ಕೃತಿಗಳಲ್ಲಿ ಇಳಿಸಿದ್ದರು. ಆ ಸೂಕ್ಷ್ಮ ಕೃತಿಗಳನ್ನು ಗಾಂಧೀಜಿ ನೋಡಿ ತುಂಬಾ ಹರ್ಷಗೊಂಡರು. ವೆಂಕಟಪ್ಪನವರು ರೇಖಾವಿನ್ಯಾಸದ ಬಗ್ಗೆ, ವರ್ಣವಿನ್ಯಾಸದ ಬಗ್ಗೆ, ವಿವರಗಳ ಬಗ್ಗೆ ಸಾಧಿಸಿದ ವೈಶಿಷ್ಟ್ಯ ಮತ್ತು ಸೂಕ್ಷ್ಮ ವಿವರ ಕಲೆಯ ಪರಿಚಯವಿಲ್ಲದ

ಸಾಮಾನ್ಯನಿಗೂ ಕೂಡ ತಿಳಿಯುವಂತೆ ಇತ್ತು. ವೆಂಕಟಪ್ಪನವರು ತಮ್ಮ ಕಲೆಯಲ್ಲಿ ಸಿದ್ಧಹಸ್ತರು. ಅದ್ಭುತವಾದ ಮೇಘಗಳ ಚಿತ್ರಣದ ಪರಿಣತಿಯನ್ನು ತೋರಿಸುವ ಅವರ 'ನಸುಗು', 'ಬೆಳಗು', 'ಮುಸ್ಸಂಜೆ' ಈ ಚಿತ್ರಗಳು ಎಷ್ಟು ಶಾಂತಿಯನ್ನು ಬೀರುತ್ತವೆಯೋ ಪ್ರಕೃತಿಯ ಸಾನ್ನಿಧ್ಯದಲ್ಲಿ ಕಲಾಕಾರ ಎಂಥ ಆಳವಾದ ಅಧ್ಯಯನ ನಡೆಸಿದ್ದಾನೋ, ಎಂಥ ಶಾಂತಿಯನ್ನು ಸಂಪಾದಿಸಿದ್ದಾನೋ ಎಂಬುದನ್ನು ಎತ್ತಿ ತೋರಿಸುತ್ತದೆ.

ವೆಂಕಟಪ್ಪನವರು ತಮ್ಮ ತಾಯ್ನುಡಿ ಅಲ್ಲದ ಇಂಗ್ಲೀಷ ಭಾಷೆಯಲ್ಲಿ ಹೇಳಿದರು:- 'ನಾನು ನನ್ನನ್ನು ಕಲೆಗಾಗಿ ಅರ್ಪಿಸಿಕೊಂಡಿದ್ದೇನೆ. ನಾನು ಬ್ರಹ್ಮಚಾರಿ. ಬದುಕಿರುವಷ್ಟು ದಿನವು ಬ್ರಹ್ಮಚಾರಿಯಾಗಿಯೇ ಇರಬೇಕೆಂದು ತೀರ್ಮಾನಿಸಿಕೊಂಡಿದ್ದೇನೆ. ಕಷ್ಟಪಟ್ಟು, ಪ್ರಾಮಾಣಿಕವಾಗಿ ನಾನು ದುಡಿದು ಗಳಿಸಿದ್ದನ್ನೆಲ್ಲ ಬೆಂಗಳೂರಿನಲ್ಲಿ ಒಂದು ಕಲಾ ಸಂಸ್ಥೆಗೆ ದಾನ ಮಾಡಿ, ಅಲ್ಲಿಗೆ ಬಂದವರಿಗೆಲ್ಲ ಉಚಿತವಾಗಿ ಪಾಠ ಹೇಳಿಕೊಡುತ್ತೇನೆ. ನನ್ನ ಚಿತ್ರಗಳನ್ನು ಮಾರುವುದಿಲ್ಲ. ಆ ಸಂಸ್ಥೆಗಾಗಿ ಇವು ಮೀಸಲು. ಆ ಸಂಸ್ಥೆ ರಾಷ್ಟ್ರಕ್ಕೆ ಕಾಣಿಕೆ.'

ಅವರು ಹೊರಟುಹೋಗುವಾಗ ಗಾಂಧೀಜಿ ಹೇಳಿದರು:- ತುಂಬ ಸಂತೋಷ. ನನ್ನ ಆಶೀರ್ವಾದ ನಿಮಗೆ. ನಾನೊಂದು ಸಲಹೆ ಕೊಡಲೇ? ರಾಟೆ ನಿಮಗೆ ಹಿಡಿಸಿದರೆ, ಗ್ರಾಮಸ್ಥರ ಜೀವನಕ್ಕೆ ರಾಟೆಯ ಮಹತ್ವ ಏನೋ ನೀವು ಚಿತ್ರಿಸಬಹುದಾದರೆ, ನನಗೆ ಇನ್ನೂ ಹೆಚ್ಚು ಸಂತೋಷ. ಇದು ಬರೀ ಪ್ರಾರ್ಥನೆ. ನಿಮಗೆ ರಾಟೆ ಹಿಡಿಸದಿದ್ದರೆ ಚಿಂತೆ ಇಲ್ಲ. ಅದರಿಂದ ನಿಮಗೆ ಕುಂದಾಗುವುದು ಏನೂ ಇಲ್ಲ.

*(ಯಂಗ್ ಇಂಡಿಯಾ: ೧೧-೮-೧೯೨೭)*

**ಮತ್ತೆ ಬೆಂಗಳೂರಿನಲ್ಲಿ:**

ಬೆಂಗಳೂರಿನಲ್ಲಿ ಮಿಥಿಕ್ ಸೊಸೈಟಿಯವರು ಅಧಿಕಾರೇತರ ವರ್ಗದ ಪ್ರಯತ್ನಗಳಿಂದ ಸರಕಾರದ ಪ್ರಾಚ್ಯ ಸಂಶೋಧನ ಖಾತೆಯ ಕೆಲಸಕ್ಕೆ ಪೂರಕವಾಗಿದ್ದಾರೆ. ಸಂಘದಲ್ಲಿ ಪ್ರಾಚ್ಯ ಸಂಶೋಧನೆಯ ಜೊತೆಗೆ ಪುರಾತನ ಕಥೆಗಳ ಸಂಶೋಧನೆಯೂ ನಡೆಯುತ್ತಿದೆ. ಒಂದು ಪತ್ರಿಕೆಯನ್ನೂ ಹೊರಡಿಸುತ್ತಿದ್ದಾರೆ. ಸಂಘದಲ್ಲಿ ಅಮೂಲ್ಯವಾದ ಅಪೂರ್ವ ಪುಸ್ತಕಗಳ ಸಂಗ್ರಹವಿದೆ. ಗಾಂಧೀಜಿ ಕಳೆದ ಮೂವತ್ತು ವರ್ಷಗಳಿಂದ ದೀನ ದಲಿತ ದರಿದ್ರರ ಜೊತೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಸಂಘದ ಕೆಲಸ ಬೆಲೆ ಕಟ್ಟುವುದಾಗಲಿ, ಸಲಹೆ ಕೊಡುವುದಾಗಲಿ ಸಾಧ್ಯವಿರಲಿಲ್ಲ. ಆದರೂ ಒಂದು ಸೂಚನೆ ಕೊಟ್ಟರು. ರಾಷ್ಟ್ರೋದ್ಧಾರಕ್ಕೆ, ಮಾನವಜಾತಿಯ ಉತ್ಥಾನಕ್ಕೆ ಬಹಳ ಸಹಾಯಕವಾದ ಸೂಚನೆ. 'ನಿಮ್ಮಲ್ಲಿ ಕೆಲವರು, ಈ ಅಸ್ಪೃಶ್ಯತೆಯ ಕಳಂಕ ಈ ದೇಶಕ್ಕೆ ಏಕೆ ಬಂತೋ ಸಂಶೋಧನೆ ಮಾಡಿರಿ. ಮೈಸೂರಿನ ಮಹಾ ವಿದ್ವಾಂಸರಲ್ಲಿ ಹಲವರು ಈ ಅಸ್ಪೃಶ್ಯತೆ ಹಿಂದೂ ಧರ್ಮದ ಅಂಗವಲ್ಲ ಎಂಬುದಕ್ಕೆ ಆಧಾರಗಳನ್ನು ತೋರಿಸಿಕೊಡಿರಿ. ನಮ್ಮ ಹಿರಿಯರು ನಮಗೆ ವೇದಗಳನ್ನು ಕೊಟ್ಟರು, ಉಪನಿಷತ್ತುಗಳನ್ನು ಕೊಟ್ಟರು. ಅವರಿಗೆ ಈ ಅಸ್ಪೃಶ್ಯತೆಯಲ್ಲಿ ನಂಬಿಕೆ ಇರಲಿಲ್ಲ. ಇದು ಹಿಂದೂ ಧರ್ಮಕ್ಕೆ ಅಂಟಿದ ಪಾಪದ ಕಲಂಕ. ಈಗಾಗಲೇ ನೀವು ಬೇಕಾದಷ್ಟು ಸೇವೆ ಮಾಡಿದ್ದೀರಿ. ನನ್ನಂಥ

ಕೆಲಸಗಾರರು ಸ್ವಯಂ ಪ್ರೇರಣೆಯಿಂದ ಇದು ಹಿಂದೂ ಧರ್ಮದ ಅಂಗವಲ್ಲ ಎನ್ನುತ್ತೇನೆ. ನಾನೇನೂ ವಿದ್ವಾಂಸನಲ್ಲ. ಮೂಲ ಶಾಸ್ತ್ರಗಳನ್ನು ಓದಿಲ್ಲ. ಆದರೆ ನನ್ನದು ಹಿಂದೂ ಜೀವ ಈ ಘೋರ ದುಷ್ಟ ಸಂಪ್ರದಾಯಕ್ಕೆ ನನ್ನ ಜೀವ ವಿರುದ್ಧ ಏಳುತ್ತದೆ. ಆದರೂ ಪಂಡಿತರ ಮನಸ್ಸನ್ನು ಸೆಳೆಯುವಂತೆ ಕೆಲಸಗಾರರಿಗೆ ಒಂದು ಬಲವತ್ತರವಾದ ಸಾಕ್ಷ್ಯವಾಗಿ, ವಿರೋಧ ವನ್ನೆಲ್ಲ ನಾಶಮಾಡುವಂತೆ ವಿದ್ವಾಂಸರಾದ ನೀವು ಮತ್ತು ಸಂಶೋಧನಾ ಪಟುಗಳು ನನ್ನಂಥ ಕೆಲಸಗಾರರಿಗೆ ಶಾಸ್ತ್ರಾಧಾರಗಳನ್ನು ಒದಗಿಸಿಕೊಡಿರಿ. ಬೇರೆ ಎಲ್ಲಿಯೂ ಸಿಗಲಾರದಂಥ ಆಧಾರಗಳನ್ನು ಕೊಟ್ಟು ನಮ್ಮ ಕೈಯನ್ನು ಬಲಗೊಳಿಸುವ ಹಾಗೆ ಮಾಡುವುದು ಈ ಸಂಸ್ಥೆಗೆ ಒಂದು ಹೆಮ್ಮೆಯಾಗಬೇಕು.

*(ಯಂಗ್ ಇಂಡಿಯಾ: ೧೮-೮-೧೯೨೭)*

**ಬಾಲಿಕೆಯರೊಡನೆ:**

ಬೆಂಗಳೂರಿನಲ್ಲಿ ಇನ್ನೊಂದು ಮಹಿಳೆಯರ ಸಭೆ ನಡೆಯಿತು. ಅವರೂ ಹಣವನ್ನೂ ತಮ್ಮ ಒಡವೆಗಳನ್ನೂ ಕೊಟ್ಟರು. 'ನನ್ನ ಭಾಷಣವನ್ನು ಕೇಳಿದಿರಿ. ನೀವು ನನ್ನ ಪ್ರತಿನಿಧಿಗಳಾಗಿ ಹೋಗಿ. ನೀವು ಸ್ವಲ್ಪವೂ ವಿಶ್ರಾಂತಿ ತೆಗೆದುಕೊಳ್ಳಕೂಡದು. ನಾನೇನು ಮಾಡಲಿ? ನನ್ನ ಮಾತು ಕೇಳಲು ಬಂದರೆ ನಿಮ್ಮ ಹೊಟ್ಟೆಯಲ್ಲಿ ತಳಮಳವನ್ನು ಹುಟ್ಟಿಸುವುದೇ ನನ್ನ ಕೆಲಸ.' ಎಂದರು.

ಲಂಡನ್ ಮಿಷನ್ ಬಾಲಿಕಾ ಪಾಠಶಾಲೆಯವರು ಒಂದು ಪುಟ್ಟ ನಿಧಿಯನ್ನು ಅರ್ಪಿಸಿ, ಒಂದು ಸೊಗಸಾದ ಬಿನ್ನವತ್ತಳೆಯನ್ನು ಕೊಟ್ಟರು. ಅದರಲ್ಲಿ ಒಂದು ವಾಕ್ಯ ಹೀಗಿತ್ತು: 'ಖಾದಿ ಪ್ರದರ್ಶನವನ್ನು ಪ್ರಾರಂಭಿಸುವಾಗ, ಮುಕ್ತಾಯ ಮಾಡುವಾಗ ನಾವು ನಿಮ್ಮ ಭಾಷಣ ಕೇಳಿದೆವು. ನಮ್ಮ ತಾಯ್ನಾಡಿಗಾಗಿ ನೀವು ಮಾಡುತ್ತಿರುವ ಕೆಲಸದ ಮಹತ್ವ ಎಂಥದೆಂದು ನಮಗೆ ಅರಿವಾಯಿತು. ರಾಟೆಯ ಪುನರುಜ್ಜೀವನಕ್ಕೆ ನೀವು ಕಂಕಣ ತೊಟ್ಟಿರುವುದು ನಮ್ಮ ರಾಷ್ಟ್ರದ ಕುಟೀರೋದ್ಯೋಗಕ್ಕೆ ಬೆಂಬಲಕೊಟ್ಟು, ನಮ್ಮ ದೇಶದಲ್ಲಿ ಇರುವ ಅಪಾರ ಬಡಜನಕ್ಕೆ ಏನಾದರೂ ಉದ್ಯೋಗ ಕೊಡಬೇಕೆಂಬ ಉದ್ದೇಶ.' ಗಾಂಧೀಜಿ ಅದಕ್ಕೆ ಉತ್ತರವಾಗಿ: 'ನಿಮ್ಮ ತ್ಯಾಗ ಚಿಕ್ಕದಲ್ಲ, ಉಪಯೋಗ ಇಲ್ಲದ್ದಲ್ಲ. ಖಾದಿಯ ಸಂದೇಶವನ್ನು ನೀವು ಅರ್ಥಮಾಡಿಕೊಂಡಿದ್ದರೆ ನಿಮ್ಮ ಬದುಕಿನಲ್ಲಿ ತಕ್ಕ ಪರಿವರ್ತನೆ ಬಂದೇ ಬರುತ್ತದೆ.'

ವಾಣಿ ವಿಲಾಸ ಶಾಲೆಯ ಹುಡುಗಿಯರನ್ನುದ್ದೇಶಿಸಿ ಈ ಬಹಳ ವೆಚ್ಚದ ಶಿಕ್ಷಣ ಪಡೆಯುತ್ತಿರುವವರು ಸಮಾಜದ ಋಣವನ್ನು ತೀರಿಸಿಕೊಳ್ಳಬೇಕು ಎಂದು ಹೇಳಿದರು. ಈ ತುಟ್ಟಿಯ ಶಿಕ್ಷಣವನ್ನು ಪಡೆದು, ಆಮೇಲೆ ಮದುವೆ ಮಾಡಿಕೊಂಡು ಎಲ್ಲಿಯೋ ಕಣ್ಮರೆ ಆಗಿಬಿಟ್ಟರೆ ದೇಶಕ್ಕೆ ದ್ರೋಹ ಮಾಡಿದಂತೆ. ಮದುವೆ ಮಾಡಿಕೊಳ್ಳಕೂಡದು ಎನ್ನುವುದಿಲ್ಲ ನಾನು. ಮದುವೆ ಆಗಿ, ಆಗದೇ ಇರಿ; ದಾಸ್ಯದಲ್ಲಿ ಉಳಿಯಬೇಡಿ. ದೇಶ ಏನು ಬೇಡುತ್ತದೆಯೋ ಅದನ್ನು ಮಾಡಿ. ಪರಿಶುದ್ಧ ಚರಿತ್ರೆ ಇದ್ದರೆ, ಯಾವ ಭಯ ವಿಕಾರಗಳೂ ಇಲ್ಲದೆ ಇದ್ದರೆ, ಸಮಾಜದಲ್ಲಿ ನಿಮ್ಮನ್ನು ಹಿಡಿಯಬಲ್ಲವರು ಯಾರು?

*(ಯಂಗ್ ಇಂಡಿಯಾ: ೧೧-೮-೧೯೨೭)*

**ಸಂಸ್ಕೃತ ಪಾಠಶಾಲೆಯಲ್ಲಿ:**

ಗಾಂಧೀಜಿ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಗೆ ಹೋಗಿದ್ದರು. ಅಲ್ಲಿ ಸೇರಿದ್ದ ಸಂಸ್ಕೃತ ಪಂಡಿತರಿಗೆ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಬೇಕಾಯಿತು. ಗಾಂಧೀಜಿ ಹೇಳಿದರು:– 'ನೀವು ನನಗೆ ಮಾಡಿದ ಗೌರವಕ್ಕೆ ತುಂಬ ಕೃತಜ್ಞ. ಸುಲಭ ಸಂಸ್ಕೃತದಲ್ಲಿ ಬಿನ್ನವತ್ತಳೆ ಕೊಟ್ಟಿದ್ದೀರಿ. ಪ್ರತಿಯೊಬ್ಬ ಹಿಂದೂ ಹುಡುಗನೂ ಹುಡುಗಿಯೂ ಸಂಸ್ಕೃತದ ಪರಿಚಯ ಮಾಡಿಕೊಳ್ಳಬೇಕು. ಸಂದರ್ಭ ಬಂದರೆ ಅದರಲ್ಲಿ ಮಾತನಾಡುವಂತೆಯೂ ಇರಬೇಕು. ಮೈಸೂರು ದೇಶದಲ್ಲಿ ಪಂಡಿತರು ಸಂಸ್ಕೃತವನ್ನು ಶೂದ್ರರಿಗೆ, ಪಂಚಮರಿಗೆ ಕಲಿಸಲು ಹಿಂಜರಿಯುತ್ತಾರೆ ಎಂದು ಕೇಳಿದ್ದೆ. ಶೂದ್ರರಿಗೆ ಸಂಸ್ಕೃತವನ್ನು ಕಲಿಸಬಾರದು, ವೇದವನ್ನು ಕಲಿಸಬಾರದು ಎಂಬುದನ್ನು ನಾನು ನಮ್ಮ ಶಾಸ್ತ್ರಗಳಲ್ಲಿ ಕಾಣೆ. ಒಂದು ವೇಳೆ ಅಂಥದಿದ್ದರೂ, ಅದನ್ನು ಅರ್ಥಮಾಡುವಾಗ ಅದರ ತಿರುಳನ್ನು ಮರೆಯಬಾರದು ಎನ್ನುತ್ತೇನೆ. ಶಬ್ದಗಳಿಗೂ ಕೂಡ ಒಂದು ಮುನ್ನಡೆ ಇದೆ. ವೇದದ ವಚನವೇ ಆದರೂ ಕೂಡ ನಮ್ಮ ಅನುಭವಕ್ಕೆ ವಿರುದ್ಧವಾಗಿ, ನಮ್ಮ ವಿಚಾರಕ್ಕೆ ಹೊಂದದೇ ಇದ್ದರೆ ಅದನ್ನು ತ್ಯಜಿಸಬೇಕಾದ್ದೆ. ನನ್ನ ಮಟ್ಟಿಗೆ ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇಲ್ಲವೆಂದು ನಂಬಿದ್ದೇನೆ. ಎಷ್ಟೋ ಜನ ಅಸ್ಪೃಶ್ಯರು ಬುದ್ಧಿಯಲ್ಲಾಗಲೀ, ನೀತಿಯಲ್ಲಾಗಲೀ, ಸ್ಪೃಶ್ಯರಿಗಿಂತ ಏನೂ ಕಡಿಮೆಯಿಲ್ಲ. ನಿಮ್ಮಷ್ಟೇ ನೀತಿವಂತರು, ಶುಚಿವಂತರು ಆಗಿದ್ದಾರೆ. ಇತರ ಬಾಲಕ ಬಾಲಕಿಯರು ಹೇಳುವಷ್ಟೇ ಸ್ವಚ್ಛವಾಗಿ ಆದಿಕರ್ಣಾಟಕ ಹುಡುಗರೂ ಸಂಸ್ಕೃತ ಹೇಳಿದ್ದನ್ನು ಕೇಳಿದ್ದೇನೆ. ನನ್ನಂಥ ತೀವ್ರವಾದಿಯನ್ನು, ನಿಮಗೆ ತೀರ ವಿರುದ್ಧವಾದ ಅಭಿಪ್ರಾಯ ಉಳ್ಳವನನ್ನು ನೀವು ಆಹ್ವಾನ ಮಾಡಿದ್ದೀರಿ. ತುಂಬ ಸಂತೋಷ. ಇಷ್ಟು ಜನ ತಕಲಿಯಿಂದ ನೂಲು ತೆಗೆಯುತ್ತಿದ್ದೀರಿ. ಬರೀ ಜನಿವಾರ ಮಾಡಿಕೊಳ್ಳುವ ಮಟ್ಟಿಗೆ ನೂತರೆ ಸಾಲದು. ನಿಮ್ಮ ನಿಮ್ಮ ಬಟ್ಟೆಗಳನ್ನು ನೂತು ನೇಯಿಸಿಕೊಳ್ಳಬೇಕು. ವೇದ ಮಂತ್ರಗಳನ್ನು ಹೇಳಿದ ಹುಡುಗ ಹುಡುಗಿಯರು ಪರದೇಶೀ ವಸ್ತ್ರಧಾರಿಗಳಾಗಿದ್ದರು. ನನಗೆ ತುಂಬಾ ನೋವಾಯಿತು. ಇಂಥ ಆಭಾಸ ಏಕೆ ಎಂದುಕೊಂಡೆ. ಬಾಹ್ಯವೇಷ ಅನೇಕ ಸಲ ಅಂತಃಸತ್ವಕ್ಕೆ ಕನ್ನಡಿ ಇದ್ದಂತೆ. ಆದ್ದರಿಂದ ಎಲ್ಲಿ ಸಂಸ್ಕೃತ ಪಾಠಶಾಲೆಯೋ, ಎಲ್ಲಿ ಆರ್ಯಸಂಸ್ಕೃತಿಯ ಸ್ಥಾನವಿದೆಯೋ ಅಲ್ಲಿ ನಮ್ಮ ಪುರಾತನ ಋಷಿಗಳ ಪವಿತ್ರ ಸರಳ ವಾತಾವರಣದ ನೆನಪು ಆಗುತ್ತದೆ. ವಸ್ತುತಃ ಶಿಕ್ಷಕರು ನಮ್ಮ ಸಂಸ್ಕೃತಿಯ ನಿಜವಾದ ಪ್ರತಿನಿಧಿಗಳಾಗಬೇಕು. ಆದರೆ ಈ ದೃಷ್ಟಿಯಿಂದ ನನ್ನ ನಿರೀಕ್ಷೆ ಸಫಲವಾಗಿಲ್ಲ ಎಂದು ತಿಳಿಸಲು ನನಗೆ ವಿಷಾದವಾಗುತ್ತದೆ.

**ಸಾಮಾಜಿಕ ಪ್ರಗತಿ:**

ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಶನ್ ಅವರು ಕೊಟ್ಟ ಬಿನ್ನವತ್ತಳೆಗೆ ಉತ್ತರವಾಗಿ ಮಾತನಾಡುತ್ತಾ ಗಾಂಧೀಜಿ ಹೇಳಿದರು:– 'ದೇಶದ ನವಯುವಕರು ರಾಜಕೀಯ ದಲ್ಲಿ ಪಾಲುಗೊಳ್ಳುವಂತೆಯೇ ಸಮಾಜದ ಸುಧಾರಣೆಯಲ್ಲಿಯೂ ಪಾಲುಗೊಳ್ಳಬೇಕು. ಅಸ್ಪೃಶ್ಯತೆ ಹೋಗಬೇಕು, ಅವರ ಸ್ಥಿತಿ ಗತಿ ಸುಧಾರಿಸಬೇಕು ಎಂಬುದು ಒಳ್ಳೆಯದೆ. ಆದರೆ ಎಲ್ಲಾ ಶಿಕ್ಷಣ ಸಂಸ್ಥೆಗಳೂ ಅವರನ್ನು ಸೇರಿಸಿಕೊಳ್ಳುವವರೆಗೆ ಎಲ್ಲ ದೇವಾಲಯದಲ್ಲಿ ಪ್ರವೇಶ

ನೀಡುವವರೆಗೆ ಅವರು ಸುಮ್ಮನೆ ಇರಲಾಗದು. ಅಸ್ಪೃಶ್ಯತಾ ನಿವಾರಣೆ, ಅವರ ಬಡತನದ ನಿವಾರಣೆ ಬಹಳ ಉಪಯುಕ್ತ ಕೆಲಸ.'

'ಬಾಲವಿಧವೆಯರ ಪುನರ್ವಿವಾಹ ಮತ್ತು ಬಾಲವಿವಾಹ ಇವುಗಳ ಪ್ರಶ್ನೆ ಎತ್ತಿ ಗಾಂಧೀಜಿ ಹೀಗೆ ಹೇಳಿದರು:

ನೂರಾರು ಮಂದಿ ಹುಡುಗಿಯರನ್ನು ನನ್ನ ಪ್ರವಾಸದಲ್ಲಿ ನೋಡಿದ್ದೇನೆ. ಆದರೆ ಇನ್ನೂ ಮದುವೆ ಆಗಿಲ್ಲ ಎಂದು ಹೇಳಿದ ೧೩-೧೪ ವರ್ಷದ ಹುಡುಗಿಯರು ಇಬ್ಬರೋ ಮೂವರೋ. ತನ್ನ ತೊಡೆಯಲ್ಲಿ ಕೂಡಿಸಿಕೊಳ್ಳಬಹುದಾದ ಚಿಕ್ಕ ಹುಡುಗಿಯನ್ನು ಮದುವೆಯಾಗುವುದು ಅಧರ್ಮ. ಹಿಂದೂಸ್ಥಾನದಲ್ಲಿ ಪ್ರತಿಯೊಬ್ಬ ಹುಡುಗನೂ ಶಪಥ ಮಾಡಬೇಕು, - ೧೬ಕ್ಕೆ ಕಡಿಮೆ ವಯಸ್ಸು ಇದ್ದ ಹುಡುಗಿಯನ್ನು ಮದುವೆ ಆಗಬಾರದೆಂದು. ಹಿಂದೂ ಧರ್ಮದಲ್ಲಿ ವಿಧವೆಗೆ ಒಂದು ಪೂಜ್ಯ ಸ್ಥಾನ ಇದೆ ನಿಜ. ಆದರೆ ಇವತ್ತು ಹಿಂದೂ ವಿಧವೆಯರಿಗೆ ಇರುವ ದುಃಸ್ಥಿತಿ ಹಿಂದಿನ ಕಾಲದಲ್ಲಿ ಆಕೆಗೆ ಇರಲಿಲ್ಲ. ೧೬ ವರ್ಷದ ಹುಡುಗಿಯೊಬ್ಬಳು ವಿಧವೆ ಎಂಬ ಮಾತು ನನಗೆ ಊಹಾತೀತ. ಒಬ್ಬ ಚಿಕ್ಕ ಹುಡುಗಿಯನ್ನು ಅವಳ ಸಮ್ಮತಿಯಿಂದಲೋ, ಬಲಾತ್ಕಾರದಿಂದಲೋ ದುಡ್ಡಿನ ಅಥವಾ ಮತ್ತೊಂದರ ಆಶೆಗಾಗಿಯೋ ಮದುವೆ ಮಾಡಿಕೊಟ್ಟರೆ ಆ ಹುಡುಗಿ ವಿಧವೆಯಾದರೆ ಅವಳಿಗೆ ಪುನಃ ಮದುವೆ ಮಾಡುವುದು ತಂದೆ ತಾಯಿಗಳ ಕರ್ತವ್ಯ. ಉಳಿದ ವಿಧವೆಯರ ವಿಷಯವಾಗಿ ಹೇಳುವುದಾದರೆ ಅವರು ತಾವು ಪರಿಶುದ್ಧ ವಿಧವಾ ಜೀವನವನ್ನು ನಡೆಸಲು ಸಾಧ್ಯವಿಲ್ಲ ಎನಿಸಿದರೆ ವಿದುರರು ಮಾಡಿಕೊಳ್ಳುವಂತೆಯೇ ಅವರಿಗೂ ಮತ್ತೆ ಮದುವೆ ಮಾಡಿಕೊಳ್ಳುವ ಹಕ್ಕು ಇರಬೇಕು ಎನ್ನುತ್ತೇನೆ. ನಿಮ್ಮ ಸಂಘ ಈ ಮೂರು ಪ್ರಶ್ನೆಗಳನ್ನು ಎತ್ತಿಕೊಂಡು ಕೈಲಾದದ್ದೆಲ್ಲವನ್ನೂ ಮಾಡಲಿ.

*(ಯಂಗ್ ಇಂಡಿಯಾ: ೧೮-೮-೧೯೨೭)*

**ಗಾಂಧೀಜಿಯ ಪ್ರವಾಸ:**

ಇಡೀ ಆಗಸ್ಟ್ ತಿಂಗಳು ಗಾಂಧೀಜಿ ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಕೈಕೊಂಡರು. ಹಾಸನ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಲ್ಲಿ ಪ್ರವಾಸ ಮಾಡಿದರು. ರಾಜರ್ಷಿ ನಾಲ್ಮಡಿ ಕೃಷ್ಣರಾಜ ಒಡೆಯರ ರಜತೋತ್ಸವ ಸಮಾರಂಭ, ಆಗಸ್ಟ್ ೫ರಿಂದ ೯ರೊಳಗೆ ಪಂಡಿತ್ ಮೋತೀಲಾಲ ನೆಹರು ಅವರ ಬೆಂಗಳೂರಿನ ಭೇಟಿ, ಇವುಗಳಿಂದಾಗಿ ಗಾಂಧೀಜಿ ಬೆಂಗಳೂರಿನಲ್ಲಿ ಇರಬೇಕಾಯಿತು.

ಆಗಸ್ಟ್ ೨ರಿಂದ ೪ರ ವರೆಗೆ ಗಾಂಧೀಜಿ ಹಾಸನಕ್ಕೂ ಹೊಳೆನರಸೀಪುರಕ್ಕೂ ಹೋಗಿ ಬಂದರು. ನಡುವೆ ರಾಮನಗರ, ಕಾನಕಾನಹಳ್ಳಿ ಇವುಗಳಿಗೂ ಹೋಗಿ ಬಂದರು. ಗಾಂಧೀಜಿ, ರಾಜಗೋಪಾಲಚಾರಿ, ಗಂಗಾಧರರಾಯರು ಇಂಥ ಮಹಾಪುರುಷರನ್ನು ಜನ ನೋಡಿದ್ದು ಇದೇ ಮೊದಲು. ಅವರ ಭಾಷಣ ಕೇಳಿದ್ದು ಇದೇ ಮೊದಲು. ರಾಮನಗರ (ಆಗ ಕ್ಲೋಸ್‌ಪೇಟೆ) ಕಾನಕಾನಹಳ್ಳಿಯ ಜನರಿಗೆ ಖಾದಿ ಸಂದೇಶವನ್ನು ಬೀರಿದರು.

**ಹಾಸನ, ಹೊಳೇನರಸೀಪುರ:**

ಹಾಸನ ಜಿಲ್ಲೆ ಮೈಸೂರಿನಲ್ಲಿ ಒಳ್ಳೆಯ ರಮಣೀಯ ಪ್ರದೇಶ. ದಾರಿಯಲ್ಲಿ ಹೋಗುತ್ತಿದ್ದರೆ ಉದ್ದಕ್ಕೂ ಮೈಲಿಗಟ್ಟಲೆ ಹಚ್ಚ ಹಸಿರು ಪೈರು ಕಂಗೊಳಿಸುತ್ತಾ ಕಣ್ಣಿಗೆ ಹಬ್ಬ, ಮನಸ್ಸಿಗೆ ಶಾಂತಿ ನೀಡುತ್ತದೆ. ಉಳಿದ ಜಿಲ್ಲೆಗಳಿಗಿಂತ ಈ ಜಿಲ್ಲೆಯು ಹೆಚ್ಚು ಅನುಕೂಲವಂತ ಇದ್ದಿರಬೇಕು. ಆದರೂ ಇಲ್ಲಿಯೂ ಖಾದಿಗೆ ಅವಕಾಶವಿದೆ. ಗಂಗಾಧರರಾಯರ ಸಹೋದ್ಯೋಗಿ–ಎಂದೂ ಶ್ರಮವನ್ನೇ ಅರಿಯದ ಪೂಜಾರಿಯವರು, ನಾವು ಹೋಗುವ ಸ್ಥಳಗಳಿಗೆಲ್ಲ ಮೊದಲೇ ಹೋಗಿ ಖಾದಿ ವ್ಯಾಪಾರ ಮಾಡುತ್ತಿದ್ದರು. ತುಮಕೂರಿನಲ್ಲಿ ಸಾಕಷ್ಟು ಖಾದಿ ಮಾರಿ, ಅಲ್ಲಿ ಒಂದು ಅಂಗಡಿ ತೆರೆಯಲು ಸಹಾಯ ಮಾಡಿದರು. ಹಾಸನ, ಹೊಳೇನರಸೀಪುರಗಳಲ್ಲಿಯೂ ೧,೧೦೦ ರೂಪಾಯಿಗಳ ಖಾದಿ ಮಾರಿದ್ದರು. ಜನರಲ್ಲಿ ಸಹಾನುಭೂತಿ ಇದೆ. ಇಷ್ಟವಿದೆ. ಆದರೆ ಹೆಚ್ಚು ತಿಳಿವಳಿಕೆ ನೀಡುವ ಪ್ರಚಾರ ಬೇಕು. ಹೆಚ್ಚು ಕೆಲಸಗಾರರು ಬೇಕು. ಖಾದಿಧಾರಿಗಳಾದ ಮುಖಂಡರು ಸಾಕಷ್ಟು ಜನರಿದ್ದರು. ಇಲ್ಲಿನ ಮುಖ್ಯೋಪಾಧ್ಯಾಯರು ಕೂಡ ಖಾದಿಧಾರಿಗಳೇ. ಬೆಳಗಾಂವಿಯ ಕಾಂಗ್ರೆಸ್ಸಿನ ಕಾಲದಿಂದಲೂ ಹೊಳೇನರಸೀಪುರದ ಶ್ರೀಕಂಠಯ್ಯನವರು ಖಾದಿಧಾರಿಗಳಾಗಿ ಅಖಿಲ ಭಾರತ ಚರಕಾ ಸಂಘದ ಸದಸ್ಯರಾಗಿ ತಮ್ಮ ಬಾವುಟ ಹಾರಿಸುತ್ತಿದ್ದಾರೆ.

ಗಾಂಧೀಜಿ, ರಾಜಗೋಪಾಲಚಾರಿ, ಗಂಗಾಧರರಾಯರಂಥವರ ಮಾತು ಕೇಳಲು, ಅವರ ದರ್ಶನ ಮಾಡಿಕೊಳ್ಳಲು ಜನರು ಮೂಲೆ ಮೂಲೆಗಳಿಂದ ಬಂದರು. ಅಪಾರ ಜನಸಂದಣಿ. ಆ ಜಿಲ್ಲೆಗೆ ಒಂದು ಸ್ವಾಗತ ಸಮಿತಿ ಇತ್ತು. ನಂಜುಂಡಯ್ಯ, ವೆಂಕಟೇಶಯ್ಯ, ಗುಂಡಪ್ಪಗೌಡರ ಮುಖಂಡತನದಲ್ಲಿ ಸಮಿತಿಯು ಎಲ್ಲ ವ್ಯವಸ್ಥೆ ಮಾಡಿತ್ತು. ಹೊಳೇನರಸೀಪುರದಲ್ಲಿ ಒಂದು ಬಿನ್ನವತ್ತಳೆಯನ್ನೂ, ಒಂದು ನಿಧಿಯನ್ನೂ ಕೊಟ್ಟರು. ಏಲಕ್ಕಿಯಿಂದ ಮಾಡಿದ ಒಂದು ಸರವನ್ನು ಹೊಳೇನರಸೀಪುರದ ಸ್ವಾಗತ ಸಮಿತಿ ಗಾಂಧೀಜಿಗೆ ಅರ್ಪಿಸಿತು. ಗಾಂಧೀಜಿಯ ತಂಡದಲ್ಲಿ ಇದ್ದವರಿಗಾಗಿ ಬಾಬಾಬುಡನ್ಗಿರಿಯ ಕಾಫೀ ಬೀಜಗಳಿಂದ ವಿಶೇಷ ರೀತಿಯಲ್ಲಿ ಸ್ವಾಗತ ಸಮಿತಿಯು ಕಾಫೀ ಸಿದ್ಧ ಮಾಡಿಸಿ ಕೊಟ್ಟಿತ್ತು. ವೃದ್ಧರಾದ ಗಂಗಾಧರರಾವಜೀ ಅವರು ಈ ಭಾಗದಲ್ಲಿ ಓಡಾಡುವಾಗ ನವಚೈತನ್ಯ ಪಡೆಯುತ್ತಿದ್ದಾರೆ ಎಂಬುದು ಸಂತೋಷದ ಸಂಗತಿ. ಅವರು ತಮ್ಮ ಪ್ರವಾಸದಲ್ಲಿ ಜೊತೆಗಾರರಿಗೆ, 'ನನ್ನ ಅರ್ಧವೇಳೆಯನ್ನು ಮೈಸೂರಿಗೆ ಕೊಡಲೇಬೇಕು. ಈ ಭಾಗ ಕಣ್ಣಿಗೆ ಬೀಳದ ಬಂಗಾರದ ಗಣಿಯೇ ಆಗಿದೆ' ಎಂದರು.

*(ಯಂಗ್ ಇಂಡಿಯಾ: ೧೮-೮-೧೯೨೭)*

**ಪಂಡಿತ್ ಮೋತೀಲಾಲ್ ನೆಹರು ಅವರ ಭೇಟಿ:**

ಆಗಸ್ಟ್ ೫, ೧೯೨೭ರಂದು ಪಂಡಿತ್ ಮೋತೀಲಾಲ್ ನೆಹರು ಅವರು ಗಾಂಧೀಜಿಯನ್ನು ನೋಡಲಿಕ್ಕೆ ಬೆಂಗಳೂರಿಗೆ ಬಂದರು. ಅವರು ಲಂಡನ್ನಿಗೆ ಹೋಗಬೇಕಾಗಿತ್ತು. ಅಲ್ಲಿಯ ಪರಮೋಚ್ಚ ನ್ಯಾಯಾಲಯದ ಮುಂದೆ ಒಂದು ದೊಡ್ಡ ಜಮೀನುದಾರಿ ಮೊಕದ್ದಮೆಯಲ್ಲಿ, ಸರ್ ಜಾನ್ ಸೈಮನ್‌ರೊಡನೆ ವಾದಿಸಬೇಕಾಗಿತ್ತು. ಅದಕ್ಕೆ ಮೊದಲು ಗಾಂಧೀಜಿಯವರನ್ನು

ಸಲಹೆ ಕೇಳಬೇಕಾಗಿತ್ತು. ಅದಕ್ಕಾಗಿ ಬಂದಿದ್ದರು. ಪಂಡಿತ್ ಮೋತೀಲಾಲರು ಮೆಜೆಸ್ಟಿಕ್ ಸಿನೇಮಾದ ಬಳಿ ಬೆಂಗಳೂರಿನ ನಾಗರಿಕರ ಸಭೆಯನ್ನುದ್ದೇಶಿಸಿ ಭಾಷಣ ಮಾಡಿದರು. ದಿ. ಮೋಕ್ಷಗುಂಡಂ ರಾಮಚಂದ್ರರಾಯರು ಅಧ್ಯಕ್ಷತೆ ವಹಿಸಿದ್ದರು. ಮಾರನೆಯ ದಿನ ಮೈಸೂರಿನಲ್ಲಿ ಮಹಾರಾಜರ ರಜತೋತ್ಸವದ ಸಮಾರಂಭ. ಅದಕ್ಕೆ ಹೋಗಿ ಬರೋಣ ಎಂದರೆ ಪಂಡಿತರು ವಿನಯದಿಂದ ನಿರಾಕರಿಸಿದರು. ಗಾಂಧೀಜಿ ಕೆಲವು ಗಂಟೆಗಳ ಕಾಲವಾದರೂ ಪಂಡಿತರನ್ನು ಮೈಸೂರಿಗೆ ಕರೆದುಕೊಂಡು ಹೋಗಬೇಕೆಂದು ಶ್ರೀಲಕ್ಷ್ಮೀನರಸು ಅವರನ್ನು ಹುರಿದುಂಬಿಸಿದರು. ಅವರು ದಿವಾನರೊಡನೆ ಮಾತನಾಡಿ, ದಿವಾನರು ಸ್ವಯಂ ಪಂಡಿತರನ್ನು ಆಹ್ವಾನಿಸುವಂತೆ ಮಾಡಿದರು. ರಜತೋತ್ಸವ ಸಮಾರಂಭಕ್ಕೆ ಬಂದರೆ, ಮಹಾರಾಜರಿಗೆ ತುಂಬ ಸಂತೋಷವಾಗುತ್ತದೆ. ಎಂದು ದಿವಾನರು ಹೇಳಿದರು. ಅಂತೂ ಮೋತೀಲಾಲರು ಮೈಸೂರಿಗೆ ಹೋದರು. ಅಲ್ಲಿನ ಜನಸಂದಣಿ, ಜನರ ಅಪೂರ್ವ ಉತ್ಸಾಹ ನೋಡಿ ತಮಗೆ ಸಂತೋಷವಾಯಿತು, ಮಹಾರಾಜರು ನಿಜವಾಗಿಯೂ ಜನತೆಯ ಕಣ್ಮಣಿ ಎಂದು ಮೋತೀಲಾಲರು ಗಾಂಧೀಜಿಗೆ ಹೇಳಿದರು.

ಆಗಸ್ಟ್ ೧೧ನೇ ತಾರೀಖು ಮೈಸೂರು ಸಂಸ್ಥಾನದಲ್ಲಿ ತಮ್ಮ ಕಟ್ಟಕಡೆಯ ಪ್ರವಾಸಕ್ಕಾಗಿ ಗಾಂಧೀಜಿ ಬೆಳಗ್ಗೆ ಪೂನಾ ರೈಲನ್ನು ಏರಿದರು. ದಾವಣಗೆರೆಗೆ ಹೋಗಬೇಕು. ಅಲ್ಲಿಂದ ಹರಿಹರ, ಹೊನ್ನಾಳಿ, ಶಿವಮೊಗ್ಗ, ಸಾಗರ. ಗಾಂಧೀಜಿಯ ಪರಿವಾರದಲ್ಲಿ ಕಸ್ತೂರಬಾ, ರಾಜಾಜಿ, ದೇಶಪಾಂಡೆ ಗಂಗಾಧರರಾಯರು, ಮಣಿಬೇನ್ ಪಟೇಲ್, ಮಹಾದೇವ ದೇಸಾಯಿ, ದೇವದಾಸ ಗಾಂಧಿ, ಲಕ್ಷ್ಮೀ, ಮೃದುಲಾ ಬೇನ್, ಕೇಂದ್ರ ಸ್ವಾಗತ ಸಮಿತಿಯ ಕಾರ್ಯದರ್ಶಿ– ಇಷ್ಟು ಜನ ಇದ್ದರು. ದಿನಾಂಕ ೧೧ ಮತ್ತು ೧೨ ಆಗಸ್ಟ್ ೧೯೨೭ ದಾವಣಗೆರೆ ಕಾರ್ಯಕ್ರಮ. ದಾವಣಗೆರೆಯ ಸ್ವಾಗತ ಸಮಿತಿಗೆ ಅಲ್ಲಿನ ಪ್ರಸಿದ್ಧ ಉದ್ಯೋಗಿಯಾದ ಬ್ರಹ್ಮಪ್ಪ ತವನಪ್ಪ ಅವರೂ ಅತ್ಯಂತ ವಿನಯದ ಕಾರ್ಯಕರ್ತರಾದ ಕಾಸಲ ಶ್ರೀನಿವಾಸ ಶೆಟ್ಟಿಯವರೂ ಮುಖಂಡರು. ಸುಮಾರು ೫,೦೦೦ ರೂಪಾಯಿ ಸಂಗ್ರಹಿಸಿ ಆ ಸ್ವಾಗತ ಸಮಿತಿಯು ನಿಧಿ ಕೊಟ್ಟಿತು. ದಾವಣಗೆರೆ ಸಭೆ ಬಲು ದೊಡ್ಡದು. ಗಾಂಧೀಜಿ ಅಲ್ಲಿ ಮಾಡಿದ ಭಾಷಣವೂ ಸುದೀರ್ಘವಾದದ್ದು. ಅಲ್ಲಿನ ವರ್ತಕರಿಗೆ ಪಾಪದ ಅರ್ಥಶಾಸ್ತ್ರಕ್ಕೆ ಮಡಿಲು ಕಟ್ಟಬೇಡಿರಿ. ಪುಣ್ಯದ ಅರ್ಥಶಾಸ್ತ್ರವನ್ನು ಅನುಸರಿಸಿರಿ ಎಂದು ಹೇಳಿದರು. ಈಗಿನ ಕಾಲದಲ್ಲಿ ಪಾಪದ ಅರ್ಥಶಾಸ್ತ್ರಕ್ಕೆ ಬೆಲೆ ಹೆಚ್ಚುತ್ತದೆ. ಕೆಲವರ ಕೈಯಲ್ಲೇ ಹಣ ಸೇರುತ್ತಿದೆ. ಅದು ಎಲ್ಲರಲ್ಲೂ ಹಂಚಿ ಹೋಗುತ್ತಿಲ್ಲ ಎಂದರು.

*(ಯಂಗ್ ಇಂಡಿಯಾ: ೧೮-೮-೧೯೨೭)*

**ವಿಶಿಷ್ಟ ಅನುಭವಗಳು:**

ಮೈಸೂರು ಸಂಸ್ಥಾನದ ಉತ್ತರದ ತುದಿ ದಾವಣಗೆರೆ. ಈ ವಾರ ಎಲ್ಲವೂ ಬಹಳ ವಿಶಿಷ್ಟ ಅನುಭವಗಳದ್ದು ಎಂದಿದ್ದಾರೆ ಮಹಾದೇವಭಾಯಿ. ದಾವಣಗೆರೆ ದೊಡ್ಡ ವ್ಯಾಪಾರ ಕೇಂದ್ರ. ಸಂಸ್ಥಾನದ ಹತ್ತಿ ಮತ್ತು ಸೇಂಗಾ ಬೆಳೆಯ ಕೇಂದ್ರವದು. ಇಲ್ಲಿ ಲಿಂಗಾಯಿತರು ಹೆಚ್ಚು. ಅದೇ ಹೊನ್ನಾಳಿಯಲ್ಲಿ ಉಳಿದೆಲ್ಲ ಕಡೆಗಳಿಗಿಂತ ಮುಸಲ್ಮಾನರ ಸಂಖ್ಯೆ ಹೆಚ್ಚು.

ಸೊಗಸಾದ ಸ್ಥಳ. ಶಿವಮೊಗ್ಗ ಜಿಲ್ಲೆಯಲ್ಲಿ ಭದ್ರಾವತಿಯ ಕಬ್ಬಿಣದ ಕಾರಖಾನೆ ಇದೆ. ಮರದ ವ್ಯಾಪಾರಕ್ಕೂ ಈ ಜಿಲ್ಲೆ ಪ್ರಸಿದ್ಧ. ಇವೆಲ್ಲವೂ ತುಂಗಭದ್ರಾ ನದಿಯ ದಂಡೆಯ ಮೇಲೆ. ಈ ಎಲ್ಲ ಪ್ರದೇಶಗಳಲ್ಲಿಯೂ ಖಾದಿಗೆ ವಾತಾವರಣ ಅನುಕೂಲವಾಗಿತ್ತು. ಖಾದಿಧಾರಿಗಳೂ ಹೆಚ್ಚಾಗಿದ್ದರು. ದಾವಣಗೆರೆಯಿಂದ ಹೊನ್ನಾಳಿಗೆ, ಶಿವಮೊಗ್ಗಕ್ಕೆ ಹೋಗುವ ದಾರಿಯಲ್ಲಿ ಶಿವಮೊಗ್ಗೆಯಿಂದ ಸಾಗರಕ್ಕೆ ಹೋಗುವಾಗ ಅನೇಕ ಹಳ್ಳಿಗಳು ಬಂದವು. ದಾರಿಯ ಎರಡೂ ಕಡೆಗಳಲ್ಲಿ ಹಳ್ಳಿಯ ಜನರು ಗುಂಪು ಗುಂಪಾಗಿ ಶಾಂತವಾಗಿ ಕೂತಿದ್ದರು. ಗಾಂಧೀಜಿಗೆ ಪ್ರಣಾಮ ಸಲ್ಲಿಸಿ ನಿಧಿಯನ್ನು ನೀಡಬೇಕು ಎಂದು ಅವರ ಉದ್ದೇಶ. ಅನಂತಪುರ ಒಂದು ಸಣ್ಣ ಹಳ್ಳಿ. ೩೦೦ ಜನ ಸಂಖ್ಯೆ. ಅಲ್ಲಿ ಖಾದಿ ನಿಧಿಗಾಗಿ ೨೦೦ ರೂಪಾಯಿ, ಗುಜರಾಥ ಪ್ರವಾಹ ಸಂಕಟ ನಿಧಿಗಾಗಿ ೫೦ ರೂಪಾಯಿ ಕೊಟ್ಟರು. ದಾವಣಗೆರೆ ಹತ್ತಿ ಗಿರಣಿಗಳ ಊರು. ಹತ್ತಿ ವ್ಯಾಪಾರಿಗಳಾದ ಶಿರೂರ ಮನೆತನದ ಹೆಂಗಸರು ನೂಲುತ್ತಿದ್ದಾರೆ. ಅವರಲ್ಲಿ ಇಬ್ಬರು ತಾವೇ ನೂತ ನೂಲನ್ನು ನೇಯಿಸಿ, ಸೀರೆ ಉಡುತ್ತಿದ್ದಾರೆ. ಹೊನ್ನಾಳಿಯಲ್ಲಿ ಆ ಊರಿನ ಸಬ್ ರಿಜಿಸ್ಟ್ರಾರು ಸದಾ ಖಾದಿಧಾರಿಯಲ್ಲದೆ ನಿಯಮದಂತೆ ನೂಲುತ್ತಾರೆ. ಅಲ್ಲಿ ಶಾಲೆಯ ಮಕ್ಕಳು ಆತನ ಮನೆಯವರೂ, ಗಾಂಧೀಜಿಗೆ ನೂಲಿನ ಲಡಿಗಳನ್ನು ಅರ್ಪಿಸಿದರು. ಹೊನ್ನಾಳಿಯ ಬಿನ್ನವತ್ತಳೆಯನ್ನು ಉರ್ದು ಭಾಷೆಯಲ್ಲಿ ಓದಿದ ನವಾಬಶೇರ್‌ಖಾನ್ ಸತತ ಖಾದಿಧಾರಿ ಇದ್ದಂತೆ ಇತ್ತು. ಶಿವಮೊಗ್ಗೆಯಲ್ಲಿ ನೂಲುವ ಸಂಘ ಒಂದು ಇದೆ. ಶಾಲೆಯಲ್ಲಿ ಮಕ್ಕಳಿಗೆ ಹಿಂಜುವುದನ್ನೂ, ನೂಲುವದನ್ನೂ ಕಲಿಸುತ್ತಾರೆ. ಸಾಧಾರಣವಾಗಿ ಇಲ್ಲಿಯ ಅಮಲ್ದಾರರು ಎಲ್ಲರೂ ಖಾದಿಧಾರಿಗಳೇ. ದಾವಣಗೆರೆಯಲ್ಲಿ ನಿಧಿಯು ನಿರೀಕ್ಷಿಸಿದಷ್ಟು ದೊಡ್ಡದಾಗಿಯೇ ಇತ್ತು. ಉಳಿದ ಕಡೆ ನಡೆದ ಹೆಂಗಸರ ಸಭೆಗಳಿಗಿಂತ ದಾವಣಗೆರೆ ಲಿಂಗಾಯತ ಹೆಂಗಸರ ಸಭೆಯು ಯಶಸ್ವಿಯಾಯಿತು. ಅವರು ಸ್ಥಳದಲ್ಲೇ ೫೦೦ ರೂಪಾಯಿ ನಿಧಿಯನ್ನು ಕೂಡಿಸಿಕೊಟ್ಟರು. ಒಡವೆಗಳ ಸುರಿಮಳೆ ಬೇರೆ. ದಾವಣಗೆರೆಯ ವಿದ್ಯಾರ್ಥಿಗಳು ಅವರ ಶಿಕ್ಷಕರ ಮುಖಂಡತ್ವದಲ್ಲಿ ಶುದ್ಧ ಖಾದೀಧಾರಿಗಳಾಗಿ, ಸ್ವಯಂ ಸೇವಕರಾಗಿ ಕೆಲಸ ಮಾಡಿದರು. ಅವರ ಸಭೆಯಲ್ಲಿ ಗಾಂಧೀಜಿಗೆ ೩೪೯ ರೂಪಾಯಿನ ನಿಧಿಯನ್ನೂ ಕೊಟ್ಟರು. ಹಿಂದಿನ ವಾರದಲ್ಲಿ ಶ್ರೀ ಪೂಜಾರಿಯವರು ೨,೦೦೦ ರೂಪಾಯಿಯ ಖಾದಿ ಮಾರಾಟ ಮಾಡಿದ್ದರು. ಹೀಗೆ ಮಹದೇವ ದೇಸಾಯಿ ಬರೆದಿದ್ದಾರೆ.

**ಆದಿಕರ್ನಾಟಕರ ಮಧ್ಯೆ :**

ಮಹಾದೇವ ದೇಸಾಯಿ ಮುಂದುವರಿದು ಬರೆದಿದ್ದಾರೆ:- ನಮ್ಮ ಅನುಭವಗಳಲ್ಲಿ ಬಹಳ ಬೆಲೆಯುಳ್ಳದ್ದು ಎಂದರೆ ಎಲ್ಲ ಸ್ಥಳಗಳಲ್ಲಿಯೂ ಆದಿಕರ್ನಾಟಕರೊಡನೆ ಬಂದ ಅನುಭವ. ಮೈಸೂರಿನ ಉತ್ತರಕ್ಕಿಂತ ದಕ್ಷಿಣದಲ್ಲಿ ಅಸ್ಪೃಶ್ಯತೆಯ ಬಿಗಿ ಹೆಚ್ಚು. ಆದರೆ ಸಭೆಗಳಲ್ಲಿ ಉಳಿದವರ ಜೊತೆಯಲ್ಲಿ ಆದಿಕರ್ನಾಟಕರು, ಜಾಡಮಾಲಿಗಳು ಭಂಗಿಗಳು ಕುಳಿತದ್ದು ಇತಿಹಾಸದಲ್ಲಿ ಇದೇ ಮೊದಲನೆಯದು. ಗಾಂಧೀಜಿ ಅಸ್ಪೃಶ್ಯರೆಲ್ಲರನ್ನೂ ಮಾಂಸ ಭಕ್ಷಣ ಬಿಡುವಂತೆ, ಗೋಮಾಂಸ ತಿನ್ನದಂತೆ, ಗೋಹತ್ಯ ಮಾಡದಂತೆ, ಹೆಂಡ ಕುಡಿಯದಂತೆ ಸಲಹೆಕೊಟ್ಟರು. ಗಾಂಧೀಜಿ ದಾವಣಗೆರೆಯ ತಮ್ಮ ಭಾಷಣವನ್ನು ಮುಗಿಸಿದರೋ ಇಲ್ಲವೋ

ಆದಿಕರ್ನಾಟಕರ ಮುಖಂಡ ಒಬ್ಬ ಮುಂದೆ ಬಂದು ಇನ್ನು ಮುಂದೆ ಗೋಮಾಂಸ, ಮಾಂಸ, ಹೆಂಡ ಯಾವುದನ್ನೂ ಮುಟ್ಟುವುದಿಲ್ಲ ಎಂದು ಶಪಥ ಮಾಡಲು ಗಾಂಧೀಜಿಯ ಅಪ್ಪಣೆ ಬೇಡಿದ. ಅವನ ತರುವಾಯ ಮತ್ತೊಬ್ಬ, ನಂತರ ಮತ್ತೊಬ್ಬ. ಹೀಗೆ ಅವರ ಮುಖ್ಯಸ್ಥರೆಲ್ಲರೂ ಬಂದು ಶಪಥ ಮಾಡಿದರು. ಅವರಲ್ಲಿ ಒಬ್ಬ ಪುರಸಭಾ ಸದಸ್ಯ, ಒಬ್ಬ ವಿದ್ಯಾರ್ಥಿ, ಒಬ್ಬ ಶಿಕ್ಷಕ, ಒಬ್ಬ ಭೂಮಾಲಿಕ. ಒಬ್ಬನೆಂದ, ನಿನ್ನೆಯವರೆಗೂ ಗೋಮಾಂಸ ತಿಂದಿದ್ದೇನೆ, ನಾಳೆಯಿಂದ ತಿನ್ನುವುದಿಲ್ಲ ಎಂದು ಹೀಗೆಯೇ ನಡೆಯಿತು. ದೇವತೆಗಳೇ ಬಂದು ನೋಡಿ ಆನಂದಿಸಲೇಬೇಕಾದ ದೃಶ್ಯವದು. ಇಂಥ ದೃಶ್ಯ ಹೊನ್ನಾಳಿ, ಶಿವಮೊಗ್ಗೆ, ತೀರ್ಥಹಳ್ಳಿ ಎಲ್ಲ ಕಡೆಗಳಲ್ಲೂ ಹೆಚ್ಚು ಕಡಿಮೆ ನಡೆದವು.

ಹೊನ್ನಾಳಿಯಲ್ಲಿ ಆದಿಕರ್ನಾಟಕದವರಿಗಾಗಿ ಬೇರೆ ಸಭೆ ಇರಲಿಲ್ಲ. ಊರಿನ ಸಭೆಯಲ್ಲಿ ಗಾಂಧೀಜಿ ಅವರಿಗಾಗಿ ನಾಲ್ಕು ಮಾತುಗಳನ್ನು ಹೇಳಿದರು. ದಾವಣಗೆರೆಯ ಸುದ್ದಿಯನ್ನು ಯಾರೂ ಇಲ್ಲಿ ಪ್ರಸ್ತಾಪಿಸಲಿಲ್ಲ. ಆದರೂ ಗಾಂಧೀಜಿ ಭಾಷಣ ಮುಗಿಸಿದರೋ ಇಲ್ಲವೋ ಒಬ್ಬರಾದ ಮೇಲೊಬ್ಬರು ಎದ್ದು ಬಂದು ಶಪಥ ಮಾಡಿದರು. ಗಂಗಾಧರರಾಯರು ಪ್ರತಿಯೊಬ್ಬರಿಗೂ ಆ ಶಪಥದ ಅರ್ಥವನ್ನು ವಿವರಿಸಿ ಹೇಳಿದರು. ಅವರಲ್ಲಿ ಒಬ್ಬ ಶಪಥ ಮಾಡಿದರೆ ಮೇಕೆಯ ಮಾಂಸ ತಿನ್ನುವುದಕ್ಕೆ ಅಡ್ಡಿಯಾಗುತ್ತದೆಯೇ ಎಂದು ಕೇಳಿದ. ಆಗ ಗಂಗಾಧರರಾಯರು ಇಲ್ಲ, ಆಗುವುದಿಲ್ಲ ಎಂದು ಭರವಸೆ ಕೊಟ್ಟರು. ಆಗ ಅವನು ಶಪಥ ಮಾಡಿದ. ಇನ್ನೊಬ್ಬನಿಗೆ ಏನೋ ಸಂಕೋಚ. ಹಿಂದು ಮುಂದು ನೋಡುತ್ತ ಎದ್ದು ಬಂದು ಆಕಳನ್ನು ಕೊಲ್ಲುವುದಿಲ್ಲ, ಗೋಮಾಂಸ ತಿನ್ನುವುದಿಲ್ಲ, ಸತ್ತ ದನದ ಮಾಂಸ ತಿನ್ನುವುದಿಲ್ಲ, ಆದರೆ ಮೋಚಿಯ ಕಸಬನ್ನು ನಾನು ಹೇಗೆ ಬಿಡಲಿ? ತೊಗಲಿನ ಕೆಲಸ ಮಾಡಬಹುದಲ್ಲ ಎಂದು ಕೇಳಿ ಶಪಥ ಮಾಡಿದ. ಸಾಗರದಲ್ಲಿ ಸಭೆ ನಡೆದಾಗ ಯಾರೋ ಒಬ್ಬ ಹೇಳಿದ, ಸತ್ತ ದನದ ಮಾಂಸ ತಿನ್ನುವುದು ಹಾಗಿರಲಿ, ಸತ್ತ ದನವನ್ನೂ ಮುಟ್ಟುವುದಿಲ್ಲ ಎಂದು. ಗಾಂಧೀಜಿ ಕೂಡದು, ಹಾಗೆ ಮಾಡಬಾರದು ಎಂದರು. ಸತ್ತ ದನಗಳನ್ನು ತೆಗೆದುಹಾಕುವ ಕೆಲಸದಲ್ಲಿ ನೆರವಾಗಬೇಕು. ನಿಮ್ಮ ತಂದೆ ತಾಯಿ ಹೆಣಗಳನ್ನು ಹೂಳುವುದಿಲ್ಲವೇ ಹಾಗೆಯೇ. ಸತ್ತ ದನವೊಂದನ್ನು ನೋಡಿದಾಗ, ನನಗೆ ಶಕ್ತಿ ಇದ್ದರೆ ನಾನು ಅದನ್ನು ಹೊತ್ತು ಹಾಕುವುದರಲ್ಲಿ ನೆರವಾದೇನು ಎಂದರು ಗಾಂಧೀಜಿ.

ಇದೆಲ್ಲಾ, ಜನರಲ್ಲಿ ವಿಚಾರಪೂರ್ಣ ಆಸಕ್ತಿ ಇದ್ದುದ್ದನ್ನು ತೋರಿಸುತ್ತದೆ. ಏನು ಮಾಡಬೇಕೋ ಅದನ್ನು ಅರಿತುಕೊಂಡು ಆದಿಕರ್ನಾಟಕರು ಮಾಡಿದರು. ತಮ್ಮ ಬದುಕಿನಲ್ಲಿ ಇದೊಂದು ಮಹಾ ಸಾಹಸ. ಅದನ್ನು ಮಾಡಲು ಸಿದ್ಧರಾಗಿ ತಮ್ಮ ಸಮಾಜದಲ್ಲಿ ಆದಿಕರ್ನಾಟಕರು ಕ್ರಾಂತಿಬೀಜ ಬಿತ್ತಿದರು.

*(ಯಂಗ್ ಇಂಡಿಯಾ: ೨೫-೮-೧೯೨೭)*

ಈ ಪ್ರವಾಸದಲ್ಲಿ ಅಧಿಕಾರಿಗಳೂ ವಕೀಲರೂ ವಹಿಸುತ್ತಿರುವ ಭಾಗ, ತೋರಿಸುತ್ತಿರುವ ಆಸಕ್ತಿ ಕಡಿಮೆ ಏನಲ್ಲ. ದಾವಣಗೆರೆಯಲ್ಲಿ, ಶಿವಮೊಗ್ಗೆಯಲ್ಲಿ ಅಧಿಕಾರಿಗಳು ತಮ್ಮದೇ

ನಿಧಿಯನ್ನು ಕೊಟ್ಟರು. ಶಿವಮೊಗ್ಗದ ಸಹಕಾರಿ ಬ್ಯಾಂಕು, ಸಹಕಾರಿ ಸಂಘಗಳ ರಿಜಿಸ್ಟ್ರಾರ್ ಶ್ರೀ ಕೆ.ಹೆಚ್. ರಾಮಯ್ಯನವರ ಸಲಹೆ ಮೇರೆಗೆ ೫೦೦ ರೂಪಾಯಿ ನಿಧಿಯನ್ನು ಕೊಟ್ಟಿತು. ಶಿವಮೊಗ್ಗದ ವಕೀಲರೂ ಕೂಡ ಒಂದು ನಿಧಿಯನ್ನು ಕೊಟ್ಟರು. ಗಾಂಧೀಜಿ ವಿನೋದದಿಂದ ಹೇಳಿದರು, 'ನಿಮ್ಮ ಕಸುಬಿನ ಮೇಲೆ, ನಾನು ಮಾಡಿದ ಅಹಿಂಸಾತ್ಮಕ ಟೀಕೆಯಿಂದ ನೀವು ಶತ್ರುಗಳಾಗಲಿಲ್ಲ, ಮಿತ್ರರೇ ಆದಿರಿ' ಎಂದರು. ಹೊನ್ನಾಳಿಯಲ್ಲಿ ಗಾಂಧೀಜಿ ಪ್ರವಾಸಿಮಂದಿರದಲ್ಲಿ ಇದ್ದರು. ಪ್ರವಾಸಿಮಂದಿರ ನದಿಯ ದಡದ ಮೇಲೆ ಇದೆ. ಅವರಿಗೆ ಸಾಬರಮತಿಯ ತಮ್ಮ ಆಶ್ರಮದ ನೆನಪು ಆಯಿತು. ಆಗಸ್ಟ್ ೧೪, ೧೫ರಲ್ಲಿ ಗಾಂಧೀಜಿ ಶಿವಮೊಗ್ಗದಲ್ಲಿ ತಂಗಿದರು. ಅಲ್ಲಿನ ಜಿಲ್ಲಾಧಿಕಾರಿ ಶ್ರೀ ತಾಜಪಿರಾನ್ ಮತ್ತು ವಕೀಲ ಮುಖಂಡರು, ಶ್ರೀ ವೆಂಕಟಸುಬ್ಬಾಶಾಸ್ತ್ರಿ, ಸಿದ್ದಯ್ಯ, ಸುಬ್ಬರಾವ್, ವರ್ತಕರಾದ ಭೂಪಾಳಂ ಚಂದ್ರಶೇಖರ ಶೆಟ್ಟರು ಮುಂತಾದವರು ಕೂಡಿ ಒಂದು ಬಲವಾದ ಸ್ವಾಗತ ಸಮಿತಿಯನ್ನು ರಚಿಸಿದ್ದರು. ಹೊಸದಾಗಿ ಕಟ್ಟಿದ್ದ ಒಂದು ಮನೆಯಲ್ಲಿ ಇಡೀ ಪರಿವಾರವನ್ನು ಇಳಿಸಿದ್ದರು. ಪುರಸಭಾ ಭವನದ ಮುಂದಿನ ಹಸಿರು ಹುಲ್ಲಿನ ಬಯಲಿನಲ್ಲಿ ನಾಗರಿಕರ ಸಭೆ ನಡೆಯಿತು. ವಿದ್ಯಾರ್ಥಿಗಳ ಸಭೆಗಳು ಅವರ ಕಾಲೇಜಿನ ಆಟದ ಬಯಲಿನಲ್ಲಿ. ಎಲ್ಲವೂ ತುಂಬಾ ರಮ್ಯವಾಗಿತ್ತು. ಹೆಚ್ಚು ಹೆಚ್ಚು ಖಾದಿ ತೊಡುತ್ತಿರುವುದನ್ನು ನೋಡಿ ಗಾಂಧೀಜಿಗೆ ತುಂಬಾ ಸಂತೋಷವಾಯಿತು.

**ಮಲೆನಾಡಿನಲ್ಲಿ:**

೧೫ನೇ ತಾರೀಖು ಶಿವಮೊಗ್ಗದಲ್ಲಿ ಗಾಂಧೀಜಿಗೆ ರಾತ್ರಿ ಸ್ವಲ್ಪ ಮೈ ಬಿಸಿಯಾಗಿತ್ತು. ರಾಜಗೋಪಾಲಚಾರ್ಯರೂ, ಗಂಗಾಧರರಾಯರೂ, ಮಹಾದೇವ ದೇಸಾಯಿ ಮೂವರೂ ಮರುದಿನ ಬೆಳಗ್ಗೆ ತೀರ್ಥಹಳ್ಳಿಗೆ ಹೋಗಬೇಕಾದ ಕಾರ್ಯಕ್ರಮವನ್ನು ನಿಲ್ಲಿಸಲು ಅವರಿಗೆ ಸಲಹೆ ಕೊಟ್ಟರು. ಸ್ವಾಗತ ಸಮಿತಿಯ ಕಾರ್ಯದರ್ಶಿ ಒಪ್ಪಿಕೊಂಡಿದ್ದಾನೆಯೇ ಎಂದು ಗಾಂಧೀಜಿ ಕೇಳಿದರು. ಕಾರ್ಯದರ್ಶಿ ಹೊರಗೆ ಊಟಕ್ಕೆ ಹೋಗಿದ್ದು, ಸ್ವಲ್ಪ ತಡ ಆಗಿ ಬಂದರು. ಗಾಂಧೀಜಿ ಆರೋಗ್ಯ ಚೆನ್ನಾಗಿಲ್ಲ, ಆದ್ದರಿಂದ ತೀರ್ಥಹಳ್ಳಿಯ ಪ್ರಯಾಣವನ್ನು ನಿಲ್ಲಿಸೋಣ–ಎಂದು ಅವರಿಗೆ ರಾಜಗೋಪಾಲಚಾರ್ಯರು ಹೇಳಿದರು. ಪ್ರಯಾಣಕ್ಕೆ ಮಾಡಿದ ಸಿದ್ಧತೆ ಎಲ್ಲವನ್ನೂ ನಿಲ್ಲಿಸಲಾಯಿತು. ಆದರೆ ಮರುದಿನ ಬೆಳಗ್ಗೆ ಗಾಂಧೀಜಿ ನಸುಕಿನಲ್ಲಿ ಎದ್ದು, ಬೆಳಗ್ಗೆ ೭ ಗಂಟೆಯ ವಿದ್ಯಾರ್ಥಿಗಳ ಕಾರ್ಯಕ್ರಮಕ್ಕೆ ಸಿದ್ಧರಾದರು. ಆ ಕಾರ್ಯಕ್ರಮ ಮುಗಿದ ಮೇಲೆ, ಯಾವ ಮೋಟಾರಿನಲ್ಲಿ ತೀರ್ಥಹಳ್ಳಿಗೆ ಹೋಗಬೇಕು ಎಂದು ಕೇಳಿದರು. ಅವರು ಸ್ವಸ್ಥ ಇಲ್ಲದ್ದರಿಂದ ತೀರ್ಥಹಳ್ಳಿಯ ಕಾರ್ಯಕ್ರಮವನ್ನು ರದ್ದು ಮಾಡಿದೆ ಎಂದು ತಿಳಿಸಿದಾಗ ಅವರಿಗೆ ಆಶ್ಚರ್ಯವಾಯಿತು. ತಮ್ಮನ್ನು ಕೇಳದೆ, ತೀರ್ಥಹಳ್ಳಿಯ ಜನರನ್ನು ಕೇಳದೆ, ದಾರಿಯಲ್ಲಿ ಉದ್ದಕ್ಕೂ ನಿಂತಿರುವ ಜನರನ್ನು ಕೇಳದೆ, ಈ ಕಾರ್ಯಕ್ರಮ ಹೇಗೆ ರದ್ದಾಯಿತು ಎಂದರು. ಕಾರ್ಯದರ್ಶಿಯನ್ನು ಕರೆದು ವಾಹನಕ್ಕೆ ಏರ್ಪಾಡು ಮಾಡು ಎಂದು ಹೇಳಿ, ತೀರ್ಥಹಳ್ಳಿಯ ದಾರಿಯಲ್ಲಿ ನಡೆದೇ ಹೊರಟುಬಿಟ್ಟರು. ಬೇರೆ ಬೇರೆ ಜನರು ಮೋಟಾರುಗಳನ್ನು ಎರವಲು ಪಡೆದು, ಅರ್ಧಗಂಟೆ ಒಳಗಾಗಿ ಎಲ್ಲರನ್ನೂ

ಕೂಡಿಸಿಕೊಂಡು, ತೀರ್ಥಹಳ್ಳಿ ರಸ್ತೆಯಲ್ಲಿ ಎಲ್ಲರೂ ಹೊರಟರು. ನಡು ದಾರಿಯಲ್ಲಿ ಗಾಂಧೀಜಿಯನ್ನು ಕೂಡಿಕೊಂಡು ಪ್ರವಾಸ ಮುಂದುವರಿಸಿದರು.

ಮಲೆನಾಡಿನ ಪ್ರವಾಸ ಬಹಳ ರಮ್ಯವಾಗಿತ್ತು. ಎಲ್ಲಿ ನೋಡಿದರೂ ಚಿತ್ತಾಕರ್ಷಕ ಚಿತ್ರಮಯ ಸನ್ನಿವೇಶ. ಆದರೆ ಗಾಂಧೀಜಿ ಈ ನೈಸರ್ಗಿಕ ದೃಶ್ಯವನ್ನು ಸವಿಯುತ್ತ ಕುಳಿತಿರುವುದು ಸಾಧ್ಯವೇ? ಜಗತ್ ಪ್ರಸಿದ್ಧವಾದ ಗೇರುಸೊಪ್ಪೆ ಜಲಪಾತ ಸಾಗರಕ್ಕೆ ಹದಿನೆಂಟು ಮೈಲಿ. ಆದರೂ ಗಾಂಧೀಜಿಯನ್ನು ಸೆಳೆಯಲು ಆಗಲಿಲ್ಲ. ಬೇಲೂರಿಗೆ ಹೋಗಿದ್ದರಲ್ಲ. ಬೇಲೂರಿನ ಅದ್ಭುತ ಶಿಲಾಶಿಲ್ಪವನ್ನು ನೋಡಿ ಕಣ್ಣು ತಣಿಸಿಕೊಳ್ಳಲಿಕ್ಕಿಲ್ಲ; ಬೇಲೂರಿನ ದೇವಾಲಯಕ್ಕೆ ಹೋದಾಗ ಅಲ್ಲಿನ ಜನ ಬಹಳ ಹುರುಪಿನಿಂದ ಎಲ್ಲವನ್ನು ತೋರಿಸುತ್ತ, ವಿವರಿಸುತ್ತ ಇದ್ದರು, ಭಾರತದ ಉನ್ನತಿಯ ವೈಭವದ ಕಾಲದ ಕುರುಹು ಆ ಶಿಲಾಶಿಲ್ಪ. ಆದರೆ ಗಾಂಧೀಜಿ ಕೇವಲ ಯಾಂತ್ರಿಕವಾಗಿ, ಇವುಗಳ ಮೇಲೆ ಕಣ್ಣಾಡಿಸುತ್ತ ಮುಂದೆ ಹೋಗುತ್ತಿದ್ದರು. ಆದರೆ ಆ ಕಲಾವಸ್ತುವಿನ ಸವಿಯನ್ನು ಸವಿಯಲು ತಮ್ಮ ಅಸಾಮರ್ಥ್ಯವನ್ನು ಹೇಳಿ ಕ್ಷಮೆ ಕೋರಿದರು. ಈ ಅದ್ಭುತ ಶಿಲಾಶಿಲ್ಪದ ದೇವಾಲಯವನ್ನು ನೋಡಿ ಯಾರ ಮನಸ್ಸಿಗೆ ತಾನೇ ಹರ್ಷವಾಗದು. ಆದರೆ ನಾನು ದರಿದ್ರ ನಾರಾಯಣನ ಪ್ರತಿನಿಧಿ. ಇಲ್ಲಿ ಕಣ್ಣಿಗೆ ಹಬ್ಬ ಮಾಡಿಕೊಳ್ಳುತ್ತ, ಕುಳಿತುಕೊಳ್ಳಬಹುದೆ ನಾನು! ನನ್ನ ಶಕ್ತಿ, ಸಾಮರ್ಥ್ಯ, ನನ್ನ ಕಾಲ ಎಲ್ಲವು ಬಡವರ ಸೇವೆಗಾಗಿ ಮೀಸಲು ಆಗಿದೆ. ಖಂಡಿತ ನಾನು ಇಲ್ಲಿಗೆ ಬರುತ್ತಿರಲಿಲ್ಲ. ಕೇಶವದಾಸರು (ಪ್ರಸಿದ್ಧ ಕೀರ್ತನಕಾರರು) ೫೦೦ ರೂ. ನಿಧಿಯನ್ನು ಸಂಗ್ರಹಿಸಿಕೊಡುತ್ತೇನೆ ಎಂದು ಹೇಳಿರದಿದ್ದರೆ ನಾನು ಇಲ್ಲಿಗೆ ಬರುತ್ತಲೇ ಇರಲಿಲ್ಲ.

ತೀರ್ಥಹಳ್ಳಿಯಿಂದ ಮುಂದೆ ಮಂಗದ್ದೆ, ಗಾಜನೂರು, ಭದ್ರಾವತಿ, ತರೀಕೆರೆ, ಬೀರೂರು, ಕಡೂರುಗಳ ಮಾರ್ಗವಾಗಿ ಚಿಕ್ಕಮಗಳೂರಿಗೆ ಹೋದರು.

ಇಲ್ಲಿ ಪ್ರತಿಯೊಂದು ಕಡೆಯೂ ನಿಧಿಯನ್ನು ಅರ್ಪಿಸಿದರು.

ಎಲ್ಲಾ ಕಡೆಯಲ್ಲೂ ಸಭೆಗಳು ನಡೆದವು. ಎಲ್ಲವೂ ಸುಗಮವಾಗಿ ನಡೆಯಿತು. ಇದಕ್ಕೆ ಶ್ರೀ ಗಂಗಾಧರರಾಯರ, ರಾಜಗೋಪಾಲಚಾರ್ಯರ ಪ್ರಯತ್ನ ಕಾರಣ. ಪ್ರತಿಯೊಂದು ಸಭೆಗೂ ಅರ್ಧಗಂಟೆ ಮೊದಲೇ ಇಬ್ಬರೂ ಹೋಗಿ, ಜನರಿಗೆ ಸಭೆಯಲ್ಲಿ ಹೇಗೆ ನಡೆಯಬೇಕು ಎಂಬುದನ್ನು ತಿಳಿಸಿ ಹೇಳುತ್ತಿದ್ದರು. ಎಲ್ಲಾ ಸಭೆಗಳಿಗಿಂತ ತೀರ್ಥಹಳ್ಳಿಯ ಸಭೆಗಳು ಬಹಳ ಶಾಂತ, ಸುವ್ಯವಸ್ಥಿತವಾಗಿದ್ದವು. ಇವರಿಬ್ಬರೂ ಅಲ್ಲಿಗೆ ಹೋಗುವ ಮೊದಲೇ ಸಭೆಯಲ್ಲಿ ಶಿಸ್ತು ಇತ್ತು. ಅಲ್ಲಿ ಸಭೆ ಚೆನ್ನಾಗಿದ್ದುದಲ್ಲದೇ, ನಿಧಿ ಸಂಗ್ರಹವು ಚೆನ್ನಾಗಿ ಆಗಿತ್ತು. ೧,೬೫೦ ರೂಪಾಯಿಗಳನ್ನು ಅರ್ಪಿಸಿದರು.

**ಭಾಷಣಗಳು:**

ದಾವಣಗೆರೆಯ ಭಾಷಣ ಎಲ್ಲಕ್ಕಿಂತ ದೀರ್ಘವಾಗಿತ್ತು. ಶಿವಮೊಗ್ಗದಲ್ಲಿ ಮಾತನಾಡುತ್ತ, ಗಾಂಧೀಜಿ ಹೇಳಿದರು: 'ಎಲ್ಲೆಲ್ಲೂ ಸಹಾನುಭೂತಿ ಇದೆ, ಸರಿಯಾದ ವಾತಾವರಣ ಇದೆ. ಆದರೆ ಆ ನಂಬಿಕೆಯನ್ನು ಸಾರ್ಥಕಗೊಳಿಸುವ ಜ್ಞಾನ ಬೇಕು. ಎಲ್ಲಿ ಶ್ರದ್ಧೆ ಜ್ಞಾನ ಎರಡೂ

ಸೇರುವುದಿಲ್ಲವೋ ಅಲ್ಲಿ ಬೇಗನೆ ಶ್ರದ್ಧೆ ಮಾಯವಾಗುತ್ತದೆ. ಆರಂಭಶೂರರಾಗಿ ಉಳಿಯುತ್ತೇವೆ. ವಕೀಲರೂ, ವರ್ತಕರೂ ಇಬ್ಬರಿಗೂ ಹೇಳುತ್ತೇನೆ. ನಿಮ್ಮ ಅನುಭವವನ್ನೂ ಅರಿವನ್ನೂ ಈ ಖಾದಿ ವ್ಯವಹಾರದಲ್ಲಿ ತೊಡಗಿಸಿ. ಇದರ ಅರ್ಥಶಾಸ್ತ್ರವನ್ನು ಅಭ್ಯಾಸ ಮಾಡಿ. ಸೊಗಸಾದ ಉದ್ಯೋಗವನ್ನು ಸ್ಥಾಪಿಸಿ.

ಹರಿಹರದ ಹರಿಹರೇಶ್ವರನ ದೇವಸ್ಥಾನದ ಮುಂದೆ ಮಾಡಿದ ಭಾಷಣ ಸುತ್ತಲಿನ ದೃಶ್ಯಕ್ಕೆ, ನಿಸರ್ಗ ಸೌಂದರ್ಯಕ್ಕೆ ಹೊಂದಿಕೊಂಡಿತ್ತು. ಗಾಂಧೀಜಿ ಹೇಳಿದರು: 'ದೇವರು ಮನುಷ್ಯನನ್ನು ತನ್ನಂತೆ ಸೃಷ್ಟಿ ಮಾಡಿದನಂತೆ. ಮನುಷ್ಯನೂ ತನ್ನಂತೆ ದೇವರನ್ನು ನಿರ್ಮಿಸಿಕೊಂಡ ಎನ್ನುತ್ತಾರೆ. ಈ ಕಾಲದಲ್ಲಿ ನಮ್ಮಂಥ ಜೀವ ಇಲ್ಲದ ಭಕ್ತಾದಿಗಳ ಹಾಗೆಯೇ ನಮ್ಮ ದೇವಾಲಯದಲ್ಲಿರುವ ವಿಗ್ರಹಗಳೂ ಕೂಡ ಪ್ರಾಣವಂತ ಆಗಿಲ್ಲ. ಆ ಪ್ರತಿಮೆಗಳು ಸಚೇತನ ಆಗಬೇಕಾದರೆ ನಮ್ಮ ಜೀವನವನ್ನು ಪರಿವರ್ತನಗೊಳಿಸಬೇಕು. ನಮ್ಮ ಜಾತೀಯ ಕಲಹ ಹೋಗಬೇಕು. ದಲಿತರಲ್ಲಿ ಗೆಳೆತನ ತೋರಿಸಿ ಶುದ್ಧ ಜೀವನ ನಡೆಸಬೇಕು. ತ್ರಿಮೂರ್ತಿಗಳಲ್ಲಿ ಹರಿ, ಸಂರಕ್ಷಕ, ಹರ ವಿಧ್ವಂಸಕ. ಶ್ರೀಮಂತರು ಬಡವರನ್ನು ತುಳಿದು ಹಾಕಿದ್ದುದನ್ನು ನೋಡಿದಾಗ ಭಗವಂತ ಅವರನ್ನು ರಕ್ಷಿಸುವುದಿಲ್ಲ. ಹರನ ರೂಪದಿಂದ ಲೋಕ ಭಯಂಕರ ಆಗಿ ಸುತ್ತಲೂ ವಿನಾಶವನ್ನು ಚೆಲ್ಲುತ್ತಾನೆ. ಬಡವರೂ ಭಾಗ್ಯವಂತರೂ ಒಬ್ಬರಿಗೊಬ್ಬರು ತಾದಾತ್ಮ್ಯ ಭಾವನೆ ತೋರಿಸಿದರೆ ಆಗ ಹರಿಹರರು ಒಂದಾಗುತ್ತಾರೆ. ಈ ದೇಶಕ್ಕೆ ರಾಟೆಯನ್ನು ಕೊಟ್ಟು ನಿಜವಾಗಿಯೂ ಜೀವಂತ ಹರಿಹರೇಶ್ವರನ ರೂಪವನ್ನು ಸ್ಥಾಪಿಸಬೇಕು ಎಂಬ ಹಿರಿಯಾಸೆ ನನ್ನದು. ರಾಟೆ ತ್ಯಾಗದ ಸಂಕೇತ. ಭಗವಂತನ ಸ್ಥಾಪನೆಗೆ ತ್ಯಾಗ ಅತ್ಯಗತ್ಯ'.

ಆದಿಕರ್ನಾಟಕ ಸಭೆಗಳಲ್ಲಿ ಗಾಂಧೀಜಿಯ ಭಾಷಣಗಳು ಬಹಳ ಪರಿಣಾಮಕಾರಿ ಆಗಿದ್ದವು. ಕೈಮಗ್ಗದ ಕಸಬು, ಮೋಚಿಯ ಕಸಬು, ಎರಡೂ ದೇಶಕ್ಕೆ ಅತ್ಯಗತ್ಯ. ನೀವು ಮೇಳಗಾರರು, ಓಲಗಬಾರಿಸುತ್ತಾ ಸ್ವರಸಹಾಯದಿಂದ ನೀವು ಜನಗಳನ್ನು ಭಗವಂತನ ಹತ್ತಿರ ಕರೆದೊಯ್ಯಬಲ್ಲಿರಿ. ಪರದೇಶೀ ಬಟ್ಟೆ, ಗಿರಣಿಯ ನೂಲನ್ನು ಕೂಡ ಬಿಡಬೇಕೆಂದು ನೇಕಾರರಿಗೆ ಹೇಳುತ್ತಿದ್ದೇನೆ. ಈ ದೇಶದಲ್ಲಿ ಗಿರಣಿಗಳು ಪ್ರಾರಂಭ ಆದಮೇಲೆ ದಿನೇ ದಿನೇ ಕೈಮಗ್ಗದವರ ಸಂಖ್ಯೆ ಕ್ಷೀಣವಾಗುತ್ತದೆ. ಕೆಲವು ವರ್ಷಗಳ ಹಿಂದೆ ಇದ್ದುದರ ಅರ್ಧದಷ್ಟು ಕೂಡ ಈಗ ಇಲ್ಲ.

ದೇಶದಲ್ಲಿ ನಡೆಯುವ ಎಲ್ಲಾ ನೇಯ್ಗೆಯನ್ನೂ ತಾನೇ ಮಾಡಬೇಕೆಂದು ಗಿರಣಿಗಳ ಉದ್ದೇಶ. ಇದರಿಂದ ಕೈಮಗ್ಗದವರ ಕಸಬು ಹಾಳಾಗುತ್ತದೆ. ಯೂರೋಪಿನಲ್ಲಿ ಹೀಗೆಯೇ ಆಯಿತು. ಅದರ ನಿರುದ್ಯೋಗಿಗಳಾದ ನೇಕಾರರಿಗೆ, ನೂಲುಗಾರರಿಗೆ ಬೇರೆ ಉದ್ಯೋಗ ಸಿಕ್ಕಿತು. ಇಲ್ಲಿ ಇವರಿಗೆ ಯಾವ ಉದ್ಯೋಗವೂ ಇಲ್ಲ. ಆದ್ದರಿಂದ ಅನಾಥರಾಗಿದ್ದಾರೆ. ಈಗ ಮೋಚಿಗಳನ್ನುದ್ದೇಶಿಸಿ ಒಂದೆರಡು ಮಾತು. ಮೋಚಿಗಳೂ ಕೂಡ ಕೈಮಗ್ಗದವರಂತೆ ಕೆಲವೊಂದು ನಿಯಮಗಳನ್ನು ಪಾಲಿಸಬೇಕು. ನೇಕಾರರು ವಿದೇಶಿಯ ಅಥವಾ ಗಿರಣಿಯ ನೂಲನ್ನು ಹೇಗೆ ಬಳಸಕೂಡದೋ ಹಾಗೆಯೇ ನೀವಾದರೂ ಕೊಂದ ದನಗಳ ಚರ್ಮ

ಬಳಸಕೂಡದು. ತಾವಾಗಿಯೇ ಸತ್ತ ದನಗಳ ಚರ್ಮವನ್ನು ಬಳಸಿಕೊಳ್ಳಬೇಕು. ನಿಮಗೆ ಉತ್ಸಾಹವರ್ಧಕವೆನಿಸುವಂತ್ತಿದ್ದರೆ ಒಂದು ವಿಷಯ ತಿಳಿಸಬಯಸುತ್ತೇನೆ. ಅದೆಂದರೆ ನಾನೂ ಒಂದಾನೊಂದು ಕಾಲಕ್ಕೆ ಮೋಚಿಯ ಕೆಲಸವನ್ನು ಮಾಡಿದೆ. ಇಂದೂ ಮಾಡಬಲ್ಲೆ.

ನಮ್ಮ ಆಶ್ರಮದಲ್ಲಿ ತೊಗಲನ್ನು ಹದಮಾಡುವ ವಿಭಾಗ ಇದೆ. ಅಲ್ಲಿ ಸತ್ತ ದನಗಳ ಚರ್ಮವನ್ನು ಹದಗೊಳಿಸಲಾಗುತ್ತದೆ. ಈ ಚರ್ಮವನ್ನು ಮೋಚಿಗಳಿಗೆ ಮಾರುತ್ತೇವೆ. ನೀವು ಬರೇ ಮೋಚಿಗಳಾದರೆ ಸಾಲದು. ಅದರಿಂದ ಹಣ ಬಂದೀತು. ಆದರೆ ಗೋರಕ್ಷಕರಾಗಿ ಪುಣ್ಯಗಳಿಸಿ. ಹಿಂದೂಗಳು ನಾವು. ನಮಗೆ ಗೋಮಾತೆ ಪ್ರಿಯ, ಪೂಜ್ಯನಾನು ಮಾಡುತ್ತಿರುವ ಗೋರಕ್ಷಣೆ ಕೆಲಸದಲ್ಲಿ ನೆರವಾಗಿ.

**ಯಂತ್ರ ಪಕ್ಷಪಾತಿ ಸಂದರ್ಶನ:**

ಬೆಂಗಳೂರಿನಲ್ಲಿ ಗಾಂಧೀಜಿ ಇದ್ದಾಗ, ಯಾಂತ್ರಿಕ ಕಾರಖಾನೆಗಳ ಬಗ್ಗೆ ವಿಶ್ವಾಸ ಉಳ್ಳ ಒಬ್ಬ ಸಂದರ್ಶಕನು ಬಂದು ಗಾಂಧೀಜಿಗೆ ಹಲವಾರು ಪ್ರಶ್ನೆಗಳನ್ನು ಕೇಳಿದನು. ಅದಕ್ಕೆ ಗಾಂಧೀಜಿ ತಮ್ಮ ಅಸಂದಿಗ್ಧವಾದ ಸಿದ್ಧಾಂತಪ್ರಾಯವಾದ ಉತ್ತರಗಳನ್ನು ನೀಡಿದರು. ಅವರ ಪ್ರಶ್ನೋತ್ತರಗಳ ವಿಷಯ ಹೀಗಿದೆ:

ಕೈನೂಲು – ಕೈಮಗ್ಗ ವಿರುದ್ಧ ಯಾಂತ್ರಿಕ ಉತ್ಪತ್ತಿ, ದೊಡ್ಡ ಪ್ರಮಾಣದ ಯಾಂತ್ರಿಕ ಉದ್ಯೋಗಗಳು, ಮತ್ತು ಚಿಕ್ಕ ಪ್ರಮಾಣದ ಗ್ರಾಮೋದ್ಯೋಗಗಳು ಮತ್ತು ಕೈಗಾರಿಕೆಗಳು, ಅಧಿಕ ಪ್ರಮಾಣದ ಯಾಂತ್ರಿಕ ಉತ್ಪತ್ತಿಯ ಪರಿಣಾಮವಾಗಿ ಆಯಾ ಸರಕುಗಳಿಗೆ ಮಾರುಕಟ್ಟೆ ದೊರಕಿಸುವ ಸಲುವಾಗಿ ವಸಾಹತುಗಳ ಅವಶ್ಯಕತೆ – ಇವೆ ಮೊದಲಾದ ಪ್ರಶ್ನೆಗಳ ಚರ್ಚೆಯಾಗಿ ಆ ಸಂದರ್ಶಕರು ಗಾಂಧೀಜಿಯನ್ನು ಕುರಿತು ಹೇಳಿದರು – 'ಗಾಂಧೀಜಿ ಪಾಶ್ಚಾತ್ಯ ದೇಶಗಳಲ್ಲಿ ಭೌತಿಕ ಸಂಪನ್ಮೂಲಗಳು ವಿಪರೀತ ಹೆಚ್ಚಿ ಹೋಗಿದ್ದು, ಅವು ರಾಷ್ಟ್ರೀಯ ದೃಷ್ಟಿಯಿಂದ ನೈತಿಕ ಮೌಲ್ಯಗಳನ್ನು ಮೀರಿ ಹೋಗಿವೆ. ಅವನ್ನು ಅನುಸರಿಸಿಕೊಂಡಿಲ್ಲ. ಈ ಭೌತಿಕ ಮೌಲ್ಯಗಳನ್ನೂ ನೈತಿಕ ಮೌಲ್ಯಗಳನ್ನೂ ಒಂದು ಹೊಂದಾಣಿಕೆಗೆ ತರಲು ಏನಾದರೂ ಮಾಡಬೇಕಲ್ಲವೇ?'

ಆಗ ಗಾಂಧೀಜಿ ಎಂದರು–'ಚರಕಾದ ಮೂಲೋದ್ದೇಶವೇ ಅದು. ಅದು ಇದನ್ನೇ ಸಾಧಿಸಲು ಹೊರಟಿದೆ'.

ಈ ಮಾತುಗಳಿಂದ ಪ್ರಭಾವಿತನಾದ ಆ ಸಂದರ್ಶಕ ಹೋಗುವಾಗ ಅಲ್ಲಿ ಇದ್ದ ಖಾದಿ ಅಂಗಡಿಯಿಂದ ಖಾದಿ ಬಟ್ಟೆಯನ್ನು ಕೊಂಡುಕೊಂಡು ಹೋದರು.

**ಮಹಾರಾಜರ ಸಂದೇಶ:**

ಮಾತನಾಡುತ್ತಾ ಮಾತನಾಡುತ್ತಾ ಮಹಾರಾಜರ ರಜತೋತ್ಸವದ ಸಂದೇಶ ಕುರಿತು ಗಾಂಧೀಜಿ ಹೇಳಿದರು: 'ರಜತೋತ್ಸವದ ಸಂದರ್ಭದಲ್ಲಿ ನಿಮ್ಮ ಮಹಾರಾಜರು ಕೊಟ್ಟ ಸಂದೇಶವನ್ನು ಚೆನ್ನಾಗಿ ಮನನ ಮಾಡಿ. ಈ ಸಂಸ್ಥಾನದ ಜನರಲ್ಲಿ ಒಂದು ಭ್ರಾತೃಭಾವ

ಬೆಳೆಯಬೇಕಲ್ಲದೆ, ಮೂಕಪ್ರಾಣಿಗಳ ಬಗ್ಗೆಯೂ ಆ ಭಾವನೆ ಬೆಳೆಯಲಿ ಎನ್ನುತ್ತಾರೆ ಮಹಾರಾಜರು. ಪ್ರಾಣಿಗಳನ್ನು ಅದರಲ್ಲೂ ಪೂಜ್ಯ ಎಂದು ನಾವು ಭಾವಿಸಿದ ಪ್ರಾಣಿಗಳನ್ನು ಚೆನ್ನಾಗಿ ಆರೈಕೆ ಮಾಡಬೇಕು. ಅವಕ್ಕೆ ಬಾಯಿಯಿಲ್ಲ. ಆದ್ದರಿಂದ ಅವುಗಳ ಬಗ್ಗೆ ನಮ್ಮ ಅಭಿಮಾನ ಹೆಚ್ಚು ಆಗಬೇಕು ಎನ್ನುತ್ತಾರೆ. ಈ ಭಾವಗರ್ಭಿತ ಸಂದೇಶವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳೋಣ. ಮಾಂಸಾಹಾರಿಗಳಲ್ಲದವರಿಗಿಂತ ನಿಮಗೇ ಹೆಚ್ಚು ಅನ್ವಯಿಸುತ್ತದೆ ಈ ಪ್ರಾರ್ಥನೆ.'

ಮಹಾರಾಜರ ಸಂದೇಶದ ಈ ಪ್ರಾಣಿದಯೆಯ ದಿವ್ಯ ಭಾವನೆಯನ್ನು ಗಾಂಧೀಜಿ ಎಲ್ಲಿ ಹೋದರೂ ಹೇಳುತ್ತಿದ್ದಾರೆ. ಅದರ ಪರಿಣಾಮವೂ ಆಗುತ್ತಿದೆ.

**ಸಂದರ್ಶನ:**

ಒಬ್ಬ ಪಾದ್ರಿ ಗಾಂಧೀಜಿಯ ಸಂಗಡ ಮಾತನಾಡುತ್ತಿದ್ದ. ಭಾರತದೇಶ ನಿಜವಾಗಿಯೂ ಆಧ್ಯಾತ್ಮಸಂಪನ್ನ. ಇಲ್ಲಿ ಭಗವದ್ಗೀತೆಯ ಪರಿಚಯ ಕೂಡ ವಿದ್ಯಾರ್ಥಿಗಳಿಗಿಲ್ಲ ಎಂದು ಹೇಳಿದ. ಗಾಂಧೀಜಿ ಅನೇಕ ಶಿಕ್ಷಕರನ್ನು ಕೇಳಿ ತಿಳಿದುಕೊಂಡರು; ಧಾರ್ಮಿಕ ಶಿಕ್ಷಣ ಮೈಸೂರಿನ ವಿದ್ಯಾರ್ಥಿಗಳಿಗೆ ಸರಕಾರಿ ಶಾಲೆಗಳಲ್ಲಿ ದೊರೆಯುತ್ತಿಲ್ಲ ಎಂಬುದನ್ನು ಕೇಳಿ ಅವರಿಗೆ ತುಂಬಾ ನೋವಾಯಿತು. ಶಿವಮೊಗ್ಗದ ವಿದ್ಯಾರ್ಥಿ ಸಭೆಯಲ್ಲಿ ಮಾತನಾಡುತ್ತಾ ಅವರಲ್ಲಿ ಎಷ್ಟು ಜನಕ್ಕೆ ಭಗವದ್ಗೀತೆಯ ಪರಿಚಯ ಇದೆಯೋ ಕೇಳಿದರು. ನೂರರಲ್ಲಿ ಎಂಟು ಜನ ಮಾತ್ರ ಗೀತೆಯನ್ನು ಓದಿದ್ದರು. ಅದು ನಿಮಗೆ ಅರ್ಥವಾಯಿತೇ ಎಂದು ಪ್ರಶ್ನಿಸಿದಾಗ ಯಾರೂ ಕೈ ಎತ್ತಲಿಲ್ಲ. ಕೊರಾನನ್ನು ಓದಿದುದಾಗಿ ಹಲವರು ಮುಸ್ಲಿಂ ವಿದ್ಯಾರ್ಥಿಗಳು ಹೇಳಿದರು. ಆದರೆ ಅದರ ಅರ್ಥವನ್ನು ತಿಳಿದುಕೊಂಡವನು ಒಬ್ಬನೇ ಒಬ್ಬ ಕೈ ಎತ್ತಿದ್ದು. ಗಾಂಧೀಜಿ ವಿದ್ಯಾರ್ಥಿಗಳಿಗೆ ಭಗವದ್ಗೀತೆ ಓದುವಂತೆ ಹೇಳಿದರು. ಅದರಲ್ಲಿ ಯಾವ ಹಟವೂ ಇಲ್ಲ. ಅದೊಂದು ಸಂಪೂರ್ಣ ನೀತಿಶಾಸ್ತ್ರ. ಬುದ್ಧಿ ಹೃದಯಗಳಿಗೆ ಸಮಾನವಾಗಿ ಮೆಚ್ಚಿಕೆ ಆಗುತ್ತದೆ. ಅದು ತತ್ವಶಾಸ್ತ್ರವೂ ಹೌದು, ಭಕ್ತಿಕಾವ್ಯವೂ ಹೌದು. ವಿಶ್ವಕ್ಕೆ ಕೊಟ್ಟಿದ್ದು ಆ ಸಂದೇಶ.

*(ಯಂಗ್ ಇಂಡಿಯಾ ೮-೯-೧೯೨೭)*

ತೀರ್ಥಹಳ್ಳಿಗೆ (೧೭-೮-೨೭) ಹೋಗುವಾಗ ಸ್ವಲ್ಪ ತುಂತುರು ಮಳೆ ಬೀಳುತ್ತಿತ್ತು. ಅಲ್ಲಿ ಸಭೆ ನಡೆದೀತೋ ಇಲ್ಲವೋ ಎಂಬ ಅನುಮಾನ ಇದ್ದದ್ದು ತೀರ್ಥಹಳ್ಳಿಗೆ ಹೋಗುವ ವೇಳೆಗೆ ಪರಿಹಾರವಾಯಿತು. ಅಲ್ಲಿ ಸೊಗಸಾದ ಬಿಸಿಲು. ಆ ಸುಂದರ ಸ್ಥಳದ ಜನ ಬಹಳ ಎಚ್ಚರಿಕೆಯಿಂದ ಸಭೆಗಳನ್ನು ವ್ಯವಸ್ಥೆ ಮಾಡಿದ್ದರು. ಗಂಗಾಧರರಾಯರೂ ರಾಜಗೋಪಾಲಚಾರ್ಯರೂ ಅಲ್ಲಿನ ಎರಡೂ ಸಭೆಗಳಲ್ಲಿ ಮಾತನಾಡಿದರು. ಗಾಂಧೀಜಿಯ ದರ್ಶನಕ್ಕಾಗಿ ಕೆಲವರು ಗಿರಿಜನರು ಪ್ರವಾಸ ಮಂದಿರಕ್ಕೆ ಬಂದರು. ನಿಮ್ಮನ್ನು ಆಳುವವರು ಯಾರು ಗಾಂಧೀಜಿ ಅವರನ್ನು ಕೇಳಿದರು. ಮಹಾಸ್ವಾಮಿಗಳು ಆಳುತ್ತಾರೆ ಎಂದು ಅವರು ಹೇಳಿದರು. ಮಹಾಸ್ವಾಮಿ ಎಂದರೆ ಮಹಾರಾಜರು. ಈ ಸಂಭಾಷಣೆಯನ್ನೇ ಗಾಂಧೀಜಿ ತಮ್ಮ ಗ್ರಾಮಫೋನ್ ರೆಕಾರ್ಡಿನ ಭಾಷಣದಲ್ಲಿ ಪ್ರಸ್ತಾಪ ಮಾಡಿದರು.

**ಭದ್ರಾವತಿ:**

ಆಗಸ್ಟ್ ೧೮ನೇ ತಾರೀಖು ಗಾಂಧೀಜಿ ಭದ್ರಾವತಿಗೆ ಬಂದರು. ಭದ್ರಾವತಿಯಲ್ಲಿ ಕಬ್ಬಿಣದ ಕಾರಖಾನೆಯ ಜನರಲ್ ಮ್ಯಾನೇಜರ್ ವೆಂಕಟನಾರಾಯಣಪ್ಪನವರೂ ಅವರ ಸಂಗಡಿಗರಾದ ಗಣೇಶ ಅಯ್ಯರ್, ವಿಶ್ವನಾಥ ಅವರೂ ಗಾಂಧೀಜಿಯನ್ನು ಬರಮಾಡಿಕೊಂಡರು. ಕಬ್ಬಿಣದ ಕಾರಖಾನೆಯ ಅಧ್ಯಕ್ಷರ ಬಂಗಲೆಯಲ್ಲಿ ಬಿಡಾರ ಮಾಡಿತ್ತು. ಗಾಂಧೀಜಿಗೆ ಹೃತ್ಪೂರ್ವಕ ಸ್ವಾಗತ ಬಯಸಿ, ವಿಶ್ವೇಶ್ವರಯ್ಯನವರೂ ಒಂದು ತಂತಿ ಕಳುಹಿಸಿದ್ದರು. ಗಾಂಧೀಜಿಗೆ ಈ ಔದ್ಯೋಗಿಕ ಸಂಸ್ಥೆಯನ್ನು ನೋಡಬೇಕು ಎಂದು ತುಂಬಾ ಆಶೆ. ಈ ಸಂಸ್ಥೆ ಮೊದಲಿನಿಂದ ಕೊನೆಯವರೆಗೂ ಸ್ವಸಂಪೂರ್ಣ ಆಗಿದ್ದುದನ್ನು ನೋಡಿ ಅವರಿಗೆ ತುಂಬಾ ಸಂತೋಷವಾಯಿತು. ಇದನ್ನು ಸ್ಥಾಪಿಸಿದವರಲ್ಲಿ, ಕೆಲಸ ಮಾಡುವವರಲ್ಲಿ, ಕೂಲಿಕಾರರಲ್ಲಿ ಎಲ್ಲರೂ ಮೈಸೂರಿನವರೇ. ಸ್ಥಾಪಿಸಿದವರು ಶ್ರೀ. ಎಂ. ವಿಶ್ವೇಶ್ವರಯ್ಯನವರು. ಕೆಲಸಗಾರರಲ್ಲಿ ಮೈಸೂರಿನವರು ಅಲ್ಲದಿದ್ದರೆ ದಕ್ಷಿಣ ಭಾರತೀಯರು. ಕೃಷ್ಣರಾಜಸಾಗರದಂತೆ ಭದ್ರಾವತಿಯೂ ಕೂಡ, ವಿಶ್ವೇಶ್ವರಯ್ಯನವರ ರಚನಾತ್ಮಕ ಪ್ರತಿಭೆಗೆ, ದೇಶಪ್ರೇಮಕ್ಕೆ ಒಂದು ನಿದರ್ಶನ. ವಿಶ್ವೇಶ್ವರಯ್ಯನವರು ತಮ್ಮ ಕೌಶಲ್ಯ, ತಮ್ಮ ಜ್ಞಾನ, ಶಕ್ತಿ, ಸಮಯ ಎಲ್ಲವನ್ನೂ ಮೈಸೂರಿನ ಸೇವೆಗೆ ಮುಡಿಪಿಟ್ಟಿದ್ದರು. ಭಾರತದಲ್ಲಿ ಬೇಕಾದಷ್ಟು ಪ್ರತಿಭೆ ಇದೆ, ಬುದ್ಧಿ ಇದೆ; ಅದರೆ ವ್ಯಾವಹಾರಿಕ ಪ್ರಜ್ಞೆ ಇಲ್ಲ ಎಂಬ ಮಾತು ಅಲ್ಲಿ ಇಲ್ಲಿ ಕೇಳಿಬರುತ್ತದೆ. ಭದ್ರಾವತಿ ಅದನ್ನು ಸುಳ್ಳು ಮಾಡಿತು. ಭದ್ರಾವತಿಯ ಕಾರಖಾನೆಯಲ್ಲಿ ಅಧಿಕಾರಿಗಳಿಗೂ ಕೆಲಸಗಾರರಿಗೂ ಸಂಬಂಧ ಹಿತಕರವಾಗಿತ್ತು. ಒಂದು ಬಗೆಯ ಸಖ್ಯಭಾವ ಬೆಳೆದಿತ್ತು. ಹೆಂಡದ ಅಂಗಡಿಯನ್ನೂ, ಜೂಜಿನ ಕಟ್ಟೆಯನ್ನೂ ಬಲುದೂರ, ಮೈಲಿಗಟ್ಟಲೆ ಇಡುವಂತೆ ಏರ್ಪಾಡು ಮಾಡಿದ್ದಾರೆ. ಇದೆಲ್ಲವನ್ನೂ ನೋಡಿ ಗಾಂಧೀಜಿಗೆ ತುಂಬಾ ಸಂತೋಷವಾಯಿತು. ತಮ್ಮ ಭಾಷಣದಲ್ಲಿ ಹೇಳಿಯೇಬಿಟ್ಟರು.

ಗಾಂಧೀಜಿಗೆ ಈ ಕಾರಖಾನೆಯ ಸಾಹಸವನ್ನು ನೋಡಬೇಕು ಎಂದು ಅಪೇಕ್ಷೆ ಇದ್ದರೂ, ಅವರನ್ನು ಮುಖ್ಯವಾಗಿ ಸೆಳೆದದ್ದು ನಿಧಿ. ಪುಟ್ಟ ಭಾಷಣ ಮಾಡಿದರು. ಅದರಲ್ಲಿ ತಮಗೆ ಕೊಟ್ಟ ೫೦೦ ರೂಪಾಯಿ ನಿಧಿಗಾಗಿ ಅವರನ್ನು ಅಭಿನಂದಿಸಿದರು. ಅವರಿಗೆ ಈ ಭೇಟಿಯಿಂದ ಜೆಮಶೇಟಪುರಕ್ಕೆ ತಾವು ಕೊಟ್ಟ ಭೇಟಿಯ ನೆನಪು ಆಯಿತು. ಇಲ್ಲಿಯ ತಮ್ಮ ಭಾಷಣದಲ್ಲಿ ದರಿದ್ರ ನಾರಾಯಣನ ಸಂದೇಶವನ್ನು ಕೆಲಸಗಾರರಿಗೆ ಹೇಳಿದರು. ಕೆಲಸಗಾರರೆಲ್ಲರೂ ಖಾದಿ ತೊಡಬೇಕು ಅದಕ್ಕೆ ಸಹಾಯ ಮಾಡಬೇಕು ಎಂದು ಹೇಳಿದರು. ಕೊಳ್ಳುವ ಗಿರಾಕಿ ಇಲ್ಲದೆ ಹೋದರೆ ನಿಮ್ಮ ಕಾರಖಾನೆ ನಿಂತು ಹೋಗುತ್ತದೆ. ಅದೇ ರೀತಿ ಖಾದಿಯನ್ನು ನೀವು ಕೊಳ್ಳದೇ ಹೋದರೆ, ತೊಡದೇ ಹೋದರೆ ಖಾದಿ ಚಳುವಳಿಯು ಅನುತ್ಪಾದಕ ಆಗಿಹೋಗುತ್ತದೆ.

*(ಯಂಗ್ ಇಂಡಿಯಾ: ೧-೯-೧೯೨೭)*

**ಚಿಕ್ಕಮಗಳೂರು:**

ಗಾಂಧೀಜಿ ಅಲ್ಲಿಂದ ಮುಂದೆ ಚಿಕ್ಕಮಗಳೂರಿಗೆ ಹೋದರು. ಅಲ್ಲಿ ೨ ದಿನ ಇದ್ದರು. ದಾರಿಯಲ್ಲಿ ತರೀಕೆರೆ, ಬೀರೂರು, ಕಡೂರುಗಳಲ್ಲಿ ನಿಧಿಯನ್ನು ಸ್ವೀಕರಿಸಿದರು. ಅಲ್ಲಿ ಗಾಂಧೀಜಿ

ಎರಡು ದಿನ ಬಿಡಾರ ಮಾಡಿದರು. ಆಗ ಅಲ್ಲಿನ ಜಿಲ್ಲಾಧಿಕಾರಿ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು; ಶ್ರೀ ಎಂ.ಎಲ್. ನಾಗಪ್ಪಶೆಟ್ಟರೂ ಇನ್ನೂ ಅನೇಕರೂ ಕಾಫಿತೋಟಗಾರರೂ ಸೇರಿ ಒಂದು ಬಲವಾದ ಸ್ವಾಗತ ಸಮಿತಿಯನ್ನು ರಚಿಸಿದ್ದರು. ಅಲ್ಲಿನ ಸಭೆ ಬಹಳ ಭವ್ಯವಾಗಿತ್ತು. ಸುಮಾರು ಐದು ಸಾವಿರ ರೂಪಾಯಿ ನಿಧಿ ಸಂಗ್ರಹವಾಗಿತ್ತು. ಸಭೆಯಲ್ಲಿ ಹೆಂಗಸರಿಗೇ ಬೇರೆ ಸ್ಥಳ ಮಾಡಿತ್ತು. ಆ ಆವರಣದಲ್ಲಿ ಆದಿಕರ್ನಾಟಕ ಹೆಂಗಸರೂ ಇದ್ದರು. ಉಚ್ಚವರ್ಣದವರಿಗೆ ಸ್ವಲ್ಪ ದೂರವಾಗಿ ಅವರು ಬೇರೆ ಕುಳಿತಿದ್ದರು. ಈ ಅಸ್ಪೃಶ್ಯ ಹೆಂಗಸರ ಸಂಪರ್ಕದಿಂದ ತಾವು ಪತಿತರಾಗುವ ಭಯ ಉಂಟೇ ಎಂದು ಉಳಿದ ಹೆಂಗಸರನ್ನು ಗಾಂಧೀಜಿ ಕೇಳಿದರು. ಯಾರೂ ವಿರೋಧಿಸಲಿಲ್ಲ. ಆದಿಕರ್ನಾಟಕ ಹೆಂಗಸರು ಎದ್ದು ಬಂದು ಅವರ ನಡುವೆ ಕುಳಿತುಕೊಂಡಾಗ, ಸವರ್ಣಸ್ತ್ರೀಯರಲ್ಲಿ ಏನೂ ಗಲಿಬಿಲಿ ಆಗಲಿಲ್ಲ.

**ಬೇಲೂರು:**

೨೦ನೇ ತಾರೀಖು ಗಾಂಧೀಜಿಯೂ ಅವರ ಪರಿವಾರವೂ ಬೇಲೂರಿಗೆ ಭೇಟಿ ಕೊಟ್ಟರು. ೧೨ನೆಯ ಶತಮಾನದಲ್ಲಿ ವಿಷ್ಣುವರ್ಧನ ಮಹಾರಾಜ ಕಟ್ಟಿಸಿದ್ದ ಸುಪ್ರಸಿದ್ಧ ದೇವಾಲಯಕ್ಕೆ ಹೋಗಿದ್ದರು ಇಲ್ಲಿನ ಅದ್ಭುತ ಶಿಲಾಶಿಲ್ಪ, ಅದರಲ್ಲೂ ಶಿಲಾಬಾಲಿಕೆಯರ ಮೂರ್ತಿಗಳು ಅತ್ಯದ್ಭುತ, ಅದ್ವಿತೀಯ. ಭರತ ಖಂಡದಲ್ಲಿಯೇ ಇದನ್ನು ಮೀರಿಸಿದ ಶಿಲಾಶಿಲ್ಪ ಮತ್ತೊಂದು ಕಡೆ ಇಲ್ಲ.

**ಪ್ರಾಚ್ಯ ಸಂಶೋಧಕರಿಗೆ ಕಿವಿ ಮಾತು:**

ಮಹಾದೇವ ದೇಸಾಯಿ ಬರೆದಿದ್ದಾರೆ–ಈ ಶಿಲಾಶಿಲ್ಪದ ಬಗ್ಗೆ ಮೈಸೂರಿನವರಿಗೆ ಹೆಮ್ಮೆ ಇರಬೇಕಾದುದು ಸಹಜ. ಇಲ್ಲಿ ಚಾಲುಕ್ಯ ಶಿಲ್ಪಕಲೆ ಪರಾಕಾಷ್ಠೆಯನ್ನು ಮುಟ್ಟಿದೆ. ಶಿಲ್ಪದೃಷ್ಟಿಯಿಂದ ಹೊಯ್ಸಳ ರಾಜರ ರಾಜಧಾನಿಯಾದ ಹಳೇಬೀಡಿನ ದೇವಸ್ಥಾನ ಹೆಚ್ಚು ಪರಿಪೂರ್ಣ. ಇಲ್ಲಿನ ಶಿಲಾಸ್ತಂಭದ ಮೇಲೆ ಕೆತ್ತಿರುವ ಮೂರ್ತಿಗಳ ಸೂಕ್ಷ್ಮತೆ ಅಜಂತ ಚಿತ್ರಕಲೆಯನ್ನು ನೆನಪಿಗೆ ತರುತ್ತದೆ. ಮಹಾಭಾರತದ ಮತ್ತು ಇನ್ನಿತರ ಪುರಾಣಗಳ ಕತೆಗಳನ್ನು ಇಲ್ಲಿ ಕಲ್ಲಿನಲ್ಲಿ ಕೆತ್ತಿದ್ದಿದೆ. ಬೇಲೂರು–ಹಳೇಬೀಡುಗಳ ಈ ಅದ್ಭುತ ಶಿಲ್ಪವನ್ನು ಎಲ್ಲಾ ಕಲಾಭ್ಯಾಸಿಗಳೂ ಬಂದು ದಿನಗಟ್ಟಲೆ ನಿರೀಕ್ಷಿಸಿ ಅಭ್ಯಾಸ ಮಾಡಬೇಕಾದುದು ಅಗತ್ಯ. ಅಷ್ಟು ಸೂಕ್ಷ್ಮ ಇಲ್ಲಿ ತೋರಿದ ಕಲಾಕೌಶಲ್ಯ

ಇದನ್ನು ಕಾಪಾಡಲು ಒಂದು ಶಾಸನವೇ ಇದೆ. ಪ್ರಾಕ್ತನ ವಿಮರ್ಶನ ವಿಚಕ್ಷಣ ರಾ. ನರಸಿಂಹಾಚಾರ್ಯರಂಥವರು ಇದರ ಬಗ್ಗೆ ಬೇಕಾದಷ್ಟು ಬರೆದಿದ್ದಾರೆ. ಆದರೆ ಈ ದೇವಾಲಯಗಳು ಅಷ್ಟು ರಕ್ಷಿತವಾಗಿಲ್ಲ. ಬೇಲೂರಿನ ಹೊರ ದೇವಾಲಯಗಳು ಬಹಳ ಅಸ್ವಚ್ಛ. ಪ್ರಧಾನ ದೇವಾಲಯದ ಗೋಡೆಯ ಮೇಲಿನ ಪ್ರತಿಮೆಗಳನ್ನು ಕಲಾದ್ರೋಹಿಗಳು ಭಂಗಗೊಳಿಸಿದ್ದಾರೆ. ಈಗಲೂ ಹಳೇಬೀಡಿನಲ್ಲಿ ಇವರ ಕಾಟ ತಪ್ಪಿಲ್ಲ. ಹಳೇಬೀಡು ದೇವಾಲಯದ ಮುಂದೆ ಇರುವ ಭವ್ಯವಾದ ನಂದಿ ವಿಗ್ರಹಗಳು ಕಲಾದ್ರೋಹಿಗಳ ಕೈಗೆ ಸಿಕ್ಕು, ಬಹಳ ಗಾಸಿಯಾಗಿವೆ. ಹಿಂದೂ, ಮುಸಲ್ಮಾನ, ಕ್ರಿಶ್ಚಿಯನ್ ಎಂಬ ಭೇದವಿಲ್ಲದೆ

ಬಂದವರು ಎಲ್ಲರೂ ತಮ್ಮ ಹೆಸರುಗಳನ್ನೂ, ತಮ್ಮ ಆಕೃತಿಗಳನ್ನೂ ನಯವಾಗಿ ಉಜ್ಜಿ ಮಾಡಿದ ಈ ನಂದಿ ವಿಗ್ರಹಗಳ ಮೇಲೆ ಕೆತ್ತುವ ಹವ್ಯಾಸಕ್ಕೆ ಬಿದ್ದಿದ್ದಾರೆ. ದೇವಾಲಯದ ಆವರಣದಲ್ಲಿ ಮುಳ್ಳಿನ ಪೊದೆ ಬೆಳೆದಿದೆ. ಅನೇಕ ಪ್ರಾಚೀನ ಅವಶೇಷಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಇಲ್ಲಿ ಯಾರೂ ಕಾವಲುಗಾರರೇ ಇಲ್ಲ. ಯಾರು ಬೇಕಾದರೂ ಒಂದು ಚೂರು ಕಲ್ಲನ್ನು ಒಡೆದು ತೆಗೆದುಕೊಂಡು ಹೋಗಬಹುದು. ಶ್ರೀರಂಗಪಟ್ಟಣದಲ್ಲಿರುವ ಸುಲ್ತಾನರ ಅರಮನೆಯನ್ನೂ ಇದನ್ನೂ ಹೋಲಿಸಿ ನೋಡಿದರೆ ವ್ಯತ್ಯಾಸ ತಿಳಿಯುತ್ತದೆ. ಸುಲ್ತಾನನ ಅರಮನೆ ನಿನ್ನೆಯೋ ಮೊನ್ನೆಯೋ ಕಟ್ಟಿದ ಹಾಗೆ ಅಚ್ಚುಕಟ್ಟಾಗಿದೆ. ಶ್ರೀರಂಗಪಟ್ಟಣದ ಅವಶೇಷಗಳಿಗಿಂತ ಹಳೇಬೀಡಿನ ಈ ಅವಶೇಷಗಳು ಐತಿಹಾಸಿಕವಾಗಿ ಹೆಚ್ಚು ಮಹತ್ವದವು. ಪ್ರಾಚ್ಯ ಸಂಶೋಧನ ಖಾತೆಗೆ ಈ ಎಲ್ಲಾ ಪ್ರಾಚೀನ ಕಟ್ಟಡಗಳೂ ಪವಿತ್ರವಾದ ಸ್ಥಾನಗಳಿದ್ದಂತೆ. ಅವನ್ನು ಅವರು ಇನ್ನು ಮೇಲಾದರೂ ಕಲಾದ್ರೋಹಿಗಳ ಕೈಗೆ ಸಿಗದಂತೆ ನೋಡಿಕೊಳ್ಳಬೇಕು.

**ಅರಸೀಕೆರೆ:**

ಆಗಸ್ಟ್ ೨೦ರ ದಿನ ಗಾಂಧೀಜಿ ಅರಸೀಕೆರೆಗೆ ಬಂದರು. ಅವತ್ತು ಕೃಷ್ಣಜನ್ಮಾಷ್ಟಮಿ. ಅವತ್ತಿನ ಸಭೆಯಲ್ಲಿ ಗಾಂಧೀಜಿ ಜನತೆಗೆ ಭಗವದ್ಗೀತೆಯನ್ನು ಓದಲು ಹೇಳಿದರು. ಕೃಷ್ಣನ ಸಂದೇಶದ ಬಗ್ಗೆ ಮಾತನಾಡುತ್ತ ಗಾಂಧೀಜಿ ಹೇಳಿದರು: 'ಶ್ರೀಕೃಷ್ಣನ ಜೀವನದಿಂದ ನಾವು ಏನು ಅರಿತುಕೊಳ್ಳಬೇಕೋ ನಮಗೆ ಗೊತ್ತಿಲ್ಲ. ಭಗವದ್ಗೀತೆಯನ್ನು ನಾನು ಓದುವದಿಲ್ಲ. ನಮ್ಮ ಮಕ್ಕಳಿಗೆ ಅದನ್ನು ಕಲಿಸುವ ಪ್ರಯತ್ನ ಮಾಡುವುದಿಲ್ಲ. ಯಾವ ಜಾತಿ, ಮತ, ಪಂಥಕ್ಕೆ ಸೇರಿರಲಿ, ಯಾವ ದೇಶ ಯಾವ ಕಾಲ ಆಗಿರಲಿ–ಎಲ್ಲರೂ ಶ್ರದ್ಧಾಭಕ್ತಿಗಳಿಂದ ಓದಬೇಕಾದಂಥ ಅಲೌಕಿಕ ಗ್ರಂಥ ಅದು. ಪ್ರತಿಯೊಬ್ಬರೂ ತಮ್ಮ ತಮ್ಮ ಧರ್ಮದ ಮೂಲತತ್ವಗಳನ್ನು ಕಾಣಬಹುದು. ಪ್ರತಿಯೊಂದು ಜನ್ಮಾಷ್ಟಮಿಯ ದಿನವೂ ನಾನು ಶ್ರೀ ಕೃಷ್ಣನನ್ನು ನೆನೆದರೆ, ಭಗವದ್ಗೀತೆಯನ್ನು ಓದಿದರೆ, ಅದರ ಉಪದೇಶದಂತೆ ನಡೆಯಲು ತೀರ್ಮಾನಿಸಿದರೆ, ಈಗಿನ ದುಃಸ್ಥಿತಿ ನಮಗೆ ಬರುತ್ತಿರಲಿಲ್ಲ. ತನ್ನ ಯಾವ ಜೀವನವೂ ಜನ ಸೇವೆಯನ್ನು ಮಾಡುತ್ತ ಬಂದ ಜನಸೇವಕ ಕೃಷ್ಣ. ಮನಸ್ಸು ಮಾಡಿದ್ದರೆ ಕುರುಕ್ಷೇತ್ರದಲ್ಲಿ ಯುದ್ಧ ಮಾಡಬಹುದಾಗಿತ್ತು. ಆದರೆ ಅರ್ಜುನನ ಸಾರಥಿಯಾಗಿ ಇರುವುದರಲ್ಲೇ ತೃಪ್ತಿ ಪಟ್ಟುಕೊಂಡ. ಕೃಷ್ಣನ ಇಡೀ ಬದುಕೇ ಕರ್ಮದ ಒಂದು ಅಖಂಡ ಗೀತೆ. ಗರ್ವಿಷ್ಠ ದುರ್ಯೋಧನನ ಹಂಗಿನ ಅರಮನೆಯ ಊಟಕ್ಕಿಂತ ವಿದುರನ ಮನೆಯ ಗಂಜಿಯೇ ಲೇಸು ಎಂದ ಅವನು.

'ಚಿಕ್ಕಂದಿನಲ್ಲಿ ಅವನು ದನ ಕಾಯುತ್ತಿದ್ದ. ಈಗಲೂ ಅವನನ್ನು ಗೋಪಾಲ ಎಂದೇ ನಾವು ಕರೆಯುತ್ತೇವೆ. ಆದರೆ ಅವನ ಭಕ್ತರು ನಾವು ಇವತ್ತು ಗೋವನ್ನು ಮರೆತಿದ್ದೇವೆ. ಅಸಡ್ಡೆ ಮಾಡಿದ್ದೇವೆ. ಆದಿಕರ್ನಾಟಕರು ಗೋವುಗಳನ್ನು ಕಡಿಯುತ್ತಾರೆ. ಗೋಮಾಂಸ ತಿನ್ನುತ್ತಾರೆ. ಇದರಿಂದ ನಮ್ಮ ಮಕ್ಕಳಿಗೆ ಮತ್ತು ರೋಗಿಗಳಿಗೆ ಹಾಲೂ ಇಲ್ಲದೆ ಹೋಗಿದೆ. ಕೃಷ್ಣನಿಗೆ ನಿದ್ದೆಯೂ ತಿಳಿಯದು. ಸೋಮಾರಿತನವೂ ತಿಳಿಯದು. ಇಡೀ ಪ್ರಪಂಚದ ಯೋಗಕ್ಷೇಮವನ್ನು ವಹಿಸಿಕೊಂಡು, ತಾನು ನಿದ್ದೆಯನ್ನು ಬಿಟ್ಟ. ಜಗತ್ತಿಗೆ ಸಾಕ್ಷಿಯಾಗಿ

ನಿಂತ. ನಾವು ಅವನ ಸಂತಾನ ಆದರೂ ಸೋಮಾರಿಗಳಾಗಿ ನಮ್ಮ ಕೈಗಳ ಉಪಯೋಗವನ್ನೇ ಮರೆತಿದ್ದೇವೆ. ಭಗವದ್ಗೀತೆಯಲ್ಲಿ ಭಕ್ತಿಮಾರ್ಗವನ್ನು–ಕರ್ಮಮಾರ್ಗವನ್ನು ಕೃಷ್ಣ ತೋರಿಸಿದ್ದಾನೆ. ಭಕ್ತರಾಗಲಿ, ಜ್ಞಾನಿಗಳಾಗಲಿ, ಏನೂ ಆಗಲು ಕರ್ಮವೇ ನಮ್ಮ ದಾರಿ–ಎಂದು ಲೋಕಮಾನ್ಯ ತಿಲಕರು ತೋರಿಸಿದ್ದಾರೆ. ಆ ಕರ್ಮ ಪರಾರ್ಥ ಆಗಬೇಕು. ಸ್ವಂತಕ್ಕಾಗಿ ಅಲ್ಲ. ಸ್ವಂತಕ್ಕಾಗಿ ಮಾಡಿದ ಕರ್ಮ ಬಂಧನಕಾರಕ ಪರಾರ್ಥವಾಗಿ ಮಾಡಿದ ಕರ್ಮ ಬಂಧಮುಕ್ತಿಕಾರಕ. ದೇವರ ಹೆಸರಿನಲ್ಲಿ ದಟ್ಟ ದರಿದ್ರರಿಗೆ ಏನಾದರೂ ಸಹಾಯ ಮಾಡಬೇಕು ಎಂದರೆ ರಾಟೆಯೇ ನಮಗೆ ದಾರಿ. ಸುಮ್ಮನೆ ಇರುವ ಬದಲು ಕ್ರಿಯಾಶೀಲರನ್ನಾಗಿ ಮಾಡುವ ವಿಧಾನ ಇದು. ಇದೊಂದೇ ಅಂಥ ವಿಧಾನ. ನಿಜವಾದ ಭಕ್ತರು ಆಗಬೇಕು ಎಂದರೆ ಯಾವ ಭೇದವನ್ನೂ ನಾವು ತೋರಿಸಬಾರದು. ಉಚ್ಚವರ್ಣದವರಿಗೂ, ಅಂತ್ಯವರ್ಣದವರಿಗೂ ಯಾವ ಭೇದವನ್ನೂ ಮಾಡದೇ ಇರುವವನೇ ನಿಜವಾದ ಭಕ್ತ ಎಂದು ಕೃಷ್ಣ ಹೇಳಿದ್ದಾನೆ. ಅದು ನಿಜ ಆದರೆ ಅಸ್ಪೃಶ್ಯತೆಗೆ ಹಿಂದೂ ಧರ್ಮದಲ್ಲಿ ಸ್ಥಾನ ಏನೂ ಇಲ್ಲ. ನಿಮ್ಮಲ್ಲಿ ಈ ಮೂಢಭಕ್ತಿ ಇದ್ದರೆ ಕೃಷ್ಣಜನ್ಮಾಷ್ಟಮಿಯಂಥ ಈ ಪವಿತ್ರ ದಿನದಲ್ಲಿ ಶುಚಿ ಮಾಡಿಕೊಳ್ಳಿ. ಗೀತೆಯನ್ನು ನಂಬಿದವನಿಗೆ ಹಿಂದೂ ಮುಸಲ್ಮಾನ ಯಾವ ಭೇದವೂ ಇರಬಾರದು. ಯಾವ ಹೆಸರಿನಿಂದ ಅವನನ್ನು ಪೂಜಿಸಿದರೂ ಎಲ್ಲವೂ ಅವನಿಗೆ ಮುಟ್ಟುತ್ತದೆ ಎಂದು ಕೃಷ್ಣ ಹೇಳಿದ್ದಾನೆ. ಗೀತೆಯಲ್ಲಿ ಭಕ್ತಿ, ಕರ್ಮ ಎಂದರೆ ಪ್ರೇಮ. ಕರ್ಮವನ್ನು ಹೇಳಿರುವ ರೀತಿಯಲ್ಲಿ ಮನುಷ್ಯನನ್ನು ಮನುಷ್ಯ ತಿರಸ್ಕರಿಸುವ ಅವಕಾಶವೇ ಇಲ್ಲ.'

*(ಯಂಗ್ ಇಂಡಿಯಾ: ೧-೯-೧೯೨೭)*

**ಕೃಷ್ಣಸ್ವಾಮಿ ವ್ಯಾಯಾಮಶಾಲೆ ಉದ್ಘಾಟನೆ:**

ದೇಶೀಯ ವಿದ್ಯಾಶಾಲೆಯ ತರುಣರು ಸ್ವಯಂ ಸೇವಕರಾಗಿ ಗಾಂಧೀಜಿಗೂ ಪರಿವಾರಕ್ಕೂ ನಂದೀಬೆಟ್ಟದ ಮೇಲೂ, ಕುಮಾರಾ ಪಾರ್ಕಿನಲ್ಲೂ ಸೇವೆ ಸಲ್ಲಿಸುತ್ತಿದ್ದರು. ದೇಶೀಯ ವಿದ್ಯಾಶಾಲೆಗೆ ಗಾಂಧೀಜಿಯವರ ಸಂಪರ್ಕದ ಕುರುಹು ಇರಬೇಕೆಂದು ರಾಜಗೋಪಾಲಾಚಾರ್ಯರು ಬಯಸಿದರು. ನಿವೃತ್ತ ಸುಪರಿಂಟೆಂಡಿಂಗ್ ಇಂಜಿನಿಯರಾದ ಎಸ್. ಸುಬ್ಬರಾಯರು ಅವರ ಅಲ್ಪಾಯುವಾದ ಕೃಷ್ಣಸ್ವಾಮಿಯ ಹೆಸರಿನಲ್ಲಿ ಒಂದು ವ್ಯಾಯಾಮ ಶಾಲೆಯನ್ನು ಕಟ್ಟಿಸಿಕೊಡಬೇಕೆಂದು ಸಂಕಲ್ಪಿಸಿದ್ದರು. ಗಾಂಧೀಜಿ ಬೆಂಗಳೂರನ್ನು ಬಿಡುವುದಕ್ಕೆ ಪೂರ್ವದಲ್ಲಿ ಈ ಕಟ್ಟಡ ಸಿದ್ಧವಾಗಬೇಕೆಂದು ನಿಶ್ಚಯಿಸಲಾಯಿತು. ಸುಮಾರು ೧೫ ದಿನಗಳಲ್ಲಿ ಕಟ್ಟಡ ಕಟ್ಟಲಾಯಿತು. ಆಗಸ್ಟ್ ೨೮, ೧೯೨೭ ಬೆಳಿಗ್ಗೆ ೯ ಗಂಟೆಗೆ ಅದರ ಉದ್ಘಾಟನೆಯನ್ನು ಗಾಂಧೀಜಿ ನೆರವೇರಿಸಿದರು. ಶಾಲೆಯ ಅಧ್ಯಕ್ಷರಾಗಿದ್ದ ಗರುಡಾಚಾರ್ಯರು ವರದಿಯನ್ನು ಓದಿದರು. ಶಾಲೆಯ ಹುಡುಗರು ಸ್ವಯಂ ಸೇವಕರಾಗಿ ಬೆಳಗಾಂವ ಕಾಂಗ್ರೆಸ್ಸಿನಲ್ಲಿ ಸಲ್ಲಿಸಿದ ಸೇವೆಯನ್ನು ಪ್ರಸ್ತಾಪಿಸಿದರು. ವ್ಯಾಯಾಮ ಶಿಕ್ಷಣವನ್ನು ಪಡೆಯಲು ಅಧ್ಯಾಪಕರನ್ನು (ಕೆ.ಎ. ವೆಂಕಟರಾಮಯ್ಯನವರನ್ನು) ಅಮರಾವತಿಗೆ ಕಳಿಸಿರುವುದನ್ನು ತಿಳಿಸಿದರು. ವ್ಯಾಯಾಮ ಶಾಲೆಯಲ್ಲಿ ಮಾರುತಿಯ ಒಂದು ಪಟ ಇಡಲಾಯಿತು. ವ್ಯಾಯಾಮದ ಉದ್ಘಾಟನೆಯನ್ನು ಮಾಡಿ ಗಾಂಧೀಜಿ ಮಾರುತಿಯಂತೆ ಇಲ್ಲಿನ ವಿದ್ಯಾರ್ಥಿಗಳು ನಿಜವಾದ ಬ್ರಹ್ಮಚಾರಿಗಳಾಗಿ

ಸೇವಾತತ್ಪರರಾಗಬೇಕೆಂದು ಹಾರೈಸಿದರು. ಒಬ್ಬ ಅಧ್ಯಾಪಕರನ್ನು ಅಮರಾವತಿಗೆ ಕಳುಹಿಸುವುದಕ್ಕೆ ಬದಲು ಅಲ್ಲಿಂದಲೇ ತಜ್ಞರನ್ನು ಕರೆಯಿಸಿ ಕೆಲವರಿಗೆ ತರಬೇತನ್ನು ಕೊಡಿಸಿದ್ದರೆ ಚೆನ್ನಾಗಿರುತ್ತಿತ್ತೆಂದು ಹೇಳಿದರು.

**ಶ್ರೀಮತಿ ತಿರುಮಲೆ ರಾಜಮ್ಮನವರು:**

ಈ ಸಮಾರಂಭದಲ್ಲಿ ಶ್ರೀಮತಿ ತಿರುಮಲೆ ರಾಜಮ್ಮನವರು ಗಾಂಧೀಜಿಗೆ ತುಂಬಾ ಇಷ್ಟವಾದ 'ವೈಷ್ಣವಜನತೋ' ಎಂಬ ಗೀತೆಯನ್ನು ಮಾಯಾಮಾಳವಗೌಳದಲ್ಲಿ ಹಾಡಿದರು. ಕೊನೆಯಲ್ಲಿ 'ವಂದೇ ಮಾತರಂ' ಹಾಡಿದಾಗ ಸಂತೋಷಪಟ್ಟು ಮರುದಿನ ಬರುವಂತೆ ಹೇಳಿದರು. ಗಾಂಧೀಜಿ ಜೊತೆಯಲ್ಲಿದ್ದ ಮಹಾದೇವಭಾಯಿ ಬಂದು ಈ ವಿಚಾರವನ್ನು ಸೂಕ್ಷ್ಮವಾಗಿ ಕಿವಿಯಲ್ಲಿ ಹೇಳಿದರು. ಮರುದಿನ ಸೋಮವಾರ. ಗಾಂಧೀಜಿಗೆ ಮೌನದಿನ. ಮಾತಾಡಲು ಬಾಧಕವೇ ವಿನಾ ಕೇಳಲಿಕ್ಕೆ ಏನು ಬಾಧಕ? ನೀವು ಬಂದುಬಿಡಿ ಎಂದು ರಾಜಗೋಪಾಲಾಚಾರ್ಯರು ರಾಜಮ್ಮನವರಿಗೆ ತಿಳಿಸಿದರು.

ಮಾರನೇ ದಿನ ರಾಜಮ್ಮನವರು ಗಾಂಧೀಜಿಯ ಬಿಡಾರಕ್ಕೆ ಬಂದಾಗ ಕವಿ ಗಾಯಕ ಹರೀಂದ್ರನಾಥ ಚಟ್ಟೋಪಾಧ್ಯಾಯರೂ, ಕಮಲಾದೇವಿಯವರೂ ಬಂದಿದ್ದರು. ಹರೀಂದ್ರನಾಥರ ಕೈಯಲ್ಲಿ ಒಂದು ತಂಬೂರಿ. ಮೊದಲೊಂದು ಕಾಲು ಗಂಟೆ ರಾಜಮ್ಮನವರು ಹಾಡಿದ ಮೇಲೆ ಗಾಂಧೀಜಿ ನಿಲ್ಲಿಸಲು ಕೈಸನ್ನೆ ಮಾಡಿ, ಹರೀಂದ್ರನಾಥರನ್ನು ಹಾಡಲು ಸೂಚಿಸಿದರು. ಅವರ ಸರದಿ ಮುಗಿದ ಮೇಲೆ ಮತ್ತೆ ಅರ್ಧಗಂಟೆ ರಾಜಮ್ಮನವರಿಗೆ ಕೊಟ್ಟರು. ಹಿಂದಿನ ದಿನದ ಹಾಗೆ ಮಾಡದೆ ಮರುದಿನ 'ವೈಷ್ಣವ ಜನತೋ' ಹಾಡನ್ನು ಶ್ರೀರಾಗದಲ್ಲಿ ರಾಜಮ್ಮನವರು ಹಾಡಿದರು. ಗಾಂಧೀಜಿ ತಲೆ ಅಲ್ಲಾಡಿಸುತ್ತಿದ್ದರು. ಮುಖದಲ್ಲಿ ಸಮಾಧಾನ ಮಿನುಗುತ್ತಿತ್ತು. ಆ ಮೇಲೆ ಮತ್ತೆ ಹರೀಂದ್ರನಾಥರು ಹಾಡಿದರು. ಗಾಂಧೀಜಿ ಒಂದು ಸಣ್ಣ ಚೀಟಿಯನ್ನು ಬರೆದು ಕಮಲಾದೇವಿ ಕೈಗೆ ಕೊಟ್ಟರು. ಅದರಲ್ಲಿ ಹೀಗೆ ಬರೆದಿತ್ತು: 'ಇಬ್ಬರು ನಿಪುಣರು ಈಗ ನನ್ನ ಮುಂದೆ ತಮ್ಮ ಕಲಾಕೌಶಲ್ಯ ತೋರಿದ್ದಾರೆ. ಪತಿಯ ಕೌಶಲ್ಯವನ್ನು ಕಂಡು ಸತಿ ಒಬ್ಬಳು ಹಿಗ್ಗುತ್ತಿದ್ದಾಳೆ. ಸತಿಯ ಕೌಶಲ್ಯವನ್ನು ಕಂಡು ಪತಿ ಒಬ್ಬ ಹೆಮ್ಮೆ ಪಡುತ್ತಿದ್ದಾನೆ. ಈ ಮಾತನ್ನು ಕನ್ನಡಕ್ಕೆ ಭಾಷಾಂತರಿಸಿ ನಿನ್ನ ಸಹೋದರಿಗೆ ತಿಳಿಸು.'

**ಮತ್ತೆ ಬೆಂಗಳೂರಿಗೆ:**

ಮೂರುವಾರ ಪ್ರವಾಸ ಮಾಡಿ, ೧೯೨೭ ಆಗಸ್ಟ್ ೨೧ರ ದಿನ ಗಾಂಧೀಜಿ ಮತ್ತೆ ಬೆಂಗಳೂರಿಗೆ ಬಂದರು. ನಡುವೆ ಮದರಾಸ ಸೀಮೆಯ ಹೊಸೂರು, ಕೃಷ್ಣಗಿರಿಗಳಿಗೆ ಹೋಗಿ ಬಂದು, ಆಗಸ್ಟ್ ೨೧ನೇ ದಿನ ವೆಲ್ಲೂರಿಗೆ ಗಾಂಧೀಜಿ ಪ್ರಯಾಣ ಮಾಡಿದರು. ಅದರ ಹಿಂದಿನ ದಿನ ಲಾಲಬಾಗಿನ ಗಾಜಿನ ಮನೆಯಲ್ಲಿ ಒಂದು ಬೃಹತ್ ಸಭೆ ಆಯಿತು. ಅಂಥ ಸಭೆಯನ್ನು ಬೆಂಗಳೂರಿನ ಜನ ಹಿಂದೆ ಎಂದೂ ನೋಡಿರಲಿಲ್ಲ. ಸುಮಾರು ೫೦ ಸಾವಿರ ಜನ ಇದ್ದರು. ಜಿಲ್ಲಾ ಸ್ವಾಗತ ಸಮಿತಿಗಳ ಅಧ್ಯಕ್ಷರೂ, ಕಾರ್ಯದರ್ಶಿಗಳೂ ಬಂದಿದ್ದರು. ದಿವಾನ್ ಮಿರ್ಜಾ ಇಸ್ಮಾಯಿಲರೂ, ಸಚಿವ ಮಂಡಲಿಯ ಚಾಂಡಿ, ಎಂ.ಎನ್. ಕೃಷ್ಣರಾಯರೂ,

ಶ್ರೇಷ್ಠ ಕಾರ್ಯದರ್ಶಿ ಡಿಸೋಜ, ಎಲ್ಲ ಸರಕಾರಿ ಶಾಖೆಯ ಮುಖ್ಯರೂ, ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರೂ, ಶ್ರೀ ಕೆ.ಪಿ. ಪುಟ್ಟಣ್ಣಶೆಟ್ಟರೂ, ಅವರ ಧರ್ಮಪತ್ನಿಯೂ, ಶ್ರೀಮತಿ ಪಾರ್ವತಮ್ಮ ಚಂದ್ರಶೇಖರ ಅವರೂ, ರಾಜಗೋಪಾಲಾಚಾರ್ಯರೂ, ದೇಶಪಾಂಡೆ ಗಂಗಾಧರರಾಯರೂ, ಅವರಿಗಾಗಿ ಸುಸಜ್ಜಿತವಾಗಿ ಅಲಂಕೃತವಾಗಿದ್ದ ವೇದಿಕೆಯ ಮೇಲೆ ಕುಳಿತಿದ್ದರು. ಸಂಸ್ಥಾನದ ಕೇಂದ್ರ ಸ್ವಾಗತ ಸಮಿತಿಯ ಅಧ್ಯಕ್ಷ ಮೀರ್ ಹಂಜಾ ಹುಸೇನ್ ಸಾಹೇಬರೂ ಅಧ್ಯಕ್ಷತೆ ವಹಿಸಿದ್ದರು. ಆ ಸಂದರ್ಭಕ್ಕಾಗಿ ಮೈಸೂರಿನ ಕೆತ್ತನೆಯ ಕೆಲಸದಿಂದ ತುಂಬಿದ ತುಂಬಾ ಸೊಗಸಾದ ಗಂಧ ಮತ್ತು ದಂತಗಳಿಂದ ಮಾಡಿದ ಒಂದು ಕರಂಡಕದಲ್ಲಿ ಬಿನ್ನವತ್ತಳೆ ಇಟ್ಟು ಅದನ್ನು ಅರ್ಪಿಸಲಾಯಿತು. ಅದರ ಜೊತೆಗೆ ಹತ್ತು ಸಾವಿರ ನಿಧಿಯನ್ನೂ ಕೊಟ್ಟರು. ಖಾದೀಧಾರಿ ಸ್ವಯಂ ಸೇವಕರು ಬೆಂಗಳೂರಿನ ದೇಶೀಯ ವಿದ್ಯಾಶಾಲೆಯಿಂದ ಬಂದು ಎಲ್ಲ ವ್ಯವಸ್ಥೆಯನ್ನೂ ಮಾಡಿದರು. ದೇಶೀಯ ವಿದ್ಯಾಶಾಲೆಯ ಮುಖ್ಯಾಧ್ಯಾಪಕರಾಗಿದ್ದ ಶ್ರೀ ಸಂಪತ್‌ಗಿರಿರಾಯರೇ ಸ್ವಯಂ ಸೇವಕರ ಮುಖಂಡರಾಗಿ ನಿಂತಿದ್ದರು. ಶ್ರೀರಾಮ ಅವರ ಮಾರ್ಗದರ್ಶನದಲ್ಲಿ ಬಾಲಚಮೂಗಳೂ ಬಂದಿದ್ದರು. ಎಷ್ಟೇ ಜಾಗರೂಕತೆಯಿಂದ ಏರ್ಪಾಟು ಮಾಡಿದರೂ ಜಮಖಿಂಡಿ ಭೀಮರಾಯರೂ, ಎಚ್. ವಿ. ಸುಬ್ರಹ್ಮಣ್ಯಂ ಅವರೂ ಹೇಗೋ ಒಳನುಗ್ಗಿ ಹಂಜಾ ಹುಸೇನ್ ಸಾಹೇಬರು ಅಧ್ಯಕ್ಷತೆ ಮಾಡಬಾರದು ಎಂದು ಗುಲ್ಲುಮಾಡಿದರು. ಕೇಂದ್ರ ಸ್ವಾಗತ ಸಮಿತಿಯ ಕಾರ್ಯದರ್ಶಿಗಳು ದಿ. ಭಾಷ್ಯಂ ಮತ್ತು ಶ್ರೀಲಕ್ಷ್ಮೀನರಸು ಅವರು ಬೇಡಿಕೊಂಡರೂ, ಗಾಂಧೀಜಿಯೇ ಹೇಳಿದರೂ ಅವರ ಕೂಗಾಟ ನಿಲ್ಲಲಿಲ್ಲ. ಬಾಲಚಮೂಗಳೂ, ಸ್ವಯಂ ಸೇವಕರೂ ಸೇರಿ ಅವರನ್ನು ಸಭೆಯಿಂದ ಹೊರಗೆ ಹಾಕಿದ ಮೇಲೆ, ಹಂಜಾ ಹುಸೇನ್ ಸಾಹೇಬರು ಬಿನ್ನವತ್ತಳೆಯನ್ನು ಓದಿ, ಅದನ್ನೂ ಕರಂಡಕವನ್ನೂ ನಿಧಿಯನ್ನೂ ಗಾಂಧೀಜಿಗೆ ಅರ್ಪಿಸಿದರು. ಗಾಂಧೀಜಿಯ ಭಾಷಣ ಇಂಗ್ಲೀಷಿನಲ್ಲಿ ಆಯಿತು. ಅದನ್ನು ಗಂಗಾಧರರಾಯರು ಹಿಂದಿಯಲ್ಲಿ ಭಾಷಾಂತರ ಮಾಡಿದರು. ಅವರ ಭಾಷಣವನ್ನು ಬಹಳ ಸಾವಧಾನಚಿತ್ತವಾಗಿ ಗಮನ ಕೊಟ್ಟು ಎಲ್ಲರೂ ಕೇಳಿದರು.

ಗಾಂಧೀಜಿ ಹೇಳಿದರು: 'ಈ ನಾಲ್ಕು ತಿಂಗಳು ನನಗೆ ನೀಡಿದ ಆದರಾತಿಥ್ಯ ವಿಶ್ವಾಸಗಳಿಗೆ ಹೇಗೆ ಕೃತಜ್ಞತೆ ತೋರಿಸಬೇಕೋ ತಿಳಿಯದು.' ಮೈಸೂರು ದೇಶದ ಸುಪ್ರಸಿದ್ಧ ಇಂಜಿನಿಯರ್ ವಿಶ್ವೇಶ್ವರಯ್ಯನವರೂ, ಮಿರ್ಜಾ ಇಸ್ಮಾಯಿಲರೂ ಸಂಸ್ಥಾನಕ್ಕೆ ಸಲ್ಲಿಸಿದ ಸೇವೆಯನ್ನು ಹೊಗಳಿದರು. ಈ ಪ್ರಗತಿಪರ ಸಂಸ್ಥಾನದ ಔದ್ಯೋಗಿಕ ಮತ್ತು ಇಂಜನಿಯರಿಂಗ್ ಸಾಹಸಗಳನ್ನು ಪ್ರಶಂಶಿಸಿದರು. ಸಂಸ್ಥಾನದ ಒಳಗಡೆ ಇರುವ ಸಾಮರಸ್ಯವನ್ನು ಅಧಿಕಾರಿಗಳಿಗೂ ಪ್ರಜೆಗಳಿಗೂ ಇರುವ ಸುಹೃದ್ ಬಾಂಧವ್ಯವನ್ನು ಮೆಚ್ಚಿಕೊಂಡರು. ಸಂಸ್ಥಾನದಿಂದ ಅಸ್ಪೃಶ್ಯತೆಯನ್ನು ತೊಲಗಿಸುವಂತೆ ಜನರನ್ನು ಕಳಕಳಿಯಿಂದ ಬೇಡಿಕೊಂಡರು. ಮೈಸೂರಿನ ಬೆನ್ನೆಲುಬಾದ ಬಡ ರೈತನ ಕಡೆ ಹೆಚ್ಚು ಗಮನ ಕೊಡುವಂತೆ ಸರಕಾರಕ್ಕೆ ಸೂಚನೆ ಮಾಡಿದರು. 'ಇತರ ಕಡೆಗಳಿಗಿಂತ ಮೈಸೂರು ಸಂಸ್ಥಾನದಲ್ಲಿ ಹೆಚ್ಚು ಪುರೋಭಿವೃದ್ಧಿಯನ್ನು ನಾನು ಕಂಡಿದ್ದೇನೆ. ಅನೇಕ ವಿಷಯಗಳಲ್ಲಿ ಸಂಸ್ಥಾನ ಮುಂಬಂದಿದೆ ಎಂದು ತಿಳಿದುಕೊಳ್ಳಲು ನನಗೆ ಸಂತೋಷ ವಾಗಿದೆ. ಆದರೆ ಇದರಿಂದ ಇನ್ನೂ ಹೆಚ್ಚು ಅಭಿವೃದ್ಧಿಯ ಆಸೆ ಹುಟ್ಟುತ್ತಿದೆ. ಮಹಾಜನರೂ,

ಮಹಾರಾಜರೂ, ಮನಸ್ಸು ಮಾಡಿದರೆ ಮೈಸೂರನ್ನು ರಾಮರಾಜ್ಯವಾಗಿ ಮಾಡಬಹುದು' ಎಂದು ತಮ್ಮ ಭಾಷಣ ಮುಕ್ತಾಯಮಾಡಿದರು.

*(ಯಂಗ್ ಇಂಡಿಯಾ ೧-೯-೧೯೨೭)*

ಮಹಾದೇವ ದೇಸಾಯಿಯವರು ಬರೆದಿದ್ದಾರೆ: ಭಾರತದ ಪ್ರಾಕೃತಿಕ ನಕ್ಷೆಯನ್ನು ನೋಡಿದಾಗ, ಮೈಸೂರಿನಷ್ಟು ಎತ್ತರವೂ ವಿಸ್ತಾರವೂ ಆದ ಕಣ್ಮನ ಸೆಳೆಯುವ ಪ್ರಸ್ಥಭೂಮಿ ಮತ್ತೊಂದಿಲ್ಲ ಎನಿಸುತ್ತದೆ. ನಾಲ್ಕು ತಿಂಗಳಿಂದ ಇಲ್ಲಿದ್ದೇವೆ. ಈ ಭೇಟಿಯಲ್ಲಿ ನಮಗೆ ತಿಳಿದದ್ದು – ಭೌಗೋಳಿಕವಾಗಿ, ಆರ್ಥಿಕವಾಗಿ, ಸಮೃದ್ಧವಲ್ಲದೆ, ಸಂಸ್ಕೃತಿ ಶಾಂತಿ, ಅಭಿವೃದ್ಧಿ, ಪ್ರಗತಿಪರ ಭಾವನೆ ಎಲ್ಲದರಲ್ಲೂ ಭಾರತದ ಉಳಿದ ಪ್ರದೇಶಗಳಿಗಿಂತ ಮೈಸೂರು ಸಂಸ್ಥಾನ ಎಷ್ಟೋ ಮೇಲೆ. ನಾವು ಇಲ್ಲಿ ಇದ್ದಾಗ ನಮಗೆ ಬೇಕಾದಷ್ಟು ವಿಶ್ವಾಸ ಆತಿಥ್ಯಗಳ ಮಳೆ ಸುರಿಯಿತು. ಇಂಥ ಸಂಸ್ಥಾನಕ್ಕೆ ಗಾಂಧೀಜಿ ಹೇಳಿದಂತೆ ಸುಮ್ಮನೆ ಆಭಾರಿ ಎಂದು ಹೇಳಿದರೆ ಅದು ಬರೀ ಒಣ ಉಪಚಾರ. ಇಷ್ಟೇ ಅಲ್ಲ, ಒಂದು ಬಗೆಯ ಅವಮಾನ. ಲಾಲಬಾಗಿನಲ್ಲಿ ನಡೆದ ಬೀಳ್ಕೊಳ್ಳುವ ಸಮಾರಂಭ ಆದಮೇಲೆ ಅಂದು ರಾತ್ರಿ ಕುಮಾರ ಕೃಪಾದಲ್ಲಿ ಪ್ರಾರ್ಥನಾ ಸಭೆ ನಡೆಯಿತು.

ಶ್ರೀ ಲಕ್ಷ್ಮೀನರಸು ಹೇಳಿದಂತೆ ಆ ರಾತ್ರಿ ಅನುಭವ ಅತ್ಯಮೌಲ್ಯ, ಸಂಗ್ರಹಯೋಗ್ಯ ಶ್ರೀ ಸಿ.ಎಫ್. ಎಂಡ್ರೂಜರೂ, ಜೆರೂಮ್ ಅವರೂ ಆ ಪ್ರಾರ್ಥನಾ ಸಭೆಯಲ್ಲಿ ಇದ್ದರು. ಅವರು ಇಬ್ಬರೂ ಸೇರಿ 'When I survey the wondrous cross' ಎಂಬ ಹಾಡನ್ನು ಹಾಡಿದಾಗ ಪ್ರಾರ್ಥನಾ ಸಭೆಗೆ ಗಾಂಭೀರ್ಯ ತುಂಬಿ ಬಂತು. ಗಾಂಧೀಜಿ ಈ ಸಮಾರಂಭ ವನ್ನು ಆಶೀರ್ವದಿಸುತ್ತ– 'ಈ ಅನುಭವ ನನಗೆ ಒಂದು ಸಂತೋಷ ವಿಶೇಷ. ಇದರ ಪ್ರಭಾವ ನನ್ನ ಮೇಲೆ ಶಾಶ್ವತ. ಇದನ್ನು ಹೀಗೆಯೇ ಮುಂದುವರಿಸಿಕೊಳ್ಳಿ ಎನ್ನುತ್ತೇನೆ. ಭಗವದ್ಗೀತೆಯ ಸಂಸ್ಕೃತ ಶ್ಲೋಕಗಳು ನಿಮಗೆ ಗೊತ್ತಿರಲಿಕ್ಕಿಲ್ಲ. ಇಂಗ್ಲೀಷಿನ ಆ ಹಾಡುಗಳ ಶಬ್ದಗಳೂ ಗೊತ್ತಿರಲಿಕ್ಕಿಲ್ಲ. ಆದರೆ ರಾಮನಾಮ ಒಂದಿದೆಯಲ್ಲ. ಅದು ಎಲ್ಲರಿಗೂ ಸಮಾನವಾದ ಸೊತ್ತು, ಯುಗ ಯುಗಾಂತರಗಳಿಂದ ಹಿರಿಯರು ನಮಗೆ ಅದನ್ನು ಬಿಟ್ಟುಹೋಗಿದ್ದಾರೆ.'

**ಸ್ವಯಂ ಸೇವಕರು:**

ಮಾರನೆಯ ದಿನ ಬೆಳಗ್ಗೆ ಗಾಂಧೀಜಿಗೆ ಬೀಳ್ಕೊಡುಗೆ. ಮೊಟ್ಟಮೊದಲು ಬಂದವರು ಸ್ವಯಂ ಸೇವಕರು. ಮಹದೇವ ದೇಸಾಯಿ ಅವರ ಬಗ್ಗೆ ಬರೆಯುತ್ತ ಹೀಗೆಂದಿದ್ದಾರೆ–' ಈ ನಾಲ್ಕು ತಿಂಗಳು ಎಲ್ಲರೂ ಚಿಕ್ಕ ಮಗುವಿನಿಂದ ಹಿಡಿದು ಪದವೀಧರರವರೆಗೆ ಮುಗುಳು ನಗೆ ನಗುತ್ತ, ವಿಶ್ವಾಸಪೂರ್ವಕವಾಗಿ ಧಾರಾಳವಾಗಿ ಸಂತೋಷದಿಂದ ಗಾಂಧೀಜಿಗೂ. ಅವರ ಪರಿವಾರದವರೆಲ್ಲರಿಗೂ ಸೇವೆ ಸಲ್ಲಿಸಿದರು. ಕಳೆದ ಹತ್ತು ವರ್ಷಗಳಿಂದ ದೇಶಾದ್ಯಂತ ನಮಗೆ ಪ್ರೇಮ ವಿಶ್ವಾಸ ದೊರೆತಿದೆ. ಆದರೆ ಮೈಸೂರಿನ ಗುಣವೋ ಏನೋ ಇಲ್ಲಿನ ಸ್ವಯಂ ಸೇವಕರು ತುಂಬಾ ವಿಶಿಷ್ಟರಾದವರು. ಅವರ ಬಗ್ಗೆ ನೆನಪು ಬಂದಾಗ ಅದರಲ್ಲೂ ಇಡೀ ಕಾಲ ಸ್ವಯಂ ಸೇವಕ ನಾಯಕನಾಗಿ ಕೆಲಸ ಮಾಡಿದ ರಾಜಾರಾಮಯ್ಯಂಗಾರರ ಬಗ್ಗೆ ಯೋಚಿಸಿದಾಗ ಬಾಯಿಗೆ ಬರುವ ಶಬ್ದ, ಅಪರಂಜಿ. ಬಂಗಾರ.'

ಸಭೆ ಇಷ್ಟು ಹೊತ್ತಿಗೆ ನಡೆಯುತ್ತದೆಂದು ಯಾರೂ ಅವರಿಗೆ ಹೇಳಿರಲಿಲ್ಲ. ಆದರೆ ಈ ವೇಳೆಗೆ ಗಾಂಧೀಜಿಯ ಈ ಕಾರ್ಯಕ್ರಮಗಳು ಸ್ವಯಂ ಸೇವಕರಿಗೆ ಗೊತ್ತಾಗಿತ್ತು. ಬೆಳಗಿನ ಜಾವ ನಾಲ್ಕು ಗಂಟೆಗೆ ಗಾಂಧೀಜಿಯ ಪ್ರಾರ್ಥನಾ ಸಭೆ. ಆ ಹೊತ್ತಿಗೆ ಸರಿಯಾಗಿ ಸ್ವಯಂ ಸೇವಕರು ಬಂದರು. ಪ್ರಾರ್ಥನೆ ಮುಗಿದ ಮೇಲೆ ಒಬ್ಬೊಬ್ಬರೇ ಬಂದು ಗಾಂಧೀಜಿಯ ಕೈಯಿಂದ ಅವರ ಹಸ್ತಾಕ್ಷರವಿರುವ ಭಗವದ್ಗೀತೆಯ ಪ್ರತಿ ಒಂದನ್ನು ತೆಗೆದುಕೊಂಡು ಹೋದರು. ಸಾಧಾರಣವಾಗಿ ಬಹುಮಾನ ವಿತರಣೆ ಮಾಡುವ ಸಭೆಗಳಂತೆ ಇದು ಇರಲಿಲ್ಲ. ಬಹಳ ಗಂಭೀರವಾಗಿತ್ತು. ಗಾಂಧೀಜಿ ಸ್ವಯಂ ಸೇವಕರಲ್ಲಿ ಸ್ವಯಂ ಸೇವಕರು. ಅಂಥವರ ಕೈಯಿಂದ ಸ್ಫೂರ್ತಿ ಕವಚದಂತೆ ಭಗವದ್ಗೀತೆಯ ಪ್ರತಿಯನ್ನು ಪಡೆದುದು ಎಲ್ಲ ಬಹುಮಾನಗಳಿಗಿಂತಲೂ ಹೆಚ್ಚು ಎನಿಸಿತು. ಇದರ ಜೊತೆಗೆ ಆಶೀರ್ವಾದ ಬೇರೆ. ಗಂಗಾಧರರಾಯರು ಆಶೀರ್ವಾದದ ವಾಕ್ಯ ವಾಕ್ಯವನ್ನೂ ಕನ್ನಡಕ್ಕೆ ಭಾಷಾಂತರ ಮಾಡಿದರು. ಮಾಡುವಾಗ ಅವರ ಧ್ವನಿ ನಡುಗುತ್ತಿತ್ತು.

'ಈ ಜಗತ್ತಿನಲ್ಲಿ ಏನು ನಡೆದರೂ ಅದು ಆಕಸ್ಮಾತ್ ಅಲ್ಲ. ಈ ಹೊತ್ತಿನಲ್ಲಿ, ಈ ದಿನ ನಾವು ಎಲ್ಲರೂ ಏಕೆ ಸೇರಬೇಕು? ಎಲ್ಲ ಪುಸ್ತಕಗಳನ್ನು ಬಿಟ್ಟು ಭಗವದ್ಗೀತೆಯನ್ನೇ ನಿಮಗೆ ಬಹುಮಾನಕೊಡಲು ಏಕೆ ಆರಿಸಬೇಕಾಗಿತ್ತು? ಇಂದು ನಾವು ಮೂರನೆಯ ಅಧ್ಯಾಯವನ್ನೇ ಓದಬೇಕಾಗಿತ್ತೆ? ನಿಮಗಾಗಿ ಅದನ್ನು ಓದಲಿಲ್ಲ. ಇಂದು ಅದನ್ನು ಓದುವ ಸರದಿ. ಈ ಎಲ್ಲವನ್ನೂ ಒಂದೇ ದಿನ ಕೂಡಿಸಿ ನಡೆಸಿದ ಕಾಣದ ಕೈ ಬೇರೆ. ನಿಜವಾದ ಕಿಂಕರ ನಸುಕಿನಲ್ಲೇ ಎದ್ದು, ಪ್ರಾತರಾಹ್ನಿಕಗಳನ್ನು ಮಾಡಿಕೊಂಡು, ಪ್ರಾರ್ಥನೆಯಿಂದ ತನ್ನ ದಿನಚರ್ಯೆಯನ್ನು ಪ್ರಾರಂಭಿಸುತ್ತಾನೆ. ಈ ಶುಭ ಸಮಯದಿಂದ ನಿಮ್ಮ ಸೇವಾಜೀವನ ಪ್ರಾರಂಭವಾಯಿತು. ನನಗೆ ನೀವು ತೋರಿಸಿದ ಪ್ರೀತಿ ವಿಶ್ವಾಸ ಇಂದು ನೀವು ಕೈಕೊಳ್ಳುತ್ತಿರುವ ವಿಶಾಲ ಸೇವಾದೀಕ್ಷೆಯ ಒಂದು ಅಂಗ. ಭಗವದ್ಗೀತೆ ನಮಗೆ ಒಂದು ನೀತಿಶಾಸ್ತ್ರ. ಕಷ್ಟ, ಸಂದೇಹ ನಿಮ್ಮನ್ನು ಕಾಡಿದಾಗ, ನಿರಾಶೆ ನಿಮ್ಮನ್ನು ಮುತ್ತಿದಾಗ ಈ ನೀತಿಶಾಸ್ತ್ರವನ್ನು ನೋಡಿ. ಇವತ್ತು ಬೆಳಗ್ಗೆ ಓದಿದ ಮೂರನೆಯ ಅಧ್ಯಾಯಕ್ಕಿಂತ ಹೆಚ್ಚು ಸ್ಫೂರ್ತಿದಾಯಕವಾದದ್ದು ಬೇರೆ ಏನಿದೆ? ದೇವರು ಮನುಷ್ಯನನ್ನು ಸೃಷ್ಟಿಸಿದ. ಅದರ ಜೊತೆಯಲ್ಲೇ ಯಜ್ಞದ ಕರ್ತವ್ಯ ಭಾರವನ್ನೂ ಅವನಿಗೆ ಹೊರಿಸಿದ. ಯಜ್ಞ ಎಂದರೆ ಸೇವೆ. ಯಜ್ಞಾರ್ಥವಾಗಿ ಎಂದರೆ ಉದರಂಭರಣಕ್ಕಾಗಿ ತಿನ್ನುವವನು ಕಳ್ಳ ಎನ್ನುತ್ತದೆ ಗೀತೆ. ಯಜ್ಞ ಎಂದರೆ ತ್ಯಾಗ. ತ್ಯಾಗ ಎಂದರೆ ಪರಾರ್ಥವಾಗಿ ಪ್ರಾಣ ನೀಗುವುದು. ಹೀಗೆ ಅತ್ಯುಚ್ಚ ಪ್ರೇಮ ಎಂದರೆ ಅತ್ಯುಚ್ಚ ಅಹಿಂಸೆ. ಹಾಗೆಂದರೆ ಉತ್ತಮೋತ್ತಮ ಸೇವಾಜೀವನ. ಸಾವಿಗೂ ಬದುಕಿಗೂ ನಿರಂತರ ಹೋರಾಟ ನಡೆದಿದೆ. ಇದರ ಪರಿಣಾಮ ವಿನಾಶವಲ್ಲ, ಜೀವನ. ಏಕೆಂದರೆ ಇಷ್ಟು ಸಾವಿದ್ದರೂ ಅದರ ನಡುವೆ ಜೀವ ಕೊನರಿ ನಿಲ್ಲುತ್ತದೆ. ಅಹಿಂಸೆಯ ಸಾರ್ವಭೌಮತೆಗೆ ಇದು ಪ್ರತ್ಯಕ್ಷ ನಿದರ್ಶನ, ಸ್ಪಷ್ಟವಾದ ಸಾಕ್ಷಿ. ಈ ಅಹಿಂಸೆಯ ವಿಜಯವು ತ್ಯಾಗದಿಂದ ಮಾತ್ರವೇ ಸಾಧ್ಯ. ಹೀಗೆ ಯಜ್ಞಕ್ಕಿಂತ, ಸೇವೆಗಿಂತ ಹೆಚ್ಚಿನ ನಿಯಮ ಯಾವುದೂ ಇಲ್ಲ. ಸ್ವಯಂ ಸೇವಕರ ನಿಯಮ ಇದು. ನೀವು ಯಾರನ್ನಾದರೂ ಹೆಚ್ಚಾಗಿ ಪ್ರೀತಿಸುತ್ತೀರಿ ಎನ್ನಿ, ಅವರಿಗಾಗಿ ಅಥವಾ ನನಗಾಗಿ ಕೂಡ ಯಾರನ್ನೂ ನೀವು ಹಳಿಯಬಾರದು. ಹಾಗೆ ಮಾಡಿದರೆ ಅದು

ಸೇವೆ, ಪ್ರೀತಿ ಎನಿಸುವುದಿಲ್ಲ. ಅದು ವ್ಯಾಮೋಹ ಆಗುತ್ತದೆ. ನೀವು ನನ್ನನ್ನು ನೋಡಿರಲಿಲ್ಲ, ನನ್ನ ವಿಷಯ ನಿಮಗೆ ಗೊತ್ತಿರಲಿಲ್ಲ. ಆದರೆ ಈ ಮೂರು ತಿಂಗಳು ಸೇವೆ ಮಾಡಿಯೂ ಕೂಡ ನನ್ನಿಂದ ಧನ್ಯವಾದ ಪಡೆಯಲು ನೀವು ಬಂದವರಲ್ಲ. ನಿಮ್ಮದು ಪ್ರಾಮಾಣಿಕ ನಿಸ್ವಾರ್ಥ ಸೇವೆ. ಈ ಸೇವೆ ನಿಮಗೆ ದರಿದ್ರನಾರಾಯಣನ ಸೇವೆಯೇ ಆಗಿದೆ. ನೀವು ಮಾಡಿದ ಸೇವೆಗೆ ನಿಮ್ಮನ್ನು ಗೌರವಿಸಲು ನಾನು ಸಮರ್ಥನಲ್ಲ. ಇದಕ್ಕೆ ಪ್ರತಿಫಲ ನೀಡಬಲ್ಲವನು ದೇವರೊಬ್ಬನೇ. ಅವನು ಇದಕ್ಕೆ ತಕ್ಕ ಫಲವನ್ನು ಕೊಡದೇ ಇರುವುದಿಲ್ಲ.

**ರಾಜ್ಯಕ್ಕೆ ಜನತೆಗೆ ಒಂದು ಸಂದೇಶ:**

ಗಾಂಧೀಜಿ ಬೆಂಗಳೂರಿನಿಂದ ಹೋಗುವಾಗ ರೈಲು ನಿಲ್ದಾಣದಲ್ಲಿ ಸ್ವಯಂ ಸೇವಕರ ನಾಯಕರಾದ ಸಂಪತ್‌ಗಿರಿರಾಯರು ಹೇಳಿದರು:– 'ನೀವು ಬಿಟ್ಟು ಹೋಗುವಾಗ ನಮಗೆ ಎಲ್ಲವೂ ಶೂನ್ಯವಾಗಿ ಕಾಣುತ್ತದೆ. ಇನ್ನು ಕೆಲವು ದಿನ ನಮಗೆ ಏನೂ ಕೆಲಸವಿಲ್ಲ.' ಸ್ವಯಂ ಸೇವಕರಷ್ಟೇ ಅಲ್ಲ, ಸ್ವಾಗತ ಸಮಿತಿಯ ಕೆಲಸಗಾರರು, ಹಂಜಾ ಹುಸೇನ್ ಸಾಹೇಬರು, ಭಾಷ್ಯಂ ಐಯ್ಯಂಗಾರರು, ಲಕ್ಷ್ಮೀನರಸು ಎಲ್ಲರೂ ಬಂದಿದ್ದರು. ಅವರ ಮೂಲಕ ರಾಜ್ಯಕ್ಕೆ, ರಾಜ್ಯದ ಜನತೆಗೆ ಗಾಂಧೀಜಿ ಒಂದು ಸಂದೇಶ ಕೊಟ್ಟರು. ಬೀಳ್ಕೊಡುಗೆಯ ಭಾಷಣದಲ್ಲಿ ಹೇಳಿದ್ದನ್ನೇ ಮತ್ತೆ ಹೇಳಿದರು. ಮೈಸೂರಿನಲ್ಲಿ ಗೋಹತ್ಯೆ ನಿಲ್ಲಬೇಕು, ಗೋವು ಜನರಿಗೆ ಆರ್ಥಿಕವಾಗಿ ಭಾರವಾಗಲು ಬಿಡಬಾರದು. ಜನರಿಗೆ ಗೋ ಸಂವರ್ಧನ, ಕ್ಷೀರ ಸಂವರ್ಧನ, ಗೋಸಂತಾನ ವೃದ್ಧಿ, ಎಲ್ಲವನ್ನೂ ಮಾಡುವದು ಮುಖ್ಯವಾಗಿ ಸರಕಾರದ ಕೆಲಸ ಎಂದರು. ಪಾನನಿರೋಧದ ಬಗೆಯೂ ಹೇಳಿದರು. ಸರಕಾರದ ಸಹಾಯವಿಲ್ಲದೆ ಈ ಕೆಲಸ ಬಹಳ ಮುಂದುವರಿಯಲಾರದು ಎಂದರು. ಅವರು ಅಜ್ಞಾನಿಗಳು. ಅವರ ಮುಂದೆ ಹೆಂಡವನ್ನು ಇಟ್ಟರೆ ಕುಡಿದೇ ಕುಡಿಯುತ್ತಾರೆ. ಏನೇ ಕಷ್ಟ ನಷ್ಟ ಇರಲಿ, ಪಾನ ಪ್ರತಿಬಂಧದ ಈ ಕೆಲಸ ಸರಕಾರ ಮಾಡಬೇಕು ಎಂದರು.

ಪ್ರಾರ್ಥನೆಯಾದ ಮೇಲೆ ಗಾಂಧೀಜಿಯನ್ನು ನೋಡಿಕೊಳ್ಳುತ್ತಿದ್ದ ವೈದ್ಯರು ಬಂದರು. ಅವರನ್ನು ವಿನೋದಕ್ಕಾಗಿ ದಬ್ಬಾಳಿಕೆಗಾರ ಎಂದು ಕರೆಯುವದು ಗಾಂಧೀಜಿಯ ಪದ್ಧತಿ. ಆ ಕೊನೆಯ ದಿನ ರಾತ್ರಿ ವೈದ್ಯ ತಮ್ಮ ಉಪಕರಣಗಳನ್ನು ತರಲಿಲ್ಲ. ಸುಮ್ಮನೆ ಒಂದುಗಳಿಗೆ ನಿಮ್ಮ ಹತ್ತಿರ ಕೂಡಬೇಕು. ನೀವು ನಗುತ್ತಿದ್ದರೆ ನನಗೆ ಎಷ್ಟೋ ಸಂತೋಷ ಎಂದರು. ಆ ಮೇಲೆ ನಿಮ್ಮ ಪ್ರವಾಸ ಕಷ್ಟವಿಲ್ಲದೆ ಸುಲಭವಾಗಿರಬೇಕು. ನೀವು ಹೆಚ್ಚು ಆಹಾರ ತಿನ್ನಬೇಕು. ಪ್ರತಿ ವರ್ಷವೂ ಬೇಸಗೆಯಲ್ಲಿ ಬೆಂಗಳೂರಿಗೆ ಬಂದು ಬಿಡಾರ ಮಾಡಬೇಕೆಂದು ವೈದ್ಯರು ಗಾಂಧೀಜಿಗೆ ಬಿನ್ನಹ ಮಾಡಿಕೊಂಡರು. ತಮ್ಮ ದೇಹ ಚೆನ್ನಾಗಿದೆ. ಆದರೆ ಮೆದುಳು ಒಂದೊಂದು ಸಲ ಸರಿಯಾಗಿ ಕೆಲಸ ಮಾಡುವುದಿಲ್ಲ ಎಂದರು ಗಾಂಧೀಜಿ. 'ಆ ಭಯವನ್ನು ಕಿತ್ತುಹಾಕಿ ಗಾಂಧೀಜಿ. ನಿಮ್ಮ ಮೆದುಳಿನ ಬಗ್ಗೆ ನನಗೆ ಗೊತ್ತು. ಪ್ರಾರ್ಥನಾ ಸಭೆಯಲ್ಲಿ ಅದು ಹೇಗೆ ಕೆಲಸ ಮಾಡುತ್ತಿತ್ತೋ ನೋಡಿದೆನಲ್ಲ? ನಾನು ನಿಮ್ಮ ದೇಹಕ್ಕೆ ಮದ್ದು ಕೊಟ್ಟೇನು. ನೀವು ನಮ್ಮ ಆತ್ಮಗಳಿಗೆ – ಸಂಜೀವಿನಿ ಕೊಡುತ್ತೀರಿ. ನಿಮ್ಮ ಮೆದುಳು ಒಳ್ಳೆಯ ಸ್ಥಿತಿಯಲ್ಲಿದೆ.

ನಾನೇ ನೋಡಿದೆನಲ್ಲ ಪ್ರಾರ್ಥನಾ ಸಭೆಯಲ್ಲಿ?' ಎಂದು ಹೇಳಿ ವೈದ್ಯ ಗಾಂಧೀಜಿಯನ್ನು ಬೀಳ್ಕೊಳ್ಳಲಾರದೇ ಬೀಳ್ಕೊಂಡರು.

ಪ್ರಾರ್ಥನಾ ಸಭೆ ಆದ ಮೇಲೆ ಗಾಂಧೀಜಿಯ ಹಿಂದೆ ಯಂತ್ರವತ್ತಾಗಿ ಲಕ್ಷ್ಮೀನರಸು ಹೋದರು. ಬೆಳಿಗ್ಗೆ ಸಂಜೆ ಅವರ ಪ್ರಾರ್ಥನಾ ಸಭೆಗಳನ್ನು ಏರ್ಪಡಿಸಿ ಅದಕ್ಕೆ ತಕ್ಕ ವ್ಯವಸ್ಥೆಯನ್ನು ಇಡೀ ಪ್ರವಾಸದಲ್ಲಿ ಮಾಡಿದ್ದರೂ ಅವರು ಪ್ರಾರ್ಥನಾ ಸಭೆಯಲ್ಲಿ ಇದ್ದಷ್ಟು ಇದೇ ಮೊದಲನೆಯ ಸಲ. ಗಾಂಧೀಜಿ ಕೇಳಿದರು – 'ನರಸು ನಿನ್ನ ನಾಸ್ತಿಕತೆ ಎಷ್ಟು ದೂರ ಇದೆ? ಲಕ್ಷ್ಮೀನರಸು ಅಂದರು – 'ಅರ್ಧ ಅರ್ಧ' ಎಂದು. ಗಾಂಧೀಜಿ ಅವರ ಸೇವೆಯನ್ನು ಮೆಚ್ಚಿ ಅವರನ್ನು ಅಪ್ಪಿಕೊಂಡರು. ಯಾವಾಗಲೂ ಒಂದು ನೆನಪಿರಲಿ, ದೇವರು ನಿನ್ನ ಜೊತೆಯಲ್ಲಿ ಇದ್ದರೆ ಯಾರೂ ನಿನಗೆ ವಿರುದ್ಧವಾಗರು; ದೇವರು ನಿನ್ನ ಜೊತೆಯಲ್ಲಿ ಇಲ್ಲದಿದ್ದರೆ, ಯಾರೂ ನಿನ್ನ ಜೊತೆಯಲ್ಲಿ ಇರುವುದಿಲ್ಲ. ಆದ್ದರಿಂದ ದೇವರ ಗೆಳೆತನವನ್ನೇ ಸಾಧಿಸಬೇಕು ಎಂದರು.

**ಸೇವಕರ ಬೀಳ್ಕೊಡುಗೆ**

ಮರುದಿನ ಬೆಳಗ್ಗೆ ಗಾಂಧೀಜಿ ಊರಿಗೆ ಹೊರಟರು. ಆಗ ಅವರು ಕುಮಾರಾ ಕೃಪ ಅತಿಥಿ ಗೃಹವನ್ನು ಬಿಟ್ಟು ಹೋಗುವಾಗ, ಕುಮಾರಾ ಕೃಪಾದ ಬಾಗಿಲಲ್ಲಿ ಅವರನ್ನು ಬೀಳ್ಕೊಳ್ಳಲು ಆ ಭವನದ ಎಲ್ಲಾ ಸೇವಕರೂ ಸೇರಿದ್ದರು. ಅದೇ ಕಟ್ಟ ಕಡೆಯ ಬೀಳ್ಕೊಡುಗೆ. ಕಡೆಯದಾದರೂ ಅದು ಮಹತ್ವದಲ್ಲಿ ಕಿರಿದಲ್ಲ. ಬಹಳ ಭಾವನಾಮಯ ದೃಶ್ಯವದು. ಸೇವಕರಲ್ಲಿ ಭೇದವಿಲ್ಲದೆ ದೊಡ್ಡವರೂ, ಚಿಕ್ಕವರೂ, ಭಂಗಿಗಳೂ, ಜಾಡಮಾಲಿಗಳೂ ಎಲ್ಲರೂ ಸೇರಿದ್ದರು. ಗಾಂಧೀಜಿ ಅವರಿಗೆ ಹೇಳಿದರು: 'ನಿಮಗೆ ನಾನು ಎಷ್ಟು ಋಣಿಯೋ ಹೇಳಲಾರೆ. ನನ್ನ ಬದುಕಿನಲ್ಲಿ ಯಾರನ್ನೂ ನಾನು ಸೇವಕ ಎಂದು ತಿಳಿದಿಲ್ಲ. ಸೋದರನೋ, ಸೋದರಿಯೋ ಎಂದು ತಿಳಿದಿದ್ದೇನೆ. ನಿಮ್ಮನ್ನೂ ಹಾಗೆಯೇ. ನಿಮ್ಮ ಸೇವೆಗೆ ಪ್ರತಿಫಲವಾಗಿ ನಾನು ಏನೂ ಕೊಡಲೂ ಸಮರ್ಥನಲ್ಲ. ಸಾಮರ್ಥ್ಯವಿರುವ ಭಗವಂತ ನಿಮಗೆ ಧಾರಾಳವಾಗಿ ಪ್ರತಿಫಲ ಕೊಟ್ಟೇ ಕೊಡುತ್ತಾನೆ.'

*(ಯಂಗ್ ಇಂಡಿಯಾ ೮-೯-೧೯೨೭)*

ಬೆಂಗಳೂರು ನಗರದ ರೈಲು ನಿಲ್ದಾಣದಲ್ಲಿ ಗಾಂಧೀಜಿಯನ್ನು ಬೀಳ್ಕೊಳ್ಳಲು ದೊಡ್ಡ ಸಂದಣಿಯೇ ಸೇರಿತ್ತು. ಮಿರ್ ಹಂಜಾ ಹುಸೇನ್ ಸಾಹೇಬರು, ಭಾಷ್ಯಂ ಐಯ್ಯಂಗಾರ್ಯರೂ, ಸ್ವಾಗತ ಸಮಿತಿಯ ಎಲ್ಲಾ ಸದಸ್ಯರೂ ಬಂದಿದ್ದರು. ಭಾಷ್ಯಂ ಗಾಂಧೀಜಿಯ ಪಾದಗಳನ್ನು ಮುಟ್ಟಿ, ಅವರ ಹಳೆಯ ಚಪ್ಪಲಿಗಳನ್ನು ಕೊಡುವಂತೆ ಕೇಳಿದರು. ಅದನ್ನು ತೆಗೆದುಕೊಂಡು ತಲೆಯ ಮೇಲಿಟ್ಟುಕೊಂಡು ಮನೆಯವರೆಗೂ ಹೋದರು. ಹಂಜಾ ಹುಸೇನ್ ಸಾಹೇಬರು ಬಾಗಿ ವಂದನೆ ಮಾಡಿ 'ಖುದಾ ವಂದ್' ಎಂದು ಹೇಳಿದರು.

(ಈ ನಲವತ್ತು ವರ್ಷದ ಹಿಂದಿನ ಅನುಭವಗಳನ್ನು ನೆನೆದರೆ ಬದುಕಿರುವವರೆಗೆ ಇವನ್ನು ಮರೆಯಲಾರೆ ಎನಿಸುತ್ತದೆ. ಆಗ ಗಾಂಧೀಜಿ ಇನ್ನೂ ರಾಷ್ಟ್ರಪಿತ ಆಗಿರಲಿಲ್ಲ.

ಆದರೆ ದೀನ ದಲಿತರ ಉದ್ಧಾರಕ, ಶತ ಶತಮಾನಗಳ ಗುಲಾಮಗಿರಿಯಿಂದ ತನ್ನ ದೇಶವನ್ನು ಬಿಡಿಸುವವ ಎಂದು ಆಗಲೇ ಕಂಡುಬರುತ್ತಿತ್ತು. ಅವರು ಓಡಾಡಿದ ನೆಲ, ಸ್ವರ್ಗವಾಯಿತು. ಆಗಲೇ ಅವರು ಬಹುರೂಪಿಯಾಗಿದ್ದರು. ಇವತ್ತು ಅವರ ಶಿಷ್ಯರನೇಕರಿಗೆ ರಾಜಕೀಯ ಬಹಳ ದೊಡ್ಡದಾಗಿದೆ. ಅವರಿಗೆ ಮಾತ್ರ ರಾಜಕೀಯ ದೊಡ್ಡದಾಗಿರಲಿಲ್ಲ. ಯಾವ ಚಿಕ್ಕ ವಿಷಯವೂ ಅವರಿಗೆ ಚಿಕ್ಕದಾಗಿರಲಿಲ್ಲ. ನಮ್ಮ ದೇಶವಾಸಿಗಳನ್ನು ಅವರ ಬಾಂಧವರಾದ ರಾಜಕಾರಿಣಿಗಳ ಮುಷ್ಟಿಯಿಂದ ಬಿಡಿಸಲು ಅಂಥ ಮಹಾತ್ಮಾ ಮತ್ತೆ ಯಾವಾಗ ಉದಯಿಸಿ ಬರುತ್ತಾರೋ ಎಂದು ಶ್ರೀ ಲಕ್ಷ್ಮೀನರಸು ತಮ್ಮ ಕಥನವನ್ನು ಮುಗಿಸಿದ್ದಾರೆ).



# ಅಧ್ಯಾಯ ೪



# ಹರಿಜನ ಪ್ರವಾಸ, ೧೯೩೪

೧೯೩೪, ಜನವರಿ ೪ರ ದಿನ ಗಾಂಧೀಜಿ ಮೈಸೂರು ಸಂಸ್ಥಾನದಲ್ಲಿ ಕಾಲಿಟ್ಟರು. ಅವರ 'ಭಿಕ್ಷಾಯಾತ್ರೆ' ಇಲ್ಲಿಯೂ ನಡೆಯಿತು. ಸಂಸ್ಥಾನದಲ್ಲಿಯೂ ಗಾಂಧೀಜಿಯ ಬಿನ್ನಹಕೆ ಪ್ರತಿಕ್ರಿಯೆ ಸಮಾಧಾನಕರ ಆಗಿಯೇ ಇತ್ತು. ಅವರು ಹಣವನ್ನು ಸಂಗ್ರಹಿಸುತ್ತಿದ್ದ ರೀತಿಯೇ ವಿಚಿತ್ರ. ಬೆಂಗಳೂರಿನಲ್ಲಿ ಒಂದು ಸಭೆಯಲ್ಲಿ ಅವರು ಹೇಳಿದ ಮಾತು ಇದಕ್ಕೆ ಸ್ಪಷ್ಟ ನಿದರ್ಶನ. ಒಂದು ಒಳ್ಳೆಯ ನಿಧಿಯನ್ನು ಕೊಟ್ಟಿದ್ದೀರಿ. ಆದರೆ ನೀವು ಇದಕ್ಕಿಂತ ಹೆಚ್ಚು ಕೊಡಬಹುದಾಗಿತ್ತು–ಎಂದರು.

ಸುಮಾರು ಬೆಳಿಗ್ಗೆ ಎಂಟೂವರೆ ಗಂಟೆಹೊತ್ತಿಗೆ, ಹಿಂದೂಪುರದ ಕಡೆಯಿಂದ ಗೌರಿಬಿದನೂರಿಗೆ ಗಾಂಧೀಜಿ ತಮ್ಮ ಸಂಗಡಿಗರ ಸಮೇತ ಬಂದರು. ಅವರ ಜೊತೆಯಲ್ಲಿ ಮೀರಾಬೆನ್, ಜಮುನಾಲಾಲ ಬಜಾಜರ ಹೆಣ್ಣುಮಕ್ಕಳು, ರಾಜಸೇವಾ ಪ್ರಸಕ್ತ ಶ್ರೀ ಪಾಮಿಡಿ ಸುಬ್ಬರಾಮ ಶೆಟ್ಟರೂ, ಶ್ರೀ ವೆಂಕಟಪ್ಪನವರೂ, ಕೆಂಗೇರಿ ಗುರುಕುಲಾಶ್ರಮದ ಬ್ರಹ್ಮಚಾರಿ ರಾಮಚಂದ್ರರು ಇದ್ದರು. ದಾರಿಯಲ್ಲಿ ವಿದುರಾಶ್ವತ್ಥದ ಬಳಿ ಶ್ರೀ ನಾಗಯ್ಯ ರೆಡ್ಡಿಯವರು ಗಾಂಧೀಜಿಗೆ ಹೂವಿನಹಾರವನ್ನು ಸಮರ್ಪಿಸಿ ನಿಧಿಯನ್ನು ಅರ್ಪಿಸಿದರು. ಗೌರಿಬಿದನೂರಿನಲ್ಲಿ ೫೦೦ ರೂಪಾಯಿ ನಿಧಿಯನ್ನು ಕೊಟ್ಟರು. ಬೆಳ್ಳಿಯ ಕರಂಡದಲ್ಲಿ ಇಟ್ಟು, ಗೌರಿಬಿದನೂರು ಪೌರಸಭೆಯವರು ಬಿನ್ನವತ್ತಳೆಗಳನ್ನು ಅರ್ಪಿಸಿದರು. ಸುಮಾರು ಸಾವಿರಜನ ಸೇರಿತ್ತು. ಕಾಲುಗಂಟೆ ಕಾಲ ಗಾಂಧೀಜಿ ಇಂಗ್ಲೀಷಿನಲ್ಲಿ ಮಾತನಾಡಿದರು. ಸಾರ್ವಜನಿಕರನ್ನು ವಂದಿಸಿದರು. ಅವರ ಮೋಟಾರು ದೊಡ್ಡ ಬಳ್ಳಾಪುರಕ್ಕೆ ಹೋಯಿತು.

ಸುಮಾರು ೧೦ ಗಂಟೆಯಹೊತ್ತಿಗೆ ಗಾಂಧೀಜಿ ದೊಡ್ಡಬಳ್ಳಾಪುರಕ್ಕೆ ಬಂದರು. ಊರಿನಜನ ಭವ್ಯವಾದ ಸ್ವಾಗತ ನೀಡಿ, ಬಿನ್ನವತ್ತಳೆಗಳನ್ನು ಅರ್ಪಿಸಿದರು. ಅದಕ್ಕೆ ಉತ್ತರ ಕೊಡುತ್ತ ಗಾಂಧೀಜಿ, ಆ ಊರಿನಲ್ಲಿ ಶಾಲೆಗೆ ಹೋಗುವ ಹರಿಜನ ಹುಡುಗರ–

ಹುಡುಗಿಯರ ಸಂಖ್ಯೆ ಬಹಳ ಕಡಿಮೆ. ಅದನ್ನು ಹೆಚ್ಚಿಸಬೇಕು. ಅಸ್ಪೃಶ್ಯತೆಯ ಭಾವನೆಯನ್ನೇ ಕಿತ್ತುಹಾಕಬೇಕು ಎಂದು ಹೇಳಿದರು. ಇಂಗ್ಲೀಷಿನಲ್ಲಿ ಆಡಿದ ಅವರ ಮಾತನ್ನು ಶ್ರೀ ವಿ. ವೆಂಕಟಪ್ಪನವರು ಕನ್ನಡಕ್ಕೆ ಭಾಷಾಂತರಿಸಿದರು. ಇಲ್ಲಿ ಮೂರು ನಿಧಿಗಳನ್ನು ಅರ್ಪಿಸಿದರು. ಒಂದು ಸಾರ್ವಜನಿಕರಿಂದ, ಒಂದು ಹೆಂಗಸರಿಂದ, ಒಂದು ತಿಮ್ಮಾರೆಡ್ಡಿಯವರಿಂದ. ಅಲ್ಲಿಂದ ಮುಂದೆ ಯಲಹಂಕದ ಹೆಂಚಿನ ಕಾರಾಖಾನೆಯ ಶ್ರೀ ವೇಣುಗೋಪಾಲ ಮೊದಲಿಯಾರರ ಮೋಟಾರಿನಲ್ಲಿ ಗಾಂಧೀಜಿ ತುಮಕೂರಿಗೆ ಹೋದರು. ದೊಡ್ಡ ಬಳ್ಳಾಪುರಕ್ಕೆ ಬರದಿದ್ದ ಮೀರಾಬೆನ್ ಜಮುನಾಲಾಲ ಬಜಾಜರ ಇಬ್ಬರು ಹೆಣ್ಣುಮಕ್ಕಳೂ ದಾಮೋದರದಾಸ ಮುಂದಡಾ, ಮಾಗಂಟಿ ಬಾಪಿನೀಡು, ಬ್ರಹ್ಮಚಾರಿ ರಾಮಚಂದ್ರ ಇವರೂ ತುಮಕೂರಿಗೆ ಬಂದು ಸೇರಿಕೊಂಡರು. ತಮಕೂರಿನಲ್ಲಿ ಮಧ್ಯಾಹ್ನ ಎರಡೂವರೆ ಗಂಟೆ ಹೊತ್ತಿಗೆ ಸಭೆ ನಡೆಯಿತು. ಆ ಸಂದರ್ಭಕ್ಕಾಗಿ ಕಟ್ಟಿದ ವೇದಿಕೆಯ ಮೇಲೆ ಗಾಂಧೀಜಿ ಆಸೀನರಾದರು. ತುಮಕೂರಿನ ಬೇರೆ ಬೇರೆ ಸಮಾಜಗಳವರು ಬಿನ್ನವತ್ತಳೆಗಳನ್ನು ಓದಿ, ಸಾರ್ವಜನಿಕರ ಪರವಾಗಿ ೧೦೦೦ ರೂಪಾಯಿಗಳ ನಿಧಿಯನ್ನು ಕೊಟ್ಟರು. ಗಾಂಧೀಜಿ ಮಾತನಾಡಿ ಸಾರ್ವಜನಿಕರನ್ನು ಅಭಿನಂದಿಸಿದರು. ಪ್ರತಿಯೊಬ್ಬರೂ ಈ ಅಸ್ಪೃಶ್ಯತೆಯ ನಿವಾರಣೆಯ ಚಳವಳಿಯಲ್ಲಿ ಭಾಗವಹಿಸಬೇಕೆಂದು ಪ್ರಾರ್ಥಿಸಿದರು. ಮಧ್ಯಾಹ್ನ ೩-೧೫ ಗಂಟೆಗೆ ಗಾಂಧೀಜಿ ಬೆಂಗಳೂರಿಗೆ ಹೊರಟರು. ದಾರಿಯಲ್ಲಿ ಕ್ಯಾತಸಂದ್ರದ ಬಳಿ ಸಾರ್ವಜನಿಕರು ಅವರನ್ನು ತಡೆದು ಒಂದು ನಿಧಿಯನ್ನು ಸಮರ್ಪಿಸಿದರು. ಸುಮಾರು ೪-೩೦ರ ವೇಳೆಗೆ ಗಾಂಧೀಜಿ ಯಶವಂತಪುರಕ್ಕೆ ಬಂದರು. ಅಲ್ಲಿಂದ ಮಲ್ಲೇಶ್ವರದ ಸೇವಾ ಸಮಾಜವನ್ನು ನೋಡಿಕೊಂಡು ಶ್ರೀ ರಾಮಲಿಂಗ ಮೊದಲಿಯಾರರ ಮನೆಗೆ ಭೇಟಿಕೊಟ್ಟರು. ಅಲ್ಲಿ ಅವರಿಗೆ ೧೦೦೦ ರೂಪಾಯಿ ನಿಧಿಯನ್ನು ಕೊಡಲಾಯಿತು. ಮುಂದೆ ರಾತ್ರಿ ೯ ಗಂಟೆಗೆ ಕುಮಾರ ಪಾರ್ಕಿಗೆ ಬಂದರು. ಅಲ್ಲಿ ಪ್ರಾರ್ಥನೆ ನಡೆಯಿತು. ರಾತ್ರಿ ೧೦ ಗಂಟೆಯಮೇಲೆ ಮೈಸೂರಿಗೆ ಗಾಂಧೀಜಿ ಪರಿವಾರದವರೊಡನೆ ಹೊರಟರು.

*(ಹರಿಜನ ೫-೧-೧೯೩೪)*

**ಮೈಸೂರಿನಲ್ಲಿ:**

ಆಂಧ್ರದ ಕಡಪಾ ಜಿಲ್ಲೆಯಲ್ಲಿ ಅವರಿಗೆ ಆದ ಸಂತೋಷವನ್ನು ಮೈಸೂರಿನ ದರ್ಶನ ಹೆಚ್ಚಿಸಿತು ಎನ್ನಬೇಕು. ಮೈಸೂರು ಸಂಸ್ಥಾನ ಎಲ್ಲ ಬಗೆಯಲ್ಲೂ ಮಾದರಿ ಎನಿಸಿಕೊಂಡಿದೆ. ಬ್ರಿಟಿಶ್ ಭಾರತಕ್ಕಿಂತ ಎಲ್ಲ ಬಗೆಯಾಗಿಯೂ ಪ್ರಗತಿಪರವಾಗಿದೆ. ಪ್ರಕೃತಿ ನಾನಾವಿಧ ನೈಸರ್ಗಿಕ ಸಂಪತ್ತನ್ನು ಕರುಣಿಸಿದೆ. ಅದಕ್ಕೆ ಅರ್ಹರಾಗಲು ಸಂಸ್ಥಾನದವರು ಪ್ರಯತ್ನಿಸುತ್ತಿದ್ದಾರೆ. ಮನೆಗಳು ಚೊಕ್ಕಟ. ರಸ್ತೆಗಳು ಸ್ವಚ್ಛ. ಇಲ್ಲಿ ಜನರ ಉತ್ತಮ ರೂಢಿಗಳಿಗೆ ಇದೇ ಸಾಕ್ಷಿ ಸಾಕು. ಸರಕಾರ ಬಲವಂತಮಾಡಿದರೆ ಆಗುವ ಕೆಲಸ ಇದಲ್ಲ. ಜನರ ಸ್ವಂತ ಸಂಸ್ಕೃತಿಯ ಫಲವಿದು. ಮೈಸೂರಿನಲ್ಲಿ ಗಾಂಧೀಜಿ ನೋಡಿದ ಹರಿಜನ ವಸತಿಯೂ ಅಷ್ಟೆ. ಇಲ್ಲಿನ ಪ್ರಗತಿಪರ ರೂಢಿಗೆ ಅನುಕೂಲವಾಗಿದ್ದವು. ಅವರ ನೆರೆಹೊರೆ ಆರೋಗ್ಯಕರ. ರಸ್ತೆಗಳು ಅಗಲ. ಸ್ವಚ್ಛ. ಮನೆಗಳ ಯೋಜನೆ ತುಂಬಾ ಚೆನ್ನಾಗಿತ್ತು. ಗುಡಿಸಲುಗಳು

ಸ್ವಚ್ಛವಾಗಿ ತೃಪ್ತಿಯ ಭಾವನೆಗಳಿಂದ ಕಂಗೊಳಿಸುತ್ತಿದ್ದವು. ಪಟ್ಟಣಗಳವರು ಇಲಿಯ ಬೋನಿನಂಥ ಮನೆಗಳಲ್ಲಿ ವಾಸ ಮಾಡುತ್ತಿರುವುದನ್ನು ನೋಡಿ, ಇದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಹರಿಜನ ವಸತಿಯಲ್ಲಿ ಒಂದು ವಿದ್ಯಾರ್ಥಿ ನಿಲಯ, ಒಂದು ಉದ್ಯೋಗ ಶಾಲೆ ಇದ್ದವು. ಒಂದು ಕಡೆ ಒಂದು ಶಿಶುವಿಹಾರ, ಒಂದು ವಾಚನಾಲಯ ಎಲ್ಲವು ಗಾಂಧೀಜಿಗೆ ಬಹಳ ಸಂತೋಷ ಕೊಟ್ಟವು. ಬಹಿರಂಗ ಸಭೆಯಲ್ಲಿ ಅದನ್ನು ಹೇಳಿಬಿಟ್ಟರು.

**ಮೈಸೂರಿನ ವೃದ್ಧ ಪಿತಾಮಹ:**

'ಆರು ವರ್ಷದ ತರುವಾಯ ಮತ್ತೆ ಪರಿಚಯ ಮಾಡಿಕೊಳ್ಳುವುದು ನನಗೆ ತುಂಬಾ ಸಂತೋಷ. ಕಳದ ಸಲ ನನಗೆ ಆರೋಗ್ಯ ಕೆಟ್ಟಾಗ ಅದನ್ನು ಸರಿಪಡಿಸಿಕೊಳ್ಳಲು ನಾನು ಮೈಸೂರು ಸಂಸ್ಥಾನಕ್ಕೆ ಬಂದಿದ್ದೆ. ಸಹಜವಾಗಿಯೇ ಆ ನನ್ನ ನೆನಪು ಸಂತೋಷದಾಯಕ. ಮೈಸೂರಿನ ಮಹಾರಾಜರೂ, ದಿವಾನರೂ, ಇತರ ಅಧಿಕಾರಿಗಳಿಂದ ಬಡ ಪ್ರಜೆಯವರೆಗೆ ಎಲ್ಲರೂ ನನಗೆ ಆಗ ಪ್ರೀತಿ ತೋರಿದರು. ಆದ್ದರಿಂದ ನಿಮ್ಮ ನಡುವೆ ಮತ್ತೆ ಬರಲು ನನಗೆ ಎಷ್ಟು ಸಂತೋಷವೋ ಅರ್ಥಮಾಡಿಕೊಳ್ಳಿ. ಇದರ ಜೊತೆಗೆ ನನ್ನ ಸಂತೋಷವನ್ನು ಇಮ್ಮಡಿ ಮಾಡಲು ಮೈಸೂರಿನ ವೃದ್ಧ ಪಿತಾಮಹ ದಿ. ವೆಂಕಟಕೃಷ್ಣಯ್ಯನವರ ಭಾವಚಿತ್ರವನ್ನು ಅನಾವರಣ ಮಾಡಲು ಹೇಳಿದ್ದೀರಿ. ನನಗೆ ಅವರು ಬಹಳ ಪರಿಚಿತರು. ಚಿತ್ರಕಾರನು ಬಹಳ ವಾಸ್ತವವಾಗಿ ಅವರನ್ನು ಚಿತ್ರಿಸಿದ್ದಾನೆ. ಅವನಿಗೆ ಅಭಿನಂದನೆ. ನಾನು ಕಳೆದ ಸಲ ಬಂದಾಗ ವೃದ್ಧ ಪಿತಾಮಹರನ್ನು ಸಜೀವವಾಗಿ ಕಂಡಿದ್ದೆ. ನಿಮಗೆ ಎಲ್ಲರಿಗೆ ಗೊತ್ತಿದೆಯೋ ಇಲ್ಲವೋ, ಅವರ ಅನೇಕ ಸದ್ಗುಣಗಳನ್ನು ನಾನು ಆಗ ಗುರುತಿಸಿಕೊಂಡೆ. ನಿಮ್ಮ ಹೃದಯಗಳಲ್ಲಿ ಅವರಿಗೆ ವಿಶೇಷ ಸ್ಥಾನವಿದೆ. ಅವರ ಸದ್ಗುಣಗಳ ಪಟ್ಟಿಯನ್ನು ನನ್ನಿಂದ ನೀವು ನಿರೀಕ್ಷಿಸುವದಿಲ್ಲ. ಅಲ್ಪ ಕಾಲದ ಪ್ರವಾಸದಲ್ಲಿ ನಾನು ಕಂಡದಕ್ಕಿಂತ ಸ್ಥಳಿಕರಾದ ನೀವು ಹೆಚ್ಚು ಬಲ್ಲಿರಿ. ನಾವೂ ನೀವೂ ಅವರ ಸದ್ಗುಣಗಳನ್ನು ಅನುಕರಿಸಬೇಕು. ಅದಕ್ಕಾಗಿಯೇ ಅವರ ನೆನಪು ನಮಗೆ ಅಗತ್ಯ. ಭಾವಚಿತ್ರ ಅನಾವರಣ ದಿಂದ ಅಥವಾ ಪ್ರೇಕ್ಷಣದಿಂದ ನಾವು ಅವರ ಆ ಗುಣಗಳ ಅನುಕರಣ ಮಾಡಿ ಋಣಮುಕ್ತರಾದೆವೆಂದು ತಿಳಿಯಬಾರದು.

*(ಹರಿಜನ ೧೨-೧-೧೯೩೪)*

**ನಗರದ ಅತ್ಯುತ್ತಮ ಸೇವಕರು:**

ಇನ್ನು ನಾನು ಬಂದ ಕೆಲಸವನ್ನು ಪ್ರಸ್ತಾಪಿಸುತ್ತೇನೆ. ನಿಮ್ಮ ಪೌರಸಭೆಯ ಬಿನ್ನವತ್ತಳೆ ಯಲ್ಲಿ, ಇಲ್ಲಿ ನೋಡಬೇಕಾದ್ದನ್ನೆಲ್ಲ ನೋಡಿ, ಹರಿಜನ ಪರವಾಗಿ ಏನೇನು ಪ್ರಯತ್ನ ನಡೆಯುತ್ತದೆಯೋ ಅದರ ಬಗ್ಗೆ ಆನಂದಮಯ ಚಿತ್ರಗಳನ್ನು ಒಯ್ಯಬೇಕೆಂದು ನನಗೆ ನೆನಪು ಕೊಟ್ಟಿದ್ದೀರಿ. ಇಲ್ಲಿಗೆ ಬರುವ ಮೊದಲೇ ಬಹಳ ದೂರದೃಷ್ಟಿಯಿಂದ ಈ ಆರು ವರ್ಷಗಳಲ್ಲಿ ಆದ ಸುಧಾರಣೆಗಳನ್ನೆಲ್ಲ ತೋರಿಸಿಕೊಂಡು ಸ್ವಾಗತ ಸಮಿತಿಯು ನನ್ನನ್ನು ಕರೆತಂದಿದೆ. ಅವನ್ನೆಲ್ಲ ನೋಡಿ ಬಂದರೆ, ಹರಿಜನರಿಗಾಗಿ ಆದ ಸುಧಾರಣೆಗಳನ್ನೆಲ್ಲ

ನಾನೇ ತಿಳಿದುಕೊಳ್ಳಬಹುದು ಎಂದು ಅವರ ಅಭಿಪ್ರಾಯ. ನಾನು ಹೋದ ಸ್ಥಳಗಳೆಲ್ಲ ಬಹಳ ಚೊಕ್ಕಟ, ಸ್ವಚ್ಛ ಆಗಿದ್ದವು. ಅದಕ್ಕಾಗಿ ಸರಕಾರವನ್ನೂ ಪೌರಸಭೆಯನ್ನೂ ಅಭಿನಂದಿಸುತ್ತೇನೆ. ಹರಿಜನ ಸಾಂಸಾರಿಕ ಯೋಗಕ್ಷೇಮವನ್ನು ನೋಡಿಕೊಳ್ಳುವ ಭರವಸೆ ಪೌರಸಭೆ ಇತ್ತಿದೆ. ಅತಿ ಅಸ್ವಚ್ಛವಾದ, ಉದಾಸೀನತೆಗೆ ಗುರಿಯಾದ ಸ್ಥಳಗಳಲ್ಲಿ ಕೆಲಸ ಮಾಡಲು ಹೋಗುವ ಈ ಭಂಗಿಗಳ, ಈ ಝಾಡ ಮಾಲಿಗಳ ಕೈಯಲ್ಲಿ ನಗರಗಳ ಆರೋಗ್ಯದ ಜೀಗದ ಕೈ ಇದೆ. ಯಾವ ನಗರ ತನ್ನ ಭಂಗಿಗಳನ್ನೂ ಝಾಡಮಾಲೀಗಳನ್ನೂ ಸರಿಯಾಗಿ ನೋಡಿಕೊಳ್ಳುವುದಿಲ್ಲವೋ ಅದು ತನ್ನ ಪಟ್ಟಣದ ಜನರ ಆರೋಗ್ಯವನ್ನು ಉದಾಸೀನ ಮಾಡೀತು ಎಂದರ್ಥ.

**ಹೃದಯ ಪರಿವರ್ತನೆ ಬೇಕು :**

ಹರಿಜನರ ಆರ್ಥಿಕ ಅಭಿವೃದ್ಧಿಗಿಂತಲೂ ಹೆಚ್ಚು ವ್ಯಾಪಕ ನನ್ನ ಉದ್ದೇಶ. ಅವರ ಆರ್ಥಿಕ ಶೈಕ್ಷಣಿಕ ಕ್ಷೇಮವನ್ನು ನಾವು ಭದ್ರವಾಗಿ ಕಾಯಲೇ ಬೇಕು. ಇಷ್ಟು ಸಾಲದು. ಹರಿಜನರಿಗೆ ನಾವು ಕೊಟ್ಟ ಅವರ್ಣನೀಯ ಕಷ್ಟಗಳನ್ನು ಶತಶತಮಾನಗಳಿಂದ ಕೊಟ್ಟದ್ದನ್ನು –ಪರಿಹಾರ ಮಾಡಲು ಇಷ್ಟು ಸಾಲದು, ಉಳಿದ ಪೌರರಿಗೆ ಏನು ಹಕ್ಕು ಬಾಧ್ಯತೆಗಳಿವೆಯೋ, ಅವೆಲ್ಲವೂ ಇವರಿಗೆ ಬರಬೇಕು. ಅವರು ಹಿಂದೂಗಳು. ಹಿಂದೂಗಳಲ್ಲಿ ಎಲ್ಲರಿಗೂ ಏನು ಸಾಮಾಜಿಕ ಸೌಲಭ್ಯಗಳಿವೆಯೋ, ಧಾರ್ಮಿಕ ಅನುಕೂಲತೆಗಳಿವೆಯೋ ಅವು ಇವರಿಗೂ ಸಿಗಬೇಕು. ಆದ್ದರಿಂದ ಸವರ್ಣ ಹಿಂದೂಗಳಿಗೆ ನಾನು ಹೇಳ ಬಯಸುತ್ತೇನೆ, ಅಸ್ಪೃಶ್ಯತೆಯ ಅಪರಾಧದಿಂದ ಪೂರ್ಣವಾಗಿ ಮುಕ್ತರಾಗಬೇಕೆಂದು. ಸವರ್ಣರಿಗೆ ಈಗ ಇರುವ ಅನುಕೂಲದ ಕಾಲ ಬಹಳ ಅಲ್ಪಾವಧಿಯದು. ಈಗ ಅವರು ಎಚ್ಚೆತ್ತುಕೊಳ್ಳದಿದ್ದರೆ ಅವರಿಗೆ ಖಂಡಿತ ಅನಿಷ್ಟ ಕಾದಿದೆ. ಈ ಕೆಲಸ ಒಂದು ಪೌರಸಭೆಯಿಂದ, ಒಬ್ಬ ಮಹಾರಾಜರಿಂದ ಕೂಡ ಆಗುವಂಥದಲ್ಲ. ಈಗ ನಿಮಗೆ ಅರ್ಥವಾಗಿರಬೇಕು. ನನ್ನ ನಿಮ್ಮ ಹೃದಯ ಪರಿವರ್ತನೆ ಆಗದಿದ್ದರೆ ಮಹಾರಾಜರು ಏನು ತಾನೇ ಮಾಡಬಲ್ಲರು? ಆದ್ದರಿಂದ ನಿಮ್ಮ ಹೃದಯದಿಂದ ಅಸ್ಪೃಶ್ಯತೆಯನ್ನು ಉಚ್ಚ ನೀಚ ಭಾವನೆಯನ್ನು ಕಿತ್ತು ಹಾಕಬೇಕು ಎಂದು ಹೇಳುವದು ನನ್ನ ಅಧಿಕಾರವಲ್ಲ. ಅದು ನನ್ನ ಕರ್ತವ್ಯ. ಈ ಸಂದೇಶವನ್ನು ನೀವು ಚೆನ್ನಾಗಿ ಅರಿತುಕೊಂಡರೆ ಹೃದಯ ಪರಿವರ್ತನೆ ಬಹಳ ಸುಲಭ. ಸವರ್ಣ ಹಿಂದೂಗಳ ಹೃದಯ ಪರಿವರ್ತನೆಯಾದರೆ ಆರ್ಥಿಕ, ಸಾಮಾಜಿಕ, ಧಾರ್ಮಿಕ ಪ್ರಗತಿ ತಾನೇ ಬರುತ್ತದೆ. ಅದು ಈ ಹೃದಯ ಪರಿವರ್ತನೆಯ ಕುರುಹು. ನೀವು ಹೃದಯ ಪರಿವರ್ತನೆಯ ಸಂಕಲ್ಪ ಮಾಡಿದ್ದೀರಿ ಎಂಬುದಕ್ಕೆ ನೀವು ಕೊಟ್ಟ ನಿಧಿಗಳೇ ಸಾಕ್ಷಿ. ದೇವರು ನಿಮಗೆ ಆ ಶಕ್ತಿ ನೀಡಲಿ. ಹಿಂದೂ ಧರ್ಮವನ್ನು ಬರಲಿರುವ ವಿನಾಶದಿಂದ ಕಾಪಾಡಲಿ.

**ಕೈ ನೂಲಿನ ಪುನರುದ್ಧಾರ :**

ಮಾರನೆಯ ದಿನ ಬೆಳಿಗ್ಗೆ ತಗಡೂರು ರಾಮಚಂದ್ರರಾಯರು, ವಿ. ವೆಂಕಟಪ್ಪ, ಅಗರಂ ರಂಗಯ್ಯ ಮುಂತಾದವರೊಂದಿಗೆ ಗಾಂಧೀಜಿ ತಗಡೂರಿಗೆ ಬಂದರು. ಅಲ್ಲಿ

ಆಶ್ರಮಕ್ಕೆ ಭೇಟಿ ಕೊಟ್ಟು, ನಿಧಿಯನ್ನು ಸ್ವೀಕರಿಸಿ ಮುಂದೆ ಬದನವಾಳಕ್ಕೆ ಬಂದರು. ಬದನವಾಳದಲ್ಲಿ ಅಖಿಲ ಭಾರತ ಚರಖಾ ಸಂಘ ಒಂದು ಖಾದಿ ಕೇಂದ್ರವನ್ನು ಕೆಲವು ವರ್ಷಗಳ ಕೆಳಗೆ ಸ್ಥಾಪಿಸಿತ್ತು. ೧೯೨೭ರಲ್ಲಿ ಗಾಂಧೀಜಿ ಮೈಸೂರು ಸಂಸ್ಥಾನಕ್ಕೆ ಭೇಟಿ ಕೊಟ್ಟಾಗ, ಸರಕಾರ ಆ ಕೇಂದ್ರವನ್ನು ವಹಿಸಿಕೊಂಡಿತು. ಹಿಂದಿನ ಕಾಲದಲ್ಲಿ ಮೈಸೂರು ದೇಶದಲ್ಲಿ ಖಾದಿ ಉದ್ಯೋಗ ಬಹಳ ಊರ್ಜಿತ ಸ್ಥಿತಿಯಲ್ಲಿತ್ತು. ಆದರೆ ಪರದೇಶಿ ಬಟ್ಟೆ ಆಮದು ಆಗತೊಡಗಿದ ಮೇಲೆ, ಆ ಉದ್ಯೋಗ ನಾಶವಾಗಿಯೇ ಹೋಯಿತು. ಕೈ ನೂಲಿನ ಕಲೆ ಮಾಯವಾಗಿ ಉಳಿದ ನೇಕಾರರು ಗಿರಣಿ ನೂಲಿನ ನೇಯ್ಗೆಗೆ ಮೊದಲಿಟ್ಟರು. ಕಳೆದ ಹತ್ತುವರ್ಷಗಳಲ್ಲಿ ಚರಖಾಸಂಘ ಈ ಕಲೆಯನ್ನು ಮತ್ತೆ ಜೀವಂತಗೊಳಿಸಲು ಪ್ರಯತ್ನಿಸಿತು. ಬದನವಾಳ ಖಾದಿ ಕೇಂದ್ರದಲ್ಲಿ ಸರಕಾರದ ಪರ ಕೆಲಸ ಪ್ರಾರಂಭವಾದಾಗ ೬೦ ಮಂದಿ ನೂಲುಗಾತಿಯರೂ, ೯ ಜನ ನೇಕಾರರೂ, ೩೫೦೦ ರೂಪಾಯಿ ಬಂಡವಾಳ, ಇಷ್ಟು ಇತ್ತು. ಈ ಐದು ವರ್ಷದಲ್ಲಿ ಕೆಲಸ ಹೆಚ್ಚಿ, ೨ ಸಾವಿರ ಜನ ನೂಲುವವರೂ. ೧೪೦ ಜನ ನೇಕಾರರೂ ಇದ್ದಾರೆ. ೬೦ ಹಳ್ಳಿಗಳಲ್ಲಿ ಈ ಕೆಲಸ ಹರಡಿದೆ. ಹೋದ ವರ್ಷ ಕೇಂದ್ರದಲ್ಲಿ ೫೦ ಸಾವಿರ ರೂಪಾಯಿ ಖಾದಿ ವ್ಯಾಪಾರ ಆಗಿದೆ. ನಂಜನಗೂಡಿನಲ್ಲಿ ಒಂದು ಪ್ರತ್ಯೇಕ ಬಣ್ಣ ಹಾಕುವ, ಅಚ್ಚು ಮಾಡುವ ವಿಭಾಗ ತೆರೆಯಲಾಗಿದೆ. ಚಿತ್ರದುರ್ಗ, ಕಡೂರು ಜಿಲ್ಲೆಗಳಲ್ಲಿ ಅಜ್ಜಂಪುರ ಕೇಂದ್ರ, ಐಮಂಗಲ ಕೇಂದ್ರ ಪ್ರಾರಂಭವಾಗಿದೆ. ಈ ಉದ್ಯೋಗ ಹರಿಜನರಿಗೆ ಕೈತುಂಬ ಕೆಲಸ ಕೊಡುತ್ತದೆ. ನೂಲುವಿಕೆಯ ಸುಧಾರಣೆ ಮಾಡಿಕೊಂಡು, ತಮ್ಮ ಜೀವನ ಪದ್ಧತಿಗಳನ್ನು ಬದಲಾಯಿಸಿ, ದುಷ್ಟ ಚಟಗಳನ್ನು ಅತಿವ್ಯಯವನ್ನು ತಗ್ಗಿಸಿ ಇದ್ದ ಅಲ್ಪ ಸ್ವಲ್ಪ ಹಣ ಕೂಡಿಟ್ಟು ಹಣವು ಬತ್ತಿಹೋಗುವುದನ್ನು ನಿಲ್ಲಿಸಬೇಕೆಂದು ಗಾಂಧೀಜಿ ಹೇಳಿದರು.

**ಬಾಹ್ಯ ಅಂತಃಶುಚಿ:**

ತನುಮನಗಳಲ್ಲಿ ಶುದ್ಧವಾಗಿರಬೇಕು ಎಂಬ ಹಿತವಚನವನ್ನು ಹರಿಜನರಿಗೆ ಗಾಂಧೀಜಿ ಹೇಳಿಯೇ ಇರುತ್ತಾರೆ. ಒಂದು ಹಳ್ಳಿಯಲ್ಲಿ ಹರಿಜನರ ಸಭೆಯಲ್ಲಿ ಮಾತನಾಡುತ್ತ– 'ನೀವು ತಾಯಂದಿರು, ಮಕ್ಕಳಿಗೆ ದಿನವೂ ಸ್ನಾನ ಮಾಡಿಸಬೇಕು, ನೀವು ಮಾಡಬೇಕು. ಬೆಳಿಗ್ಗೆ ಎದ್ದ ಕೂಡಲೇ ಒಳಗಿನ ಸ್ನಾನ ಆಗಬೇಕು. ಎಂದರೆ ಹಾಸಿಗೆ ಬಿಟ್ಟು ಎದ್ದ ಕೂಡಲೆ ರಾಮನಾಮವನ್ನು ಕೀರ್ತಿಸಿ ದಿನವೆಲ್ಲ ಏನೂ ತಪ್ಪು ಮಾತು ಆಡದಂತೆ, ತಪ್ಪು ಕೆಲಸ ಮಾಡದಂತೆ ಶುದ್ಧವಾಗಿ ಕಳೆಯಲು ಭಗವಂತನನ್ನು ಪ್ರಾರ್ಥಿಸಬೇಕು. ಆ ಮೇಲೆ ಮೈ ತೊಳೆಯಬೇಕು' ಎಂದರು. ಅನಂತಪುರದಲ್ಲಿ ಒಂದು ನಲ್ಲಿಯನ್ನು ಹರಿಜನರಿಗಾಗಿ ಪ್ರಾರಂಭಿಸುತ್ತ ಹೇಳಿದರು: 'ಈ ನೀರು ನಿಮಗೆ ಜೀವನ ಕೊಡುವ ನೀರಾಗಲಿ. ನೀರು ಶುಭ್ರತೆಯ ಸಂಕೇತ. ಮೈಯನ್ನು ನೀರಿನಿಂದ ತೊಳೆಯುವಂತೆ ದಿನವೂ ಹೃದಯವನ್ನು ಪ್ರಾತಃಸ್ಮರಣೆಯಿಂದ–ರಾಮನಾಮ ಕೀರ್ತನದಿಂದ ತೊಳೆಯಬೇಕು.' ಮೈಸೂರಿನಲ್ಲಿ ಒಂದು ಹರಿಜನ ಸಭೆಯಲ್ಲಿ ಹೇಳಿದರು: 'ಹೊರಗೂ ಒಳಗೂ ಆರೋಗ್ಯದ ನಿಯಮಗಳನ್ನು ಅನುಸರಿಸಬೇಕು. ಒಳಗಿನ ನಿಯಮ ಎಂದರೆ ದೇವ ಹೆಸರನ್ನು ಹೇಳುವುದು.

ಬೆಳಿಗ್ಗೆ ಎದ್ದ ಕೂಡಲೆ ಇದು ಮೊಟ್ಟ ಮೊದಲನೆಯ ಕೆಲಸ. ಆತ್ಮಫಲಾಹಾರ, ಅಥವಾ ಆತ್ಮಕ್ಕೆ ನೀಡಿದ ಪೋಷಣೆ.'

ಅಲ್ಲಿನ ಹರಿಜನರು ಗೋಮಾಂಸ ಭಕ್ಷಣ ಬಿಟ್ಟಿದ್ದಾರೆ ಎಂದು ತಿಳಿಸಿದಾಗ– 'ನನಗೆ ತುಂಬಾ ಸಂತೋಷ, ನಿಮಗೂ ಅಭಿವಂದನೆ. ಗೋಮಾಂಸವನ್ನು ಬಿಟ್ಟಿದ್ದೀರಲ್ಲ. ಕುಡಿತದ ಬಗ್ಗೆಯೂ ಇದೇ ಮಾತನ್ನು ನೀವು ಹೇಳುವಂತಾದರೆ ಎಷ್ಟು ಚೆನ್ನ! ಯಾವುದೋ ಬಣ್ಣದ ನೀರು. ಅದನ್ನು ಕುಡಿದು ಹುಚ್ಚು ಹಿಡಿದು, ತಾಯಿ ಯಾರೋ, ತಂಗಿ ಯಾರೋ, ಹೆಂಡತಿ ಯಾರೋ, ಭೇದವನ್ನೇ ಮರೆಯುವಂತೆ ಆಗುವುದಕ್ಕೆ ಈ ಬಣ್ಣದ ನೀರಿಗೆ ನಾವು ದುಡ್ಡು ಬೇರೆ ಕೊಡಬೇಕೆ? ಮದುವೆಗಳಲ್ಲಿ, ಸಾವಿನಲ್ಲಿ ಹೆಂಡ ಕುಡಿಯಲೇ ಬೇಕು ಎಂಬ ನಿಯಮ ಹರಿಜನರಲ್ಲಿ ಇದೆಯಂತೆ. ಇದು ಕಲಿಯ ಮಾತು, ಸೈತಾನನ ಮಾತು. ವಿರೋಧದ ಭಯವಿಲ್ಲದೆ ಈ ಮಾತು ಹೇಳುತ್ತೇನೆ. ಯಾವ ಶಾಸ್ತ್ರದಲ್ಲಿಯೂ ಹೀಗೆ ಹೇಳಿಲ್ಲ. ತಮ್ಮಂದಿರೇ ತಂಗಿಯರೇ, ಈ ಕಲಿಪುರುಷನ ಬಳಿಗೆ ಹೋಗಬೇಡಿ. ನನ್ನ ಮಾತಿಗೆ ಕಿವಿಕೊಡಿ. ಕುಡಿತವನ್ನು ಬಿಟ್ಟಿದ್ದೇವೆ ಎಂದು ಹೇಳಿದ ದಿನ ನನಗೆ ಅತ್ಯಂತ ಆನಂದವಾಗುತ್ತದೆ' ಎಂದು ಗಾಂಧೀಜಿ ಹೇಳಿದರು.

ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಮಾಡಿಕೊಂಡು, ಗೌರಿಬಿದನೂರು, ದೊಡ್ಡಬಳ್ಳಾಪುರ, ತುಮಕೂರು, ನೆಲಮಂಗಲಗಳ ಮಾರ್ಗವಾಗಿ ಬೆಂಗಳೂರಿಗೆ ಬಂದು, ಅಲ್ಲಿಂದ ಮೈಸೂರಿಗೆ ಹೋಗಿ ತಗಡೂರು, ಬದನವಾಳ, ನಂಜನಗೂಡು, ಮಂಡ್ಯ, ಮದ್ದೂರುಗಳಲ್ಲಿ ನಿಧಿಯನ್ನು ಸ್ವೀಕರಿಸಿ ಕಾನಕಾನಹಳ್ಳಿ, ಚನ್ನಪಟ್ಟಣ, ಕೆಂಗೇರಿಗಳ ಮೂಲಕ ಬೆಂಗಳೂರಿಗೆ ಬಂದರು, ಬೆಂಗಳೂರಿನಲ್ಲಿ ಮೂರು ದಿನ ತಂಗಿದ್ದರು.

*(ಹರಿಜನ : ೧೨–೧–೧೯೩೪)*

**ಚೆನ್ನಪಟ್ಟಣ :**

೬–೧–೧೯೩೪ರ ಬೆಳಿಗ್ಗೆ ೯ ಗಂಟೆಗೆ ಚೆನ್ನಪಟ್ಟಣದಲ್ಲಿ ಅಭಯ ಕುಟೀರಕ್ಕೆ ಬಂದರು. ಹರಿಜನರ ಭಕ್ತಿಪೂರ್ವಕ ವಂದನೆಗಳನ್ನು ಸ್ವೀಕರಿಸಿ ಹರಿಜನರ ಮನೆಗಳನ್ನು ನೋಡಲು ಆ ಬೀದಿಗಳಲ್ಲಿ ಗಾಂಧೀಜಿ ನಡೆದರು. 'ಯಾವಾಗಲೂ ಇವರ ಮನೆಗಳು, ಬೀದಿಗಳು ಹೀಗೆಯೇ ಇರುತ್ತವೆಯೇ' ಎಂದು ಕೇಳಿದರು. ಅಲ್ಲಿದ್ದವರು ಹೇಳಿದರು, –'ಸುಮಾರಾಗಿ ಹೀಗೆಯೇ ಇರುತ್ತವೆ. ಇವತ್ತು ನೀರು ಚೆಲ್ಲಿ ರಂಗೋಲಿ ಹಾಕಿದ್ದಾರೆ ಅಷ್ಟೆ.' ಹರಿಜನರಿಗಾಗಿ ಹೊಸದಾಗಿ ಕಟ್ಟಿದ್ದ ಬಾವಿಯಲ್ಲಿ ಗಾಂಧೀಜಿ ತಾವೇ ನೀರು ಸೇದಿ ಕುಡಿದು ಭೇದವನ್ನು ಮರೆತು ನೀರು ಕುಡಿಯಬೇಕು ಎಂದು ಹೇಳಿದರು. ನೀರಿನ ಹಾಗೆಯೇ ನಾವು ಶುದ್ಧರಾಗಬೇಕು ಎಂದರು. ಸಮೀಪದಲ್ಲಿದ್ದ ಒಂದು ಭಜನೆಯ ಮನೆಯನ್ನು ಪ್ರಾರಂಭಿಸಿ ಎಲ್ಲರೂ ದೈವಭಕ್ತರಾಗಬೇಕು ಎಂದರು.

ಇಲ್ಲಿಂದ ಮುಂದೆ ಸಾರ್ವಜನಿಕ ಸಭೆ. ಅಲ್ಲಿಯೂ ಅವರ ಸಂದೇಶ ಒಂದೇ. ಧಾರ್ಮಿಕವಾಗಿ, ರಾಜಕೀಯವಾಗಿ, ದೇಶ ಹಿತದ ದೃಷ್ಟಿಯಿಂದ ಹರಿಜನ ಸಮಸ್ಯೆಯನ್ನು

ನೋಡಬೇಕು. ಅಸ್ಪೃಶ್ಯತೆಯನ್ನು ಕಿತ್ತೊಗೆಯಬೇಕು. ಹರಿಜನಾಭಿವೃದ್ಧಿಗೆ ನೀವೆಲ್ಲರೂ ಸಹಕರಿಸಿ, ನನಗೆ ಆತ್ಮಶಾಂತಿಯನ್ನು ಉಂಟುಮಾಡಬೇಕು ಎಂದು ಗಾಂಧೀಜಿ ಹೇಳಿದರು.

ಚೆನ್ನಪಟ್ಟಣದಲ್ಲಿ ಮಹಾತ್ಮರ ವಿಶ್ರಾಂತಿಯ ಕಾರ್ಯಕ್ರಮ ಬಹಳ ಯಶಸ್ವಿ ಆಯಿತು. ಅಲ್ಲಿನ ಹರಿಜನ ಸೇವಕ ಸಂಘದ ಕಾರ್ಯದರ್ಶಿ ಶ್ರೀ ಆರ್ಯಮೂರ್ತಿಯವರು ತಮ್ಮ 'ಅಭಯ' ಕುಟೀರದ ಆವರಣದಲ್ಲಿ ಗಾಂಧೀ ಸ್ಮಾರಕ ಭವನಕ್ಕಾಗಿ ಅರ್ಧ ಎಕರೆ ನಿವೇಶನವನ್ನು ದಾನಮಾಡಿದರು. ಅವರ ಪಕ್ಕದಲ್ಲಿ ಅವರ ಹೆಂಡತಿ ಸರಸ್ವತಮ್ಮ, ಕಂಕುಳಲ್ಲಿ ಒಂದು ಮಗುವನ್ನು ಎತ್ತಿಕೊಂಡು ನಿಂತಿದ್ದರು. ಅದನ್ನು ನೋಡಿ ಗಾಂಧೀಜಿ, 'ಕಿತ್ನೆ ದಿನಕಾ ಬಚ್ಚಾ ಹೈ' ಎಂದು ಕೇಳಿದರು. ೧೧ ದಿನದ್ದು ಎಂದು ತಾಯಿ ಹೇಳಿದ ಮೇಲೆ, ಆ ಮಗುವಿಗೆ 'ಅಭಯ ಕುಮಾರ' ಎಂದು ಹೆಸರಿಡಿರಿ ಎಂದು ಹೇಳಿದರು. ಮುಂದೆ ಆ ಮಾತನ್ನು ಪುಷ್ಟೀಕರಿಸುತ್ತ ಬೆಳಗಾಂವಿಯಿಂದ ಆ ಹುಡುಗನ ತಂದೆಗೆ ಒಂದು ಸಪತ್ರವನ್ನು ಬರೆದರು.

Belgaum
5th February, 1934

Dear friend,

I thank you for your letter. The baby's name may be Abhayakumar. Bless you.

Yours sincerely
M.K.GANDHI.

ಗಾಂಧೀಜಿ ಜೊತೆಯಲ್ಲಿ ಮೀರಾಬೆನ್ ಕೂಡ ಬಂದಿದ್ದರು. ಅವರೂ ಜಮುನಾಲಾಲರ ಮಗಳೂ ಹೊಬಾಯಿ, ಶ್ರೀಮತಿ ಕೃಷ್ಣಾಬಾಯಿ ಪಣಜೀಕರ, ಶ್ರೀಮತಿ ಮಾಗಂಟಿ ಅನ್ನಪೂರ್ಣಮ್ಮ ಇವರು ಒಂದು ಗಂಟೆ ಮೊದಲೇ ಚೆನ್ನಪಟ್ಟಣಕ್ಕೆ ಬಂದರು. ಗಾಂಧೀಜಿಗಾಗಿ ಮೇಕೆ ಹಾಲು ಬೇಕಲ್ಲ. ಅದಕ್ಕಾಗಿ ಎರಡು ಮೇಕೆಗಳನ್ನು ಅಭಯ ಕುಟೀರಕ್ಕೆ ತರಿಸಿದ್ದರು. ಇವು ಆರೋಗ್ಯವಾಗಿ, ಸ್ವಚ್ಛವಾಗಿ ಇವೆಯೋ ಇಲ್ಲವೋ ಎಂಬುದನ್ನು ಮೀರಾಬೆನ್ ನೋಡಿದರು. ಅಂದವಾಗಿ, ಪುಷ್ಟವಾಗಿ ಮರಿಗಳೊಂದಿಗೆ ಇದ್ದ ಮೇಕೆಗಳನ್ನು ನೋಡಿ ಬಹಳ ಚೆನ್ನಾಗಿವೆ ಎಂದರು.

*(ಹರಿಜನ ಸೇವಕ ಸಂಘದ ಕಾರ್ಯದರ್ಶಿ ವರದಿ)*

ಚೆನ್ನಪಟ್ಟಣಕ್ಕೆ ಬರುವಾಗ ದಾರಿಯಲ್ಲಿ ಮಂಡ್ಯ-ಮದ್ದೂರು, ಶಿವಪುರ, ಸೋಮನಹಳ್ಳಿಗಳಲ್ಲಿ ಸ್ವಲ್ಪ ನಿಂತು ಗಾಂಧೀಜಿ ನಿಧಿಯನ್ನು ಪಡೆದರು. ಮಂಡ್ಯದಲ್ಲಿ ಅವರಿಗೊಂದು ಬಿನ್ನವತ್ತಳೆಯನ್ನು ಕೊಟ್ಟರು. ಚೆನ್ನಪಟ್ಟಣದಿಂದ ಕ್ಲೋಸ್‌ಪೇಟೆಗೆ (ಈಗ ರಾಮನಗರ) ಬಂದು, ಅಲ್ಲಿ ಎರಡು ಬಿನ್ನವತ್ತಳೆಗಳನ್ನೂ, ನಿಧಿಯನ್ನೂ ಸ್ವೀಕರಿಸಿದರು. ಕಾನಕಾನಹಳ್ಳಿ

ಯಲ್ಲಿ ನಿಧಿ ಕೊಟ್ಟರು. ಕೆಲವು ಸಾಮಾನನ್ನು ಅಲ್ಲಿ ಹರಾಜು ಮಾಡಿಧರು. ಅಲ್ಲಿಂದ ಕೆಂಗೇರಿಗೆ ಬಂದು ಗುರುಕುಲಾಶ್ರಮದಲ್ಲಿ ಆಶ್ರಮದ ಹಾಗೂ ಜಿಲ್ಲಾ ಬೋರ್ಡಿನ ಬಿನ್ನವತ್ತಳೆಗಳನ್ನು ಪಡೆದರು. ಅಲ್ಲಿ ಕೊಟ್ಟ ಕರಂಡಕವನ್ನು ಹರಾಜು ಹಾಕಿದರು.

**ಸಿಹಿಯಲ್ಲಿ ದುಃಖ :**

ಬೆಂಗಳೂರಿನಲ್ಲಿ ಗಾಂಧೀಜಿ ೩ ದಿನ ತಂಗಿದ್ದರು ಆರು ವರ್ಷಗಳ ಹಿಂದೆ. ಅವರು ಆಗ ಮೂರು ತಿಂಗಳು ಇದ್ದಾಗ ಯಾವ ಅಭಿಮಾನ, ಆದರ, ಆತಿಥ್ಯಗಳನ್ನು ಅನುಭವಿಸಿದ್ದರೋ ಅದರ ಪುನರ್ನವೀಕರಣ ಈ ಸಲವೂ ಆಯಿತು. ಸಂದರ್ಶನಕ್ಕಾಗಿ ಬರುತ್ತಿದ್ದ ಜನರ ಸಾಲು, ಸಂಜೆಯ ಪ್ರಾರ್ಥನೆಗೆ ಬರುತ್ತಿದ್ದ ನೂರಾರು ಜನರ ಗುಂಪು ಎಲ್ಲವೂ ಹಿಂದಿನ ಸವಿ ನೆನಪನ್ನು ಮತ್ತೆ ತಂದವು. ದಿವಾನ್ ಮಿರ್ಜಾ ಇಸ್ಮಾಯಿಲರು ಸ್ನೇಹ ಸಂದರ್ಶನಕ್ಕಾಗಿ ಆಗಾಗ ಬಂದು ಗಾಂಧೀಜಿಯ ಆರೋಗ್ಯವನ್ನು, ಅವರ ಪ್ರವಾಸದ ಯಶಸ್ಸನ್ನೂ ಬಯಸುತ್ತಿದ್ದರು. ಬೆಂಗಳೂರಿನಲ್ಲಿ ದೀರ್ಘಕಾಲ ಇದ್ದು ವಿಶ್ರಮಿಸಿಕೊಳ್ಳುವಂತೆ ಒತ್ತಾಯ ಮಾಡಿದರು. ೧೯೨೭ರಲ್ಲಿ ಗಾಂಧೀಜಿಯನ್ನು ಆರೋಗ್ಯವಂತರನ್ನಾಗಿ ಮಾಡಿದ ಡಾ॥ ಸುಬ್ಬರಾಯರೂ, ಕೃಷ್ಣಸ್ವಾಮಿರಾಯರೂ ಬಂದು ಗಾಂಧೀಜಿಯನ್ನು ಪರೀಕ್ಷಿಸಿದರು. 'ನಿಮ್ಮನ್ನು ನೋಡಲಿಕೆ ಈ ಪರೀಕ್ಷೆ ಒಂದು ನಿಮಿತ್ತ ಮಾತ್ರ. ಇಲ್ಲಿಗೆ ಬರಲು ಇದು ಒಂದು ಅನುಕೂಲ' ಎನ್ನುತ್ತ ಡಾ॥ ಸುಬ್ಬರಾಯರು ಸದಾ ಜಾಗರೂಕರಾದ ಸ್ವಯಂ ಸೇವಕರು ತಮ್ಮನ್ನು ಹೇಗೆ ತಡೆದರು, ತಮ್ಮ ವೈದ್ಯೋಪಕರಣ ಹೇಗೆ ತಮ್ಮನ್ನು ಒಳಗೆ ಬಿಡಿಸಿತು ಇದನ್ನೆಲ್ಲ ಹೇಳಿ ನಕ್ಕರು. ಪರೀಕ್ಷೆ ಮಾಡಿ ಗಾಂಧೀಜಿಯ ಆರೋಗ್ಯ ಚೆನ್ನಾಗಿದೆ ಎಂದು ಹೇಳಿದರು.

ಈ ಸಭೆಯ ಎಲ್ಲವೂ ದುಃಖ ಮಿಶ್ರಿತವಾಗದೆ ಇರಲಿಲ್ಲ. ಹಿಂದೆ ಗಾಂಧೀಜಿ ತಮ್ಮ ನಿಕಟವರ್ತಿಗಳ ಸಂಗಡ ಇಲ್ಲಿ ಇದ್ದದ್ದನ್ನು ಮತ್ತೆ ಮತ್ತೆ ನೆನೆದುಕೊಂಡರು. ಇಂದು ಕರ್ತವ್ಯಭಾರದಿಂದ ಎಲ್ಲೋ ದೂರ ದೂರ ಹೋಗಿದ್ದಾರೆ. ಗಾಂಧೀಜಿಯ ಜೊತೆಯಲ್ಲಿ ಪ್ರತಿ ಗಳಿಗೆಯೂ ಇದ್ದು ಅವರ ಮನಸ್ಸಿನ ಭಾರವನ್ನು ಕಡಿಮೆ ಮಾಡುತ್ತಿದ್ದ ಆ ಜೊತೆಗಾರರು ಇದ್ದಿದ್ದರೆ ಚೆನ್ನಾಗಿತ್ತು. ಆದರೆ ಗಾಂಧೀಜಿಯದು ಬಹಳ ನಿಷ್ಠುರ ಕರ್ತವ್ಯಪಾಲನೆಯ ಭಾವ. ಆ ಭಾವನೆಯ ಮುಂದೆ ಯಾವ ಅಗಲಿಕೆಯ ಭಾವವೂ, ಯಾವ ಹೆಚ್ಚಿನ ಭಾರವೂ ಅವರಿಗೆ ಕಷ್ಟ ಎನಿಸುವುದಿಲ್ಲ. ಆದರೆ ಮಹಾದೇವ ಭಾಯಿ ಇರುತ್ತಿದ್ದ ಕುಮಾರ ಪಾರ್ಕಿನ ಆ ಕೊಠಡಿಯನ್ನು ನೋಡಿದಾಗ, ಮೂರು ದಿನ ಎಂದರೆ ನನಗೆ ಮೂರು ಯುಗವಾಯಿತು. ಶೂನ್ಯದ ಅನುಭವ ಸದಾ ಕಾಡುತ್ತಿತ್ತು. ಕೆಲವು ದಿನಗಳ ಕೆಳಗೆ ಒಬ್ಬ ಗೆಳೆಯನಿಗೆ ಗಾಂಧೀಜಿ ಹೇಳಿದರು, –

'ಮಹಾದೇವ ಜೊತೆಯಲ್ಲಿ ಇಲ್ಲದೆ ಇದು ಮೊದಲನೆಯ ಸಲ' ಎಂದು ನಿಟ್ಟುಸಿರು ಬಿಟ್ಟರು ಗಾಂಧೀಜಿ. (ಮಹಾದೇವ ಭಾಯಿ ಮತ್ತು ಕಸ್ತೂರಬಾ ಆಗ ಯರವಾಡ ಜೈಲಿನಲ್ಲಿದ್ದರು). ಆ ಮಾತಿನ ಹಿಂದೆ ಎಷ್ಟು ಅರ್ಥ ಅಡಗಿದೆ. ಈ ದುಃಖದ ವಿಚಾರ

ಪದೇ ಪದೇ ಮನಸ್ಸಿಗೆ ಬರುತ್ತದೆ. ಮಹಾದೇವ ದೇಸಾಯಿಯ ಶ್ರದ್ಧಾ ಭಕ್ತಿ ಅವರದೇ ಸರಿ. ಕೆಲಸ ಮಾಡುವ ಸಾಮರ್ಥ್ಯವಾದರೂ ಅವರಿಗೆ ಎಷ್ಟು ಅದ್ಭುತವಾಗಿತ್ತು. ಅವರ ಮಧುರ ಮಂದಹಾಸವು ಹತ್ತಿರ ಬಂದವರ ಹೃದಯದಲ್ಲಿ ಒಂದು ಮನೆ ಮಾಡಿ ಕೊಡುತ್ತಿತ್ತು. ಸದಾ ಜೊತೆಗೆ ಇರುತ್ತಿದ್ದ ಇಂಥ ಸಂಗಾತಿ, ಪ್ರವಾಸದಲ್ಲಿ ಇಲ್ಲದೆ ಗಾಂಧೀಜಿಗೆ ಎಷ್ಟು ದುಃಖವೋ ಹೇಳಲು ಸಾಧ್ಯವಿಲ್ಲ. ಮಹಾದೇವ ಭಾಯಿಯನ್ನು ಕಂಡವರೆಲ್ಲರೂ ಪ್ರೀತಿಸುತ್ತಿದ್ದರು. ಅವರ ಹೆಸರು ಹೇಳುವುದು ಎಂದರೆ ಸುಮ್ಮನೆ ಹೊಗಳುವದೆ. ಅವರ ಸ್ಥಾನಕ್ಕೆ ಮತ್ತೆ ಯಾರೂ ಬರಲು ಸಾಧ್ಯವಿಲ್ಲ ಎಂದು ಎಲ್ಲರಿಗೂ ಅನಿಸುತ್ತಿತ್ತು. ಸೆರೆಮನೆಯನ್ನು ಬಿಟ್ಟು, ಅವರು ಯಾವಾಗ ಬರುತ್ತಾರೆ ಎಂದು ಎಲ್ಲರೂ ಕೇಳುವವರೇ.

ಗಾಂಧೀಜಿ ಬೆಂಗಳೂರಿನಲ್ಲಿ ಇದ್ದಾಗ ಕಂಡುಬಂದ ಉತ್ಸಾಹದ ದೃಶ್ಯಗಳಿಂದ, ಸ್ವಲ್ಪ ಮಟ್ಟಿಗೆ ಈ ದುಃಖ ಕಡಿಮೆ ಆಯಿತು ಎನ್ನಬೇಕು. ಗಂಡಸರೂ, ಹೆಂಗಸರೂ, ವರ್ತಕರೂ, ಕೂಲಿಕಾರರೂ, ಶಿಕ್ಷಕರೂ, ವಿದ್ಯಾರ್ಥಿಗಳೂ ಎಲ್ಲರೂ ಗಾಂಧೀಜಿಯ ಈ ಭೇಟಿಯನ್ನು ಯಶಸ್ವಿಗೊಳಿಸಲು ಪ್ರಯತ್ನಿಸಿದರು.

ಒಂದೆರಡು ಮಹಿಳೆಯರ ಸಭೆ ನಡೆದವು. ಅದರಲ್ಲಿ ಗಾಂಧೀಜಿ ಹೇಳಿದರು: 'ನಿಮಗಿಂತ ಕೆಲವರು ಕೀಳು ಎಂದು ಭಾವಿಸಿದಾಗ ನಮ್ಮಲ್ಲಿ ತುಂಬ ಕೆಡುಕು ಇರುತ್ತದೆ. ಈ ಕೆಡುಕನ್ನು ತೊಡೆದು ಹಾಕದಿದ್ದರೆ ಅದು ನಮ್ಮನ್ನೇ ತಿಂದುಬಿಡುತ್ತದೆ. ಪ್ರಾಯಶ್ಚಿತ್ತ ಮಾಡಿಕೊಳ್ಳಲೂ ಕೂಡ ಒಬ್ಬನೂ ಹಿಂದೆ ಉಳಿಯುವದಿಲ್ಲ. ಅಂಥ ದುರುದ್ದೃಷ್ಟವನ್ನು ನಾವು ತೊಲಗಿಸುತ್ತಿದ್ದೇವೆ. ಭಾರತದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಈ ಎಚ್ಚರಿಕೆ ಕೊಡುತ್ತ ನಾನು ತಿರುಗಾಡುತ್ತಿದ್ದೇನೆ. ಎಲ್ಲ ಹರಿಜನರನ್ನು ನಮ್ಮ ಒಡಹುಟ್ಟಿದವರಂತೆ ಬಗೆದರೆ ಬಹಳ ಪುಣ್ಯಕಾರ್ಯ ಆದೀತು ನಮ್ಮಿಂದ'. ಬೆಂಗಳೂರಿನಲ್ಲಿ ಹರಿಜನ ವಸತಿಯನ್ನು ನೋಡಿಕೊಂಡು ಬಂದು, ಮೈಸೂರಿನ ವಸತಿಗೂ, ಇಲ್ಲಿನದಕ್ಕೂ ಎಷ್ಟು ಅಂತರವಿದೆ ಎಂಬುದನ್ನು ಗಮನಿಸಿ, ಒಂದು ಸಭೆಯಲ್ಲಿ ಹೇಳಿದರು:

"ಇತರರೂ ನಮ್ಮನ್ನು ಹೇಗೆ ಕಾಣಬೇಕು ಎಂದು ನಾವು ಬಗೆಯುತ್ತೇವೋ ಅದರಂತೆಯೇ ಇತರರನ್ನೂ ನಾವು ಕಂಡರೆ ನಾವೇ ಧನ್ಯರು ಎಂಬ ಸೂತ್ರದಲ್ಲಿ ನನಗೆ ಬಹಳ ನಂಬಿಕೆ. ನಾನು ಇವತ್ತು ಬೆಳಗ್ಗೆ ನೋಡಿ ಬಂದ ಆ ಬಿಲಗಳು ಮನುಷ್ಯರ ವಸತಿಗೆ ಯೋಗ್ಯವಲ್ಲ. ಎಲ್ಲಕ್ಕೂ ಒಂದು ಮಿತಿ ಇದೆ. ಅದಕ್ಕಿಂತ ಕೆಳಗೆ ಹೋದರೆ ನಮ್ಮ ಮಾನವೀಯತೆಗೆ ಅವಮಾನ. ನಾವು ನೋಡಿ ಬಂದ ಆ ಬಿಲಗಳು ಆ ಕನಿಷ್ಠ ಮಿತಿಗೂ ಹೊಂದುವುದಿಲ್ಲ. ಈ ಊರು ಅನೇಕ ಬಗೆಯಲ್ಲಿ ಸುಂದರ. ಅದರಿಂದ ಈ ಕಳಂಕವನ್ನು ಆದಷ್ಟು ಬೇಗ ಮೊಟ್ಟಮೊದಲು ತೊಡೆದು ಹಾಕಬೇಕು. ಈ ಅದೃಷ್ಟ ಹೀನರಿಗೆ ಒಳ್ಳೆಯ ವಸತಿ ಕಲ್ಪಿಸಿಕೊಡಲು ತೀರ್ಮಾನ ಆಗಿದೆಯಂತೆ. ಆದರೆ ಇಂಥ ವಿಷಯದಲ್ಲಿ 'ಆಲಸ್ಯಂ ಅಮೃತಂ ವಿಷಂ"

**ಸರಕಾರ ಮತ್ತು ವ್ಯಕ್ತಿ :**

ಬೆಂಗಳೂರಿನಲ್ಲಿಯೂ ರಾಜ್ಯದ ಬೇರೆ ಬೇರೆ ಸ್ಥಳಗಳಲ್ಲಿಯೂ ಗಾಂಧೀಜಿ, ಸರಕಾರವೂ ಜನರೂ ಈ ಸುಧಾರಣೆಗಾಗಿ ಮಾಡುತ್ತಿದ್ದ ಪ್ರಯತ್ನವನ್ನು ಗಮನಿಸಿದರು. ಮೈಸೂರು ಸಂಸ್ಥಾನದ ಜನಸಂಖ್ಯೆಯಲ್ಲಿ ಸುಮಾರು ಆರನೇ ಒಂದು ಪಾಲು ಹರಿಜನರು. ಅವರ ಅಭಿವೃದ್ಧಿ ವಿಷಯದಲ್ಲಿ ಮೈಸೂರು ಸರ್ಕಾರ ಸಹಾನುಭೂತಿಯನ್ನು ತಾಳಿದೆ. ಎಲ್ಲ ವಿಧದಲ್ಲಿಯೂ ಅವರಿಗೆ ಅನುಕೂಲ ಮಾಡುತ್ತಿದೆ. ಸರಕಾರಿ ರಸ್ತೆ, ಕೆರೆ, ಬಾವಿ, ಧರ್ಮಶಾಲೆ ಮುಂತಾದವುಗಳಲ್ಲಿ ಭೇದವಿಲ್ಲದೆ ಎಲ್ಲರಿಗೂ ಅವಕಾಶ ಕಲ್ಪಿಸಿಕೊಟ್ಟಿದೆ.

ಗಾಂಧೀಜಿ ಇಷ್ಟರಿಂದ ತೃಪ್ತಿ ಆಗಲಿಲ್ಲ. 'ಆತ್ಮಶುದ್ಧಿಗೆ ಕೊನೆಯೇ ಇಲ್ಲ. ನಾವು ಮಾಡಿದ್ದು ತೃಪ್ತಿಕರ ಎನಿಸಿದರೆ ನಮ್ಮದು ಅಲ್ಲಿಂದ ಮುಂದೆ ಅವನತಿ, ಪ್ರಗತಿ ಅಲ್ಲ. ಅಸ್ಪೃಶ್ಯತೆ ಪೂರಾ ಅಳಿದು ಹೋಗುವವರೆಗೆ, ಗತ ಕಾಲದ್ದು ಎನಿಸುವವರೆಗೆ ನೀವು ಸುಮ್ಮನೆ ಕೂಡಬಾರದು. ಮೈಸೂರಿನವರಿಗೆ ಏನಾದರೂ ಒಂದು ಸಂದೇಶ ಕೊಡಿ ಎಂದು ಕೇಳಿದಾಗ, ಸಂಸ್ಥಾನದಲ್ಲಿ ನನ್ನ ಪ್ರವಾಸ ತುಂಬಾ ಅಲ್ಪ ಕಾಲದ್ದಾದರೂ ಬಹಳ ಸಂತೋಷದ ನೆನಪುಗಳನ್ನು ಒಯ್ಯುತ್ತಿದ್ದೇನೆ. ಮೈಸೂರು ಪ್ರಗತಿಪರ ರಾಜ್ಯ ಎಂದು ಹೆಸರಾಗಿದೆ. ಮೈಸೂರಿನ ಜನ ಆ ಹೆಸರನ್ನು ಉಳಿಸಿಕೊಳ್ಳಲು ಅಸ್ಪೃಶ್ಯತೆಯನ್ನು ಬೇರು ಸಹಿತ ಕಿತ್ತು ಹಾಕುತ್ತಾರೆ ಎಂದು ನಂಬಿದ್ದೇನೆ' ಎಂದರು.

ಹರಿಜನ ಕೆಲಸಗಾರರು ಕೆಲವರು ಅವರನ್ನು ಕಂಡು ಅನೇಕ ಪ್ರಶ್ನೆ ಕೇಳಿದರು. 'ಸರಕಾರವೇ ಇಷ್ಟು ಮಾಡುತ್ತಿರುವಾಗ, ನಾನು ಏನು ತಾನೆ ಮಾಡಬೇಕು?' ಎಂಬುದೊಂದು ಪ್ರಶ್ನೆ. 'ಸರಕಾರ ಮಾಡುವ ಕೆಲಸಕ್ಕೆ ಪೂರಕವಾಗಿ ಮಾಡಿ. ಹರಿಜನರ ನಡುವೆ ಹೋಗಿ ನೆಲೆಸಲು ನೀವು ಕೆಲಸಗಾರರನ್ನು ಕಂಡು ಹಿಡಿಯಿರಿ. ಇದು ಬರೀ ಉದಾಹರಣೆ. ಸೂತ್ರ ಹೀಗೆ: ಸರಕಾರ ಎಲ್ಲಿ ಮುಗಿಸುತ್ತದೆಯೋ ಅಲ್ಲಿ ನೀವು ಪ್ರಾರಂಭಿಸಿ. ಸರಕಾರ ವ್ಯಕ್ತಿಗಳ ಯೋಗಕ್ಷೇಮಗಳನ್ನು ನೋಡಲಾರದು. ಆ ಭಾಗ್ಯ ಖಾಸಗಿ ಜನರದು. ಪ್ರತಿಯೊಬ್ಬ ಕೆಲಸಗಾರನೂ ತನ್ನ ಸಾಮರ್ಥ್ಯ ಪರೀಕ್ಷೆ ಮಾಡಿಕೊಳ್ಳಬೇಕು. ನಾಟಕೀಯವಾಗಿ ಯಾವುದನ್ನೂ ಮಾಡಬಾರದು. ನೋಡಲು ದೊಡ್ಡದಾಗಿ ಕಾಣದಿದ್ದರೂ ನಮ್ಮ ಕೆಲಸ ತೂಕದ್ದು ಆಗಬೇಕು. ಜನರ ನಿಕಟ ಸಂಪರ್ಕ ನಮಗೆ ಬೇಕು. ಈ ಸಂಪರ್ಕವನ್ನು ಸರಕಾರ ಸಾಧಿಸಲಾರದು. ಮೂಲತಃ ಇದು ಸಮಾಜ ಸುಧಾರಕರ ಕೆಲಸ. ದೇವಾಲಯ ಪ್ರವೇಶದ ಕೆಲಸ ಮಾಡಲು ಅದಕ್ಕೆ ವಿಶೇಷ ಅರ್ಹತೆಯುಳ್ಳ ಜನ ಬೇಕು. ಕೆಲಸಗಾರರಲ್ಲಿ ಗುಣ ಇದ್ದರೆ ಅವರ ಸೇವೆಯನ್ನು ಹರಿಜನ ಸಮಾಜ ತಾನೇ ಒಪ್ಪಿಕೊಳ್ಳುತ್ತದೆ. ಅವರ ಮನಸ್ಸು ಕರಗುತ್ತದೆ. ಹರಿಜನರ ನಡುವೆ ಹೋಗುವಾಗ ಕೆಲಸಗಾರರು ಅಪರಿಚಿತರಂತೆ ಅಥವಾ ಮೇಲ್ಮಟ್ಟದವರಂತೆ ಹೋಗಬಾರದು. ಗೆಳೆಯರಂತೆ ಸೇವಕರಂತೆ ಹೋಗಬೇಕು. ವರ್ಧಾದಲ್ಲಿ ಇಂಥ ಕೆಲಸ ನಡೆಯುತ್ತಿದೆ. ಒಬ್ಬನೇ ನಿಜವಾದ ಕೆಲಸಗಾರ ಇದ್ದರೂ ಅವನಿಂದ ಮುಂದೆ ಬಹು ಸಂಖ್ಯೆ ಬೆಳೆಯುತ್ತದೆ' ಎಂದರು ಗಾಂಧೀಜಿ.

*(ಹರಿಜನ : ೧೯-೧-೧೯೩೪)*

ಜನವರಿ ೭ರ ದಿನ ಗಾಂಧೀಜಿ ಸಂಜೆಗೆ ಒಂದು ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. 'ಆರು ವರ್ಷಗಳ ಕೆಳಗೆ ಬಂದಾಗ ನನಗೆ ಶ್ರೀ ದಿವಾನ್ ವಿ.ಪಿ. ಮಾಧರಾಯರ ಪರಿಚಯ ಆಗಿತ್ತು. ಅವರೇ ಈ ದಿನ ಅಧ್ಯಕ್ಷರು ಆಗಿರುವುದನ್ನು ನೋಡಿ ಬಹಳ ಸಂತೋಷ ಆಗುತ್ತದೆ. ಅವರ ಮುಪ್ಪು, ಅವರ ದೈಹಿಕ ದೌರ್ಬಲ್ಯಗಳ ಗಮನ ಇಲ್ಲದೆ ನಿಮ್ಮನ್ನು ಆಶೀರ್ವದಿಸಲು ಅವರು ಬಂದದ್ದು ಎಂಥ ಕಠಿಣ ಹೃದಯ ವನ್ನೂ ಕರಗಿಸುತ್ತದೆ. ಇದು ನಾನು ಮಾಡುತ್ತಿರುವ ಹರಿಜನ ಸೇವೆಗೆ ಆಶೀರ್ವಾದ. ಆರು ವರ್ಷಗಳ ಹಿಂದೆ ನಾನು ಬಂದಾಗ ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದ ಹಂಚಾ ಹುಸೇನರು ಈಗ ಇಲ್ಲದಿರುವದು ನನಗೆ ಬಹಳ ದುಃಖವಾಗುತ್ತದೆ. ಆ ಹಳೆಯ ಮಿತ್ರರು ಈ ಸಭೆಗೆ ಬಂದಿದ್ದರೆ ನನಗೆ ಬಹಳ ಸಂತೋಷ ಆಗುತ್ತಿತ್ತು.

'ನನಗೆ ನೀವು ಪ್ರೀತಿ ಆದರಗಳಿಂದ ನಿಧಿ ಕೊಟ್ಟಿದ್ದೀರಿ. ಒಳ್ಳೆಯ ನಿಧಿ ಎನ್ನಬೇಕು. ಹಾಗೆ ಹೇಳಲಾರೆ. ಬೆಂಗಳೂರಿನ ಜನ ಮನಸ್ಸು ಮಾಡಿದ್ದರೆ ಇನ್ನೂ ಹೆಚ್ಚಿನ ನಿಧಿಯನ್ನು ಕೊಡಬಹುದಾಗಿತ್ತು : ನಾನು ಬೆಂಗಳೂರನ್ನು ಬಿಡುವ ಮೊದಲು ಇನ್ನೂ ಅನೇಕರು ಕಾಣಿಕೆ ತಂದು ಕೊಡುತ್ತೀರಿ ಎಂಬುದು ನನಗೆ ಗೊತ್ತು. ಸವರ್ಣ ಹಿಂದೂಗಳು ಹರಿಜನರನ್ನು ಪಾತಾಳಕ್ಕೆ ತಳ್ಳಿದ್ದಾರೆ. ಅದಕ್ಕಾಗಿ ಎಷ್ಟು ಕೆಲಸ ಮಾಡಿದರೂ ಸಾಲದು. ನಿಮ್ಮ ಬಿನ್ನವತ್ತಳೆಯನ್ನು ಒಂದಕ್ಷರವೂ ಬಿಡದೆ ಓದಿದ್ದೇನೆ. ನೀವೂ, ನಿಮ್ಮ ಮಹಾರಾಜರ ಸರಕಾರವೂ ಈ ದಿಕ್ಕಿನಲ್ಲಿ ಬೇಕಾದಷ್ಟು ಕೆಲಸ ಮಾಡಿದ್ದೀರಿ. ಆದರೆ ಈ ಅಸ್ಪೃಶ್ಯತೆಯ ಭಾವನೆಯನ್ನು ಪೂರ್ತಿ ತೆಗೆದು ಹಾಕುವವರೆಗೆ ನೀವಾಗಲೀ, ಮಹಾರಾಜರ ಸರಕಾರ ಆಗಲೀ, ನಾನಾಗಲೀ ತೃಪ್ತಿಪಡುವಂತಿಲ್ಲ. ನೀವು ಮಾಡಿದ್ದಕ್ಕೆಲ್ಲ ನನ್ನ ಅಭಿನಂದನೆ. ಆದರೆ ಇನ್ನೂ ಹೆಚ್ಚು ಮಾಡಿ ಎಂದು ಮೊಣಕಾಲೂರಿ ಬೇಡಿಕೊಳ್ಳುತ್ತೇನೆ. ದೇವರು ನಮಗೆ ಕೊಟ್ಟಿರುವ ಕಾಲ ಅತ್ಯಲ್ಪ. ಅಷ್ಟರಲ್ಲಿ ನಾವು ಆತ್ಮಶುದ್ಧಿ ಮಾಡಿಕೊಳ್ಳೋಣ. ತಪ್ಪಿದರೆ ದೇವರ ಸಿಟ್ಟು ಹಿಂದೂಗಳ ಮೇಲೆ, ಹಿಂದೂ ಧರ್ಮದ ಮೇಲೆ ಪ್ರಖರವಾಗಿ ಎರಗುತ್ತದೆ.'

**ಉದ್ಧರೇತ್ ಆತ್ಮನಾತ್ಮಾನಂ :**

'ಈ ಮಹಾ ಸಭೆಯಲ್ಲಿ ಇರುವ ಹರಿಜನ ಬಂಧುಗಳಿಗೆ ಒಂದು ಮಾತು. ಈ ಆತ್ಮಶುದ್ಧಿಯ ಯತ್ನದಿಂದ ನೀವು ಮುಕ್ತರಲ್ಲ. ಯಥಾಶಕ್ತಿ ನೀವೂ ಈ ಯಜ್ಞಕ್ಕೆ ಸಿದ್ಧರಾಗಬೇಕು. ಅಂತರ್ ಬಹಿ ಶುದ್ಧಿಯ ಸೂತ್ರಗಳನ್ನು ಸರಿಯಾಗಿ ನಡೆಸಬೇಕು. ಗೋಮಾಂಸ ಭಕ್ಷಣವನ್ನೂ, ಇತರ ಮಾಂಸ ಭಕ್ಷಣವನ್ನೂ ಸಂಪೂರ್ಣವಾಗಿ ಬಿಡಬೇಕು. ಈ ಮಾಂಸ ಭಕ್ಷಣ ಅಖಿಲ ಪ್ರಪಂಚದಲ್ಲಿಯೇ ತ್ಯಾಜ್ಯ. ಮಾನವ ಸೇವನೆಗೆ ಅದು ಅಯೋಗ್ಯ ಎಂದು ಎಲ್ಲ ಕಡೆಯಲ್ಲೂ ಅರಿವಾಗಿದೆ. 'ಹಿಂದೂ' ಎನಿಸಿಕೊಂಡು ಗೋಮಾಂಸ ತಿನ್ನುವುದು ತಪ್ಪು. ಗೋಮಾತೆಯು ಪಾವಿತ್ರ್ಯ, ಗೋಪೂಜೆ ಹಿಂದೂ ಧರ್ಮದ ಮುಖ್ಯ ಅಂಶ. ಇಲ್ಲಿರುವ ಹರಿಜನರೆಲ್ಲರನ್ನೂ 'ಮದ್ಯಪಾನ ಬಿಡಿ' ಎಂದು ಕೇಳಿಕೊಳ್ಳುತ್ತೇನೆ. ಕೆಲವರು ಸವರ್ಣರೂ ಕುಡಿಯುತ್ತಾರೆ. ಎಂದು ತೋರಿಸಿ ಪ್ರಯೋಜನ

ಇಲ್ಲ. ನಾನು ನಿಮ್ಮ ಹಾಗೆಯೇ ಉದ್ದೇಶಪೂರ್ವಕ ಹರಿಜನ ಆಗಿದ್ದೇನೆ. ಸವರ್ಣ ಹಿಂದೂಗಳ ದುರ್ಗುಣಗಳೆಲ್ಲವನ್ನೂ ನೀವು ಅನುಕರಿಸಬೇಡಿ. ಸವರ್ಣರು ಪಶ್ಚಾತ್ತಾಪ ಪಡಬಹುದು. ಎಷ್ಟೋ ಪರಿಹಾರಕಾರ್ಯ ಮಾಡಬಹುದು. ಆದರಿಂದ ನಿಮಗೆ ದೋಷವಿಲ್ಲ. ನಿಮ್ಮ ಮೋಕ್ಷ ನಿಮ್ಮ ಕೈಯಲ್ಲೇ ಇದೆ. ಮೊನ್ನೆ ನಡೆದ ದೊಡ್ಡ ಸಭೆಯಲ್ಲಿ ಹರಿಜನ ಮಹಿಳೆಯರು ಗೋಮಾಂಸ ಮುಟ್ಟುವುದಿಲ್ಲವೆಂದೂ, ಹೆಂಡ ಕುಡಿಯುವುದಿಲ್ಲ ವೆಂದೂ ಪ್ರತಿಜ್ಞೆ ಮಾಡಿದ್ದರು. ಈ ತಂಗಿಯರಿಗೆ ಅವರ ಸಂಕಲ್ಪವನ್ನು ಈಡೇರಿಸಲು ದೇವರು ಶಕ್ತಿಯನ್ನು ಕೊಡಲಿ ಎಂದು ನಾವೆಲ್ಲರೂ ಅಂತರಂಗದಲ್ಲಿ ಪ್ರಾರ್ಥಿಸೋಣ.'

**ಪೌರಸಭೆಯವರ ನಡುವೆ :**

ಅಂದೇ ಸಂಜೆಗೆ ಬೆಂಗಳೂರು ಪೌರಸಭೆಯವರು ಒಂದು ನಿಧಿಯನ್ನು ಕೊಟ್ಟು, ಬೆಳ್ಳಿಯ ಕರಂಡದಲ್ಲಿ ಬಿನ್ನವತ್ತಳೆ ಅರ್ಪಿಸಿದರು. ಸಭೆಯಲ್ಲಿ ಅನೇಕ ವಸ್ತುಗಳನ್ನು ಹರಾಜು ಮಾಡಲಾಯಿತು. ಪೌರಸಭೆಯ ಬಿನ್ನವತ್ತಳೆಗೆ ಉತ್ತರ ಕೊಡುತ್ತ ಗಾಂಧೀಜಿ ಹೇಳಿದರು :

'ನಿಮ್ಮ ಬಿನ್ನವತ್ತಳೆಗೆ ನಾನು ಋಣಿ. ಹೊದ ಸಲ ನಾನು ಬಂದಾಗಲೂ ಇದೇ ರೀತಿ ಸತ್ಕರಿಸಿದ್ದೀರಿ. ಇನ್ನೂ ನಿಮಗೆ ನನ್ನಲ್ಲಿ ಅಭಿಮಾನ ಇದೆಯಲ್ಲ ಎಂದು ಸಂತೋಷ. ಹರಿಜನರಿಗಾಗಿ ನೀವು ಎಷ್ಟೋ ಮಾಡಿದ್ದೀರಿ. ಇನ್ನೂ ಎಷ್ಟೋ ಮಾಡಬೇಕಾಗಿದೆ ಎಂದು ಒಪ್ಪಿಕೊಂಡಿದ್ದೀರಿ. ನಾನು ಒಪ್ಪುತ್ತೇನೆ. ಇಂದು ಬೆಳಿಗ್ಗೆ ಹರಿಜನ ವಸತಿಗೆ ನಾನು ಹೋಗಿದ್ದೆ. ಅವನ್ನು ಗುಡಿಸಲು ಎಂದು ಕರೆಯುವುದಕ್ಕೂ ಆಗುವುದಿಲ್ಲ. ಅವನ್ನು ಬಿಲ ಎನ್ನಬಹುದು. ಅವುಗಳ ಮೇಲಿರುವ ಛಾವಣಿ ಮಳೆಗೆ ತಡೆಯುವುದಿಲ್ಲ. ಬೆಂಗಳೂರು ಬಹಳ ಸುಂದರ ಎಂದು ನೀವು ಹೆಮ್ಮೆ ಪಡಬಹುದು. ಬೊಂಬಾಯಿಯನ್ನು ಯಾರೂ ಸುಂದರ ಎನ್ನುವುದಿಲ್ಲ. ಅದರ ಸುತ್ತ ಮುತ್ತು ಎಷ್ಟೇ ಸೌಂದರ್ಯವಿದ್ದರೂ, ಬೊಂಬಾಯಿ ಯನ್ನು ಸುಂದರ ಎನ್ನಲಾಗುವುದಿಲ್ಲ. ಬಹಳ ಘೋರ ವಿಕಾರ ಸ್ಥಳಗಳಿವೆ ಅಲ್ಲಿ. ಕೆಲವರು ಶ್ರೀಮಂತರು ತಮ್ಮ ಮನೆಗಳನ್ನು ಚಂದವಾಗಿ ಇಟ್ಟುಕೊಂಡಿರಬಹುದು. ಆದರೆ ಬೆಂಗಳೂರೇ ಸೌಂದರ್ಯದಲ್ಲಿ ಪ್ರಪ್ರಥಮ. ನಾನು ಈ ವಿಷಯದಲ್ಲಿ ಪ್ರಶಸ್ತಿ ಕೊಡುತ್ತೇನೆ. ಆದರೆ ನಿಮ್ಮ ನಾಗರಿಕರಲ್ಲಿ ಬಡವರಿಗೆ ಕೂಡ ಕನಿಷ್ಠ ಮಿತಿಯ ಅನುಕೂಲ ಇರಬೇಕು. ಇಂದು ಬೆಳಿಗ್ಗೆ ನಾನು ನೋಡಿದ ಬಿಲಗಳು ಆ ಮಿತಿಗೂ ಕೆಳಗೆ ಎಂದು ನೀವೇ ಶಾಂತವಾಗಿ ಕೂಡಲೇ ಒಪ್ಪುತ್ತೀರಿ. ನಿಮ್ಮಲ್ಲಿ ಆ ವಿವೇಕವಿದೆ.'

'ನನ್ನ ಈ ಪ್ರವಾಸ ಮುಗಿದ ಮೇಲೆ ವಿಶ್ರಾಂತಿಗಾಗಿ ಇಲ್ಲಿಗೆ ಬರಬೇಕೆಂದು ಆಹ್ವಾನಿಸಿದ್ದೀರಿ. ಹಿಂದೆ ನಾನು ಇಲ್ಲಿಗೆ ಬಂದಾಗ ಎಷ್ಟು ಆದರ, ಅಭಿಮಾನ ತೋರಿದಿರಿ, ಕನಿಕರ ತೋರಿದಿರಿ ಈಗಲೂ ಅಷ್ಟೇ. ನಿಮಗೆ ಭರವಸೆ ಕೊಡುತ್ತೇನೆ – ಇಲ್ಲಿಗೆ ಬರಲು ಯಾವ ಉಪಚಾರವೂ ಬೇಕಾಗಿಲ್ಲ. ನನ್ನ ಕರ್ತವ್ಯಭಾರದ ನಡುವೆ ನಿಮ್ಮ ಆತಿಥ್ಯದ ಅವಕಾಶ ಉಪಯೋಗಿಸಿಕೊಳ್ಳಲು ಸಾಧ್ಯವಾದರೆ ಬಂದೇ ಬರುತ್ತೇನೆ. ನನ್ನ ಹೆಂಡತಿ

ಬಾರದೇ ಇರುವುದನ್ನು ನೀವು ಎತ್ತಿ ತೋರಿಸಿದ್ದೀರಿ. ನನ್ನ ಮನಸ್ಸು ಅದರಿಂದ ಕರಗುತ್ತದೆ. ನನ್ನ ಪಾಲಿನ ಕರ್ತವ್ಯ ನನ್ನನ್ನು ಇಲ್ಲಿಗೆ ಕರೆತಂದಿತು. ಆಕೆಯ ಪಾಲಿನ ಕರ್ತವ್ಯ ಆಕೆಯನ್ನು ಸೆರೆಮನೆಗೆ ಕರೆದೊಯ್ಯಿತು. ನಮ್ಮ ನಮ್ಮ ಪಾಲಿನ ಕರ್ತವ್ಯವನ್ನು ನಾವು ನಿರ್ವಹಿಸಲೇಬೇಕು. ನಾನು ಇಲ್ಲಿಗೆ ಬಂದೆ, ಆಕೆ ಯರವಡಾ ಸೆರೆಮನೆಗೆ ಹೋದಳು. ಆದಷ್ಟು ಬೇಗ ನಾವಿಬ್ಬರೂ ಇಲ್ಲಿಗೆ ಬರುವಂತೆ ದೇವರು ಅನುಗ್ರಹಿಸಿದರೆ ನಮ್ಮಿಬ್ಬರಿಗೂ ಇದಕ್ಕಿಂತ ಹೆಚ್ಚಿನ ಸಂತೋಷ ಇಲ್ಲ.'

*(ಹರಿಜನ : ೧೯-೧-೧೯೩೪)*

**ಮಿತಪಾನ ಪ್ರಚಾರ ಸಂಘ :**

'ನನಗೆ ಬಹಳ ಸಂತೋಷ ನೀವು ಕರೆದದ್ದು. ನಾನು ರಾಜಕೀಯಕ್ಕೆ ಬರುವ ಮೊದಲೆ ಈ ವಿಷಯ ನನಗೆ ಪ್ರಿಯವಾಗಿತ್ತು. ನಾನು ದಕ್ಷಿಣ ಆಫ್ರಿಕಾಕ್ಕೆ ಹೋದೆನಲ್ಲ, ಆಗ ಅಲ್ಲಿದ್ದ 'ಗಿರ್ಮಿಟಿಯಾ'ಗಳು ಕುಡಿದು ಕುಡಿದು ಹಾಳಾಗುತ್ತಿದ್ದುದನ್ನು ನೋಡಿದೆ. ದಕ್ಷಿಣ ಆಫ್ರಿಕಾದಲ್ಲಿ ಗಿರ್ಮಿಟಿಯಾಗಳೂ ಹೆಂಡವನ್ನು ಮನೆಗೆ ತೆಗೆದುಕೊಂಡು ಹೋಗ ಕೂಡದು, ಅದು ಕಾನೂನು ಪ್ರಕಾರ ತಪ್ಪು. ಆದರೆ ಪಡಖಾನೆಯಲ್ಲಿ ಮೂಗಿನವರೆಗೆ ಕುಡಿಯಬಹುದು. ಅದರಿಂದ ನಮ್ಮ ಜನ, ಹೆಂಗಸರೂ ಕೂಡ ಚರಂಡಿಗಳಲ್ಲಿ ಬಿದ್ದಿರುತ್ತಿದ್ದರು. ಇದು ಭಾರತೀಯರಿಗೂ ಗೌರವ ತರುವಂಥ ವಿಷಯವಲ್ಲ. ಸರಕಾರಕ್ಕೆ ನಾನು ಎಷ್ಟೋ ಹೇಳಿದೆ. ಆದರೆ ಎಲ್ಲವೂ ಅರಣ್ಯ ರೋದನ. ನನ್ನ ಮನಸ್ಸಿನ ಮೇಲೆ ಮಾತ್ರ ಅದು ಶಾಶ್ವತ ಮುದ್ರೆ ಒತ್ತಿತು.'

'ನಾನು ಮಿತಪಾನದ ಮನುಷ್ಯನಲ್ಲ, ಸಂಪೂರ್ಣ ಪಾನ ನಿರೋಧದ ಮನುಷ್ಯ. ದಕ್ಷಿಣ ಆಫ್ರಿಕೆಯಲ್ಲಿ ನನ್ನ ದೇಶೀಯರಿಗೆ ಬಹಳ ಹೇಳಿದೆ. ಆದರೆ ಬಹಳ ಕಾಲ ಅವರ ಮನ ಒಲಿಸಲು ಆಗಲಿಲ್ಲ. ತಮ್ಮ ಹಕ್ಕುಗಳಿಗಾಗಿ ಹೋರಾಡಲು ಅನೇಕ ಜನ ಸಿದ್ಧರಾದರು. ಆದರೆ ದುಷ್ಟ ಚಟದೊಂದಿಗೆ ಹೋರಾಡಲು ಸಿದ್ಧರಾಗಲಿಲ್ಲ. ಕುಡಿಯುವದು ಬಿಳಿಯರಿಗೆ ತಪ್ಪಲ್ಲ. ನಮಗೂ ಹಾಗೆಯೇ ಅನ್ನೋಣವೇ? ಇಲ್ಲಿ, ಭಾರತದಲ್ಲಿ ಸರಕಾರ ಹೆಂಡದ ವ್ಯಾಪಾರ ಮಾಡುತ್ತದೆ. ಹರಿಜನರಿಗೆ ಕುಡಿಯಬೇಕೆಂಬ ಮನಸ್ಸಿಲ್ಲದಿದ್ದರೂ ಕುಡಿಯುತ್ತಾರೆ. ನನ್ನ ಸಂಗಡಿಗರೊಬ್ಬರು, ಕಲ್ಕತ್ತೆಯ ಸತೀಶ್ಚಂದ್ರ ದಾಸಗುಪ್ತಾ ತಮ್ಮ ಉದ್ಯೋಗ ನಡೆಸಲು ಹರಿಜನ ವಸತಿಗಳ ಬಳಿ ವಾಸಮಾಡುತ್ತಾರೆ. ಕುಡಿಯುವುದಿಲ್ಲ ಎಂಬ ಪ್ರತಿಜ್ಞೆಯನ್ನು ಹರಿಜನರಿಂದ ಎಷ್ಟೋ ಸಲ ಅವರು ಮಾಡಿಸಿದರು. ಮತ್ತೆ ಮತ್ತೆ ಹರಿಜನರು ಆ ಪ್ರತಿಜ್ಞೆಯನ್ನು ಮುರಿದರು. ಇದರಿಂದ ಅವರಿಗೆ ಬಹಳ ನೋವಾಗಿ ಹೃದಯ ಭಗ್ನವಾಗಿ ೧೫ ದಿನ ಉಪವಾಸ ಮಾಡಿದರು. ಹರಿಜನರ ಮೇಲೆ ಅದರಿಂದ ಬಹಳ ಪರಿಣಾಮ ವಾಯಿತು. ಇನ್ನು ಮುಂದೆ ಶಪಥ ಮುರಿಯುವುದಿಲ್ಲ ಎಂದು ಅವರು ಹೇಳಿದರು. ಸತೀಶಬಾಬು ಆ ಸಂಕಟವನ್ನು ಸಂತೋಷದಿಂದ ಅನುಭವಿಸಿದ್ದರು. ಮದ್ಯಪಾನವನ್ನು ಸಮೂಲಾಗ್ರ ಕಿತ್ತುಹಾಕಲು ಬಯಸುವ ಕೆಲಸಗಾರ ಇದಕ್ಕೆಲ್ಲ ಗುರಿಯಾಗಲೇಬೇಕು. ನಮ್ಮ ದಾರಿಯಲ್ಲಿ ಇದು ಬೇಡ ಎಂದು ಅನೇಕ ಹರಿಜನರು ಹೇಳಿದರು. ಅನೇಕ

ವಿಷಯಗಳಲ್ಲಿ ನಮಗೆ ನಿಗ್ರಹ ಇಲ್ಲ. ಅಂಥದರಲ್ಲಿ ಹರಿಜನರು, ಕೂಲಿಕಾರರು ಹೇಗೆ ತಾನೇ ಮಾಡಬಲ್ಲರು? ನಾನು ಅವರ ಜೊತೆಯಲ್ಲಿ ವಾಸ ಮಾಡಿದ್ದೇನೆ, ಊಟ ಮಾಡಿದ್ದೇನೆ. ಕೆಟ್ಟ ಬಿಲಗಳಲ್ಲಿ ಅವರ ವಾಸ. ಅವರಿಗೆ ವಿಹಾರ ಸ್ಥಳವಿಲ್ಲ. ದೇಹ ಸೌಖ್ಯಕ್ಕಾಗಿ ವೆಚ್ಚ ಮಾಡಲು ಹಣವಿಲ್ಲ. ಆದ್ದರಿಂದ ಬಂದದ್ದೆಲ್ಲವೂ ಹೆಂಡದಂಗಡಿಗೆ ಹೋಗುತ್ತದೆ. ನನ್ನ ಮನಸ್ಸಿನಲ್ಲಿ ಕುಡಿತದ ಈ ಚಟದ ಬಗ್ಗೆ ಎಷ್ಟು ತೀವ್ರ ಭಾವನೆ ಇದೆ ಎಂಬುದನ್ನು ತಿಳಿಸಲು ಈ ವಿವರಣೆ ಕೊಟ್ಟೆ. ಪಾನನಿರೋಧ ಬರುವವರೆಗೆ ಏನು ಮಾಡಿದರೂ ನಾವು ಈ ಚಟವನ್ನು ಹೋಗಲಾಡಿಸಲಾರೆವು ಎಂಬುದರಲ್ಲಿ ಸಂದೇಹವಿಲ್ಲ. ಪಾನ ನಿರೋಧದ ಬಗ್ಗೆ ನನ್ನ ಅಭಿಪ್ರಾಯಗಳು ದೃಢ ಮತ್ತು ಅನುಭವ ಜನ್ಯ. ನನ್ನ ಅನುಭವದಿಂದ ಹೇಳುತ್ತೇನೆ–ಪಾನ ನಿರೋಧವಿಲ್ಲದೆ ಈ ದೇಶದ ಕೂಲಿಕಾರರಲ್ಲಿ ಒಳ್ಳೆಯ ರೂಢಿಗಳನ್ನು ತರುವುದು ಅಸಾಧ್ಯ. ಹರಿಜನರಲ್ಲಿ ಈ ಕೆಟ್ಟ ಚಾಳಿ ಹೆಚ್ಚು. ಭಾರತದಲ್ಲಿ ಖಂಡಿತವಾಗಿ ಸಂಪೂರ್ಣ ಪಾನ ನಿರೋಧ ಯಶಸ್ವಿ ಯಾಗುತ್ತದೆ. ನಮ್ಮಲ್ಲಿ ಜನಕ್ಕೆ ಸ್ವಾಭಾವಿಕವಾಗಿ ಕುಡಿಯುವ ಚಟ ಇಲ್ಲ. ಈ ಚಟವು ಮರ್ಯಾದೆ ತರುವಂಥದೂ ಅಲ್ಲ. ನಮ್ಮ ವಾತಾವರಣಕ್ಕೆ ಕುಡಿತ ಬೇಕಾಗಿಲ್ಲ. ಆದರೆ ಸರಕಾರಕ್ಕೆ ಪಾನ ನಿರೋಧದಿಂದ ವರಮಾನ ಕಡಿಮೆಯಾಗುತ್ತದೆ. ಆದ್ದರಿಂದ ಬೇರೆ ಮೂಲವನ್ನು ತೋರಿಸಿ. ಆ ಮೇಲೆ ಪಾನ ನಿರೋಧದ ಮಾತು ಎನ್ನುತ್ತಾರೆ. ಅಶುದ್ಧ ಮೂಲಗಳಿಂದ ವರಮಾನವನ್ನು ಪಡೆದು ಆಮೇಲೆ ಇದಕ್ಕೆ ಬದಲು ಕೊಡಿರಿ ಎಂದು ಕೇಳಿದರೆ ಹೇಗೆ? ಆದರೆ ಈ ಮಾತನ್ನು ಕೇಳುವವರು ಯಾರು. ಇದರಲ್ಲಿ ಲಾಭದ ಮಾತೇ ಬರಕೂಡದು' ಎಂದರು ಗಾಂಧೀಜಿ.

**ಬಾಲಾಕಾಶ್ರಮ (ಶಿವಮೊಗ್ಗ) :**

ಗಾಂಧೀಜಿ ಬೆಂಗಳೂರಿನಲ್ಲಿದ್ದಾಗ ಸರ್ವಶ್ರೀ ಡಾ॥ ಹರ್ಡೀಕರ್, ಕೌಜಲಗಿ ಹನುಮಂತರಾಯರು, ಮಾಲೂರು ಸುಬ್ಬರಾಯರು, ಕರಮರಕರ ದತ್ತರಾಯರು, ಡಿ.ಆರ್.ಮಾನಪ್ಪ ಮುಂತಾದವರು ಗಾಂಧೀಜಿಯವರನ್ನು ಕಂಡು ಶಿವಮೊಗ್ಗೆಯ ಹಿಂದುಳಿದ ಜಾತಿಯ ಜನರ ಹುಡುಗರಿಗಾಗಿ ಸ್ಥಾಪಿಸಿದ ಬಾಲಕಾಶ್ರಮದ ಕೆಲಸ ಕಾರ್ಯಗಳನ್ನು ವಿವರಿಸಿದರು. ಆಶ್ರಮಗಳ ವರದಿಯನ್ನು ಹೇಳಿದರು. ಹಣದ ಬಗ್ಗೆ ಈ ಆಶ್ರಮಗಳಿಗೆ ಇರುವ ತೊಂದರೆಯನ್ನು ವಿವರಿಸಿದರು. ಅರ್ಧಗಂಟೆಯವರೆಗೆ ಮಾತು ನಡೆಯಿತು. 'ಕರ್ನಾಟಕದಲ್ಲಿ ಈ ಬಗ್ಗೆಯ ಆಶ್ರಮಗಳನ್ನು ಪೋಷಣೆ ಮಾಡುವ ಕೆಲಸ ನಡೆದದ್ದು ನಿಜವಾಗಿಯೂ ಸ್ತುತ್ಯ–ಎಂದು ಹೇಳಿ, ಕೆಲಸಗಾರರಿಗೆ ಶುಭಾಶಯ ಕೋರಿದರು.

ಜನವರಿ ೯ನೇ ತಾರೀಖು ರಾತ್ರಿ ಗಾಂಧೀಜಿ ಮಲಬಾರಿನ ಒಲವಕೋಟೆಗೆ ಪ್ರಯಾಣ ಮಾಡಿದರು. ಸ್ಟೇಷನ್ನಿನಲ್ಲಿ ಅಪೂರ್ವ ಸತ್ಕಾರ್ಯ ನಡೆಯಿತು. ಮಹಾತ್ಮರಿಗೆ ಮೈಸೂರು ಸಂಸ್ಥಾನದಲ್ಲಿ ಒಟ್ಟು ೨೫ ಸಾವಿರ ರೂಪಾಯಿ ದೊರೆಯಿತು. ಮಹಾರಾಜರೂ, ದಿವಾನರೂ, ಹರಿಜನೋದ್ಧಾರದ ಕಾರ್ಯವನ್ನು ಎಡಬಿಡದೇ ಮಾಡುತ್ತಿರುವುದಕ್ಕಾಗಿ

ಅವರನ್ನು ಗಾಂಧೀಜಿ ಕೊಂಡಾಡಿದರು. ಮೈಸೂರು ಸಂಸ್ಥಾನ ಬಹಳ ಆರೋಗ್ಯಕರ. ಆದಷ್ಟು ಬೇಗ ಮತ್ತೆ ಬರುತ್ತೇನೆ ಎಂದರು.

ಗಾಂಧೀಜಿ ಕೇರಳದಿಂದ ತಮಿಳುನಾಡಿಗೆ ಹೋಗಿ, ಅಲ್ಲಿಂದ ಮತ್ತೆ ಕರ್ನಾಟಕಕ್ಕೆ ಬಂದರು. ದಾರಿಯಲ್ಲಿ ಕೊಡಗಿನ ಮಾರ್ಗವಾಗಿ ಪ್ರಯಾಣ ಮಾಡಿದರು. ಬರುವಾಗ ಮೈಸೂರು, ಬೆಂಗಳೂರು ಮತ್ತೆ ಮುಟ್ಟಿ ಬಂದರು.

**ಕಾವೇರಿಯ ನಾಡಿನಲ್ಲಿ (ಕೊಡುಗು):**

ಗಾಂಧೀಜಿಗೆ ಈ ಗುಡ್ಡಗಾಡಿನ ಅಂದವಾದ ಪ್ರದೇಶವನ್ನು ನೋಡಬೇಕೆಂದು ಬಹಳ ಆಸೆ. ಅಲ್ಲದೇ ಕೊಡಗಿನಿಂದ ಪದೇ ಪದೇ ಒತ್ತಾಯ ಆಹ್ವಾನ ಬರುತ್ತಲೇ ಇತ್ತು. ಈಗ ಸ್ವಲ್ಪ ಬಿಡುವು ಇದ್ದುದನ್ನು ನೋಡಿ ಕಾವೇರಿಯ ನಾಡಿಗೆ – ಕೊಡಗಿಗೆ ಹೋಗಲು ತೀರ್ಮಾನಿಸಿದರು. ಕೊಡಗು ನಮ್ಮ ದೇಶದಲ್ಲಿ ಒಂದು ಪ್ರತ್ಯೇಕ ಸ್ಥಳ. ಈಗಲೂ ಅನೇಕರಿಗೆ ಗೊತ್ತೇ ಇಲ್ಲ. ಕೊಡಗಿನ ಗುಡ್ಡಗಳಲ್ಲಿಯೇ ಕಾವೇರಿಯ ಉಗಮಸ್ಥಾನವಾದ ತಲಕಾವೇರಿ ಇರುವುದು. ಸೀಮೆ ಎಂಬ ಅಡವಿ. ಅಲ್ಲಿನ ಕೆಲವು ಸ್ಥಳಗಳು ಪ್ರಪಂಚದ ಯಾವ ಅತ್ಯುತ್ತಮವಾದ ನೈಸರ್ಗಿಕ ದೃಶ್ಯಕ್ಕೂ ಕಡಿಮೆಯಲ್ಲ.

ಕೊಡಗು ಕೊಡವರ ನಾಡು. ಅವರ ಜನಸಂಖ್ಯೆ ೪೪,೪೭೬. ಕೊಡಗಿನ ಜನಸಂಖ್ಯೆ ೧,೬೩,೦೮೯. ಅದರಲ್ಲಿ ಬಹಳ ಉದ್ದವೆಂದರೆ ೬೦ ಮೈಲಿ, ಬಹಳ ಅಗಲ ೪೦ ಮೈಲಿ. ಕೊಡವರು ಮೂಲತಃ ಆರ್ಯಕ್ಷತ್ರಿಯರು. ಕೊಡುಗು ಚಿಕ್ಕ ಪ್ರದೇಶವಾದರೂ ಆ ಕಾಲಕ್ಕೆ ಒಂದು ಪ್ರತ್ಯೇಕ ಪ್ರಾಂತ ಆಗಿತ್ತು. ಅದರ ಅಧಿಪತಿ ಮೈಸೂರಿನ ರೆಸಿಡೆಂಟ.

ಕೊಡಗಿನ ಮೂಲನಿವಾಸಿಗಳ ಉಡುಪು ತೊಡಪು ವಿಶಿಷ್ಟ. ಹೆಂಗಸರೂ, ಗಂಡಸರೂ ತಲೆಗೆ ಒಂದು ವಸ್ತ್ರವನ್ನು ಕಟ್ಟಿಕೊಳ್ಳುತ್ತಾರೆ. ಹೆಂಗಸರು ಸ್ವತಂತ್ರರು, ಬುದ್ಧಿವಂತರು, ದೃಢಾಂಗಿಯರು. ೪೩,೦೦೦ ಹರಿಜನರ ಸಂಖ್ಯೆ. ಹಿಂದೂ ಜನರಲ್ಲಿ ಸುಮಾರು ಮೂರನೇ ಒಂದರಷ್ಟು. ಹರಿಜನರು ಸಾಮಾನ್ಯವಾಗಿ ಬೇಸಾಯದ ಕೂಲಿಗಳು. ಅಥವಾ ಗೇಣೀದಾರರು. ಮಕ್ಕರಿ ಮಾಡುವುದು, ಬಿದಿರಿನ ಕೆಲಸ ಮುಂತಾದ ಗೃಹೋದ್ಯೋಗಗಳಲ್ಲಿಯೂ ಕೆಲವರಿದ್ದಾರೆ. ಅಸ್ಪೃಶ್ಯತೆಯ ಉಗ್ರ ಸ್ವರೂಪ ಇಲ್ಲಿ ಇಲ್ಲ. ಸಾರ್ವಜನಿಕ ರಸ್ತೆ, ಸಾರ್ವಜನಿಕ ಬಾವಿಗಳನ್ನು ಅವರು ಸ್ವೇಚ್ಛೆಯಾಗಿ ಉಪಯೋಗಿಸಬಹುದು. ದೇವಾಲಯ ಪ್ರವೇಶದ ಬಹಿಷ್ಕಾರ ಮಾತ್ರ ಇನ್ನೂ ಹೋಗಿಲ್ಲ. ಅದಕ್ಕಾಗಿ ಸಾರ್ವಜನಿಕಾಭಿಪ್ರಾಯನ್ನು ರೂಪುಗೊಳಿಸಲು ಪ್ರಯತ್ನ ನಡೆಯುತ್ತಿದೆ. ಶಾಲೆಗೆ ಹೋಗುವ ಹರಿಜನ ಮಕ್ಕಳು ೧೯೩೨-೩೩ರಲ್ಲಿ ೨೭೯. ಅವರಲ್ಲಿ ೪೭ ಜನ ಹುಡುಗಿಯರು. ೮೦ ಜನ ಹರಿಜನರು ಶಾಲೆಗೆ ಹೋಗುತ್ತಾರೆ. ಉಳಿದವರೆಲ್ಲರೂ ಸವರ್ಣ ಹಿಂದೂ ಶಾಲೆಗಳಿಗೇ ಹೋಗುತ್ತಾರೆ. ಮೊದಮೊದಲು ಇದಕ್ಕೆ ವಿರೋಧ ಇತ್ತು. ಕ್ರಮೇಣ ಇದು ಕರಗಿ ಹೋಯಿತು. ಈಗ ಅದರ ಚಿಂತೆಯೇ ಇಲ್ಲ.

**ಸುಂದರ ಹೃದಯಗಳು :**

ಗಾಂಧೀಜಿ ಕೊಡಗಿನಲ್ಲಿ ಮೊಟ್ಟಮೊದಲು ಹೋದ ಸ್ಥಳ ಕೈಕೇರಿ. ಅಲ್ಲೇ ಗಾಂಧೀಜಿಗೆ ಆಶ್ಚರ್ಯ ಆಯಿತು. ಅದು ಒಂದು ಹರಿಜನ ಕೇರಿ. ಸ್ವಚ್ಛ, ಚೊಕ್ಕಟ ಆಗಿತ್ತು. ರಮಣೀಯ ನಿಸರ್ಗ ಸೌಂದರ್ಯದ ನಡುವೆ ಇದ್ದ ಆ ವಸತಿಯಲ್ಲಿ ಸಭೆ ನಡೆಯಿತು. ಆ ಸಭೆಯಲ್ಲಿ ಸವರ್ಣ ಹಿಂದೂ ಹೆಂಗಸರು ಧಾರಾಳವಾಗಿ ತಮ್ಮ ಒಡವೆಗಳನ್ನು ಕೊಟ್ಟು, ಚೆನ್ನಾಗಿ ಪ್ರಾರಂಭಮಾಡಿದರು. ಮುಂದಿನದು ಮಡಕೇರಿ. ಅಲ್ಲಿ ಗಾಂಧೀಜಿ ಹೇಳಿದರು: ಕೊಡಗಿನ ಈ ಸುಂದರ ಭೂಮಿಗೆ ಬರುವಂತೆ ದೇವರು ಮಾಡಿದುದು ನನಗೆ ಬಲು ಸಂತೋಷ. ಇಲ್ಲಿಗೆ ಬಂದಾಗಿನಿಂದ ಈ ಸ್ಥಳದ ನೈಸರ್ಗಿಕ ರಮಣೀಯತೆಯನ್ನು ಸವಿಯುತ್ತಿದ್ದೇನೆ. ನಿಮ್ಮ ದೇಶದ ಪ್ರಕೃತಿ ದೃಶ್ಯ ಎಷ್ಟು ಚೆನ್ನಾಗಿದೆಯೋ ನಿಮ್ಮ ಹೃದಯಗಳೂ ಅಷ್ಟೇ ಚೆಲುವಾಗಿವೆ ಎಂದುಕೊಳ್ಳುತ್ತೇನೆ. ಆದರೂ ನನ್ನ ಮನಸ್ಸಿನಲ್ಲಿ ನಿಮ್ಮ ಹೃದಯ ಮಾಧುರ್ಯದ ಬಗ್ಗೆ ಏನೂ ಸಂದೇಹ. ಮೈದಾನದಲ್ಲಿ ಇರುವ ವಿಷಪೂರ್ಣ ಅಸ್ಪೃಶ್ಯತೆ ಇಲ್ಲಿ ಕಾಣಬರದಿದ್ದರೂ ನಿಮ್ಮಲ್ಲಿ ಇನ್ನೂ ಸ್ವಲ್ಪ ಅಸ್ಪೃಶ್ಯತೆ ಅಂಟಿಕೊಂಡಿದೆಯೆಂದು ಕಾಣಬರುತ್ತದೆ. ನಿಮ್ಮ ಬಿನ್ನವತ್ತಳೆಯಲ್ಲಿ ಇಲ್ಲಿ ದೇವಾಲಯ ಪ್ರವೇಶ ಇಲ್ಲ ಎಂದು ಹೇಳಿದ್ದೀರಿ. ಒಬ್ಬ ತಂದೆ ತನ್ನ ಮಕ್ಕಳಿಗೆ ಅನ್ನ – ಬಟ್ಟೆ ಕೊಡುತ್ತೇನೆ, ಮನೆ ಕೊಡುತ್ತೇನೆ, ಆದರೆ ನನ್ನ ಹೃದಯದಲ್ಲಿ ನಿಮಗೆ ಸ್ಥಳ ಇಲ್ಲ ಎಂದು ಹೇಳಿದರೆ ಆ ಮಕ್ಕಳಿಗೆ ಹೇಗೆ ಅನಿಸುತ್ತದೆಯೋ ಯೋಚನೆ ಮಾಡಿ. ನಿಮ್ಮ ಹಾಗೆಯೇ ಹರಿಜನರಿಗೂ ದೇವಾಲಯ ಪ್ರವೇಶ ನೀಡದಿದ್ದರೆ, ನಿಮ್ಮ ಹೃದಯ ಸುಂದರ ಎನ್ನಲಾರೆ. ಪ್ರಕೃತಿಯಿಂದ ಪಾಠ ಕಲಿತು, ನಿಮ್ಮ ಹೃದಯದಿಂದ ಆ ಕಳಂಕವನ್ನು ತೊಳೆದು ಹಾಕಿಬಿಡಿ.

**ಧರ್ಮ ಇಲ್ಲದೆ ನಾನು ಬದುಕಲಾರೆ :**

ಪೊನ್ನಂಪೇಟೆಯಲ್ಲಿ ರಾಮಕೃಷ್ಣಾಶ್ರಮದಲ್ಲಿ ಗಾಂಧೀಜಿ ತಂಗಿದ್ದರು. ಪೊನ್ನಂಪೇಟೆ ಆಶ್ರಮಕ್ಕೆ ಆಗ ಸ್ವಾಮಿ ಶಾಂಭವಾನಂದರು ಮುಖ್ಯರು. ಹರಿಜನರ ಸೇವೆಯಲ್ಲಿ ಅವರಿಗೆ ತುಂಬಾ ಆಸಕ್ತಿ. ಈಚೆಗೆ ಒಂದು ಹರಿಜನ ಸಂಘವನ್ನು ಸ್ಥಾಪಿಸಿದ್ದಾರೆ. ಆ ಚಿಕ್ಕ ಹಳ್ಳಿಯಲ್ಲಿ ೧೦ ಸಾವಿರ ಜನ ಬಂದಿದ್ದರು. ಅವರಲ್ಲಿ ಬಹಳ ಮಂದಿ ಹೆಂಗಸರು. ನೂರಾರು ಜನ ಸುತ್ತಲ ಹಳ್ಳಿ ಹಳ್ಳಿಯಿಂದ ಬಂದಿದ್ದರು. ಗಾಂಧೀಜಿ ಹೇಳಿದಂತೆ ಅದೊಂದು 'ಜನಸಮುದ್ರ'. ಜನರು ಕೊಟ್ಟ ಬಿನ್ನವತ್ತಳೆಯಲ್ಲಿ ಅಲ್ಲಿ ನಡೆದ ಕೆಲಸದ ವಿವರವನ್ನು ವರ್ಣಿಸಿ ಹರಿಜನ ಪ್ರಶ್ನೆಯನ್ನು ಧಾರ್ಮಿಕ ಎಂಬುವಕ್ಕೆ ಆಕ್ಷೇಪಣೆ ಮಾಡಿತ್ತು. ಅದಕ್ಕೆ ಗಾಂಧೀಜಿ ಈ ರೀತಿ ಉತ್ತರ ಕೊಟ್ಟರು:

ಒಂದು ಗಳಿಗೆ ಆಲೋಚಿಸಿದರೆ ಸಾಕು. ಇದು ಧಾರ್ಮಿಕ ಪ್ರಶ್ನೆ ಎಂಬುದು ತಿಳಿಯುತ್ತದೆ. ಶಾಸ್ತ್ರಗಳನ್ನು ಬಲ್ಲವರು ಎನ್ನುವ ಜನ ಈ ಅಸ್ಪೃಶ್ಯತೆ ಒಂದು ದೈವೀ ವ್ಯವಸ್ಥೆ ಎನ್ನುತ್ತಾರೆ. ಧರ್ಮದ ವೇಷತೊಟ್ಟು ಅದು ಬಂದಾಗ ಇವತ್ತಿನ ಧರ್ಮಕ್ಕೂ ಅದಕ್ಕೂ ಏನೂ ಸಂಬಂಧ ಇಲ್ಲ ಎಂದು ನಾನು ಹೇಳಲೇಬೇಕು. ಈ ದೇವಾಲಯ ಪ್ರವೇಶದ ಪ್ರಶ್ನೆ ತೆಗೆದುಕೊಳ್ಳಿ. ಅದು ಧಾರ್ಮಿಕ ಅಲ್ಲದೆ ಮತ್ತೇನು? ದೇವಾಲಯಗಳನ್ನು

ತೆರೆಯಿಸಬೇಕಾದರೆ ನಿಮ್ಮ ಹೃದಯಗಳನ್ನು ಮುಟ್ಟಬೇಕು. ನಿಮ್ಮ ಹೃದಯಗಳನ್ನು ಮುಟ್ಟಿದರೆ ನಿಮ್ಮ ಶ್ರದ್ಧೆಗೆ ತಗಲಿಸಿದ್ದಂತೆಯೇ ಆಯಿತು. ಶ್ರದ್ಧೆಗೆ ಮುಟ್ಟಿದ್ದು ಎಲ್ಲವೂ ಧಾರ್ಮಿಕ ಆಗಿಯೇ ತೀರುತ್ತದೆ. ಈ ಅಸ್ಪೃಶ್ಯತೆ ದೈವ ಸೃಷ್ಟಿ ಎನ್ನುವ ಈ ಸನಾತನಿಗಳು ನನಗೆ ಧರ್ಮ ಲವಲೇಶವೂ ಗೊತ್ತಿಲ್ಲ ಎಂದು ಅಣಕಿಸುತ್ತಾರೆ. ಆ ಅಣಕವನ್ನು ನಾನು ಒಪ್ಪಲಾರೆ. ನನ್ನ ಇಡೀ ಜೀವನ ಧಾರ್ಮಿಕತೆಯಲ್ಲಿ ಮುಳುಗಿದೆ. ಧರ್ಮವಿಲ್ಲದೆ ಒಂದು ಗಳಿಗೆಯೂ ಕೂಡ ನಾನು ಇರಲಾರೆ. ನನ್ನ ರಾಜಕೀಯಕ್ಕೂ ಧರ್ಮವೇ ಆಧಾರ ವಾಗಿರುವುದರಿಂದ ನನ್ನ ರಾಜಕೀಯ ಸ್ನೇಹಿತರು ಅನೇಕರು ನನ್ನ ಬಗ್ಗೆ ನಿರಾಶರಾಗಿ ದ್ದಾರೆ. ಅವರದು ಸರಿ. ರಾಜಕೀಯದಲ್ಲಿ, ಉಳಿದ ನನ್ನ ಯಾವುದೇ ಚಟುವಟಿಕೆಯಾಗಲಿ ನನ್ನ ಧರ್ಮದಿಂದ ಹುಟ್ಟಿ ಬಂದಿದೆ. ಇನ್ನೂ ಮುಂದೆ ಹೋಗುತ್ತೇನೆ. ಧಾರ್ಮಿಕ ಪುರುಷನ ಪ್ರತಿಯೊಂದು ಚಟುವಟಿಕೆಯೂ ಧರ್ಮದಿಂದಲೇ ಹುಟ್ಟಿ ಬರುತ್ತದೆ. ಧರ್ಮ ಎಂದರೆ ದೇವರಿಗೂ ನಮಗೂ ಗಂಟು. ಎಂದರೆ ನಮ್ಮ ಪ್ರತಿಯೊಂದು ಉಸಿರನ್ನೂ ದೇವರು ನಿಯಂತ್ರಿಸುತ್ತಾನೆ. ಆ ಸತ್ಯವನ್ನು ನೀವು ಒಪ್ಪಿದರೆ ನಿಮ್ಮ ಪ್ರತಿಯೊಂದು ಕಾರ್ಯಕಲಾಪವೂ ದೈವ ನಿಯಂತ್ರಿತವಾಗುತ್ತದೆ. ನಾನು ಧರ್ಮನಿಷ್ಠ. ನಾನು ಧರ್ಮನಿಷ್ಠೆಯಿಂದಲೇ ಬಂದಿದ್ದೇನೆ. ಪ್ರತಿಯೊಂದು ಗಳಿಗೆಯೂ ನನ್ನ ಧರ್ಮವನ್ನು ಅನುಸರಿಲು ಪ್ರಯತ್ನಿಸುತ್ತಿದ್ದೇನೆ. ಈಗ ಇರುವ ಈ ಅಸ್ಪೃಶ್ಯತೆಯು ದೈವನಿರ್ಮಿತವಲ್ಲ ಎಂದು ಹೇಳಲು ನಾನು ಬಂದಿದ್ದೇನೆ. ಒಬ್ಬ ಸಾಮಾನ್ಯ ಮನುಷ್ಯ ಹೇಗೆ ಹುಡುಕ ಬಹುದೋ ಹಾಗೆ ಶಾಸ್ತ್ರಗಳನ್ನೆಲ್ಲಾ ಹುಡುಕಿದ್ದೇನೆ. ತರುವಾಯ ನಿಮಗೆ ಹೇಳುತ್ತಿದ್ದೇನೆ. ಅಸ್ಪೃಶ್ಯತೆಯು ದೇವರಿಗೂ ಮನುಷ್ಯನಿಗೂ ಎಸಗಿದ ದ್ರೋಹ. ಶಾಸ್ತ್ರಗಳಲ್ಲಿ ಇವತ್ತಿನ ಈ ಅಸ್ಪೃಶ್ಯತೆಗೆ ಏನೂ ಸ್ಥಾನವಿಲ್ಲ ಎಂದು ಹೇಳಲು ಬಂದಿದ್ದೇನೆ. ಆದ್ದರಿಂದ ಹರಿಜನರ ದೇವಾಲಯ ಪ್ರವೇಶವನ್ನು ನಿರಾಕರಿಸುವುದು ಪಾಪ.

**ನನ್ನ ಮಾನವಜಾತಿಯ ಪ್ರೇಮ ಅದಮ್ಯ:**

ಅಲ್ಲಿಂದ ಮುಂದೆ ಗಾಂಧೀಜಿ ವೀರರಾಜಪೇಟೆಗೆ ಹೋದರು. ಬೆಳಗ್ಗೆ ಮೊಟ್ಟಮೊದಲು ಗಾಂಧೀಜಿ ತಲುಪಿದ ಪಟ್ಟಣ ಅದು. ಒಂದು ರಮಣೀಯ ಸ್ಥಾನದಲ್ಲಿ ಸಭೆ ನಡೆಯಿತು. ಆ ಊರಿನ ಮುಸಲ್ಮಾನ ನಿವಾಸಿಗಳ ಪರವಾಗಿ ಒಂದು ಬಿನ್ನವತ್ತಳೆಯನ್ನು ಅರ್ಪಿಸಿದರು.

'ಶುದ್ಧವಾದ ಉತ್ತಮ ಹಿಂದೂಸ್ಥಾನಿಯಲ್ಲಿ ಒಂದು ಬಿನ್ನವತ್ತಳೆಯನ್ನು ಪಡೆದದ್ದು ನನಗೆ ಬಹಳ ಆಶ್ಚರ್ಯ; ಸಂತೋಷವೂ ಆಯಿತು. ಉರ್ದು ಮತ್ತು ಉರ್ದು ಸಾಹಿತ್ಯವೆಂದರೆ ನನಗೆ ತುಂಬ ಪ್ರೀತಿ. ಆದರೆ ದಕ್ಷಿಣದಲ್ಲಿ ಕೆಳಗೆ ಹೋದ ಹಾಗೆಲ್ಲ ಉರ್ದು ವಿದ್ವಾಂಸರನ್ನು ಕಾಣುವುದು ಕಷ್ಟ. ಕೊಡಗಿನಲ್ಲಿ ಇಂತ ಒಳ್ಳೆಯ ಉರ್ದು ಬರೆಯುವ, ಮಾತನಾಡುವ ಜನ ಇರುವುದು ಸಂತೋಷ.

ಆ ಬಿನ್ನವತ್ತಳೆಯಲ್ಲಿ ಕೆಲವು ಭಾಗ ಹೀಗಿತ್ತು:

'ಈ ಪ್ರವಾಸ ಹರಿಜನ ಉದ್ಧಾರಕ್ಕಾಗಿ ಎಂದು ನಮಗೆ ಗೊತ್ತಿದ್ದರೂ ಈ ಪ್ರವಾಸದ

ಬಗ್ಗೆ ನಮಗೆ ತುಂಬಾ ಗೌರವ. ಇದರ ಹಿನ್ನೆಲೆಯಲ್ಲಿ ಮನುಷ್ಯರ ಸಮ್ಮತಿಯನ್ನು ಸಾಧಿಸುವ ನಿಮ್ಮ ಪವಿತ್ರ ಉದ್ದೇಶವಿದೆ. ಇಸ್ಲಾಮಿನ ಮೂಲ ಸತ್ಯಗಳಲ್ಲಿ ಇದು ಒಂದು. ನಿಮ್ಮ ಈ ಸಂಕಲ್ಪಕ್ಕೆ ನಾವು ಸಹಾನುಭೂತಿ ತೋರಲೇಬೇಕು. ಏಕೆಂದರೆ ನಾವು ಮುಸಲ್ಮಾನರು. ದೇವರು ನಿಮ್ಮ ಈ ಪ್ರಯತ್ನಕ್ಕೆ ಸಫಲತೆ ನೀಡಲಿ. ಈ ದರಿದ್ರ ಮಾನವ ವರ್ಗವು ಭಾರಮುಕ್ತವಾಗಲಿ, ಸಮಾನತೆ ಪಡೆಯಲಿ.

ನೀವು ಹಿಂದೂ-ಮುಸ್ಲಿಂ ಸೌಹಾರ್ದದಲ್ಲಿ ದೃಢನಂಬಿಕೆಯುಳ್ಳವರು. ಭಾರತದ ಈ ಭಾಗದಲ್ಲಿ ಹಿಂದೂ ಮುಸಲ್ಮಾನರಲ್ಲಿ ಸಂಪೂರ್ಣ ಐಕಮತ್ಯ ಇದೆ ಎಂದು ತಿಳಿದು ನಮಗೆ ಸಂತೋಷವಾಗುತ್ತದೆ. ಈ ಐಕಮತ್ಯವನ್ನು ಇಡೀ ಭಾರತದಲ್ಲಿಯೇ ನೀವು ಸ್ಥಾಪಿಸುತ್ತೀರಿ ಎಂದು ಆಸೆ. ಮತೀಯ ಕಲಹಗಳು ಭಾರತವನ್ನು ಪೀಡಿಸದಂತೆ ನಿಮ್ಮ ಸಾಮರ್ಥ್ಯ ಪ್ರಭಾವಗಳನ್ನು ಉಪಯೋಗಿಸಬೇಕು ಅದಕ್ಕಾಗಿ ಹಿಂದೂ-ಮುಸಲ್ಮಾನರ ಒಂದು ಸಮ್ಮೇಲನ ಕರೆಯಬೇಕೆಂದು ಬಯಸುತ್ತೇವೆ.'

ಇದು ಗಾಂಧೀಜಿಯ ಹೃದಯವನ್ನು ಕಲಕಿತು. 'ಇಲ್ಲಿ ಹಿಂದೂ ಮುಸಲ್ಮಾನರ ಐಕಮತ್ಯ ಇರುವ ಹಾಗೆ ಭಾರತದಲ್ಲಿ ಎಲ್ಲೆಲ್ಲೂ ಅದನ್ನು ಸಾಧಿಸಬೇಕು ಎಂದು ಈ ಬಿನ್ನವತ್ತಳೆ ಹೇಳುತ್ತದೆ. ಕೆಲಕೆಲವು ಮಾತು ನನಗೆ ಪ್ರಾಣದಷ್ಟೇ ಪ್ರಿಯ. ಹಿಂದೂ ಮುಸ್ಲಿಂ ಐಕಮತ್ಯ ಅಂಥದೊಂದು ಎಲ್ಲಾ ಜಾತಿ ಮತಗಳ ಐಕಮತ್ಯ. ಕೆಲವು ವರ್ಷಗಳ ಕೆಳಗೆ ನಾನು ದಿಲ್ಲಿಯಲ್ಲಿ ಮಾಡಿದಂತೆ, ಈ ಪವಿತ್ರ ಕರ್ತವ್ಯಕ್ಕಾಗಿ ಮತ್ತೊಮ್ಮೆ ನನ್ನ ಪ್ರಾಣವನ್ನು ಪಣವೊಡ್ಡಲು ಸಿದ್ಧನಾಗಬೇಕು. ಅದಕ್ಕಾಗಿ ತಕ್ಕ ಅವಕಾಶ, ಸ್ಫೂರ್ತಿ ಎರಡೂ ಇರಬೇಕು. ನನ್ನ ಜೀವನ ಮತ್ತು ಜೀವನ ಕಾರ್ಯ ಇವು ಅಖಂಡ. ಬೇರೆ ಬೇರೆಯಲ್ಲ. ಅದರಲ್ಲಿ ನನ್ನ ಚಟುವಟಿಕೆಗಳೆಲ್ಲವೂ ಒಂದರೊಳಗೊಂದು ಹೆಣೆದುಕೊಂಡಿವೆ. ಇವೆಲ್ಲಕ್ಕೂ ಮೂಲ ನನ್ನ ಅದಮ್ಯ ಮಾನವ ಪ್ರೇಮ. ವ್ಯವಹಾರದಲ್ಲಿ, ಆಚಾರದಲ್ಲಿ ಮಾನವ ಜೀವನ ಏಕತೆಯನ್ನು ಸಾಧಿಸ ಬಯಸುವ ನನಗೆ ಬೇರೆ ಬೇರೆ ಜಾತಿಗಳು, ಬೇರೆ ಬೇರೆ ಮತಗಳು ಹೊಡೆದಾಡುತ್ತಿದ್ದರೆ ಅಥವಾ ಒಂದು ವರ್ಗವು ಇನ್ನೊಂದು ವರ್ಗವನ್ನು ತುಳಿಯುತ್ತಿದ್ದರೆ ನೋಡಿ ಸಹಿಸಿಕೊಂಡಿರಲು ನನಗೆ ಸಾಧ್ಯವಿಲ್ಲ. ಆದ್ದರಿಂದಲೇ ಈ ಹರಿಜನ ಚಳವಳಿ ಮಾನವ ಜೀವನದ ಸಮಾನತೆಯನ್ನು ಅರಿತುಕೊಳ್ಳಲು ಮಾಡಿದ್ದು ಎಂದು ಈ ಬಿನ್ನವತ್ತಳೆ ಒಪ್ಪಿಕೊಂಡಿದ್ದು ನನಗೆ ತುಂಬಾ ಸಂತೋಷ. ಈ ಅರಿವಿಗೆ ಅಸ್ಪೃಶ್ಯತೆ ಬಹಳ ದೊಡ್ಡ ಆತಂಕ. ಆದ್ದರಿಂದಲೇ ಈ ಅಸ್ಪೃಶ್ಯತಾ ನಿವಾರಣಾ ಚಳವಳಿಯಲ್ಲಿ ನಾನು ಹೃತ್ಪೂರ್ವಕ ಧುಮುಕಿದ್ದೇನೆ.

**ವಿವೇಕಿ ಗಂಡಂದಿರು :**

ಸಂಜೆಗೆ ಗಾಂಧೀಜಿ ಗುಂಡುಕುಟ್ಟಿಯಲ್ಲಿ ತಂಗಿದ್ದರು. ಅದು ಬಹಳ ರಮಣೀಯ ಪ್ರದೇಶ. ಗಾಂಧೀಜಿ ತಂಗಿದ್ದ ಮನೆಗೆ ನೆರೆಮನೆಯೇ ಕನ್ನಡ ನಾಡನ್ನು ಕಂಬನಿಯಿಂದ ತೋಯಿಸಿ ಹೋದ ಕೊಡಗಿನ ಗೌರಮ್ಮನ ಮನೆ. ಗಾಂಧೀಜಿಯನ್ನು ತಮ್ಮ ಮನೆಗೆ

ಕರೆದು ತರಬೇಕೆಂದು ಆಕೆಯ ಆಸೆ. ಆ ಊರಿನ ಸ್ವಾಗತ ಮಂಡಲಿಯವರು ಅದಕ್ಕೆ ಗಮನ ಕೊಡಲಿಲ್ಲ. ಈಕಿಗೆ ತುಂಬ ನೋವಾಯಿತು. ಅನ್ನ ನೀರೇ ಮುಟ್ಟಲಿಲ್ಲ. ಬೆಳಗಿನಿಂದ ಉಪವಾಸ. ಈ ಸುದ್ದಿ ಹೇಗೋ ಗಾಂಧೀಜಿಗೆ ತಿಳಿಯಿತು. ಗೌರಮ್ಮ ಅವರಿದ್ದಲ್ಲಿಗೆ ಬಂದಳು. ಬಂದವಳೇ ಅಳತೊಡಗಿದಳು. ಕುತ್ತಿಗೆ ಬಿಗಿದು ಬಂತು. ಮಾತಾಡಲಾಗಲಿಲ್ಲ.

ಬಾಪೂ : ಉಪವಾಸ ಏಕಮ್ಮ, ತಾಯಿ.

'ನೀವು ನಮ್ಮ ಮನೆಗೆ ಬರಲಿಲ್ಲ ಎಂದು.' ದುಃಖದಿಂದ ಕೊರಳು ಉಬ್ಬಿ ಬಂದಿತ್ತು. 'ನಿಮಗಾಗಿ ಕೆಲವು ಒಡವೆ ತೆಗೆದಿಟ್ಟಿದ್ದೇನೆ.'

'ಬಹಳ ಚಲೋದು. ಆದರೆ ಮೊದಲು ನಿನ್ನ ಉಪವಾಸ ನಿಲ್ಲಿಸಬೇಕು.'

'ನೀವು ಬರುತ್ತೇನೆ ಎಂದು ಮಾತು ಕೊಟ್ಟರೆ-'

'ಮಾತು ಕೇಳಬೇಡ ತಂಗೀ. ತೆಗೆದುಕೋ. ಈ ಕಿತ್ತಳೆ ಹಣ್ಣು ತಿನ್ನು ಮೊದಲು. ಹಾಗೆಲ್ಲ ವ್ಯಾಪಾರ ಮಾಡುತ್ತಾರೆಯೇ? ನನ್ನ ಮೇಲೆ ನಂಬಿಕೆ ಇರಲಿ. ನಿನ್ನ ಪ್ರೇಮದ ಅದಮ್ಯ ಶಕ್ತಿಯಲ್ಲಿ ನಿನಗೆ ನಂಬಿಕೆ ಇರಲಿ.'

ಅಲ್ಲಿಗೂ ಆಕೆ ಹಣ್ಣು ಮುಟ್ಟಲಿಲ್ಲ. ಮಾತು ಆಗಲೇ ಕೊಟ್ಟು ಆಯಿತು ಎಂಬುದು ಆಕೆಗೆ ಅರ್ಥ ಆಗಲಿಲ್ಲ. ಮೀರಾ ಬೆನ್ ಹಣ್ಣು ಸುಲಿದಳು. ಗೌರಮ್ಮನಿಗೆ ಇನ್ನೂ ಅನುಮಾನ. 'ನೀವು ಬರುತ್ತೀರಾ ಹಾಗಾದರೆ' ಎಂದಳು.

'ಬರುತ್ತಾರೆ ತಗೋ ತಾಯಿ' ಮೀರಾ ಬೆನ್ ಹೇಳಿದಳು. ನಗುನಗುತ್ತ ಗೌರಮ್ಮ ಹಣ್ಣು ತಿಂದಳು. ಅಲ್ಲಿಗೆ ಗಾಂಧೀಜಿ ಬಿಟ್ಟಾರೆಯೇ? ಕೊಟ್ಟ ಆಭರಣವನ್ನು ಮತ್ತೆ ತೊಡಬಾರದು ಎಂದು ನಿಯಮ ಹಾಕಿದರು. ಅದಕ್ಕೆ ಗೌರಮ್ಮ ಒಪ್ಪಿದರು. ಗೌರಮ್ಮನಿಗೆ ಆಗ ೨೧ ವರ್ಷ. ಮದುವೆ ಆಗಿತ್ತು. ಆಕೆಯ ಗಂಡ ಗೋಪಾಲಕೃಷ್ಣಯ್ಯನೂ (ಈಗ ಮೈಸೂರು ವಿಧಾನ ಸಭೆಯ ಸದಸ್ಯ) ಜೊತೆಯಲ್ಲಿದ್ದರು. ಆತನನ್ನು ಗಾಂಧೀಜಿ ಕೇಳಿದರು: 'ಒಡವೆ ಕೊಡಬೇಕೆಂದು ಈಕೆಗೆ ಯಾರು ಹೇಳಿದರು?'

'ಯಾರೂ ಇಲ್ಲ. ಆಕೆಯದೇ ಇಚ್ಛೆ! ನಾನೂ ಒಪ್ಪಿಗೆ ಕೊಟ್ಟೆ.'

ಆಗ ಆತನಿಗೆ ೪೦ ರೂಪಾಯಿ ಸಂಬಳ ಬರುತ್ತಿತ್ತು. ಗಾಂಧೀಜಿ ಅವರಿಗೆ ಸಾಕಷ್ಟು ಎಚ್ಚರಿಕೆ ಕೊಟ್ಟರು. ಉತ್ಸಾಹದ ಭರದಲ್ಲಿ ಒಡವೆಗಳನ್ನು ಕೊಡುವುದರ ತಪ್ಪನ್ನು ಅವರು ಮನಗಾಣಿಸಿಕೊಟ್ಟರು. 'ನೀವು ಸರಳ ಜೀವನ ನಡೆಸಿದರೆ ಇದು ಬಹಳ ಒಳ್ಳೆಯದೆ'- ಎಂದರು. ಗೌರಮ್ಮನೂ ಆಕೆಯ ಗಂಡನೂ ಒಪ್ಪಿಕೊಂಡರು. ಆ ಮೇಲೆ ಗಾಂಧೀಜಿ ಅವರ ಮನೆಗೆ ಹೋದಾಗ ಆಕೆ ಕೆಲವು ಒಡವೆಗಳನ್ನು ಕೊಟ್ಟರು.

ಇನ್ನೊಬ್ಬ ತರುಣಿ ತನ್ನ ಬಂಗಾರದ ಬಳೆಗಳನ್ನು ಗಾಂಧೀಜಿಗೆ ಕೊಟ್ಟಳು. ಆಕೆಯ

ಗಂಡನೂ ಎದುರಿಗೇ ಇದ್ದ. ಆತನಿಗೆ ಗಾಂಧೀಜಿ ಹೇಳಿದರು : 'ನಿನ್ನ ಹೆಂಡತಿ ನನಗೆ ಬಂಗಾರದ ಬಳೆ ಕೊಟ್ಟಿದ್ದಾಳೆ, ಗೊತ್ತೆ? ನಿನ್ನ ಅನುಮತಿ ಇದೆಯೆ ಅದಕ್ಕೆ?'

'ಹೌದು, ನನ್ನ ಅನುಮತಿಯಿಂದಲೇ ಕೊಟ್ಟಿದ್ದಾಳೆ. ಅದು ಆಕೆಯ ಇಷ್ಟ, ಸಂತೋಷ. ಒಡವೆ ಆಕೆಯದು, ನಾನು ಅನುಮತಿ ಕೊಡದೆ ಹೇಗೆ ಇರಲಿ?'

'ಎಲ್ಲ ಗಂಡಂದಿರೂ ಇಷ್ಟು ವಿವೇಕದಿಂದ ನಡೆಯುವುದಿಲ್ಲ. ನಿನ್ನ ವಯಸ್ಸೆಷ್ಟು?'

'ಮೂವತ್ತು'.

'ನಿನ್ನ ವಯಸ್ಸಿನಲ್ಲಿ ನಾನು ಇಷ್ಟು ವಿವೇಕದಿಂದ ನಡೆದುಕೊಳ್ಳಲಿಲ್ಲ. ನನಗೆ ವಿವೇಕ ಬಂದದ್ದು ಆ ಮೇಲೆ.' ಎಲ್ಲರೂ ಗಾಂಧೀಜಿಯ ಈ ಮಾತನ್ನು ಕೇಳಿ ಗೊಳ್ಳೆಂದು ನಕ್ಕರು.

*(ಹರಿಜನ : ೨೩-೨-೧೯೩೪)*

**ಮಡಿಕೇರಿ:**

ಸಂಜೆಗೆ ಮಡಿಕೇರಿ. ಮಡಿಕೇರಿ ಕೊಡಗಿನ ರಾಜಧಾನಿ. ಗಾಂಧೀಜಿ ಭಾಷಣದಲ್ಲಿ ಹೇಳಿದರು : 'ಬಹುಶಃ ನಿಮ್ಮನ್ನು ನೋಡುವುದು ಇದು ಮೊದಲನೆಯ ಸಲ. ಬಹುಶಃ ಕಡೆಯ ಸಲವೂ ಆಗಬಹುದು. ಇಲ್ಲಿಗೆ ಬರುವ ಮೊದಲು ಈ ಪ್ರದೇಶದ ನಿಸರ್ಗ ಸೌಂದರ್ಯವನ್ನು ಕುರಿತು ನಾನು ಎಷ್ಟೋ ಊಹೆ ಕಟ್ಟಿಕೊಂಡಿದ್ದೆ. ಅದು ಎಲ್ಲವೂ ಸಾರ್ಥಕ ಆಯಿತು.

**ಮಡಿಕೇರಿಯಿಂದ ಮಂಗಳೂರಿಗೆ:**

ಮಡಿಕೇರಿಯನ್ನು ಬಿಟ್ಟು ಗಾಂಧೀಜಿ ೨೪ನೇ ಫೆಬ್ರವರಿ ದಿನ ಸಂಜೆಗೆ ಮಂಗಳೂರು ಮುಟ್ಟಿದರು: ಮಡಿಕೇರಿಗೆ ಮಂಗಳೂರು ೮೬ ಮೈಲಿ ದೂರ. ಆದರೆ ೩,೮೦೦ ಅಡಿ ಪಶ್ಚಿಮ ಘಟ್ಟಗಳಿಗಿಂತ ಕೆಳಗಿದೆ.

ಮಡಿಕೇರಿಯನ್ನು ಬಿಡುವ ಮೊದಲು ಹಿಂದಿನ ಸಂಜೆ ಮಡಿಕೇರಿಯಲ್ಲಿ ಗಾಂಧೀಜಿ ಸಾರ್ವಜನಿಕ ಭಾಷಣ ಮಾಡಿದರು. ನಿಮ್ಮ ಪ್ರಾಂತಕ್ಕೆ ನಾನು ಕೊಟ್ಟದ್ದು ಎರಡೇ ದಿನ. ಎರಡು ದಿನದ ಪ್ರವಾಸ ಪ್ರಯಾಸಕರ ಆಗಿದ್ದರೂ ಸಂತೋಷಕರವೂ ಹೌದು. ನಿಮ್ಮ ಪ್ರಾಂತದಲ್ಲಿರುವ ನಿಸರ್ಗ ರಮಣೀಯತೆ ಒಂದೇ ಇದಕ್ಕೆ ಕಾರಣವಲ್ಲ. ನಿಮ್ಮಲ್ಲಿರುವ ಅಸ್ಪೃಶ್ಯತೆ ಬಹಳ ಸ್ವಲ್ಪ. ನಿಮ್ಮ ಬಿನ್ನವತ್ತಳೆ ಹರಿಜನರ ಬಗ್ಗೆ ಒಂದು ವರದಿ ಇದ್ದ ಹಾಗಿದೆ. ನನಗೆ ಅದರಿಂದ ಬೇಕಾದಷ್ಟು ಮಾಹಿತಿ ಸಿಗುತ್ತದೆ. ಹರಿಜನರು ದಿನೇ ದಿನೇ ಭೂಮಿಹೀನರು ಆಗುತ್ತಿದ್ದಾರೆ ಇಲ್ಲಿ ಎಂಬುದು ವಿಷಾದಕರ. ಅವರ ಹಿಡುವಳಿಯಲ್ಲಿರುವ ಅಲ್ಪ ಸ್ವಲ್ಪ ಭೂಮಿ ಕೂಡ ಬೀಳು. ಇಲ್ಲಿಯ ಹರಿಜನ ಸೇವಕ ಸಂಘ ಇದನ್ನು ಚೆನ್ನಾಗಿ ಪರಿಶೀಲಿಸಬೇಕು. ಹರಿಜನರು ಏಕೆ ಭೂಮಿಯನ್ನು ಕಳೆದುಕೊಳ್ಳುತ್ತಿದ್ದಾರೋ, ಅದನ್ನು ಹೇಗೆ ತಡೆಯಬೇಕೋ ನೋಡಬೇಕು. ಎಲ್ಲರಿಗೂ ಸಂಬಂಧಿಸಿದ ಆರ್ಥಿಕ ಕಾರಣಗಳಿದ್ದರೆ,

ನೀವು ಏನೂ ಮಾಡಲಾರಿರಿ. ಆದ್ದರಿಂದ ಭೂಮಿಹೀನರಾದ ಹರಿಜನರ ಆರ್ಥಿಕ ಸ್ಥಿತಿಯನ್ನು ಸಂಘ ಅರಿತುಕೊಳ್ಳಬೇಕು. ಪರಿಶೀಲನೆ ಮಾಡಿದ ಮೇಲೆ, ಅವರ ಹೊಲ ಹೋದರೂ ಅವರು ಹೆಚ್ಚು ಬಡವರಾಗಲಿಲ್ಲ ಎಂದು ತಿಳಿಯಬಹುದು. ಅದಕ್ಕೆ ವಿರುದ್ಧ ವಾದರೆ, ಬಹುಶಃ ಅದೇ ಸರಿ, ಅವರ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಅಗತ್ಯ ವಾದದ್ದನ್ನೆಲ್ಲ ಸಂಘ ಮಾಡಬೇಕು.

ಎಲ್ಲಕ್ಕಿಂತ ಹೆಚ್ಚಿನ ಪ್ರಶ್ನೆ ಹರಿಜನರಿಗೆ ಸಂಬಂಧಿಸಿದ ದೇವಾಲಯ ಪ್ರವೇಶ. ಹರಿಜನರಿಗೆ ದೇವಾಲಯ ಪ್ರವೇಶ ಮಾಡಿಸಲು ಇಲ್ಲಿನ ಪ್ರಜಾಭಿಪ್ರಾಯಕ್ಕೆ ಸಾಧ್ಯವಾಗಿಲ್ಲ ವೆಂಬುದು ನಿಜವಾಗಿಯೂ ವಿಷಾದಕರ; ಮೈದಾನದ ಜನಕ್ಕೆ ಇದ್ದ ಹಾಗೆ ನಿಮಗೆ ಯಾವ ದುರಭಿಪ್ರಾಯವೂ ಇಲ್ಲ. ಆದ್ದರಿಂದ ಹರಿಜನ ಸೇವಕರು ಎಲ್ಲರೂ ಈ ಸಮಸ್ಯೆಯ ನಿವಾರಣೆಗೆ ಪ್ರಯತ್ನಿಸಬೇಕು ಎಂದು ಕೇಳಿಕೊಳ್ಳುತ್ತೇನೆ. ಭರತ ಖಂಡಕ್ಕೆ ನೀವೇ ಈ ವಿಷಯದಲ್ಲಿ ಮುಂದಾಳಾಗುವ ಆಶೆ ಇಟ್ಟುಕೊಳ್ಳಬೇಕು'.

ಬಿಹಾರದ ಸಂತ್ರಸ್ತರ ಬಗ್ಗೆ ಆ ಮೇಲೆ ಗಾಂಧೀಜಿ ಮಾತನಾಡಿದರು. ಮಂಗಳೂರಿಗೆ ಹೋಗುವ ದಾರಿಯಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ರಸ್ತೆಯ ಉದ್ದಕ್ಕೂ ಸಾಲಾಗಿ ನಿಂತು, ಗಾಂಧೀಜಿಯ ಮೋಟಾರನ್ನು ನಿಲ್ಲಿಸಿ, ತಮ್ಮ ಕಾಣಿಕೆಗಳನ್ನು ಕೊಟ್ಟರು. ಇದು ಯಾವುದೂ ಕಾರ್ಯಕ್ರಮಗಳಲ್ಲಿರಲಿಲ್ಲ. ಈ ಬಗೆಯ ಕಾರ್ಯಕ್ರಮಗಳಿಂದ ಸಂತೋಷ ಆಗುತ್ತದೆ; ಜನಜಾಗ್ರತಿಯ ಅರಿವಾಗುತ್ತದೆ. ಆದರೆ ಗಾಂಧೀಜಿಗೆ ಇದರಿಂದ ತುಂಬಾ ತೊಂದರೆ. ಕೆಲಸ ಹೆಚ್ಚಿ ಯಾವಾಗ ವಿಶ್ರಾಂತಿ ಪಡೆದರೂ ಬೆಳಗ್ಗೆ ಎರಡು ಮೂರು ಗಂಟೆಗೆ ಗಾಂಧೀಜಿ ಏಳುತ್ತಾರೆ. ಆದ್ದರಿಂದ ನಿದ್ದೆ ಬಹಳ ಕಡಿಮೆಯಾಗುತ್ತದೆ. ಹೀಗಾಗಿ ಊರಿಂದ ಊರಿಗೆ ಹೋಗುವಾಗ ಗಾಡಿಯಲ್ಲಿಯೇ ನಿದ್ದೆ ಮಾಡುತ್ತಾರೆ. ಒಂದು ಕಡೆ ೧೬ ಮೈಲಿಯಷ್ಟು ದೂರ ಏನೂ ಕಾರ್ಯಕ್ರಮ ಇಲ್ಲ ಎಂದು ಠಕ್ಕರ ಬಾಪಾ ಗಾಂಧೀಜಿಗೆ ತಿಳಿಸಿದಾಗ ಅವರಿಗೆ ಬಹಳ ಸಂತೋಷವಾಯಿತು.

ಮೊದಲನೆಯ ಕಾರ್ಯಕ್ರಮ ಸಂಪಾಜೆಯಲ್ಲಿ. ಎರಡನೇ ಕಾರ್ಯಕ್ರಮ ಸೂಳ್ಯ. ಅಲ್ಲಿ ಗಾಂಧೀಜಿ ಒಂದು ಹಾರವನ್ನು ಹರಾಜು ಮಾಡಿದರು. ಒಂದು ಪುಟ್ಟ ಭಾಷಣ ಮಾಡಿದರು : ಅಸ್ಪೃಶ್ಯತೆಯನ್ನು ತೊಲಗಿಸಬೇಕು. ಎಲ್ಲರೂ ಒಂದೇ ದೇವರ ಸಂತಾನ. ಎಲ್ಲರಿಗೂ ಸಮಾನತೆಯನ್ನು ನೀಡಬೇಕು. ಲೋಕದಲ್ಲಿ ಉಚ್ಚ ನೀಚ ಎಂಬುದಿಲ್ಲ ಎಂದು ಹೇಳಿದರು. ಹರಿಜನರು ಕೆಲವು ತೆಂಗಿನ ಕಾಯಿಗಳನ್ನು ಗಾಂಧೀಜಿಗೆ ಕಾಣಿಕೆ ಕೊಟ್ಟರು. ಅದನ್ನು ಸವರ್ಣ ಹುಡುಗರಿಗೆ ಹಂಚಿ ಎಂದು ಹೇಳಿ ವಾಪಸು ಕೊಟ್ಟು ಮುಂದಕ್ಕೆ ಹೋದರು.

**ಪುತ್ತೂರಿನಲ್ಲಿ** : ಗಾಂಧೀಜಿ ಪುತ್ತೂರಿನಲ್ಲಿ ಸಾರ್ವಜನಿಕ ಸಭೆಯಲ್ಲಿ ಸ್ವಲ್ಪ ದೀರ್ಘ ವಾಗಿಯೇ ಮಾತನಾಡಿದರು. ಅಲ್ಲೇ ಮಧ್ಯಾಹ್ನದ ಊಟ, ವಿಶ್ರಾಂತಿ. ಸಭೆ ನಡೆದಾಗ ಒಬ್ಬ ಹುಡುಗಿ ಗಾಂಧೀಜಿಗೆ ಹಾರ ಹಾಕಲು ಬಂದಳು. ತನಗೆ ಹಾರಕೊಟ್ಟು ಕಳುಹಿಸಿದರೆ

ಹೋಗುವವನಲ್ಲ ಎನ್ನುತ್ತಾ ಆ ಹುಡುಗಿಯ ಮೈಮೇಲಿದ್ದ ಒಡವೆಗಳನ್ನು ಗಾಂಧೀಜಿ ಬೇಡಿದರು. ಆ ಹುಡುಗಿ ತನ್ನ ಬೆರಳಿನಿಂದ ಉಂಗುರವನ್ನು ತೆಗೆಯಲು ಹೋದರೆ ಅದು ಬಹಳ ಬಿಗಿಯಾಗಿತ್ತು. ಹೇಗೋ ಮಾಡಿ ಸಭೆ ಮುಗಿಯುವುದರೊಳಗಾಗಿ ಆ ಉಂಗುರವನ್ನು ತೆಗೆದು ತಂದುಕೊಟ್ಟಳು. ಇನ್ನೂ ಒಂದು ಭಾರವಾದ ಉಂಗುರ ಗಾಂಧೀಜಿಗೆ ಬಂತು. 'ಕರ್ನಾಟಕದಿಂದ ನನಗೆ ಬರುವದೆಲ್ಲವೂ ಗಟ್ಟಿಯೇ' ಎಂದು ಗಾಂಧೀಜಿ ಅಂದರು. ಹರಿಜನರಿಗೆ ಅಕ್ಕಿಯನ್ನು ಹಂಚಿದರು. ಹುಡುಗಿಯರು ಒಂದು ಮರಾಠಿ ಹಾಡನ್ನು ಹಾಡಿದರು. ಸ್ಥಳೀಯ ಹಿಂದೀ ಪ್ರೇಮಿ ಮಂಡಲದ ಬಿನ್ನವತ್ತಳೆ ಹಿಂದಿಯಲ್ಲಿತ್ತು. ತಾಲ್ಲೂಕಿನ ಬಿನ್ನವತ್ತಳೆ ಇಂಗ್ಲಿಷಿನಲ್ಲಿದ್ದದ್ದೂ, ಗಾಂಧೀಜಿಯ ಭಾಷಣವನ್ನು ಕನ್ನಡಕ್ಕೆ ಭಾಷಾಂತರಿಸಲು ಬಂದಿದ್ದ ಮನುಷ್ಯನಿಗೆ ಹಿಂದೀ ಬಾರದಿದ್ದೂ ಸ್ವಲ್ಪ ತೊಡಕಾಯಿತು. ಗಾಂಧೀಜಿ ಇಂಗ್ಲಿಷಿನಲ್ಲಿಯೇ ಮಾತನಾಡಿದರು.

ಒಡವೆಗಳನ್ನೂ ಅನೇಕ ನಿಧಿಗಳನ್ನೂ ತೆಗೆದುಕೊಳ್ಳುವ ರೂಢಿ ಕರ್ನಾಟಕ ಮಾಡಿ ಕೊಟ್ಟಿದೆ. ಒಡವೆಗಳನ್ನು ಕೊಡುವುದರಲ್ಲಿ ಕರ್ನಾಟಕವನ್ನು ಸರಿಗಟ್ಟುವ ಪ್ರಾಂತ ಇನ್ನೊಂದಿಲ್ಲ : ನೀವು ಕೊಟ್ಟಿರುವ ಬಿನ್ನವತ್ತಳೆಯಲ್ಲಿ ಮಲೇರಿಯಾದ ನಿಮಿತ್ತ, ಮುಗ್ಗಟ್ಟಿನ ನಿಮಿತ್ತ ಹೆಚ್ಚು ನಿಧಿ ಸಂಗ್ರಹಿಸಿ ಕೊಡಲಾಗಲಿಲ್ಲ ಎಂದಿದ್ದೀರಿ. ಇದು ಸೌಜನ್ಯದ ಪರಮಾವಧಿ. ಹೆಚ್ಚು ಎಂದರೆ ನಿಮ್ಮ ಅಭಿಪ್ರಾಯ ಏನೋ? ನನಗೆ ಇದೇ ಹೆಚ್ಚು. ನಿಮ್ಮಲ್ಲಿ ಯಾರೂ ಹಣವಂತರಿಲ್ಲ ಎಂಬುದನ್ನು ನಾನು ಬಲ್ಲೆ. ಬಂಗಾರವನ್ನು ನಿಮ್ಮ ಎದುರಿಗೆ ನಾವು ಸುರಿಯಲಾರೆವು. ನಿಮ್ಮ ಪಾದದಡಿಯಲ್ಲಿ ನಮ್ಮ ಹೃದಯಗಳನ್ನು ಸಮರ್ಪಿಸುತ್ತೇವೆ ಎಂದಿದ್ದೀರಿ. ಈ ಮಾತು ಬರಿ ಸೌಜನ್ಯದ್ದಲ್ಲ. ಆದರೆ ನನ್ನ ಕಾಲಿನ ಬಳಿ ನಿಮ್ಮ ಹೃದಯಗಳನ್ನು ಇಡುವ ಬದಲು ನನ್ನ ತಲೆಯ ಮೇಲಿಟ್ಟರೆ ನನಗೆ ಹೆಚ್ಚು ತೃಪ್ತಿ ನನ್ನ ತಲೆಯ ಮೇಲೆ ಅವು ಇದ್ದರೆ, ನನಗೆ ಬಿನ್ನವತ್ತಳೆಯೂ ಬೇಡ. ನಿಧಿಯೂ ಬೇಡ, ನನ್ನ ಚಳವಳಿಗೆ ಸಫಲತೆ ಸಿಕ್ಕೇ ಸಿಗುತ್ತದೆ. ಆದರೆ ಮುಂದೆ ನೀವು ಹೇಳುವದು ಪರಸ್ಪರ ವಿರುದ್ಧ ಆಗಿದೆ. ಹರಿಜನರಿಗಾಗಿ ನಾವು ಏನೂ ಮಾಡಿಲ್ಲ ಎಂದಿದ್ದೀರಿ. ನೀವು ಹರಿಜನ ಸೇವೆಯನ್ನು ಮಾಡದಿದ್ದರೆ, ನಿಮ್ಮನ್ನು ಮುಂದೆ ತರಾಟೆಗೆ ತೆಗೆದುಕೊಳ್ಳುತ್ತೇನೆ. ಆ ಸೇವೆ ಬಹಳ ಸುಲಭ. ಹರಿಜನರನ್ನು ಒಡಹುಟ್ಟಿದವರಂತೆ ನಡೆಸಿಕೊಳ್ಳಿ. ಇಷ್ಟು ಹೇಳಿದರೆ ಅಷ್ಟನ್ನೂ ಹೇಳಿದ ಹಾಗಾಯಿತು. ಈಗ ತಾನೇ ಒಂದು ಹರಿಜನ ಕೇರಿಗೆ ಹೋಗಿ ಬಂದೆ. ಅವರನ್ನು ಒಡಹುಟ್ಟಿದವರಂತೆ ಭಾವಿಸಿದ್ದರೆ ಹೀಗೆ ಒಂದು ಪ್ರತ್ಯೇಕ ಸ್ಥಳಕ್ಕೆ ಅವರನ್ನು ತಳ್ಳುತ್ತಿರಲಿಲ್ಲ. ಊರಿಗೂ ಕೇರಿಗೂ ನಡುವೆ ದೊಡ್ಡ ಕಂದಕ. ಮಳೆಗಾಲದಲ್ಲಿ ಅದು ತುಂಬಿದರೆ ದಾಟಬರಲು ಸಾಧ್ಯ ಇಲ್ಲ. ನಾನು ಆ ಕೇರಿಯಲ್ಲಿ ನೋಡಿದ್ದಾದರೂ ಏನು? ಮಕ್ಕಳೆಲ್ಲ ತುಂಬ ಕೊಳಕು. ಎಂದಾದರೂ ಅವರ ಕೂದಲು ಎಣ್ಣೆ ನೀರು ಕಂಡಿತೋ ಇಲ್ಲವೋ. ಇಲ್ಲಿರುವ ತರುಣ ತರುಣಿಯರಿಗೆ ಹರಿಜನ ಸೇವೆಯಲ್ಲಿ ಆಸಕ್ತಿ ಇದೆ. ಕೇರಿಗೆ ಅವರು ಹೋಗಲಿ. ಅದನ್ನು ಸುಧಾರಿಸಲಿ. ಅದಕ್ಕಾಗಿ

ನಿಮಗೆ ಸ್ವಲ್ಪ ಸಮಯ ಕೊಡಬೇಕಾಗುತ್ತದೆಯೇ ವಿನಃ ಬೇರೆ ಯಾವ ನಷ್ಟವೂ ಇಲ್ಲ. ಆದರೆ ಈ ಸೇವೆಗೆ ನಿಮ್ಮ ಮನಸ್ಸನ್ನು ಒಪ್ಪಿಸಿದ್ದೀರಿ ಎಂಬ ಶಪಥಕ್ಕೆ ಇದು ಒರೆಗಲ್ಲು.

ಗಾಂಧೀಜಿ ಮಾರ್ಚ್ ೯ನೇ ತಾರೀಖು ಬಿಹಾರಕ್ಕೆ ಹೊರಡಬೇಕು ಎಂದು ತಿಳಿಸಿ, ಬಿಹಾರದ ಸಂತ್ರಸ್ತರಿಗಾಗಿ ನಿಧಿಯನ್ನು ಸಂಗ್ರಹಿಸಿ ಕಳಿಸ ಹೇಳಿದರು.

**ಬಂಟವಾಳ :**

ಮಧ್ಯಾಹ್ನ ಎರಡೂವರೆ ಗಂಟೆಗೆ ಗಾಂಧೀಜಿ ಪುತ್ತೂರನ್ನು ಬಿಟ್ಟು ಬಂಟವಾಳಕ್ಕೆ ಹೊರಟರು. ದಾರಿಯಲ್ಲಿ ವಿಟ್ಟಲಗಬ್ಬ, ಕನ್ನಡಕ್ಕೆ, ಪಾಣೆ ಮಂಗಳೂರುಗಳಲ್ಲಿ ನಿಧಿಯನ್ನು ತೆಗೆದುಕೊಂಡು ಬಂಟವಾಳಕ್ಕೆ ಬಂದರು. ಅಲ್ಲಿ ಯಜ್ಞಾರ್ಥವಾಗಿ ಸದಾ ನೂಲುತ್ತಿದ್ದ ಒಬ್ಬ ಮನುಷ್ಯ ತಾನೇ ನೂಲುತ್ತಿದ್ದ ದಾರದಿಂದ ನೇಯ್ದ ಬಟ್ಟೆಯನ್ನು ಗಾಂಧೀಜಿಗೆ ಸಮರ್ಪಿಸಿದ. ಒಂದು ಸಂದೇಶ ಬೇಕು ಎಂದು ಬಂಟವಾಳದ ಜನ ಕೇಳಿದಾಗ ಆ ಊರಿನ ಸಭೆಯಲ್ಲಿ ಗಾಂಧೀಜಿ ಹೇಳಿದರು:

'ನಿಮಗೆ ಏನು ಸಂದೇಶ ಹೇಳಲಿ? ಇಷ್ಟು ನಿಧಿ ಕೊಟ್ಟಿದ್ದೀರಿ. ಇಷ್ಟು ಒಡವೆ ಕೊಟ್ಟಿದ್ದೀರಿ. ಸಂದೇಶ ಬೇಕು ಎಂದು ಒತ್ತಾಯಿಸಿದರೆ, ಈ ದಾನದಿಂದ, ಕಾಣಿಕೆಯಿಂದ ನಿಮ್ಮ ಕರ್ತವ್ಯ ಮುಗಿಯಲಿಲ್ಲ ಎಂದು ಅರಿತುಕೊಳ್ಳಿ. ಈ ಚಳವಳಿ ಆತ್ಮಶುದ್ಧಿಯ ಚಳವಳಿ ಎಂಬುದನ್ನು ತಿಳಿದುಕೊಳ್ಳಿ. ಈ ಅಸ್ಪೃಶ್ಯತೆಯ ಪಾಪವನ್ನು ತೊಳೆದು ಹಾಕಿ. ಉಚ್ಚ-ನೀಚ ಭೇದವನ್ನು ಮರೆತುಬಿಡಿ. ಒಬ್ಬ ಮನುಷ್ಯ ತನಗಿಂತ ಕೀಳು ಎಂದು ತಿಳಿಯುವದು ಉತ್ಥಾನವಲ್ಲ, ಪತನ. ಮಂಗಳೂರಿಗೂ ಬಂಟವಾಳಕ್ಕೂ ನಡುವೆ ಅರ್ಕುಲ ಅಡಯಾರಗಳಲ್ಲಿ ನಿಧಿ ಕೊಟ್ಟರು.

**ಪಾನ ನಿರೋಧ, ಸುಂಕವಿಲ್ಲದ ಉಪ್ಪು :**

ಮಂಗಳೂರಿನಲ್ಲಿ ಮೊಟ್ಟ ಮೊದಲನೆಯ ಕಾರ್ಯಕ್ರಮ ಜ್ಞಾನೋದಯ ಸಮಾಜದ ನಿಧಿ ಮತ್ತು ಬಿನ್ನವತ್ತಳೆ ಸಮರ್ಪಣೆ. ಈ ಸಮಾಜ ಮೊಗವೀರರಲ್ಲಿ ಮಿತಪಾನದ ಚಳವಳಿ ಹೂಡಿದೆ. ಮೊಗವೀರರು ಪಶ್ಚಿಮ ತೀರದ ಉದ್ದಕ್ಕೂ ಇರುವ ಅಂಬಿಗರು. ತಮ್ಮ ಸಮಾಜದಲ್ಲಿ ಮದ್ಯಪಾನ ಬಹಳ ಕೆಡುಕು ಮಾಡಿದೆ. ಉಪ್ಪಿನ ತೆರಿಗೆ ಎಲ್ಲರಿಗಿಂತ ತಮಗೆ ಹೆಚ್ಚು ಭಾರ. ಏಕೆಂದರೆ ಮೀನುಗಾರಿಕೆಗೆ ಉಪ್ಪು ಅತ್ಯಗತ್ಯ ಎಂದು ಅವರ ಬಿನ್ನವತ್ತಳೆಯಲ್ಲಿ ಹೇಳಿತ್ತು. ಗಾಂಧೀಜಿ ಹೇಳಿದರು :

"ನನ್ನದೂ ಒಂದು ಬೆಸ್ತರ ಹಳ್ಳಿ. ಬೆಸ್ತರು ಏನು ಮಾಡುತ್ತಾರೋ ನನಗೆ ಗೊತ್ತು. ಬಹುಶಃ ಅವರ ರೂಢಿಯೋ ಏನೋ-ಮೀನಿನ ಹಾಗೆ ಇಂಥವನು ಕುಡಿಯುತ್ತಾನೆ ಎಂದು ಹೇಳುತ್ತಾರೆ. ಈ ದುಶ್ಚಟವನ್ನು ಹೋಗಲಾಡಿಸಲು ನಿಮ್ಮ ಪ್ರಯತ್ನ ಸ್ತುತ್ಯ. ಕುಡಿತದ ಈ ಚಟವನ್ನು ಕಳೆಯುವದು ಬಹಳ ಕಷ್ಟ, ನನಗೆ ಗೊತ್ತು, ನಿಮ್ಮ ಪ್ರಯತ್ನವನ್ನು ಬಿಡಬೇಡಿ. ಸಂಪೂರ್ಣ ಸಫಲತೆ ಸಿಗಲಿಲ್ಲ ಎಂದು ನಿರಾಶರಾಗಬೇಡಿ. ಒಂದು ಸಲಹೆ ಕೊಡುತ್ತೇನೆ; ಕುಡಿಯಬೇಡಿ ಎಂದು ಪ್ರಚಾರ ಮಾಡಿದರೆ ಸಾಲದು. ಎಷ್ಟೋ ಸಲ

ಏನೂ ಕೆಲಸವಿಲ್ಲದಿದ್ದರಿಂದ ಜನ ಕುಡಿಯುತ್ತಾರೆ. ಆದ್ದರಿಂದ ಅವರ ಮನಸ್ಸಿಗೆ ಉದ್ಯೋಗ ಸಿಗುವಂತೆ ಏನಾದರೂ ಮಾಡಿ. ಇದರಲ್ಲಿ ಸಫಲವಾಗಿರುವ ಇತರರನ್ನು ಅನುಕರಿಸಿ.

ಅಂಬಿಗರಿಗೆ ಉಪ್ಪು ಎಷ್ಟು ಅಗತ್ಯ ಎಂಬುದನ್ನು ನಾನು ಬಲ್ಲೆ. ಎಂದಾದರೂ ಒಂದು ದಿನ ಈ ಉಪ್ಪಿನ ಸಮಸ್ಯೆಯನ್ನು ಎದುರಿಸಬಲ್ಲೆವು ಎಂಬ ಧೈರ್ಯ ನನಗಿದೆ. ಅದರ ಬಗ್ಗೆ ನಿರಾಸೆ ನನಗಿಲ್ಲ. ಇದು ಒಂದು ಕನಿಕರದ ವಿಷಯ. ಯಾವ ವಿಷಯವಾಗಲೀ ಅದಕ್ಕೆ ಪ್ರಾಮಾಣಿಕವಾಗಿ ಪ್ರಯತ್ನಿಸಿದರೆ ಸಫಲತೆ ಸಿಗಲೇ ಬೇಕು."

**ದಲಿತ ವರ್ಗದ ಉದ್ಧಾರ :**

ದಲಿತ ವರ್ಗದ ಸೇವಾ ಸಮಾಜಕ್ಕೆ (Depressed Classes Mission) ಗಾಂಧೀಜಿ ಹೋಗಿ ಬಂದರು. ಈ ಸಮಾಜ ಒಂದು ಹೈಯರ್ ಎಲಿಮೆಂಟರಿ ಶಾಲೆಯನ್ನೂ, ಎರಡು ಲೋಯರ ಎಲಿಮೆಂಟರಿ ಶಾಲೆಗಳನ್ನೂ, ಒಂದು ವಯಸ್ಕರ ಶಿಕ್ಷಣ ಕೇಂದ್ರವನ್ನೂ ನಡೆಸುತ್ತಿದೆ. ಆ ಹೈಯರ್ ಎಲಿಮೆಂಟರಿ ಶಾಲೆಗೆ ಎರಡು ವಿದ್ಯಾರ್ಥಿನಿಲಯಗಳಿವೆ – ಒಂದು ಹುಡುಗಿಯರಿಗೆ, ಒಂದು ಹುಡುಗರಿಗೆ. ಬೇರೊಂದು ಕಡೆ ಈ ಸಮಾಜ ಒಂದು ವಸತಿ ಶಾಲೆಯನ್ನೂ ನಡೆಸುತ್ತಿದೆ. ಶಾಲೆಯ ತೋಟದಲ್ಲಿ ಹುಡುಗರು ಬೆಳೆದ ಕಾಯಿಪಲ್ಯವನ್ನೂ, ಅವರು ಮಾಡಿದ ಕೈ ಕೆಲಸವನ್ನೂ ಗಾಂಧೀಜಿ ಪರಿಶೀಲಿಸಿದರು. ಹುಡುಗರು ಕನ್ನಡದಲ್ಲಿ ಒಂದು ಸ್ವಾಗತ ಗೀತೆಯನ್ನು ಹಾಡಿದರು. ಗಾಂಧೀಜಿ ಮಕ್ಕಳಿಗೆ ಬಹುಮಾನ ವಿತರಣೆ ಮಾಡಿದರು. ಆ ಶಾಲೆಯಲ್ಲಿ ಅದರ ಸಂಸ್ಥಾಪಕರಾದ ಶ್ರೀ ಕೆ. ರಂಗರಾಯರ ಭಾವಚಿತ್ರವನ್ನು ನೋಡಿ ಗಾಂಧೀಜಿ ಸಂತೋಷ ಪಟ್ಟರು. ಬಹುಶಃ ಈ ಸಮಾಜಕ್ಕಿಂತ ಹಳೆಯದು ಭಾರತದಲ್ಲಿ ಇರಲಾರದು ಎಂದರು.

ಮೊದಲು ಮೊಗವೀರ ಸಮಾಜಕ್ಕೆ ಭೇಟಿ ಕೊಟ್ಟದ್ದರಲ್ಲಿ ಅಲ್ಲಿ ಜೋಗಮ್ಮ ಎಂಬ ಮೊಗವೀರ ತರುಣಿ ಗಾಂಧೀಜಿಗೆ ಒಂದು ಬೆಳ್ಳಿಯ ರಾಟೆಯನ್ನೂ ಕಾಣಿಕೆಯಾಗಿ ಒಪ್ಪಿಸಿದರು. ದಿ. ಕಾರ್ನಾಡ್ ಸದಾಶಿವರಾಯರು ಆಗ ಬದುಕಿದ್ದರು. ದಾನಿ ಶ್ರೇಷ್ಠರಾದ ಸದಾಶಿವರಾಯರ ಮೇಲಿನ ಮೊಕದ್ದಮೆಯನ್ನು ಆ ತಿಂಗಳಲ್ಲೇ ವಿಚಾರಿಸಬೇಕಾಗಿತ್ತು. ಶ್ರೀ ಸದಾಶಿವರಾಯರು ಆಗರ್ಭ ಶ್ರೀಮಂತರಾದರೂ ಗಾಂಧೀಜಿಯ ಸತ್ಯಾಗ್ರಹ ಚಳವಳಿಯಲ್ಲಿ ಎಲ್ಲವನ್ನೂ ಧಾರೆಯೆರೆದು, ದರಿದ್ರರಾಗಿದ್ದರು. ಅವರಿಗೆ ಈ ಬಡತನ ಬಂದದ್ದನ್ನು ಗಾಂಧೀಜಿ ಮೆಚ್ಚಿಕೊಂಡು, ಸದಾಶಿವರಾಯರ ತಾಯಿಯವರನ್ನೂ ಕಂಡು ಅಭಿನಂದಿಸಿದರು. ಅವರ ಮುಪ್ಪಿನ ತಾಯಿಯನ್ನು ನೋಡಲು, ಗಾಂಧೀಜಿ ಸದಾಶಿವರಾಯರ ಮನೆಗೇ ಹೋಗಿ ಬಂದರು. ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ಅವರ ಮಗ, ಅವರ ತಾಯಿ ಮೂವರೂ ಗಾಂಧೀಜಿಗೆ ಭೆಟ್ಟಿಯಾದರು.

**ಮಂಗಳೂರಿನಲ್ಲಿ ಮಹಿಳೆಯರು:**

ಮಹಿಳೆಯರ ಸಭೆಯಲ್ಲಿ ಹುಡುಗಿಯರು ಒಂದು ಮರಾಠಿ ಹಾಡನ್ನು ಹಾಡಿದರು.

ಮಹಿಳೆಯರು ೨೩೫ ರೂಪಾಯಿಗಳ ನಿಧಿಯನ್ನು ಸಮರ್ಪಿಸಿ ಹಿಂದಿಯಲ್ಲಿ ಒಂದು ಬಿನ್ನವತ್ತಳೆಯನ್ನು ಓದಿದರು. ಮಂಗಳೂರಿನ ಮಹಿಳೆಯರ ಚಳವಳಿಯ ಜೀವಾಳವಾದ ಶ್ರೀಮತಿ ಆನಂದೀಬಾಯಿ ಅದನ್ನು ಓದಿದರು. ಅದಕ್ಕೆ ಉತ್ತರ ಕೊಡುತ್ತ ಗಾಂಧೀಜಿ– ಮಂಗಳೂರಿನ ಹೆಸರನ್ನು ತಾವು ನೋಡಿದುದು ಅದು ಮೊದಲನೆಯ ಸಲವಲ್ಲ ಎಂದರು. ಈ ಹಿಂದೆ ಎರಡು ಸಲ ಅವರ ಆಭರಣಗಳ ದಾನಕ್ಕೆ ಗಾಂಧೀಜಿ ಸೋತು ಹೋಗಿದ್ದರು. ಅವನ್ನು ತೆಗೆದುಕೊಳ್ಳುವುದರಲ್ಲಿ ಅವರಿಗೆ ದಣಿವಾಗಿತ್ತು. ಈಗ ಹರಿಜನರ ನಿಧಿಗಾಗಿ ಅವರು ಏನು ಮಾಡುತ್ತಾರೋ ತಾವು ನೋಡುವುದಾಗಿ ಹೇಳಿದರು. ನೂರಿನ್ನೂರು ರೂಪಾಯಿ ಕೊಟ್ಟರೆ ಸಾಲದು. ಅಸ್ಪೃಶ್ಯತೆಯ ಕಳಂಕದಿಂದ ಹಿಂದೂ ಸಮಾಜದ ಹೃದಯ ಮುಕ್ತವಾಗಬೇಕಾದರೆ ಹೆಂಗಸರು ಮುಂದೆ ಬಂದು ಹೆಚ್ಚಿನ ಕೆಲಸವನ್ನು ಮಾಡಬೇಕು. ಇದು ಶುದ್ಧೀಕರಣದ ಚಳವಳಿ. ಎಂದಾದರೂ ಈ ಕೆಲಸಕ್ಕೆ ಗಂಡಸರಿಗಿಂತ ಹೆಂಗಸರೇ ಹೆಚ್ಚು ಸಮರ್ಥರು. ಜಗತ್ತಿನಲ್ಲಿ ಎಲ್ಲಾ ಕಡೆಯಲ್ಲಿಯೂ ಹೆಂಗಸರು ಧರ್ಮ ಸಂರಕ್ಷಕರು. ಕಾರಣ, ತ್ಯಾಗಕ್ಕೆ, ತಪಸ್ಸಿಗೆ ಅವರ ಸಾಮರ್ಥ್ಯ ಹೆಚ್ಚಿನದು; ಆದ್ದರಿಂದ ಈ ಹರಿಜನ ಚಳವಳಿಯಲ್ಲಿಯೂ ಮಹಿಳೆಯರು ಅಗ್ರಗಾಮಿಗಳಾಗಿ ನಿಂತು, ತಮ್ಮ ಆಶಯ ವನ್ನು ಪೂರೈಸಬಲ್ಲರು ಎಂದು ನಂಬಿದ್ದರು. ಯಾವ ತಾಯಿಯೂ ತನ್ನ ಮಕ್ಕಳಲ್ಲಿ ಭೇದ ಮಾಡುವುದಿಲ್ಲ. ಮಣ್ಣಿನ ಮುದ್ದೆಯಾದ ಮನುಷ್ಯರೇ ಇಂಥ ಭೇದ ಭಾವವನ್ನು ತೋರದೇ ಇದ್ದರೆ, ನಾವು ಯಾರ ಸಂತಾನವೂ ಆ ದೇವರು ಭೇದವನ್ನು ತೋರಿಯಾನೇ? ಒಬ್ಬರನ್ನು ಸ್ಪೃಶ್ಯರು ಎಂದು ಇನ್ನೊಬ್ಬರನ್ನು ಅಸ್ಪೃಶ್ಯರು ಎಂದು ಭಾಗ ಮಾಡಬಲ್ಲನೇ? ಶಾಸ್ತ್ರಗಳಲ್ಲಿ ಅಸ್ಪೃಶ್ಯತೆಗೆ ಆಧಾರವಿಲ್ಲ ಎಂದು ಅವರಿಗೆ ಸಂಪೂರ್ಣ ನಂಬುಗೆ. ಧರ್ಮಗ್ರಂಥ ಎಂದಾದರೂ ಅಧರ್ಮವನ್ನೂ ಉಪದೇಶ ಮಾಡೀತೇ? ವೇದದ ಮೂಲ ತತ್ತ್ವ ಅದ್ವೈತ. ಮನುಷ್ಯ ಮನುಷ್ಯರಲ್ಲಿ ಅವರಲ್ಲಿ ಭೇದವೇ ಇಲ್ಲ. ಯಾರನ್ನೂ ಅಸ್ಪೃಶ್ಯರೆಂದು ಅವರು ತಿಳಿಯಬಾರದು. ಹರಿಜನರನ್ನು ಒಡಹುಟ್ಟಿದವರಂತೆ ತಿಳಿಯಬೇಕು. ಆಗ ತಾನೇ ಅವರು ಶ್ರೀ ರಂಗರಾಯರ ಹರಿಜನ ಶಾಲೆಗೆ ಹೋಗಿ ಬಂದಿದ್ದರು. ಆ ಹುಡುಗರು ಹರಿಜನರು ಎಂದು ಹೇಳದೆ ಇದ್ದಿದ್ದರೆ, ಅವರಿಗೆ ಅದು ತಿಳಿಯುತ್ತಲೇ ಇರಲಿಲ್ಲ. ತಮ್ಮ ಮುಂದೆ ಇದ್ದ ಇತರ ಹುಡುಗರಿಗೂ, ಆ ಹರಿಜನ ಹುಡುಗರಿಗೂ ಏನೂ ವ್ಯತ್ಯಾಸವಿರಲಿಲ್ಲ. ಇಲ್ಲಿ ಈ ಹುಡುಗಿಯರು ಹಾಡಿದಷ್ಟು ಸವಿಯಾಗಿಯೇ ಆ ಹರಿಜನ ಹುಡುಗರೂ ಹಾಡಿದರು. ತನಗಿಂತ ಇತರರನ್ನು ಕೀಳು ಎಂದು ತಿಳಿಯುವುದು ಬಹಳ ಪಾಪ. ಅಂಥ ಪಾಪವನ್ನು ಅವರು ಮಾಡದಿರಲಿ ಎಂದು ಭಗವಂತನನ್ನು ಗಾಂಧೀಜಿ ಪ್ರಾರ್ಥಿಸಿದರು. ಆಮೇಲೆ ಬಿಹಾರದ ಸಂತ್ರಸ್ತ ಜನತೆಯ ಪರವಾಗಿ ಗಾಂಧೀಜಿ ಎಲ್ಲರಿಗೂ ಬಿನ್ನಯಿಸಿಕೊಂಡರು. ಸೀತೆ, ಬುದ್ಧರ ಪಾದಧೂಳಿಯಿಂದ ಬಿಹಾರ ಪವಿತ್ರವಾಗಿದೆ ಎಂದು ಅಲ್ಲಿ ಜನ ಹೇಳುವುದನ್ನು ನೆನೆದರು.

ಆ ಮೇಲೆ ಹೆಂಗಸರದು ಒಂದು ಮೆರವಣಿಗೆಯೇ ಮೊದಲಾಯಿತು. ಒಬ್ಬರಾದ ಮೇಲೆ ಒಬ್ಬರು ವೇದಿಕೆಗೆ ಬಂದು ತಮ್ಮ ಒಡವೆಗಳನ್ನೂ ಹಣವನ್ನೂ ನೀಡಿದರು.

ಹಣದ ಮಳೆಯೇ ಸುರಿಯಿತು. ಠಕ್ಕರ ಬಾಪಾರ ಜೇಬು ಬಹಳ ದೊಡ್ಡವು. ಅಂಥ ಜೇಬುಗಳೂ ಕೂಡ ಮಂಗಳೂರಿನ ಮಹಿಳೆಯರ ಕಾಣಿಕೆಯಿಂದ ತುಂಬಿಹೋಗಿ, ಹಿಡಿಸದೆ ಹೋದವು.

**ಸಾರ್ವಜನಿಕ ಸಭೆ:**

ಮಂಗಳೂರಿನ ಸಾರ್ವಜನಿಕ ಸಭೆ ಬಹಳ ದೊಡ್ಡದು. ಸುಮಾರು ಹತ್ತುಸಾವಿರಕ್ಕಿಂತ ಹೆಚ್ಚು ಜನ ಸೇರಿದ್ದರು. ಸಾರ್ವಜನಿಕರು, ಡಿಸ್ಟ್ರಿಕ್ಟು ಬೋರ್ಡು, ತಾಲ್ಲೂಕು ಬೋರ್ಡುಗಳ, ಸ್ವಾಗತ ಸಂಘದ, ಹಿಂದೀ ಪ್ರಚಾರ ಸಭೆಯ ಪರವಾಗಿ ಗಾಂಧೀಜಿಗೆ ಬಿನ್ನವತ್ತಳೆಗಳನ್ನು ಅರ್ಪಿಸಿದರು. ಸ್ವಾಗತ ಸಭೆಯ ನಿಧಿಯಲ್ಲದೇ ಎಷ್ಟೋ ಕಾಣಿಕೆಗಳು ಬಂದವು. ಸಾರ್ವಜನಿಕರೂ ಆ ನಿಧಿಯನ್ನು (೧,೦೦೧) ಬಹಳ ಸ್ವಲ್ಪ ಎಂದು ಹೇಳಿದ್ದನ್ನು ಒಪ್ಪುತ್ತ ಗಾಂಧೀಜಿ, ಮಂಗಳೂರಿನ ಜನ ಆಗಲೇ ಬಿಹಾರಕ್ಕಾಗಿ ಧನ ಸಂಗ್ರಹ ಮಾಡಿದ್ದನ್ನೂ, ಹಣದ ಮುಗ್ಗಟ್ಟಿನ ಪ್ರಭಾವವನ್ನೂ ಗಮನಿಸುತ್ತ ಹೇಳಿದರು.

ಅಸ್ಪೃಶ್ಯತೆಯನ್ನು ನಿಧಿಗಳಿಂದ ಅಳಿಸಲು ಸಾಧ್ಯವಿಲ್ಲ. ಎಂಥ ದೊಡ್ಡ ನಿಧಿಯೂ, ಕೆಲವರು ಕೋಟ್ಯಧೀಶ್ವರರೂ ಸೇರಿ ಹಲವು ಕೋಟಿ ರೂಪಾಯಿಗಳನ್ನು ಕೊಟ್ಟರೂ ಈ ಕಳಂಕ ಹೋಗದು. ಸವರ್ಣ ಹಿಂದೂಗಳ ಹೃದಯ ಪರಿವರ್ತನೆಯೇ ಇದಕ್ಕೆ ಮದ್ದು. ಹರಿಜನ ಸೇವೆಗಾಗಿ ಹಣ ಕೊಡುವದು ಆ ಹೃದಯ ಪರಿವರ್ತನೆಯ ಕುರುಹು. ನಾನು ಭಾರತದ ಅನೇಕ ಪ್ರಾಂತಗಳನ್ನು ಸುತ್ತಿದ್ದೇನೆ. ಸಾವಿರಾರು ಜನ ತಮ್ಮ ಪುಡಿ ಕಾಸುಗಳನ್ನು ಕೊಟ್ಟಿದ್ದು ನೋಡಿ, ನನ್ನ ಹೃದಯ ತುಂಬಿ ಬಂದಿದೆ. ಈ ಕೊಡುಗೆ ಅಸ್ಪೃಶ್ಯತೆಯನ್ನು ಬಿಟ್ಟಿದ್ದರ ಕುರುಹು ಎಂದು ಹೇಳಿದ್ದೇನೆ. ಆದರೆ ದೇವಾಲಯಗಳನ್ನು ಹರಿಜನರಿಗಾಗಿ ತೆರೆಯದೆ, ಈ ಸುಧಾರಣೆ ಸಂಪೂರ್ಣ ಆಗುವುದಿಲ್ಲ. ಹಿಂದೂ ಸಮಾಜದ ಒಂದು ಭಾಗವಾಗಿದ್ದ ಹರಿಜನರು, ಅವರಿಗೂ ಸವರ್ಣ ಹಿಂದೂಗಳಿಗೆ ಇದ್ದಂತೆ ದೇವಾಲಯ ಪ್ರವೇಶದ ಹಕ್ಕು ಇರಬೇಕು. ಅವರ ಜೊತೆಗೆ ಸರಿಸಮ ಆಗಿ ಇರಬೇಕಾದರೆ ಈ ಹಕ್ಕು ಅತ್ಯಗತ್ಯ. ಇದು ಇಲ್ಲದೆ ಆರ್ಥಿಕ ಅಭಿವೃದ್ಧಿ ಎಷ್ಟೇ ಆದರೂ ಪ್ರಯೋಜನವಿಲ್ಲ. ಆದರೆ ಬಲತ್ಕಾರವಾಗಿ ದೇವಾಲಯ ಪ್ರವೇಶ ಸಾಧ್ಯವಿಲ್ಲ. ಸವರ್ಣರ ಅಭಿಪ್ರಾಯ ಪರಿವರ್ತನೆ ಆದರೇನೇ ಅದು ಸಾಧ್ಯ. ಈ ಬಗ್ಗೆ ನೀವು ಪ್ರಯತ್ನಿಸುವಿರೆಂದು ನನ್ನ ಆಶೆ.

ಆ ಮೇಲೆ ಗಾಂಧೀಜಿ ಕೆಲವು ವಸ್ತುಗಳನ್ನು ಹರಾಜು ಮಾಡಿದರು. ಅವರಲ್ಲಿ ಒಬ್ಬ ಉತ್ತಮ ನೂಲುಗಾತಿ ನೂತರೂ ಕೂಡ ಆಯಾಸವಾಗದಂಥ ಒಂದು ಯಂತ್ರವು ಇತ್ತು.

**ಮಂಗಳೂರಿನ ಹರಿಜನರು:**

ಫೆಬ್ರವರಿ ೨೫ರಂದು ಗಾಂಧೀಜಿ ಮಂಗಳೂರನ್ನು ಬಿಟ್ಟು ಮುಲ್ಕಿಗೆ ಪ್ರಯಾಣ ಬೆಳೆಸಿದರು. ಮಂಗಳೂರು ಬಿಡುವ ಮೊದಲು ಹರಿಜನ ಕೇರಿಗೆ ಹೋಗಿ ಬಂದರು.

ಒಂದು ಅಯಶಸ್ವಿಯಾದ ಮುಷ್ಕರದ ಪರಿಣಾಮವಾಗಿ ಪೌರಸಭೆಯ ನೌಕರರಾದ ಹರಿಜನರು ಕೆಲಸ ಕಳೆದುಕೊಂಡರು, ಬಹಳ ಸಂಕಟದಲ್ಲಿದ್ದರು. ಇಂಥ ಸಂದರ್ಭದಲ್ಲಿ ಸ್ಥಳೀಯ ಹರಿಜನ ಸೇವಕ ಸಂಘದವರು ಏನಾದರೊಂದು ಗೃಹೋದ್ಯೋಗವನ್ನು ಕಲಿಸಿ, ಅವರ ದಿನದ ವೆಚ್ಚವನ್ನು ಸಂಪಾದಿಸಿಕೊಳ್ಳಲು ಅನುಕೂಲ ಮಾಡಿಕೊಡಬೇಕು ಎಂದರು.

**ಕೆನರಾ ಹೈಸ್ಕೂಲಿನಲ್ಲಿ**

ಹರಿಜನ ಕೇರಿಯಿಂದ ಈ ಶಾಲೆಗೆ ಹೋಗಿ, ಅಲ್ಲಿ ಶಾಲೆಯ ಹಳೆ ವಿದ್ಯಾರ್ಥಿಗಳು ಉಪಾಧ್ಯಾಯರೂ, ಸೇರಿ ಏರ್ಪಡಿಸಿದ್ದ ಒಂದು ಸಾರ್ವತ್ರಿಕ ದೇವಾಲಯಕ್ಕೆ ಶಂಕುಸ್ಥಾಪನೆ ಮಾಡಿದರು; ಶ್ರೀ ವಿಠ್ಠಲಭಾಯಿ ಪಟೇಲರ ಚಿತ್ರವನ್ನು ಅನಾವರಣ ಮಾಡಿದರು. 'ನೀವು ಕೊಟ್ಟಿರುವ ಕಾಣಿಕೆ ಬಹಳ ಸ್ವಲ್ಪ. ಬೇರೆ ಕಡೆ ವಿದ್ಯಾರ್ಥಿಗಳು ಹೆಚ್ಚು ಕೊಟ್ಟಿದ್ದಾರೆ. ಆದರೆ ನಾನು ದೂರುವುದಿಲ್ಲ. ಏಕೆಂದರೆ, ಕರ್ನಾಟಕ ಎಂದೂ ಲೋಭಿಯಾಗಿದ್ದುದು ನನಗೆ ನೆನಪಿಲ್ಲ. ಯಾವಾಗಲೂ ಕರ್ನಾಟಕ ಅದ್ವಿತೀಯ. ಎರಡನೆಯ ಸ್ಥಾನವನ್ನು ಹಿಡಿದೇ ಇಲ್ಲ. ಈಗಲೂ ಸದ್ಯದ ಪರಿಸ್ಥಿತಿಯಲ್ಲಿ ನಿಮ್ಮ ಕೈಲಾದುದಕ್ಕಿಂತ ಹೆಚ್ಚೆ ಮಾಡಿದಿರಿ ಎಂಬುದರಲ್ಲಿ ನನಗೆ ಸಂದೇಹ ಇಲ್ಲ. ನಿಮ್ಮ ನಡುವೆ ಇಬ್ಬರು ಮೂವರು ಹರಿಜನರ ವಿದ್ಯಾರ್ಥಿಗಳಿದ್ದಾರೆ ಎಂದು ಹೆಮ್ಮೆಯಿಂದ ಹೇಳಿದ್ದೀರಿ. ಮರುಭೂಮಿಯಲ್ಲಿ ಒಂದು ಚಿಲುಮೆ ಇದ್ದಂತೆ, ಇದು. ಆದರೆ ನಾವು ಏಕೆ ಮರುಭೂಮಿಯಲ್ಲಿರಬೇಕು. ಇಂಥ ಶಾಲೆಯಲ್ಲಿ ನೂರಾರು ಜನ ಹರಿಜನ ವಿದ್ಯಾರ್ಥಿಗಳಿರಬಾರದೆ? ಈಗ ತಾನೆ ಒಂದು ಹರಿಜನ ಮನೆಯನ್ನು ನೋಡಿ ಬಂದೆ. ಬಲು ಸೊಗಸಾಗಿದೆ. ವಿಶಾಲವಾದ ಕೊಠಡಿಗಳು, ಚೊಕ್ಕಟ, ಧೂಳು ಇಲ್ಲ. ಅದು ಒಬ್ಬ ರಾಜಕುಮಾರನ ಮನೆ ಆಗಬಹುದು. ಮನೆಯ ಯಜಮಾನತಿಯೂ ಕೂಡ ಬುದ್ಧಿವತಿ, ಸಮರ್ಥೆ. ನಾನು ಕೇಳಿದ ಪ್ರಶ್ನೆಗಳಿಗೆ ಚೆನ್ನಾಗಿ ಉತ್ತರ ಕೊಟ್ಟಳು. ಹರಿಜನ ಹುಡುಗರು ಬುದ್ಧಿಯಲ್ಲಿಯೂ ಸಾಮರ್ಥ್ಯದಲ್ಲಿಯೂ ಕೀಳು ಅಲ್ಲ. ಅವರಿಗೆ ಎಂದೂ ಅವಕಾಶ ಸಿಕ್ಕಿಲ್ಲ. ಅವರನ್ನು ತುಳಿದಿದ್ದೇವೆ. ಅವರು Depressed, ಅಲ್ಲ Suppressed ಎಂದು ವಿವೇಕಾನಂದರು ಹೇಳಿದುದು ಸರಿ. ನಿಮ್ಮ ಉಪಾಧ್ಯಾಯರಿಗೆ ಹರಿಜನ ಸೇವೆಯಲ್ಲಿ ಆಸಕ್ತಿ ಇದೆ. ಆಗಲೇ ಕಾಲ ಮೀರಿ ಹೋದ ಈ ಋಣವನ್ನು ತೀರಿಸಬೇಕು ಎಂಬ ಆಶೆ ಇದೆ. ನೀವೆಲ್ಲರೂ ಹರಿಜನ ಕೇರಿಗಳಿಗೆ ಹೋಗಿ. ಅಲ್ಲಿರುವ ಮಕ್ಕಳನ್ನು ಶಾಲೆಗೆ ಕರೆದುಕೊಂಡು ಬನ್ನಿ. ನೀವು ಮನಸ್ಸು ಮಾಡಿದರೆ ವಿದ್ಯಾರ್ಥಿಗಳು ಇಡೀ ಪರಿಸ್ಥಿತಿಯನ್ನೇ ಬದಲಾಯಿಸಬಲ್ಲಿರಿ. ನಿಮಗೆ ಆ ಸೇವೆ ಒಂದು ಆಟ ಇದ್ದ ಹಾಗೆ. ನಿಮ್ಮ ಬುದ್ಧಿಯು ಬೆಳಗಿ, ನಿಮ್ಮಲ್ಲಿ ಸೇವಾ ಭಾವನೆ ಮೂಡುತ್ತದೆ.'

**ಮಂಗಳೂರಿನಿಂದ ಮುಲ್ಕಿಗೆ :**

ಮಂಗಳೂರಿನಿಂದ ಕುಂದಾಪುರದವರೆಗೂ ದಾರಿ ಉದ್ದಕ್ಕೂ ಜನರು ಗಾಂಧೀಜಿಯ ದರ್ಶನಾಕಾಂಕ್ಷಿಗಳಾಗಿ ನಿಂತಿದ್ದರು. ದಾರಿಯಲ್ಲಿ ಕೊಲಿಮಾರಿನ ಜನ ಗಾಂಧೀಜಿಯವರನ್ನು

ತಮ್ಮೂರಿಗೆ ಕರೆದೊಯ್ಯಬೇಕೆಂದು ಅವರ ಮೋಟಾರಿನ ಮುಂದೆ ಅಡ್ಡ ಬಿದ್ದು, ಅದನ್ನು ನಿಲ್ಲಿಸಿದರು. ಅವರಿಗಿಂತ ಗಾಂಧೀಜಿ ಗಟ್ಟಿ. ಗಾಂಧೀಜಿ ಕೂಡಲೆ ಗಾಡಿಯಿಂದ ಇಳಿದರು. ನಡದೇ ಹೊರಟರು. ಆಗ ಮುಖಂಡರು ಜನರಿಗೆ ತಿಳಿಸಿ ಹೇಳಿ, ಎಲ್ಲರನ್ನೂ ಮನೆಗೆ ಕಳಿಸಿದರು.

ಸಿದ್ಧಾಪುರದ ಜನ ಗಾಂಧೀಜಿಯನ್ನು ಬಿಳಗಿಪೇಟಾಕ್ಕೆ ಬರಬೇಕೆಂದು ಕೇಳಿಕೊಳ್ಳಲು ಕುಂದಾಪುರದವರೆಗೆ ಬಂದಿದ್ದರು. ಆದರೆ ಗಾಂಧೀಜಿ ಬರಲು ಸಾಧ್ಯವಿಲ್ಲ ಎಂದು ಹೇಳಿ ವಿಷಾದವನ್ನು ವ್ಯಕ್ತಪಡಿಸಿದರು. ದಾರಿಯಲ್ಲಿ ಗುರುಪುರ, ಬಾಜಿಪೆ, ಯಕ್ಕರ್, ಕಟೀಲ, ಕಿನ್ನಿಗೋಳಗಳಲ್ಲಿ ೫೦ ರೂಪಾಯಿಗಳ ಒಂದು ನಿಧಿಯನ್ನು ಅರ್ಪಿಸಿದರು. ಮುಲ್ಕಿಯಲ್ಲಿ ಒಂದು ಬಿನ್ನವತ್ತಳೆ, ನಿಧಿ ಸಮರ್ಪಣೆ ಆಯಿತು. ಆ ಬಿನ್ನವತ್ತಳೆಯ ಕೊನೆಯ ವಾಕ್ಯವನ್ನು ಕೇಳಿ ಗಾಂಧೀಜಿ ಹೀಗೆ ಹೇಳಿದರು :

'ಹರಿಜನ ಶಕ್ತಿಯಿಂದ ಹಿಂದೂ ಸಮಾಜಕ್ಕೆ ಬಲ ಸಿಗಲಿ ಎಂದು ನಿಮ್ಮ ಬಿನ್ನವತ್ತಳೆಯಲ್ಲಿ ದೇವರನ್ನು ಪ್ರಾರ್ಥಿಸಿದ್ದೀರಿ. ಹೀಗೆಂದರೆ ಹರಿಜನರಿಗೆ ನ್ಯಾಯ ದೊರತದ್ದೇ ಆದರೆ ಹಿಂದೂ ಧರ್ಮ ಪರಿಶುದ್ಧವಾಗುವುದು ಮತ್ತು ನೈತಿಕ ಉನ್ನತಿ ಪಡೆಯುವುದು ಎಂದು ನಿಮಗೆ ಅರ್ಥವಾದರೆ ನಾನೂ ನಿಮ್ಮ ಪ್ರಾರ್ಥನೆಗೆ ದನಿಗೂಡಿಸುತ್ತೇನೆ. ಆದರೆ ಈಗಾಗಲೇ ದುರ್ಬಲವಾಗಿರುವ ಸವರ್ಣ ಹಿಂದೂಗಳಿಗೆ ಹರಿಜನರ ದೆಶೆಯಿಂದ ಭೌತಿಕ ಶಕ್ತಿ ಸಿಗುತ್ತದೆ ಎಂದು ಆದರೆ ನಿಮ್ಮ ಪ್ರಾರ್ಥನೆಯಲ್ಲಿ ನಾನು ಸೇರಲಾರೆ. ಭೌತಿಕ ಬಲದ ಮೇಲೆ ಕಟ್ಟಿದ ಯಾವ ಚಳವಳಿಗೂ ನಾನು ಸೇರಲಾರೆ. ಭೌತಿಕ ಅಥವಾ ಪಾಶವಿಕ ಬಲದಿಂದ ಯಾವ ಧರ್ಮವೂ ಸ್ಥಿರವಾಗಿ ಆಗಿರಲಾರದು ಇದಕ್ಕೆ ವಿರುದ್ಧವಾದ ಮಾತನ್ನು ಹೇಳುತ್ತೇನೆ ಕೇಳಿ. ಯಾರು ಕತ್ತಿಯನ್ನು ಹಿಡಿಯುತ್ತಾರೋ ಅವರಿಗೆ ಕತ್ತಿಯಿಂದಲೇ ಸಾವು ಬರುತ್ತದೆ. ಧರ್ಮ ಎಂದರೆ ಒಂದು ಮಹಾವೃಕ್ಷ. ಅದರ ಜೀವರಸ ಆ ಧರ್ಮದ ಜನರಿಗೆ ನೀತಿ. ಆದ್ದರಿಂದಲೇ ಈ ಚಳವಳೀ ಆತ್ಮಶುದ್ಧಿಯ ಚಳವಳಿ. ಪಶ್ಚಾತ್ತಾಪದ ಚಳವಳಿ ಎಂದು ಹಗಲೆಲ್ಲ ಹೇಳುತ್ತಿರುತ್ತೇನೆ. ಹರಿಜನರ ಬಲ ಉಪಯೋಗಿಸುವ ಕಲ್ಪನೆ ನಮ್ಮಲ್ಲಿ ಸುಳಿದರೆ ನಮ್ಮ ಅವಸ್ಥೆ ಮುಗಿದಂತೆಯೇ.

ಮುಲ್ಕಿಯಲ್ಲಿ ಗಾಂಧೀಜಿ ಮತ್ತೆ ತೆರಿಗೆಯಿಲ್ಲದ ಉಪ್ಪಿನ ಪ್ರಸ್ತಾಪ ಮಾಡಿದರು. ಅದಕ್ಕೆ ಹೊರಗಿನ ಪರಿಸ್ಥಿತಿಗಳು ಅನುಕೂಲ ಆಗಬೇಕು ಎಂದರು. ಪಾನ ನಿರೋಧದ ಬಗ್ಗೆ ಮಾತನಾಡುತ್ತ ಹೇಳಿದರು :

'ಮನುಷ್ಯನ ಆತ್ಮವನ್ನು ಕುಡಿತದ ಚಟ ಹಾಳುಮಾಡುತ್ತದೆ. ಮನುಷ್ಯ ಮೃಗ ಅಥವಾ ಪಶು ಆಗುತ್ತಾನೆ. ಹೆಂಡತಿ ಯಾರೋ, ತಂಗಿ ಯಾರೋ, ತಾಯಿ ಯಾರೋ ಅವನು ತಿಳಿಯಲಾರ. ಕುಡಿತ ಅಮಲು ಏರಿದಾಗ ಈ ಭೇದವನ್ನು ಮರೆತು ನಡೆದವರನ್ನು ನಾನು ನೋಡಿದ್ದೇನೆ. ಹಡಗಿನ ಕಪ್ತಾನರು ಮೂಗಿನವರೆಗೆ ಕುಡಿದು ತಮ್ಮ ಹಡಗನ್ನು ನಿಯಂತ್ರಿಸಲಾರದೇ ಹೋದವರನ್ನೂ ನೋಡಿದ್ದೇನೆ.'

ಊಟ ಆದ ಮೇಲೆ ಕೆಲಸಗಾರರ ಸಭೆ ಒಂದು ನಡೆಯಿತು. ಆಮೇಲೆ ಮುಲ್ಕಿಯಿಂದ ಗಾಂಧೀಜಿ ಉಡುಪಿಗೆ ಹೋದರು. ದಾರಿಯಲ್ಲಿ ನೇತ್ರಾವತಿಯನ್ನು ದಾಟಬೇಕಾಯಿತು. ಮಾರ್ಗ ಮಧ್ಯೆ ಮೂಡಲಬಿದ್ರಿಯಲ್ಲಿಯೂ, ಕಾಟಪಾಡಿಯಲ್ಲಿಯೂ ನಿಧಿಗಳನ್ನು ಸಮರ್ಪಿಸಿದರು.

**ಉಡುಪಿಯಲ್ಲಿ :**

ಉಡುಪಿ ಪ್ರಸಿದ್ಧ ಕ್ಷೇತ್ರ. ಕನಕದಾಸರಿಗೆ ಕೃಷ್ಣಮಂದಿರದಲ್ಲಿ ಪ್ರವೇಶ ಸಿಗಲಿಲ್ಲ. ಆದ್ದರಿಂದ ದೇವರು ಪೂಜಾರಿಗಳ ಮುಖವನ್ನು ನೋಡದೆ ಕನಕದಾಸರ ಕಡೆಗೆ ತಿರುಗಿದ. ಆ ಪವಾಡದ ನೆನಪಿಗಾಗಿ 'ಕನಕನ ಕಿಂಡಿ' ಎಂಬ ಕಿಟಕಿ ಒಂದು ಇದೆ.

ಈ ಸ್ಥಳಕ್ಕೆ ಗಾಂಧೀಜಿ ಬಂದ ಕೂಡಲೆ ಮಾಜಿ ಶಾಸನ ಸಭಾ ಸದಸ್ಯ ಖಾನ್ ಬಹುದ್ದೂರ ಅಬ್ದುಲ್ ಸಾಹೇಬರು ಬಂದು ಸ್ವಾಗತಿಸಿದರು. ಗಾಂಧೀಜಿ ಜೊತೆಯಲ್ಲೇ ನಡೆದರು. ಮೊದಲು ಸಾಹೇಬರು ಕಛ್‌ದವರು. ಆದರೆ ಇಲ್ಲಿ ಅನೇಕ ವರ್ಷಗಳಿಂದ ನೆಲೆಸಿದ್ದಾರೆ. ಗಾಂಧೀಜಿ ಇಲ್ಲಿ ಒಂದು ಖಾದಿ ಭಂಡಾರವನ್ನು ಪ್ರಾರಂಭಿಸಿದರು. ಒಂದು ಸಾರ್ವಜನಿಕ ಸಭೆ ನಡೆಯಿತು. ಅಲ್ಲಿ ನಿಧಿ ೧೨೪೦ ರೂಪಾಯಿಗಳ ಸಮರ್ಪಣೆ. ಗಾಂಧೀಜಿ ತಮ್ಮ ಭಾಷಣದಲ್ಲಿ ಉಡುಪಿಯ ದೇವಸ್ಥಾನದಲ್ಲಿ ಹರಿಜನರಿಗೆ ಅವಕಾಶ ವಾಗುವಂತೆ ಪ್ರಜಾಭಿಪ್ರಾಯವನ್ನು ರೂಪಿಸಲು ನಾಗರಿಕರಿಗೆ ಹೇಳಿದರು. ಬಹಳ ಸೌಮ್ಯ ಮಾರ್ಗದಿಂದಲೇ ಇಂಥ ಅಭಿಪ್ರಾಯ ಸೃಷ್ಟಿ ಸಾಧ್ಯ. ಇದು ಆತ್ಮಶುದ್ಧಿಯ ಚಳವಳಿ. ಸವರ್ಣ ಹಿಂದೂಗಳು ಬಹುಸಂಖ್ಯೆಯಲ್ಲಿ ಈ ಅಭಿಪ್ರಾಯ ಪಟ್ಟರೇನೇ ದೇವಾಲಯ ಪ್ರವೇಶ ಒಳ್ಳೆಯದು. ಹರಿಜನ ಸೇವೆಯ ಬಗ್ಗೆ ಕರ್ನಾಟಕದಲ್ಲಿ ಉಡುಪಿ ಒಂದು ಮೇಲ್ಪಂಕ್ತಿ ಆಗಲಿ ಎಂದರು.

**ನಿರುಪಮ :**

ಉಡುಪಿಯ ಹಿಂದೀ ಪ್ರೇಮಿ ಮಂಡಲಿಯವರು ಬಿನ್ನವತ್ತಳೆಯನ್ನು ಅರ್ಪಿಸಿದರು. ನಿರುಪಮ ಎಂಬ ಚಿಕ್ಕ ಹುಡುಗಿ ಅದನ್ನು ಓದಿದಳು. ಗಾಂಧೀಜಿ ಎಂದಿನಂತೆ ಅವಳನ್ನು ಒಡವೆ ಕೇಳಿದರು. ಆ ಹುಡುಗಿ ಅದಕ್ಕೆ ಪ್ರಸಿದ್ಧವಾಗಿದ್ದಂತೆ ಇತ್ತು. ತನ್ನ ಕೈಯೊಳಗಿನ ಬಳೆ, ಕತ್ತಿನಲ್ಲಿಯ ಸರಗಳನ್ನು ತೆಗೆದು ಗಾಂಧೀಜಿಗೆ ಕೊಟ್ಟಳು. ಅವಳ ಮುಖದಲ್ಲಿ ಸ್ವಲ್ಪ ದುಃಖದ ಚಿಹ್ನೆ ಇತ್ತು. ಅದನ್ನು ನೋಡಿ, ಗಾಂಧೀಜಿ ಒಡವೆಗಳನ್ನು ಹಿಂದಕ್ಕೆ ಕೊಟ್ಟುಬಿಟ್ಟರು. ಆದರೆ ಗಾಂಧೀಜಿ ತಂಗಿದ್ದ ಸ್ಥಳಕ್ಕೆ ನಿರುಪಮ ಬಂದರು. ಗಾಂಧೀಜಿ ಕಣ್ಣೆಟ್ಟ ಆ ಒಡವೆಗಳನ್ನು ಅವರಿಗೆ ಅರ್ಪಿಸಿದರು. ಅವಳ ತಂದೆ ತಾಯಿ ತಮ್ಮ ಮಗಳಿಗೆ ಸರಳತೆ ಅಭ್ಯಾಸವಾಗಬೇಕು. ಅವಳು ಒಡವೆಗಳನ್ನು ಕೈಬಿಡಬೇಕು ಎಂಬ ಬಯಕೆ. ಹೀಗಾಗಿ ಅವಳನ್ನು ಈ ತ್ಯಾಗಕ್ಕೆ ಸಿದ್ಧಮಾಡಿದರು. ಕೊನೆ ಗಳಿಗೆಯಲ್ಲಿ ಅವಳು ಸ್ವಲ್ಪ ಹಿಂತೆಗೆದಳು. ಈ ತ್ಯಾಗ ಜೀವನಕ್ಕೆ ಬೇಕೆನಿಸಿದ್ದರೂ, ಇಂದ್ರಿಯಗಳಿಗೆ ಬೇಡವಾಗಿತ್ತು. ಆದರೆ ಆ ತಂದೆ ತಾಯಿ ನಿರ್ಧಾರ ಮಾಡಿದ್ದರು. ಮಗಳನ್ನು ಸಂತೋಷದಿಂದ

ಒಡವೆಗಳನ್ನು ಕೊಡುವಂತೆ ಒಪ್ಪಿಸಿದ್ದರು. ಅವಳೂ ಸಂತೋಷದಿಂದ ಕೊಟ್ಟ ಹಾಗೆಯೇ ಇತ್ತು. ಗಾಂಧೀಜಿ ಹಲವು ಸಲ ಒಡವೆಗಳನ್ನು ಹಿಂದಕ್ಕೆ ಕೊಡಲು ನೋಡಿದರು. ಅವಳು ತೆಗೆದುಕೊಳ್ಳಲಿಲ್ಲ. ಎರಡು ದಿನ ಸದಾ ಗಾಂಧೀಜಿ ಜೊತೆಯಲ್ಲೇ ಇದ್ದಳು.

ನಮಗೆ ಒಂದು ಮಾತು ಹೇಳಿ ಎಂದು ಸ್ವಯಂ ಸೇವಕರು ಗಾಂಧೀಜಿಯನ್ನು ಕೇಳಿಕೊಂಡರು. 'ಬಂದದ್ದೆಲ್ಲ ಬರಲಿ, ಸತ್ಯವನ್ನು ಬಿಡಬೇಡಿ, ಎಂದು ಗಾಂಧೀಜಿ ಹೇಳಿದರು.

ಕುಂದಾಪುರಕ್ಕೂ ಉಡುಪಿಗೂ ನಡುವೆ ಬ್ರಹ್ಮಾವರ. ಅಲ್ಲಿಯೂ ಗಾಂಧೀಜಿ ತಮ್ಮ ಪಲ್ಲವಿಯನ್ನೇ ಹಾಡಿದರು. ಹಿಂದೂ ಧರ್ಮದಿಂದ ಅಸ್ಪೃಶ್ಯತೆಯನ್ನು ತೊಡೆದು ಹಾಕದಿದ್ದರೆ ಧರ್ಮನಾಶ ಆಗುತ್ತದೆ ಎಂದರು.

**ಕುಂದಾಪುರದಲ್ಲಿ:**

ಕುಂದಾಪುರದ ಸಾರ್ವಜನಿಕ ಸಭೆಯಲ್ಲಿ ಖಿಲಾಫತ್ ಸ್ವಯಂ ಸೇವಕರೂ ಇದ್ದರು. ಗಾಂಧೀಜಿ ಹೇಳಿದರು.

'ನಮ್ಮ ಸಭೆಯ ಅಧ್ಯಕ್ಷರು ೮೦ ವರ್ಷದ ಮುದುಕರು. ಇದು ಶುಭಶಕುನ. ಸುಧಾರಣೆ ಅಗತ್ಯ ಎಂದು ತಿಳಿಯುವದರಲ್ಲಿ ಮುದುಕರೂ ಹಿಂದೆಬಿದ್ದಿಲ್ಲ. ಹರಿಜನರ ಬಗ್ಗೆ ನಾವು ತೋರುವ ಅಸ್ಪೃಶ್ಯತೆಯನ್ನು ಆಮೂಲಾಗ್ರವಾಗಿ ಕಿತ್ತು ಹಾಕಬೇಕು. ಇದು ಬಹಳ ಸುಲಭ. ಅಸ್ಪೃಶ್ಯತೆಗೆ ಸಾವಿರ ತಲೆ. ನಮ್ಮ ಸಮಾಜದ ಎಲ್ಲ ರಂಗಗಳಲ್ಲಿಯೂ ಅದು ತಲೆಯಾಡಿಸಿದೆ. ಅದರಿಂದ ನಾವೆಲ್ಲರೂ ಪರಸ್ಪರ ಅಸ್ಪೃಶ್ಯರಾಗಿದ್ದೇವೆ. ಒಂದು ಜಾತಿ, ಒಂದು ಗುಂಪು ಇನ್ನೊಂದಕ್ಕೆ ಅಸ್ಪೃಶ್ಯ. ಹೀಗಾಗಿ ಯಾವ ಗುಂಪೂ ತಮ್ಮನ್ನು ಇತರರಿಗಿಂತ ಮೇಲೆ ಎಂದು ತಿಳಿದುಕೊಳ್ಳಲೇ ಇಲ್ಲ. ಜಾತಿಗಳೂ ಅಷ್ಟೇ. ಇದಕ್ಕೆ ಇನ್ನೂ ಹಲವಾರು ಕಾರಣ ಇರಬಹುದು. ಆದರೆ ಈ ಉಚ್ಚ ನೀಚ ಭಾವನೆಯೇ ಎಲ್ಲ ಕೋಮುವಾದ ಗಲಭೆಗಳಿಗೂ ಕಾರಣ. ಮಾನವ ಮಾನವರಲ್ಲಿ ಭ್ರಾತೃತ್ವವನ್ನು ಬೆಳೆಸಬೇಕೆಂಬುದೇ ಈ ಚಳವಳಿಯ ಉದ್ದೇಶ. ಅಸ್ಪೃಶ್ಯತೆಗೆ ದೈವೀ ಆಧಾರ ಇದೆ ಎಂದು ನಾವು ನಂಬುವತನಕ ಈ ಭ್ರಾತೃತ್ವ ಸಾಧ್ಯವಿಲ್ಲ. ಆದ್ದರಿಂದ ಸವರ್ಣ ಹಿಂದೂಗಳು ಈಗ ಆರಿಸಿಕೊಳ್ಳಬೇಕು. ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ಕತ್ತರಿಸಿ ಹಾಕಿದರೆ ಅವರು ಬದುಕಬಲ್ಲರು. ಆದ್ದರಿಂದಲೇ ಈ ಚಳವಳಿಯನ್ನು ಆತ್ಮ ಶುದ್ಧಿಯ ಚಳವಳಿ, ಪಶ್ಚಾತ್ತಾಪದ ಚಳವಳಿ, ಋಣವಿಮೋಚನೆ ಚಳವಳಿ ಎಂದಿದ್ದೇನೆ. ಶತಮಾನಗಳಿಂದ ಅವರನ್ನು ತುಳಿದು, ನಮಗೆ ಅವನತಿ ಒದಗಿದೆ. ಅಸ್ಪೃಶ್ಯತೆಯನ್ನು ನಮ್ಮ ಹೃದಯಗಳಿಂದ ಕಿತ್ತು ಹಾಕೋಣ.'

**ಹಿಂದೀ :**

ಹಲವಾರು ಸ್ಥಳಗಳಲ್ಲಿ ಹಿಂದೀ ಪ್ರೇಮಿಗಳು ಹಿಂದಿಯಲ್ಲಿಯೇ ಬಿನ್ನವತ್ತಳೆಗಳನ್ನು ಕೊಟ್ಟರು. ಆದರೆ ಹಿಂದೀ ಪ್ರೇಮಿಗಳಿಗೆ ಸಾಕಷ್ಟು ಭಾಷಾಜ್ಞಾನ ಇದ್ದಂತೆ ಗಾಂಧೀಜಿಗೆ

ಕಂಡುಬರಲಿಲ್ಲ. ಅನೇಕ ವೇಳೆ ಹಿಂದಿಯಿಂದ ಕನ್ನಡಕ್ಕೆ ಭಾಷಾಂತರಿಸುವವರು ಸಿಕ್ಕರೂ ಕೂಡ ಸಾಧಾರಣವಾಗಿ ಇಂಗ್ಲಿಷರು ಇಂಗ್ಲಿಷು ಇಂಗ್ಲೀಷು ಎಂದು ಜನ ಕೂಗಾಡುತ್ತಾರೆ. ಆದ್ದರಿಂದ ನಿರುಪಮ ಓದಿದ ಹಿಂದೀ ಬಿನ್ನವತ್ತಳಿಗೆ ಉತ್ತರ ಕೊಡುತ್ತ ಅಲ್ಲಿ ಒಂದು ಹಿಂದೀ ತರಗತಿ ಇದ್ದದ್ದು ತಮಗೆ ಸಂತೋಷ. ಆದರೆ ೨೦ ಕೋಟಿ ಜನ ಮಾತನಾಡುವ ಈ ಅತ್ಯಂತ ಸುಲಭ ಭಾಷೆಯನ್ನು ಎಲ್ಲರೂ ಚೆನ್ನಾಗಿ ಕಲಿಯಬೇಕು. ಅಲ್ಲಿಯವರೆಗೆ ಸುಮ್ಮನಿರಲಾಗದು ಎಂದರು.

ಕುಂದಾಪುರದಲ್ಲಿ ಗಾಂಧೀಜಿಯ ಮೌನದ ದಿನ ಬಂತು ೨೬ ಸೋಮವಾರ. ಅವತ್ತು ಕುಂದಾಪುರದಲ್ಲಿಯೇ ಇದ್ದುಬಿಟ್ಟರು. ಮಾರನೆಯ ದಿನ ದಯಾವತಿ ಎಂಬ ಹಡಗಿನಲ್ಲಿ ಪ್ರಯಾಣ ಮಾಡಿ ಸಂಜೆಯ ವೇಳೆಗೆ ಕಾರವಾರ ತಲುಪಿದರು. ದಾರಿಯಲ್ಲಿ ಹಡಗು ನಿಂತಲ್ಲೆಲ್ಲ ಗಾಂಧೀಜಿಗೆ ಜನ ಹಣ, ಹಣ್ಣು, ಕೊಟ್ಟರು.

**ಕಾರವಾರ:**

ತಮ್ಮ 'ಜೀವನ ಸ್ಮೃತಿ'ಯಲ್ಲಿ ಗುರುದೇವ ಟಾಗೂರರು ಕಾರವಾರವನ್ನು ಹೇಗೆ ಅಮರಗೊಳಿಸಿದ್ದಾರೆ.

'ಸುತ್ತಲೂ ಗುಡ್ಡ ಈ ಬಂದರಿಗೆ. ಎಷ್ಟು ಏಕಾಂತ ಎಂದರೆ ಇದನ್ನು ಬಂದರು ಎನ್ನುವುದಕ್ಕೆ ಬರುವುದಿಲ್ಲ. ಇದರ ದಡ ಅರ್ಧ ಚಂದ್ರಾಕಾರದ್ದು. ಈ ದಡದ ಎರಡೂ ತೋಳು ತೀರಗಾಣದ ಸಮುದ್ರವನ್ನು ಬಾಚಿ ತಬ್ಬಿಕೊಳ್ಳುವಂತೆ ಇದೆ. ಅನಂತವನ್ನು ತಬ್ಬಿಕೊಳ್ಳಲು ಪ್ರಯತ್ನದ ಪ್ರತೀಕದಂತೆ ಕಾಣಬರುತ್ತದೆ. ಪ್ರಕೃತಿ ಸೌಂದರ್ಯ ಬರೀ ಭಾವನೆಯ ಬಿಸಿಲುಗುದುರೆ ಅಲ್ಲ, ಅನಂತರ ಆನಂದವನ್ನು ಬಿಂಬಿಸುವ ಸಾಧನ; ಅದರಲ್ಲಿ ತಲ್ಲೀನರಾಗಲು ನಮ್ಮನ್ನು ಸೆಳೆಯುತ್ತದೆ.'

ಬೆಳುದಿಂಗಳ ಮೂಲಕ ಕಾರವಾರದ ಬಂದರದ ಶೋಭೆ ಮತ್ತಿಷ್ಟು ಹೆಚ್ಚಿತ್ತು. ಗಾಂಧೀಜಿಯನ್ನು ಸ್ವಾಗತಿಸಲು ಬಂದ ಜನರ ಸಂಭ್ರಮವು ಅಷ್ಟು ಇಷ್ಟು ಎಂದು ಹೇಳಲು ಸಾಧ್ಯವಿಲ್ಲ. ಶ್ರೀ ಹಳದೀಪುರಕರ, ಶ್ರೀ ನಾಡಕರ್ಣಿ, ಶ್ರೀ ಮುಜುಂದಾರ ಇವರು ಹಡಗಿಗೆ ಹೋಗಿ ಗಾಂಧೀಜಿಯನ್ನು ಸ್ವಾಗತಿಸಿದರು. ಅವರ ಜೊತೆಯಲ್ಲಿ ಸರ್ವಶ್ರೀ ದೇಶಪಾಂಡೆ ಗಂಗಾಧರರಾಯರೂ, ಪಾಟೀಲ ಪೀರಣ್ಣಗೌಡರೂ, ಹುಕ್ಕೇರಿಕರ್ ರಾಮರಾಯರೂ ಬಂದಿದ್ದರು. ಬೆಳಗ್ಗೆ ಮೀರಾಬೆನ್ ಪ್ರಾರ್ಥನೆಯನ್ನು ನಡೆಸಿದರು. ಗಾಂಧೀಜಿ ಭಗವದ್ಗೀತೆಯ ೧೬-೧೭ನೇ ಅಧ್ಯಾಯಗಳನ್ನು ಪಠಿಸಿದರು.

**ಪ್ರಾಯಶ್ಚಿತ್ತ:**

೨೮ನೇ ಫೆಬ್ರವರಿ, ೧೯೩೪ ಬೆಳಿಗ್ಗೆ ಗಾಂಧೀಜಿ ಕಾರವಾರದ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. ಗಾಂಧೀಜಿಗೆ ಅರ್ಪಿಸಿದ ಹೂವಿನ ಹಾರವನ್ನು ಹರಾಜು ಮಾಡಿದರು. ಬೇಕಾದಷ್ಟು ಹಣ ಸುರಿಯಿತು.......

'ಹರಿಜನ ನಿಧಿಗೆ ಎಷ್ಟು ಕೊಟ್ಟರೂ ಸಾಲದು. ಇದು ಪಾಪದ ಪ್ರಾಯಶ್ಚಿತ್ತ. ಪ್ರಾಯಶ್ಚಿತ್ತಕ್ಕಾಗಿ ಕೊಡುವವನಿಗೆ ಕೊಟ್ಟಷ್ಟು ಲಾಭ, ಕೊಡದವನಿಗೆ ನಷ್ಟ, ಒಬ್ಬ ಪಾಪಿ ಸದಾ ಪಶ್ಚಾತ್ತಾಪದ ದಗ್ಧ. ಪ್ರಪಂಚದ ಇಡೀ ಐಶ್ವರ್ಯವನ್ನೇ ಕೊಟ್ಟರೂ ಅವನಿಗೆ ಸಂತೋಷವಾಗದು. ಅಸ್ಪೃಶ್ಯತೆ ಮೂಲಭೂತ ಪಾಪ ಎಂಬುದನ್ನು ತಿಳಿಸಿ ಹೇಳುವ ಕಾಲ ಹೊರಟು ಹೋಯಿತು. ಇದರಿಂದ ಹಿಂದೂ ಧರ್ಮಕ್ಕೆ ನಾಶ ಕಾದಿದೆ. ಧರ್ಮ ಹೇಗೆ ನಾಶವಾಗಬಲ್ಲದು? ಎಂದು ಯಾರಾದರೂ ಕೇಳಬಹುದು. ನಿಜ. ಧರ್ಮಕ್ಕೆ ನಾಶವಿಲ್ಲ. ಆದರೆ ಅಧರ್ಮ ಧರ್ಮದ ವೇಷ ಹಾಕಿದಾಗ ಆ ಸೋಗಿನ ಧರ್ಮ ಸತ್ತೇ ಸಾಯುತ್ತದೆ. ಆದ್ದರಿಂದ ಹಿಂದೂ ಧರ್ಮದಲ್ಲಿ ಬಂದು ಸೇರಿಕೊಂಡ ಈ ಕಳಂಕ ತೊಳೆದು ಹೋಗಲಿ ಹಿಂದೂ ಧರ್ಮ ಈ ವಿಪತ್ತಿನಿಂದ ಉಳಿಯಲಿ' ಎಂದು ಹೇಳಿದರು. ಈ ಪಾಪ ವಿಮೋಚನೆ ಬಲಾತ್ಕಾರದಿಂದ ಎಂದೂ ಸಾಧ್ಯವಿಲ್ಲ. ಆತ್ಮಶುದ್ಧಿಯಿಂದಲೇ ಆಗಬೇಕು.

**ಸಾಂಕೇತಿಕ ನಿಧಿ:**

ಕಾರವಾರದಿಂದ ಗಾಂಧೀಜಿ ಅಂಕೋಲೆಗೆ ಹೋದರು. ೯ ಗಂಟೆಯ ವೇಳೆಗೆ ಅಲ್ಲಿಗೆ ಬಂದರು. ದಾರಿಯಲ್ಲಿ ಬಿನಗೆ, ಚಂದಿಯಾಗಳಲ್ಲಿ ನಿಧಿಗಳನ್ನು ಕೊಟ್ಟರು. ಅಂಕೋಲೆಯಲ್ಲಿ ಮಾತನಾಡುತ್ತ ತಮಗೆ ಹಣ ಅಷ್ಟು ಅಗತ್ಯ ಅಲ್ಲ. ಹೃದಯ ಪರಿವರ್ತನೆ, ರಚನಾತ್ಮಕ ಕಾರ್ಯ ಬೇಕು ಎಂದು ಹೇಳಿದರು. ಯಾರಾದರೂ ಒಬ್ಬ ಕೋಟಿ ಪತಿಯೂ ತನಗೆ ಒಂದು ಕೋಟಿ ರೂಪಾಯಿ ದಾನ ನೀಡಿದರೂ ಅದರಿಂದ ಅಸ್ಪೃಶ್ಯತೆಯ ನಿವಾರಣೆ ಸಾಧ್ಯವಿಲ್ಲ. ಅದೇ ಒಂದು ಕೋಟಿ ಸವರ್ಣ ಹಿಂದೂ ಜನ ಅಸ್ಪೃಶ್ಯತೆಯನ್ನು ತೊಡೆದು ಹಾಕಿದ್ದೇವೆ ಎಂದು ಹೇಳಿದರೆ ಅಸ್ಪೃಶ್ಯತೆ ಖಂಡಿತ ಉಳಿಯಲಾರದು. ತಮಗೆ ಬಡವರ ಪುಡಿಕಾಸೇ ಬಂದರೂ ಚಿಂತೆ ಇಲ್ಲ. ಆದರೆ ಅದು ಕೊಡುವವರ, ಅಸ್ಪೃಶ್ಯತಾ ನಿರೋಧದ ಮನೋಧರ್ಮದ ಸಂಕೇತವಾಗಿರಬೇಕು. ಸಾರ್ವಜನಿಕ ಸಭೆಗಳಲ್ಲಿ ಮತಗಣನೆ ಮಾಡುವಾಗ, ಸಾಧಾರಣವಾಗಿ ಕೈ ಎತ್ತಿಸುವದು ವಾಡಿಕೆ. ಅದರ ಬದಲಾಗಿ ಅವರ ಮತದ ಪ್ರತೀಕವಾಗಿ ಹಣವನ್ನು ನೀಡಿ. ಎಂದು ಹೇಳುವದು ತಮ್ಮ ಪದ್ಧತಿ. ಸ್ವಯಂ ಸೇವಕರು ಸಭೆಯಲ್ಲಿ ಓಡಾಡಿ ಹಣವನ್ನು ವಸೂಲು ಮಾಡಲಿ ಎಂದರು. ಅವರು ಕೊಟ್ಟ ನಿಧಿಗಿಂತಲೂ ಹೆಚ್ಚು ಆಯಿತು. ಈ ಸಾಂಕೇತಿಕ ಹಣ ಗಾಂಧೀಜಿಯ ಬಿನ್ನಹದ ಪ್ರಭಾವ ಅಂಥದ್ದು.

**ಕುಮಠಾದಲ್ಲಿ :**

ಕುಮಠಾದಲ್ಲಿ ಗಾಂಧೀಜಿಯ ದರ್ಶನಕ್ಕೆ ಸಾವಿರಾರು ಜನ ಹಳ್ಳಿಗಳಿಂದ ಬಂದಿದ್ದರು. ಅಂಕೋಲೆಯಿಂದ ಕುಮಠಾಕ್ಕೆ ಬರುವಾಗ ಸಾವಿರಾರು ಜನ ನಾಡವರು ಬರೀ ಲಂಗೋಟಿ ಧರಿಸಿ, ಕರ್ಪೂರ ಆರತಿಯನ್ನು ಎತ್ತಿ, ತೆಂಗಿನ ಕಾಯಿಯನ್ನು ಒಡೆದರು. ಗಾಂಧೀಜಿ ದೋಣಿಯಲ್ಲಿ ಕುಳಿತು ಸಮುದ್ರದ ಒತ್ತುಗಳನ್ನು ದಾಟುವಾಗ ಜನಸಮುದಾಯ ಮೇರೆದಪ್ಪಿ ಕೂಗುತ್ತಿತ್ತು. ದೇವತೆಗಳಿಗೂ ಅಪೂರ್ವವಾದ ದೃಶ್ಯವದು. ದಾರಿಯಲ್ಲಿ ಮೋಟಾರು

ಹೋಗುವದೇ ಕಷ್ಟ. ಕುಮಠಾದಲ್ಲಿ ಹೆಂಗಸರ ಸಭೆಯಲ್ಲಿ ಗಾಂಧೀಜಿಯ ಭಾಷಣ ವಾಯಿತು. ಮಹಿಳೆಯರು ತಮ್ಮ ಆಭರಣಗಳನ್ನು ನೀಡಿದರು. ನಾಡವರ ಹೆಂಗಸರ ಈ ಅಪೂರ್ವ ಭಕ್ತಿಯನ್ನು ನೋಡಿ, ಗಾಂಧೀಜಿಯ ಹೃದಯ ಉಕ್ಕೇರಿ ಬಂದಿತು.

**ಸಿರಸಿ :**

ಕುಮಠೆಯನ್ನು ಬಿಟ್ಟು ಅಘನಾಶಿನಿಯನ್ನು ದಾಟಿ ಸಂಜೆಯ ವೇಳೆಗೆ ಗಾಂಧೀಜಿ ಸಿರಸಿಗೆ ಬಂದರು. ಅಘನಾಶಿನಿ ಮುಂದೆ ಗೋಕರ್ಣಕ್ಕೆ ಹರಿಯುತ್ತದೆ. ಸಿರಸಿಯಲ್ಲಿ ಮಾತನಾಡುತ್ತ ಆ ಊರಿನ ಹೆಸರು ತಮಗೆ ಅಪರಿಚಿತವಲ್ಲ ಎಂದರು, ಗಾಂಧೀಜಿ. ತಮ್ಮ ಗೆಳೆಯರನೇಕರು ಅಲ್ಲಿದ್ದಾರೆ. ಅವರಿಂದ ಹರಿಜನ ಸೇವೆ ತಾವು ಮಾಡಿಸದಿದ್ದರೆ ಇತರರಿಂದ ಹೇಗೆ ಮಾಡಿಸಬೇಕು. ಕರ್ನಾಟಕದ ಕಾರ್ಯಕ್ರಮ ಏರ್ಪಾಟಾದಾಗ ಅವರಲ್ಲಿ ಸಿರಸಿ ಬಂದೇ ಬರುತ್ತದೆ. ಎಂದು ಅವರಿಗೆ ಗೊತ್ತು. ತಮ್ಮ ಸಂಗಾತಿಗಳು ಹೆಚ್ಚಾಗಿ ಎಲ್ಲಿ ವಾಸವಾಡುತ್ತಿದ್ದರೋ ಅಲ್ಲಿ ಅಸ್ಪೃಶ್ಯತೆ ಹೊರಟು ಹೋಗುತ್ತವೆ ಎಂದು ಅವರ ಅನುಭವ. ಅವರ ಸಂಗಾತಿಗಳಾದರೂ ಯಾರು? ಇಡೀ ಭಾರತದ ಜನರನ್ನು ಮುಸ್ಲಿಂ, ಕ್ರಿಶ್ಚಿಯನ್, ಯಹೂದಿ, ಹಿಂದೂಗಳು ಎಲ್ಲರನ್ನೂ ಒಡಹುಟ್ಟಿದವರೆಂದು ಭಾವಿಸಿ ಭಾರತ ಎಂದರೆ ಪ್ರಾಣಕ್ಕಿಂತ ಹೆಚ್ಚು ಪ್ರಿಯ ಎಂದು ತಿಳಿದು ಯಾವ ದೇಶಕ್ಕೂ ಕೆಡುಕನ್ನು ಬಗೆಯದೆ, ಯಾರನ್ನೂ ಕನಸು ಮನಸ್ಸಿನಲ್ಲಿಯೂ ತಿರಸ್ಕರಿಸದೆ, ಸತ್ಯಕ್ಕಾಗಿ ಪ್ರಾಣವನ್ನೇ ಅರ್ಪಿಸಲು ಸಿದ್ಧರಾದ ಜನರೇ ತಮ್ಮ ಸಂಗಾತಿಗಳು ಎಂದರು. ಅಂಥ ಸಂಗಾತಿಗಳು ಯಾರನ್ನೂ ತಮಗಿಂತ ಕೀಳು ಅಥವಾ ಅಸ್ಪೃಶ್ಯರು ಎಂದು ಭಾವಿಸುವುದಿಲ್ಲ. ಆದ್ದರಿಂದ ಸಿರಸಿಯಲ್ಲಂತೂ ಅಸ್ಪೃಶ್ಯತೆಯನ್ನು ಎತ್ತಿ ಹಿಡಿಯುವ ಜನ ತಮಗೆ ಕಂಡಾರು ಎಂದು ಅವರು ಭಾವಿಸಲಿಲ್ಲ. ಸ್ಥಳೀಯ ಸಂಘಕ್ಕೆ ಸಹಾಯ ನೀಡಿದ್ದಲ್ಲದೆ, ಹರಿಜನ ಹುಡುಗರಿಗೆ ಉಚಿತ ವಿದ್ಯಾರ್ಥಿವೇತನವನ್ನು ಆ ಪೌರಸಭೆ ಕೊಟ್ಟಿದ್ದು ತಮಗೆ ಆಶ್ಚರ್ಯವಲ್ಲ. ಹಾಗೆ ಮಾಡದಿದ್ದರೆ ಆಶ್ಚರ್ಯವಾಗುತ್ತಿತ್ತು. ಪೌರಸಭೆಯ ಬಿನ್ನವತ್ತಳೆಯಲ್ಲಿ, ಇನ್ನೂ ಉಚ್ಚ ನೀಚ ಭಾವನೆಯನ್ನು ಸಂಪೂರ್ಣವಾಗಿ ತೊಲಗಿಸಲು ತಮಗೆ ಸಾಧ್ಯವಾಗಿಲ್ಲ ಎಂದು ಒಪ್ಪಿಕೊಂಡಿದ್ದರು. ಈ ಒಪ್ಪಿಗೆ ಗಾಂಧೀಜಿಗೆ ಬಹಳ ಸಂತೋಷವಾಯಿತು. ಅಪೂರ್ಣತೆಯ ಜ್ಞಾನ, ಪರಿಪೂರ್ಣತೆಯ ಮೊದಲನೆಯ ಮೆಟ್ಟಿಲು. ಈ ಉಚ್ಚ ನೀಚ ಭಾವನೆಯನ್ನು ಅವರು ಕಳೆದುಕೊಂಡಾರೆಂದು ಅವರು ನಂಬಿದ್ದರು. ಈ ಭಾವನೆಯೇ ಅಸ್ಪೃಶ್ಯತೆಗೆ ಮಾತ್ರವಲ್ಲ, ಕೋಮುವಾದ ದ್ವೇಷಕ್ಕೂ ಕಾರಣ. ಅಸ್ಪೃಶ್ಯತಾ ನಿವಾರಣದಿಂದ ವಿಶ್ವಭ್ರಾತೃತ್ವವನ್ನು ಸಾಧಿಸಬಹುದು.

**ಪ್ರಾಣಿ ಬಲಿ :**

ಬಿನ್ನವತ್ತಳೆ ಒಂದರಲ್ಲಿ ಸ್ಥಳೀಯ ಮಾರಿಕಾಂಬಾ ದೇವಸ್ಥಾನದಲ್ಲಿ ಹರಿಜನರಿಗೆ ಪ್ರವೇಶವಿದೆ ಎಂದು ಹೇಳಿತ್ತು. ಆದರೆ ಅಲ್ಲಿ ಪಶುಬಲಿ ಇನ್ನೂ ನಡೆದೇ ಇದೆ ಎಂದು ಅವರಿಗೊಂದು ಪತ್ರ ಬಂದಿತ್ತು. ಎರಡನ್ನೂ ಒಟ್ಟುಗೂಡಿಸಿದರೆ ಹರಿಜನರಿಗೆ ಪ್ರವೇಶ ಅಧಿಕಾರವನ್ನು ಕೊಟ್ಟದ್ದಕ್ಕಾಗಿ ಧರ್ಮದರ್ಶಿಗಳನ್ನು ತಾವು ಅಭಿನಂದಿಸಿದರೂ, ಗುಡಿಯಲ್ಲಿ

ಪಶುಬಲಿ ಕೊಡುತ್ತಾರೆ ಎಂದು ಕೇಳಿ ತಮಗೆ ತುಂಬ ನೋವಾಗಿದೆ ಎಂದರು. ಪ್ರಾಣಿಬಲಿ ಕೊಡುವ ಯಾವ ಸ್ಥಳವೂ ಪವಿತ್ರ ಅಲ್ಲ ಎಂದು ಅವರ ಅಭಿಪ್ರಾಯ. ಬೇರೆ ದೇಶಗಳಲ್ಲಿ ಸಾವಿರಾರು ಜನ ಪ್ರಾಣಿವಧೆ ಮಾಡುತ್ತಾರೆ. ಆದರೆ ದೇವರನ್ನು ತೃಪ್ತಿಪಡಿಸಲು ಮಾಡುವ ಈ ನಾಟಕ ಎಲ್ಲಿಯೂ ಇಲ್ಲ. ದೇವರನ್ನು ಹೀಗೆ ತೃಪ್ತಿ ಪಡಿಸಬಹುದು ಎಂಬ ಮಾತು ಮಾನವ ಬುದ್ಧಿಗೆ ಒಂದು ಅವಮಾನ, ಮಾನವ ಹೃದಯಕ್ಕೆ ಒಂದು ಅತ್ಯಾಚಾರ. ಆತ್ಮಯಜ್ಞದಿಂದ ಸ್ವಾರ್ಥತ್ಯಾಗದಿಂದ ದೇವರನ್ನು ತೃಪ್ತಿ ಪಡಿಸಬೇಕು. ಆದ್ದರಿಂದ ದೇವಸ್ಥಾನದ ಧರ್ಮದರ್ಶಿಗಳು ಬಲವಾದ ಕಾರ್ಯಕ್ರಮ ಕೈಗೊಂಡು, ಈ ದುಷ್ಟ ಪದ್ಧತಿಯನ್ನು ನಿಲ್ಲಿಸಲಿ ಎಂದರು. ಪಶುಬಲಿ ಕೊಡುವ ಯಾವ ದೇವಾಲಯಕ್ಕೂ ಹರಿಜನರನ್ನು ಹೋಗಗೊಡಬಾರದು ಎಂದು ಅಭಿಪ್ರಾಯ ಪಟ್ಟರು.

ಮುಂದೆ ಸಿರ್ಸಿಯಲ್ಲಿ ಸಿರ್ಸಿಯ ಮಾರಿಕಾಂಬಾ ದೇವಸ್ಥಾನದಲ್ಲಿ ಪಶುಬಲಿ ನಿಂತು ಹೋಯಿತು. ಅದಕ್ಕಾಗಿ ಸಿರ್ಸಿಯ ದೇವಾಲಯದ ಧರ್ಮದರ್ಶಿಗಳ ಅಧ್ಯಕ್ಷರಾದ ಶ್ರೀ ಕೇಶವ್ವಾನ ಅವರು ಪ್ರಯತ್ನ ಪಟ್ಟರು. ೧೯೪೨ ಮಾರ್ಚ್ ೨೬ 'ಹರಿಜನ'ದಲ್ಲಿ ಗಾಂಧೀಜಿ ಈ ಬಗ್ಗೆ ಬೆಳಗಾಂವಿಯ ಸುದ್ದಿಗಾರರೊಬ್ಬರು ಕಳಿಸಿದ ಸಮಾಚಾರ ಪ್ರಕಟಿಸಿದರು. ಆ ವಿಷಯ ಹೀಗಿದೆ.

'ಸಿರ್ಸಿಯಲ್ಲಿ ನಡೆಯುವ ಮಾರಿಕಾಂಬಾ ಜಾತ್ರೆ ಬೊಂಬಾಯಿ ಪ್ರಾಂತದಲ್ಲೇ ಬಹಳ ದೊಡ್ಡದು. ಈ ಭಾಗದಲ್ಲಿ ದೇವಾಲಯ ಬಹಳ ಪ್ರಸಿದ್ಧ. ಹೇರಳವಾಗಿ ಆದಾಯ ಇದೆ. ಒಂದು ಹೈಸ್ಕೂಲು, ಒಂದು ಹೆರಿಗೆ ಆಸ್ಪತ್ರೆ ಮುಂತಾದವುಗಳನ್ನು ಈ ಹಣದಿಂದ ನಡೆಸಲು ಸಹಾಯಮಾಡುತ್ತಾರೆ. ನಿಮ್ಮ ಹರಿಜನ ಚಳವಳಿ ಪ್ರಾರಂಭ ಆದಾಗ ಹರಿಜನರಿಗೆ ಪ್ರವೇಶಕ್ಕೆ ಎಡೆ ಮಾಡಿಕೊಟ್ಟ ಮೊಟ್ಟ ಮೊದಲನೆಯ ದೇವಾಲಯ ಇದು. ಇಲ್ಲಿಗೆ ಬಂದಾಗ ನೀವು, ಕೋಣ, ಕುರಿ, ಕೋಳಿಗಳನ್ನು ಕಡಿಯಬಾರದು. ಧರ್ಮದ ಹೆಸರಿನಲ್ಲಿ ಹಾಗೆ ಮಾಡಿದರೆ ಅಂಥ ಗುಡಿಗೆ ಸಹಾಯ ಮಾಡಬಾರದು ಎಂದು ಹೇಳಿದಿರಿ. ನಿಮ್ಮ ಭಾಷಣದಿಂದ ಸಾರ್ವಜನಿಕರು ಪ್ರಭಾವಿತರಾದರು. ಕೆನಾರ ಜಿಲ್ಲೆಯ ಹರಿಜನ ಸೇವಕ ಸಂಘದ ಅಧ್ಯಕ್ಷರು, ದೇವಾಲಯದ ಧರ್ಮದರ್ಶಿಗಳೂ ಆದ ಶ್ರೀ ಎಸ್.ಎನ್.ಕೇಶವ್ವಾನ, ಎಂ.ಎಲ್.ಎ. ಅವರ ಪ್ರಯತ್ನದಿಂದ ಕೋಣದ ಬಲಿ ನಿಂತು ಹೋಗಿತ್ತು. ಈ ಸಲದ ಜಾತ್ರೆಯಲ್ಲಿ ಕುರಿ, ಕೋಳಿಗಳ ಬಲಿಗಳನ್ನೂ ನಿಲ್ಲಿಸಿದರು. ಇದರಿಂದ ೧೦ ಸಾವಿರ ಕುರಿಗಳು, ೧೫ ಸಾವಿರ ಕೋಳಿಗಳ ಪ್ರಾಣ ಉಳಿಯಿತು. ಕೆಲವರು ವಿರೋಧ ಮಾಡಿದರೂ ಲೆಕ್ಕಿಸದೆ, ದಿಟ್ಟತನದಿಂದ ಈ ಕೆಲಸ ಮಾಡಿದ್ದಕ್ಕಾಗಿ ಅವರಿಗೆ ಇಡೀ ಜಿಲ್ಲೆ ಕೃತಜ್ಞವಾಗಿದೆ.'

**ಈ ಸಮಾಚಾರದ ಬಗೆಗೆ ಗಾಂಧೀಜಿ ಬರೆದ ಮಾತಿವು :**

'ಇದು ಶುಭ ಸಮಾಚಾರ. ಅವರ ಮಾನವೀಯ ಗುಣಕ್ಕಾಗಿ, ಶ್ರೀ ಕೇಶವ್ವಾನರು ಅಭಿನಂದನೆಗೆ ಯೋಗ್ಯರು. ಬೇಕಾದವರು ಬೇಕಾದ ಮಾಂಸ ತಿನ್ನಲಿ. ಆದರೆ

ದೇವಸ್ಥಾನದಲ್ಲಿ ಪಶುಬಲಿ ಕೊಡುವುದು ದೇವರಿಗೆ ಅವಮಾನ ಮಾಡಿದಂತೆ. ದೇವರಿಗೆ ಏನು ಬೇಕಿಲ್ಲ. ಒಂದು ವೇಳೆ ಏನಾದರೂ ಬೇಕು ಎಂದರೆ ವಿನಯವಂತ, ಪಶ್ಚಾತ್ತಾಪ ಪೂರ್ಣ ಹೃದಯದಿಂದ ಮಾಡಿದ ಸ್ವಾರ್ಥತ್ಯಾಗ ಬೇಕು.'

**ಸಿದ್ದಾಪುರ :**

ಮಾರ್ಚ್ ಮೊದಲನೇ ತಾರೀಖು, ಗಾಂಧೀಜಿ ಶಿರ್ಸಿಯಿಂದ ಸಿದ್ದಾಪುರಕ್ಕೆ ಹೋಗಿ ಹಿಂದಕ್ಕೆ ಬಂದರು. ಸಿದ್ದಾಪುರದ ಸಭೆಯಲ್ಲಿ ಹೆಚ್ಚಾಗಿ ಹವ್ಯಕರು ಇದ್ದರು. ಅಲ್ಲಿಯ ರೈತರು ಕಲಾಕೌಶಲದ ವಸ್ತುಗಳನ್ನು ಪ್ರದರ್ಶನವಾಡಿದ್ದರು. ಸಾರ್ವಜನಿಕ ಸಭೆಯಲ್ಲಿ ಹಲವು ಬಿನ್ನವತ್ತಳೆಗಳು ಬಂದವು. ಹರಿಜನರು ತಮ್ಮ ಬಿನ್ನವತ್ತಳೆಯಲ್ಲಿ ಸವರ್ಣರಿಂದ ತಮಗಾಗುತ್ತಿರುವ ತೊಂದರೆಗಳನ್ನು ಪ್ರಸ್ತಾಪಿಸಿದ್ದರು. ತಮ್ಮನ್ನು ಗುಲಾಮರನ್ನಾಗಿ ನಡೆಸಿಕೊಳ್ಳುತ್ತಾರೆ ಎಂದು ಬರೆದಿದ್ದರು 'ಈ ದೂರು ಸ್ವಲ್ಪ ಉತ್ಪ್ರೇಕ್ಷೆ ಇದ್ದರೂ ಇರಬಹುದು. ಆದರೆ ಬಹಳ ಮಟ್ಟಿಗೆ ಇದು ನಿಜ. ಸಿದ್ದಾಪುರದ ಸವರ್ಣ ಹಿಂದೂಗಳು ಹರಿಜನರ ಈ ಕೊರತೆಗಳನ್ನು ನೀಗಿಸಬೇಕು; ಸುಮ್ಮನೇ ಹರಿಜನ ನಿಧಿಗೆ ಕಾಣಿಕೆ ಕೊಟ್ಟರೆ ಆಗಲಿಲ್ಲ. ಈ ರೀತಿ ಕಾಣಿಕೆ ಕೊಟ್ಟರೆ ಅಸ್ಪೃಶ್ಯತೆಯ ಪಾಪವನ್ನು ಮುಂದುವರಿಸಲು ಅನುಮತಿ ಪಡೆದಂತೆ ಎಂದು ತಿಳಿಯಬಾರದು. ಈ ಕಾರಣ ಪ್ರಾಯಶ್ಚಿತ್ತ ರೂಪದ್ದು. ಪಾಪ ಮಾಡುವುದಿಲ್ಲವೆಂಬ ಸಂಕೇತ ಮುಂದೆ ಹರಿಜನರನ್ನು ಒಡಹುಟ್ಟಿದವರಂತೆ ಕಾಣಬೇಕು. ಹರಿಜನರನ್ನು ತುಳಿಯುತ್ತಿರುವುದೇ ನಮ್ಮ ಈಗಿನ ಅಧಃಪತನಕ್ಕೆ ಮುಖ್ಯ ಕಾರಣ. ಹರಿಜನರಿಗೆ ಸಂಕೋಲೆ ಇದ್ದಷ್ಟು ದಿನವೂ ಭಾರತಕ್ಕೆ ಸುಖವಿಲ್ಲ.'

**ಮುಗ್ಗಟ್ಟಿಗೆ ಮದ್ದು:**

ಒಬ್ಬ ರೈತ ಗಾಂಧೀಜಿಗೆ ಅಡಿಕೆ, ಏಲಕ್ಕಿ, ಮೆಣಸುಗಳ ಹಾರವನ್ನು ಅರ್ಪಿಸಿದ. ಅದರ ಮೇಲೆ ಆ ವಸ್ತುಗಳ ಬೆಲೆ, ೧೯೨೯ ರಿಂದ ೧೯೩೩ರ ವರೆಗೆ ಹೇಗೆ ಇಳಿಯುತ್ತ ಬರುತ್ತಿದೆ ಎಂಬುದರ ಬಗ್ಗೆ ಬರೆಯಲಾಗಿತ್ತು. ಅವರಿಗೆ ಇಷ್ಟವಿದ್ದರೆ ರೈತರು ಒಂದು ಉಪಾಯವನ್ನು ಮಾಡಬಹುದು ಎಂದು ಗಾಂಧೀಜಿ ಹೇಳಿದರು. ರೈತರು ಲಾಭಕರವಾದ ಬೆಳೆ ಬೆಳೆಯಬಹುದು. ಆದರೆ ಬಿಡುವಿನ ವೇಳೆಯನ್ನು ಹೇಗೆ ಉಪಯೋಗಿಸಬೇಕು. ಮುಗ್ಗಟ್ಟಿಗೆ ನೂಲುವದೊಂದೇ ಮಾರ್ಗ; ನೂಲುವದರಿಂದ ಹೆಚ್ಚು ಹಣ ಬರುವುದಿಲ್ಲ ಎಂದು ಸೋಮಾರಿಗಳಾಗಿ ಸುಮ್ಮನೇ ಕೂಡಬಾರದು. ಏನೂ ಇಲ್ಲದ್ದಕ್ಕಿಂತ ಸ್ವಲ್ಪ ವಾಸಿಯಲ್ಲವೇ? ಗಟ್ಟಿಯಾದ ಒಂದೇ ಸಮನಾದ ದಾರವನ್ನು ನೂಲಬೇಕು. ಅದನ್ನು ನೇಯಿಸಿಕೊಂಡು ತಾವೇ ಉಡಬೇಕು ಎಂದು ಮುಂತಾಗಿ ಗಾಂಧೀಜಿ ಹೇಳಿದರು.

ಅಲ್ಲಿ ಕೊಟ್ಟಿದ್ದ ಹಾರಗಳನ್ನು ಹರಾಜು ಮಾಡಲಾಯಿತು. ಅದರಿಂದ ಸಾಕಷ್ಟು ಹಣ ಬಂತು. ಗಾಂಧೀಜಿಗೆ ಎರಡು ಹಸುಗಳ ಕಾಣಿಕೆ ಬಂತು. ಹರಿಜನ ಪ್ರವೇಶಕ್ಕೆ ಅನುಕೂಲವಾದ ಗುಡಿಯ ಧರ್ಮದರ್ಶಿಗಳ ವಶಕ್ಕೆ ಆ ಹಸುಗಳನ್ನು ಗಾಂಧೀಜಿ ಒಪ್ಪಿಸಿದರು. ತಾನು ಒಂದು ಮೊಕದ್ದಮೆಯನ್ನು ಗೆದ್ದರೆ, ನಾಲ್ಕು ರೂಪಾಯಿ ಗಾಂಧೀಜಿಗೆ

ಕೊಡುವುದಾಗಿ ಮುಡುಪಾಗಿಟ್ಟಿದ್ದ ಒಬ್ಬ ಹವ್ಯಕ ಅದನ್ನು ತಂದು ಗಾಂಧೀಜಿಗೆ ಒಪ್ಪಿಸಿದ. ಇದನ್ನು ಕೇಳಿ ಗಾಂಧೀಜಿ ಹೊಟ್ಟೆ ಹುಣ್ಣಾಗುವಂತೆ ನಗುತ್ತಾ, ಕೋರ್ಟಿಗೆ ಹೋದವರಲ್ಲಿ ಒಂದು ಪಕ್ಷದವರು ಗೆಲ್ಲಲೇಬೇಕಲ್ಲ, ಎಂದರು. ಇನ್ನೊಬ್ಬ ಮನುಷ್ಯ ತನ್ನ ಉಂಗುರವನ್ನು ಗಾಂಧೀಜಿಗೆ ಕೊಟ್ಟ. ಗಾಂಧೀಜಿ ಆತನನ್ನು ಅಭಿನಂದಿಸುತ್ತ ಹೀಗೆ ಹೇಳಿದರು.

"You did well getting rid of this monstrosity"

**ದೇವಾಲಯದ ಉದ್ಘಾಟನೆ:**

ಸಿದ್ದಾಪುರದಲ್ಲಿ ಸಾರ್ವಜನಿಕ ಸಭೆ ಮುಗಿಸಿಕೊಂಡು ನೀಲೆಕಣಿ ಶ್ರೀ ವೆಂಕಟರಾಯರ ಸುಬ್ರಹ್ಮಣ್ಯ ದೇವಸ್ಥಾನವನ್ನು ಹರಿಜನರಿಗಾಗಿ ಉದ್ಘಾಟಿಸಿದರು. ದೇವಾಲಯ ಒಳ್ಳೆಯ ಗಟ್ಟಿಯಾಗಿದೆ ಚೆನ್ನಾಗಿದೆ. ಎದುರಿಗೆ ಒಂದು ದೊಡ್ಡ ಪುಷ್ಕರಿಣಿ. ಅದಕ್ಕೆ ಚಿರಂತನವಾದ ಜಲ. ದೇವಾಲಯ ಪ್ರವೇಶಕ್ಕೆ, ಅನುಕೂಲವಾಗಿ, ಅದನ್ನು ಉದ್ಘಾಟಿಸಲು ಕೇಳಿದ ವೆಂಕಟರಾಯರ ಮನೆಯವರೂ, ಅನೇಕರೂ, ಹರಿಜನರೂ ಅಲ್ಲಿ ಸೇರಿದ್ದರು. ಹರಿಜನ ಕೇರಿಯಲ್ಲಿದ್ದ ಒಂದು ಖಾದಿ ಭಂಡಾರವನ್ನು ಗಾಂಧೀಜಿ ಸಂದರ್ಶಿಸಿದರು.

**ದುಷ್ಟ ಪದ್ಧತಿ:**

ಮೊನ್ನೆ ಮೊನ್ನೆ ಸಹೋದರಿ ಒಬ್ಬಳು ಸೆರೆಮನೆಯಿಂದ ಬಿಡುಗಡೆಯಾದಳು. ಗಾಂಧೀಜಿಯ ದರ್ಶನಾರ್ಥಿಯಾಗಿ ಕಾರವಾರಕ್ಕೆ ಬಂದು, ಗಾಂಧೀಜಿಯ ಪರಿವಾರದಲ್ಲಿ ಸಿದ್ದಾಪುರದವರೆಗೂ ಇದ್ದಳು. ಸಿರ್ಸಿಯವರೆಗೆ ಈಕೆಯ ತಲೆಯಲ್ಲಿ ತುರುಬು ಇತ್ತು. ಮಾರ್ಚ್ ಮೊದಲನೇ ತಾರೀಖು ಬೆಳಕು ಹರಿಯುವಷ್ಟರೊಳಗೆ, ಈ ಸಹೋದರಿಯ ಕೇಶವಪನವಾಗಿ ಮಡಿಯಾಗಿದ್ದಳು. ನೋಡಿದವರೆಲ್ಲರಿಗೂ ಅಚ್ಚರಿ.

ಆಕೆ ಬಾಲ ವಿಧವೆ. ಹವ್ಯಕ ಬ್ರಾಹ್ಮಣಿ. ಮೊದಲೇ ಆಕೆಗೆ ಕೇಶವಪನವಾಗಿತ್ತು. ಶಾಸನ ಭಂಗದ ಚಳವಳಿಯ ಕಾಲಕ್ಕೆ ಸೆರೆಮನೆಗೆ ಹೋದಳು. ಸೆರೆಮನೆಗೆ ಹೋದಾಗ, ತಲೆಗೂದಲು ಬೆಳೆದಿತ್ತು. ಮನೆಗೆ ಸಕೇಶಿಯಾಗಿ ಹೋಗುವದು ಬಹಳ ಕಠಿಣವಾಯಿತು. ಸೆರೆಮನೆಯ ಸ್ವಾತಂತ್ರ್ಯ ಹೊರಗೆ ಎಲ್ಲಿ?

ಗಂಡನ ಮನೆ ಆಕೆಯ ಪಾಲಿಗೆ ಎಂದೋ ಮಾಯವಾಗಿತ್ತು. ತಂದೆಯ ಮನೆಯೇ ಗತಿ. ಆತನೋ ಕಟ್ಟುನಿಟ್ಟಿನ ಸನಾತನಿ. ಒಮ್ಮೆ ಮಡಿಯಾಗಿ ಮತ್ತು ಸಕೇಶಿಯಾದ ತನ್ನ ಮಗಳ ಮುಖವನ್ನೇ ತಾನು ನೋಡುವದಿಲ್ಲವೆಂದು ಆತ ಘೋಷಿಸಿಬಿಟ್ಟರು. ಸಿರ್ಸಿಯಿಂದ ಗಾಂಧೀಜಿ ಸಿದ್ದಾಪುರಕ್ಕೆ ಹೋಗಬೇಕು. ಸಿದ್ದಾಪುರ ಆಕೆಯ ತವರು, ತಂದೆಯ ಭೆಟ್ಟಿಗೆ ಆಕೆ ಹೋಗಲೇ ಬೇಕು. ಅವರ ಮುಖ ನೋಡುವದಾದರೆ ತಾನು ಮತ್ತೆ ಮಡಿಯಾಗಲೇ ಬೇಕು, ಬೇರೆ ದಾರಿಯಿಲ್ಲ. ಆದ್ದರಿಂದ ರಾತ್ರಿ ಸಿರ್ಸಿಯಲ್ಲಿ ಆಕೆ ಮಡಿಯಾದಳು.

ಬೆಳಗ್ಗೆ ಗಾಂಧೀಜಿ ಸಿದ್ದಾಪುರಕ್ಕೆ ಹೋದರು. ಸಭಾ ಸ್ಥಾನದಲ್ಲಿ ಗಾಂಧೀಜಿಗೆ ಅಲ್ಲಿಯ ಪ್ರತಿಷ್ಠಿತರ ಪರಿಚಯವಾಯಿತು. ಈ ಸಹೋದರಿಯ ತಂದೆಯೂ ಆ

ಗುಂಪಿನಲ್ಲಿದ್ದರು. ಗಾಂಧೀಜಿಗೆ ಇವರೇ ಆ ಯುವತಿಯ ತಂದೆ ಎಂದು ಯಾರೋ ಹೇಳಿದರು. ಗಾಂಧೀಜಿ ಬಹಳ ಪ್ರಯಾಸಪಟ್ಟು, ವಿಧವಾ ಕೇಶವಪನ ದುಷ್ಟ ಪದ್ಧತಿ ಎಂಬುದನ್ನು ಅವರಿಗೆ ತಿಳಿಸಿಹೇಳಲು ಬಹಳ ಪ್ರಯತ್ನಪಟ್ಟರು. ಗಾಂಧೀಜಿಯ ಆ ಪ್ರಯಾಸವನ್ನು ನೋಡಿ, ಕಲ್ಲುಕೂಡ ಕರಗಬಹುದಾಗಿತ್ತು. ಆದರೆ ಆ ಧರ್ಮನಿಷ್ಠರ ಕರುಳು ಮಾತ್ರ ಕರಗಲಿಲ್ಲ. ಗಾಂಧೀಜಿ "ನಿಮ್ಮ ಮಗಳಿಂದಲೇ ಈ ಪದ್ಧತಿ ಪ್ರಾರಂಭ ಆಗಲಿ. ಏಕೆ ಆಗಬಾರದು" ಎಂದರು.

ಉತ್ತರ : ಸ್ವಾಮಿ, ನಮ್ಮ ಸಮಾಜದಲ್ಲಿ ಅದೆಲ್ಲಾ ನಡೆಯುವುದಿಲ್ಲ.

ಗಾಂಧೀಜಿ : ನಿಮ್ಮ ಮಗಳು ವರ್ಧಾ ಆಶ್ರಮಕ್ಕೆ ಬರಲು ಇಚ್ಛಿಸುತ್ತಾಳೆ. ಅದಕ್ಕೆ ನಿಮ್ಮ ಅನುಮತಿಯೇ?

ಉತ್ತರ : ಅವಳು ಪ್ರಬುದ್ಧಳು. ತನ್ನ ಮನಸ್ಸಿಗೆ ಬಂದಲ್ಲಿ ಹೋಗಲು ಸ್ವತಂತ್ರಳು.

ಗಾಂಧೀಜಿ : ಹೀಗೆಂದರೆ ಹೇಗೆ? ನಿಮ್ಮ ಅನುಮತಿ ಪಡೆಯದೆ, ಆಶೀರ್ವಾದ ಹೊಂದದೆ, ಅವಳು ಹೊರಟಾಳಾದರೂ ಹೇಗೆ? ನೀವು ಏನು ಹೇಳುವಿರಿ?

ಉತ್ತರ : ವರ್ಧಾ ಆಶ್ರಮಕ್ಕೆ ಅವಳು ಹೋಗುವದಾದರೆ, ನನ್ನದೇನೂ ಅಡ್ಡಿಯಿಲ್ಲ.

ಗಾಂಧೀಜಿ : ಅಲ್ಲಿಗೆ ಹೋದ ಬಳಿಕ, ಮತ್ತೆ ಅವಳ ಕೂದಲನ್ನು ಬೆಳೆಸಿಕೊಳ್ಳುತ್ತಾಳಲ್ಲ. ನಿಮಗೆ ಅದು ಸಮ್ಮತವೇ?

ಉತ್ತರ : ಅಲ್ಲಿಗೆ ಹೋದಬಳಿಕ ಏನಾದರೂ ಮಾಡಲಿ. ಇಲ್ಲಿ ಇರುವ ತನಕ ಇದು ಯಾವುದೂ ಬೇಡ.

ಗಾಂಧೀಜಿ : ಅಲ್ಲಿಗೆ ಒಂದು ಸಲ ಹೋದ ಮೇಲೆ, ನೀವು ಬೇಕು ಎಂದ ಹೊತ್ತಿಗೆ ನಿಮ್ಮ ಮಗಳು ಹಿಂತಿರುಗಿ ಬರಲಿಕ್ಕಿಲ್ಲ. ಅವರ ಮನಸ್ಸಿಗೆ ಬಂದಾಗ, ಅವಳಿಗೆ ಬಿಡುವಾದಾಗ ಯಾವಾಗಲಾದರೂ ಬಂದು ಹೋಗಬಹುದು.

ಗಾಂಧೀಜಿಯ ಈ ಸೂಚನೆ ತಂದೆಗೂ ಒಪ್ಪಿಗೆ ಆಯಿತು. ತಮ್ಮ ಮಗಳು ಕೂಡಲೇ ಹೊರಟು ಹೋದರೆ, ೮-೧೦ ದಿನ ಮನೆಯಲ್ಲಿ ನಿಂತು, ಆ ಮೇಲೆ ಹೋಗಲಿ ಎಂದರು. ಸಭೆ ಮುಗಿದ ಬಳಿಕ ಆ ಯುವತಿ ಮಹಾದೇವಿ-ಗಾಂಧೀಜಿ ಬಳಿಗೆ ಬಂಧು ಅವರ ಪಾದಕ್ಕೆ ಎರಗಿದಳು. "ಇನ್ನು ಎಂಟು ದಿನ ಬಿಟ್ಟು ವರ್ಧಾ ಆಶ್ರಮಕ್ಕೆ ನೀನು ಹೋಗು. ಅಲ್ಲಿಗೆ ಹೋದಮೇಲೆ ಮತ್ತೆ ಕೂದಲು, ಬೆಳೆಸಿಕೋ. ನಿಮ್ಮ ತಂದೆಯವರು ಈ ಎರಡೂ ಮಾತಿಗೆ ಒಪ್ಪಿಕೊಂಡಿದ್ದಾರೆ. ಎಂದು ಗಾಂಧೀಜಿ ಆಕೆಗೆ ಆಶೀರ್ವದಿಸಿದರು. ಆಕೆಯೇ ಇಂದು ವಿನೋಬಾಜಿಯ ಮುಖ್ಯ ಶಿಷ್ಯೆ ಆದ ಮಹಾದೇವಿ ತಾಯಿ. ದೊಡ್ಡ ಮನೆಯ ಹೆಗ್ಗಡೆಯ ಹೆಣ್ಣುಮಗಳು.

*(ಪತ್ರಿಕಾ ವರದಿಯಿಂದ)*

**ಹಾವೇರಿಯಲ್ಲಿ :**

ಮಧ್ಯಾಹ್ನ ಗಾಂಧೀಜಿ ಹಾವೇರಿಗೆ ಹೋದರು. ಅಲ್ಲಿ ಒಂದು ಹರಿಜನ ಶಾಲೆ. ಒಂದು ಸಾರ್ವಜನಿಕ ಧರ್ಮಶಾಲೆ ಪ್ರಾರಂಭಿಸಿದರು. ಆಗ ಅಲ್ಲಿಗೆ ಚಿತ್ರದುರ್ಗದ ವೀರಶೈವ ಜಗದ್ಗುರು ಮುರಗಿಸ್ವಾಮಿಗಳು ಬಂದಿದ್ದರು. ಆ ಜಗದ್ಗುರುಗಳು ದೊಡ್ಡ ಪಂಡಿತರು. ಕಾಶಿಯಲ್ಲಿ ೧೨ ವರ್ಷ ಅಭ್ಯಾಸ ಮಾಡಿದ್ದರು. ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇಲ್ಲ ಎಂದು ಗಾಂಧೀಜಿಯ ಮಾತಿಗೆ ಅವರು ಪುಟಕೊಟ್ಟರು. ಅಸ್ಪೃಶ್ಯತಾ ನಿವಾರಣೆ ಕೆಲಸವನ್ನು ಅವರೂ ಸಾಕಷ್ಟು ಮಾಡಿದ್ದರು. ಗಾಂಧೀಜಿ ಅವರೊಡನೆ ಭೆಟ್ಟಿಯಾದಾಗ ಅವರ ಚಳವಳಿಗೆ ಬೆಂಬಲ ಕೊಡುವ ಭರವಸೆಯನ್ನು ಸ್ವಾಮಿಗಳು ಕೊಟ್ಟರು.

**ಹರಿಜನ ಹರಜನ :**

ಹರಿಜನರು ಹಿಂದೂ ಸಂಸ್ಕೃತಿಗೆ ಅನುಸಾರವಾಗಿ ನಡೆದುಕೊಂಡು, ಅವರಲ್ಲೂ ಹೆಂಡ ಕುಡಿಯುವುದನ್ನು ಬಿಟ್ಟು ಹರಿಜನ ಚಳವಳಿಗೆ ನೆರವಾಗಬೇಕು ಎಂದು ಒತ್ತಿ ಹೇಳಿ ಎಂದು ಸ್ವಾಮೀಜಿ ಗಾಂಧೀಜಿಗೆ ಹೇಳಿದರು. ಮುಂದೆ ಹಗುರ ಆಗಿ ವೀರಶೈವರಲ್ಲೂ ಹರಿಜನರು ಇದ್ದಾರೆ. ಅವರಿಗೆ ಈ 'ಹರಿಜನ' ಶಬ್ದ ಅಷ್ಟಾಗಿ ಸರಿಬರುವುದಿಲ್ಲ ಎಂದು ಹೇಳಿದರು. ಗಾಂಧೀಜಿ ಅದಕ್ಕೆ ಉತ್ತರವಾಗಿ ಹರಿ-ಹರರಲ್ಲಿ ಏನೂ ಭೇದವಿಲ್ಲ. ದೇವನೊಬ್ಬ. ನಾಮ ಹಲವು. ಎಲ್ಲವೂ ಒಬ್ಬನೇ ದೇವನಿಗೆ ಬೇರೆ ಬೇರೆ ಹೆಸರು. ಲಿಂಗಾಯತರು ಕೇವಲ ಶಿವಭಕ್ತರು ಆದುದರಿಂದ 'ಹರಿಜನ' ಶಬ್ದ ಅವರಿಗೆ ರುಚಿಸದೆ ಇರಬಹುದು. ಆದರೆ ಇಂಥ ವಾದ ವಿವಾದದಲ್ಲಿ ತಮಗೆ ರುಚಿ ಇಲ್ಲ ಎಂದು ಹೇಳಿದರು.

ದಾರಿಯಲ್ಲಿ ಮೋಟೆಬೆನ್ನೂರಿಗೆ ಭೇಟಿ ಕೊಟ್ಟು, ಗಾಂಧೀಜಿ ಬ್ಯಾಡಗಿಗೆ ಹೋದರು. ಅಲ್ಲಿ ನಿಧಿಯನ್ನು ಕೊಟ್ಟರು. ಹೆಂಗಸರು ತಮ್ಮ ಆಭರಣಗಳನ್ನು ಕಳಚಿ ಕೊಟ್ಟರು. ಬ್ಯಾಡಗಿಯಲ್ಲಿ ಗಾಂಧೀಜಿ ಭಾಷಣ ಮಾಡಿ. ಬ್ಯಾಡಗಿಯ ಹುರುಪಿನ ಲಿಂಗಾಯತರ ಬಂಧುಗಳನ್ನು ಅಭಿನಂದಿಸಿದರು. ಬ್ಯಾಡಗಿಯಲ್ಲಿ ತಮಗೆ ಕಾಣಿಕೆ ಕೊಟ್ಟ ವಸ್ತುಗಳನ್ನು ಹರಾಜು ಮಾಡಿದರು. ಆಗ ಸರದಾರ ವೀರಣ್ಣಗೌಡರು ತಮ್ಮ ಮುಪ್ಪಿನ ತಾಯಿಯನ್ನು ಕರೆತಂದು ಗಾಂಧೀಜಿಗೆ ಪರಿಚಯ ಮಾಡಿದರು. ಗಾಂಧೀಜಿ ನಗುತ್ತ ಆಕೆಯ ಕೈ ಹಿಡಿದು ಕುಶಲ ವಾರ್ತೆ ಕೇಳಿದರು. ಅಲ್ಲಿಂದ ಹಾವೇರಿಗೆ ಮರಳಿ ಬಂದಾಗ, ಅವರ ಭಾಷಣ ಆ ಪ್ರಚಂಡ ಸಭೆಯಲ್ಲಿ ಸರಿಯಾಗಿ ಕೇಳಲಿಲ್ಲ. ಸುಮಾರು ೩೦ ಸಾವಿರ ಜನ ಕೂಡಿದ್ದರು. ಶ್ರೀ ಹರ್ಡೇಕರ್ ಮಂಜಪ್ಪನವರು ಗಾಂಧೀಜಿಯ ಭಾಷಣವನ್ನು ಕನ್ನಡಕ್ಕೆ ಅನುವಾದಿಸಿದರು.

ಗಾಂಧೀಜಿ ಇಲ್ಲಿ ಕನ್ನಡದಲ್ಲಿಯೇ ಕೆಲವು ಮಾತುಗಳನ್ನು ಆಡಿದರು. ತಮ್ಮ ಭಾವಚಿತ್ರಗಳಿಗೆ ಕನ್ನಡದಲ್ಲಿಯೇ ತಮ್ಮ ಅಂಕಿತವನ್ನು ಹಾಕುತ್ತಿದ್ದರು. ಇದರಿಂದ ಜನರಲ್ಲಿ ಉತ್ಸಾಹ, ಸಂಭ್ರಮಗಳು ಮೇರೆ ತಪ್ಪಿದವು. ಮರುದಿನ ಮುಂಜಾನೆ ಹಾವೇರಿಯ ಹೈಸ್ಕೂಲಿನಲ್ಲಿ ಕವೀಂದ್ರ ರವೀಂದ್ರರ ಭಾವಚಿತ್ರವನ್ನು ಅನಾವರಣ ಮಾಡಿದರು.

**ದಾವಣಗೆರೆ :**

ಹಾವೇರಿಯಿಂದ ದಾವಣಗೆರೆಗೆ ರೈಲಿನಲ್ಲಿ ಗಾಂಧೀಜಿ ಹೊರಟರು. ದಾವಣಗೆರೆಯಲ್ಲಿ ರೈಲು ನಿಲ್ದಾಣ ಜನಸಂದಣಿಯಿಂದ ಕಿಕ್ಕಿರಿದಿದ್ದಿತು. ದಾರಿಯಲ್ಲಿ ರಾಣೆಬೆನ್ನೂರು ನಿಲ್ದಾಣದಲ್ಲಿ ಆ ಊರಿನ ಜನ ಗಾಂಧೀಜಿಯನ್ನು ಸತ್ಕರಿಸಿ, ಹರಿಜನ ನಿಧಿಗೂ ಬಿಹಾರದ ನಿಧಿಯನ್ನು ಸಮರ್ಪಿಸಿದರು.

ದಾವಣಗೆರೆಯಲ್ಲಿ ಎಲ್ಲೆಲ್ಲೂ ಉತ್ಸಾಹ, ಸಂಭ್ರಮ. ಗಾಂಧೀಜಿ ಹರಿಜನ ಕೇರಿಯ ನಡುವೆ ಹಾದು ಬಂದರು. ಆ ಕೇರಿಯ ಸ್ವಚ್ಛತೆ, ಸೌಂದರ್ಯಗಳು ಅವರ ಮನ ಸೆಳೆದವು. ಅಲ್ಲಿ ಒಂದು ಬಾವಿ. ಅದಕ್ಕೊಂದು ಪಂಪು. ಹೆಂಗಸರಿಗೆ ಒಂದು ಸ್ನಾನ ಗೃಹದ ಕೊಠಡಿ. ಪಕ್ಕದಲ್ಲಿಯೇ ಒಂದು ಉದ್ಯಾನ. ಕೇರಿಯಲ್ಲಿ ಮನೆಗಳೆಲ್ಲವೂ ಎತ್ತರವಾದ ತಳಹದಿಯ ಮೇಲೆ ಚೆನ್ನಾಗಿ ಕಟ್ಟಿದ್ದವು. ಎರಡೂ ಸಾಲುಗಳ ನಡುವೆ ಅಗಲವಾದ ಬೀದಿ. ಎರಡು ಮರ ಚೆನ್ನಾಗಿ ಬೆಳೆದಿದ್ದವು. ಅದಕ್ಕೆ ಸುತ್ತಲೂ ಜಗಲಿ. ಸಾರ್ವಜನಿಕ ಚೌಕದ ಹಾಗೆ ಅದರ ಉಪಯೋಗ. ಒಬ್ಬ ಬ್ರಾಹ್ಮಣ ಬಿ.ಎ. ಪದವೀಧರ–ಅನಂತ ಶರ್ಮ (ಹೊಯಿಸಳ) ಎಂಬ ಹರಿಜನ ಸೇವಕ ಆ ಕೇರಿಯಲ್ಲಿ ವಾಸವಾಗಿ, ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದ.

ದಾವಣಗೆರೆಯ ಮಹಿಳೆಯರ ಸಭೆ ಒಂದನ್ನು ಮುಗಿಸಿಕೊಂಡು, ಗಾಂಧೀಜಿ ಹರಿಜನ ವಿದ್ಯಾರ್ಥಿಗಳ ಗೃಹ ಒಂದಕ್ಕೆ ಶಂಕುಸ್ಥಾಪನೆ ಮಾಡಿದರು. ಆ ನಿವೇಶನವನ್ನು ಉಚಿತವಾಗಿ ಕೊಟ್ಟದ್ದಲ್ಲದೆ, ದಾವಣಗೆರೆಯ ಪೌರಸಭೆ ಆ ಕಟ್ಟಡಕ್ಕೆ ಹಣ ಸಹಾಯ ಮಾಡಿತು. ದಾವಣಗೆರೆಯಲ್ಲಿ ಹರಿಜನ ಸೇವೆ ಪ್ರಗತಿಪರ ಆಗಿದ್ದುದನ್ನು ಕಂಡು ಗಾಂಧೀಜಿ ಊರಿನವರನ್ನು ಅಭಿನಂದಿಸಿದರು. ಹರಿಜನ ಶಬ್ದಕ್ಕೆ ಬದಲಾಗಿ 'ಆದಿ ಜನ' ಎಂಬ ಶಬ್ದವನ್ನು ಬಳಸಬೇಕು ಎಂಬ ಸೂಚನೆಗೆ ಉತ್ತರ ಕೊಡುತ್ತ, "ಆದಿ ಜನ" ಎಂದರೆ ಪುರಾತನ ಕಾಲದಲ್ಲಿ ಇದ್ದವರು ಎಂದು ಅರ್ಥವಾಗುತ್ತದೆ. ಅದರಲ್ಲಿ ತಿರುಳು ಇಲ್ಲ. 'ಹರಿಜನ' ಶಬ್ದವೋ ಬಹಳ ಅರ್ಥಗರ್ಭಿತ ಎಂದು ಹೇಳಿದರು.

ದಾವಣಗೆರೆ ಸಭೆಗೆ ಸರಕಾರದ ಅಧಿಕಾರಿಗಳು ಎಲ್ಲರೂ ಬಂದಿದ್ದರು.

**ಹರಪನಹಳ್ಳಿಗೆ :**

ಅಲ್ಲಿಂದ ಗಾಂಧೀಜಿ ಹರಪನಹಳ್ಳಿಗೆ ಹೋದರು. ಅಲ್ಲಿ ಪುಟ್ಟ ಭಾಷಣ ಆಯಿತು. ನಿಧಿಯನ್ನು ನೀಡಿದರು. ಹರಪನಹಳ್ಳಿಯಿಂದ ಕೊಟ್ಟೂರಿಗೆ ಹೋಗಿ ಅಲ್ಲಿ ಸಭೆಯಲ್ಲಿ ಭಾಷಣ ಮಾಡಿ, ನಿಧಿಯನ್ನು ಸ್ವೀಕರಿಸಿದರು. ಅಲ್ಲಿನ ದೀನ ಸೇವಾ ವಿದ್ಯಾಲಯಕ್ಕೆ ಭೇಟಿ ಕೊಟ್ಟು, ದೀನ ಸೇವಾಶ್ರಮಕ್ಕೆ ತಳಹದಿ ಹಾಕಿದರು. ಅಲ್ಲಿಂದ ಸೊಂಡೂರಿಗೆ. ಹರಪನಹಳ್ಳಿಗೆ ಬರುವಾಗ ಹರಿಹರದಲ್ಲಿ ಸರ್ವಶ್ರೀ ಟೇಕೂರು ಸುಬ್ರಹ್ಮಣ್ಯಂ, ವಸುಪಾಲಪ್ಪ, ಟಿ.ಬಿ.ಕೇಶವರಾವ್ ಗಾಂಧೀಜಿಯನ್ನು ಅನುಸರಿಸಿ ಬಂದರು. ದಾರಿಯಲ್ಲಿ ದುಗ್ಗಾವತಿ, ತೆಲಗಿ, ನೀಲಗುಂದಗಳಲ್ಲಿ ಗಾಂಧೀಜಿಗೆ ನಿಧಿಯನ್ನು ಅರ್ಪಿಸಲಾಯಿತು.

**ಸೊಂಡೂರು :**

ದಾರಿ ಉದ್ದಕ್ಕೂ ಜನರ ಸಂಭ್ರಮವೇ ಸಂಭ್ರಮ. ಬೆಣ್ಣಿಹಳ್ಳಿ, ಕೂಡ್ಲಿಗಿ, ಕಣಿವೆಹಳ್ಳಿಗಳಲ್ಲಿ ಗಾಂಧೀಜಿಗೆ ನಿಧಿಯನ್ನು ಕೊಟ್ಟರು. ಜನರಿಗೆ ಗಾಂಧೀಜಿಯ ದರ್ಶನದ ಉತ್ಸಾಹ ಅಷ್ಟಿಷ್ಟಲ್ಲ. ಸೊಂಡೂರಿನಲ್ಲಿ ಗಾಂಧೀಜಿಗೆ ರಾಜ ಸನ್ಮಾನ ಸ್ವಾಗತ ಆಯಿತು. ಸಾರ್ವಜನಿಕ ಸಭೆಯಲ್ಲಿ ಸರಾಫ್ ಕೃಷ್ಣರಾಯರು ಬಿನ್ನವತ್ತಳೆಯನ್ನು ಓದಿ ನಿಧಿಯನ್ನು ಅರ್ಪಿಸಿದರು. ಬಿನ್ನವತ್ತಳೆಯಲ್ಲಿ ಸೊಂಡೂರಿನಲ್ಲಿ ರಾಜರು ಹರಿಜನೋದ್ಧಾರಕ್ಕಾಗಿ ಮಾಡಿದ ಕೆಲಸಗಳನ್ನು ವಿವರಿಸಿ, ಕುಮಾರಸ್ವಾಮಿಯ ದೇವಸ್ಥಾನವನ್ನು ಹರಿಜನರಿಗಾಗಿ ತೆರೆಯುವದನ್ನು ಹೇಳಿದ್ದರು. ಸೊಂಡೂರು ಒಂದು ಚಿಕ್ಕ ಸಂಸ್ಥಾನ. ಸುತ್ತಲೂ ಗುಡ್ಡಗಳಿವೆ. ಬ್ರಿಟಿಷ್ ಜಿಲ್ಲೆ ಬಳ್ಳಾರಿ ಸುತ್ತಲೂ ಇದ್ದರೂ ಈ ಗುಡ್ಡಗಳು ಸಂಸ್ಥಾನವನ್ನು ಪ್ರತ್ಯೇಕ ಮಾಡಿವೆ. ಸೊಂಡೂರು ಸಂಸ್ಥಾನದ ರಾಜರ ಪೂರ್ವಜ ಸಂತಾಜಿ ಘೋರ್ಪಡೆ ಮರಾಠಾ ಅಧಿಕಾರಿಗಳಲ್ಲಿ ಅತ್ಯುತ್ತಮರು ಎನಿಸಿಕೊಂಡರು. ಮೊಗಲರಿಗೆ ಅವರನ್ನು ಕಂಡರೆ ಭಯ. ೭ ವರ್ಷ ಅವರನ್ನು ಕಾಡಿದರು. ಈಗಿನ ರಾಜ್ಯ ಯಶವಂತರಾವ ಘೋರ್ಪಡೆ ಸುಶಿಕ್ಷಿತ, ಮೆಟ್ರಿಕ್ಯುಲೆಶನ್‌ವರೆಗೂ ಸಂಸ್ಥಾನದಲ್ಲಿ ಶಿಕ್ಷಣ ಉಚಿತ. ೧೯೩೨ರಲ್ಲಿ ಹರಿಜನರಿಗೆ ಎಲ್ಲ ಅನುಕೂಲಗಳನ್ನು ಮಾಡಿಕೊಡುವ ರಾಜ ಘೋಷಣೆ ಒಂದು ಆಯಿತು. ಸೊಂಡೂರಿನ ರಾಜಸಭೆಯಲ್ಲಿ ಚುನಾಯಿತ ಒಬ್ಬ ಹರಿಜನ ಇದ್ದಾನೆ. ಸಾವಿರ ವರ್ಷ ಪುರಾತನ ಆದ ಕುಮಾರಸ್ವಾಮಿ ದೇವಾಲಯಕ್ಕೆ ಹರಿಜನರನ್ನು ಹೋಗಗೊಟ್ಟಿದ್ದಾರೆ. ಎಲ್ಲ ಸಾರ್ವಜನಿಕ ದೇವಾಲಯಗಳೂ ಹರಿಜನರಿಗೆ ಮುಕ್ತ. ಗಾಂಧೀಜಿಯ ಬಿಡಾರದ ಪಕ್ಕದಲ್ಲಿಯೇ ಒಂದು ದೊಡ್ಡ ದೇವಾಲಯ ಇತ್ತು. ಅಲ್ಲಿ ಗಾಂಧೀಜಿ ಪ್ರಾರ್ಥನೆ ನಡೆಸಿದರು. ಎಲ್ಲರ ಜೊತೆಯಲ್ಲಿ ಹರಿಜನರು ಸೇರಿದ್ದರು.

ಗಾಂಧೀಜಿ ಸೊಂಡೂರಿಗೆ ಬರುವ ವೇಳೆಗೆ ರಾತ್ರಿ ಆಗಿತ್ತು. ೪೪ ಮೈಲಿ ರೈಲು ಪ್ರಯಾಣ. ೮೪ ಮೈಲಿ ಕಚ್ಚಾ ರಸ್ತೆಯಲ್ಲಿ ಮೋಟಾರು ಪ್ರಯಾಣ. ಭಾಷಣ ಮಾಡುವ ಸಾಮರ್ಥ್ಯ ಅವರಿಗಿರಲಿಲ್ಲ. ಆದರೂ ಹೀಗೆ ಹೇಳಿದರು: 'ನಿಮ್ಮ ಚಿಕ್ಕ ಸಂಸ್ಥಾನ ಉಳಿದವರಿಗೆ ಮಾದರಿ. ಇಲ್ಲಿನ ಅರಸರೂ, ಜನರೂ ಕೂಡ ಮಾಡುತ್ತಿರುವ ಅಸ್ಪೃಶ್ಯತಾ ನಿವಾರಣೆಯ ಕೆಲಸದಿಂದ ನನಗೆ ಸಂತೋಷ ಆಗಿದೆ. ಅಸ್ಪೃಶ್ಯತಾ ನಿವಾರಣೆ ಮಾಡದಿದ್ದರೆ, ಜಗತ್ತಿನಲ್ಲಿರುವುದು ನಮಗೆ ಕಷ್ಟವಾಗುತ್ತದೆ. ಹರಿಜನರು ಸ್ವಚ್ಛವಾಗಿರಬೇಕು. ಅಸ್ಪೃಶ್ಯತೆ ಹೋಗದೆ ಜಗತ್ತಿನಲ್ಲಿ ನಮಗೆ ಸ್ಥಾನವೇ ಇಲ್ಲ. ಇಂಥ ಊರನ್ನು ನೋಡಿದಾಗ ಅಂಥ ಪರಿಸ್ಥಿತಿ ಬರಲಿಕ್ಕಿಲ್ಲ ಎನಿಸುತ್ತದೆ.

**ಸನಾತನಿಗಳಿಗೆ ಬಿನ್ನಹ :**

ಮರುದಿನ ಬೆಳಗ್ಗೆ ಗಾಂಧೀಜಿ ಬಳ್ಳಾರಿಗೆ ಹೋದರು. ಅಲ್ಲಿಯ ಸ್ವಾಗತ ಅಧ್ಯಕ್ಷ ನಿಧಿಯನ್ನು ಕೊಡುವಾಗ ಈ ನಿಧಿ ಬಳ್ಳಾರಿಯ ಎಲ್ಲ ಸವರ್ಣರ ದಾನ ಎನ್ನಲಾರೆ. ಕೆಲವರು ಕೊಟ್ಟಿಲ್ಲ ಇದರಲ್ಲಿ ಭಾಗವಹಿಸಿಲ್ಲ–ಎಂದು ಹೇಳಿದ. ಅದಕ್ಕೆ ಉತ್ತರ ಕೊಡುತ್ತ ಸ್ವಾಗತಾಧ್ಯಕ್ಷನ ಸ್ಪಷ್ಟವಾಕ್ಕಿಗೆ ಅಭಿನಂದನೆ ಮಾಡುತ್ತ ಇಂಥ ವಿಚಿತ್ರ ವೃತ್ತಿಯನ್ನು ತಾವು ಕೇಳುತ್ತಿದ್ದುದು ಇದೇ ಮೊದಲು ಎಂದರು. ದೇವಾಲಯ ಪ್ರವೇಶಕ್ಕಾಗಿ ಕಾನೂನು

ಮಾಡಿಸಲು ತಾವು ಹೆಣಗಾಡುತ್ತಿರುವುದನ್ನು ಸನಾತನಿಗಳು ಇಷ್ಟ ಪಡಲಿಲ್ಲ ಎಂಬುದು ಅವರಿಗೆ ಗೊತ್ತಾಯಿತು. ಬರಲಿರುವ ಶಾಸನದಲ್ಲಿ ಬಲತ್ಕಾರ ಇಲ್ಲ–ಎಂದು ಸನಾತನಿಗಳಿಗೆ ಭರವಸೆ ಕೊಟ್ಟರು. ಈಗ ಇರುವುದೇ ಬಲತ್ಕಾರ. ಅದನ್ನು ನೀಗಲು ಈ ಶಾಸನ ಎಂದು ಹೇಳಿದರು. ಅಭಿಪ್ರಾಯ ಭೇದ ಇಲ್ಲದ ಕಡೆ ಸಹಕರಿಸಲು ಬಳ್ಳಾರಿಯ ಸನಾತನಿಗಳು ಬೇಡಿದರು. ಪರಸ್ಪರ ಸಹನೆ ಇರಲಿ ಎಂದು ಕೇಳಿಕೊಂಡರು. ಆಯಾ ದೇವಾಲಯಕ್ಕೆ ಹೋಗುವ ಜನರಲ್ಲಿ ಬಹಳ ಹೆಚ್ಚು ಮಂದಿ ಒಪ್ಪಿಕೊಳ್ಳದೇ ಇದ್ದರೆ, ಯಾವ ದೇವಾಲಯವನ್ನೂ ಹರಿಜನರಿಗೆ ತೆರೆಯುವುದಿಲ್ಲ. ಈ ಭರವಸೆಯನ್ನು ತಾವು ಕೊಟ್ಟ ಮೇಲೆ, ಸನಾತನಿಗಳಿಗೆ ಏನು ಆಕ್ಷೇಪಣೆ? ಈ ಶಾಸನ ಆದ ಕೂಡಲೇ – ಆಗುತ್ತದೆಯೋ ಇಲ್ಲವೋ–ಯಾವ ದೇವಸ್ಥಾನವೂ ತಾನೇ ತಾನಾಗಿ ಹರಿಜನರನ್ನು ಬಿಟ್ಟುಕೊಳ್ಳುವುದಿಲ್ಲ. ಇವತ್ತು ಜನ ಬದಲಾಯಿಸಿದರೂ ದೇವಾಲಯ ಪ್ರವೇಶಕ್ಕೆ ಹರಿಜನರನ್ನು ಬಿಡಲು ಅನುಮತಿ ಇಲ್ಲ. ಹರಿಜನರ ಹುಡುಗರಿಗೆ ವಿದ್ಯಾಭ್ಯಾಸದ ವಿಷಯದಲ್ಲಿ ಅವರಿಗೆ ಏನೂ ವಿರೋಧ ಇರಬಾರದು. ಅವರಿಗೆ ಬಾವಿ ಕೆರೆಗಳ ಉಪಯೋಗ ಮಾಡಿಕೊಳ್ಳಲು ವಿರೋಧ ಏಕೆ? ಅವರ ಆರ್ಥಿಕ ಸುಧಾರಣೆಗೆ ಯಾರೂ ಅಡ್ಡಿ ಇಲ್ಲವಲ್ಲ. ತಾವು ಈಗ ಸಂಗ್ರಹಿಸುತ್ತಿರುವ ಹಣವನ್ನು ಗುಡಿಗಳನ್ನು ಕಟ್ಟಲು ಉಪಯೋಗಿಸುವುದಿಲ್ಲ. ಮೇಲೆ ಹೇಳಿದ ರಚನಾತ್ಮಕ ಕಾರ್ಯಗಳನ್ನು ಮಾಡಲು ಮಾತ್ರವೇ ಅದನ್ನು ಉಪಯೋಗಿಸಲಾಗುತ್ತದೆ. ತಮ್ಮ ಇದಿರಿಗಿದ್ದ ಪ್ರಚಂಡ ಸಭೆಯ ಜನರ ನಾಡಿಯನ್ನು ಪರೀಕ್ಷಿಸಲು, ಅವರು ತಿಳಿದು ಏನು ಕೊಡುತ್ತಾರೆಯೋ ನೋಡೋಣ ಎಂದು ಹಣವನ್ನು ಸಂಗ್ರಹಿಸಲು ಸ್ವಯಂ ಸೇವಕರಿಗೆ ಹೇಳಿದರು. ಎಷ್ಟೋ ಜನ ವೇದಿಕೆಗೆ ಬಂದು ಹಣ ಕೊಟ್ಟರು. ಬಂದವರು ಹತ್ತು ಹತ್ತು ರೂಪಾಯಿಗಿಂತ ಹೆಚ್ಚು ಕೊಟ್ಟರು. ಸಭೆಯಲ್ಲಿ ಕುಳಿತಿದ್ದ ಜನರೂ ಸ್ವಯಂ ಸೇವಕರಿಗೆ ತಮ್ಮ ನಿಧಿಯನ್ನು ಕೊಟ್ಟರು.

ಬಳ್ಳಾರಿಯಿಂದ ಗಾಂಧೀಜಿ ಹೊಸಪೇಟೆಗೆ ಬಂದರು. ಹೊಸಪೇಟೆ ರೈಲು ನಿಲ್ದಾಣದಲ್ಲಿ ಅವರನ್ನು ಸ್ವಾಗತಿಸಿದ ನಂತರ ಅದೇ ಗಾಡಿಯಲ್ಲಿಯೇ ಗಾಂಧೀಜಿ ಗದಗಿಗೆ ಪ್ರಯಾಣ ಬೆಳೆಸಿದರು. ದಾರಿಯಲ್ಲಿ ಭಾನಾಪುರ ರೈಲು ನಿಲ್ದಾಣದಲ್ಲಿ ಜನರು ಗಾಂಧೀಜಿಗೆ ಬಿನ್ನವತ್ತಳೆ ಕೊಟ್ಟು, ನಿಧಿಯನ್ನು ಅರ್ಪಿಸಿದರು. ಗಾಂಧೀಜಿ ಅಲ್ಲಿ ಭಾಷಣ ಮಾಡಲಿಲ್ಲ. ರೈಲಿನಲ್ಲಿ ನೂಲುತ್ತ ಕುಳಿತಿದ್ದರು.

**ಜಮೀನದಾರ – ಕೆಲಸಗಾರ :**

ಜಕ್ಕಲಿ ಗದುಗಿಗೆ ೧೮ ಮೈಲಿ. ಜಕ್ಕಲಿಗೆ ಹೋಗುವ ದಾರಿ ಚೆನ್ನಾಗಿಲ್ಲ. ಆದರೆ ಅಲ್ಲಿ ಜಮೀನ್‌ದಾರ್ ಶ್ರೀ ಅಂದಾನಪ್ಪ ಎಂಬ ತರುಣ ಮಾಡುತ್ತಿದ್ದ ಕೆಲಸವನ್ನು ನೋಡಲು ಗಾಂಧೀಜಿ ಅಲ್ಲಿಗೆ ಹೋಗಲೇ ಬೇಕಾಗಿತ್ತು. ಆ ತರುಣನಿಗೆ ಹರಿಜನ ಸೇವೆಯಲ್ಲಿ ತುಂಬ ಪ್ರೀತಿ. ಹರಿಜನರಿಂದ ತನಗೆ ಬರಬೇಕಾಗಿದ್ದ ಸಾಲವನ್ನು ಸೋಡಿಬಿಟ್ಟು, ಅವರಿಗೆ ಬಹಳ ಪ್ರಿಯ ಆಗಿದ್ದಾನೆ. ಇನ್ನೂ ನಾನಾ ಬಗೆಯಲ್ಲಿ ಅವರ ಪ್ರೀತಿಯನ್ನು

ಗಳಿಸಿದ್ದಾನೆ. ಜಕ್ಕಲಿಗೆ ಹೋದಾಗ ಅಲ್ಲಿ ಒಂದು ಭಾರಿ ನೆರಪಿಯೇ ಸೇರಿತ್ತು. ಸುತ್ತಲೂ ಹಳ್ಳಿಗಳಿಂದ ಗಾಂಧೀಜಿಯ ದರ್ಶನಾರ್ಥಿಗಳಾಗಿ ಜನರು ಬಂದು ಸೇರಿದ್ದರು. ಶ್ರೀ ಅಂದಾನಪ್ಪನವರು ಕೊಟ್ಟ ಸಾಪಿರ ರೂಪಾಯಿ ನಿಧಿಯೇ ಮುಖ್ಯ. ಅಂದಾನಪ್ಪನವರ ಪ್ರಯತ್ನಗಳ ಫಲವಾಗಿ ಅನೇಕ ಹರಿಜನರು ಗೋಮಾಂಸ ಭಕ್ಷಣ ಕುಡಿತಗಳನ್ನು ಬಿಟ್ಟಿದ್ದಾರೆ. ಎಂದು ಗಾಂಧೀಜಿಗೆ ತಿಳಿಸಲಾಯಿತು.

**ಸಫಾಯಿ :**

ಹುಬ್ಬಳ್ಳಿಯಲ್ಲಿ ಬೇರೆ ಕಡೆಗಳಲ್ಲಿ ಗಾಂಧೀಜಿ ಹರಿಜನ ಕೇರಿಗಳಿಗೆ ಹೋಗಿ ಬಂದರು. ಹುಬ್ಬಳ್ಳಿಯಲ್ಲಿ ಗಾಂಧೀಜಿ ಸ್ವಲ್ಪ ಆಶ್ಚರ್ಯಗೊಂಡರು. ಒಬ್ಬ ಹರಿಜನ ಒಂದು ಗಿರಿಣಿಯನ್ನು ಯಶಸ್ವಿಯಾಗಿ ನಡೆಸುತ್ತಿದ್ದಾನೆ. ಆಗ ಗಾಂಧೀಜಿಗೆ ಒಂದು ಬೆಳ್ಳಿಯ ಬಟ್ಟಲನ್ನೂ ನಿಧಿಯನ್ನೂ ಕಾಣಿಕೆ ಕೊಟ್ಟ. ಹರಿಜನ ಒಬ್ಬ ಒಂದು ಗಿರಿಣಿಯ ಮಾಲೀಕನಾಗಿ, ಹೆಚ್ಚಾಗಿ ಹರಿಜನರಿಂದಲೇ ಅದರ ಆಡಳಿತ ನಡೆಸುತ್ತಿದ್ದುದು ಗಾಂಧೀಗೆ ಸಂತೋಷವಾಯಿತು. ಆದರೆ ಹರಿಜನ ವಸತಿಯ ಮೋರಿಗಳ ದುರ್ಗಂಧ ಅವರಿಗೆ ತಡೆಯಲಾಗಲಿಲ್ಲ. ಪೌರಸಭೆ ಕೊಟ್ಟ ಬಿನ್ನವತ್ತಳೆಗೆ ಉತ್ತರವಾಗಿ ಹರಿಜನ ವಸತಿಯ ಮೋರಿಗಳ ದುಸ್ಥಿತಿಯನ್ನು ಪ್ರಸ್ತಾಪಿಸಿದರು. ಪ್ರತಿಯೊಂದು ಪೌರಸಭೆಯೂ ತನ್ನ ಊರಿನ ಮೋರಿಗಳ ಸಫಾಯಿಯನ್ನು ಮೊಟ್ಟ ಮೊದಲು ಗಮನಿಸಬೇಕು. ತಮಗೆ ಸಫಾಯಿಯ ಅನುಭವ ಚೆನ್ನಾಗಿದೆ. ಪೌರಸಭೆಯವರು ಸರಿಯಾಗಿ ಕೆಲಸ ಮಾಡಿದರೆ ಹರಿಜನ ವಸತಿಯಲ್ಲಿರುವ ಈ ಮೋರಿಗಳು ಒಂದೇ ದಿನದಲ್ಲಿ ಸ್ವಚ್ಛವಾಗುತ್ತದೆ. ಈ ಸಫಾಯಿಗೆ ಹೆಚ್ಚು ವೆಚ್ಚವೇ ತಗಲುವುದಿಲ್ಲ. ಸ್ವಯಂ ಸೇವಕರನ್ನು ಕಲೆಹಾಕಿ, ಮೇಲ್ವಿಚಾರಣೆ ಮಾಡುತ್ತ, ಆ ಮೋರಿಗಳನ್ನು ಸ್ವಚ್ಛಮಾಡಿದರಾಯಿತು, ಆದರೆ ಈ ಸ್ವಯಂ ಸೇವೆಯಲ್ಲಿ ಪೌರಸಭಾ ಸದಸ್ಯರು ತಾವೇ ಅಗ್ರಗಾಮಿಗಳಾಗಬೇಕು. ಮನುಷ್ಯ ದೇಹ ಹೇಗೋ ಹಾಗೆಯೇ ಪಟ್ಟಣಗಳು ಮತ್ತು ಹಳ್ಳಿಗಳು. ದೇಹವನ್ನು ಸ್ವಚ್ಛವಾಗಿ ಇಡುವದು ಬಹಳ ಸುಲಭ, ಅಷ್ಟೇ ಅಗತ್ಯ ಕರ್ತವ್ಯ. ಅದೇ ರೀತಿ ಹಳ್ಳಿ ಅಥವಾ ಪಟ್ಟಣದ ಚರಂಡಿಗಳನ್ನೂ ಸ್ವಚ್ಛವಾಗಿ ಇಡಬೇಕು. ಅದು ಕರ್ತವ್ಯ. ಸಾರ್ವಜನಿಕ ಸಭೆಯಲ್ಲಿಯೂ ಗಾಂಧೀಜಿ ಇದೇ ಮಾತನ್ನು ಪ್ರಸ್ತಾಪಿಸಿದರು. ಇದೇ ರೀತಿ ಪೌರ ಸಭೆಯೂ ಪ್ರಜೆಗಳೂ ತಮ್ಮ ದೇಹಗಳಂತೆ ಊರನ್ನು ಚೊಕ್ಕಟವಾಗಿ ಇಟ್ಟುಕೊಳ್ಳುವ ತಮ್ಮ ಆದ್ಯ ಕರ್ತವ್ಯವನ್ನು ಅಸಡ್ಡೆ ಮಾಡಿದರೆ. ಅದರ ಫಲ ಪಿಡುಗಿನಂಥ ರೋಗ. ಹರಿಜನ ವಸತಿಯ ಸಫಾಯಿಯನ್ನು ಅಸಡ್ಡೆ ಮಾಡಿದರೆ ಪಟ್ಟಣಿಗರಿಗೆ ಅದರಿಂದ ಅನಾರೋಗ್ಯ.

**ಶ್ರಮವೂ ಬಂಡವಾಳವೇ :**

ಹುಬ್ಬಳಿಯಲ್ಲಿ ರೈಲ್ವೇ ಕೆಲಸಗಾರರು ಒಂದು ಬಿನ್ನವತ್ತಳೆ ಕೊಟ್ಟರು. ಅದರಲ್ಲಿ ಹರಿಜನರೂ ಇದ್ದರು: ಬಿನ್ನವತ್ತಳೆಯಲ್ಲಿ ಎಷ್ಟೋ ಮಾತು ಹೇಳಿದ್ದರು ನಿರುದ್ಯೋಗದ ನಿವಾರಣೆಗಾಗಿ, ತಾವು ಮಾಡಿದ ಮನವಿಗಳೆಲ್ಲ ಕಿವುಡರ ಮುಂದೆ ಕಿನ್ನರಿ ಬಾರಿಸಿದ ಹಾಗೆ ಆಗಿದೆ. ದೊಡ್ಡ ಸ್ಥಳಗಳಲ್ಲಿ ಬಂಡವಾಳದ ಪ್ರಭಾವವು ಹೆಚ್ಚು ಎಂದು ಹೇಳಿದ್ದರು.

ತಮ್ಮ ಯೌವನದಿಂದ ಮೊದಲು ಮಾಡಿ, ತಾವೂ ಕೂಲಿಗಾರರ ನಡುವೆ ಇದ್ದು, ತಾವೂ ಕೂಲಿಗಾರರೇ ಆಗಿದ್ದೇವೆ ಎಂದರು ಗಾಂಧೀಜಿ. ಬಂಡವಾಳಗಾರರ ಮುಂದೆ ತಾವು ನಿರಾಶರಾಗಬಾರದು, ಆಶಾಭಂಗದಿಂದ ಆತ್ಮವಿಶ್ವಾಸವನ್ನು ಕಳೆದುಕೊಳ್ಳಬಾರದು ಎಂದು ಹೇಳಿದರು. ಶ್ರಮವೂ ಬಂಡವಾಳವೇ. ಬಂಡವಾಳ ಎಂದರೆ ಬರೀ ದುಡ್ಡಲ್ಲ ಹಿಂದಿನ ಕಾಲದಲ್ಲಿ ಗೋಧನವೇ ಸಂಪತ್ತು. ಕೆಲಸಗಾರನ ಬಂಡವಾಳ ಅವನ ಶ್ರಮಶಕ್ತಿ. ಆ ಬಂಡವಾಳಕ್ಕೂ ಈ ಬಂಡವಾಳಕ್ಕೂ ಭೇದ ಗುಣದಲ್ಲಿಲ್ಲ, ಮೊತ್ತದಲ್ಲಿದೆ. ಬಂಡವಾಳಗಾರನ ಬಳಿ ಸಾವಿರ ರೂಪಾಯಿ ಇರಬಹುದು. ಕೂಲಿಗಾರನ ಬಳಿ ಎಂಟು ಆಣೆಯಷ್ಟು ದಿನವೂ ಬಂಡವಾಳ ಸೇರಬಹುದು. ಆದರೆ ಐವತ್ತು ಸಾವಿರ ಜನ ಕೂಲಿಗಾರರು ಒಗ್ಗಟ್ಟಾದರೆ, ಅವರ ಬಂಡವಾಳ ದಿನಕ್ಕೆ ೨೫ ಸಾವಿರ ರೂಪಾಯಿ ಆಯಿತು. ಕೆಲವು ಸಂದರ್ಭಗಳಲ್ಲಿ ಬಂಡವಾಳಗಾರರ ಬೆಳ್ಳಿ ಬಂಗಾರದ ನಾಣ್ಯಗಳು ಬೆಲೆ ಇಲ್ಲದೆ ಹೋಗಿವೆ. ಅವಕ್ಕೆ ಕೂಲಿಗಾರರು ದೊರೆಯದಿದ್ದರೆ ಮತ್ತೇನು? ಆದರೆ ಒಬ್ಬ ಕೂಲಿಗಾರನ ಶ್ರಮ ಕೂಡ ಅಮೂಲ್ಯ. ಕೆಲಸಗಾರರಲ್ಲಿ ಒಗ್ಗಟ್ಟು ಬೆಳೆದರೆ, ಅವರು ಒಂದಾಗಿ ನಡೆದರೆ, ತಮ್ಮ ಧಣಿಗಳಷ್ಟೇ ಒಳ್ಳೆಯ ಬಂಡವಾಳಗಾರರಾಗಬಹುದು. ಮಾಲಿ ಮಜದೂರ ಇಬ್ಬರೂ ಪರಸ್ಪರ ಅವಲಂಬಿಗಳು. ಎರಡೂ ಗುಂಪು ತನ್ನ ಮಿತಿಯನ್ನು ಅರಿತುಕೊಂಡರೆ ಯಾವ ದೂರಿಗೂ ಅವಕಾಶವಿಲ್ಲ. ಈಗ ತಾವು ಹೇಳಿದ್ದು ಹರಿಜನರಿಗೆ ಎರಡು ಪಟ್ಟು ಅನ್ವಯಿಸುತ್ತದೆ. ತಮ್ಮ ಶಕ್ತಿಯ ಅರಿವು ಅವರಿಗಾದರೆ, ಅವರ ಆರ್ಥಿಕ ಪ್ರಗತಿಯನ್ನು ತಡೆಯಬಲ್ಲ ಶಕ್ತಿ ಜಗತ್ತಿನಲ್ಲಿಲ್ಲ.

**ದೇವಸ್ಥಾನಗಳ ಬಾವಿಗಳ ಉದ್ಘಾಟನೆ :**

ಹಿರೇ ಉಳ್ಳಗೇರಿ, ಬೈಲಹೊಂಗಲ, ಸಂಪಗಾಂವ, ಯಮಕನಮರಡಿಗಳಲ್ಲಿ ಸಾವಿರಾರು ಜನರ ನಡುವೆ ಗಾಂಧೀಜಿ ದೇವಾಲಯಗಳನ್ನು ಹರಿಜನರಿಗಾಗಿ ತೆರೆದರು. ಹುಕ್ಕೇರಿಯಲ್ಲಿ ಒಂದು ಪುರಾತನ ಬಾವಿಯನ್ನು ಹರಿಜನರಿಗಾಗಿ ಉದ್ಘಾಟಿಸಿದರು. ದೇವಾಲಯಗಳಲ್ಲಿ ಎರಡು ಹನುಮಂತನ ಗುಡಿ, ಎರಡು ವೀರಶೈವ ಗುಡಿಗಳು. ಹಿರೇ ಉಳ್ಳಗಿರಿ ಒಂದು ಚಿಕ್ಕಹಳ್ಳಿ. ಅಲ್ಲಿ ಅಸ್ಪೃಶ್ಯತೆಯೇ ಇಲ್ಲ ಎನ್ನಬಹುದು. ಹರಿಜನರೂ, ಸವರ್ಣರೂ ಸಮಾನತೆಯಿಂದ, ಸ್ನೇಹದಿಂದ ಇದ್ದರು ಆ ಹಳ್ಳಿಯಲ್ಲಿ. ಹರಿಜನರು ಕುಡಿತವನ್ನೂ, ಸತ್ತ ದನದ ಮಾಂಸವನ್ನೂ ವರ್ಜ್ಯಮಾಡಿದ್ದರು.

**ಕೆಲಸಗಾರರ ಹೊಣೆ :**

ಮಾರ್ಚ್ ೬ನೇ ತಾರೀಖು ಗಾಂಧೀಜಿ ಬೆಳಗಾಂವಿಯಲ್ಲಿ ಇದ್ದರು. ಅವತ್ತು ಮುಂಜಾನೆ ಬೆಳಗಾವಿಯ ಹರಿಜನ ಕೆಲಸಗಾರರು ಗಾಂಧೀಜಿಗೆ ಭೇಟಿಯಾದರು. ಒಬ್ಬ ಕೆಲಸಗಾರ ತನ್ನ ಪ್ರಶ್ನೆಯನ್ನು ಟೈಪುಮಾಡಿ ತಂದಿದ್ದ. ಅದರಲ್ಲಿ ಉಪಯುಕ್ತವಾದವಕ್ಕೆ ಗಾಂಧೀಜಿ ಉತ್ತರವನ್ನು ಕೊಟ್ಟರು.

"ನಿಮ್ಮ ಹರಿಜನ ಚಳವಳಿ ಶುದ್ಧ ಧಾರ್ಮಿಕವೋ ಅಥವಾ ರಾಜಕೀಯವೋ?"

ತಟ್ಟನೆ ಉತ್ತರ ಬಂತು "ಶುದ್ಧವಾಗಿ ಧಾರ್ಮಿಕ"

ಪ್ರಶ್ನೆ : ಸನಾತನಿಗಳೂ ಪಂಡಿತರೂ ಶಾಸ್ತ್ರಾಧಾರದಿಂದ ಅಸ್ಪೃಶ್ಯತೆ ಇದೆ ಎನ್ನುತ್ತಾರೆ. ಅವರು ಹೀಗೆ ಹೇಳುವಾಗ ತದ್ವಿರುದ್ಧ ಅಭಿಪ್ರಾಯ ಉಳ್ಳವರ ಮಾತನ್ನು ಏಕೆ ಕೇಳುತ್ತೀರಿ?

ಗಾಂಧೀಜಿ ಉ.: ನಾನು ಯಾರ ಅಭಿಪ್ರಾಯವನ್ನೂ ತೆಗೆದುಕೊಂಡಿಲ್ಲ. ಯಾಒಬ್ಬ ಪಂಡಿತನನ್ನೂ ಕೇಳುವ ಮೊದಲೇ, ಬಹು ಕಾಲದ ಹಿಂದೆಯೇ ಅಸ್ಪೃಶ್ಯತೆಯ ಬಗ್ಗೆ ನನ್ನ ಅಭಿಪ್ರಾಯ ರೂಪುಗೊಂಡಿತ್ತು. ಆದರೆ ನಾನು ಅಸ್ಪೃಶ್ಯತೆಯ ವಿರುದ್ಧವಾಗಿ ಪ್ರಚಾರ ಮಾಡಲು ಹೊರಟಾಗ, ನನ್ನ ಮೊದಲ ಉಪವಾಸದಿಂದ, ಪ್ರಪಂಚದ ಗಮನ ಇತ್ತ ಕಡೆ ಹರಿಯಿತು. ಆಗ ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇದೆ ಎನ್ನುವವರ ಮಾತನ್ನು ಅರ್ಥಮಾಡಿಕೊಳ್ಳಲು ಅಭ್ಯಾಸ ಮಾಡಬೇಕಾಯಿತು. ಆ ಸಂದರ್ಭದಲ್ಲಿ ಶಾಸ್ತ್ರಾಧಾರ ಇದೆ ಎನ್ನುವವರೂ, ಇಲ್ಲ ಎನ್ನುವವರೂ ಇಬ್ಬರೂ ಪರಿಚಿತರಾದರು. ಇದೆ ಎನ್ನುವವರಷ್ಟೇ ವಿದ್ವಾಂಸರು ಇಲ್ಲ ಎನ್ನುವವರೂ ಇದ್ದಾರೆ. ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇಲ್ಲ ಎನ್ನುವವರ ಅಭಿಪ್ರಾಯವನ್ನು ನನ್ನ ಸಮರ್ಥನೆಗೆ ಉಪಯೋಗಿಸಿಕೊಳ್ಳಲು ನನಗೆ ಅಧಿಕಾರವಿತ್ತು. ಒಂದು ವೇಳೆ ಈ ಪಂಡಿತರು ಬೇರೆ ಅಭಿಪ್ರಾಯ ಪಟ್ಟರೂ, ಯಾವ ಪಂಡಿತರ ಸಹಾಯವೂ ಇಲ್ಲದೆ, ನನ್ನ ನಿರ್ಧಾರ ದೃಢವಾಗಿ ನಿಲ್ಲಬಲ್ಲದು"

ಪ್ರಶ್ನೆ : "ಲೆಕ್ಕವಿಲ್ಲದಷ್ಟು ಸಲ ನಾನು ಹಿಮಾಲಯದಂಥ ತಪ್ಪು ಮಾಡಿದ್ದೇನೆ ಎಂದು ಹೇಳಿದ್ದೀರಿ. ಈಗ ಮತ್ತೊಂದು ಅಂಥ ತಪ್ಪು ಮಾಡುತ್ತಿಲ್ಲವೇ?"

ಉತ್ತರ : "ನನಗೆ ಹೇಗೆ ಗೊತ್ತು? ನಾನೇನು ಸರ್ವಜ್ಞನಲ್ಲ. ತಪ್ಪು ಎಂದು ತಿಳಿದರೆ ಆ ಕೂಡಲೇ ನನ್ನ ಹೆಜ್ಜೆಯನ್ನು ಹಿಂದಿರುಗಿಸಲು ನಾನು ಹಿಂದು ಮುಂದು ನೋಡುವದಿಲ್ಲ. ದೇವರು ತಿಳಿಯದೇ ಮಾಡಿದ ತಪ್ಪನ್ನು ಕ್ಷಮಿಸುತ್ತಾನೆ. ಹಿಂದೆಯೂ ಕ್ಷಮಿಸಿದ್ದಾನೆ. ಮುಂದೆಯೂ ಕ್ಷಮಿಸುತ್ತಾನೆ."

ಮತ್ತೊಬ್ಬ ಕೆಲಸಗಾರ ಕೇಳಿದ: "ಕೆಲವರು ಹರಿಜನರಿಗೆ ಪ್ರತ್ಯೇಕ ಶಾಲೆಗಳು ಇರಬಾರದು ಎನ್ನುತ್ತಾರೆ. ಇನ್ನೂ ಕೆಲವರು ಇರುವದಗತ್ಯ ಎನ್ನುತ್ತಾರೆ"

ಗಾಂಧೀಜಿ ಉ.: "ಹರಿಜನರಿಗೆ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶಿಸಲು ಸರ್ವಾನುಕೂಲ ಇರಬೇಕು. ಕೆಲವು ಕಾಲದವರೆಗೆ, ಹರಿಜನ ಮಕ್ಕಳನ್ನು ಪ್ರತ್ಯೇಕ ಶಾಲೆಗಳಲ್ಲಿ ತಯಾರು ಮಾಡಿ, ಸಾರ್ವಜನಿಕ ಶಾಲೆಗಳಿಗೆ ಕಳುಹಿಸಬೇಕು. ಏಕಾಏಕಿ ಹರಿಜನ ಬಾಲಕರು ಸಾರ್ವಜನಿಕ ಶಾಲೆಗಳಿಗೆ ಬರುವುದಿಲ್ಲ. ಅವರ ಸಾಮೂಹಿಕ ಪ್ರವೇಶಕ್ಕೆ ವಿರೋಧ ಬರುವ ಸಂಭವವೂ ಇದೆ. ಆದ್ದರಿಂದ

ಹರಿಜನ ಬಾಲಕರ ವಿದ್ಯಾಭ್ಯಾಸದಲ್ಲಿ ನಮಗೆ ಆಸಕ್ತಿ ಇದ್ದರೆ ಇಂಥ ಪ್ರತ್ಯೇಕ ಶಾಲೆಗಳು ನಮಗೆ ಅಗತ್ಯ".

**ಹರಿಜನ ಆಶ್ರಮಕ್ಕೆ ದಾನ :**

ಕೆಲವು ವರ್ಷಗಳ ಕೆಳಗೆ ಕಾಕಾಸಾಹೇಬ ಕಾಲೇಲ್ಕರರ ಹೆಂಡತಿ ಲಕ್ಷ್ಮೀಬಾಯಿ ತೀರಿಕೊಂಡರು. ಅವರ ಹೆಂಡತಿ ಶಹಪೂರದಲ್ಲಿದ್ದರು. ಶಹಾಪುರ ಬೆಳಗಾವಿಯ ಹತ್ತಿರ ಇದೆ. ಅವರ ಕಾಕಾ ಸಾಹೇಬರು ಕೆಲವು ವರ್ಷಗಳಿಂದ ಸನ್ಯಾಸಿಯ ಹಾಗೆಯೇ ಇದ್ದಾರೆ. ಹೆಂಡತಿ ಸತ್ತ ಮೇಲೆ ಅಸಂಗ್ರಹದ ವೃತ್ತಿ ಅವರಲ್ಲಿ ಬಲವಾಯಿತು. ಬೆಳಗಾಂವಿಗೆ ಐದು ಮೈಲು ದೂರದಲ್ಲಿ ತಂದೆಯ ಸೊತ್ತು ಎಂದು ಕೆಲವು ಎಕರೆ ಹೊಲ ಇತ್ತು. ಆ ಭೂಮಿಯನ್ನು ತಮ್ಮ ಹೆಸರಿಗೆ ಇಟ್ಟುಕೊಳ್ಳಲು ಇಷ್ಟವಿಲ್ಲದೆ, ಮಕ್ಕಳನ್ನು ಕೇಳಿದರು. ಅವರು ತಂದೆಯ ಅಭಿಪ್ರಾಯವನ್ನು ಮನಃಪೂರ್ವಕ ಒಪ್ಪಿಕೊಂಡರು. ಗಾಂಧೀಜಿ ದೇಶಪಾಂಡೆ ಗಂಗಾಧರರಾಯರನ್ನು ಕೇಳಿ ಘೋಷಣೆ ಮಾಡಿದರು, – ಕಾಕಾ ಸಾಹೇಬರ ಹೊಲವನ್ನು ಅಖಿಲ ಭಾರತ ಹರಿಜನ ಸೇವಕ ಸಂಘದ ಪರವಾಗಿ, ಒಂದು ಹರಿಜನ ಆಶ್ರಮವನ್ನು ತೆರೆಯಲು ದಾನ ನೀಡಿದ್ದಾರೆ ಎಂದು. ಆ ಹೊಲವನ್ನು ಉತ್ತಿ, ಬಿತ್ತಿ, ಹಣ ಗಳಿಸಿ ಕೊಡುವ ಉದ್ದೇಶ ಅವರದಲ್ಲ. ಸಾಬರಮತಿ ಆಶ್ರಮದ ಮಾದರಿ ಅದು. ಹರಿಜನರಿಗಾಗಿ ಒಂದು ಸಂಸ್ಥೆ ಆಗಬೇಕು ಎಂದು ಕಾಕಾಸಾಹೇಬರ ಉದ್ದೇಶ.

ಬೆಳಗಿನ ಕೆಲಸಗಾರರ ಸಭೆಯಲ್ಲಿ ಎಲ್ಲಾ ಕೆಲಸ ಮುಗಿದ ಮೇಲೆ, ಒಬ್ಬ ನಾಗರಿಕ ಗಾಂಧೀಜಿಯನ್ನು ಕೆಲವು ಪ್ರಶ್ನೆ ಕೇಳಲು ಬಯಿಸಿದ. ಇನ್ನು ಮೇಲೆ ಮಿನಿಟಗೆ ೧೦ ರೂಪಾಯಿ ಶುಲ್ಕ ಕೊಡಬೇಕು ಎಂದು ಗಾಂಧೀಜಿ ವಿನೋದ ಮಾಡಿದರು. ಆ ನಾಗರೀಕ ಅದಕ್ಕೆ ಹಣಕೊಟ್ಟು ಪ್ರಶ್ನೆ ಕೇಳಿದ.

ಸಾರ್ವಜನಿಕ ಸಭೆ ಬೆಳಗಾಂವಿಯ ಮಿಶನ್ ಸ್ಕೂಲಿನ ಕಾಂಪೌಂಡಿನಲ್ಲಿ ಕೂಡಿತ್ತು. ಹೆಂಗಸರೂ, ಗಂಡಸರೂ ಶಾಂತವಾಗಿ ಕೂತಿದ್ದರು. ಪೌರಸಭೆಯ ಪರ, ಜಿಲ್ಲಾ ಬೋರ್ಡಿನ ಪರ, ಸಾರ್ವಜನಿಕ ಪರ, ಬಿನ್ನವತ್ತಳೆಗಳನ್ನು ಅರ್ಪಿಸಿದರು.

ಗಾಂಧೀಜಿ ಅಲ್ಲಿ ಮಾತನಾಡುತ್ತ ಅಂದದ್ದು:

"ನಾನೇನು ಬೆಳಗಾಂವಿಗೆ ಹೊಸಬನಲ್ಲ. ಹಿಂದೆ ಸ್ವಾಸ್ಥ್ಯ ಸುಧಾರಣೆಯಲ್ಲಿ ಈ ದಾರಿಯಲ್ಲಿ ಅಂಬೋಲಿಗೆ ಹೋಗಿದ್ದೆ. ಹಿಂದೆ ಈ ಊರಲ್ಲಿ ಹೆಂಗಸರು ರಾಷ್ಟ್ರಕ್ಕಾಗಿ ತಮ್ಮ ಒಡವೆಗಳನ್ನು ಅರ್ಪಿಸಿದರು. ಅದನ್ನು ನಾನು ಮರೆಯಬಹುದೇ? ಈಗ ನೀವು ಕೊಟ್ಟ ನಿಧಿ ನನಗೆ ಸಮಾಧಾನಕರ ಆಗಿಲ್ಲ. ಈ ಸಭೆ ಮುಗಿದು ಹೊರಡುವದರೊಳಗಾಗಿ ಇನ್ನೂ ಹೆಚ್ಚು ಕೊಡುವಿರೆಂದು ನಂಬಿದ್ದೇನೆ. ವಿದ್ಯಾರ್ಥಿಗಳ ನಿಧಿಗೆ ನನ್ನ ಧನ್ಯವಾದ. ಹರಿಜನ ಸೇವೆ ಸಾಮಾಜಿಕ ಕಾರ್ಯ. ಈ ಕೆಲಸ ವಿದ್ಯಾರ್ಥಿಗಳಲ್ಲದೆ ಬೇರೆ ಯಾರು ಮಾಡಬೇಕು? ವಿದ್ಯಾರ್ಥಿಗಳು ತಮ್ಮ ಬಿಡುವಿನ ಕಾಲದಲ್ಲಿ ಹರಿಜನರ ಕೇರಿಗೆ ಹೋಗಿ, ಹೊಲಸನ್ನು ಸ್ವಚ್ಛಮಾಡಿ ಹರಿಜನ ಬಂಧುಗಳಿಗೆ ನೈರ್ಮಲ್ಯವನ್ನು ಕಲಿಸಬೇಕು. ಇದೇ

ನಿಜವಾದ ವಿದ್ಯೆ. ಎಲ್ಲ ಕಡೆಯಲ್ಲಿಯೂ ಅಸ್ಪೃಶ್ಯತೆಯ ಸಮರ್ಥಕರು ಇರುತ್ತಾರೆ. ಇಲ್ಲಿಯೂ ಕೆಲವರು ಇರಬಹುದು. ಅವರಲ್ಲಿ ಕೆಲವರು ಮಂದಿರ ಪ್ರವೇಶಕ್ಕೆ ವಿರುದ್ಧ, ಹಲವರು ಶಾಸನಕ್ಕೆ ವಿರುದ್ಧ. ಕೆಲವು ದಿನಗಳ ಕೆಳಗೆ ಪಂಡಿತ ಮದನಮೋಹನ ಮಾಲವೀಯರ ಅಧ್ಯಕ್ಷತೆಯಲ್ಲಿ ಬೊಂಬಾಯಿನಲ್ಲಿ ಒಂದು ಸಭೆ ಸೇರಿತ್ತು. ಅದರಲ್ಲಿ ಎಲ್ಲ ದಾರಿಗಳಿಂದಲೂ ಮಂದಿರ ಪ್ರವೇಶದ ಪ್ರಶ್ನೆಯನ್ನು ಪರಿಹರಿಸಿಕೊಳ್ಳಬೇಕು ಎಂದು ತೀರ್ಮಾನವಾಯಿತು. ಬಲಾತ್ಕಾರವಾಗಿ ಮಂದಿರ ಪ್ರವೇಶಮಾಡಿಸುವದು ನನಗೆ ಕನಸಿನಲ್ಲಿಯೂ ಹೊಳೆದಿಲ್ಲ. ಶಾಸನದಲ್ಲಿ ಬಲಾತ್ಕಾರದ ಗಂಧವೂ ಇಲ್ಲ. ಧಾರವಾಡದಿಂದ ಬೆಳಗಾಂವಿಗೆ ಬರುವಾಗ ಮೂರು ಗುಡಿಗಳನ್ನು ಹರಿಜನರಿಗಾಗಿ ತೆರೆದೆ. ಅಲ್ಲಿ ಕೂಡಿದ್ದ ನೂರಾರು ಜನರಲ್ಲಿ ಒಬ್ಬರೂ ವಿರೋಧಿಸಲಿಲ್ಲ. ಆನಂದದಿಂದ ಹರಿಜನರನ್ನು ಬರಮಾಡಿಕೊಂಡರು. ಇಂಥ ರೀತಿಯಲ್ಲಿ ಬಲಾತ್ಕಾರ ಎಲ್ಲಿ ಬರುತ್ತದೆ?

ಹನ್ನೆರಡು ವರ್ಷಕ್ಕೊಮ್ಮೆ ಈ ಊರಲ್ಲಿ ಜಾತ್ರೆ ನಡೆದು ಆ ಕಾಲಕ್ಕೆ ಪಶುಬಲಿ ಆಗುವದೆಂದು ಕೇಳಿದ್ದೇನೆ. ಸಾವಿರಾರು ರೂಪಾಯಿಯ ಮದ್ಯ ಮಾರಾಟವಾಗುವದಂತೆ. ಇದು ಧರ್ಮವಲ್ಲ, ಅಧರ್ಮ, ಮೂಕಪ್ರಾಣಿಗಳ ಕೊಲೆಯಿಂದ ಪರಮೇಶ್ವರ ಸಂತುಷ್ಟನಾಗುವುದಿಲ್ಲ. ಹರಿಜನ ಬಂಧುಗಳನ್ನು ಬೇಡಿಕೊಳ್ಳುತ್ತೇನೆ, – ನೀವು ಗೋಮಾಂಸ ಭಕ್ಷಣ ಬಿಡಿರಿ. ಸಾರಾಯಿ ಕುಡಿಯಬೇಡಿರಿ. ನೀವೇ ಕೈಯಾರೆ ನಿಮ್ಮ ಉನ್ನತಿಯ ದಿನಗಳನ್ನು ಮುಂದೂಡಲೇಕೆ? ಹೀಗೆ ಗಾಂಧೀಜಿ ಭಾಷಣ ಮಾಡಿದರು.

ಆಮೇಲೆ ಕಾಣಿಕೆ ಬಂದ ವಸ್ತುಗಳನ್ನು ಹರಾಜು ಮಾಡಲಾಯಿತು.

ಮರುದಿನ ಬೆಳಗಾಂವಿಯಿಂದ ಗಾಂಧೀಜಿ ವಿಜಾಪುರಕ್ಕೆ ಪ್ರಯಾಣ ಮಾಡಿದರು. ಗಾಂಧೀಜಿ ನಿಪ್ಪಾಣಿಗೆ ಬಂದಾಗ ಹರಿಜನ ಕೇರಿಯನ್ನೂ, ಹರಿಜನ ವಸತಿ ಗೃಹವನ್ನೂ, ರಾಷ್ಟ್ರೀಯ ಶಾಲೆಯನ್ನೂ, ವರ್ತಕ ಸಂಘವನ್ನೂ, ಸಂದರ್ಶಿಸಿದರು. ಅಲ್ಲಿಗೆ ಪಕ್ಕದ ಹಳ್ಳಿಗಳಿಂದ ಬಂದಿದ್ದ ಜನರು ಗಾಂಧೀಜಿಗೆ ನಿಧಿಗಳನ್ನು ಅರ್ಪಿಸಿದರು. ಸಾರ್ವಜನಿಕ ಸಭೆಯಲ್ಲಿ ಹರಿಜನ ವಸತಿ ಗೃಹಕ್ಕೆ ಸಹಾಯಮಾಡಬೇಕೆಂದು ಕೇಳಿಕೊಂಡರು. ಮಧ್ಯಾಹ್ನ ನವಲೀಹಾಳಕ್ಕೆ ಹೋಗಿ ಅಲ್ಲಿ ಊಟ ಮುಗಿಸಿಕೊಂಡರು. ಅಲ್ಲಿಯೂ ನಿಧಿಯನ್ನು ಕೊಟ್ಟರು.

**ನಿಪ್ಪಾಣಿಯಲ್ಲಿ ಹರಿಜನ ವರ್ತಕನಂತೆ ಗಾಂಧೀಜಿ :**

ನಿಪ್ಪಾಣಿಯಲ್ಲಿ ವರ್ತಕ ಮಂಡಲಿಗೆ ಭೇಟಿಕೊಟ್ಟು, ನಿಧಿಯನ್ನು ಸ್ವೀಕರಿಸುವಂತೆ ಗಾಂಧೀಜಿಯನ್ನು ಕರೆದರು. ಕೆಲವು ಕಾಲದ ಹಿಂದೆ ತಮ್ಮ ಸಂಪಾದನೆಯಲ್ಲಿ ಒಂದು ನಿರ್ದಿಷ್ಟ ಭಾಗವನ್ನು ಹರಿಜನ ಸೇವೆಗೆ ನೀಡುವೆವೆಂದು ವರ್ತಕರು ಮಾತುಕೊಟ್ಟಿದ್ದರು. ಆದರೆ ಏಕೋ ಏನೋ ಆ ಮಾತು ಮಾತಾಗಿಯೇ ಉಳಿಯಿತು. ಗಾಂಧೀಜಿ ಅದನ್ನು ಪ್ರಸ್ತಾಪಿಸುತ್ತ,

"ಜೊತೆಯ ವರ್ತಕರೊಂದಿಗೆ ವರ್ತಕನಂತೆ, ನಾನು ಮಾತನಾಡುತ್ತಿದ್ದೇನೆ. ನನಗೂ

ನಿಮಗೂ ಇರುವ ವ್ಯತ್ಯಾಸ ಇಷ್ಟೇ, - ನೀವು ನಿಮ್ಮ ಕುಟುಂಬಗಳಿಗಾಗಿ ವ್ಯಾಪಾರ ಮಾಡುತ್ತೀರಿ. ಬಹಳವಾದರೆ ಎಲ್ಲ ಒಟ್ಟು ನೂರು ಜನ ಇರಬಹುದು. ನಾನೋ, ಕೋಟಿಗಟ್ಟಲೆ ಜನರಿಗಾಗಿ, ಹರಿಜನರಿಗಾಗಿ ವ್ಯಾಪಾರ ಮಾಡುತ್ತಿದ್ದೇನೆ. ನನ್ನ ಕುಟುಂಬ ಬಹಳ ದೊಡ್ಡದು. ವರ್ತಕರ ಪತ್ತು ನಗದು ಹಣದ ಮೇಲೆ ಆಧಾರಗೊಳ್ಳುವುದಿಲ್ಲ. ಕೊಟ್ಟ ಮಾತನ್ನು ಅವರು ಉಳಿಸಿಕೊಳ್ಳುತ್ತಾರೆ. ಎಂಬ ಮಾರ್ಯಾದೆಯ ಮೇಲೆ ಆಧಾರಗೊಂಡಿದೆ. ಒಂದು ಬ್ಯಾಂಕಿನಲ್ಲಿ ಬಂಗಾರದ ಗಟ್ಟಿಗಳ ಸಂಗ್ರಹ ಇರಬಹುದು. ಆದರೆ ಆ ಬ್ಯಾಂಕಿನ ಮೇಲೆ ಯಾರಾದರೂ ಚೆಕ್ಕು ಕೊಟ್ಟಾಗ, ಅವರ ಲೆಕ್ಕದಲ್ಲಿ ಹಣ ಇದ್ದರೆ, ಬ್ಯಾಂಕಿನವರು ಅದಕ್ಕೆ ಹಣವನ್ನು ಕೊಡದೇ ಹೋದರೆ, ಅದರ ಪತ್ತು ಉಳಿಯುವುದಿಲ್ಲ. ಕೋಟ್ಯಾಂತರ ಹರಿಜನರಿಗೆ ನೀವು ಮಾತು ಕೊಟ್ಟಿದ್ದೀರಿ,. ಅದನ್ನು ಉಳಿಸಿಕೊಳ್ಳಿರಿ" ಎಂದರು ಗಾಂಧೀಜಿ.

ವರ್ತಕ ಮಂಡಳಿಯ ಪರವಾಗಿ ವರ್ತಕರು ಕೊಟ್ಟ ಯಾವ ಮಾತನ್ನೂ ಮುರಿಯುವದಿಲ್ಲ. ಎಂದು ಸಂಘದ ಅಧ್ಯಕ್ಷರು ಗಾಂಧೀಜಿಗೆ ಭರವಸೆ ಕೊಟ್ಟರು.

**ಹರಿಜನರ ಸಲುವಾಗಿ :**

ನಿಪ್ಪಾಣಿಯಲ್ಲಿ ಹರಿಜನರ ಚಳವಳಿಯ ಶ್ರದ್ಧಾವಂತ ಕೆಲಸಗಾರರು ಕೆಲವರಿದ್ದಾರೆ. ಶ್ರೀ ಅಕ್ಷಯಚಂದ್ರ ಪಕ್ಕಾ ಹರಿಜನ ಸೇವಕ. ಹರಿಜನ ಹುಡುಗರನ್ನೂ ಹುಡುಗಿಯರನ್ನೂ ತನ್ನ ಮನೆಯಲ್ಲೇ ಬೆಳೆಸುತ್ತಿದ್ದಾನೆ. ಅವರ ಅಭಿವೃದ್ಧಿಗಾಗಿ ಬೇಕಾಗುವಷ್ಟು ಹಣವನ್ನು ವೆಚ್ಚಮಾಡುತ್ತಿದ್ದಾನೆ. ಸಿಕ್ಕಲಿಗರಿಗಾಗಿ ಸುವ್ಯವಸ್ಥಿತವಾದ ವಸತಿಗೃಹ ಒಬ್ಬ ಸ್ವಯಂ ಸೇವಕನ ಶ್ರದ್ಧೆಯಿಂದ ನಡೆಯುತ್ತಿದೆ. ಬ್ರಹ್ಮಚಾರಿ ರಾಮತೀರ್ಥರು ಆಶ್ರಮವನ್ನು ನಡೆಸು ತ್ತಿದ್ದಾರೆ. ಅವರ ವಾಸ ಹರಿಜನ ಕೇರಿಯಲ್ಲೇ. ಹರಿಜನರೇ ಒಂದು ವಿದ್ಯಾರ್ಥಿ ಗೃಹವನ್ನು ನಡೆಸುತ್ತಿದ್ದಾರೆ. ಅದಕ್ಕೇ ಸಹಾಯಮಾಡಲು ಗಾಂಧೀಜಿ ವಿನಂತಿ ಮಾಡಿದ್ದು.

**ದೇವರ ಕರುಣೆ :**

ಶೇಡಬಾಳ ಒಂದು ಚಿಕ್ಕ ರೈಲು ನಿಲ್ದಾಣ. ರಾತ್ರಿ ಅಲ್ಲಿ ತಂಗಿ, ಮರುದಿನ ಬೆಳಿಗ್ಗೆ ಗಾಂಧೀಜಿ ಬಿಜಾಪುರಕ್ಕೆ ಮೋಟಾರಿನಲ್ಲಿ ಹೋಗಬೇಕಾಗಿತ್ತು. ಆದರೆ ಶೇಡಬಾಳದ ಕೆಲಸಗಾರರು ಸುಮ್ಮನೆ ಇದ್ದಾರೆಯೇ? ಅಲ್ಲಿ ಸಭೆಯ ಏರ್ಪಾಟೇ ಇರಲಿಲ್ಲ. ಆದರೂ ಶೇಡಬಾಳದ ಕೆಲಸಗಾರರು ಬೆಳಗು ಮುಂಜಾನೆ ಗಾಂಧೀಜಿ ಹೊರಡುವ ಮೊದಲು, ಒಂದು ಸಭೆ ನಡೆಸಿದರು. ಹರಿಜನ ನಿಧಿಗೆ ಏನಾದರೂ ಕೊಡಿ ಎಂದು ಜನರನ್ನು ಗಾಂಧೀಜಿ ಕೇಳಿದರು. ಅಸ್ಪೃಶ್ಯತೆ ಮಹಾ ಪಾಪ, ಅದನ್ನು ತೊಳೆದುಕೊಳ್ಳಬೇಕು; ಇಷ್ಟವಿದ್ದರೆ ಬಿಡಿಕಾಸನ್ನು ಕೊಟ್ಟರೂ ಚಿಂತೆ ಇಲ್ಲ ಎಂದರು. ಸಾರ್ವಜನಿಕರು ಅಲ್ಲಿದ್ದದ್ದೇ ಒಂದು ಸಾವಿರ ಇರಬಹುದು. ಗಂಡಸಾಗಲಿ ಹೆಂಗಸಾಗಲಿ ಹಿಂತೆಗೆಯಲಿಲ್ಲ. ಎಲ್ಲರೂ ಕಾಣಿಕೆ ಕೊಟ್ಟರು.

ಈ ಸಭೆಯಲ್ಲೇ ಗಾಂಧೀಜಿಯನ್ನು ಕೇಳಿದ್ದು, - "ದೇವರಲ್ಲಿ ನಿಮಗೆ ನಂಬಿಕೆ ಇದೆಯೇ" ಎಂದು ತಟ್ಟನೆ ಉತ್ತರ ಬಂತು ಅವರಿಂದ- "ಒಂದು ಸಾಮಾನ್ಯ ಬಿನ್ನಹಕ್ಕೆ

ಉತ್ತರ ರೂಪವಾಗಿ ಇಂದು ಬೆಳಿಗ್ಗೆ ಕಂಡಿರುವ ಈ ಪ್ರತ್ಯಕ್ಷ ಕರುಣೆಯಂತಹುದು ಕಾಣುತ್ತಲೇ ಇದ್ದರೆ ನಾನು ಹೇಗೆ ದೇವರನ್ನು ನಂಬದೇ ಇರಲಿ? ಇಲ್ಲಿ ಒಂದೇ ಕಡೆ ಅಲ್ಲ, ಹೀಗೆ ಆದದ್ದು. ನನ್ನ ಪ್ರವಾಸದಲ್ಲಿ ಅನೇಕ ಕಡೆ ಹೀಗೆ ಆಗಿದೆ. ಇವೆಲ್ಲದರಿಂದ ದೇವರು ಎಂಬ ಒಂದು ರಹಸ್ಯ ಶಕ್ತಿ ಇದೆ ಎಂದೇ ಅರ್ಥ ಆಗುತ್ತದೆ. ಅಷ್ಟೇ ಅಲ್ಲ ಈ ಚಳವಳಿಗೆ ದೈವೀಪ್ರೇರಣೆ ಇದೆ ಎಂಬುದೂ ತಿಳಿಯುತ್ತದೆ".

*(ಹರಿಜನ ೨೩-೩-೧೯೩೪)*

**ಅಥಣಿ:**

ಶೇಡಬಾಳದಿಂದ ಗಾಂಧೀಜಿ ಅಥಣಿಗೆ ಹೋದರು. ದಾರಿಯಲ್ಲಿ ಮಂಗಸೂಳಿಯ ಜನ ಸ್ವಾಗತ ಬಯಸಿ, ನಿಧಿಯನ್ನರ್ಪಿಸಿದರು. ಅಥಣಿಯ ಸಾರ್ವಜನಿಕ ಸಭೆಯಲ್ಲಿ, ಅಥಣಿಯ ಪೌರಸಭೆ, ತಾಲ್ಲೂಕು ಬೋರ್ಡು, ಬನಹಟ್ಟಿಯ ಸಾರ್ವಜನಿಕರೂ ಅಥಣಿಯ ಸಾರ್ವಜನಿಕರೂ ಬಿನ್ನವತ್ತಳೆಗಳನ್ನರ್ಪಿಸಿ, ನಿಧಿಗಳನ್ನು ಕೊಟ್ಟರು. ಸವರ್ಣ ಹಿಂದೂಗಳು ಅವರ್ಣರನ್ನು ಒಡಹುಟ್ಟುಗಳಂತೆ ನಡೆಸಿಕೊಳ್ಳಬೇಕು ಎಂದು ಹೇಳಿ, ತಮಗೆ ಅರ್ಪಿಸಿದ ವಸ್ತುಗಳನ್ನು ಹರಾಜು ಮಾಡಿದರು.

ಅಥಣಿಯಿಂದ ಬಿಜಾಪುರಕ್ಕೆ ಹೋಗುವಾಗ ದಾರಿಯಲ್ಲಿ ಹೊನವಾಡ, ತಿಕೋಟ, ತೊರವಿ ಮೊದಲಾದ ಊರುಗಳಲ್ಲಿ ಗಾಂಧೀಜಿಗೆ ಸ್ವಾಗತ ಬಯಸಿ ಅಲ್ಲಲ್ಲಿನ ಜನ ಕಾಣಿಕೆ ಕೊಟ್ಟರು.

ಬಿಜಾಪುರದಲ್ಲಿ ಪೌರಸಭೆಗೆ ಒಬ್ಬ ಮುಸಲ್ಮಾನ ಅಧ್ಯಕ್ಷ. ಆತ ಬಿನ್ನವತ್ತಳೆ ಓದುವಾಗ ಅದಿಲ್‌ಶಾಹಿ ರಾಜರು ಬಹಳ ಉತ್ತಮ ರಾಜರು. ಅರಮನೆಯ ನಡುವೆಯೇ ಒಂದು ಹಿಂದೂ ದೇವಾಲಯ ಇದೆ. ವಿಜಾಪುರ ಜಿಲ್ಲೆಯೇ ಬಸವೇಶ್ವರರ ಹುಟ್ಟು ಜಿಲ್ಲೆ. ಬಸವೇಶ್ವರರಂತೂ ಅಸ್ಪೃಶ್ಯತೆಯನ್ನು ಪೂರ್ಣವಾಗಿ ನಿರಾಕರಿಸಿಬಿಟ್ಟರು. ಆದ್ದರಿಂದ ಸವರ್ಣರ ನಡುವೆ ಹರಿಜನರು ವಾಸವಾಗಿದ್ದುದು, ಬ್ರಾಹ್ಮಣ ಕೇರಿಯ ನಡುವೆ ಹರಿಜನ ವಸತಿಗೃಹ ಇದ್ದುದು ಆಶ್ಚರ್ಯ ಎನಿಸಲಿಲ್ಲ. ಹರಿಜನ ಸೇವೆಗಾಗಿ ತನ್ನ ಬಾಳನ್ನು ಮುಡಿಪಿಟ್ಟು ಒಬ್ಬ ಬ್ರಾಹ್ಮಣ ಸುಧಾರಕ [ಕಾಕಾ ಕಾರಖಾನಿಸ] ಈ ವಸತಿಗೃಹವನ್ನು ನಡೆಸುತ್ತಿದ್ದಾನೆ.

*(ಪತ್ರಿಕಾ ವರದಿ)*

**ವಿಶ್ವ ಭ್ರಾತೃತ್ವದ ಕಡೆಗೆ :**

ಬಿಜಾಪುರದ ಸಾರ್ವಜನಿಕ ಸಭೆಯಲ್ಲಿ ಕೊಟ್ಟ ಬಿನ್ನವತ್ತಳೆಗಳಿಗೆ ಉತ್ತರವಾಗಿ ಅಸ್ಪೃಶ್ಯತಾ ನಿವಾರಣಾ ಚಳವಳಿ ವಿಶ್ವ ಭ್ರಾತೃತ್ವದ ಕಡೆಗೆ ಇಟ್ಟ ದೊಡ್ಡ ಹೆಜ್ಜೆ ಎಂದು ಗಾಂಧೀಜಿ ಹೇಳಿದರು. ಅಸ್ಪೃಶ್ಯತೆಯನ್ನು ಧರ್ಮ ಎಂದು ಕೋಟ್ಯಂತರ ಜನ ತಿಳಿದದ್ದು ಮಾನವ ಜಾತಿಯ ಭ್ರಾತೃತ್ವದ ದಿಶೆಯಲ್ಲಿ ದೊಡ್ಡ ಆತಂಕ ಎಂದರು. ಆದ್ದರಿಂದ ಸವರ್ಣ ಹಿಂದೂಗಳು ಪ್ರಾಮಾಣಿಕವಾಗಿ ತಾವೇ ತಾವಾಗಿ ಅಸ್ಪೃಶ್ಯತೆಯನ್ನು ಬಿಟ್ಟುಕೊಟ್ಟರೆ, ಮಾನವ ಜಾತಿಯ ಭ್ರಾತೃತ್ವ ಸಾಧನೆಯ ದೃಷ್ಟಿಯಿಂದ ಇತಿಹಾಸದ ಎಲ್ಲ ಕಾಲಕ್ಕಿಂತಲೂ

ಈ ಕಾಲ ಅನುಕೂಲ ಆಗಬಲ್ಲದು. ಈ ಚಳವಳಿ ರಾಜಕೀಯ ಉದ್ದೇಶದ್ದಲ್ಲ. ಇದು ಕೇವಲ ಆತ್ಮಶುದ್ಧಿಯ ಚಳವಳಿ. ಇಡೀ ಮಾನವ ಕುಟುಂಬದಲ್ಲಿ ಹಿಂದೂಗಳು ಒಂದು ಶಾಖೆ. ಇದಕ್ಕೆ ಅಸ್ಪೃಶ್ಯತೆಯ ಹುಳು ಹಿಡಿದಿದ್ದರೆ ಆ ಕೊಂಬೆ ಒಣಗಿ ಕಡಿದು ಬೀಳುವುದು ಖಂಡಿತ. ಒಂದು ವೇಳೆ ಅಸ್ಪೃಶ್ಯತೆಯನ್ನು ಕಳೆದುಕೊಂಡು, ಆ ಸಮಾಜ ಅಭಿವೃದ್ಧಿಗೊಂಡರೆ ಇಡೀ ಮಾನವ ಕುಟುಂಬದ ಆರೋಗ್ಯಕ್ಕೆ ಸಾಧಕ. ಆದ್ದರಿಂದಲೇ ನಾವು ಇದನ್ನು ಧಾರ್ಮಿಕ ಚಳವಳಿಯೆಂದು ಕರೆದದ್ದು. ಈ ಕಾರ್ಯದಲ್ಲಿ ಇಡೀ ಜಗತ್ತಿನ ನೆರವು ಅಗತ್ಯ ಎಂದು ಗಾಂಧೀಜಿ ಎಂದರು.

ಬಿಜಾಪುರದಲ್ಲಿ ಸನಾತನಿಗಳ ಜೊತೆ ಒಂದು ಚರ್ಚೆ ಆಯಿತು. ಸರ್ವಶ್ರೀ ಅನಂತಶಯನಾಚಾರ್ಯ ಡಂಬಳ, ಶ್ರೀನಿವಾಸಾಚಾರ್ಯ ಬುರ್ಲಿ ತಮ್ಮಣ್ಣಾಚಾರ್ಯ ಕಟ್ಟಿ, ಮೊದಲಾದವರು ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಇದೆ ಎಂದು ವಾದಿಸಿದರು. ಶ್ರುತಿ ಸ್ಮೃತಿಗಳಲ್ಲಿ ಪರಸ್ಪರ ಏಕವಾಕ್ಯತೆಯು ಇಲ್ಲದಿರುವುದನ್ನು ಗಾಂಧೀಜಿ ತೋರಿಸಿಕೊಟ್ಟು, ಸನಾತನಿಗಳ ಪರವಾಗಿ ಸುಧಾರಕರನ್ನು ಒಳಗೊಂಡು ಒಂದು ಪ್ರಾತಿನಿಧಿಕ ಪರಿಷತ್ತನ್ನು ಕರೆಯಬೇಕೆಂದು ಸೂಚಿಸಿದರು. ಅದಕ್ಕೆ ತಾವು ಬರುವುದಾಗಿ ತಿಳಿಸಿದರು.

ಬಿಜಾಪುರಕ್ಕೆ ಗಾಂಧೀಜಿ ಬರುವ ವೇಳೆಗೆ ಸರಿಯಾಗಿ ಶ್ರೀ ಶಂಕರಗೌಡರ ಅಧ್ಯಕ್ಷತೆಯಲ್ಲಿ ಒಂದು ಹರಿಜನ ಪರಿಷತ್ತು ನಡೆಯಿತು. ಅದರಲ್ಲಿ ಗಾಂಧೀಜಿ ಮಾತನಾಡಿ, ಹರಿಜನರಿಗೂ ಸವರ್ಣರಿಗೂ ಬುದ್ಧಿಯ ಮಾತನ್ನು ಹೇಳಿದರು. ಪೀರಶೈವರಿಗೆ ಎಲ್ಲರ ಜೊತೆ ಪ್ರೇಮದಿಂದ ನಡೆದುಕೊಂಡು, ತಾಳ್ಮೆಯಿಂದ ಇರಬೇಕೆಂದು ಬುದ್ಧಿ ಹೇಳಿದರು. ದೇವರೇ ಪತಿತೋದ್ಧಾರಕ ಎಂದು ಹೇಳಿದರು. ಹರಿಜನರ ಒಳಪಂಗಡಗಳ ಪರಸ್ಪರ ಅಸ್ಪೃಶ್ಯತೆ ನಿಲ್ಲಬೇಕೆಂದೂ, ಸಾರ್ವಜನಿಕ ಜಲಾಶಯಗಳಲ್ಲಿ ಎಲ್ಲರಿಗೂ ಸಮಾನಹಕ್ಕು ಇರಬೇಕೆಂದು ಸತ್ತ ದನದ ಮಾಂಸ ತಿನ್ನಬಾರದೆಂದೂ, ಹೆಂಡವನ್ನು ಕುಡಿಯಬಾರದೆಂದೂ ಪರಿಷತ್ತಿನಲ್ಲಿ ತೀರ್ಮಾನಗಳಾದವು.

ಬಿಜಾಪುರಕ್ಕೆ ಸುತ್ತಲಿನ ಊರುಗಳಿಂದ ಜನರು ಗಾಂಧೀ ದರ್ಶನಾರ್ಥ ಬಂದರು. ನಗರಸಭೆಯ ಪರ, ಜಿಲ್ಲಾ ಲೋಕಲ್ ಬೋರ್ಡಿನ ಪರ, ಸಾರ್ವಜನಿಕರ ಪರ, ಬಿನ್ನವತ್ತಳೆಗಳನ್ನು ಅರ್ಪಿಸಿದರು. ದೇವಾಂಗ ಸಮಾಜದ ಪರವಾಗಿ ಒಂದು ಬಿನ್ನವತ್ತಳೆಯನ್ನರ್ಪಿಸಿದರು. ಅದರಲ್ಲಿ ಗಾಂಧೀಜಿಯೂ ದೇವಾಂಗದವರೇ ಎಂದು ಹೇಳಿತ್ತು. ಗಾಂಧೀಜಿ ಎಲ್ಲಕ್ಕೂ ಉತ್ತರಕೊಟ್ಟು, ಅಂತಃಕರಣ ಶುದ್ಧಿಯ ಅವಶ್ಯಕತೆಯನ್ನು ಒತ್ತಿ ಹೇಳಿದರು. ಒಂದು ಕೋಟಿ ಜನ ದೇವಾಂಗದವರು ಇದ್ದಾರೆ. ಅವರ ಕೈಮಗ್ಗದ ಉದ್ಯೋಗಕ್ಕೆ ಗುಟುಕು ನೀರು ಆಗಿದೆ. ತಾವೂ ಸ್ವತಃ ನೇಕಾರರು ಆಗಿದ್ದರಿಂದ ದೇವಾಂಗದವರ ಕಷ್ಟಗಳೆಲ್ಲವೂ ತಮಗೆ ಗೊತ್ತು. ಖಾದಿಯೇ ಇದಕ್ಕೆ ಮದ್ದು. ಪಟ್ಟಣಿಗರು ಖಾದಿಯನ್ನು ಉಪಯೋಗಿಸದಿದ್ದರೆ, ಹಳ್ಳಿಯ ಹರಿಜನರು ನಿರುದ್ಯೋಗಿಗಳಾಗುತ್ತಾರೆ. ಹರಿಜನ ಸೇವೆಗೂ ಖಾದಿಗೂ ಈ ರೀತಿ ನಂಟು ಎಂದು ಹೇಳಿದರು.

ಸಭೆ ಮುಗಿದ ಮೇಲೆ ಗಾಂಧೀಜಿ ವೇದಿಕೆಯಿಂದ ಮೆಟ್ಟಿಲಿನ ಮೇಲೆ ಇಳಿಯಲಿಲ್ಲ. ಪಕ್ಕದಿಂದ ಇಳಿದರು. ವೇದಿಕೆ ತುಂಬಾ ಎತ್ತರ. ಸಭೆಯಲ್ಲಿದ್ದ ಒಬ್ಬ ಜರ್ಮನ್ ಸುದ್ದಿಗಾರ ಇದನ್ನು ನೋಡಿ ಮೆಟ್ಟಲಿನ ಬದಲು ತಾನೇ ತನ್ನ ಬೆನ್ನಿನ ಮೇಲೆ ಗಾಂಧೀಜಿಯ ಕಾಲನ್ನಿರಿಸಿಕೊಂಡು ಅವರನ್ನು ಇಳಿಸಿದ.

**ಸಮಾರೋಪ :**

ಬಿಜಾಪುರದಿಂದ ಹೈದರಾಬಾದಿಗೆ ಗಾಂಧೀಜಿ ಹೋದರು. ಅಲ್ಲಿ "ಸ್ವರ್ಣ ದೆಹಲಿ" (Golden Thershold)ಯಲ್ಲಿ ಇಡೀ ದಿನ ಕಾಲ ಕಳೆದರು. ಗಾಂಧೀಜಿ ಬರುತ್ತಾರೆ ಎಂಬ ಸುದ್ದಿ ಕೇಳಿ-ಶ್ರೀಮತಿ ಸರೋಜಿನಿದೇವಿ, ಮೈ ಸ್ವಸ್ಥವಿಲ್ಲದಿದ್ದರೂ ಗಾಂಧೀಜಿ ಯವರನ್ನು ಸ್ವಾಗತಿಸಲು ಬೊಂಬಾಯಿಯಿಂದ ಬಂದಿದ್ದರು. ಮಧ್ಯಾಹ್ನ ಒಂದು ಮಹಿಳೆಯರ ಸಭೆ ಸಂಜೆಗೆ ಒಂದು ಸಾರ್ವಜನಿಕ ಸಭೆ. ಸಭೆ ಮುಗಿದ ಮೇಲೆ ಸರೋಜಿನಿದೇವಿಯ ಕೈತೋಟದಲ್ಲಿ ಒಂದು ಮಾವಿನ ಮರವನ್ನು ನೆಟ್ಟು ಅದರ ಹಾಗೆಯೇ ಅವರ ಮನೆತನದ ಸಾರ್ವಜನಿಕ ಸೇವೆ ವೃದ್ಧಿಗೊಳ್ಳಲಿ ಎಂದು ಹಾರೈಸಿದರು.. ಅಂದಿಗೆ ಅವರ ಹರಿಜನ ಪ್ರವಾಸ ಮುಗಿಯಿತು.

ಸಂತ್ರಸ್ತ ಬಿಹಾರವನ್ನು ಸಂತೈಸಲು ಗಾಂಧೀಜಿ ಹೊರಟು ಹೋದರು. ಕರ್ನಾಟಕದ ಸಂಚಾರವನ್ನು ಮುಗಿಸಿಕೊಂಡು, ಬಿಜಾಪುರವನ್ನು ಬಿಟ್ಟು ಹೊರಡುವ ವೇಳೆಗೆ ಕರ್ನಾಟಕ ಪ್ರಾಂತೀಯ ಹರಿಜನ ಸೇವಕ ಸಂಘದ ಅಧ್ಯಕ್ಷರಾದ ಶ್ರೀ ವೀರಣ್ಣಗೌಡ ಪಾಟೀಲರು ಕನ್ನಡಿಗರಿಗೆ ಒಂದು ಸಂದೇಶವನ್ನು ಕೊಡುವಂತೆ ಗಾಂಧೀಜಿಯನ್ನು ಬೇಡಿಕೊಂಡರು. ಅದರಂತೆ ಗಾಂಧೀಜಿ ಮುಂದಕ್ಕೆ ಬಿಹಾರಕ್ಕೆ ಹೋದಾಗ ಅದನ್ನು ಕಳುಹಿಸಿದರು.

*ಪ್ರದರ್ಶನ ಬೀದಿ. ಪಾಟಣಾ, ಮಾರ್ಚ್ ೨೩. ೧೯೩೪.*

*ಪ್ರಿಯ ಪಾಟೀಲರೆ,*

*ಇಂದಿನವರೆಗೆ ಕಳುಹದೆ ಉಳಿದ ಸಂದೇಶವು ಇಲ್ಲಿದೆ.*

*"ಕರ್ನಾಟಕ ಪ್ರಾಂತವನ್ನು ಸಂದರ್ಶಿಸಿ. ಅಲ್ಲಿಯ ಜನರು ಅಸ್ಪೃಶ್ಯತೆಯನ್ನು ಬೇರುಸಹಿತವಾಗಿ ಕಿತ್ತೊಗೆಯಲು ಸಜ್ಜಾಗಿರುವುದನ್ನು ನಾನು ಕಾಣುವಂತಾದುದಕ್ಕಾಗಿ. ನನಗೆ ಬಹಳ ಸಂತೋಷವಾಗಿದೆ. ಅಸ್ಪೃಶ್ಯತಾ ನಿವಾರಣೆಗೆ ಅನುಕೂಲವಾಗಿ ದಿನಾಲು ಬೆಳೆಯುತ್ತಿರುವ ಭಾವನೆಯನ್ನು ವಿಧಾಯಕ ಕಾರ್ಯವಾಗಿ ಮಾರ್ಪಡಿಸಿಕೊಳ್ಳುವ ಸತ್ಯನಿಷ್ಠ ಮತ್ತು ಉತ್ಸಾಹಶಾಲಿ ಕಾರ್ಯಕರ್ತರು ಕರ್ನಾಟಕದಲ್ಲಿ ಹುಟ್ಟುವರೆಂದು ಹಾರೈಸುತ್ತೇನೆ"*

*(ಪತ್ರಿಕಾ ವರದಿ)*

*ಎಂ.ಕೆ.ಗಾಂಧಿ*

❑

## ಅಧ್ಯಾಯ ೫



# ದ್ವಿತೀಯ ಹರಿಜನ ಪ್ರವಾಸ (೧೯೩೬)

೧೯೩೬-ಜೂನ್ ತಿಂಗಳು ೧೦, ೧೧, ೧೨, ೧೩ ನಾಲ್ಕುದಿನ ಬೆಂಗಳೂರಿನ ಬಳಿಯ ಕೆಂಗೇರಿ ಆಶ್ರಮದಲ್ಲಿ ದಕ್ಷಿಣ ಭಾರತದ ಹರಿಜನ ಕಾರ್ಯಕರ್ತರ ಸಮ್ಮೇಳನ ನಡೆಯಬೇಕಾಗಿತ್ತು. ಆ ಕಾರಣದಿಂದಲೂ ಬೆಂಗಳೂರಿಗೆ ಬರಬೇಕು ಎಂಬ ಕಾರಣದಿಂದಲೂ ಗಾಂಧೀಜಿ ಮೇ ತಿಂಗಳ ೧೦ನೇ ತಾರೀಖು ನಂದೀಬೆಟ್ಟಕ್ಕೆ ಬಂದರು. ಗಾಂಧೀಜಿ ಕಸ್ತೂರಬಾ ಇಬ್ಬರೂ ಮದರಾಸಿನಿಂದ ಬಂದರು. ವಲ್ಲಭಬಾಯಿ, ಮಹಾದೇವ ದೇಸಾಯಿ, ಮಣಿಬೆನ್ ಅವರು ಬೊಂಬಾಯಿಯಿಂದ ಬಂದರು. ಕುಮಾರಾ ಪಾರ್ಕಿನಲ್ಲಿ ಎಲ್ಲರೂ ಕಲೆತರು. ಒಂದು ಗಳಿಗೆ ಇದ್ದು, ಅಲ್ಲಿಂದ ಮುಂದೆ ಎಲ್ಲರೂ ನಂದೀಬೆಟ್ಟಕ್ಕೆ ಹೋದರು.

ಗಾಂಧೀಜಿ ನಂದಿಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಕ್ರಾಂತಿಕಾರಿ ನೀಲಕಂಠ ಬ್ರಹ್ಮಚಾರಿಗಳ ಪರಿಚಯ ಆಯಿತು. ಆಗ ಇವರನ್ನು ಸದ್ಗುರು ಓಂಕಾರ ಸ್ವಾಮಿ ಎಂದು ಕರೆಯುತ್ತಿದ್ದರು. ನೀಲಕಂಠ ಬ್ರಹ್ಮಚಾರಿಗಳು ಅಪ್ಪಟ ಕ್ರಾಂತಿಕಾರಿಗಳು ಆಷ್ ಕೊಲೆ ಮೊಕದ್ದಮೆಯಲ್ಲಿ ಅವರೇ ಪ್ರಮುಖ ನಾಯಕರು. ಶ್ರೀ ವಲ್ಲಭಬಾಯಿ ಪಟೇಲ, ಮಹಾದೇವಿ ದೇಸಾಯಿ, ಶ್ರೀ ಕುಮಾರಪ್ಪ ಎಲ್ಲರೂ ಗಾಂಧೀಜಿಯ ಜೊತೆಗೆ ನಂದೀಬೆಟ್ಟದಲ್ಲಿದ್ದರು. ಕುಮಾರಪ್ಪನವರು, ಸರದಾರರು, ಮಹಾದೇವ ಭಾಯಿಯೂ ನಂದೀಬೆಟ್ಟ ಇಳಿದು ಪಕ್ಕದ ಚೆನ್ನಗಿರಿ ಬೆಟ್ಟಕ್ಕೆ ಹೋಗಿ ಓಂಕಾರ ಸ್ವಾಮಿಗಳ ದರ್ಶನ ಪಡೆದು ಬಂದರು. ಇವರೆಲ್ಲರೂ ಹೋಗಿ ಬಂದು ಸ್ವಾಮಿಗಳ ಬಗ್ಗೆ ವರದಿ ಮಾಡಿದ್ದರಿಂದ, ಅವರಿಗೂ ಸ್ವಾಮಿಗಳನ್ನು ನೋಡುವ ಬಯಕೆ ಆಯಿತು. ಈ ಸುದ್ದಿ ಸ್ವಾಮಿಗಳಿಗೆ ತಿಳಿಯಿತು.

**ಓಂಕಾರ ಸ್ವಾಮಿಗಳು :**

ಈ ಸುದ್ದಿ ತಿಳಿದಕೂಡಲೇ ಓಂಕಾರ ಸ್ವಾಮಿಗಳು ನಂದೀಬೆಟ್ಟಕ್ಕೆ ಗಾಂಧೀಜಿಯನ್ನು

ನೋಡಲು ಬಂದರು. ಆವತ್ತು ಮೇ ತಿಂಗಳ ೩೦ನೇ ತಾರೀಖು. ಗಾಂಧೀಜಿ ಸಂಗಡ ಎರಡು ಗಂಟೆಗಳ ಕಾಲ ಓಂಕಾರ ಸ್ವಾಮಿಗಳು ಮಾತನಾಡಿದರು. ಮಾತನಾಡಿದ ವಿಷಯದ ಬಗ್ಗೆ ಹೇಳಬೇಕಾದ್ದೇ ಇಲ್ಲ. ಆತ್ಮವಿದ್ಯೆಯ ಬಗ್ಗೆ ಮಾತನಾಡಿದರು. ಮನುಷ್ಯನ ಮನಸ್ಸು ಸುಮ್ಮನೆ ತೂಗಾಡುತ್ತಿರುತ್ತದೆ. ಈ ಹೊಯ್ದಾಟವನ್ನು ತಪ್ಪಿಸಿ, ಮನಸ್ಸನ್ನು ಹೇಗೆ ನಿಯಂತ್ರಿಸಬೇಕು? ಮನುಷ್ಯನ ಮೂಲಭೂತ ಸಮಸ್ಯೆ ರಾಜಕೀಯವೂ ಅಲ್ಲ, ಸಾಮಾಜಿಕವೂ ಅಲ್ಲ, ಆರ್ಥಿಕ ಅಂತೂ ಅಲ್ಲವೇ ಅಲ್ಲ; ಮನುಷ್ಯನ ಮೂಲಭೂತ ಸಮಸ್ಯೆ ಮಾನಸಿಕ ಮುಂತಾದ ಎಲ್ಲ ವಿಷಯಗಳನ್ನು ಚರ್ಚೆ ಮಾಡಿದರು. ಈ ಚರ್ಚೆಯ ಬಗ್ಗೆ ಪ್ರಚಾರ ಆಗಬೇಕಾಗಿಲ್ಲ ಎಂದು ಸ್ವಾಮಿಗಳು ಗಾಂಧೀಜಿಗೆ ಸೂಚನೆ ಕೊಟ್ಟರು. ಗಾಂಧೀಜಿ ಕೂಡ ಇದನ್ನು ಪ್ರಕಟಿಸಬೇಡಿ ಎಂದು ವರದಿಗಾರರನ್ನು ಬೇಡಿಕೊಂಡರು. ಮನಸ್ಸಿಲ್ಲದಿದ್ದರೂ ವರದಿಗಾರರು ಅದಕ್ಕೊಪ್ಪಿಕೊಂಡರು. 'ಹರಿಜನ'ದಲ್ಲಿ ಕೂಡ ಇದರ ಪ್ರಸ್ತಾಪ ಬರಲಿಲ್ಲ.

ಮೇ ತಿಂಗಳ ಕಟ್ಟಕಡೆಯಲ್ಲಿ ವಲ್ಲಭಬಾಯಿ, ಮಹಾದೇವಭಾಯಿ, ಕುಮಾರಪ್ಪ ಮೂವರೂ ಚಿಕ್ಕಬಳ್ಳಾಪುರಕ್ಕೆ ಬಂದರು. ಅಲ್ಲಿ ಪೌರಸಭೆಯ ಉಪಾಧ್ಯಕ್ಷರೂ, ಅಧಿಕಾರಿಗಳು ಅವರನ್ನು ಬರಮಾಡಿಕೊಂಡರು. ಊರಿನಲ್ಲೆಲ್ಲ ಸುತ್ತಾಡಿ, ಊರಿನ ಅಭಿವೃದ್ಧಿಗೆ ಕೆಲವು ಸಲಹೆಗಳನ್ನು ಕೊಟ್ಟರು.

**ಚಿಕ್ಕ ಪ್ರವಾಸ :**

ಕೋಲಾರ ಜಿಲ್ಲಾ ಬೋರ್ಡಿನ ಅಧ್ಯಕ್ಷರು ಶ್ರೀ ಚಂಗಲರಾಯ ರೆಡ್ಡಿ ಗಾಂಧೀಜಿಯನ್ನು ನಂದೀಬೆಟ್ಟದಲ್ಲಿ ಕಂಡು, ತಮ್ಮ ಜಿಲ್ಲೆಯಲ್ಲಿ ಪ್ರವಾಸ ಮಾಡಲು ಬೇಡಿಕೊಂಡರು. ನಂದೀಬೆಟ್ಟವನ್ನಿಳಿದು ಬೆಂಗಳೂರಿಗೆ ಬರುವ ಮುನ್ನ ಕೋಲಾರ ಜಿಲ್ಲೆಯಲ್ಲಿ ಕೆಲವು ಸ್ಥಳಗಳನ್ನು ಗಾಂಧೀಜಿ ನೋಡಿ ಬಂದರು. ಚಂಗಲರಾಯರೆಡ್ಡಿಯವರು ಜಿಲ್ಲಾ ಬೋರ್ಡ ಅಧ್ಯಕ್ಷರಲ್ಲದೆ, ಜಿಲ್ಲಾ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿದ್ದರು. ಗಾಂಧೀಜಿ ಸಂಸ್ಥಾನಕ್ಕೆ ಬಂದಿದ್ದಾರಲ್ಲ, ಹರಿಜನ ನಿಧಿಗಾಗಿ ಕೆಲವು ಹಣ ಸಂಗ್ರಹಿಸೋಣ ಎಂದು ಯೋಜನೆ ಮಾಡಿದರು. ಒಂದು ಸಾವಿರ ರೂಪಾಯಿ ಸಂಗ್ರಹಿಸುವ ಯೋಜನೆಯನ್ನು ರೆಡ್ಡಿ ಇಟ್ಟುಕೊಂಡಿದ್ದರು. ಆದರೆ ಒಂದು ಸಾವಿರದ ಆರುನೂರು ರೂಪಾಯಿಗಳು ವಸೂಲಾಯಿತು. ಗಾಂಧೀಜಿಯನ್ನು ನೋಡಲು ಬಂದ ಸಂಖ್ಯೆಗೆ ಆವರಲ್ಲಿ ಕಾಣಬಂದ ಉತ್ಸಾಹಕ್ಕೆ ಈ ನಿಧೀ ಅನುಗುಣವೇನಲ್ಲ. ಗಾಂಧೀಜಿ ಹೋದ ಎಲ್ಲ ಕಡೆಗಳಲ್ಲೂ ಹಿಂದಿಯಲ್ಲಿಯೇ ಮಾತನಾಡಿದರು. ಕನ್ನಡಕ್ಕೆ ಅವರ ಭಾಷಣ ಪರಿವರ್ತನವಾಯಿತು. ಒಂದು ಕಡೆಯಲ್ಲಂತೂ ಸಬ್ ಡಿವಿಜನ್ ಅಧಿಕಾರಿ ಇಸ್ಮೈಲ್ ಶರೀಫರನ್ನೇ ಭಾಷಾಂತರ ಮಾಡಲು ಗಾಂಧೀಜಿ ಕೇಳಿದರು. ಒಂದು ಸ್ಥಳದಲ್ಲಿ ಯಾರೂ ಭಾಷಾಂತರಮಾಡಲು ಬರಲೇ ಇಲ್ಲ. ಶ್ರಮಜೀವಿಗಳ ವರ್ಗ ಹಿಂದಿಯನ್ನು ಅರ್ಧಮರ್ಧ ಅರ್ಥ ಮಾಡಿ ಕೊಳ್ಳುತ್ತದೆ. ಹರುಕು ಮುರುಕು ಭಾಷೆಯನ್ನು ಆಡುತ್ತದೆ. ಇಷ್ಟಾದರೂ ಮೇಲಿನ ವರ್ಗದ ಜನ ಎನಿಸಿಕೊಂಡವರಿಗೆ ಹಿಂದೀ ಅರ್ಥ ಆಗುವದೇ ಇಲ್ಲ. ಇದಕ್ಕೆ ಕಾರಣ

ಸುಸ್ಪಷ್ಟ. ಶ್ರಮಜೀವಿ ವರ್ಗದ ಭ್ರಾತೃತ್ವ ಸಾಧನೆಗೆ ಹಿಂದೀ ಒಂದು ಪ್ರಬಲ ಸಾಧನ. ಭಾಷೆಯ ಬೇಲಿಯನ್ನು ಅದು ಮುರಿದು ಹಾಕುತ್ತದೆ. ಮನೆಯಲ್ಲಿ ಕುಳಿತು, ಕೂಪಸ್ಥ ಕೂರ್ಮಗಳ ಹಾಗೆ ಇರುವ ಜನಕ್ಕೆ ತಮ್ಮ ಭಾಷೆ ಬಿಟ್ಟು ಬೇರೆ ಯಾವ ಭಾಷೆಯೂ ಅರ್ಥ ಆಗುವುದಿಲ್ಲ. ಹಿಂದೀ-ಹಿಂದೂಸ್ಥಾನಿಯಿಂದ ಕನ್ನಡಕ್ಕೆ ಧಕ್ಕೆ ತಗಲಬಹುದು ಎಂಬ ಕೂಗು ಮಧ್ಯಮ ವರ್ಗದ ಮನೆಯಲ್ಲೇ ಕುಳಿತಿರುವವರ ಕೂಗು. ಮೊದಲಿನ ಹಾಗೆ ಹೆಂಗಸರು ಮನೆಯಲ್ಲೇ ಕುಳಿತಿರುವದಿಲ್ಲ. ಹಿಂದೀಯನ್ನು ಬೇಗ ಎಂದರೆ ಇಂಗ್ಲಿಷ್‌ಗಿಂತ ಬೇಗ ಸುಲಭವಾಗಿ ಕಲಿಯಬಹುದು ಎಂದು ಹೆಂಗಸರ ಅನುಭವ ಆಗಿದೆ. ಈಗ ಅವರಿಗೆ ಹಿಂದೀ ಭಾಷೆಯ ಬೆಲೆ ಅರಿವಾಗುತ್ತಿದೆ. ಹಿಂದೀ ಪ್ರಚಾರದ ಕೆಲಸ ದಿನೇ ದಿನೇ ಬೆಳೆಯುತ್ತಿದೆ. ಮೊನ್ನೆ ಮೊನ್ನೆ ದೊಡ್ಡಬಳ್ಳಾಪುರದಲ್ಲಿ ಹಿಂದೀ ತರಗತಿಯೊಂದನ್ನು ಉದ್ಘಾಟಿಸಲು ಕಾಕಾ ಸಾಹೇಬರನ್ನು ಕರೆಸಿದ್ದರು. ಅಲ್ಲಿಗೆ ಹೋದಾಗ ಗಾಂಧೀಜಿ ಹಾಗೂ ಅವರ ಸಂಗಡಿಗರನ್ನು ಸ್ವಾಗತಿಸಿದ ಹೆಂಗಸರಲ್ಲಿ ಯಾರಿಗೂ ಇಂಗ್ಲಿಷ್ ಗೊತ್ತಿರಲಿಲ್ಲ. ಕೆಲವರಿಗೆ ಒಂದೋ ಎರಡೋ ಹಿಂದೀ ಶಬ್ದ ಗೊತ್ತಿತ್ತು. ಗಾಂಧೀಜಿಯ ಪರಿವಾರದ ಜೊತೆಯಲ್ಲಿ ಅವರ ಮೋಟಾರಿನಲ್ಲಿಯೇ ಸ್ವಲ್ಪ ದೂರ ಬಂದ ಶ್ರೀಮತಿ ಅನ್ನಪೂರ್ಣಮ್ಮನವರಿಗೆ ಅವರ ಹಿಂದೀ ಪ್ರಶ್ನೆಗಳೆಲ್ಲವೂ ಚೆನ್ನಾಗಿ ಅರ್ಥವಾಗುತ್ತಿದ್ದವು. ಸಂತೋಷದಿಂದ ಆಕೆ ತನ್ನ ಹರುಕು ಮುರುಕು ಹಿಂದೀಯಲ್ಲಿ ಹೇಳಿದಳು: "ನನ್ನ ಗಂಡ ಇಲ್ಲಿ ವಕೀಲರಾಗಿದ್ದಾರೆ. ನನ್ನ ತಂದೆ ತಾಯಿ ಗುಂಟೂರಿನಲ್ಲಿ ಇದ್ದಾರೆ. ನಾನು ಹಿಂದೀಯನ್ನು ಶಾರದಾನಿಕೇತನದಲ್ಲಿ ಕಲಿತೆ. ಕಲಿಯದೇ ಇದ್ದಿದ್ದರೆ, ನೀವು ಹೇಳುವ ಮಾತು ನನಗೆ, ನಾನು ಹೇಳುವ ಮಾತು ನಿಮಗೆ ಸ್ವಲ್ಪವೂ ಅರ್ಥವಾಗುತ್ತಿರಲಿಲ್ಲ"

**ಬಂಗಾರುಪೇಟೆಯಲ್ಲಿ :**

ಬಂಗಾರದ ಗಣಿ ಪ್ರದೇಶಕ್ಕೆ ಗಾಂಧೀಜಿಯ ಭೇಟಿ ತುಂಬ ಚಿಕ್ಕದಾಗಿತ್ತು. ಅಷ್ಟು ಸ್ವಲ್ಪ ಕಾಲದಲ್ಲಿ ಅಲ್ಲಿನ ಕೂಲಿಗಾರರ, ಅದರಲ್ಲೂ ಗಣಿ ಕೂಲಿಗಾರರ ವಿಶಿಷ್ಟ ಪರಿಸ್ಥಿತಿಯನ್ನು ಅರಿತುಕೊಳ್ಳಲು ಸಾಧ್ಯವಾಗಲಿಲ್ಲ. ಅವರು ಪಡುವ ಕಷ್ಟ, ಅವರ ಜೀವನದ ಸಂಕಟ ಎಲ್ಲವನ್ನು ಅರಿತುಕೊಳ್ಳಲು ಕೆಲವರು ದಿನ ಅವರ ಜೊತೆಯಲ್ಲಿರಬೇಕು. ಆದರೂ ಸುಮ್ಮನೇ ಓಡಿಹೋಗಿ ಓಡಿಬಂದರೂ ಕೂಡ ಅವರ ವಸತಿಗೆ ಹೋದಾಗ, ದೀಪ ನೀರು ಎಷ್ಟೇ ಒದಗಿಸಿ ಕೊಟ್ಟಿದ್ದರೂ ಅವರು ವಾಸವಾಗಿದ್ದ ಮನೆಗಳು ಮನುಷ್ಯ ನಿವಾಸಕ್ಕೆ ಯೋಗ್ಯವಾಗಿರಲಿಲ್ಲ ಎಂದು ಗಾಂಧೀಜಿಗೆ ತಿಳಿಯಿತು. ಎಷ್ಟೇ ದಯಾ ಪೂರ್ಣರು ಆಗಿದ್ದರೂ ಆ ಕೂಲಿಗಾರರ ಪರಿಸ್ಥಿತಿ ಅರ್ಥವಾಗಬೇಕಾದರೆ ನಾವು ಅವರ ಸ್ಥಾನದಲ್ಲಿ ಇರುವ ಹಾಗೆ ಭಾವಿಸಿಕೊಳ್ಳಬೇಕು. ನಾವು ಯಾರ ಶ್ರಮದ ಮೇಲೆ ಆಧಾರ ಪಡುತ್ತೇವೆಯೋ ಅವರ ಬದುಕು ಹೇಗೆ ನಡೆಯುತ್ತ ಇದೆ; ತೃಪ್ತಿಕರವೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಒಂದೇ ವಿಧಾನ ಇದೆ. ನಾವೇ ಅವರ ಸ್ಥಾನದಲ್ಲಿ ಇದ್ದಿದ್ದರೆ ಎಷ್ಟು ಹೊತ್ತು ಇಲ್ಲಿ ಇರಬಹುದಾಗಿತ್ತು?

ಗಾಂಧೀಜಿ ಕೂಲಿಗಾರರ ಪ್ರಚಂಡ ಸಭೆ ಒಂದರಲ್ಲಿ ಭಾಷಣ ಮಾಡಿದರು. ಕೆಲವೇ ನಿಮಿಷ ತಾವು ಹೋಗಿ ಬಂದ ಗುಡಿಸಲುಗಳನ್ನು ನೋಡಿ, ಅವು ಬಹಳ ಚಿಕ್ಕವು, ಛಾವಣಿ ತುಂಬಾ ತಗ್ಗು. ಸಾಕಷ್ಟು ಬೆಳಕಿಲ್ಲ. ಮನುಷ್ಯ ನಿವಾಸಕ್ಕೆ ಯೋಗ್ಯ ಅಲ್ಲ ಎನಿಸಿತು ಎಂದರು. ಕೆಲಸಗಾರರು ತರಬೇತಿ ಪಡೆದು ಜಾಣತನದಿಂದ ಒಟ್ಟಾಗಿ ಕೆಲಸಮಾಡಿದರೆ, ಎಷ್ಟುಮಟ್ಟಿಗೆ ತಾವು ಕೆಲಸ ಮಾಡಿಕೊಳ್ಳಬಹುದು ಎಂಬುದನ್ನು ತಿಳಿಸಿದರು. ಅವರು ತೋಡಿ ತೆಗೆಯುತ್ತಿದ್ದ ಬಂಗಾರದ ಅದಿರಿಗಿಂತ ಅವರ ಶ್ರಮ ಹೆಚ್ಚು ಅಮೂಲ್ಯ. ಕೆಲಸಗಾರನ ಸ್ಥಾನ ಮಾನಗಳನ್ನು ಅರಿತುಕೊಂಡು, ತಮ್ಮಂತೆಯೇ ಅವರನ್ನು ನೋಡದಿದ್ದರೆ ಕೆಲಸಗಾರರು ತಮ್ಮ ಕರಾರುಗಳನ್ನು ಒತ್ತಾಯ ಮಾಡುವ ಕಾಲ ಬೇಗ ಬಂದೀತು ಎಂದು ಮಾಲೀಕರಿಗೆ ಎಚ್ಚರಿಕೆ ಇತ್ತರು ಗಾಂಧೀಜಿ. ಅಹಮದಾಬಾದಿನ ಗಿರಣಿ ಮಾಲೀಕರಿಗೆ ತಾವು ಹೇಳಿದ ವಿಶ್ವಸ್ತತನದ ಸಿದ್ಧಾಂತವನ್ನು ಇಲ್ಲಿ ಮತ್ತೆ ಮಂಡಿಸಿದರು. ಕೆಲಸಗಾರರು ತಮ್ಮ ಹಕ್ಕುಗಳನ್ನು ಎಷ್ಟು ಒತ್ತಾಯ ಮಾಡಿದರೂ, ತಮ್ಮ ಕರ್ತವ್ಯವನ್ನು ಮರೆಯಬಾರದು, ಈ ಗಣಿಗಳು ತಮ್ಮ ಸ್ವಂತದ್ದು ಎಂದು ತಿಳಿದು ದುಡಿಯಬೇಕು. ಹೆಂಡ ಜೂಜು ಮುಂತಾದ ಕೆಟ್ಟ ಚಾಳಿಗಳನ್ನು ಎಲ್ಲರೂ ಬಿಡಬೇಕು, ಎಂದು ಗಾಂಧೀಜಿ ಹೇಳಿದರು.

**ಖಾದಿ :**

ಖಾದಿ ಎಷ್ಟು ನಿರೀಕ್ಷಿಸಬಹುದೋ ಅಷ್ಟು ಪ್ರಗತಿ ಹೊಂದಿಲ್ಲ ಎಂಬುದು ಗಾಂಧೀಜಿಗೆ ಗೊತ್ತಾಯಿತು. ಸರಕಾರ ಖಾದಿಗೆ ಪೋಷಣೆ ಕೊಡುತ್ತಿದೆ. ಖಾದಿ ಧಾರಣೆಗೆ ಯಾವ ಅಡ್ಡಿಯೂ ಇಲ್ಲ, ಅಷ್ಟೇ ಅಲ್ಲ-ಸರಕಾರವೇ ಬದನವಾಳದಲ್ಲಿ ಒಂದು ಖಾದಿ ಕೇಂದ್ರ ನಡೆಸುತ್ತಿದೆ. ಅದು ಅಭಿವೃದ್ಧಿಯೂ ಆಗುತ್ತಿದೆ. ೧೯೩೪-೩೫ ವರದಿ ಒಂದನ್ನು ಸರಕಾರ ಪ್ರಕಟಿಸಿದರೆ ಸ್ವಸಂಪೂರ್ಣತೆಯ ಪ್ರಯೋಗ ನಡೆಸಲು ಈ ಕೇಂದ್ರ ಸ್ಥಾಪಿತವಾಯಿತು. ನೂಲುವವರನ್ನು ತಮ್ಮ ನೂಲಿನ ಆದಾಯದಲ್ಲಿ ಖಾದಿ ಕೊಂಡುಕೊಳ್ಳುವಂತೆ ಕೇಳಿದರು. ಈ ಯೋಜನೆ ಯಶಸ್ವಿಯಾಯಿತು. ನಮ್ಮ ನಿರೀಕ್ಷೆಗಿಂತಲೂ ಹೆಚ್ಚು ಸಫಲವಾಯಿತು ಎನ್ನುತ್ತದೆ ವರದಿ. ಒಂದು ವರ್ಷದಲ್ಲಿ ೪೫,೮೧೭ ರೂಪಾಯಿನ ಖಾದಿ ಮಾರಾಟ ಆಯಿತು. ನೂಲುವವರಿಗೆ ಮಾರಿದ ಖಾದಿಯೇ ೯,೭೯೪ ರೂಪಾಯಿ ಆಯಿತು. ಬದನವಾಳದಲ್ಲಿ ಆಗ ೩೭೪ ನೂಲುವ ಕುಟುಂಬಗಳಿಗೆ ಕೆಲಸ ದೊರೆಯುತ್ತಿತ್ತು. ಸುಮಾರು ೨,೬೦೦ ಜನ ನೂಲುವವರುಈ ಕೇಂದ್ರದ ಸುತ್ತ ಮುತ್ತ ಇದ್ದರು. ತಲೆಗೆ ಐದು ರೂಪಾಯಿ ವರಮಾನ ಎಂದು ಹಿಡಿದರೂ ೧೩,೦೦೦ ರೂಪಾಯಿನ ಖಾದಿಮಾರಾಟ ಹಳ್ಳಿಗಳಲ್ಲಿ ಆಗಬೇಕು.

ಇದೆಲ್ಲ ಸರಿಯೇ. ಇಷ್ಟಿದ್ದರೂ, ಸರಕಾರದ ಸಹಾಯ ಇದ್ದರೂ ಏಕೆ ಖಾದಿ ಸರ್ವವ್ಯಾಪಿ ಆಗಿಲ್ಲ? ಸೇವಕರೂ ಮುಂತಾದವರಿಗೆ ಸರಕಾರ ಸಮವಸ್ತ್ರಕ್ಕಾಗಿ ಖಾದಿ ಕೊಂಡುಕೊಳ್ಳುತ್ತದಂತೆ. ಹಾಗಾದರೆ ನೂಲುವವರು, ಸೇವಕರು ಮಾತ್ರವೇ ತೊಡಬೇಕಾದ್ದೇನು ಖಾದಿ? ಸರಕಾರದ ನೌಕರರು ಎಲ್ಲರೂ, ದೊಡ್ಡವರೂ, ಚಿಕ್ಕವರೂ

ಏಕೆ ಖಾದಿ ತೊಡಬಾರದು? ಶಾಸನ ಸಭಾ ಸದಸ್ಯರೂ, ಪೌರಸಭೆಗಳ ಸದಸ್ಯರೂ ಖಾದಿಯನ್ನೇ ತೊಟ್ಟು ಏಕೆ ಒಂದು ಉದಾಹರಣೆ ಹಾಕಬಾರದು ಜನತೆಗೆ? ಬೆಂಗಳೂರಿನಲ್ಲಿರುವ ಖಾದಿ ಭಂಡಾರ ದೇಶದ ಇತರ ಪಟ್ಟಣಗಳಲ್ಲಿ ೮-೧೦ ದಿನ ಖಾದಿ ಸಂತೆ ನಡೆಸಬೇಕಾತ್ತದೆ. ಇದಕ್ಕೆ ಸರಕಾರದ ಬೆಂಬಲ ಉಂಟು. ಹೀಗಿದ್ದರೂ ಸರಕಾರದ ಈ ಉದಾರ ನೀತಿಯ ಲಾಭ ಏಕೆ ಪಡೆಯರೋ ಜನ?

*(ಹರಿಜನ, ೧೩-೬-೧೯೩೬)*

**ಉದ್ಯಾನ ಪ್ರಿಯ :**

ಮೈಸೂರು ಸಂಸ್ಥಾನದಲ್ಲಿ ಅದರ ಸುಂದರ ಪ್ರದೇಶಗಳನ್ನೂ ಅದ್ಭುತ ಶಿಲ್ಪಿ ಸೌಂದರ್ಯವನ್ನೂ, ಅದರ ಉದ್ಯೋಗಗಳನ್ನೂ, ಸಂಸ್ಥಾನದಲ್ಲಿರುವ ಸಾರ್ವಜನಿಕ ಸಂಸ್ಥೆಗಳನ್ನೂ, ಪುರಾತನ ದೇವಾಲಯುಗಳನ್ನೂ ನೋಡುತ್ತ ಎಷ್ಟೋ ಕಾಲ ಕಳೆಯಬಹುದು. ಇವೆಲ್ಲವುಗಳ ಹೆಸರನ್ನು ಹೇಳಲು ಸಾಧ್ಯ ಇಲ್ಲ. ಬರವಣಿಗೆಗೂ ಒಂದು ಮಿತಿ ಇದೆ. ಆದರೂ ಕೆಲವು ವಸ್ತುಗಳನ್ನೂ, ಕೆಲವು ವ್ಯಕ್ತಿಗಳನ್ನೂ ಪರಿಚಯಮಾಡಿ ಕೊಡದೇ ಇರಲು ಸಾಧ್ಯ ಇಲ್ಲ.

ಅಂಥ ಒಬ್ಬ ವ್ಯಕ್ತಿ ಮಿ. ಮ್ಯಾಕ್ ಐಷಾಕ್ ಅವರ ತೋಟ. ಮೈಸೂರಿಂದ ೧೫ ಮೈಲಿ ದೂರ ಗಂಗನಹಳ್ಳಿಯಲ್ಲಿದೆ. ಮೊನ್ನೆ ತಮ್ಮ ತೋಟದ ಕೆಲವು ಉತ್ತಮ ಹಣ್ಣುಗಳನ್ನು ನಮಗೆ ಕಳುಹಿಸಿಕೊಟ್ಟರು. ಆದರೆ ತಮ್ಮ ತೋಟದಲ್ಲಿ ವಿಶೇಷ ಇದೆ ಎಂದು ನಮಗೆ ತಿಳಿಸಲಿಲ್ಲ. ಬೆಂಗಳೂರಿನ ಗೆಳೆಯರಿಗೆ ಅವರ ಕೆಲಸ ಗೊತ್ತಿತ್ತು. ಒಂದು ದಿನ ಬೆಳಗ್ಗೆ ಸರದಾರ ಪಟೇಲರೂ, ಮಹಾದೇವಭಾಯಿಯೂ ಆ ತೋಟಕ್ಕೆ ಹೋದರು. ಮ್ಯಾಕ್ ಐಷಾಕಿಗೆ ಈಗ ೭೫ ವರ್ಷ. ಈಗ ೫೦ ವರ್ಷದ ಹಿಂದೆ ಭಾರತಕ್ಕೆ ಬಂದರು. ಬಂಗಾಳದಲ್ಲಿ ನೆಲೆಸಿ ಬಂಗಾಳೀ ಹೆಂಡತಿಯನ್ನು ಮದುವೆಯಾಗಿ ಅಲ್ಲಿಂದ ಬೆಂಗಳೂರಿನ ಹವಾಗುಣಕ್ಕಾಗಿ ಇಲ್ಲಿಗೆ ಬಂದರು. ಬಂಗಾಳದಲ್ಲಿದ್ದಾಗ ಚಳಿಜ್ವರ ಬಂದು ಅವರಿಗೆ ಪ್ರಾಣಾಪಾಯವೇ ಆಗಿತ್ತು. ಹೇಗೋ ಬದುಕಿ ಅಲ್ಲಿಂದ ಇಲ್ಲಿಗೆ ಓಡಿ ಬಂದರು. ಸ್ವಭಾವತಃ ರೈತರು. ಹುಟ್ಟಿನಿಂದಲೂ ಅಷ್ಟೇ. ಇಲ್ಲಿಗೆ ಬಂದು ೧೫೦೦ ಎಕರೆ ನೆಲವನ್ನು ಗಳಿಸಿದರು. ಅದರಲ್ಲಿ ಬಹುಭಾಗ ಜೌಗುಭೂಮಿ. ಬಿಟ್ಟೀ ಕೊಟ್ಟರೂ ಯಾರೂ ತೆಗೆದುಕೊಳ್ಳು ವಂತಿರಲಿಲ್ಲ. ಉಳಿದದ್ದು ಮುಳ್ಳುಕಂಟಿ, ಪೊದೆ ಇದ್ದ ಕಾಡು ಭೂಮಿ. ವ್ಯವಸಾಯ ಯೋಗ್ಯ ಅಲ್ಲ ಎಂದು ಎಲ್ಲರೂ ಕೈಬಿಟ್ಟಿದ್ದರು. ಮ್ಯಾಕ್ ಐಸಾಕ್ ಹೇಳಿದರು. "ನನಗೆ ಐದು ವರ್ಷ. ಆಗ ಉತ್ತಮ ರೈತರಾದ ನಮ್ಮ ತಂದೆ ನಮ್ಮ ಹೊಲದಿಂದ ನೀರನ್ನು ನೆಲದೊಳಗೆ ಕೊಳವೆಗಳನ್ನಿಟ್ಟು, ಮುಂದಕ್ಕೆ ಸಾಗಿಸುತ್ತಿದ್ದುದನ್ನು ನೋಡಿದ್ದೆ ಇಲ್ಲಿ ನಮ್ಮ ತಂದೆಯ ಉದಾಹರಣೆಯನ್ನು ಅನುಸರಿಸಬಹುದು ಎಂದುಕೊಂಡೆ".

ನೀರನ್ನು ಹೊರಕ್ಕೆ ಸಾಗಿಸಿದ್ದಲ್ಲದೆ ಅದಕ್ಕೆ ಕೊಳಗಳನ್ನು ಕಟ್ಟಿ ಸಂಗ್ರಹಿಸಿಟ್ಟರು. ತಮ್ಮ ಹೊಲವನ್ನು ಬೇರೆ ಬೇರೆ ವಿಭಾಗಿಸಿ, ಮೇಲು-ಕೀಳು ಎಂದು ತೀರ್ಮಾನಿಸಿ

ಎತ್ತರದಲ್ಲಿದ್ದ ಪಾತಿಗಳಿಗೆ ಬದು ಕಟ್ಟಿ ಕಷ್ಟಪಟ್ಟು ದುಡಿದರು. "ನೆಲ ಬಂಗಾರದ ಹಾಗೆ. ಇದು ಕೊಚ್ಚಿ ಹೋಗದಂತೆ ತಡೆಯಬೇಕು. ಈ ಕಲ್ಲುಗಳನು ಏನು ಎಂದು ತಿಳಿದಿದ್ದೀರಿ? ಒಂದು ಕಾಲಕ್ಕೆ ಅವುಗಳ ಮೇಲೆ ದಪ್ಪನಾದ ಮಣ್ಣು ಪದರ ಪದರವಾಗಿತ್ತು. ಮಳೆ ಬಂದು ಆ ಮಣ್ಣೆಲ್ಲ ಕೊಚ್ಚಿ ಹೋಗಿ, ಈಗ ಅವು ಬರೀ ಕಲ್ಲು ಆಗಿವೆ. ಮಳೆ ನೀರನ್ನು ಉಪಯೋಗಿಸುವದರಲ್ಲಿ ಇದೆ ರೈತನ ಕೌಶಲ. ನೆಲವನ್ನು ಕೊಚ್ಚಲು ಬಿಡಬಾರದು. ಕೊರಕಲು ಆಗಲು ಬಿಡಬಾರದು. ಒಂದೊಂದು ಪಾತಿಯಲ್ಲಿಯೂ ತೋಟಗಾರಿಕೆಯ ಪವಾಡ ನಡೆದಿತ್ತು ಅಲ್ಲಿ. ನಾನಾ ಬಗೆಯ ಕಿತ್ತಳೆಹಣ್ಣು ಮೋಸಂಬಿ, ಸೇಬು. ಮಾವಿನ ಹಣ್ಣು, ಅಲ್ಲಿ ಬೆಳೆದಿದ್ದವು. ಅವರು ಎಷ್ಟೋ ಪ್ರಯೋಗ ಮಾಡಿದ್ದರು. ಇದು 'ಚೀನಾದ ಹಣ್ಣು. ಇದರಲ್ಲಿ ಬೀಜ ಇಲ್ಲ, ಬರೀ ರಸ. ಬಲು ರುಚಿ. ಸಿಪ್ಪೆ ಸಮೇತ ತಿನ್ನಬಹುದು ಎನ್ನುತ್ತ ಹಣ್ಣುಗಳನ್ನು ಕೊಯ್ದುಕೊಟ್ಟರು. ಯಾವ ಹಣ್ಣನ್ನೂ ಅವರು ಕೀಳಲಿಲ್ಲ. 'ಹಣ್ಣನ್ನು ಎಂದೂ ಕೀಳಬಾರದು. ಚಾಕುವಿನಿಂದ ಕೊಯ್ದುಕೊಳ್ಳಬೇಕು' ಎಂದರು. ತಮ್ಮ ಅನಾನಸ್ ಗಿಡಗಳನ್ನು ತೋರಿಸಿ ಇವು ರಾಣಿ ಜಾತಿ. ಸ್ವಲ್ಪವೂ ನಾರು ಇಲ್ಲ. ಬಲು ರುಚಿ. ಬಣ್ಣವೂ ಬಂಗಾರ. ಒಂದು ಗಿಡವನ್ನು ತೋರಿಸಿ 'ಇದರಲ್ಲಿ ಪ್ರೋಟೀನ್ ಕೊಬ್ಬು ಎರಡೂ ಬೇಕಾದಷ್ಟು ಇವೆ. ಅದನ್ನ ಬೆಣ್ಣೆಯ ಹಣ್ಣು ಎನ್ನುತ್ತೇನೆ. ಬಡವರ ಭಾಗ್ಯ ಇದು. ಇದನ್ನು ನಮ್ಮ ಬಡ ದೇಶದಲ್ಲಿ ಎಷ್ಟು ಬೆಳೆದರೂ ಒಳ್ಳೆಯದೇ' ಎಂದರು.

ಕೆಲವರು ವಿದ್ಯಾರ್ಥಿಗಳನ್ನು ಮ್ಯಾಕ್ ಐಷಾಕ್ ಸೇರಿಸಿಕೊಂಡಿದ್ದರು ಇದರಲ್ಲಿ ಬಹಳ ಕಷ್ಟದ ದುಡಿತ. ಆದ್ದರಿಂದ ಅವರು ದಣಿದು ಹೋಗಿದ್ದರು. ಮ್ಯಾಕ್ ಐಷಾಕರ ತೋಟಕ್ಕೆ ಹೋದದ್ದು ಗೋಸಾಬದಲ್ಲಿ ಸರ್ ಡೇನಿಯಲ್ ಹ್ಯಾಮಿಲ್‌ಟನ್ ಅವರ ಹೊಲಕ್ಕೆ ಹೋಗಿದ್ದುದು ನೆನಪು ಕೊಟ್ಟಿತು. ನಮ್ಮ ಜಮೀನ್ದಾರರು ಮ್ಯಾಕ್ ಐಷಾಕರ ಗಂಗನಹಳ್ಳಿಯ ಈ ಪ್ರಯೋಗವನ್ನು ನೋಡಿ ಕಲಿತುಕೊಳ್ಳಬಾರದೇ? ಸರಕಾರವೂ ಇಂಥ ಕಡೆ ಒಂದು ಗ್ರಾಮಾಭಿವೃದ್ಧಿ ಕೇಂದ್ರವನ್ನೂ ನಡೆಸಬಾರದೇಕೆ?

*(ಹರಿಜನ, ೧೩-೬-೧೯೩೬)*

**ಕರ್ನಾಟಕದಲ್ಲಿ ಹಿಂದಿಯ ಪ್ರಗತಿ:**

ಕರ್ನಾಟಕದಲ್ಲಿ ಈ ದಿಕ್ಕಿನಲ್ಲಿ ಆದ ಪ್ರಗತಿಯನ್ನು ಸ್ವಲ್ಪ ಹೇಳಬೇಕು. ಹಿಂದಿ ಕನ್ನಡಕ್ಕೆ ವಿರುದ್ಧ ಎಂದು ಕೆಲವರು ದೇಶ ಭಾಷಾವಾದಿಗಳು ಅರ್ಥ ಇಲ್ಲದ ಗುಲ್ಲು ಎಬ್ಬಿಸಿದ್ದಾರೆ. ಹಿಂದೀ ಪ್ರಚಾರ ಸಭೆಯ ಕರ್ನಾಟಕ ಶಾಖೆ ಗಾಂಧೀಜಿಯ ಅಧ್ಯಕ್ಷತೆಯಲ್ಲಿ ಬೆಂಗಳೂರಿನ ಪುರಭವನದಲ್ಲಿ ಪ್ರಮಾಣ ಪತ್ರ ವಿತರಣೋತ್ಸವವನ್ನು ನಡೆಸಿದರು. ಪುರಭವನ ಕಿಕ್ಕಿರಿದು ತುಂಬಿತ್ತು. ಬಂದಿದ್ದವರಲ್ಲಿ ಅರ್ಧ ಹೆಂಗಸರು. ಅವರೆಲ್ಲರೂ ಪರಿಷತ್ತುಗಳಲ್ಲಿ ಪ್ರಶಸ್ತಿ ಪಡೆದವರೇ. ಅದಲ್ಲದೆ ಹತ್ತು ಸಾಲು ಕುರ್ಚಿಗಳ ತುಂಬ ಗಂಡಸರು ಕೂತಿದ್ದರು. ಅವರೂ ಪ್ರಶಸ್ತಿ ಪಡೆದವರೇ. ಹಿಂದಿ ಹೆಚ್ಚು ಹೆಚ್ಚು ಜನಪ್ರಿಯ ಆಗುತ್ತಿದೆ ಎನ್ನಲಿಕ್ಕೆ ಇದೇ ಸಾಕ್ಷಿ ಸಾಲದೇ. ಅನೇಕ ಕನ್ನಡ ವಿದ್ವಾಂಸರು ಸಭೆಗೆ ಬಂದಿದ್ದರು. ತಮಿಳು ಅತಿಥಿಗಳಲ್ಲಿ ಮುಖ್ಯರು ನಾಮದಾರ ಶ್ರೀನಿವಾಸ ಶಾಸ್ತ್ರಿಗಳು.

ಚಕ್ರವರ್ತಿ ರಾಜಗೋಪಾಲಾಚಾರ್ಯರು, ಸತ್ಯಮೂರ್ತಿಗಳು. ನಾಮದಾರ ಶಾಸ್ತ್ರಿಗಳಂತೂ ಅಖಿಲ ಭಾರತ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿದರು. ಕನ್ಹೈಲಾಲ ಮುನಿಷಿಯವರು ಭಾಷಣ ಮಾಡಿದ ಸಭೆಗೆ ಅಧ್ಯಕ್ಷತೆ ವಹಿಸಿ, ಇದು ಭಾರಿ ಯೋಜನೆ, ದಕ್ಷಿಣದಲ್ಲಿ ಭಾರತೀಯರೆಲ್ಲರೂ ಹಿಂದೀ ಮಾತನಾಡುವಂತೆ ಮಾಡುವ ಈ ಪ್ರಯತ್ನವನ್ನು ಸ್ವಾಗತಿಸ ಬೇಕು ಎಂದರು. ಗಾಂಧೀಜಿಗೆ ಬಿಡುವು ಇರಲಿಲ್ಲ. ಅರ್ಧ ಗಂಟೆ ಮಾತ್ರ ಆ ಕಾರ್ಯಕ್ಕೆ ಕೊಡುವದಾಗಿ ಹೇಳಿದ್ದರು, ಶ್ರೋತೃಗಳ ಸಂಖ್ಯೆ ಅವರ ಪ್ರಾಮುಖ್ಯತೆಗಳನ್ನು ನೋಡಿ, ನಲವತ್ತು ನಿಮಿಷ ಮಾತನಾಡಿದರು.

ಹಿಂದಿಯ ಅಭ್ಯಾಸವನ್ನು ದಕ್ಷಿಣ ಭಾರತದ ಸಾಹಿತಿಗಳು ದೃಢ ಬುದ್ಧಿಯಿಂದ ಮಾಡುತ್ತಿದ್ದಾರೆ ಎಂಬುದಕ್ಕೆ ಮೈಸೂರು ವಿಶ್ವವಿದ್ಯಾಲಯ ಪ್ರೊ. ಜಂಬುನಾಥನ್ ಅವರು ಎರಡು ಪ್ರಯೋಜನಕರ ನಿಘಂಟುಗಳನ್ನು ರಚಿಸಿರುವದೇ ಸಾಕ್ಷಿ. ಅವರು ತಮ್ಮ ವಿರಾಮದ ವೇಳೆಯಲ್ಲಿ ಹಿಂದಿಯನ್ನು ಕಲಿತರು. ಇಂಗ್ಲೀಷನ್ನು ಕಲಿಯಲು ಹಗಲೂ ರಾತ್ರಿಯೂ ಬಹಳ ಶ್ರಮಪಟ್ಟು ಕಡೆಗೂ ಚೆನ್ನಾಗಿ ಕಲಿಯಲಾರದೆ ಹೋದ ನಮ್ಮಂಥವರಿಗೆ ಇದು ಒಂದು ಉದಾಹರಣೆ.

ಕೆಂಗೇರಿಯಲ್ಲಿ ದಕ್ಷಿಣ ಭಾರತದ ಹರಿಜನ ಕೆಲಸಗಾರರ ಸಮ್ಮೇಳನ ಒಂದು ನಡೆಯಿತು ಎಂದು ಹಿಂದೆಯೇ ಹೇಳಿದೆ. ಅದರಲ್ಲಿ ಗಾಂಧೀಜಿ ಮಾಡಿದ ಭಾಷಣವನ್ನು ಇಲ್ಲಿ ವಿಸ್ತಾರವಾಗಿ ಕೊಡಲಾಗಿದೆ.

**ಹರಿಜನ ಚಳವಳಿಯ ಅಂತಸ್ತತ್ವ:**

ಈ ಸಮ್ಮೇಳನದ ವಿಚಾರ ಯಾರಿಗೆ ಬಂತೋ ಏನೋ, ಇದನ್ನಂತೂ ನಾವು ಸಾರ್ಥಕಗೊಳಿಸಬೇಕು. ಇದರಲ್ಲಿ ದಕ್ಷಿಣ ಭಾರತದ ಎಲ್ಲ ಭಾಗಗಳ ಪ್ರತಿನಿಧಿಗಳೂ ಇದ್ದಾರೆ. ಇತರರೂ ಇದ್ದಾರೆ.

ಸವರ್ಣ ಹಿಂದೂಗಳಿಗಾಗಿ ಕೆಲವು ಸಾಮಾನ್ಯ ವಿಚಾರಗಳನ್ನು ಪ್ರಸ್ತಾಪಿಸುತ್ತೇನೆ. ಈಗ ಭಾರತದಲ್ಲಿ ನಡೆಯುತ್ತಿರುವ ಎಲ್ಲ ಚಳವಳಿಗೂ ಇದಕ್ಕೂ ವ್ಯತ್ಯಾಸ ಇದೆ. ನನ್ನ ಪಾಲಿಗೆ, ಹರಿಜನ ಸೇವಕ ಸಂಘದ ಪಾಲಿಗೆ ಈ ಅಸ್ಪೃಶ್ಯತಾ ನಿವಾರಣಾ ಚಳವಳಿ ರಾಜಕೀಯದ್ದಲ್ಲ. ಹರಿಜನ ಆರ್ಥಿಕಾಭಿವೃದ್ಧಿಗೆ, ಸಾಮಾಜಿಕ ಪ್ರಗತಿಗೆ ಮಾತ್ರವೇ ಈ ಚಳವಳಿ ಮೀಸಲಿಲ್ಲ. ಈ ಅಭಿವೃದ್ಧಿ ಬೇಡ ಎಂದಲ್ಲ. ನಮ್ಮ ಕೆಲಸವನ್ನು ನಾವು ಪ್ರಾಮಾಣಿಕವಾಗಿ ಮಾಡಿದರೆ, ಇದೆಲ್ಲವೂ ಆಗಿ ತೀರುತ್ತದೆ.

ಆದರೆ, ನಮ್ಮ ಗುರಿ ಬೇರೆ. ಹಿಂದೂ ಸಮಾಜಕ್ಕೆ ಅಸ್ಪೃಶ್ಯತೆ ದೊಡ್ಡ ಕಳಂಕ. ಏನೇ ಆಗಲಿ, ಇದನ್ನು ನಿವಾರಣೆ ಮಾಡಬೇಕು. ಅಸ್ಪೃಶ್ಯತೆ ವಿಷ ಇದ್ದ ಹಾಗೆ. ಕಾಲವರಿತು ಅದನ್ನು ನಾಶಮಾಡದಿದ್ದರೆ, ಹಿಂದೂ ಧರ್ಮವನ್ನೇ ಅದು ನಾಶಮಾಡೀತು.

ನಮ್ಮ ಕೆಲಸಗಾರರೂ, ಪ್ರತಿನಿಧಿಗಳು ಆದವರೂ, ಪ್ರತಿನಿಧಿಗಳಾಗದವರೂ ಈ

ಮಾತಿನ ಮಹತ್ವವನ್ನು ಅರಿತಿದ್ದಾರೋ ಇಲ್ಲವೋ ಹೇಳಲಾರೆ. ನಿಮಗೆ ಇದರ ಮಹತ್ವ ಗೊತ್ತಿರಲಿ ಬಿಡಲಿ, ನಾನೇನೋ ನನ್ನ ದೃಢಾಭಿಪ್ರಾಯವನ್ನು ಹೇಳಲೇಬೇಕು.

ಅಸ್ಪೃಶ್ಯತೆ ಹೀಗೆಯೇ ಸಾಗಿದರೆ ಹಿಂದೂ ಧರ್ಮ ಕ್ರಮೇಣ ಹೇಗೆ ವಿನಾಶಕ್ಕೆ ಒಳಗಾಗುತ್ತದೆ ಎಂಬುದು ನನಗೆ ಸ್ಪಷ್ಟ ಕಾಣುತ್ತದೆ. ನೀವೂ ಈ ವಿಷಯವನ್ನು ಅಭ್ಯಾಸ ಮಾಡಿದರೆ ಹಿಂದೂ ಧರ್ಮ ಹೀಗೆ ಶಿಥಿಲ ಆಗುತ್ತಿದೆ, ಎಷ್ಟು ವೇಗವಾಗಿ ಶಿಥಿಲ ಆಗುತ್ತಿದೆ, ಕೆಲಸಗಾರರೂ ಹೇಗೆ ಅದನ್ನು ತಡೆಗಟ್ಟಲಾರರು ಎಂಬುದು ನಿಮಗೆ ತಿಳಿಯುತ್ತದೆ.

**ಜಗತ್ತಿನಲ್ಲಿ ಇದಕ್ಕೆ ಸಮಾನ ಇಲ್ಲ :**

ಹಿಂದೂ ಧರ್ಮಕ್ಕೆ ಈ ಅಸ್ಪೃಶ್ಯತೆ ಬಲವತ್ತರವಾದ ವಿಷ, ಕಲಂಕ; ಧರ್ಮವನ್ನು ನಾಶಮಾಡುತ್ತದೆ ಇದು ಎಂದು ನಾನೇಕೆ ಹೇಳುತ್ತೇನೆ? ಜಾತಿಯಿಂದ ಒಬ್ಬ ಮನುಷ್ಯ ಅಸ್ಪೃಶ್ಯ ಎನ್ನುವದು ನಮ್ಮ ಮಾನವೀಯತೆಗೆ ಅಸಹ್ಯ. ಜಗತ್ತಿನ ಎಲ್ಲ ಧರ್ಮ ಗ್ರಂಥಗಳನ್ನು ಪರಿಶೀಲಿಸಿದರೆ, ಇತರ ಇಲ್ಲ ಜನಾಂಗಗಳ ನಡತೆಯನ್ನು ನೋಡಿದರೆ, ಈ ಅಸ್ಪೃಶ್ಯತೆಗೆ ಸಮಾನವಾದ ಪಾಪ ಮತ್ತೊಂದು ಇಲ್ಲವೆಂದು ಅನಿಸುತ್ತದೆ. ಅವನು ಮಾಡುವ ಕೆಲಸವಾದರೂ ಎಂಥದು? ಒಬ್ಬ ದಾದಿ ಬಹಳ ದುರ್ವಾಸನೆ ಕೂಡಿ ರಕ್ತ ಸುರಿಸುತ್ತ, ಬಟ್ಟೆಯನ್ನು ಹೊಲಸು ಮಾಡಿಕೊಳ್ಳುವ ಅಸಹಾಯನಾದ ರೋಗಿಯನ್ನು ಉಪಚರಿಸುತ್ತಿರುವವರೆಗೆ ಅವಳು ಅಸ್ಪೃಶ್ಯಳೇ. ಆದರೆ ಅವಳು ಮೈ ಕೈಯನ್ನು ಚೆನ್ನಾಗಿ ತೊಳೆದುಕೊಂಡು, ಮಿಂದು ಬಂದರೆ ನಮ್ಮ ಹಾಗೆಯೇ ಸ್ಪೃಶ್ಯಳು. ನಮ್ಮಂತೆಯೇ ಸಮಾಜದಲ್ಲಿ ಓಡಾಡಬಹುದು. ಅವಳು ಮಾಡುತ್ತಿರುವ ವೃತ್ತಿಗಾಗಿ ಅವಳನ್ನು ಹೊಗಳುತ್ತೇವೆ. ಅವಳಿಗೆ ಸಮಾಜದಲ್ಲಿ ಗೌರವ ತೋರುತ್ತೇವೆ.

ಈ ಚಿತ್ರದ ಇನ್ನೊಂದು ಮಗ್ಗಲು ಇದೆ. ಡಾ॥ ಅಂಬೇಡ್ಕರರ ಉದಾಹರಣೆ ತೆಗೆದುಕೊಳ್ಳಿರಿ. ಹೇಳಿ ಕೇಳಿ ಅವರು ಅಸ್ಪೃಶ್ಯರು. ಆದರೆ ಬುದ್ಧಿವಂತಿಕೆಯಲ್ಲಿ, ಜಾಣತನದಲ್ಲಿ ಸಾವಿರಾರು ಜನ ಬುದ್ಧಿವಂತರಾದ ಸವರ್ಣ ಹಿಂದೂಗಳಿಗಿಂತ ಉತ್ತಮರು. ಅವರ ಶುಚಿತ್ವ, ನಮ್ಮೆಲ್ಲರ ಮಟ್ಟದಲ್ಲಿದೆ. ಇವತ್ತು ಅವರು ನ್ಯಾಯಶಾಸ್ತ್ರದ ಅಧ್ಯಾಪಕರು. ನಾಳೆ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧಿಪತಿ ಆಗಬಹುದು. ಈ ದೇಶದ ಸರಕಾರದಲ್ಲಿ ಸನಾತನಿ ಬ್ರಾಹ್ಮಣ ಒಬ್ಬ ಆಶಿಸಬಹುದಾದ, ಪಡೆಯಬಹುದಾದ ಎಲ್ಲ ಉತ್ತಮ ಸ್ಥಾನಗಳನ್ನು ಅವರು ಪಡೆಯಬಹುದು. ಆದರೆ ಅಂಬೇಡ್ಕರರನ್ನು ಮುಟ್ಟಿದರೆ ಮೈಲಿಗೆ ಎನ್ನುವ ಅಭಿಪ್ರಾಯಕ್ಕೆ ಏನು ಹೇಳಬೇಕು?

ಹುಟ್ಟಿನಿಂದ ಅಸ್ಪೃಶ್ಯತೆ ಬರುತ್ತದೆ. ಇದು ಹಿಂದೂ ಧರ್ಮದ ಅಂಗ ಎಂಬ ವಿಚಾರ ನಮಗೆ ರೂಢಿ ಇಲ್ಲದಿದ್ದರೆ ನಾವು ಹೀಗೆ ನಡೆದುಕೊಳ್ಳುತ್ತಿರಲಿಲ್ಲ.

**ಅಸ್ಪೃಶ್ಯತೆ ಹೇಗೆ ನಿವಾರಿಸಬೇಕು :**

ಇವತ್ತು ನಾನು ಹೊಸದು ಏನನ್ನೂ ಹೇಳಿಲ್ಲ. ಇದಕ್ಕಿಂತಲೂ ಉಗ್ರತರ ಭಾಷೆಯಲ್ಲಿ

ಎಷ್ಟೋ ಸಲ ಹೇಳಿದ್ದೇನೆ. ಆದರೂ ನಾನು ಹೇಳುವುದು ಹೆಚ್ಚಲ್ಲ. ಏಕೆಂದರೆ ಎಲ್ಲಿಯವರೆಗೆ ಅಸ್ಪೃಶ್ಯತಾ ನಿವಾರಣೆಯ ಅಗತ್ಯವು ನಮ್ಮ ತಿಳುವಳಿಕೆ ನಮ್ಮ ನಡತೆಗಳಲ್ಲಿ ಕಂಡು ಬರುವುದಿಲ್ಲವೋ ಅಲ್ಲಿಯವರೆಗೂ ಈ ಮಾತು ಇದ್ದೇ ಇರುತ್ತದೆ.

ಅಸ್ಪೃಶ್ಯತೆ ಹಿಂದೂ ಧರ್ಮಕ್ಕೆ ಮಾತ್ರ ಸೇರಿದ್ದು. ಇದಕ್ಕೆ ಶಾಸ್ತ್ರಾಧಾರವೂ ಇಲ್ಲ, ಯುಕ್ತಿಯ ಆಧಾರವೂ ಇಲ್ಲ. ನಾನು ಸ್ವಲ್ಪ ಮಟ್ಟಿಗೆ ಶಾಸ್ತ್ರವನ್ನು ಅಭ್ಯಾಸ ಮಾಡಿದ್ದೇನೆ. ಅವನ್ನು ಆಳವಾಗಿ ಓದಿದವರು ಶಾಸ್ತ್ರಗಳಲ್ಲಿ ಇದಕ್ಕೆ ಆಧಾರ ಇಲ್ಲವೆಂದು ನನಗೆ ಹೇಳಿದ್ದಾರೆ. ಈಗ ನಾನು ಶಾಸ್ತ್ರಾರ್ಥ ಮಾಡಲಾರೆ. ಅದರ ಅಗತ್ಯವೂ ಇಲ್ಲ. ಅಸ್ಪೃಶ್ಯತೆ ಹಿಂದೂ ಧರ್ಮಕ್ಕೆ ಒಂದು ಕಳಂಕ, ಹಿಂದೂ ಧರ್ಮವನ್ನೇ ಇದು ನುಂಗಿಬಿಡುತ್ತದೆ ಎಂದು ನಿಮ್ಮ ಮನಸ್ಸಿಗೆ ತೋರಿದರೆ ಅದನ್ನು ನಿವಾರಿಸಲು ನೀವು ಪ್ರಾರಂಭಿಸಬೇಕು.

ಅದನ್ನು ಅಳಿಸಲು ನೀವು ಏನು ಮಾಡುತ್ತೀರಿ? ಎಲ್ಲರೂ ಅಸ್ಪೃಶ್ಯತೆ ಒಂದು ಕಳಂಕ ಎಂದು ಘೋಷಿಸಿದರೆ ಸಾಲದು. ಅದು ಬರೀ ಅಣಕ. ಉತ್ಸಾಹ ಭರದಲ್ಲಿ ನೀವು ಹೋಗಿ ಒಬ್ಬ ಹರಿಜನನನ್ನು ಅಪ್ಪಿಕೊಂಡರೆ ಸಾಲದು. ಆಮೇಲೆ ಮರೆತು ಹೋದರೆ ಏನು ಪ್ರಯೋಜನ? ಹರಿಜನ ಕೇರಿಗೆ ಹೋಗಿ, ಕೆಲವು ಹರಿಜನರನ್ನು ಮುಟ್ಟಿ ಬಂದರೆ ಪ್ರಯೋಜನವೆ?

ನೀವು ಮಾಡಬೇಕಾದ್ದು ಬೇರೆ. ನಿಮ್ಮ ದಿನದಿನದ ನಡತೆಯಲ್ಲಿ ಹರಿಜನರಿಗೆ ಉತ್ತಮ ಕಾಲ ಬಂತು ಎನ್ನುವ ಹಾಗೆ ನೀವು ನಡೆದುಕೊಳ್ಳಬೇಕು.

ಗುಡಿಗಳಿಗೆ ಹೋಗುವ ರೂಢಿ ನಿಮಗೆ ಇದ್ದರೆ ನಿಮ್ಮ ಜೊತೆಗೆ ಹರಿಜನರನ್ನು ಕರೆದೊಯ್ಯಬೇಕು. ಅಲ್ಲಿ ಅವರ ಜೊತೆಯಲ್ಲಿ ಹೋದಾಗ ನಿಮ್ಮನ್ನು ಒಳಗೆ ಬಿಡದಿದ್ದರೆ, 'ಅಸ್ಪೃಶ್ಯತೆ ತಪ್ಪು' ಎಂದು ನನ್ನ ಹಾಗೆ ನಿಮಗೂ ವಿಶ್ವಾಸ ಇದ್ದರೆ, ಒಂದು ಚೇಳನ್ನು ನೋಡಿದರೆ ಅಥವಾ ಬೆಂಕಿಯನ್ನು ಕಂಡರೆ ದೂರ ಸರಿಯುವಂತೆ ಆ ಗುಡಿಯಿಂದ ನೀವು ದೂರ ಸರಿಯಬೇಕು. ಆಗ ನನ್ನ ಹಾಗೆ, ನಿಮಗೂ ಆ ಗುಡಿಯಲ್ಲಿ ದೇವರು ಇಲ್ಲ ಎಂಬ ನಂಬಿಕೆಯಿದೆ ಎಂದು ತಿಳಿಯುತ್ತೇನೆ. ಜಗತ್ತಿನಲ್ಲೇ ಸರ್ವ ಶ್ರೇಷ್ಠ ಆದ ಕಾಶಿ ವಿಶ್ವೇಶ್ವರನ ಗುಡಿಯ ಉದಾಹರಣೆಯನ್ನು ತೆಗೆದುಕೊಳ್ಳುತ್ತೇನೆ. ಅಲ್ಲಿರುವವನು ಜಗದೀಶ್ವರ. ಅವನ ಹೆಸರಿನಲ್ಲಿ ಸವರ್ಣ ಹಿಂದೂಗಳು ಹರಿಜನರಿಗೆ ಆ ದೇವಾಲಯದಲ್ಲಿ ಪ್ರವೇಶ ಇಲ್ಲ ಎಂದು ಹೇಳುವ ಅಧಿಕ ಪ್ರಸಂಗ ಮಾಡುತ್ತಿದ್ದಾರೆ.

**ದೇವರ ಆಲಯಗಳಲ್ಲಿ :**

ಎಲ್ಲ ಸನಾತನಿಗಳ ಜೊತೆಗೆ ನಾನೂ ಒಬ್ಬ ಒಳ್ಳೆಯ ಹಿಂದೂ ಎನ್ನುತ್ತೇನೆ. ಹಿಂದೂ ಧರ್ಮದ ತತ್ವಗಳನ್ನು ನನ್ನ ಬದುಕಿನಲ್ಲಿ ಯಥಾಶಕ್ತಿ ಆಚರಿಸಲು ಪ್ರಯತ್ನಿಸಿದ್ದೇನೆ. ನನ್ನ ಸಾಮರ್ಥ್ಯ ಅತ್ಯಲ್ಪ ಎಂದು ಒಪ್ಪಿಕೊಳ್ಳುತ್ತೇನೆ. ಅದರಿಂದ ಹಿಂದೂ ಧರ್ಮದ ಮೇಲೆ ನನಗಿರುವ ಪ್ರೀತಿ, ಅಭಿಮಾನಗಳಿಗೆ ಕೊರತೆ ಆಗುವುದಿಲ್ಲ. ಹಿಂದೂ ಧರ್ಮದ ಬಗ್ಗೆ ನನಗೆ ಇಷ್ಟು ಅಭಿಮಾನ ಇದ್ದರೂ, ನನ್ನ ಹೊಣೆಗಾರಿಕೆಯನ್ನು ಅರಿತು ಹೇಳುತ್ತೇನೆ–

ಕಾಶಿ ವಿಶ್ವನಾಥ ದೇವಾಲಯ ದ್ವಾರ ಹರಿಜನರಿಗೆ ಎಲ್ಲಿಯವರೆಗೆ ಮುಚ್ಚಿರುತ್ತದೆಯೋ ಅಲ್ಲಿಯ ವರೆಗೆ ನನಗೆ ಅದರ ಪಾವಿತ್ರ್ಯದಲ್ಲಿ, ಅಥವಾ ಅಲ್ಲಿ ಪೂಜೆ ಮಾಡಿದರೆ ನನ್ನ ಪಾಪ ಪರಿಹಾರ ಆಗುತ್ತದೆ ಎಂಬುದರಲ್ಲಿ ವಿಶ್ವಾಸ ಇರದು. ಅಂಥ ದೇವಸ್ಥಾನದ ಬಗ್ಗೆ ನನಗೆ ಸದಭಿಪ್ರಾಯವೂ ಇರದು. ಕಾಶಿ ವಿಶ್ವೇಶ್ವರನ ಗುಡಿಯ ಬಗ್ಗೆ ಏನು ಹೇಳಿದೆನೋ, ಅದು ಭಾರತದಲ್ಲಿ ಇರುವ ಎಲ್ಲ ದೇವಾಲಯಗಳಿಗೂ – ಅವಕ್ಕೆ ಹರಿಜನ ಪ್ರವೇಶ ಇಲ್ಲದಿದ್ದರೆ ಅನ್ವಯಿಸುತ್ತದೆ. ದಕ್ಷಿಣ ಭಾರತದ ದೇವಾಲಯಗಳಿಗೂ ಗುರುವಾಯೂರು ದೇವಸ್ಥಾನಗಳಿಗೂ ಇದೇ ಅನ್ವಯಿಸುತ್ತದೆ.

ಗುರುವಾಯೂರು ದೇವಾಲಯದಲ್ಲಿ ನನಗೆ ಪ್ರವೇಶ ಇಲ್ಲ. ಒಂದು ವೇಳೆ ಆ ದೇವಾಲಯದ ಧರ್ಮದರ್ಶಿಗಳೋ ಅಥವಾ ಅಧಿಕಾರಿಗಳೋ ನನಗೆ ಅಪ್ಪಣೆ ಕೊಟ್ಟರೂ ಕೂಡ ಹರಿಜನ ಸಮಾಜಕ್ಕೆ ಅಲ್ಲಿ ಪ್ರವೇಶ ಇಲ್ಲದಿರುವವರೆಗೆ ನಾನು ಆ ಅಪ್ಪಣೆಯನ್ನು ಉಪಯೋಗಿಸಿಕೊಳ್ಳಲಾರೆ. ಈ ರೀತಿ ನೀವು ಪ್ರತಿಯೊಬ್ಬರೂ ಪ್ರಾರಂಭಿಸದೇ ಹೋದರೆ, ಹೃದಯದಿಂದ ಅಸ್ಪೃಶ್ಯತೆ ಹೋಗಿಲ್ಲ ಎಂದು ಅರ್ಥ.

**ಇದು ಕರ್ತವ್ಯ :**

ಹರಿಜನರಲ್ಲಿ ಅನೇಕರಿಗೆ ನಮ್ಮ ಚಳವಳಿಯಲ್ಲಿ ಆಸಕ್ತಿ ಇಲ್ಲ ಎಂಬುದರಿಂದ ಏನೂ ಪರಿಣಾಮ ಆಗಬೇಕಾಗಿಲ್ಲ. ಇವತ್ತು ಬೆಳಿಗ್ಗೆ ಹರಿಜನರ ನಿಯೋಗ ಒಂದನ್ನು ತೆಗೆದುಕೊಂಡು ಡಿಸೌಜಾ ಬಂದಿದ್ದರು. ಹರಿಜನರಿಗೆ ದೇವಾಲಯ ಪ್ರವೇಶದಲ್ಲಿ ಅಷ್ಟು ಆಸಕ್ತಿ ಇಲ್ಲ ರಾಜಕೀಯ ಆರ್ಥಿಕ ಅಭಿವೃದ್ಧಿಯಲ್ಲಿ ಇದ್ದಷ್ಟು. ಸಾಮಾಜಿಕವಾಗಿ ಅವರ ಸ್ಥಾನ ಮಾನ ಹೆಚ್ಚಬೇಕು. ಎಂದು ಹೇಳಿದರು–ಸಹಜ. ಬೇರೆ ಏನು ತಾನೆ ಯೋಚನೆ ಮಾಡಿಯಾರು? ಇದಕ್ಕೆಲ್ಲ ನಾವೇ ಕಾರಣ. ನಮ್ಮೊಡನೆ ಒಂದಾಗಿರುವ ಭಾವನೆಯನ್ನು ತುಳಿದು ಹಾಕಿದ್ದೇವೆ. ನಮ್ಮ ಗುಡಿಗಳಲ್ಲಿ ನಮ್ಮೊಡನೆ ಸೇರಿ, ಒಟ್ಟಿಗೆ ಪೂಜಿಸುವ ಅವರ ಆಶಯವನ್ನು ಚಿವುಟಿ ಹಾಕಿದ್ದೇವೆ.

ಆದ್ದರಿಂದ ಹಿಂದೂ ಧರ್ಮದ ದೇವರು ಅವರ ಪಾಲಿಗೆ ಇಲ್ಲ ಎನ್ನುತ್ತೇನೆ. ಇಸ್ಲಾಮಿನ ದೇವರು. ಕ್ರಿಶ್ಚಿಯನ್ ಮತದ ದೇವರು ಬೇರೆ ಅಲ್ಲ; ಹಿಂದೂ ಮತದ ದೇವರು ಬೇರೆ ಅಲ್ಲ, ಪೂಜಾ ವಿಧಾನ ಮಾತ್ರ ಆಯಾ ಮತ ಧರ್ಮಕ್ಕೆ ಬೇರೆ ಬೇರೆ. ನಾವು ಅವರನ್ನು ನಡೆಸಿಕೊಂಡಿರುವ ರೀತಿಯಿಂದಾಗಿ, ನಮ್ಮ ಪಾಪಗಳ ಫಲವಾಗಿ ಸವರ್ಣರು ಹೋಗುವ ಗುಡಿಗಳು ತಮಗಲ್ಲ ಎಂದು ಹರಿಜನರು ಭಾವಿಸಿದರೆ, ಅವರ ಉದಾಸೀನತೆಗೆ ಹೊಣೆ–ಅವರಲ್ಲ. ಅಭ್ಯಾಸ ಬಲದಿಂದ ಅವರು ಉದಾಸೀನರಾಗಿದ್ದಾರೆ. ತಿರುವಾಂಕೂರಿನಲ್ಲಿ, ಇತರೆ ಕಡೆಗಳಲ್ಲಿ ಹರಿಜನರಿಗೆ ಇನ್ನೂ ದೇವಾಲಯ ಪ್ರವೇಶದ ಬಯಕೆ ಇದೆ ಎಂದರೆ, ಇತರೆ ಹಿಂದೂಗಳ ಹಾಗೆ ನಮಗೂ ಈ ಹಕ್ಕು ಇರಬೇಕು ಎಂದರೆ, ಇದು ಒಳ್ಳೆಯ ಮಾತೆ, ಸಮಾಧಾನಕರವೇ. ಆದರೆ ಇದರಿಂದ ನನ್ನ ವಾದಕ್ಕೆ ಚ್ಯುತಿ ಬರುವುದಿಲ್ಲ.

**ಮತಾಂತರಕ್ಕೆ ಸಂಬಂಧವಿಲ್ಲ :**

ಹರಿಜನರಿಗೆ ದೇವಾಲಯ ಪ್ರವೇಶ ಮಾಡಿಸುವ ವಿಷಯದಲ್ಲಿ ಇನ್ನೊಂದು ಅಂಶ ಇದೆ. ಅದನ್ನು ನೀವು ಅರಿತುಕೊಳ್ಳದೇ ಇರಲಾಗದು. ತಮಗೆ ದೇವಾಲಯ ಪ್ರವೇಶ ಸಿಗಬೇಕು ಎಂದು ಹರಿಜನರು ಕೇಳಿದರೆ, ಅದಕ್ಕೆ ನೀವು ಒಪ್ಪಿ ಗುಡಿಗಳಲ್ಲಿ ಪ್ರವೇಶ ಮಾಡಿಸಿದರೆ, ನೀವು ದೊಡ್ಡದು ಏನನ್ನೋ ಮಾಡಿದ ಹಾಗೆ ಆಗಲಿಲ್ಲ. ಆದರೆ ನೀವು ಮಾಡಿದ ಪಾಪಕ್ಕೆ ಪರಿಹಾರ ಎಂದು ಮಾಡಿದರೆ, ಅದು ಧಾರ್ಮಿಕ ಕೃತ್ಯ ಆಗುತ್ತದೆ. ಭಾರತದ ಹರಿಜನರೆಲ್ಲರೂ ಮತಾಂತರಗೊಂಡು ಒಬ್ಬನೇ ಹರಿಜನ ಹಿಂದೂ ಸಮಾಜದಲ್ಲಿ ಉಳಿದರೂ ಕೂಡ ದೇವಾಲಯಗಳನ್ನು ಹರಿಜನರಿಗೆ ಮುಕ್ತಗೊಳಿಸಬೇಕೆಂದು ಒತ್ತಾಯಿಸುತ್ತೇನೆ. ಉಳಿದೆಲ್ಲ ಸಮಸ್ಯೆಗಳಿಗೂ ಹರಿಜನ ಸಮಸ್ಯೆಗೂ ಇರುವ ವ್ಯತ್ಯಾಸ ಇದೇ. ಇದು ಧರ್ಮದ ಪ್ರಶ್ನೆ. ಅದರಿಂದಲೇ ಇದು ಮುಖ್ಯ. ನಮ್ಮ ಈ ಚಳವಳಿ ಕೇವಲ ಧೋರಣೆ ಅಥವಾ ರಾಜಕೀಯ ಅನುಕೂಲಸಿಂಧು ಆಗಿದ್ದಿದ್ದರೆ ಅದಕ್ಕೆ ಧಾರ್ಮಿಕ ಮಾತು ಇರುತ್ತಿರಲಿಲ್ಲ. ಯಾರಾದರೂ ಹರಿಜನರ ರಾಜಕೀಯ, ಆರ್ಥಿಕ ಪುನರುಜ್ಜೀವನ ಮಾತ್ರ ಸಾಕು, ಹರಿಜನರು ಹಿಂದೂ ಸಮಾಜದಲ್ಲಿ ಉಳಿಯುತ್ತಾರೆ ಎಂದು ನನಗೆ ಮನದಟ್ಟು ಮಾಡಿಕೊಟ್ಟರೂ ಅವರಿಗೆ ದೇವಾಲಯ ಪ್ರವೇಶ ಆಗಲೇಬೇಕು. ಅಸಮತೆಯ ಗುರುತು ಸ್ವಲ್ಪವೂ ಇರಕೂಡದು ಎಂದು ಬಯಸುತ್ತೇನೆ. ನನ್ನ ಪಾಲಿಗೆ ಇದೊಂದು ಪ್ರಾಯಶ್ಚಿತ್ತ ಕಾರ್ಯ, ನಮ್ಮ ಬಂಧುಗಳಿಗೆ ನಾವು ಎಸಗಿದ ಪಾಪಕ್ಕೆ ಪರಿಹಾರಕಾರ್ಯ. ನಿಮಗೂ ಹಾಗೆಯೇ ಅನಿಸಬೇಕು. ಹೀಗಾಗಿ ಇವತ್ತು ಅನೇಕ ಹಿಂದೂಗಳನ್ನು ಕಾಡುತ್ತಿರುವ ಹರಿಜನರ ಮತಾಂತರದ ಪ್ರಶ್ನೆಗೂ ನಾವು ಹರಿಜನರಿಗೆ ಸಲ್ಲಿಸಬೇಕಾದ ಕರ್ತವ್ಯಭಾರಕ್ಕೂ ಸಂಬಂಧ ಇಲ್ಲ. ಮತಾಂತರದ ಗಂಡಾಂತರ ನಮ್ಮ ಕಾರ್ಯದ ವೇಗವನ್ನು ಒಂದು ವೇಳೆ ಬಲಗೊಳಿಸಿದರೆ, ನಾನು ನಿಮಗೆ ಹೇಳುವ ಮಾತಿನ ಮಹತ್ವವೇ ಕಡಿಮೆಯಾಗುತ್ತದೆ. ಇಂಥ ದಾರಿಯಿಂದ ಹಿಂದೂ ಧರ್ಮವನ್ನು ಕಾಪಾಡಲು ಸಾಧ್ಯವಿಲ್ಲ ಎಂದು ನಿಮಗೆ ಭರವಸೆ ಕೊಡುತ್ತೇನೆ.

ಹಿಂದೂ ಧರ್ಮ ಉಳಿಯಲು ಒಂದೇ ಮಾರ್ಗ: ಹರಿಜನರಿಂದ ಏನನ್ನೂ ಬದಲು ಅಪೇಕ್ಷಿಸದೆ ನಾವು ನಮ್ಮ ಕರ್ತವ್ಯವನ್ನು ಮಾಡಿ, ಅದನ್ನು ಶುದ್ಧಿಗೊಳಿಸಬೇಕು. ಇದಕ್ಕಿಂತ ಎಳ್ಳಷ್ಟು ಕಡಿಮೆಯಾದರೂ ಹಿಂದೂ ಧರ್ಮಕ್ಕೆ ಉಳಿಗಾಲ ಇಲ್ಲ. ರಾಜಕೀಯ ತಂತ್ರದ ದೃಷ್ಟಿಯಿಂದ ಹರಿಜನರಿಗೆ ನೀವು ಅನುಕೂಲ ಮಾಡಲು ಹೊರಟರೆ, ನಿಮ್ಮ ಹೃದಯ ದಲ್ಲಿರುವ ಅಸ್ಪೃಶ್ಯತೆ ಹೋದಹಾಗಲ್ಲ. ಆ ವಿಷ ಒಳಗೊಳಗೇ ಅಡಗಿಕೊಂಡು ಹಿಂದೂ ಸಮಾಜದಲ್ಲಿ ಗೊಂದಲ ಉಂಟುಮಾಡುವಷ್ಟು ಮಟ್ಟಿಗೆ ಆಗಾಗ ಹೊರಹೊಮ್ಮುತ್ತದೆ. ಅಸ್ಪೃಶ್ಯತೆ ನಮಗೆ ಲಜ್ಜಾಸ್ಪದವೆಂದು ತೋರಿದರೆ, ಏನೇ ಬರಲಿ ಅದರ ಫಲ–ಅಸ್ಪೃಶ್ಯತೆ ಯನ್ನು ನಾವು ತೊಲಗಿಸಬೇಕು.

**ಕೇವಲ ದುರಾಗ್ರಹ :**

ಸವರ್ಣ ಹಿಂದೂ ತಮ್ಮ ಉನ್ನತ ವೇದಿಕೆಯಿಂದ ಅಸ್ಪೃಶ್ಯರು ಕುಡಿತ, ಸತ್ತ ದನದ

ಮಾಂಸ ಭಕ್ಷಣ, ಅಶುಚಿ ಮುಂತಾದ ರೂಢಿಗಳನ್ನು ಕೈಬಿಟ್ಟರೆ ನಾವೂ ಅಸ್ಪೃಶ್ಯತೆಯನ್ನು ಬಿಡುತ್ತೇವೆ ಎಂದು ಹೇಳಿದಾಗ ನನಗಂತೂ ಅಸಹನೆ ಹುಟ್ಟುತ್ತದೆ. ನನ್ನ ತಂದೆಯೋ, ತಾಯಿಯೋ, ಮಗನೋ, ಮಗಳೋ ಕುಷ್ಟ ರೋಗಿಗಳಾಗಿದ್ದರೆ ಅವರಿಗೆ ಆ ರೋಗ ಗುಣ ಆದಮೇಲೆ ಅವರನ್ನು ಮುಟ್ಟುತ್ತೇನೆ ಎಂದರೆ ನಾಚಿಕೆಗೇಡಲ್ಲವೆ? ಅವರಿಗೆ ಆಗ ನನ್ನ ಸೇವೆ ಅತ್ಯಗತ್ಯ. ಆಗ ಸೇವೆ ಮಾಡದಿದ್ದರೆ ನನ್ನ ಬಾಂಧವ್ಯ ಸುಟ್ಟಿತು. ಹರಿಜನರ ಸ್ಥಿತಿಯಂತೂ ಇನ್ನೂ ಕೆಡಕು. ಅವರ ದುಸ್ಥಿತಿಗೆ ನಾವೇ ಕಾರಣ. ಅವರ ಕುಡಿತ, ಸತ್ತ ದನದ ಮಾಂಸ ಭಕ್ಷಣ, ಅವರ ಅಸ್ವಚ್ಛತೆ ಎಲ್ಲಕ್ಕೂ ನಾವೇ ಕಾರಣ. ನಾವು ಸತ್ಯವಂತ ರಾದರೆ ಅವರಲ್ಲಿ ಎಷ್ಟು ಕೊರತೆ ಇದ್ದರೂ ಅಪ್ಪಿಕೊಳ್ಳಬೇಕು. ನಿಮ್ಮ ಮನಸ್ಸಿನಲ್ಲಿ ಹರಿಜನರು ನಿಮ್ಮ ತಮ್ಮಂದಿರು ಎಂಬ ಭಾವನೆ ಬಂದರೆ ಆ ರೀತಿ ನೀವು ನಡೆದುಕೊಂಡರೆ, ಹರಿಜನರು ತಮ್ಮ ರೂಢಿಗಳನ್ನು ಬದಲಾಯಿಸಿಕೊಳ್ಳುತ್ತಾರೆ. ಅನುಭವವುಳ್ಳ ಕೆಲಸಗಾರರು ಈ ದಿಶೆಯಲ್ಲಿ ಈ ಮಾತನ್ನು ಸಮರ್ಥಿಸುತ್ತಾರೆ. ಆದ್ದರಿಂದ ಸವರ್ಣ ಹಿಂದೂಗಳು ತಮ್ಮ ಹೃದಯವನ್ನು ಶುದ್ಧಗೊಳಿಸಿಕೊಂಡು, ಹರಿಜನರ ವಿಷಯದಲ್ಲಿ ತಮ್ಮ ನಡತೆಯನ್ನು ಬದಲಾಯಿಸಬೇಕಾದದ್ದು ಆದ್ಯ ಕರ್ತವ್ಯ.

ಕೆಲವರು ಹರಿಜನರೊಂದಿಗೆ ನೀವು ಗೆಳೆತನ ಮಾಡಿದರೂ ಇವರು ತಮ್ಮ ಹಿಂದೂ ಗೃಹಸ್ಥ ತನ್ನ ಹತ್ತಿರಕ್ಕೆ ಬರಮಾಡಿಕೊಂಡ ಒಬ್ಬ ಹರಿಜನನೂ ಕೂಡ ಸುಧಾರಿಸದೇ ಹೋಗಿಲ್ಲ. ಬೇರೆ ರೀತಿ ಆಗುವುದು ಶಕ್ಯವೇ ಇಲ್ಲ. ಅವನು ಉತ್ತಮ ವಾತಾವರಣ ಈ ಹೊಸ ಅನುಭವವೇ ಅವನ ಹಳೇ ರೂಡಿಗಳನ್ನು ಬಿಡುವಂತೆ ಮಾಡುತ್ತದೆ. ಸ್ವಚ್ಛತೆ ಅನುಕೂಲತೆಯ ವಿಷಯ. ಸವರ್ಣ ಹಿಂದೂಗಳ ದುಷ್ಟ ಹಟವೇ ಈ ರೀತಿ ವಾದ ಮಾಡಿಸುತ್ತದೆ. ತಾವು ಸರಿಯಾಗಿರದಿರಲು ಇದು ಒಂದು ಕುಂಟು ನೆಪ.

**ಓ, ಅಲ್ಪ ಶ್ರದ್ಧೆಯವರೇ :**

ಇಲ್ಲಿ ನೆರೆದಿರುವ ಕೆಲಸಗಾರರು ಹಣ ಇಲ್ಲದೆ ಹರಿಜನ ಸೇವಕ ಸಂಘದ ಕಾರ್ಯ ಹೇಗೆ ನಡೆಯಬೇಕು ಎಂದು ಚರ್ಚಿಸುತ್ತೀರಿ. ಬಲ್ಲೆ. ಅವರವರ ಶ್ರದ್ಧಾರಾಹಿತ್ಯದ ಫಲ- ಈ ಅಂಜಿಕೆ. ಐದಾರು ಜನ ಹಿಂದೂಗಳ ಮನಃಪರಿವರ್ತನೆ ಮಾಡುವದಲ್ಲ ನಮ್ಮ ಉದ್ದೇಶ. ಕೋಟ್ಯಂತರ ಸವರ್ಣ ಹಿಂದೂಗಳ ಮನಃಪರಿವರ್ತನೆ ಮಾಡಬೇಕು. ನಾವು ದಟ್ಟ ದರಿದ್ರರು. ಆದರೂ ಹಣದ ಅಭಾವಕ್ಕಾಗಿ ಯಾವ ಹಿಂದೂ ದೇವಾಲಯವೂ ಮುಚ್ಚಿಲ್ಲ. ಆದರೆ ಕೋಟ್ಯಂತರ ಹಿಂದೂಗಳು ಅಂಧ ಶ್ರದ್ಧೆಯಿಂದ ದೇವಾಲಯಗಳಿಗೆ ಹಣ ಕೊಡುತ್ತಾರೆ ಎಂದು ನಂಬಬೇಡಿ. ಆ ದೇವಾಲಯಗಳಿಗೆ ಹಣ ನೀಡುವ ಜನ ಒಂದು ಕಾಸನ್ನೋ, ಅಕ್ಕಿಯನ್ನೋ, ತೆಂಗಿನಕಾಯಿ, ಬಾಳೆಯಚಿಪ್ಪನ್ನೋ ತಾಂಬೂಲ ವನ್ನೋ ಕೊಡುವುದು ತಾವು ಪುಣ್ಯಕಾರ್ಯ ಮಾಡುತ್ತೇವೆ ಎಂಬ ಶ್ರದ್ಧೆಯಿಂದ. ಇದನ್ನು ಅಂಧ ಶ್ರದ್ಧೆ ಎನ್ನಬೇಡಿ. ಹಾಗೆಂದರೆ ನಿಮಗೆ ನೀವು ನ್ಯಾಯ ಮಾಡಿಕೊಂಡಂತೆ ಆಗುವುದಿಲ್ಲ. ಪ್ರಪಂಚಕ್ಕೆ ನ್ಯಾಯ ಮಾಡಿದಂತಾಗುವುದಿಲ್ಲ. ಎಷ್ಟೋ ಅಂಧ ಶ್ರದ್ಧೆಗಳನ್ನು ಬಹು ದೀರ್ಘಕಾಲ ದೇವರೇ ಸಹಿಸಿಕೊಂಡಿದ್ದಾನೆ. ಎಷ್ಟೇ ದೀರ್ಘ ಕಾಲ ಇದ್ದರೂ,

ಕಾಲಚಕ್ರದಲ್ಲಿ ಇದೊಂದು ಲೆಕ್ಕ ಅಲ್ಲ. ಕೋಟ್ಯಂತರ ಜನ ನಮ್ಮ ಗುಡಿಗಳಿಗೆ ಹೋಗುವುದು ನಿಸ್ಸಂದೇಹವಾಗಿ ಒಂದು ಪುಣ್ಯ ಕಾರ್ಯ ಎಂದು ಹೋಗುತ್ತಾರೆ. ಅವರಿಗೆ ಶ್ರದ್ಧೆ ಇದೆ. ಈ ದೇವಾಲಯಗಳನ್ನು ಕಾಪಾಡುವ ಮೂಕ ಜನಕೋಟಿಯ ಪುಣ್ಯ ಜೀವನದಲ್ಲಿ ನಿಮಗೆ ನಂಬಿಕೆ ಇದ್ದರೆ, ನಿಮ್ಮ ಕರ್ತವ್ಯದಲ್ಲಿ ನಿಮಗೆ ಶ್ರದ್ಧೆ ಇದ್ದರೆ, ನೀವು ಪ್ರತಿಯೊಬ್ಬರೂ ಒಂದು ಚಿಕ್ಕ ದೇವಾಲಯ ಆದೀರಿ. ಜನರಿಂದ ನಿಮಗೂ ಕಾಸು ಅಕ್ಕಿ ದೊರೆತಾವು.

ಘನಶ್ಯಾಮದಾಸಬಿರ್ಲಾನಂಥ ಕೋಟ್ಯಾಧೀಶ್ವರರು ನಿಮಗೆ ಹಣ ಕಳುಹಿಸುತ್ತಾರೆ ಎಂಬ ಆಲಸ್ಯದ ಭ್ರಾಂತಿಯಲ್ಲಿ ಮುಳುಗಿ ತೃಪ್ತರಾಗಿದ್ದರೆ ನಿಮ್ಮ ಚಳವಳಿ ಖಂಡಿತ ವಿಫಲವಾಗುತ್ತದೆ. ಅಸ್ಪೃಶ್ಯತೆ ಒಂದು ಕಳಂಕ ಅದನ್ನು ತೊಲಗಿಸಬೇಕು ಎಂದು ತಿಳಿಯುವ ಮೂಕ ಜನ ಕೋಟಿಯ ಬಳಿಗೆ ಹೋಗಿ ಅವರಿಂದ ಅಕ್ಕಿ ಹಾಗೂ ಕಾಣಿಕೆಯನ್ನು ಸಂಗ್ರಹಿಸುವ ಅಗತ್ಯ ನಿಮಗೆ ಕಾಣದಿದ್ದರೆ ನಿಮ್ಮ ಈ ಅಸ್ಪೃಶ್ಯತಾ ಚಳವಳಿ ಎಂದಿಗೂ ಸಫಲ ಆಗಲಾರದು.

**ಒಂದೇ ದಾರಿ:**

ನೀವು ಯಶಸ್ವಿಗಳಾಗಲು ಕಾಲ ಹಿಡಿಸಿದರೆ ಹಿಡಿಸಲಿ. ಕೆಲವೇ ವರ್ಷ ಆಗಲಿ ಅಥವಾ ಯುಗಗಳು ಕಳೆಯಲಿ ಸವರ್ಣ ಹಿಂದೂಗಳ ಮನಸ್ಸನ್ನು ತಿರುಗಿಸಲು ಅಸ್ಪೃಶ್ಯತಾ ನಿವಾರಣೆಯಲ್ಲಿ ಅಪರಿಮಿತ ಶ್ರದ್ಧೆ ಇಡುವುದೊಂದೇ ದಾರಿ. ಕಾಲದಿಂದ ಸತ್ಯಕ್ಕೆ ಚ್ಯುತಿ ಇಲ್ಲ. ಅಸ್ಪೃಶ್ಯತೆಯನ್ನು ಕಳೆದರೇನೇ ನಾವು ಉಳಿದೆವು–ಇದೇ ಸತ್ಯ. ತಮ್ಮ ಕರ್ತವ್ಯನಿಷ್ಠೆಯ ಬಗ್ಗೆ ಸಂದೇಹದವರು ಮಾತ್ರ ತಾಳ್ಮೆಗೆಡುತ್ತಾರೆ. ನಮ್ಮನ್ನು ವಿರೋಧಿಸುತ್ತಿರುವ ಮಹತ್ತರ ಶಕ್ತಿಗಳೆಲ್ಲವೂ ಅಳಿದು ಹೋದಾಗ ಹಿಂದೂ ಧರ್ಮವನ್ನು ಪರಿಶುದ್ಧ ಮಾಡುವ ಈ ಚಳವಳಿ ಇನ್ನೂ ಸಾಗುತ್ತದೆ ಎಂಬ ಶ್ರದ್ಧೆ ಇರಲಿ. ಆದರೆ ನಿಮ್ಮ ಧೈರ್ಯ ಸ್ಥೈರ್ಯ ನಿಮ್ಮ ಶ್ರದ್ಧೆ ಉಡುಗಿ ಹೋದರೆ, ನಿಮ್ಮಲ್ಲಿ ಸೋಮಾರಿತನ ತುಂಬಿಕೊಂಡರೆ, ಹಣ ಕೊಡಲಿಲ್ಲ ಎಂದು ಜನರನ್ನು ನಿಂದಿಸಬೇಡಿ. ಹೊರಗಿನ ಶಕ್ತಿಗಳಿಂದ ಈ ಚಳವಳಿ ಸಾಯುವುದಿಲ್ಲ. ಆಂತರಿಕ ದೌರ್ಬಲ್ಯಗಳಿಂದ ನಾಶ ಆದೀತು. ಈ ದೆಶೆಯಲ್ಲಿ ಪ್ರತಿಯೊಬ್ಬ ಕೆಲಸಗಾರನೂ ಈ ಸಮಸ್ಯೆಯನ್ನು ಪರಿಶೀಲಿಸಬೇಕೆಂದು ಪ್ರಾರ್ಥಿಸುತ್ತೇನೆ.

*(ಹರಿಜನ ಸಂಪಾದಕೀಯ ೨೦-೬-೧೯೩೬)*

**ಕೆಂಗೇರಿಯಲ್ಲಿ ತೀರ್ಮಾನಗಳು :**

ಜೂನ್ ೧೧ರಿಂದ ೧೨ರ ವರೆಗೆ ನಡೆದ ಈ ಸಮ್ಮೇಳನದಲ್ಲಿ ಕೆಲವು ತೀರ್ಮಾನಗಳಾದವು.

೧. ಆದಷ್ಟು ಬೇಗ ಹರಿಜನ ಕೆಲಸಗಾರರನ್ನು ತಯಾರು ಮಾಡುವ ಒಂದು ಕೇಂದ್ರ ತಯಾರಾಗಬೇಕೆಂದೂ ಈ ಕೆಳಕಂಡ ಸದಸ್ಯರ ಸಮಿತಿ ಅದಕ್ಕೆ ಒಂದು ಯೋಜನೆ ತಯಾರು ಮಾಡಬೇಕೆಂದೂ, ಈ ಸಮ್ಮೇಳನ ಅಭಿಪ್ರಾಯ ಪಡುತ್ತದೆ. ಸರ್ವಶ್ರೀ – ಕಾಕಾ ಕಾಲೇಲ್ಕರ್, ಅವಿನಾಶ ಲಿಂಗಂ ಚೆಟ್ಟಿಯಾರ್, ಪಟೇಲ, ಎಂ.ಗೋವಿಂದನ್,

ಶಂಕರ ನಾರಾಯಣರಾವ್, ಸ್ವಾಮಿ ಸಹಜಾನಂದ ಹಾಗೂ ಶ್ರೀಮತಿ ಬ್ರಜಲಾಲ ನೆಹರು ಮತ್ತು ಇಲ್ಲಿ ಬಂದಿರುವ ಎಲ್ಲ ಪ್ರಾಂತೀಯ ಕಾರ್ಯದರ್ಶಿ – ಇವರೇ ಮೊದಲಾದವರು ಸಮಿತಿಯ ಸದಸ್ಯರು.

೨. ದಕ್ಷಿಣ ಭಾರತದಲ್ಲಿ ಇರುವ ಶಾಲೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಹರಿಜನ ಸೇವಕ ಸಂಘದ ಉದ್ದೇಶಗಳಿಗೆ ಅವು ಹೊಂದುತ್ತವೆಯೋ ಇಲ್ಲವೋ ಎಂಬುದನ್ನು ಕಂಡು, ಹಾಗೆ ಹೊಂದದೇ ಇದ್ದರೆ, ಅಂಥ ಶಾಲೆಗಳನ್ನು ಮುಚ್ಚಿ ಹಾಗೆ ಉಳಿದ ಹಣವನ್ನು ಇತರ ಮುಖ್ಯ ಕಾರ್ಯಗಳಿಗೆ ವೆಚ್ಚ ಮಾಡಬೇಕೆಂದು ಎಲ್ಲ ಪ್ರಾಂತೀಯ ಕಾರ್ಯದರ್ಶಿಗಳನ್ನು ಈ ಸಮ್ಮೇಳನ ಬೇಡುತ್ತದೆ.

೩. ಅಸ್ಪೃಶ್ಯತೆಯ ಸಂಪೂರ್ಣ ನಿವಾರಣೆಯೇ ಹರಿಜನ ಸೇವಕ ಸಂಘದ ಉದ್ದೇಶವಾದುದರಿಂದ, ಈಗ ಮಾಡುತ್ತಿರುವ ಹರಿಜನ ಕಲ್ಯಾಣವನ್ನು ಮುಂದುವರಿಸುತ್ತ ದಕ್ಷಿಣ ಭಾರತ ಪ್ರಾಂತೀಯ ಸಮಿತಿಗಳು ಆಯಾ ಪ್ರಾಂತದ ಹರಿಜನರ ಕುಂದು-ಕೊರತೆಗಳಲ್ಲಿ ನಿರ್ದಿಷ್ಟವಾದ ಕೆಲವನ್ನು ಆರಿಸಿಕೊಂಡು ಅವುಗಳ ನಿವಾರಣೆಗಾಗಿ ಪ್ರಯತ್ನಿಸಬೇಕು. ಮತ್ತು ಕುಂದು ಕೊರತೆಗಳ ನಿವಾರಣೆಗಾಗಿ ಕೇಂದ್ರ ಸಮಿತಿಯ ಒಪ್ಪಿಗೆ ಪಡೆದು ಚಳವಳಿ ಆಂದೋಲನಗಳನ್ನು ರೂಪಿಸಬೇಕು.

೪. ಸಂಘದ, ಲೆಕ್ಕಪತ್ರಗಳ ಬಗ್ಗೆ.

೫. ಮೈಸೂರು ಸರಕಾರಕ್ಕೂ ದಕ್ಷಿಣ ಭಾರತದ ಇತರ ಸರಕಾರಗಳಿಗೂ ಸಾರ್ವಜನಿಕ ಬಾವಿ, ಕೆರೆ, ಗುಡಿಗಳು ಎಲ್ಲೆಲ್ಲಿ ಹರಿಜನ ಪ್ರವೇಶಕ್ಕೆ ಮುಕ್ತವಾಗಿಲ್ಲವೋ ಅಲ್ಲಲ್ಲಿ ಮುಕ್ತಗೊಳಿಸಬೇಕು – ಎಂದು ಈ ಸಮ್ಮೇಳನ ಪ್ರಾರ್ಥಿಸುತ್ತದೆ.

ಪ್ರಚಾರದ ಬಗ್ಗೆ:

೬. ಸಂಘದ ಘಟನೆಯ ಬಗ್ಗೆ.

೮. ಇತ್ತೀಚೆಗೆ ತಿರುವಾಂಕೂರು ಮಹಾರಾಜರು ಛತ್ರ, ರಸ್ತೆ ಶಾಲೆ ಮುಂತಾದವುಗಳಲ್ಲಿ ಹರಿಜನರಿಗೂ ಹಿಂದೂಗಳಿಗೂ ಸಮಾನತೆಯನ್ನು ನೀಡುವ ಕಾರ್ಯಕ್ರಮಗಳನ್ನು ಕೈಗೊಂಡದ್ದು ಅದಕ್ಕೆ ಅವರನ್ನು ಅಭಿನಂದಿಸುತ್ತದೆ. ತಮ್ಮ ಸಂಸ್ಥಾನದ ಎಲ್ಲ ದೇವಾಲಯಗಳಲ್ಲೂ, ಜಾತಿಭೇದ ಇಲ್ಲದೇ ಸಮಸ್ತ ಹಿಂದೂಗಳಿಗೂ ಸಮಾನ ಪೂಜಾಧಿಕಾರ ನೀಡಬೇಕೆಂದು ಪವಿತ್ರ ಹಿಂದೂ ಧರ್ಮದ ಹೆಸರಿನಲ್ಲಿ ಅವರನ್ನು ವಿನಯದಿಂದ ಪ್ರಾರ್ಥಿಸುತ್ತದೆ.

೯. ಸವರ್ಣ ಹಿಂದೂಗಳು ತೋರುತ್ತಿರುವ ಕ್ರೂರ, ಕಠಿಣ ಅನ್ಯಾಯದ ಬುದ್ಧಿಯಿಂದಾಗಿ ನಡತೆಯಿಂದಾಗಿ ಅನೇಕ ಹರಿಜನರು ಹಿಂದೂ ಸಮಾಜವನ್ನು ಬಿಟ್ಟು ಹೋಗುತ್ತಿರುವುದನ್ನು ಗಮನಿಸಿ ತುಂಬ ನೊಂದು ದಕ್ಷಿಣ ಭಾರತದ ಈ ಹರಿಜನ ಸೇವಕ ಸಂಘದ ಈ ಸಮ್ಮೇಳನದ ಕೆಲಸಗಾರರು ಇದರಿಂದ ಗಾಬರಿಗೊಳ್ಳ ಬಾರದೆಂದೂ.

ಇದನ್ನು ಎದುರಿಸಲು ಒಂದೇ ದಾರಿ ಎಂದರೆ - ಹಿಂದೂ ಸಮಾಜದಲ್ಲಿ ಹರಿಜನರಿಗಿರುವ ಎಲ್ಲ ಕುಂದು ಕೊರತೆಗಳನ್ನು ನಿವಾರಿಸುವದು ಎಂದು ಅಭಿಪ್ರಾಯ ಪಟ್ಟು, ಹರಿಜನ ಸೇವೆಯಲ್ಲಿ ಹಾಗೂ ಹಿಂದೂ ಸಮಾಜದ ಶುದ್ಧಿಯಲ್ಲಿ ಹೆಚ್ಚು ಹೆಚ್ಚು ಸಮರ್ಪಣ ಭಾವವನ್ನು ತೋರಿಸಬೇಕೆಂದೂ ಯಾವ ವಿಧದಲ್ಲಿಯೂ ಅಸ್ಪೃಶ್ಯತೆ ಇರದಂತೆ ತೊಡೆದು ಹಾಕಬೇಕೆಂದೂ ಹರಿಜನ ಸೇವಕರನ್ನು ಒತ್ತಾಯಿಸುತ್ತದೆ.

*(ಹರಿಜನ ೪-೭-೧೯೩೬)*

**ಪ್ರಶ್ನೋತ್ತರಗಳು :**

ಕೆಂಗೇರಿಯಲ್ಲಿ ಮೂರು ದಿನ ಸಮ್ಮೇಳನ ನಡೆಯಿತಷ್ಟೇ. ಅದರಲ್ಲಿ ಬಂದಿದ್ದ ಜನ ಗಾಂಧೀಜಿಯನ್ನು ಹಲವಾರು ಪ್ರಶ್ನೆಗಳನ್ನು ಕೇಳಿದರು.

ಪ್ರಶ್ನೆ : ನೀವು ಭಾಷಣದಲ್ಲಿ ದೇವಾಲಯಗಳ ಬಗ್ಗೆ ಬಹಳ ಕಟುವಾಗಿ ಹೇಳಿದಿರಿ. ನಮಗೆ ದೇವಾಲಯಗಳಲ್ಲಿ ನಂಬಿಕೆ ಇಲ್ಲವೆಂದೇ ಸನಾತನಿ ಸವರ್ಣರ ಕಲ್ಪನೆ ಆಗಿದೆ. ಅದಕ್ಕೆ ನಿಮ್ಮ ಭಾಷಣ ಪುಷ್ಟಿ ಕೊಟ್ಟಿತು.

ಉತ್ತರ : ಸವರ್ಣರ ದೇವಸ್ಥಾನಗಳಲ್ಲಿ ನಿಮಗೆ ನಂಬಿಕೆ ಇಲ್ಲ ಎಂಬ ಮಾತು ಪ್ರತಿ ಪ್ರಶ್ನೆಗೆ ಅವಕಾಶ ಕೊಡುತ್ತದೆ. ಆ ಗುಡಿಗಳು ಅವರದು ಇದ್ದ ಹಾಗೆಯೇ ನಮ್ಮದೂ ಹೌದು. ದೇವಸ್ಥಾನಗಳಲ್ಲಿ ನಂಬಿಕೆ ಇರುವವರಿಗಾಗಿ ಹೇಳಿದ ಮಾತು ಅವು. ಹರಿಜನರಿಗೆ ಪ್ರವೇಶ ಇಲ್ಲದ ಗುಡಿಗಳಿಂದ ದೇವರು ಹೊರಟು ಹೋಗಿದ್ದಾನೆ ಎಂದು ಹೇಳಿ ಸವರ್ಣರಲ್ಲಿ ವಿರೋಧ ಭಾವನೆಯನ್ನು ನಾವು ಹುಟ್ಟಿಸುವುದಿಲ್ಲ. ಏಕೆಂದರೆ, ದೇವರು ನಮ್ಮ ಸೃಷ್ಟಿ. ಆ ದೇವರು ಪರಮಾತ್ಮ ಸೃಷ್ಟಿಯಾಗಿದ್ದರೆ "ಎಲ್ಲೆಲ್ಲೂ ನನ್ನನ್ನು ನೋಡಬಾರದೆ? ಮೂರ್ಖರು ನೀವು" ಎನ್ನುತ್ತಿದ್ದ ಆತ. ಆದರೆ ದೇವರು ಅದನ್ನೆಲ್ಲ ಮರೆತಿದ್ದಾನೆ. ನಮ್ಮ ಹೃದಯ ಶುದ್ಧಿಗಾಗಿ ನಾವು ಅವನನ್ನು ಗುಡಿಯಲ್ಲಿ ಸ್ಥಾಪಿಸಿದ್ದೇವೆ ಎಂದುಕೊಳ್ಳುತ್ತಾನೆ. ಆದರೆ ತನ್ನ ಭಕ್ತಾದಿಗಳಲ್ಲಿ ಕೆಲವರನ್ನು ಅಸ್ಪೃಶ್ಯರೆಂದು ತಿಳಿಯುವ ಹಾಗೆ ನಮ್ಮ ಗುಡಿಯೊಳಗಿನ ದೇವರನ್ನು ನಾವು ಮಾಡಿಕೊಂಡರೆ ಅಂಥ ಗುಡಿಗಳಲ್ಲಿ ದೇವರು ಇಲ್ಲ ಎನ್ನುತ್ತೇನೆ. ಆದ್ದರಿಂದ ಅಂಥ ಗುಡಿಗಳಲ್ಲಿ ನಾವು ಹೋಗಬಾರದು ಎನ್ನುತ್ತೇವೆ. ನಮ್ಮ ಕುಟುಂಬದವರಿಗೆ ಇದನ್ನು ಮನದಟ್ಟು ಮಾಡಿಕೊಟ್ಟ ಮೇಲೆ, ಇತರರಿಗೂ ಇದನ್ನು ಹೇಳುತ್ತ ಹೋಗಬೇಕು.

ಪ್ರಶ್ನೆ : ಅಸ್ಪೃಶ್ಯತೆಗೂ ಈಗಿರುವ ಜಾತಿಗಳಿಗೂ ಗಂಟು. ಜಾತಿಗಳು ಹೋಗದೆ ಅಸ್ಪೃಶ್ಯತೆ ಹೋಗದು. ಹರಿಜನ ಸೇವಕ ಸಂಘ ಜಾತಿಗಳ ವಿರುದ್ಧ ಹೊಡೆದಾಡಬಹುದೆ?

ಉತ್ತರ : ಅಸ್ಪೃಶ್ಯತೆ ಸಂಪೂರ್ಣವಾಗಿ ಹೋಗಬೇಕು, ಸಂಘದಿಂದ ನಾವು ಮಾಡಬೇಕಾದ ಕೆಲಸ ಪರಿಮಿತ. ಅಸ್ಪೃಶ್ಯತೆಯ ಉಗ್ರರೂಪವನ್ನು ತೊಡೆದು ಹಾಕಬೇಕು. ನಮ್ಮಲ್ಲಿ ಪ್ರತಿಯೊಬ್ಬರಿಗೂ ಜಾತಿಯ ಭಾವನೆ ಇಲ್ಲ. ಜಾತಿಯ ನಿರ್ಬಂಧಗಳನ್ನು ಊಟ, ಮದುವೆಗಳ ವಿಷಯದಲ್ಲಿ ಎಂದೋ ಬಿಟ್ಟುಕೊಟ್ಟಿದ್ದೇವೆ. ಆದರೆ ಪ್ರಾರಂಭದಲ್ಲಿ ಜಾತಿಯ ಮೇಲೆ ದಾಳಿ ಇಲ್ಲ.

ಪ್ರಶ್ನೆ : ಎಂದಾದರೂ ಜಾತಿಯ ಮೇಲೆ ದಾಳಿಮಾಡುವ ಪ್ರಸಂಗ ಬಂದೀತೆ?

ಉತ್ತರ : ಬಾರದೆ ಏನು? ನಮಗೆ ನಮ್ಮ ಇತಿ ಮಿತಿ ಗೊತ್ತಿದೆ. ಅದರಂತೆ ನಮ್ಮ ಕಾರ್ಯಕ್ರಮವನ್ನು ಗೊತ್ತುಮಾಡಿದ್ದೇವೆ. ನಮ್ಮ ಸ್ಪಷ್ಟ ವಿಶ್ವಾಸ ಹುಟ್ಟಿದರೆ ಒಂದು ಹೆಜ್ಜೆ ಮುಂದೆ ಹೋಗಿ ಸಂಘದ ರಚನೆಯನ್ನು ಬದಲಾಯಿಸಬಹುದು. ವ್ಯಕ್ತಿಗಳು ಮುಂದೆ ಹೋಗಿದ್ದಾರೆ. ಅಂತರ್ವಿವಾಹ, ಅಂತರ್ಜಾತೀಯ ಭೋಜನ ಇವುಗಳ ನಿರ್ಬಂಧ ವರ್ಣಾಶ್ರಮ ಧರ್ಮ ಸಂಬಂಧಿಸಿಲ್ಲ. ಎರಡೂ ಅವರ ಇಷ್ಟದಂತೆ. ಇಂಥಿಂಥವರನ್ನೇ ಮದುವೆಯಾಗು, ಇಂಥವರೊಡನೆಯೇ ಊಟ ಮಾಡು ಅಥವಾ ಮಾಡಬೇಡ – ಎಂದು ಯಾವ ಶಾಸ್ತ್ರವೂ ನನ್ನನ್ನು ಬಲಾತ್ಕರಿಸಲಾರದು. ನಮ್ಮ ಸ್ವಂತ ನಡತೆ, ಸಂಘದ ನೀತಿ ಎರಡರ ವ್ಯತ್ಯಾಸವನ್ನು ಗಮನಿಸಬೇಕು.

ಕೆಂಗೇರಿ ಆಶ್ರಮದ ಹರಿಜನ ಸೇವಕರ ಸಮ್ಮೇಳನದಲ್ಲಿ ಚರ್ಚೆ ಮಾಡಿದ ವ್ಯವಹಾರಿಕ ಪ್ರಶ್ನೆಗಳಲ್ಲಿ ಸತ್ತ ದನಗಳನ್ನು ಏನು ಮಾಡಬೇಕು ಎಂಬುದು ಒಂದು ಇತ್ತು. ಈಗ ಆಗಿರುವ ಜಾಗೃತಿಯಿಂದ ಕೆಲವು ಕಡೆ ಹರಿಜನರು ಸತ್ತ ದನಗಳನ್ನು ಮುಟ್ಟುತ್ತಿಲ್ಲ. ಗೋಮಾಂಸ ಭಕ್ಷಣ ತ್ಯಾಗವೇ ಇದಕ್ಕೆ ಕಾರಣ. ಸವರ್ಣ ಹಿಂದೂಗಳಿಗೆ ಇದರಿಂದ ಸಿಟ್ಟು ಬಂದು ಹರಿಜನರನ್ನು ಬಹಿಷ್ಕರಿಸಿ ಅವರಿಗೆ ಸಾಮಾಜಿಕ ಅನುಕೂಲತೆಗಳನ್ನು ಕೊಡದೆ ದೂರವಿರಿಸಿದ್ದಾರೆ. ಇಂಥ ಸಂದರ್ಭಗಳಲ್ಲಿ ಹರಿಜನ ಸೇವಕರು ಏನು ಮಾಡಬೇಕು?

ಗಾಂಧೀಜಿ : ಇಂಥ ಸಂದರ್ಭ ನಡೆದಾಗ ಹರಿಜನರನ್ನು ಕಾಪಾಡಬೇಕಾದ್ದು ನಮ್ಮ ಕೆಲಸ. ಅಲ್ಲಿ ಬದುಕು ಬಹಳ ಕಷ್ಟವಾದರೆ ಹೆಚ್ಚು ಅನುಕೂಲವಾದ ಸ್ಥಳಕ್ಕೆ ಅವರನ್ನು ಕರೆದೊಯ್ಯುವ ಏರ್ಪಾಡು ಮಾಡಬೇಕು. ಆದರೆ ಸವರ್ಣರಲ್ಲಿ ಯಾರು ಚರ್ಮ ಹದಗೊಳಿಸುವ ಕೈಗಾರಿಕೆಯನ್ನು ಕಲಿಯಲು ಸಿದ್ಧರೋ ಹರಿಜನ ಸೇವಕರು ಕಂಡುಹಿಡಿಯಬೇಕು. ಚರ್ಮ ಸುಲಿದು, ಅದನ್ನು ಹದಮಾಡುವವರೆಗಿನ ಎಲ್ಲಾ ಕ್ರಮಗಳನ್ನೂ ನಡೆಸುವ

ಚರ್ಮಾಲಯಗಳು ಕೆಲವು ಇವೆ. ಸವರ್ಣ ಹಿಂದೂಗಳು ಈ ಕೆಲಸ ಮಾಡಲು ಸಿದ್ಧರಾದರೆ ಜಾಗೃತ ಹರಿಜನರಿಗೆ ಇದು ನಾಚಿಕೆ ಎನಿಸುವುದಿಲ್ಲ. ಆದರೆ ಈ ಕೆಲಸವನ್ನು ಬಿಟ್ಟುಕೊಟ್ಟು ಬೇರೆ ಕೆಲಸವನ್ನು ಹಿಡಿಯಲು ಅವರಿಗೆ ಅಧಿಕಾರ ಇದೆ. ಅವರು ದಿನ ದಿನವೂ ಆಗುತ್ತಿರುವ ಈ ಸಂಪದ್ವಿನಾಶವನ್ನು ಸಮಾಜಕ್ಕೆ ಅರಿವಾಗುವಂತೆ ಮಾಡಬೇಕಾಗಿದೆ. ಸತ್ತ ದನಗಳ ಚರ್ಮ ಸುಲಿಯುವ ವಿದ್ಯೆ ನಮಗೆ ಗೊತ್ತಿದ್ದರೆ, ಬದುಕಿದ್ದಾಗ ಉಪವಾಸ ಇದ್ದು ಅರೆಜೀವವಾದ ದನಕ್ಕೆ ಸತ್ತ ದನದಿಂದಲೇ ಹೆಚ್ಚು ಆದಾಯ ಎಂದು ತಿಳಿದುಬರುತ್ತದೆ. ಸತ್ತ ಮೇಲೆ ಮಾಂಸ ಒಳ್ಳೆಯ ಗೊಬ್ಬರ ಆಗುತ್ತದೆ. ಎಲುಬನ್ನು ಸುಟ್ಟು ಬೂದಿ ಮಾಡಿದರೆ ಸೊಗಸಾದ ಗೊಬ್ಬರ. ಅದರಿಂದ ಹಿಡಿಕೆಗಳನ್ನೂ, ಗುಂಡಿಗಳನ್ನೂ ಮಾಡಬಹುದು. ಅದರ ಕೊಂಬು ತೆಗೆದಿಟ್ಟರೆ ಬಹಳ ಉಪಯೋಗಕಾರಿ. ಅದರ ಕರುಳಿನಿಂದ ಪಿಂಜಾಣಕ್ಕೆ, ಸಂಗೀತವಾದ್ಯಗಳಿಗೆ ಉತ್ತಮವಾದ ನರ ಆಗುತ್ತದೆ.

ಪ್ರಶ್ನೆ : ನಮ್ಮಲ್ಲಿ ಒಂದು ವಿಚಿತ್ರ ಸನ್ನಿವೇಶ ಒದಗಿದೆ. ಹರಿಜನ ಸಮಾಜ ಬಲವಾಗಿದೆ. ಬಹಿಷ್ಕಾರವನ್ನು ಎದುರಿಸಲು ಅವರು ಸಿದ್ಧರಾಗಿದ್ದಾರೆ. ಎಲ್ಲೋ ಕೆಲವರು ಮಾತ್ರ ಸತ್ತ ದನಗಳ ವ್ಯವಸ್ಥೆ ಮಾಡಲು ಸಿದ್ಧ. ಇವರಿಗೆ ನಾನೇನು ಸಲಹೆ ಹೇಳಲಿ.

ಉತ್ತರ : ನಮ್ಮ ಕಸಬನ್ನು ಮುಂದುವರಿಸುವ ಸ್ವಾತಂತ್ರ್ಯ ಅವರಿಗಿರಬೇಕು.

ಪ್ರಶ್ನೆ : ಅವರವರ ಜಾತಿಯವರೇ ಬಹಿಷ್ಕರಿಸಿದರೆ ?

ಉತ್ತರ : ಕೂಡದು. ನಾವು ಅವರ ಸಮಾಜವನ್ನು ಒಡೆಯಬಾರದು.

ಪ್ರಶ್ನೆ : ದೇವಾಲಯ ಪ್ರವೇಶದ ಕರಡು ಶಾಸನವನ್ನು ನಾವು ಕೈಬಿಟ್ಟೆವೇ? ಮತ್ತೆ ಅದನ್ನು ಕೈಗೊಳ್ಳಬಾರದೇ?

ಉತ್ತರ : ಇಲ್ಲ, ಬಿಟ್ಟಿಲ್ಲ. ಪರಿಸ್ಥಿತಿ ಉತ್ತಮಗೊಂಡ ಕೂಡಲೇ ಅದನ್ನು ಎತ್ತುತ್ತೇವೆ.

ಪ್ರಶ್ನೆ : ನಮ್ಮ ಅಂದಾಜು ಪಟ್ಟಿಯಲ್ಲಿ ಪ್ರಚಾರಕ್ಕೆ ಹೆಚ್ಚು ಹಣವನ್ನು ಇಡಬಾರದೆ?

ಉತ್ತರ : ಇಲ್ಲ, ನನಗೆ ಶಕ್ತಿ ಇದ್ದರೆ ನಮ್ಮ ಅಂದಾಜು ಪಟ್ಟಿಯಲ್ಲಿ ಶೇ.೫ರಷ್ಟು ಕೂಡ ಪ್ರಚಾರಕ್ಕೆ ತೆಗೆದಿಡುತ್ತಿರಲಿಲ್ಲ. ಪ್ರಚಾರಕ್ಕೆ ಹಣ ಬೇಕು ಎಂದಾದರೆ ಅದಕ್ಕಾಗಿಯೇ ನೀವು ಹಣ ಸಂಗ್ರಹಿಸಿ. ನೆನಪಿರಲಿ. ಆಗಲೂ ಕೂಡ ಕಾಸು ಕಾಸಿಗೂ ಸಂಘಕ್ಕೆ ನೀವು ಲೆಕ್ಕ ಕೊಡಬೇಕಾದೀತು.

ಪ್ರಶ್ನೆ : ಅಸ್ಪೃಶ್ಯತಾ ನಿವಾರಣೆಯ ಕೆಲಸದಲ್ಲಿ ನಿಮಗಿರುವ ದೊಡ್ಡ ಅಡಚಣೆ,

ಹರಿಜನರಲ್ಲೇ ಇರುವ ಉಪಜಾತಿ ಭೇದ. ಅದನ್ನು ಹೇಗೆ ನಿವಾರಿಸಬೇಕು?

ಉತ್ತರ : ನಮ್ಮಲ್ಲಿರುವ ಉಪಜಾತಿಗಳನ್ನೂ ಅಸ್ಪೃಶ್ಯತೆಯನ್ನೂ ತೊಡೆದು ಹಾಕುವುದರಿಂದ. ಏಕೆಂದರೆ ಹರಿಜನರೂ ನಮ್ಮನ್ನು ಅನುಕರಿಸುತ್ತಿದ್ದಾರೆ. ಅವರನ್ನು ಗುಲಾಮರನ್ನಾಗಿ ಮಾಡಿಕೊಂಡು ನಮ್ಮನ್ನು ಅನುಕರಿಸುವಂತೆ ಮಾಡಿದ್ದೇವೆ. ಒಂದು ಮಾತನ್ನು ನಾವು ನೆನಪಿಡಬೇಕು. ಅದೆಂದರೆ ಅನುಕರಣೆ ಮಾಡುವವನು ಮೂಲವನ್ನು ಸುಧಾರಿಸ ಹೋದರೆ ಅವನನ್ನು ವಿಕೃತಗೊಳಿಸುತ್ತಾನೆ.

ಪ್ರಶ್ನೆ : ಅಂತೂ ಈ ಹರಿಜನ ಸಮಸ್ಯೆಯೆಲ್ಲ ಕಟ್ಟಕಡೆಯಲ್ಲಿ ಆರ್ಥಿಕವೇ ತಾನೆ? ಅವರ ಆರ್ಥಿಕ ಸ್ಥಿತಿ ಉತ್ತಮಗೊಂಡರೆ, ತನಗೆ ತಾನೇ ಈ ಸಮಸ್ಯೆ ಪರಿಹಾರ ಆಗದೆ?

ಉತ್ತರ : ಇಲ್ಲ. ಆರ್ಥಿಕ ಪ್ರಶ್ನೆ ಬಿಟ್ಟರೂ ಹರಿಜನ ಪ್ರಶ್ನೆ ಬಿಡದು. ಇದು ಹಿಂದೂ ಧರ್ಮಕ್ಕೆ ತಗುಲಿದ ರೋಗ. ನಮ್ಮಲ್ಲಿ ಅನೇಕರಿಗಿಂತ ಡಾ.ಅಂಬೇಡ್ಕರರ ಆರ್ಥಿಕ ಸ್ಥಿತಿ ಉತ್ತಮ. ಆದರೂ ಆತ ಅಸ್ಪೃಶ್ಯನೇ.

**ಒಂದು ಪೇಚಿನ ಪ್ರಶ್ನೆ :**

ಒಬ್ಬ ಕೆಲಸಗಾರ ವಿಗ್ರಹ ಭೇದಕ ಎಂದು ಕಾಣುತ್ತದೆ. ಹರಿಜನರ ಪೂಜಾ ವಿಧಾನಗಳನ್ನು, ರಾಮ, ಕೃಷ್ಣರ ಪೂಜೆಯನ್ನು ಕೂಡ ಟೀಕಿಸುತ್ತ ಹೇಳಿದ : "ಅವರು ಪೂಜೆ ಮಾಡುವುದು ಕಲ್ಲನ್ನು. ರಾಮ, ಕೃಷ್ಣ ಎಂದರೆ ಮಾತ್ರ ಅದು ಕಲ್ಲಲ್ಲವೇ? ಇಂಥ ಪೂಜೆಯಿಂದ ನನಗೆ ಸ್ಫೂರ್ತಿ ಇಲ್ಲ. ನಿಮ್ಮನ್ನೇ ದೇವರ ಅವತಾರ ಎಂದು ಭಾವಿಸಿ, ನಿಮ್ಮನ್ನು ಪೂಜಿಸುವಂತೆ ನಾನು ಹೇಳಲೇನು?"

ಅಲ್ಲಿದ್ದವರೆಲ್ಲರೂ ನಕ್ಕರು. ಗಾಂಧೀಜಿ ಶಾಂತವಾಗಿ ಹೇಳಿದರು : ನನ್ನ ಇದಿರಿಗೆ ಇದೊಂದು ತೊಡಕು. ನಾನು ಮಣ್ಣಿನ ಮೂರ್ತಿ. ನಿನಗೆ ಯಾವ ಆದರ್ಶಗಳನ್ನು ಕಂಡರೆ ಇಷ್ಟವಿಲ್ಲವೋ ಅವು ನನಗೆ ಪೂಜನೀಯ. ರಾಮ ಕೃಷ್ಣರ ಹೆಸರು ನನಗೆ ಆಶಾದಾಯಕ. ಆದ್ದರಿಂದ ನಿನ್ನ ಈ ಅವತಾರವನ್ನು ಎಂದರೆ ನನ್ನನ್ನು – ಚೂರು ಚೂರು ಮಾಡಿಬಿಡು. ರಾಮ ಕೃಷ್ಣರನ್ನು ಖಂಡಿಸುವುದಕ್ಕಿಂತ ಇದು ವಾಸಿ. ಅದು ಹಿಂದೂ ಧರ್ಮಕ್ಕೆ ಎಸಗಿದ ದ್ರೋಹ, ಹಿಂಸೆ.

ಆ ಗೆಳೆಯ ಬಿಡಲಿಲ್ಲ. "ರಾಮನೂ ಕೃಷ್ಣನೂ ಮನುಷ್ಯರೇ ತಾನೇ?" ಎಂದ.

ಗಾಂಧೀಜಿ ಹೇಳಿದರು : "ಯುಗ ಯುಗಾಂತರಗಳ ಹಿಂದೆ ಬದುಕಿದ್ದ ರಾಮನನ್ನೂ ಕೃಷ್ಣನನ್ನೂ ಪೂಜಿಸುವ ಮೂರ್ಖ ಎಂದು ತಿಳಿಯಬೇಡ. ನಾನು ಪೂಜಿಸುವ ರಾಮ, ಕೃಷ್ಣ ಇಂದಿಗೂ ಇದ್ದಾರೆ. ಎಂದೆಂದಿಗೂ ಇರುತ್ತಾರೆ. ನನ್ನ ಅಂತರಂಗದ ಒಳಗಿನ

ವಿಚಾರ ಎಲ್ಲವೂ ಅವರಿಗೆ ಗೊತ್ತು. ಸದಾ ಸನ್ಮಾರ್ಗ ತೋರಿ ನನ್ನನ್ನು ತಿದ್ದುತ್ತಲೇ ಇರುತ್ತಾರೆ. ನನ್ನ ಎಡಬಲದಲ್ಲಿ ಇರುವ ರಾಮ, ಕೃಷ್ಣರ ಬಗ್ಗೆ ನನಗೆ ನಂಬಿಕೆ ಇಲ್ಲದೆ ಇದ್ದರೆ ನಿನ್ನ ಹಾಗೆ ಪ್ರಶ್ನಿಸುವ ಅನೇಕರಂತೆ ನನಗೂ ಹುಚ್ಚು ಹಿಡಿಯುತ್ತಿತ್ತು.

ಚಕ್ರವರ್ತಿ ರಾಜಗೋಪಾಲಚಾರ್ಯರು ನಡುವೆ ಮಾತಾಡಿದರು. "ಈ ವಿವರಣೆಯಿಂದ ಪರಿಸ್ಥಿತಿ ಉತ್ತಮ ಆಗುವುದಿಲ್ಲ. ಈ ವಿವರಣೆ ಕೊಟ್ಟದುದರಿಂದಲೇ ಈ ತರುಣ ನಿಮ್ಮನ್ನು ಅವತಾರ ಎಂದು ಇನ್ನೂ ಬಲವಾಗಿ ಭಾವಿಸುವಂತೆ ಮಾಡಬಹುದು".

ಗಾಂಧೀಜಿ ಹೇಳಿದರು: "ಹಾಗಾದರೆ ನಿನಗೆ ಈ ಅಭಿಪ್ರಾಯ ದೃಢವಾಗಿದ್ದರೆ ಎಂದಾದರೊಂದು ದಿನ ನಾನು ಸಾಯುತ್ತೇನೆ. ಆಗ ನಿನ್ನ ದೇವರು ಮಾಯವಾಗುತ್ತಾನೆಯೇ?"

"ಆದರೆ ಕ್ರೈಸ್ತರು ಏಸುಕ್ರಿಸ್ತನನ್ನು ಪೂಜಿಸುತ್ತಾರಲ್ಲ?'

"ಕ್ರೈಸ್ತರು ಪೂಜಿಸುವ ಕ್ರಿಸ್ತನು ಪುನರುತ್ಥಾನಗೊಂಡ ಕ್ರಿಸ್ತ. ಅದೇ ರೀತಿ ರಾಮ, ಕೃಷ್ಣರನ್ನು ಪೂಜಿಸುವವರು ನಿನಗಿಂತಲೂ ಮತ್ತು ನನಗಿಂತಲೂ ಹೆಚ್ಚು ಜೀವಂತನಾಗಿರುವ ರಾಮ ಕೃಷ್ಣರನ್ನು ಪೂಜಿಸುತ್ತಾರೆ. ಅವರು ಈಗಲೂ ಇದ್ದಾರೆ. ಅನಂತಕಾಲದವರೆಗೂ ಅವರು ಇದ್ದೇ ಇರುತ್ತಾರೆ. ರಾಮ, ಕೃಷ್ಣ ಆದರ್ಶಗಳು, ನಿಮಗೆ ಅಸಹ್ಯವಾಗಿದ್ದರೆ, ಹಿಂದೂ ಧರ್ಮವನ್ನು ಬಿಡಬೇಕೆಂದು ಹರಿಜನರಿಗೆ ಹೇಳಿಕೊಡು. ಏಕೆ ಗೊತ್ತೇ? ರಾಮ, ಕೃಷ್ಣರನ್ನು ದೇವರು ಎಂದು ನಂಬದವ ಹಿಂದೂವೇ ಇಲ್ಲ. ಇದು ಖಂಡಿತ. ಮುಸ್ಲಿಮನೊಬ್ಬನು ಕಲೇಮಾದಲ್ಲಿ ತನಗೆ ನಂಬಿಕೆ ಇಲ್ಲ ಎಂದರೆ ಅವನನ್ನು ಮುಸ್ಲಿಂ ಸಮಾಜ ತಮ್ಮಿಂದ ಹೊರಗೆ ಹಾಕುತ್ತದೆ. ಶಂಬುಕ ಕೊಂದ ರಾಮನನ್ನೂ ಎಷ್ಟೋ ಕಥೆಗಳಿಗೆ ಆಶ್ರಯ ಆದ ಕೃಷ್ಣನನ್ನೂ ನಾನು ಪೂಜಿಸುತ್ತೇನೆಯೇ ಎಂದು ಕೇಳಬೇಡ. ಸತ್ಯ, ಶಿವ, ಪರಿಪೂರ್ಣ ಆದ ಎಲ್ಲದರ ಅವತಾರ ಆದ ಸಜೀವ ರಾಮ, ಕೃಷ್ಣರನ್ನು ನಾನು ಪೂಜಿಸುತ್ತೇನೆ."

**ಮತಾಂತರದ ವಿಷಯ :**

ಕಟ್ಟಕಡೆಯ ದಿನ ಸ್ನೇಹಿತರೆಲ್ಲರೂ ಬಲವಂತ ಮಾಡಿದ್ದರಿಂದ ಮತಾಂತರದ ಬಗ್ಗೆ ಹೇಳಿದರು : "ಮತಾಂತರದ ಭೀತಿಯಿಂದ ನಾವು ಏನನ್ನೂ ಮಾಡಲಾಗದು. ಮತಾಂತರವನ್ನು ನಿಲ್ಲಿಸಲು ನೀವು ಮಾಡಿದ ಪ್ರಯತ್ನ ಎಲ್ಲವೂ ವಿಫಲ ಆಗುತ್ತದೆ. ಮತಾಂತರ ಆಗಲಿ, ಬಿಡಲಿ, ಹರಿಜನರಿಗಿರುವ ಕುಂದು ಕೊರತೆಗಳನ್ನು ನಿವಾರಿಸಲು ನಮ್ಮ ಪ್ರಯತ್ನ ಇಮ್ಮಡಿ ಆಗಬೇಕು. ಮತಾಂತರ ಆಗುವುದು ಸಹಜ. ಅದನ್ನು ಗಮನಿಸಬಹುದು. ಅದರಿಂದಾಗಿ ಏನೂ ಮಾಡಬಾರದು. ಈ ಭೀತಿಯಿಂದ ನಾವು ಪ್ರಯತ್ನ ಮಾಡಿದರೆ ಆ ಭೀತಿ ಕಳೆದಾಗ ನಮ್ಮ ಪ್ರಯತ್ನ ಕುಂಠಿತ ಆಗುತ್ತದೆ. ಅದರಿಂದ ನಮ್ಮ ಉದ್ದೇಶ, ಭಂಗ, ನಮ್ಮ ಚಳವಳಿ ಎಲ್ಲವೂ ತಾತ್ಕಾಲಿಕ, ಇನ್ನು ಮುಂದೆ ಏನೂ ಇಲ್ಲ ಎಂದು ಹರಿಜನರಿಗೆ ಅನ್ನಿಸುತ್ತದೆ. ನಮ್ಮ ಚಳವಳಿ ಮುಖ್ಯವಾಗಿ ಧಾರ್ಮಿಕ.

ರಾಜಕೀಯ ಪರಿಳಿತಕ್ಕೂ ಅದಕ್ಕೂ ಸಂಬಂಧ ಇಲ್ಲ. ಆದರೆ ನಾವು ಎಷ್ಟೇ ಸಮರ್ಪಣೆ ಭಾವದಿಂದ ಕೆಲಸ ಮಾಡಿದರೂ, ನಮ್ಮ ಕೋಟ್ಯಂತರ ಜನ ಕೇವಲ ಉದಾಸೀನರಾಗಿ ತೀರ್ಮಾನಗಳನ್ನು ಮರೆಯುವದರಲ್ಲೇ ತೃಪ್ತರಾದರೆ, ಹಿಡಿಯಷ್ಟು ಜನ ನಾವು ಏನು ಮಾಡಲಾದೀತು. ಈ ತೀರ್ಮಾನಗಳೆಲ್ಲವೂ ಅವರಿಗಾಗಿಯೇ ಎಂಬುದು ಅರ್ಥವಾಗಿದ್ದರೆ ಏನು ಮಾಡಬೇಕು? ಕೆಲವು ಕಾಲದ ಹಿಂದೆ ಸ್ವದೇಶಿಯ ಬಗ್ಗೆ ಉಗ್ರ ಭಾಷಣ ಆಗುತ್ತಿದ್ದವು. ಭಾಷಣಕಾರರಿಗೆ ತಮ್ಮ ಮಾತಿನಂತೆ ತಾವೇ ನಡೆಸಬೇಕು ಎನಿಸುತ್ತಿರಲಿಲ್ಲ. 'ಸಾಧ್ಯವಿದ್ದ ಮಟ್ಟಿಗೆ' ಎಂಬ ಅನುಕೂಲ ಸಿಂಧು ವಚನ ಅವರಿಗೆ ರಕ್ಷೆ ಆಗಿತ್ತು. ಅಸ್ಪೃಶ್ಯತೆಯ ಈ ವಿಷಯದಲ್ಲಿ ಸಾಧ್ಯವಿದ್ದಷ್ಟು ಎಂಬ ಮಾತೇ ಇಲ್ಲ ಅದು ಪೂರಾ ಹೋಗಬೇಕು. ಗುಡಿಗಳಿಂದಲೂ ಅಷ್ಟೆ, ಸಮಾಜದಿಂದಲೂ ಅಷ್ಟೆ. ತಿರುವಾಂಕೂರಿನಲ್ಲಿ ಕೈಎತ್ತಿ ತೀರ್ಮಾನ ಮಾಡಿದ ಜನರೆಲ್ಲರೂ ತಮ್ಮ ತೀರ್ಮಾನಗಳೆಲ್ಲವನ್ನು ಮನಸ್ಸಿಗೆ ತಂದುಕೊಂಡರೆ ಹರಿಜನ ಪ್ರವೇಶವನ್ನು ಅಡ್ಡಿ ಪಡಿಸಬಹುದಾದ ಶಕ್ತಿ ಜಗತ್ತಿನಲ್ಲೇ ಇಲ್ಲ. ಆದ್ದರಿಂದ ನಾವು ಕಾಯಾ ವಾಚಾ ಶುದ್ಧರಾಗಬೇಕು. ನನಗೇನೋ ಅನುಮಾನ. ಇಲ್ಲಿ ಬಂದಿರುವವರಲ್ಲಿ ಕಾಯಾ ವಾಚಾ ಒಂದು ಆಗಿರುವವರು ಕಡಿಮೆ. ಹರಿಜನರ ಸಮಸ್ಯೆಯ ವಿಷಯದಲ್ಲಿ ನೀವು ಬಹಳ ದೂರ ಹೋಗಲಾರರಿ : ಇಷ್ಟು ಸಾಕು, ಇನ್ನು ಮುಂದೆ ಬೇಡ ಎಂದು ನೀವು ಅನುಕೂಲ ಸಿಂಧುವಿನ ಆಸರೆ ಪಡೆದರೆ ಹರಿಜನರು ನಿಮ್ಮನ್ನು ನಂಬುವುದಿಲ್ಲ. ಅವರಿಗೆ ಕುರುಹು ಬೇಕು. ಸಾಕ್ಷ್ಯ ಬೇಕು. ಎಲ್ಲ ಹಿಂದೂಗಳಿಗೆ ಯಾವ ಉಚ್ಚ ಸ್ಥಾನ ಲಭ್ಯವೋ ಅದು ತಮಗೆ ಲಭಿಸಬೇಕು ಎನ್ನುತ್ತಾರೆ. ನಾವೇ ಹದಿನಾರಾಣೆ ಹರಿಜನರಾಗಬೇಕು. ಅಲ್ಲಿಯವರೆಗೆ ಯಾವದೂ ಆಗುವುದಿಲ್ಲ.

ಹೀಗೆಂದರೆ ನಾವು ಸತ್ತ ದನದ ಮಾಂಸ ತಿನ್ನಬೇಕು ಅಥವಾ ಹೆಂಡ ಕುಡಿಯಬೇಕು ಅಥವಾ ಅಸ್ವಚ್ಛವಾಗಿರಬೇಕು ಎಂದಲ್ಲ. ಅದು ಕೂಡದು. ಅವರು ಸಂಕಟಪಟ್ಟಾಗ ನಾವು ಸಂಕಟ ಪಡಬೇಕು. ಅವರ ಸಂಕಟದ ಕಾರಣವನ್ನು ದೂರ ಮಾಡಬೇಕು. ಅವರ ಹೀನ ಸ್ಥಿತಿಗೆ ಅವರ ಕರ್ಮ ಕಾರಣ ಎನ್ನುವುದು ಬೇಡ. ಅವರಿಗಾಗಿ ನಮ್ಮ ಕರ್ತವ್ಯದ ಋಣ ಇದೆ. ಅದರಲ್ಲಿ ಸ್ವಲ್ಪವನ್ನಾದರೂ ತೀರಿಸೋಣ. ಪ್ರತಿದಿನವೂ ಬೆಳಿಗ್ಗೆ ಸಂಜೆ ಆ ಋಣ ತೀರಿಸಲು ಏನು ಮಾಡಿದೆವೋ ನಮ್ಮನ್ನು ನಾವೇ ಕೇಳಿಕೊಳ್ಳೋಣ. ಇಷ್ಟು ಮಾಡುವವರೆಗೆ ನಮ್ಮ ತೀರ್ಮಾನಗಳೆಲ್ಲವೂ ವ್ಯರ್ಥ.

**ಶುದ್ಧಿ ಸಂಘಟನೆ :**

ಪ್ರಶ್ನೆ : ಹಿಂದೂ ಧರ್ಮಕ್ಕೆ ಹಿಂದಿರುಗಿ ಬರಬೇಕು ಎನ್ನುವವರ ಬಗ್ಗೆ ನಮ್ಮ ಪ್ರವೃತ್ತಿ ಹೇಗಿರಬೇಕು?

ಉತ್ತರ : ಅವರಿಗೆ "ನೀವು ಖಂಡಿತ ಬರಬಹುದು. ಬನ್ನಿ" ಎಂದು ಹೇಳೋಣ. ಆದರೆ ಅವರಿಗೆ ಯಾವ ಬಗೆಯ ಪ್ರಲೋಭವನ್ನೂ ತೋರಿಸುವುದು ಬೇಡ.

ಪ್ರಶ್ನೆ : ಇಲ್ಲ, ಇಲ್ಲ. ಆ ಮಾತೇ ಇಲ್ಲ. ಆದರೆ ಶುದ್ಧೀಕರಣಕ್ಕೆ ನಿಮ್ಮ ಒಪ್ಪಿಗೆ ಇದೆಯೇ?

ಉತ್ತರ : ಇಲ್ಲ. ಶುದ್ಧೀಕರಣ ಅಗತ್ಯವಿಲ್ಲ. ಉದ್ದೇಶಪೂರ್ವಕ ಆಗಿಯೇ ಅವರು ಮತಾಂತರಗೊಂಡಿದ್ದರೆ, ಪರಿತಾಪಗೊಂಡು ಅವರು ಹಿಂದಕ್ಕೆ ಬರುತ್ತಾರೆ. ಆಗ ಶುದ್ಧಿ ಮಾಡಿಕೊಳ್ಳಲು ಅವರಿಗೇ ಹೇಳಿದರೆ ಆಯಿತು. ನಾನಂತೂ ನೂರು ಸಲ 'ರಾಮನಾಮ' ಜಪ ಮಾಡಿದರೆ ಸಾಕು ಎನ್ನುತ್ತೇನೆ.

ಪ್ರಶ್ನೆ : ಇಂಥ ಸ್ವಯಂಪ್ರೇರಿತ ಶುದ್ಧೀಕರಣಕ್ಕೆ ಒಬ್ಬ ಹರಿಜನ ಸೇವಕ ಹೋದರೆ ತಪ್ಪೇ?

ಉತ್ತರ : ಅವನು ಹೋದರೆ ತಪ್ಪಲ್ಲ. ಆದರೆ ಈ ಶುದ್ಧೀಕರಣ ಹರಿಜನ ಸೇವಕ ಸಂಘದ ಕಾರ್ಯಕ್ರಮ ಅಲ್ಲ ಎಂಬುದು ನೆನಪಿರಬೇಕು. ಅಲ್ಲದೆ ಹಿಂದಕ್ಕೆ ಬರುವವನಿಗೆ ಏನೂ ಪ್ರಲೋಭನ ಇರದೆ ಸ್ವೇಚ್ಛೆಯಿಂದ ಬಂದನು ಎಂದು ಮನದಟ್ಟು ಮಾಡಿಕೊಳ್ಳಬೇಕು. ಮುಖ್ಯ ಮಾತು ಇದು. ಹಿಂದಕ್ಕೆ ಬರುವವನು ಪ್ರಾಮಾಣಿಕನೇ ಅಲ್ಲವೇ? ಅವನು ಪ್ರಾಮಾಣಿಕ ಆದರೆ ಅವನ ಸ್ನೇಹವನ್ನು ಸಂಪಾದಿಸಲು ಸರ್ವ ಪ್ರಯತ್ನವನ್ನೂ ಮಾಡಿ.

*(ಹರಿಜನ ೪-೭-೧೯೩೬)*

**ಬೆಂಗಳೂರಿನ ಹರಿಜನರೊಡನೆ ಮಾತುಕತೆ :**

ಈ ನಾಲ್ಕು ವರ್ಷ ಹರಿಜನ ಸಮಸ್ಯೆಯನ್ನೇ ಮುಖ್ಯವಾಗಿ ಮಾಡಿಕೊಂಡದ್ದಕ್ಕಾಗಿ, ಮೂಕರಾಗಿದ್ದ ಹರಿಜನರಲ್ಲಿ ಅನೇಕರಿಗೆ ಮಾತು ಬಂದಿದೆ. ನಾನಾ ಬಗೆಯ ಸಭೆ, ಸಮ್ಮೇಳನಗಳು ನಡೆಯುತ್ತಿವೆ. ಭಾರತದಲ್ಲೆಲ್ಲಾ ಹರಿಜನ ಸಂಘಗಳು ಆಗುತ್ತಿವೆ. ಎಲ್ಲೆಲ್ಲೂ ಅಸಮಾಧಾನ, ಉದ್ವೇಗ ಅವರ ದುಃಖಗಳಿಗಾಗಿ ಎಷ್ಟೋ ಸಲ ಉದ್ರೇಕ ಆಗುತ್ತದೆ. ಆಗ ಅವರಿಗೆ ಹಿತ ಹೇಳುವವರಿಗೂ ಕೊರತೆ ಇಲ್ಲ.

ಆದಿಕರ್ನಾಟಕ ಸಂಘ ಒಂದು ಇದೆ. ಅವರ ಪ್ರತಿನಿಧಿ ಒಬ್ಬ ರೋಮನ್ ಕೆಥೋಲಿಕ್. ಒಂದು ದಿನ ಬೆಳಗ್ಗೆ ಅವರ ನಿಯೋಗ ಒಂದನ್ನು ಕರೆದುಕೊಂಡು, ಮೈಸೂರಿನ ಮಾಜಿ ನ್ಯಾಯಾಧಿಪತಿ ಒಬ್ಬರು, ಡಿಸೌಜಾ ಬಂದಿದ್ದರು. ಅವರ ಮನಸ್ಸಿನಲ್ಲಿ ಏನಿದೆಯೋ ಗಾಂಧೀಜಿಗೆ ತಿಳಿಸಬೇಕು ಎಂದು ಬರೆದಿದ್ದರು. ಹರಿಜನ ಸೇವಕ ಸಂಘದಲ್ಲಿ ಹಿಂದೂಗಳೇ ಹೆಚ್ಚು, ಹರಿಜನರು ಮಾಡುವ ಕೆಲಸವನ್ನು ಅವರು ಗಮನಿಸುವುದೇ ಇಲ್ಲ. ಹರಿಜನ ಸೇವಕ ಸಂಘದಿಂದ ಹಣ ಹರಿಜನರಿಗೆ ಸಿಗಬೇಕು ಎಂಬುದನ್ನು ಅವರು ಮರೆತು ಬಿಟ್ಟಿದ್ದಾರೆ. ಮೇಲಿನವರು ಕೆಳಗಿನವರಾಗಿ ಮಾಡುವ ಒಂದು ಬಗೆಯ ಪೋಷಕ ಭಾವ ಸಂಘದಲ್ಲಿ ಕಾಣುತ್ತಿದೆ. ಮಿಷನರಿಗಳು ಬೇಕಾದಷ್ಟು ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ಹಿಂದೂಗಳ ವಿರೋಧ ಹೆಚ್ಚಿದರೆ ಮಿಷನರಿಗಳು ತಮ್ಮ ವಿರೋಧವನ್ನು ಹೆಚ್ಚಿಸಬಹುದು. ಹರಿಜನರಿಗೆ ಡಾ.ಅಂಬೇಡ್ಕರರನ್ನು ಹಿಂಬಾಲಿಸುವ ಮನಸ್ಸಿದ್ದರೂ ಡಿಸೌಜಾ ಸ್ವಯಂ

ಅವರನ್ನು ತಡೆದಿದ್ದ. ಹರಿಜನ ಸೇವಕ ಸಂಘದ ಆಶ್ರಯದಲ್ಲಿ ನಡೆಯುತ್ತಿರುವ ಕಂಗೇರಿ ಗುರುಕುಲಾಶ್ರಮದಲ್ಲಿ ಹರಿಜನರನ್ನು ಸೇರಿಸಿಕೊಳ್ಳುವುದಿಲ್ಲ. ಹರಿಜನ ಸೇವಕ ಸಂಘದ ಹಣದಿಂದ ನಡೆಯುತ್ತಿರುವ ಈ ಸಮ್ಮೇಳನ ಕೇವಲ ಹರಿಜನೇತರರದು. ಅದರಲ್ಲಿ ಹರಿಜನರ ಕುಂದು ಕೊರತೆಗಳನ್ನು ಹೇಳಲು ಅವಕಾಶವೇ ಇಲ್ಲ. ಹರಿಜನರ ವಸತಿ ಬಲು ಘೋರ. ಅವರ ಆರ್ಥಿಕ, ಸಾಮಾಜಿಕ ಸ್ಥಿತಿ ಉತ್ತಮಗೊಳ್ಳುವುದು ಅಗತ್ಯ ವಾಗಿರುವಾಗ, ಬರೀ ದೇವಾಲಯ ಪ್ರವೇಶದ ವಿಷಯವನ್ನೇ ಮುಂದೆ ಮಾಡಿದರೆ ಏನು ಪ್ರಯೋಜನ ಇತ್ಯಾದಿ. ಈ ಅಭಿಪ್ರಾಯಗಳಲ್ಲಿ ತನ್ನದು ಯಾವುದೂ ಇಲ್ಲ- ಎಂದು ಡಿಸೌಜಾ ಹೇಳಿದರು.

ಗಾಂಧೀಜಿ ಪ್ರಾರಂಭದಲ್ಲಿಯೇ ಕೆಲವು ತಪ್ಪುಗಳನ್ನು ತಿದ್ದಿದರು. ಕೆಂಗೇರಿ ಗುರುಕುಲ ಹರಿಜನ ಸೇವಕ ಸಂಘದಲ್ಲಿ ಹರಿಜನರಿಗೆ ಅವಕಾಶ ಇದ್ದೇ ಇದೆ. ಹರಿಜನರು ಯಾರೂ ಬಂದರೂ ತೆಗೆದುಕೊಳ್ಳುತ್ತಾರೆ. ಅವರಿಗಾಗಿಯೇ ಗುರುಕುಲ ಇರುವುದು. ಇನ್ನೊಂದು ಮುಖ್ಯ ಮಾತು : ಈಗ ನಡೆಯುತ್ತಿರುವ ಸಮ್ಮೇಳನ ಸವರ್ಣ ಹಿಂದೂ ಕೆಲಸಗಾರರದು. ಅವರೆಲ್ಲರೂ ಸೇರಿ ವಿಚಾರ ವಿನಮಯ ಮಾಡಿಕೊಂಡು, ತಮ್ಮ ಕಷ್ಟಗಳನ್ನು ಚರ್ಚಿಸಿ, ತಮ್ಮ ಕೊರತೆಗಳನ್ನು ಪರಿಶೀಲಿಸಿ, ಇನ್ನೂ ಚೆನ್ನಾಗಿ ಕೆಲಸ ಮಾಡಲು ಸೇರಿದ್ದಾರೆ. ಈ ಸಮ್ಮೇಳನ ವಂಶಪಾರಂಪರ್ಯ ಆಗಿ ಪಾಪ ಮಾಡುತ್ತ ಬಂದಿರುವವರದು. ಹರಿಜನರಿಗೆ ತಾವು ಮುಟ್ಟಿಸಬೇಕಾದ ಋಣವನ್ನು ಹೇಗೆ ತೀರಿಸಬೇಕು ಎಂದು ಚರ್ಚಿಸಲು ಬಂದಿದ್ದಾರೆ. ಹರಿಜನರು ಈ ಸಮ್ಮೇಳನಕ್ಕೆ ಬಂದು ಏನು ತಾನೇ ಮಾಡಬಲ್ಲರು. ಖಂಡಿತ ಅವರು ಬಂದು ಪ್ರೇಕ್ಷಕರಾಗಬಹುದು. ಅವರು ಪಾಲುಗೊಂಡರೆ ಏನು ಪ್ರಯೋಜನ?

ಡಿಸೌಜಾ : ನೀವೇನೋ ಋಣಿಗಳು ಎಂದುಕೊಳ್ಳಬಹುದು. ಆದರೆ ಹರಿಜನರು ನೀವು ಮಾಡುವ ಕೆಲಸದಲ್ಲಿ ದೊಡ್ಡಸ್ತಿಕೆ ಇದೆ ಎಂದು ಅನುಮಾನ ಪಡುತ್ತಾರೆ. ಅವರಿಗೆ ಸಹಾಯಮಾಡುವ ಬದಲು ಅವರನ್ನು ತುಳಿದಿಡುವ ದಾರಿ ಹುಡುಕುತ್ತಿದ್ದೀರಿ ಎಂದುಕೊಳ್ಳುತ್ತಾರೆ.

ಗಾಂಧೀಜಿ: ನಿಷ್ಕಾರಣ ಅನುಮಾನ ಇದ್ದರೆ ನಾನು ಅದಕ್ಕೆ ಏನು ಮಾಡಲಿ? ಸವರ್ಣರು ಮಾಡುವ ಕೆಲಸ ಪ್ರಾಮಾಣಿಕ ಆಗಿದ್ದರೆ, ಸಂದೇಹ ತನಗೆ ತಾನೇ ನಿವಾರಣೆ ಆಗುತ್ತದೆ. ನಾನು ಹರಿಜನರನ್ನು ನಿಂದಿಸಲಾರೆ. ಅವರಿಗೆ ಇದಕ್ಕಿಂತ ಬೇರೆ ಏನು ಗೊತ್ತು?

ಒಬ್ಬ ಹರಿಜನ :ನಮಗೆ ಸಂದೇಹ ಇಲ್ಲ. ನಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳಬೇಕು.

ಗಾಂಧೀಜಿ :ನನಗೆ ಹೇಳಬೇಕೆ ಇದನ್ನು ನೀವು? ನನಗೆ ಗೊತ್ತಿಲ್ಲವೆ? ಮನೆ ಮನೆಯ ಮಾಳಿಗೆ ಹತ್ತಿ ನಾನು ಹೇಳುತ್ತಿಲ್ಲವೇ? ನೀವು ಎಲ್ಲೆಲ್ಲಿಯೂ ಮೇಲಕ್ಕೆ ಏರಬೇಕು. ಈ ಸಮ್ಮೇಳನ ಪಾಪವನ್ನು ಪ್ರಾಮಾಣಿಕವಾಗಿ ತೊಳೆದುಕೊಳ್ಳಲು ಪ್ರಯತ್ನಿಸುವವರದು ಎಂಬುದು ನಿಮಗೆ ಅರ್ಥ ಆಗಬೇಕು. ಖಂಡಿತ

ನೀವು ಈ ಸಮ್ಮೇಳನಕ್ಕೆ ಬರಬಹುದು. ಆದರೆ ಇಲ್ಲಿ ನಡೆಯುವುದನ್ನು ನೀವು ನಿರೀಕ್ಷಿಸಿದ ರೀತಿ ಅಲ್ಲ. ಬೇರೆ. ನಾವೆಲ್ಲರೂ ಋಣ ಮುಕ್ತಿಗಾಗಿ ಸೇವೆ ಮಾಡುವವರು. ನಾವು ಕೊಡಬಹುದಾದದ್ದು ಅಲ್ಪಸ್ವಲ್ಪ ಕಂತು ಮಾತ್ರ. ಹೆಚ್ಚು ಏನೂ ಅಲ್ಲ. ನಮ್ಮ ಋಣಮುಕ್ತಿಯು ಈ ಸೇವಾರೂಪದ ಸಣ್ಣ ಕಂತುಗಳನ್ನು ನೋಡಿ ಕೊಪಗೊಂಡು, ಅವನ್ನು ಹಿಂತಿರುಗಿ ನಮ್ಮ ಮೋರೆಗೆ ಬಿಸುಟು ನಮ್ಮನ್ನು ಓಡಿಸಬಹುದು. ನಮ್ಮ ಹಣೆ ಬರಹ ಅದು. ಆದರೆ ಅದನ್ನೂ ನಾವು ಅನುಭವಿಸಬೇಕು. ನಮ್ಮ ಉದ್ದೇಶ ಬಡ್ಡಿ ಸಮೇತ ಅಸಲನ್ನು ಕೊಡುವುದು. ಅಂಬೇಡ್ಕರ್ ನಮ್ಮನ್ನು ಬಯ್ದರೆ, ಹಾಗೆ ಆಗಬೇಕು ಎನ್ನುತ್ತೇನೆ. ಒಂದೊಂದು ಸಲ ನಮ್ಮ ಸಾಲಿಗೆ ಬಹಳ ದೊಡ್ಡವನಾಗುತ್ತಾನೆ. ಅವನಿಗೆ ಈ ಸಾಲ, ಸಾಲಗಾರರ ಚಿಂತೆ ಇಲ್ಲ. ಆದರೆ ನಾವು ಮಾತ್ರ ಎಲ್ಲವನ್ನೂ ಮರೆತು ಈ ಋಣ ಪರಿಹಾರದ ಕಡೆಗೆ ಗಮನ ಕೊಡಬೇಕು. ಅಸಮಾನತೆ–ವಿಷಮತೆಗಳಿಂದ ಬಟ್ಟಲು ತುಂಬಿದರೆ ಆಗ ಆ ಜನ ಹಾಳಾಗು ತ್ತಾರೆ ಎಂದು ಶಾಸ್ತ್ರಗಳು ಹೇಳುತ್ತವೆ. ಹಿಂದೂ ಧರ್ಮ ಅಸ್ಪೃಶ್ಯತೆಯನ್ನು ತೊರೆದು ಹಾಕದಿದ್ದರೆ ನಾಶವಾಗಿ ಹೋಗುತ್ತದೆ. ಅಂಬೇಡ್ಕರ್ ಏನೇ ಮಾಡಲಿ ಬಿಡಲಿ, ನಮ್ಮ ಪ್ರಯತ್ನ ಪ್ರಾಮಾಣಿಕ ಆಗಿದ್ದರೆ, ಸುಧಾರಕರಲ್ಲಿ ದೊಡ್ಡಸ್ತಿಕೆ ನಿಮಗೆ ಕಾಣಬಾರದು. ಈಗ ಇರುವ ಹಿಂದೂ ಧರ್ಮವನ್ನು ನೋಡಿದರೆ, ಅನೇಕ ಸವರ್ಣರನ್ನು ಕತ್ತಲು ಮುತ್ತಿಕೊಂಡಿದೆ. ಅಧರ್ಮವನ್ನೇ ಅವರು ಧರ್ಮ ಎನ್ನುತ್ತಾರೆ. ಪಾಪ ವಿಮೋಚನೆಗೆ ಕಾತರರಾದ ಕೆಲವು ಅಪೂರ್ಣ ವ್ಯಕ್ತಿಗಳು ಇಂಥ ಕತ್ತಲೆಯಿಂದ ಹೊರಗೆ ಬರಲು ಪ್ರಯತ್ನಿಸುತ್ತಿದ್ದಾರೆ. ಕೆಲವು ಹರಿಜನರ ಸ್ಥಿತಿಯನ್ನು ಕುರಿತು ದಿನವೂ ಸವರ್ಣರಿಗೆ ಹೇಳುತ್ತಲೇ ಇದ್ದೇನೆ. ಹರಿಜನರ ಈ ಕೊಳಕು ರೂಢಿಗಳಿಗೆ ಅವರೇ ಕಾರಣ ಎಂದು. ಉಳಿದ ಹಿಂದೂಗಳಂತೆ ಅವರಿಗೂ ಸಮಾನಸ್ಥಾನ ಕೊಡದೇ ಹರಿಜನರು ಸ್ವಚ್ಛ ಆಗಿರಬೇಕು ಎಂದು ಒತ್ತಾಯಿಸುವುದು ತಪ್ಪು ಎನ್ನುತ್ತಿದ್ದೇನೆ. ಮೊದಲು ಅವರನ್ನು ನಮ್ಮಲ್ಲಿ ಸೇರಿಸಿಕೊಳ್ಳಬೇಕು. ಆ ಮೇಲೆ ಅವರು ತಾವೇ ಸ್ವಚ್ಛ ಆಗುತ್ತಾರೆ. ನಿಮ್ಮ ವಸತಿ ಮುಂತಾದ ಕುಂದು–ಕೊರತೆಗಳ ಬಗ್ಗೆ ಸರಕಾರಕ್ಕೆ ಹೇಳುತ್ತಿದ್ದೇನೆ. ನೀವು ಎಣಿಸಿದಷ್ಟು ಬೇಗ ಕೆಲಸ ಆಗಲಿಕ್ಕಿಲ್ಲ. ಸ್ವಲ್ಪ ಸೈರಿಸಿ ಕೊಳ್ಳಿ, ನಮ್ಮ ಬಗ್ಗೆ ಸಂದೇಹ ಪಡಬೇಡಿ.

ಡಿಸೌಜಾ : ತಾವು ಕೊಟ್ಟ ಭರವಸೆಗೆ ನಮ್ಮ ಧನ್ಯವಾದಗಳು. ಹರಿಜನರಿಗೂ ನಿಮ್ಮ ಬಂಧುತ್ವದ ಹಸ್ತವನ್ನು ನೀಡಿ. ಪ್ರಾಯಶ್ಚಿತ್ತ ಮಾಡಿಕೊಳ್ಳುವ ಪಾಪಿಯು ತಾನು ಏನೋ ದೇವರ ಸೇವೆ ಮಾಡುತ್ತಿದ್ದೇನೆ ಎಂದು ಬಡಿವಾರ ತೋರಿಸಬಾರದು. ಹರಿಜನ ಜನಸಂಖ್ಯೆಗೆ ತಕ್ಕಂತೆ ಮೈಸೂರು ಪ್ರತಿನಿಧಿ ಸಭೆಯಲ್ಲಿ ಹರಿಜನರಿಗೆ ನೇರವಾಗಿ ಪ್ರಾತಿನಿಧ್ಯ ಸಿಗುವಂತೆ ಮಾಡಿ. ಅವರೂ ಮನುಷ್ಯರು, ಅವರಿಗೆ ಮನುಷ್ಯತ್ವ ಬಂದಿದೆ ಎಂದು ಆಗಲಿ.

ಗಾಂಧೀಜಿ: ಇದಕ್ಕೆ ನಿಮಗೆ ಒಂದು ಸಲಹೆ ಕೊಡುತ್ತೇನೆ. ಈಗ ಇರುವ ಮಹಾರಾಜರನ್ನು ಕೆಳಗಿಳಿಸಿ. ಒಂದು ವಾರ ಮಾತ್ರ ನನಗೆ ಮಹಾರಾಜನ ಪದವಿ ಕೊಡಿ!

*(ಹರಿಜನ ೨೭-೬-೧೯೩೬)*

**ಒಂದು ಊರು :**

ಬೆಂಗಳೂರಿನ ಒಬ್ಬ ಅನಾಮಿಕ ಒಂದು ಕಾಗದ ಬರೆದು ಸಮಾಜದಲ್ಲಿ ಪ್ರತಿಷ್ಠಿತರಿಗೆ ತಾವು ಪಕ್ಷಪಾತ ಮಾಡುತ್ತಿದ್ದಾರೆ ಸಂದರ್ಶನ ಕೊಡುವುದರಲ್ಲಿ ಎಂದು ಬರೆದ ಹಾಗೆ ಮಹಾದೇವ ದೇಸಾಯಿ ಬರೆದುಕೊಂಡಿದ್ದಾರೆ. ಅನೇಕ ಬಡವರಿಗೆ ಅನೇಕರಿಗೆ ಸ್ವಯಂ ಸೇವಕರು ಸಂದರ್ಶನವನ್ನೇ ಕೊಡಿಸುವುದಿಲ್ಲವಂತೆ. ಗಾಂಧೀಜಿಯ ದ್ವಾರಪಾಲಕರಾಗಿ ತಾವು ಕೆಲಸ ಮಾಡಿದ ಎಷ್ಟೋ ವರ್ಷಗಳಲ್ಲಿ ಅನೇಕರನ್ನು ಹಿಂದಕ್ಕೆ ಕಳಿಸಿದ್ದೂ ನಿಜ ಎಂದು ಅವರು ಬರೆದಿದ್ದಾರೆ. ಆದರೆ ಯಾರ ಭಯಕ್ಕೂ ಹೆದರಿ ಅಲ್ಲ, ಯಾರ ಅನುಗ್ರಹವನ್ನು ಬೇಡಿ ಅಲ್ಲ. ಕೆಲವು ಸ್ವಾರಸ್ಯವಾದ ಸಂಗತಿಗಳನ್ನು ಅವರು ಹೇಳಿದ್ದಾರೆ.

ನಂದಿಯಲ್ಲಿ ಒಬ್ಬ ಕುರುಡು ಭಿಕ್ಷುಕ ತನ್ನ ಒರಟು ತಂಬೂರಿಯನ್ನು ಹಿಡಿದು, ಗಾಂಧೀಜಿ ಹಾಡನ್ನು ಕೇಳಿಸುವ ಅವಕಾಶ ಮಾಡಿಕೊಂಡ. ಅವನಿಗೆ ಹಣ ಕೊಟ್ಟು ಗಾಂಧೀಜಿ ಕಳುಹಿಸಿದರು. ಬೆಂಗಳೂರಿನಲ್ಲಿ ಸಾವಿರಾರು ಜನ ಸಂಜೆ ಪ್ರಾರ್ಥನೆಗೆ ಬರುತ್ತಾರೆ. ಯಾರೂ ಅವರನ್ನು ತಡೆಯುವುದಿಲ್ಲ. ಅನೇಕ ಹರಿಜನರು ಹಣ್ಣು ಕಾಯಿ ತರುತ್ತಾರೆ. ಅವರಿಗೇ ಅವು ಹಿಂತಿರುಗುತ್ತವೆ. ಬೆಂಗಳೂರಿನಲ್ಲಿದ್ದಾಗ ಕಟ್ಟ ಕಡೆಯ ಎರಡು ದಿನ ಗಾಂಧೀಜಿ ತುಂಬಾ ದಣಿದು ಹೋದರು. ಮೊದಲೇ ಗೊತ್ತಾದ ಸಂದರ್ಶನ ಗಳ ಹೊರತು ಬೇರೆ ಯಾವದಕ್ಕೂ ಅವಕಾಶ ಕೊಡಬೇಡ ಎಂದರು. ನಾಲ್ಕು ಜನ ಸರಕಾರಿ ಅಧಿಕಾರಿಗಳು, ಒಬ್ಬ ರಾಜ, ಮತ್ತು ರಾಜಕುಮಾರಿ ಎಲ್ಲರನ್ನೂ ಗಾಂಧೀಜಿಯ ಸಂದರ್ಶನ ಪಡೆಯದೆ ಹಿಂತಿರುಗಲು ಕೇಳಿಕೊಳ್ಳಬೇಕಾಯಿತು. ಎಷ್ಟೋ ಮಂದಿ ಸಂದರ್ಶನಾರ್ಥಿಗಳಿಗೆ ಹೀಗೆಯೇ ಮಾಡಬೇಕಾಯಿತು.

ಈ ದಿನಗಳಲ್ಲಿಯೂ ಕೂಡ ಕೆಲವರಿಗೆ ಇಲ್ಲ ಎನ್ನಲು ಸಾಧ್ಯ ಆಗಲೇ ಇಲ್ಲ. ಒಬ್ಬ ಮನುಷ್ಯ ಒಂದು ಚೀಟಿ ಬರೆದು ಕಳುಹಿಸಿದ. ತನ್ನ ಕನಸಿನಲ್ಲಿ ಗಾಂಧೀಜಿ ಒಂದು ಕುಡಿತದ ಚಟವನ್ನು ಬಿಡಬೇಕು ಎಂದು ಹೇಳಿದರಂತೆ. ಆ ಚಟದಿಂದ ಅವನ ಮನೆಯೇ ಹಾಳಾಗಿತ್ತು. ಅವನು ಕುಡಿತವನ್ನು ಬಿಟ್ಟಿದ್ದ. ಈಗ ಗಾಂಧೀಜಿಯ ಆಶೀರ್ವಾದ ಬೇಕು. ಅವನಿಗೆ ಅದು ಸಿಕ್ಕಿತು. ಗಾಂಧೀಜಿಯ ಪಾದಕ್ಕೆ ಬಿದ್ದು, ಅವಾಕ್ಕಾಗಿ ಆನಂದದಿಂದ ಕುಣಿದಾಡಿದ. "ನೀನು ಕುಡಿತ ಬಿಟ್ಟು ಎಷ್ಟು ದಿನ ಆಯಿತು?" ಎಂದು ಗಾಂಧೀಜಿ ಕೇಳಿದರು. 'ಏಳು ವರ್ಷ' ಎಂದು ಆತ ಹೇಳಿದ. "ಮತ್ತೆ ಎಂದೂ ಕುಡಿಯಬೇಡ. ದೇವರು ದಯೆ ತೋರಲಿ" ಎಂದರು ಗಾಂಧೀಜಿ. ಒಂದು ದಿನ ಸಂಜೆಗೆ ಹರಿಜನ ನವದಂಪತಿಗಳಿಬ್ಬರು ಗಾಂಧೀಜಿಯ ಆಶೀರ್ವಾದಕ್ಕಾಗಿ ಒತ್ತಾಯ ಮಾಡಿದರು. ಅರ್ಧ

ಗಂಟೆ ಕಾದ ಮೇಲೆ ಅವರನ್ನು ಒಳಗೆ ಬಿಟ್ಟಾಗ, ಅವರಿಗೆ ಆದ ಅನುಭವ ಇಡೀ ಜೀವನದಲ್ಲಿಯೇ ನೆನಪು ಇರುವಂಥದ್ದು.

ಗಾಂಧೀಜಿಗೆ ಅವರು ಹರಿಜನರು ಎಂಬುದು ಗೊತ್ತಿಲ್ಲ. ಅವರ ವಿವಾಹದ ವೇಷ ಭೂಷಣ ಅಷ್ಟು ಶ್ರೀಮಂತಿಕೆಯದಾಗಿತ್ತು? "ನೀವು ನವದಂಪತಿಗಳೋ? ನನಗಾಗಿ ಏನು ತಂದಿದ್ದೀರಿ?" ಎಂದು ಗಾಂಧೀಜಿ ಕೇಳಿದರು.

ಮದುವೆಯ ಗಂಡು ಹೇಳಿದ : "ಹೂ ತಂದಿದ್ದೇವೆ'.

'ಹೂ ಸಾಲುವುದಿಲ್ಲ. ಮದುವೆ ಆದವರು ನೀವು. ಬರೀ ಹೂ ಕೊಟ್ಟು ನನ್ನನ್ನು ಸಮಾಧಾನ ಪಡಿಸುತ್ತೀರಾ?'

"ಸ್ವಾಮೀ, ದ್ರಾಕ್ಷಿಯನ್ನೂ ತಂದಿದ್ದೇವೆ."

"ದ್ರಾಕ್ಷಿಹಣ್ಣು ಹುಳಿ"-ಎಂದರು ಗಾಂಧೀಜಿ. ಇದ್ದವರೆಲ್ಲರೂ ಗೊಳ್ಳೆಂದು ನಕ್ಕರು. 'ದ್ರಾಕ್ಷಿಯನ್ನು ತೆಗೆದುಕೊಳ್ಳುವುದಿಲ್ಲ. ಹೂವನ್ನು ತೆಗೆದುಕೊಳ್ಳುವುದಿಲ್ಲ. ಇಬ್ಬರೂ ಹೋಗಿ ವಿಚಾರ ಮಾಡಿಕೊಳ್ಳಿ, ಬಡ ಹರಿಜನರಿಗಾಗಿ ಏನು ಕೊಡುತ್ತೀರಿ?'

"ನಾವೇ ಹರಿಜನರು" ಎಂದರು ಅವರು. ಅವರ ಪರವಾಗಿ ಬ್ರಹ್ಮಚಾರಿ ರಾಮಚಂದ್ರ ಹೇಳಿದರು: ಬಾಪೂ ಈತ ದಿವಾನ ಬಹದ್ದೂರ ಶ್ರೀನಿವಾಸನ್ನರ ಮೊಮ್ಮಗ. ಒಂದು ಗಳಿಗೆ ಗಾಂಧೀಜಿ ಸುಮ್ಮನೆ ಇದ್ದರು. ದಿವಾನ ಬಹದ್ದೂರರೇ ಹರಿಜನರು ಎಂಬುದನ್ನೇ ಅವರು ಮರೆತಿದ್ದರು. ಆಮೇಲೆ ಹೇಳಿದರು. "ಸರಿ, ಸರಿ. ಹಾಗಾದರೆ ನೀವು ಏನೂ ಕೊಡಬೇಕಾಗಿಲ್ಲ: ನಾನೇ ನಿಮಗೆ ಕೊಡಬೇಕು".

"ನಿಮ್ಮ ಆಶೀರ್ವಾದ ನಮಗೆ ಬೇಕು".

"ಅದಂತೂ ಇದ್ದೇ ಇದೆ. ಹೇಳಿ, ಹಿಂದೂ ಧರ್ಮದಲ್ಲಿ ನಿಮಗೆ ಸಂತೋಷ ಇದೆಯೋ ಇಲ್ಲವೋ. ಅಥವಾ ಈ ಹೀನ ಧರ್ಮವನ್ನು ಬಿಟ್ಟು ಬಿಡುತ್ತೀರೋ"

"ನಮಗೆ ತುಂಬಾ ಸಂತೋಷ. ಹಿಂದೂ ಧರ್ಮವನ್ನು ಎಂದೆಂದಿಗೂ ನಾವು ಬಿಡುವುದಿಲ್ಲ."

"ಹಾಗಾದರೆ ನಾನು ಪ್ರಪಂಚಕ್ಕೆ ಸಾರಿ ಹೇಳಲೋ. ದಿವಾನ ಬಹದ್ದೂರ ಶ್ರೀನಿವಾಸನ್ನರ ಮಗ, ಅವನ ಹೆಂಡತಿ ಇಬ್ಬರೂ ಹಿಂದೂ ಧರ್ಮದಲ್ಲಿ ಬಹಳ ಸಂತೋಷವಾಗಿದ್ದಾರೆ ಎಂದು."

"ದಯಮಾಡಿ ಹೇಳಿ, ಇದರಲ್ಲಿ ನಮಗೆ ತುಂಬಾ ಸಂತೋಷ" ಇಬ್ಬರೂ ಕೇಳಿದರು: "ನಿಮ್ಮ ಕಾಲು ಮುಟ್ಟಬಹುದೇ?"

ಇಬ್ಬರೂ ಕಾಲು ಮುಟ್ಟಿದರು. ತಮಗೆ ತುಂಬಾ ಬೇಕಾದವರನ್ನು ಬೆನ್ನಿನ ಮೇಲೆ

ಗುದ್ದಿ ಆಶೀರ್ವದಿಸುವದು ಗಾಂಧೀಜಿಗೆ ಒಂದು ರೂಢಿ. ಇವರಿಬ್ಬರಿಗೂ ಆ ಗುದ್ದು ದೊರೆತವು.

(ಹರಿಜನ ೨೭-೬-೧೯೩೬)

**ಸರ್.ಸಿ.ವಿ.ರಾಮನ್ :**

ಗಾಂಧೀಜಿ ನಂದೀಬೆಟ್ಟಕ್ಕೆ ಹೋಗಿದ್ದರಲ್ಲ. ಆಗ ಮೇ. ೨೯ನೇ ತಾರೀಖು ಬ್ರಜಲಾಲ ನೆಹರು ಬಂದಿದ್ದರು. ೩೧ನೇ ತಾರೀಖು ಗಾಂಧೀಜಿ, ವಲ್ಲಭಬಾಯಿ, ಮಹಾದೇವ ದೇಸಾಯಿ, ಕಾಕಾ ಕಾಲೇಲ್ಕರ, ಬ್ರಹ್ಮಚಾರಿ ರಾಮಚಂದ್ರ, ಕುಮಾರಿ ಮಣಿಬೆನ್ ಪಟೇಲ, ಶ್ರೀಮತಿ ಮಹಾದೇವ ದೇಸಾಯಿ, ಶ್ರೀ ಬ್ರಜಲಾಲ ನೆಹರು ಎಲ್ಲರೂ ನಂದೀ ಬೆಟ್ಟದಿಂದ ಚಿಕ್ಕಬಳ್ಳಾಪುರಕ್ಕೆ ಹೋದರು. ಮೈಸೂರು ದೇಶದ ಮುಖ್ಯಮಂತ್ರಿಯಾಗಿದ್ದ ಶ್ರೀ ಕ್ಯಾಸಂಬಳ್ಳಿ ಚಂಗಲರಾಯ ರೆಡ್ಡಿಯವರು ಆಗ ಕೋಲಾರ ಜಿಲ್ಲಾ ಬೋರ್ಡು ಅಧ್ಯಕ್ಷರು. ಅವರೇ ಬಂದು ಗಾಂಧೀಜಿಯನ್ನೂ, ಅವರ ಪರಿವಾರವನ್ನೂ ಕರೆದೊಯ್ದರು. ಆಗ ಅವರ ಜೊತೆಯಲ್ಲಿ ಚಿಕ್ಕಬಳ್ಳಾಪುರದ ಪೌರಸಭೆಯ ಉಪಾಧ್ಯಕ್ಷರೂ, ಅಧಿಕಾರಿಗಳೂ ಇದ್ದರು.

ಸ್ವಿಟ್ಜರಲೆಂಡಿನ ಪ್ರಸಿದ್ಧ ಪ್ರಾಣಿಶಾಸ್ತ್ರಜ್ಞ ಪ್ರೊ. ರಹಂ ಅವರನ್ನು ಕರೆದುಕೊಂಡು ಒಂದು ದಿನ ಮಧ್ಯಾಹ್ನ ಚಂದ್ರಶೇಖರ ವೆಂಕಟರಾಮನ್ ನಂದೀಬೆಟ್ಟಕ್ಕೆ ಬಂದು ಬಿಟ್ಟರು. "ಇವರು ಅನ್ನ ನೀರು ಇಲ್ಲದೆ ಹನ್ನೆರಡು ವರ್ಷ ಬದುಕಬಲ್ಲ ಒಂದು ಕೀಟವನ್ನು ಕಂಡುಹಿಡಿದಿದ್ದಾರೆ. ಭಾರತದಲ್ಲಿ ಪ್ರಾಣಿಶಾಸ್ತ್ರದ ಬಗ್ಗೆ ಸಂಶೋಧನೆ ನಡೆಸಲು ಬಂದಿದ್ದಾರೆ." ಎಂದು ಸ್ವಿಟ್ಜರಲೆಂಡಿನ ಪ್ರೊಫೆಸರರನ್ನು ಪರಿಚಯ ಮಾಡಿಕೊಟ್ಟರು.

"ಈ ಸಂಶೋಧನೆಯಲ್ಲಿ ಅಡಗಿರುವ ರಹಸ್ಯವನ್ನು ಕಂಡುಹಿಡಿದಾಗ ನನಗೆ ದಯವಿಟ್ಟು ಅದನ್ನು ತಿಳಿಸಿರಿ" ಎಂದರು ಗಾಂಧೀಜಿ.

ಆ ಪ್ರಾಣಿಶಾಸ್ತ್ರಜ್ಞರು ಹೇಳಿದರು : "ನಾನು ವಿಜ್ಞಾನಿಯಷ್ಟೇ ಅಲ್ಲ, ಸನ್ಯಾಸಿಯೂ ಕೂಡ. ನಿಮ್ಮ ಬಳಿಗೆ ಬಂದು ಗೌರವ ಸಲ್ಲಿಸಬೇಕು ಎಂದಾಗ ಒಂದೆರಡು ಪ್ರಶ್ನೆ ಕೇಳಬೇಕು ಎಂದುಕೊಂಡೆ. ಕೇಳಲೆ?"

"ಸಂತೋಷವಾಗಿ ಕೇಳಿ" ಎಂದರು ಗಾಂಧೀಜಿ. ಜಗತ್ತಿನಲ್ಲಿ ಪರಸ್ಪರ ದ್ವೇಷದಿಂದ ಹೊಡೆದಾಡುತ್ತಿರುವ ಅನೇಕ ಮತ ಪಂಥಗಳಿವೆಯಲ್ಲ, ಇವನ್ನು ಸಮರಸಗೊಳಿಸಿ. ಈ ಹೋರಾಟವನ್ನು ನಿಲ್ಲಿಸಲು ಸಾಧ್ಯವೇ ಎಂದು ಪ್ರೊಫೆಸರರ ಕಳವಳ.

ಗಾಂಧೀಜಿ ಹೇಳಿದರು : ಇದೆಲ್ಲವೂ ಕ್ರೈಸ್ತರನ್ನೇ ಅವಲಂಬಿಸಿದೆ. ಉಳಿದವರ ಸಂಗಡ ಏಕ ಆಗಲು ಅವರು ಮನಸ್ಸುಮಾಡಿದರೆ. ಆದರೆ ಹೀಗೆ ಮಾಡುವದಿಲ್ಲವಲ್ಲ. ತಾವು ತುಂಬಿದ ಕ್ರೈಸ್ತಧರ್ಮವನ್ನು ಜಗತ್ತೆಲ್ಲವೂ ಒಪ್ಪಬೇಕು ಎನ್ನುತ್ತಾರೆ. ಈಗ ೩೦ ವರ್ಷಗಳಿಂದ ಒಬ್ಬ ಇಂಗ್ಲಿಷ್ ಗೆಳೆಯ ನನ್ನ ಹತ್ತಿರ ಬಂದು ಹೋಗುತ್ತಿದ್ದಾನೆ. ಹಿಂದೂ ಧರ್ಮ ಬರೀ ಕಂತೆ, ಕ್ರೈಸ್ತ ಧರ್ಮವೇ ಸರಿ. ನಾನು ಕ್ರೈಸ್ತನಾಗಬೇಕು ಎಂದು ಪ್ರೇರೇಪಿಸುತ್ತಿದ್ದಾನೆ. ನಾನು ಸೆರೆಮನೆಯಲ್ಲಿದ್ದಾಗ 'ಭಗಿನಿ ಥೆರಿಸಾ ಜೀವನ ಚರಿತ್ರೆ'ಯ

ಮೂರು ಪ್ರತಿಗಳು ಮೂರು ಕಡೆಯಿಂದ ಬಂದುವು. ಆಕೆಯ ಉದಾಹರಣೆಯನ್ನು ನಾನು ಅನುಸರಿಸಿ, ಕ್ರಿಸ್ತ ಒಬ್ಬನೇ ದೇವರ ಮಗ, ಅವನೇ ನನ್ನ ರಕ್ಷಕ ಎಂದು ನಂಬಬೇಕು. ಎಂದು ಮೂವರೂ ಪ್ರಯತ್ನ ಮಾಡಿದರು. ನಾನು ಆ ಪುಸ್ತಕವನ್ನು ಶ್ರದ್ಧೆಯಿಂದ ಓದಿದೆ. ನನ್ನ ಮಟ್ಟಿಗೆ ಕೂಡ ಥೆರಿಸಾಳ ಉದಾಹರಣೆಯನ್ನು ಒಪ್ಪಲು ಸಾಧ್ಯವಾಗಲಿಲ್ಲ. ಈ ವಯಸ್ಸಿನಲ್ಲಿ ಈ ಪ್ರಶ್ನೆಯ ಬಗ್ಗೆ ನನ್ನದು ಮುಕ್ತ ಮನಸ್ಸು ಎಂದು ಹೇಳಬಹುದಾದರೆ ಹೇಳುತ್ತೇನೆ. ಏನೇ ಆಗಲಿ. ನನ್ನದು ಮುಕ್ತ ಮನಸ್ಸು ಎಂದುಕೊಂಡಿದ್ದೇನೆ. ಸಾಲ್ ಮಹಾಶಯ ಪಾಲ್ ಆಗುವ ಮೊದಲು ಅವನಿಗೆ ಆದ ಅನುಭವಗಳು ನನಗೆ ಆದರೆ ಮತಾಂತರಗೊಳ್ಳಲು ನಾನು ಹಿಂದು ಮುಂದು ನೋಡುವುದಿಲ್ಲ ಎನ್ನುತ್ತೇವೆ.

ಆದರೆ ಇವತ್ತು ನಾನು ಚರ್ಚಿನ ಕ್ರೈಸ್ತಮತಕ್ಕೆ ವಿರುದ್ಧವಾಗಿದ್ದೇನೆ. ಕ್ರಿಸ್ತನ ಸಂದೇಶವನ್ನು ವಕ್ರವಕ್ರವಾಗಿ ಮಾಡಿದ್ದಾರೆ. ಕ್ರಿಸ್ತ ಏಷ್ಯಾದವನು. ಅವನ ಸಂದೇಶವನ್ನು ಎಷ್ಟೋ ವಾಹಕಗಳ ಮೂಲಕ ತಲುಪಿಸಲಾಯಿತು. ಆದರೆ ರೋಮನ್ ಚಕ್ರವರ್ತಿಯ ಸಮರ್ಥನೆ ದೊರೆತಮೇಲೆ ಅದು ಸಾಮ್ರಾಜ್ಯಶಾಹಿ ಧರ್ಮ ಆಯಿತು. ಇವತ್ತಿಗೂ ಹಾಗೆಯೇ ಇದೆ. ಆದರೆ ಇದಕ್ಕೆ ಅಪವಾದ ಇದೆ. ಆ್ಯಂಡ್ರೂಸ್, ಎಲ್ವಿನ್ ಅಂಥವರು ಇದ್ದಾರೆ. ಆದರೆ ಸಾಮಾನ್ಯವಾಗಿ ನಾನು ಹೇಳಿದ ಹಾಗೆ ಅವರ ಧೋರಣೆ.

ಮೊನ್ನೆ ಮೊನ್ನೆ ಬೊಂಬಾಯಿಯಲ್ಲಿ ಸರ್ವಧರ್ಮ ಸಮ್ಮೇಳನ ಒಂದು ನಡೆಯಿತು. ಸರ್ವಧರ್ಮಗಳಿಗೂ ಸಮಾನ. ಪರಸ್ಪರ ಧರ್ಮಗಳಲ್ಲಿ ಆದರ ಭಾವ ಇರಬೇಕು ಎಂಬುದನ್ನು ಒಪ್ಪದೆ ಇದ್ದರೆ, ಇಂಥ ಸರ್ವಧರ್ಮ ಸಮ್ಮೇಳನಗಳಿಂದ ಏನು ಆಗಬೇಕು. ಇದು ಸರ್ವಧರ್ಮಗಳ ಸಮ್ಮೇಳನ ಎಂಬುದನ್ನು ನಾವು ಮರೆಯಬಾರದು. ಹಲ ಕೆಲವು ಧಾರ್ಮಿಕರ ಸಭೆ ಅಲ್ಲ. ಕ್ರೈಸ್ತಮತ ಇತರ ಮತಗಳೊಡನೆ ಸಮಾನ ಎಂದು ಬಂತೇ ಆ ಸಭೆಗೆ. ಆಗ ಬಹಿರಂಗವಾಗಿ ಬರುವುದಿಲ್ಲ. ಗುಟ್ಟಾಗಿ ನಮ್ಮನ್ನು ಟೀಕಿಸುತ್ತಾರೆ. ನಮ್ಮಲ್ಲಿ ಅನೇಕ ದೇವರು ಇದ್ದಾರಂತೆ. ಅವರಲ್ಲಿ ಮಾತ್ರ ಇಲ್ಲವೇ?

ಡಾ॥ ರಹಂ ಅವರಿಗೆ ಈ ರೀತಿಯ ಮಾತಿನ ನಿರೀಕ್ಷೆ ಇರಲಿಲ್ಲ. ಅವರು ಉತ್ತರ ಕೊಡಲಿಲ್ಲ. ಇನ್ನೊಂದು ಪ್ರಶ್ನೆ ಕೇಳಿದರು: 'ನಾವು ಏಕ ಆಗವುದರಿಂದ, ಈಗ ಹೆಚ್ಚಿಹೋಗುತ್ತಿರುವ ಈ ನಿರೀಶ್ವರ ವಾದವನ್ನು ಓಡಿಸಬಹುದೇ?'

ಇಷ್ಟು ಹೊತ್ತಿನವರೆಗೂ ಸುಮ್ಮನೆ ಕುಳಿತು ಸರ್. ಸಿ.ವಿ. ರಾಮನ್ ಈಗ ಮಾತನಾಡಿದರು:

ನಿಮ್ಮ ಪ್ರಶ್ನೆಗೆ ನಾನು ಉತ್ತರ ಹೇಳುತ್ತೇನೆ. ದೇವರಿರುವುದಾದರೆ ಈ ವಿಶ್ವದಲ್ಲೇ ಇರಬೇಕು. ನಾವು ಇಲ್ಲೇ ಹುಡುಕಬೇಕು. ಇಲ್ಲಿ ಇಲ್ಲದೇ ಇದ್ದರೆ. ಅವನನ್ನು ಹುಡುಕಿ ಪ್ರಯೋಜನವಿಲ್ಲ. ಎಷ್ಟೋ ಕಡೆ ನನ್ನನ್ನು ನಿರೀಶ್ವರವಾದಿ ಎಂದು ತಿಳಿದಿದ್ದಾರೆ. ನಾನು ಅಲ್ಲ. ಜ್ಯೋತಿಶ್ಶಾಸ್ತ್ರದಲ್ಲಿ, ಭೌತಿಕಶಾಸ್ತ್ರದಲ್ಲಿ ಹೊಸ ಹೊಸದಾಗಿ ಆಗುತ್ತಿರುವ ಸಂಶೋಧನೆ

ಭಗವಂತನ ಹೊಸ ಹೊಸ ಆವಿಷ್ಕಾರ ಎಂದು ನನಗೆ ಅನಿಸುತ್ತದೆ. ಮಹಾತ್ಮಾಜಿ, ಮಾತುಗಳು ಒಗ್ಗಟ್ಟು ತರಲಾರವು. ಏಕತೆಯನ್ನು ಸಾಧಿಸಬಹುದಾದ್ದು ವಿಜ್ಞಾನ, ವಿಜ್ಞಾನಿಗಳು ಎಲ್ಲಿದ್ದರೂ ಅಣ್ಣತಮ್ಮಂದಿರು.

'ಹಾಗಾದರೆ ಇದರ ವಿರುದ್ಧವಾದ ಮಾತು ನಿಜವೋ? ವಿಜ್ಞಾನಿಗಳಲ್ಲದವರು, ಅಣ್ಣ ತಮ್ಮಂದಿರಲ್ಲ ಎನ್ನೋಣವೇ?' ಎಂದರು ಗಾಂಧೀಜಿ.

ಸುಪ್ರಸಿದ್ಧ ವಿಜ್ಞಾನಿಗೆ ಈ ಹಾಸ್ಯ ತಿಳಿಯಿತು. ಹೇಳಿದರು: "ಎಲ್ಲರೂ ವಿಜ್ಞಾನಿಗಳಾಗಬಹುದಲ್ಲ."

ಗಾಂಧೀಜಿ ಅದಕ್ಕೆ ಹೇಳಿದರು: "ಹಾಗಾದರೆ ಇಸ್ಲಾಂ ಕೊಡುವಂತೆ ನೀವು ಒಂದು ವಿಜ್ಞಾನದ ಕಲೇಮಾವನ್ನು ಹೇಳಿಕೊಡಬೇಕಾದೀತು."

"ವಿಜ್ಞಾನ ಎಂದರೆ ಸತ್ಯ ಶೋಧನೆ. ಬೇರೆ ಏನೂ ಅಲ್ಲ. ಭೌತ ಪ್ರಪಂಚದಲ್ಲಿ ಮಾತ್ರವೇ ಅಲ್ಲ; ತರ್ಕ, ಮನಃಶಾಸ್ತ್ರ, ನಡತೆ ಮುಂತಾದ ಎಲ್ಲದರಲ್ಲಿಯೂ ಅದು ಸತ್ಯಶೋಧನೆ. ನಿಜವಾದ ವಿಜ್ಞಾನಿಯ ಮನಸ್ಸು ಅಸತ್ಯವಾದುದನ್ನು ನಿರಾಕರಿಸಲು ಸದಾ ಸಿದ್ಧ. ಅಸತ್ಯವನ್ನು ಅನುಸರಿಸಿದರೆ ಏನೂ ಫಲ ಪ್ರಯೋಜನವಿಲ್ಲ ಎಂದು ವಿಜ್ಞಾನಿಯು ಘಂಟಾಘೋಷವಾಗಿ ಹೇಳುತ್ತಾನೆ. ಈಚೀಚೆಗೆ ವಿಜ್ಞಾನಿ ಕಂಡುಹಿಡಿದಿರುವ ಪ್ರಕಾರ ಮನುಷ್ಯನ ಜೀವನಕ್ಕೂ ಬೇರೆ ಜೀವನಕ್ಕೂ ಏನೂ ವ್ಯತ್ಯಾಸವಿಲ್ಲ. ಸಂತಾನ ಕಾಮವನ್ನು ಹೆಚ್ಚು ಪರಿಪೂರ್ಣಗೊಳಿಸಿ, ತನ್ನ ವರ್ಗಕ್ಕಾಗಿ ವ್ಯಕ್ತಿ ಆತ್ಮಾರ್ಪಣೆ ಮಾಡಿಕೊಳ್ಳುವಂತೆ ಮಾಡುವದೇ ಪೂರ್ಣ ದಶೆ" ಎಂದರು ರಾಮನ್.

ಗೀತೆಯೂ ಇದನ್ನೇ ತಾನೇ ಹೇಳುತ್ತದೆ. ಮನುಷ್ಯ ಯಜ್ಞದಿಂದ ಹುಟ್ಟಿದ. ಮನುಷ್ಯ ಬೆಳೆಯಬೇಕಾದರೆ ಯಜ್ಞವೇ ದಾರಿ ಎಂದು ಹೇಳಲಿಲ್ಲವೇ? ವಿಜ್ಞಾನದ ಬೆನ್ನು ಹತ್ತಿ ಸರ್ ಸಿ.ವಿ.ರಾಮನ್ ಋಷಿ ಆಗಿಹೋಗಿದ್ದಾರೆ. ಅವರು ಹೇಳಿದರು: ಒಂದು ಪರದೇಶಿ Spectroscope ತರಿಸಲು ೭,೫೦೦ ರೂಪಾಯಿ ಆಗುತ್ತದೆ ಎಂದು. ನನ್ನ ಎದೆ ಒಡೆದು ಹೋಯಿತು. ಈಗ ೧,೫೦೦ ರೂಪಾಯಿಗಳಲ್ಲಿ ನಾನು ನಿರ್ಮಿಸಿದ್ದೇನೆ. ಬೆಂಗಳೂರಿಗೆ ಗಾಂಧೀಜಿ ಬಂದಾಗ, ಅವರಿಗೂ ಮಹಾದೇವ ದೇಸಾಯಿಗೂ ತಮ್ಮ ಕಾರ್ಯಾಲಯವನ್ನು ತೋರಿಸಿ ಹೇಳಿದರು: "ನಿನ್ನೆ ಭೌತಶಾಸ್ತ್ರದ ಅತ್ಯಾಶ್ಚರ್ಯಕರ ವಿರೋಧಾಭಾಸಗಳಲ್ಲಿ ಒಂದನ್ನು ನಿಮಗೆ ತೋರಿಸಿದೆ. ಒಂದು Electron ಬಂಗಾರದ ತೆಳ್ಳನೆ ಹಾಳೆಯಲ್ಲಿ ಪ್ರವೇಶಿಸಿದರೆ ಏನಾಗುತ್ತದೆ ಎಂಬುದನ್ನು ತೋರಿಸಿದ್ದೇನೆ. Electron ಎಷ್ಟೇ ಚಿಕ್ಕದಾದರೂ, ಎಷ್ಟೇ ಸೂಕ್ಷ್ಮ ಆದರೂ ಅದನ್ನು ನಿರ್ದೇಶಿಸಬಹುದು. ಅದು ಬಂಗಾರದ ಹಾಳೆಯಲ್ಲಿ ಹೋಗುವಾಗ ಎಷ್ಟು ಅಲೆ ಎದ್ದವು. ಎಷ್ಟೇ ಆದರೂ ಕಟ್ಟಕಡೆಗೆ ಅದೂ ಒಂದು ಅಲೆ. ನಾವೂ ಅಷ್ಟೇ. ಸಮುದಾಯದಲ್ಲಿ ಇದ್ದರೆ ನಮ್ಮ ನಡತೆ ಬೇರೆ. ವ್ಯಕ್ತಿಗಳಾದಾಗ ನಾವು ಅಲೆಗಳೆ" ಎಂದರು ರಾಮನ್.

ಇಲ್ಲಿ ಶಂಕರಾಚಾರ್ಯರ ದೃಷ್ಟಾಂತ ನೆನಪಾಗುತ್ತದೆ. "ಅಲೆ ಸಮುದ್ರದ್ದು, ಸಮುದ್ರ ಅಲೆಯದ್ದಲ್ಲ.' ಎಂದಾದರೊಂದು ದಿನ ರಾಮನ್ ಕೂಡ ನೈಸರ್ಗಿಕ ಆಧ್ಯಾತ್ಮಿಕ ಎರಡೂ ಒಂದೇ ಎಂದು ತೋರಿಸಿಕೊಡಬಹುದು. ಅವರು ವಿದ್ಯುತ್ತಿನಲ್ಲಿ ವ್ಯವಹರಿಸುತ್ತಿದ್ದಾರೆ. ಅಷ್ಟೇ ಕಣ್ಣು ಕೋರೈಸುವ ಕಾಂತಿವಂತ ಅವರ ಬುದ್ಧಿ. ಅವರು ಮಾತನಾಡತೊಡಗಿದರೆ ಅವರಿಗೆ ಕಾಲ, ದೇಶ ಎಲ್ಲವೂ ಮರೆತು ಹೋಗುತ್ತದೆ. ವಿಜ್ಞಾನಿ ಎಂದರೆ ಸತ್ಯಶೋಧನೆಯಲ್ಲಿ ಮುಳುಗಿಹೋದ ಒಬ್ಬ ಯೋಗಿ ಎಂದು ಅವರೇ ಹೇಳಿದ್ದಾರೆ. ಈ ತಲ್ಲೀನತೆ, ಈ ಯೋಗ ಒಂದು ಸೇವೆ. ಇಷ್ಟಾದರೂ ಅವರೇನು ಸನ್ಯಾಸಿಯಲ್ಲ. ರಾಷ್ಟ್ರೀಯ, ಅಂತರಾಷ್ಟ್ರೀಯ ವ್ಯವಹಾರಗಳನ್ನು ಅಭ್ಯಾಸ ಮಾಡುತ್ತಾರೆ ವ್ಯವಹಾರ ಆದ ವಿಜ್ಞಾನೀಯ ಜಗತ್ತು ಅವರ ಆದರ್ಶ.

ಸರ್ ಸಿ.ವಿ.ರಾಮನ್ ನೋಬೆಲ್ ಪ್ರೈಜ್ ವಿಜೇತರು. ಇನ್ನೂ ಎಷ್ಟೋ ಕೆಲಸ ಮಾಡಿದ್ದಾರೆ. ಆದರೂ ಅವರಿಗೆ ತೃಪ್ತಿ ಇಲ್ಲ, ವಿಶ್ರಾಂತಿ ಇಲ್ಲ. ಹತ್ತು ವರ್ಷ ಹಣಕಾಸಿನ ಶಾಖೆಯಲ್ಲಿ ಕಾಲ ಕಳೆದೆ ನಾನು ಎನ್ನುತ್ತಾರೆ. ಈಗೀಗ ನನ್ನ ಪ್ರೀತಿಯ ವಿಷಯವನ್ನು ಅಭ್ಯಾಸ ಮಾಡುತ್ತಿದ್ದೇನೆ ಎನ್ನುತ್ತಾರೆ.

*(ಹರಿಜನ ೨೭-೬-೧೯೩೬)*

**ಹಿಂದಿಯ ಪ್ರಶ್ನೆ :**

ಹಿಂದೀ ಪ್ರಶಸ್ತಿ ಪತ್ರ ವಿತರಣೆ ಮಾಡುತ್ತ, ಗಾಂಧೀಜಿ ದೀರ್ಘವಾಗಿ ಭಾಷಣ ಮಾಡಿದರು. ಅವರಿಗೆ ಈ ಅರ್ಧಗಂಟೆ ತಾವು ಬಿಡುವು ಮಾಡಿಕೊಳ್ಳಬೇಕು ಎಂದಾಗ, ಇಂಥ ವಿಸ್ತಾರವಾದ ಕಾರ್ಯಕ್ರಮ ಇದೆಯೆಂದು ಗೊತ್ತಿರಲಿಲ್ಲ. ಅರ್ಧಗಂಟೆ ಏಕೆ, ಎರಡು ಗಂಟೆಯನ್ನಾದರೂ ಕೊಡುತ್ತಿದ್ದರು. ಹಿಂದಿಗಾಗಿ ನಿಧಿ ಸಂಗ್ರಹ ಮಾಡುತ್ತಿದ್ದರು. ಬೆಂಗಳೂರು ಬಿಟ್ಟು ಹೊರಡುವ ಮುನ್ನ ಈ ಸಮಾರಂಭ ನಡೆಯಿತು.

ಆವತ್ತು ಪ್ರಶಸ್ತಿ ಪತ್ರ ಪಡೆದವರನ್ನು ಗಾಂಧೀಜಿ ಅಭಿನಂದಿಸಿದರು. "ಕಾಲೇಜು, ಶಾಲೆಗಳಿಗೆ ಹೋಗುವವರು ಜೀವನೋಪಾಯಕ್ಕಾಗಿ ಹೋಗುತ್ತಾರೆ. ಪರೀಕ್ಷೆಗಾಗಿ ಪುಸ್ತಕ ಓದುತ್ತಾರೆ, ಕೂಡಲೇ ಎಲ್ಲವನ್ನೂ ಮರೆತುಬಿಡುತ್ತಾರೆ. ಅನೇಕರಿಗೆ ಜ್ಞಾನಕ್ಕಿಂತ ಪದವಿ ಮುಖ್ಯ. ಇವತ್ತು ಪ್ರಶಸ್ತಿ ಪಡೆದವರು ಜ್ಞಾನಕ್ಕಾಗಿ ಕಲಿತಿದ್ದೀರಿ. ಇದರಿಂದ ನಿಮಗೆ ಕೆಲಸ ಸಿಗುವುದಿಲ್ಲ. ಯಾರೋ ಒಬ್ಬಿಬ್ಬರು ಹಿಂದೀ ಅಧ್ಯಾಪಕರಾಗಬಹುದು. ಆದರೆ ಅದು ನಿಮ್ಮ ಮುಖ್ಯೋದ್ದೇಶವಲ್ಲ."

**ಭಲೆ ಹೆಂಗಸರೆ :**

ಇವತ್ತು ಪ್ರಶಸ್ತಿ ವಿಜೇತರಲ್ಲಿ ಹೆಚ್ಚು ಜನ ಹೆಂಗಸರು. ಪ್ರಚಾರಕ್ಕೂ ಭಾರತದ ಭವಿಷ್ಯಕ್ಕೂ ಕಾಲ ಚೆನ್ನಾಗಿದೆ ಎಂಬುದರ ಸೂಚನೆ ಅದು. ಭಾರತದ ಮೋಕ್ಷಕ್ಕೆ ಹೆಂಗಸರ ಬಲಿದಾನ, ಅವರ ಜ್ಞಾನಗಳೇ ಆಧಾರ ಎಂದು ನನ್ನದು ದೃಢ ವಿಶ್ವಾಸ. ನಮ್ಮ ಮುಂದಿನ ನಾಯಕ ನಾಯಕಿಯರಲ್ಲಿ ಹೆಂಗಸರ ಹೆಸರೇ ಮೊದಲು. ಸೀತಾರಾಮ, ರಾಧಾಕೃಷ್ಣ

ಎನ್ನುತ್ತೇವೆ. ರಾಮ ಸೀತೆ, ಕೃಷ್ಣ ರಾಧ ಇರುವುದಿಲ್ಲ. ಇದಕ್ಕೆ ಕಾರಣವಿದೆ. ಹೆಂಗಸರನ್ನು ನಮ್ಮವರು ಪೂಜಿಸುತ್ತಿದ್ದರು. ಅವರ ಕಾರ್ಯ, ಅವರ ಯೋಗ್ಯತೆಯನ್ನು ವಿಶೇಷವಾಗಿ ಪರಿಗಣಿಸುತ್ತಿದ್ದರು. ನಾವೂ ಅವರ ಆ ಸಂಪ್ರದಾಯವನ್ನು ಅಕ್ಷರಶಃ ಭಾವಶಃ ಮುಂದು ವರಿಸೋಣ.

**ಕೆಲವು ಮಾತು :**

ಈ ಸಂದರ್ಭದಲ್ಲಿ ಹಿಂದಿ ಅಥವಾ ಹಿಂದೂಸ್ಥಾನಿಯೇ ಏಕೆ ರಾಷ್ಟ್ರಭಾಷೆ ಆಗಬೇಕು ಹೇಳುತ್ತೇನೆ. ಕರ್ನಾಟಕದಲ್ಲಿದ್ದು, ಹೊರಗೆ ಇಣಿಕಿ ನೋಡಿದವರಿಗೆ ಕನ್ನಡ ಸಾಕು. ಆದರೆ ನಿಮ್ಮ ಹಳ್ಳಿಗಳನ್ನು ನೋಡಿದರೆ, ನಿಮ್ಮ ದೃಷ್ಟಿ ವಿಶಾಲವಾಗುವುದು, ನಿಮ್ಮ ದಿಗಂತ ವ್ಯಾಪಕವಾಗಿರುವುದು ಗೊತ್ತಾಗುತ್ತದೆ. ನೀವು ಭಾರತದ ವಿಚಾರ ಮಾಡುತ್ತಿದ್ದೀರಿ. ಕರ್ನಾಟಕದ ಹೊರಗಿನ ಘಟನೆಗಳು ನಿಮ್ಮ ಆಸಕ್ತಿ ಕೆರಳಿಸುತ್ತವೆ. ಆದರೆ ಸಾಮಾನ್ಯ ಭಾಷೆ ಒಂದಿಲ್ಲದೆ, ಆ ಆಸಕ್ತಿ ದೂರ ಹೋಗಲಾರದು. ಕನ್ನಡದ ಮನುಷ್ಯ ಸಿಂಧ, ಅಥವಾ ಸಂಯುಕ್ತ ಪ್ರಾಂತದ ಮನುಷ್ಯನೊಂದಿಗೆ ಹೇಗೆ ಸಂಪರ್ಕ ಬೆಳೆಸಬಲ್ಲ? ನಮ್ಮವರಲ್ಲಿ ಕೆಲವರಿಗೆ ಇಂಗ್ಲಿಷ್, ಸಂಪರ್ಕಕ್ಕೆ ಮಾಧ್ಯಮ ಆಗಬಲ್ಲದು ಎಂಬ ಭಾವನೆ ಇಂದಿಗೂ ಇದೆ. ನಮ್ಮ ಸುಶಿಕ್ಷಿತ ಸಹಸ್ರಕ್ಕೆ ಖಂಡಿತವಾಗಿಯೂ ಇಂಗ್ಲಿಷ್ ಮಾಧ್ಯಮ ಆಗಬಲ್ಲದು. ಆದರೆ ಅಷ್ಟರಿಂದ ನಿಮಗೆ ಯಾರಿಗೂ ತೃಪ್ತಿ ಇಲ್ಲ. ಕೋಟ್ಯಂತರ ಜನರು ಅಂತಃಪ್ರಾಂತೀಯ ಸಂಪರ್ಕ ಬೆಳೆಸುವಂತೆ ಆಗಬೇಕು. ಇಂಗ್ಲಿಷಿನ ಮೂಲಕ ಅದು ಸಾಧ್ಯವಿಲ್ಲ. ಎಷ್ಟು ತಲೆಮಾರು ಕಳೆದರೂ ಸಾಧ್ಯವಿಲ್ಲ. ಇದು ಸ್ಪಷ್ಟ. ಇಂಗ್ಲಿಷನ್ನು ಅವರು ಏಕೆ ಕಲಿಯಬೇಕು. ಹೊಟ್ಟೆಪಾಡಿಗೂ ಕೂಡ ಇಂಗ್ಲಿಷಿನ ಭರವಸೆ ಇಲ್ಲ. ಬರಬರುತ್ತ ಹೆಚ್ಚು ಜನ ಕಲಿತಂತೆ, ಇಂಗ್ಲಿಷಿನಿಂದ ನೌಕರಿ ಸಿಗುವುದು ಕಡಿಮೆ ಕಡಿಮೆ ಆಗುತ್ತದೆ. ಇಂಗ್ಲಿಷನ್ನು ಕಲಿಯುವಾಗ ಆಗುವ ಕಷ್ಟ ಹಿಂದಿಯಲ್ಲಿ ಇಲ್ಲ. ಇಂಗ್ಲಿಷ್ ಕಲಿಯಲು ಎಷ್ಟು ಕಾಲ ಬೇಕೋ ಅಷ್ಟು ಕಾಲ ಹಿಂದಿ ಕಲಿಯಬೇಕಿಲ್ಲ. ಹಿಂದಿ ಹಿಂದೂಸ್ಥಾನಿಯನ್ನು ಮಾತಾಡಬಲ್ಲ. ತಿಳಿದುಕೊಳ್ಳಬಲ್ಲ ಹಿಂದೂಗಳು ಮುಸಲ್ಮಾನರು ಕೋಟಿಗಿಂತ ಹೆಚ್ಚು ಇದ್ದಾರೆ. ಕರ್ನಾಟಕದಲ್ಲಿ ೧೨೦ ಲಕ್ಷ ಜನ. (ಅಂದಿನ ಅಂಕಿಸಂಖ್ಯೆ) ೨೦ ಕೋಟಿ ಜನ ಆಡುವ ತಮ್ಮ ಅಣ್ಣ ತಮ್ಮಂದಿರ ಭಾಷೆಯನ್ನು ಕಲಿಯಲಾಗದೆ? ಸುಲಭವಾಗಿಯೇ ಕಲಿಯಬಹುದಲ್ಲ. ಸ್ವಲ್ಪ ಹೊತ್ತಿಗೆ ಮೊದಲು ಲೋಕ ಸುಂದರಿ ರಾಮನ್ ಅವರ ಹಿಂದಿ ಭಾಷಣದ ಕನ್ನಡ ಭಾಷಾಂತರವನ್ನು ಕೇಳಿದ್ದೀರಿ. ಎಷ್ಟೋ ಶಬ್ದವನ್ನು ಇದ್ದಕ್ಕಿದ್ದಂತೆ ಪ್ರೇಮ, ಪ್ರೇಮಿ, ಸಂಘ, ಸಭಾಧ್ಯಕ್ಷ ಪದ ಅನಂತ, ಭಕ್ತಿ, ಸ್ವಾಗತ ಅಧ್ಯಕ್ಷತಾ ಸಮ್ಮೇಳನ ಇದ್ದಕ್ಕಿದ್ದಂತೆ ಬಳಸಿದ್ದಾರೆ. ಈ ಶಬ್ದಗಳೆಲ್ಲವೂ ಕನ್ನಡ, ಹಿಂದಿ ಎರಡಕ್ಕೂ ಸಾಮಾನ್ಯ. ಇಂಗ್ಲಿಷಿಗೆ ಯಾರಾದರೂ ಅವರ ಭಾಷಣವನ್ನು ಪರಿವರ್ತಿಸಿದ್ದರೆ, ಒಂದಾದರೂ ಶಬ್ದ ಉಳಿಯುತ್ತಿತ್ತೇ? ಖಂಡಿತ ಇಲ್ಲ. ಇದಕ್ಕೆ ಸಮನಾದ ಇಂಗ್ಲಿಷ ಶಬ್ದ ಪ್ರತಿಯೊಂದೂ ಹೊಸದಾಗಿ ಇರುತ್ತಿತ್ತು. ಆದ್ದರಿಂದ ನಮ್ಮ ಕನ್ನಡ ಸ್ನೇಹಿತರು ತಮಗೆ ಹಿಂದೀ ಕಲಿಯಲು ಕಷ್ಟ ಎಂದರೆ, ನನಗೆ ನಗು ಬರುತ್ತದೆ. ಅಷ್ಟೇ

ಮಟ್ಟಿಗೆ ಸಿಟ್ಟೂ ಬರುತ್ತದೆ. ಸೈರಣೆ ತಪ್ಪುತ್ತದೆ. ದಿನವೂ ಒಂದೆರಡು ಗಂಟೆ ಒಂದೆರಡು ತಿಂಗಳು ಕಲಿತರೆ ಸಾಕು. ನನಗೆ ಆಗಲೇ ೬೭. ಇನ್ನು ಬಹಳ ಆಯಸ್ಸು ಇಲ್ಲ. ಆದರೆ ಆ ಕನ್ನಡ ಭಾಷಾಂತರ ಕೇಳುತ್ತಿದ್ದಾಗ ದಿನವೂ ಒಂದೆರಡು ಗಂಟೆ ಮೀಸಲಿಟ್ಟರೆ ಎಂಟು ದಿನದಲ್ಲಿ ಕನ್ನಡವನ್ನು ಕಲಿತೇನು ಎನಿಸಿತು. ನಾನೂ ನಾಮದಾರ ಶಾಸ್ತ್ರಿಗಳೂ ಇಂಥವರನ್ನು ಬಿಟ್ಟರೆ, ಉಳಿದವರು ನೀವೆಲ್ಲರೂ ಚಿಕ್ಕವರು. ಒಂದು ತಿಂಗಳಕಾಲ ದಿನವೂ ನಾಲ್ಕು ಗಂಟೆ ಹಿಂದಿಗಾಗಿ ನೀವು ಕೊಡಲಾರಿರಾ? ೨೦ ಕೋಟಿ ದೇಶವಾಸಿಗಳೊಡನೆ ಸಂಪರ್ಕ ಬೆಳೆಸಲು ಇಷ್ಟನ್ನು ಮಾಡಬಾರದೇ? ಇದು ಹೆಚ್ಚೇ? ನಿಮ್ಮಲ್ಲಿ ಇಂಗ್ಲಿಷ್ ಗೊತ್ತಿಲ್ಲದವರು ಕಲಿಯಲು ನಿಶ್ಚಯಿಸಿದರೆ ಒಂದು ತಿಂಗಳಲ್ಲಿ ದಿನವೂ ನಾಲ್ಕು ಗಂಟೆ ಅಭ್ಯಾಸಮಾಡಿ ಇಂಗ್ಲಿಷನ್ನು ಕಲಿಯಲು ಸಾಧ್ಯವೇ? ಸಾಧ್ಯವಿಲ್ಲ. ಹಿಂದಿ ಇಷ್ಟು ಸುಲಭ. ಏಕೆಂದರೆ ದಕ್ಷಿಣ ಭಾರತದ ಭಾಷೆಗಳಲ್ಲಿ ಸಂಸ್ಕೃತ ಶಬ್ದಗಳು ಹೆಚ್ಚಾಗಿವೆ. ಒಂದಾನೊಂದು ಕಾಲಕ್ಕೆ ಉತ್ತರ ದಕ್ಷಿಣ ಭಾರತಗಳ ಸಂಪರ್ಕ ಸಾಧನ ಸಂಸ್ಕೃತವಾಗಿತ್ತು. ಈಗಲೂ ದಕ್ಷಿಣದ ಪಂಡಿತರು ಮತ್ತು ಶಾಸ್ತ್ರಿಗಳು ಉತ್ತರದವರೊಡನೆ ಸಂಸ್ಕೃತದಲ್ಲೇ ಶಾಸ್ತ್ರಾರ್ಥ ಮಾಡುತ್ತಾರೆ. ನಿಜವಾದ ವ್ಯತ್ಯಾಸ ಈ ಪ್ರಾಂತೀಯ ಭಾಷೆಗಳ ವ್ಯಾಕರಣ. ಉತ್ತರ ಭಾಷೆಗಳಲ್ಲಿ ವ್ಯಾಕರಣ ಒಂದೇ, ದಕ್ಷಿಣದ ಬಾಷೆಗಳಲ್ಲಿ ಮಾತ್ರ ಬೇರೆ. ಸಂಸ್ಕೃತದ ಪ್ರಭಾವ ಬೀಳುವ ಮೊದಲು ಶಬ್ದ ಸಂಪತ್ತಿಯೂ ವಿಭಿನ್ನವಾಗಿದ್ದಿತು. ಈಗ ಸಂಸ್ಕೃತದ ಪ್ರಭಾವ ಬಿದ್ದಿರುವುದರಿಂದ ನಾನು ದಕ್ಷಿಣಕ್ಕೆ ಹೋದಾಗ ಎಲ್ಲ ಭಾಷೆಗಳ ಸಾರಾಂಶವು ತಿಳಿಯುತ್ತದೆ. ಏನೂ ಕಷ್ಟವಾಗುವುದಿಲ್ಲ.

ಮುಸಲ್ಮಾನರಿಗೆ ಒಂದೆರಡು ಮಾತು ಹೇಳುತ್ತೇನೆ. ಅವರಿಗೆ ಎಲ್ಲರಿಗೂ ಉರ್ದು ಗೊತ್ತು. ಅಲ್ಲದೆ ಆಯಾ ದೇಶದ ಭಾಷೆಯು ಗೊತ್ತು. ಹಿಂದೂಸ್ತಾನಿಗೂ ಹಿಂದಿಗೂ ಉರ್ದುವಿಗೂ ಒಂದೇ ವ್ಯಾಕರಣ. ಲಿಪಿ ಮಾತ್ರ ಬೇರೆ ಬೇರೆ ಅಷ್ಟೆ. ಇವು ಮೂರೂ ಒಂದೇ ಭಾಷೆ. ಈ ಭಾಷೆಗಳ ನಿಘಂಟುಗಳನ್ನು ನೋಡಿದರೆ ಅವೇ ಶಬ್ದ ಮತ್ತೆ ಮತ್ತೆ ಬರುತ್ತವೆ. ಲಿಪಿ ಒಂದೇ ಭೇದ. ಅದು ಕಾಲಕ್ರಮೇಣ ಸರಿಹೋಗುತ್ತದೆ.

ಮತ್ತೆ ವಿಷಯಕ್ಕೆ ಬರೋಣ. ನಮ್ಮ ದೃಷ್ಟಿ ಉತ್ತರದಲ್ಲಿ ಶ್ರೀನಗರದವರೆಗೆ, ದಕ್ಷಿಣದಲ್ಲಿ ಕನ್ಯಾಕುಮಾರಿಯವರೆಗೂ, ಪಶ್ಚಿಮದಲ್ಲಿ ಕರಾಚಿಯವರೆಗೆ, ಪೂರ್ವದಲ್ಲಿ ದಿಬ್ರೂಘರ ವರೆಗೂ ಹರಡಿದರೆ ನೀವು ಹಿಂದಿಯನ್ನೇ ಕಲಿಯಬೇಕು. ಇಂಗ್ಲಿಷು ನಮ್ಮ ಸಾಮಾನ್ಯ ಭಾಷೆ ಆಗಲಾರದು. ಇಂಗ್ಲಿಷಿನ ಬಗ್ಗೆ ನನಗೆ ದ್ವೇಷವಿಲ್ಲ. ಕೆಲವು ಪಂಡಿತರಿಗೆ ಇಂಗ್ಲಿಷ್ ಜ್ಞಾನ ಅತ್ಯಗತ್ಯ. ಅಂತರಾಷ್ಟ್ರೀಯ ಸಂಪರ್ಕಕ್ಕೆ ಮತ್ತು ಪಶ್ಚಿಮದಲ್ಲಿ ಬೆಳೆಯುತ್ತಿರುವ ವಿಜ್ಞಾನದ ಪರಿಚಯಕ್ಕೆ ಇಂಗ್ಲಿಷ್ ಅತ್ಯಗತ್ಯ. ಆದರೆ ನಿಲ್ಲಲಾರದ ಕಡೆ ಇಂಗ್ಗಿಷನ್ನು ನಿಲ್ಲಸಹೋದರೆ, ನನಗೆ ನೋವಾಗುತ್ತದೆ. ಪ್ರತಿಯೊಂದೂ ಅದರದರ ಸ್ಥಾನದಲ್ಲಿರಬೇಕು.

**ಒಂದು ಅಂಜಿಕೆ :**

ಒಂದು ಅಂಜಿಕೆ ಇದೆ. ಅದನ್ನು ನಾನು ಹೋಗಲಾಡಿಸಬೇಕು. ಕನ್ನಡದ ಬದಲು

ಹಿಂದಿಯನ್ನು ಕಲಿಯಬೇಕೆ? ಕನ್ನಡವನ್ನು ಸರಿಸಿ ಹಿಂದೀ ಮೆರೆಯುತ್ತದೆಯೇ? ಇಲ್ಲ. ತದ್ವಿರುದ್ಧ. ಹಿಂದೀ ಪ್ರಚಾರ ಹೆಚ್ಚಿದಷ್ಟು ಕನ್ನಡದ ಬೆಳವಣಿಗೆ ಆಗುತ್ತದೆ. ಬೇರೆ ಬೇರೆ ಪ್ರಾಂತಗಳಲ್ಲಿ ನನ್ನ ಅನುಭವ ಹೀಗೇ ಆಗಿದೆ.

ಲಿಪಿಯ ಮಾತು. ದಕ್ಷಿಣ ಆಫ್ರಿಕಾದಲ್ಲಿದ್ದಾಗಲೇ ಸಂಸ್ಕೃತ ಜನ್ಯ ಭಾಷೆಗಳು ಎಲ್ಲವೂ ದೇವನಾಗರಿಯ ಲಿಪಿಯನ್ನು ಬಳಸಬೇಕು ಎಂಬ ವಿಚಾರ ನನಗೆ ಬಂದಿತ್ತು. ತಮಿಳು, ತೆಲುಗು, ಕನ್ನಡ, ಮಲೆಯಾಳ ಲಿಪಿಗಳ ಮೂಲಕ ಭಾಷೆಗಳನ್ನು ಕಲಿಯಲು ನಾನು ಪ್ರಯತ್ನಿಸಿದೆ. ಈ ಲಿಪಿಗಳ ಭಾರವನ್ನು ಕಂಡು ಬೆದರಿಹೋದೆ. ಎಲ್ಲಕ್ಕೂ ದೇವನಾಗರಿಯ ಲಿಪಿಯು ಸಾಮಾನ್ಯ ಆಗಿದ್ದಿದ್ದರೆ ಒಂದು ಗಳಿಗೆಯಲ್ಲಿಯೇ ಕಲಿಯುತ್ತಿದ್ದೆ. ಈ ನಾಲ್ಕೂ ಭಾಷೆಗಳನ್ನು ಕಲಿಯಬೇಕೆನ್ನುವ ನನ್ನಂಥವನಿಗೆ ಎಷ್ಟು ಕಷ್ಟವಾಗುತ್ತದೆ. ನಿಮ್ಮ ನಿಮ್ಮಲ್ಲಿಯೇ ಒಬ್ಬರ ಭಾಷೆಯನ್ನು ಒಬ್ಬರು ಕಲಿಯಲು ದೇವನಾಗರಿ ಲಿಪಿಯು ಅನುಕೂಲ ಎಂಬುದನ್ನು ತಿಳಿಸಲು ತರ್ಕ ಬೇರೆ ಬೇಕೆ? ಹಿಂದೀ ರಾಷ್ಟ್ರಭಾಷೆ ಆಗಬೇಕು ಎಂಬ ಮಾತಿಗೂ, ಈ ಏಕ ಲಿಪಿಗೂ ಸಂಬಂಧ ಬೆಳಸಬೇಕಾಗಿಲ್ಲ. ಭಾರತೀಯ ಭಾಷೆಗಳನ್ನು ಕಲಿಯುವವರ ಕಷ್ಟವನ್ನು ಕುರಿತು ನಾನು ಹೇಳಿದೆ.

*(ಹರಿಜನ ೨೭-೬-೧೯೩೬)*

ಇದೆ ವರ್ಷ (೧೯೩೬) ಗಾಂಧೀಜಿ ಸೇವಾಗ್ರಾಮದಲ್ಲಿ ನೆಲೆಸಿದ್ದು ಹಳ್ಳಿಗಳಿಗೆ ಹೋಗಬೇಕು, ಅಲ್ಲಿ ನೆಲೆಸಬೇಕು ಎಂದು ಗಾಂಧೀಜಿಯ ಇಷ್ಟ. ಅಲ್ಲಿ ಅಂಚೆಯಿಲ್ಲ, ಒಳ್ಳೆಯ ರಸ್ತೆಯಿಲ್ಲ, ಅಂಗಡಿ ಇಲ್ಲ, ತರಕಾರಿ ಮಾರುಕಟ್ಟೆ ಇಲ್ಲ ಮಳೆಗಾಲದಲ್ಲಿ ಗ್ರಾಮ ಜೀವನ ತುಂಬ ಕಷ್ಟ. "ತಿಮ್ಮಪ್ಪ ನಾಯಕರೂ ಅವರ ಗೆಳೆಯರೂ ತಮ್ಮ ಅನುಭವಗಳನ್ನು ತಿಳಿಸಿದಾಗಿನಿಂದ ಹಳ್ಳಿಗೆ ಹೋಗಬೇಕು ಎಂದು ನನಗೆ ಎನಿಸುತ್ತಿತ್ತು." ಎಂದು ಗಾಂಧೀಜಿ ಸೇವಾಗ್ರಾಮದಲ್ಲಿ ಹೇಳಿದರು. ಇಲ್ಲಿ ಒಂದು ವಿಶೇಷ ಎಂದರೆ, ಕರ್ನಾಟಕದ ನಮ್ಮ ಹಳ್ಳಿಗಳ ಸ್ಫೂರ್ತಿ ಈ ಸೇವಾಗ್ರಾಮದ ಸಂತನಿಗೆ ಆಯಿತು ಎಂಬುದು ಎಷ್ಟು ಸೋಜಿಗ!

ವಿಷಯಕ್ಕೆ ಬರೋಣ. ಶ್ರೀ ಚೆಂಗಲರಾಯ ರೆಡ್ಡಿಯವರು ಕೋಲಾರ ಜಿಲ್ಲೆಯ ಪ್ರವಾಸಕ್ಕಾಗಿ ಗಾಂಧೀಜಿಯವರನ್ನು ಕರೆದುಕೊಂಡು ಬಂದರು. ಅಂದೇ ಕೋಲಾರಕ್ಕೂ, ಬಂಗಾರಪೇಟೆಗೂ ಹೋಗಿ ಬಂದರು. ೩೧ನೇ ತಾರೀಖು ಮಧ್ಯಾಹ್ನ ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಕೋಲಾರ, ಬೌರಿಂಗಪೇಟೆ, ಮಾಲೂರು ಎಲ್ಲವನ್ನೂ ಸುತ್ತಿಕೊಂಡು ರಾತ್ರಿ ಹೊತ್ತಿಗೆ ಬೆಂಗಳೂರಿಗೆ ಬಂದರು. ಹೋದಲ್ಲೆಲ್ಲ ಬಿನ್ನವತ್ತಳೆಗಳನ್ನು ಅರ್ಪಿಸಿದರು. ನಿಧಿ ಸಂಗ್ರಹವೂ ಆಯಿತು. ಗಣಿಗಳಿಗೆ ಹೋದಾಗ ಹೆನ್ನಿಷ್ಯಾಪ್ಪ ಕೂಲಿ ಲೈನ್ಸಿಗೆ ಹೋಗಿದ್ದರು. ಅಲ್ಲಿ ಒಂದು ದೊಡ್ಡ ಬಹಿರಂಗ ಸಭೆ ನಡೆಯಿತು. ಜಿಲ್ಲಾ ಬೋರ್ಡು ಅಧ್ಯಕ್ಷರು ಅದನ್ನು ಏರ್ಪಡಿಸಿದ್ದರು. ಅಲ್ಲಿ ಮಾತನಾಡುವಾಗ ಆ ಗುಡಿಸಲುಗಳ ದುರವಸ್ಥೆಯನ್ನು ವರ್ಣಿಸಿದರು. ನೂರಕ್ಕೆ ೩೦-೪೦ರಷ್ಟು ಲಾಭವನ್ನು ಹಂಚುವ ಈ ಗಣಿ ಕಂಪನಿ ತಮಗೆ ಲಾಭವನ್ನು ಗಳಿಸಿಕೊಡುವ ಈ ಜನಕ್ಕೆ ಇಂಥ ಅಸಹ್ಯ ವಸತಿಯನ್ನು

ಮಾಡಿಕೊಡುವುದು ಬಲು ಘೋರ ಎಂದರು. ಬಾಡಿಗೆ ಹೆಚ್ಚು ಅನುಕೂಲ ಕಡಿಮೆ ಎಂದರು. ಸರ್ವಶ್ರೀ ರಾಜಗೋಪಾಲ, ತಾಂಡೋನಿ, ಭಾಷ್ಯಕಾರ್ಲುನಾಯ್ಡು, ಗುರುಪ್ಪ, ವೆಂಕಟೇಶಶೆಟ್ಟಿ, ಸ್ವಾಗತದಲ್ಲಿ ಭಾಗವಹಿಸಿದವರಲ್ಲಿ ಪ್ರಮುಖರು. ಗಾಂಧೀಜಿ ಬೆಂಗಳೂರಿನಲ್ಲಿ ರೇಸವ್ಯೂನಲ್ಲಿ ತಂಗಿದ್ದರು. ಮಲ್ಲೇಶ್ವರದ ದೀನ ಸೇವಾ ಸಂಘದ ಸ್ವಯಂ ಸೇವಕರು ಅವರ ಸೇವೆಗಾಗಿ ಅಲ್ಲಿ ಕಾದಿದ್ದರು. ಬೆಂಗಳೂರಿನ ರಾಜಕೀಯ ನಾಯಕರು ಕೆಲವರು ಒಂದು ರಾಜಕೀಯ ಮಾತನಾಡಬೇಕೆಂದು ಅವರನ್ನು ಪ್ರಾರ್ಥಿಸಿದರು. ಆದರೆ ತಮ್ಮದು ಖಾಸಗೀ ಭೇಟಿ ಆದ್ದರಿಂದ ರಾಜಕೀಯದ ಮಾತನ್ನು ಆಡುವುದಿಲ್ಲ ಎಂದು ಗಾಂಧೀಜಿ ಹೇಳಿದರು.

ಜೂನ್ ೩ರಂದು ಗಾಂಧೀಜಿ ಸರಕಾರದ ಸಾಬೂನು ಕಾರ್ಖಾನೆಯನ್ನೂ, ಔದ್ಯೋಗಿಕ ಕಾರ್ಯಾಲಯವನ್ನೂ ನೋಡಿ ಬಂದರು. ಜೂನ್ ೧೨ರಂದು ಹಿಂದೀ ಕೆಲಸಗಾರರಿಗಾಗಿ ಗಾಂಧೀಜಿಯ ಬಿಡಾರದಲ್ಲಿ ಒಂದು ಖಾಸಗಿ ಸಭೆ ನಡೆಯಿತು. ಶ್ರೀ ಸಿದ್ಧನಾಥ ಪಂಥರು ಅದರ ಪ್ರಮುಖ ಕಾರ್ಯಕರ್ತರು. ತಾ॥ ೧೦, ೧೧, ೧೨ ಕೆಂಗೇರಿಯಲ್ಲಿ ಹರಿಜನ ಸಮ್ಮೇಳನ ನಡೆಯಿತಷ್ಟೇ. ಅದಕ್ಕೆ ಪಾಮಡಿ ಸುಬ್ಬರಾಮ ಶೆಟ್ಟರು ಅಧ್ಯಕ್ಷರು.

ಜೂನ್ ೧ರಂದೇ ಗಾಂಧೀಜಿ, ಶ್ರೀ ರಾಜಗೋಪಾಲಾಚಾರಿ, ಶ್ರೀ ಮಹದೇವದೇಸಾಯಿ, ಶ್ರೀಮತಿ ಕಸ್ತೂರಬಾ ಗಾಂಧಿ, ಶ್ರೀಮತಿ ಬ್ರಜಲಾ ನೆಹರು ಅವರು ಬೆಂಗಳೂರು ಬಿಟ್ಟು ಮದರಾಸಿಗೆ ಹೊರಟರು. ಅಂದೇ ಸಂಜೆ ಶ್ರೀ ವಲ್ಲಭಭಾಯಿ ಪಟೇಲ ಮತ್ತು ಅವರ ಮಗಳು ಮಣಿಬೇನ್ ಇಬ್ಬರೂ ಬೊಂಬಾಯಿಗೆ ಹೋದರು.

*(ಸರಕಾರದ ವರದಿ)*

❑

# ಅಧ್ಯಾಯ ೬



## ಗಾಂಧೀ ಸೇವಾ ಸಂಘದ ಸಮ್ಮೇಳನ, ಹುದಲಿ, ೧೯೩೭

ಹುದಲಿಯಲ್ಲಿ ಗಾಂಧೀ ಸೇವಾಸಂಘದ ೩ನೇ ವಾರ್ಷಿಕ ಸಮ್ಮೇಳನ (ಏಪ್ರಿಲ್ ೧೯೩೭)

**ಹುದಲಿಯಲ್ಲಿ:**

ಹುದಲಿ ಬೆಳಗಾಂವಿ ಜಿಲ್ಲೆಯ ಒಂದು ಹಳ್ಳಿ. ಆಗ ಅದರ ಜನಸಂಖ್ಯೆ ೨,೨೦೦. ೧೯೨೨ರಿಂದಲೂ ಎಂದರೆ ಬೆಳಗಾಂವಿಯಲ್ಲಿ ಕಾಂಗ್ರೆಸ್ಸು ನಡೆಯುವದಕ್ಕಿಂತ ಮುಂಚಿನಿಂದಲೂ ಹುದಲಿ ರಚನಾತ್ಮಕ ಕಾರ್ಯಗಳ ಕೇಂದ್ರ. ಇದು ಗಂಗಾಧರರಾಯರ ಊರು. ಇಲ್ಲಿಗೆ ಒಂದೂವರೆ ಮೈಲು ದೂರದಲ್ಲಿ ದೇಶಪಾಂಡೆ ಗಂಗಾಧರರಾಯರ ಒಂದು ತೋಟವಿದೆ. ಅಲ್ಲಿ ಒಂದು ಆಶ್ರಮವನ್ನು ಸ್ಥಾಪಿಸಲಾಯಿತು. ಅದಕ್ಕೆ ಕುಮರಿ ಆಶ್ರಮ ಎಂದು ಹೆಸರು ಬಂತು. ಎರಡು ಗುಡ್ಡಗಳ ನಡುವಿನ ಪ್ರದೇಶಕ್ಕೆ ಕನ್ನಡದಲ್ಲಿ ಕುಮರಿ ಅನ್ನುತ್ತಾರೆ. ಆದ್ದರಿಂದ ಇದಕ್ಕೆ ಕುಮರಿ ಆಶ್ರಮ ಎಂದು ಹೆಸರು. ಕುಮರಿಯಲ್ಲಿ ಇರುವ ಮನೆಗಳು ಬಹಳ ಕಡಿಮೆ. ಅದಕ್ಕೆ ಹತ್ತಿಕೊಂಡು ಇರುವ ದೊಡ್ಡ ಗ್ರಾಮ ಎಂದರೆ ಹುದಲಿ. ಈ ಗ್ರಾಮ ಮತ್ತು ಆಶ್ರಮದಲ್ಲಿ ಶ್ರೀ ರಾಮಚಂದ್ರ ವಡವಿ ಮತ್ತು ಶ್ರೀ ಪುಂಡಲೀಕಜಿ ಕಾತಗಡೆ ಇವರು ವಿಧಾಯಕ ಕಾರ್ಯಕ್ರಮ ಮಾಡುತ್ತಿದ್ದರು. ಆದ್ದರಿಂದ ಅಲ್ಲಿ ೧೯೩೭ರಲ್ಲಿ ಗಾಂಧೀ ಸೇವಾ ಸಂಘದ ವಾರ್ಷಿಕ ಸಭೆ ನಡೆಯಿತು. ಹುದಲಿಯಲ್ಲಿ ಸಾಕಷ್ಟು ರಚನಾತ್ಮಕ ಕಾರ್ಯ ನಡೆದಿದೆ. ಜನತೆಯ ಸಹಕಾರವೂ ಇದೆ. ಜನರೇ ಬಾವಿ ತೋಡಿದ್ದಾರೆ; ರಸ್ತೆ ಸರಿ ಮಾಡಿದ್ದಾರೆ. ರಸ್ತೆ ಕೆಲಸವು ಪೂರಾ ಆಗಿರಲಿಲ್ಲ. ಸಂಘದ ಸದಸ್ಯರು ಇಲ್ಲಿ ಸಭೆ ನಡೆದ ಒಂದುವಾರದ ಕಾಲ ದಿನವೂ ೨ ಗಂಟೆ ಹೊತ್ತು ಶರೀರಶ್ರಮ ಮಾಡಿ ಅದನ್ನು ಮುಗಿಸಬೇಕು ಎಂದು ಇತ್ತು. ಊರೊಳಗೆ ಗೊಬ್ಬರದ ಗುಂಡಿಗಳನ್ನು ಎಲ್ಲ ಮುಚ್ಚಿ, ಊರ ಹೊರಕ್ಕೆ ತೋಡಿದ್ದರು. ಒಂದು ದೊಡ್ಡ ಗುಂಡಿಯನ್ನು ಮುಚ್ಚುವುದು ಸಂಘದ ಸದಸ್ಯರ ಪಾಲಿಗೆ ಉಳಿದಿತ್ತು. ಊರು ಗುಡ್ಡದ ತಪ್ಪಲಿನಲ್ಲಿ ಇದೆ. ಸುಳಧಾಳ ರೈಲ್ವೆ ನಿಲುಮನೆಗೆ ಬಹಳ ಹತ್ತಿರ. ಸಂಘದ

ಶಿಬಿರ ಊರ ಹೊರಬದಿಗೆ ಇರುವ ಗುಡ್ಡದ ಪಕ್ಕದಲ್ಲಿ ಜೋಳದ ದಂಟಿನಿಂದ ಹಾಕಿದ ಗುಡಿಸಲುಗಳಲ್ಲಿ ನಡೆಯಿತು. ಫೆಬ್ರವರಿ ತಿಂಗಳಲ್ಲಿ ನಡೆಯಬೇಕಾಗಿದ್ದ ಈ ಅಧಿವೇಶನ ಏಪ್ರಿಲ್ ತಿಂಗಳಲ್ಲಿ ನಡೆಯಿತು. ಬೆಳಗಾಂವಿ ಜಿಲ್ಲೆಯಲ್ಲಿ ಏಪ್ರಿಲಿನಲ್ಲಿ ಮಳೆ ಬರುವದು ವಿರಳ. ಬಂದರೂ ಈ ಬರೀ ತೋರಿಕೆ ಮಳೆಗೆ ತಾತ್ಕಾಲಿಕವಾಗಿ ಈ ಗುಡಿಸಲುಗಳು ಸಾಕು ಎಂದು ತಿಳಿದುಕೊಂಡಿದ್ದರು. ಆದರೆ ಅನುಭವ ಬೇರೆ ಆಯಿತು.

ಸಂಘದ ಅಧಿವೇಶನವು ೧೬-೪-೧೯೩೭ ರಂದು ಪ್ರಾರಂಭವಾಯಿತು. ೧೯-೪-೧೯೩೭ ರಂದು ಬೆಳಗ್ಗೆ ೬-೩೦ಕ್ಕೆ ಗಾಂಧೀಜಿ ಸುಳಧಾಳ ಸ್ಟೇಶನದಿಂದ ಹುದಲಿಗೆ ನಡೆದು ಬಂದು ಝುಂಡಾವಂದನದ ಸಮಯಕ್ಕೆ ಶಿಬಿರವನ್ನು ತಲುಪಿದರು. ಬಹಳ ಶ್ರದ್ಧೆಯಿಂದ ನಿಯಮದಂತೆ ಶರೀರ ಶ್ರಮದ ಕಾರ್ಯಕ್ರಮ ನಡೆಯಿತು. ಚರ್ಚೆಗೆ ಬಂದ ವಿಷಯಗಳು ಬಹಳ ಗಂಭೀರ. ಸಭೆ ಸೇರಿದ ಎರಡನೇ ದಿನ ಸಂಜೆಗೆ ಸ್ವಲ್ಪ ಮೋಡ ಆಡಿ ಮಳೆ ಬಂತು. ಬಂದದ್ದು ಕುಂಭದ್ರೋಣ ಮಳೆ. ಶಿಬಿರದಲ್ಲಿ ಒಂದು ಹೆಜ್ಜೆ ನೆಲವೂ ನೆನೆಯದೇ ಇರಲಿಲ್ಲ. ಹಾಕಿದ್ದ ಗುಡಿಸಲುಗಳೆಲ್ಲವೂ ಬಿದ್ದುಹೋದವು. ರಾತ್ರಿ ಹಳ್ಳಿಯಲ್ಲಿ ವಸತಿ ಕಲ್ಪಿಸಬೇಕಾಯಿತು. ರಾತ್ರಿ ಪ್ರಾರಂಭವಾದ ಮಳೆ ಬೆಳಗ್ಗೆ ಸಹ ಧಾರಾಕಾರವಾಗಿ ಸುರಿಯುತ್ತಲೇ ಇತ್ತು. ಆ ಮಳೆಯಲ್ಲಿಯೇ ನೆನೆದುಕೊಂಡು, ಕುಮರಿ ಆಶ್ರಮಕ್ಕೆ ಹೋಗದೆ ಬೇರೆ ಉಪಾಯ ಇರಲಿಲ್ಲ. ಅಲ್ಲಿ ನೇಯ್ಗೆಮನೆ ದೊಡ್ಡದಾಗಿತ್ತು. ಬಂದಿದ್ದವರಿಗೆಲ್ಲರಿಗೂ ಅಲ್ಲಿ ಸ್ಥಳವಿರಲಿಲ್ಲ. ಸದಸ್ಯರಿಗೆ ಮಾತ್ರ ಸಾಲುವಷ್ಟು ಸ್ಥಳವಿತ್ತು. ಹೀಗಾಗಿ ಸದಸ್ಯರು ಮಾತ್ರ ಏಪ್ರಿಲ್ ೧೮ನೇ ತಾರೀಖು ಬೆಳಗ್ಗೆ ಕುಮರಿಗೆ ಮಳೆಯಲ್ಲೇ ನಡೆದುಕೊಂಡು ಹೋದರು. ವ್ಯವಸ್ಥೆ ಎಲ್ಲವೂ ತಲೆಕೆಳಗಾಗಿ ಹೋಯಿತು. ಬಂದಿದ್ದವರು ಸಾವಿರಾರು ಜನ. ಅದೋ ಸಣ್ಣ ಹಳ್ಳಿ. ಅಲ್ಲಿ ಬಂದಿದ್ದವರ ವಸತಿಗೆ, ಊಟಕ್ಕೆ ವ್ಯವಸ್ಥೆ ಮಾಡುವುದು ಗಂಗಾಧರರಾಯರಿಗೂ, ಕೆಲಸಗಾರರಿಗೂ ಬಹಳ ಕಷ್ಟ ಆಯಿತು. ನಿದ್ದೆ ಇಲ್ಲದೆ, ಬಿಡುವು ಇಲ್ಲದೆ ದುಡಿದೇ ದುಡಿದರು. ಎರಡು ದಿನ ರಪರಪ ಒಂದೇ ಸಮ ಮಳೆ ಸುರಿದು ಕಟ್ಟಕಡೆಗೆ ಕರುಣಿಸಿತು. ಆಗ ಹೊರಪು ಆಗಿ ಬಿಸಿಲು ಕಾಯತೊಡಗಿತು. ಆಗ ಗ್ರಾಮೋದ್ಯೋಗದ ಒಂದು ಪುಟ್ಟ ಪ್ರದರ್ಶನವನ್ನು ಗಾಂಧೀಜಿ ಉದ್ಘಾಟನೆ ಮಾಡಿದರು. ಇಷ್ಟೆಲ್ಲ ಕಠಿನ ಆಗಿ, ಎಲ್ಲ ವ್ಯವಸ್ಥೆಯನ್ನೂ ತಲೆಕೆಳಗುಮಾಡಿದ ಈ ವಾತಾವರಣವೂ ಕೂಡ ಒಂದು ರೀತಿಯಲ್ಲಿ ಒಳ್ಳೆಯದೇ ಮಾಡಿತು ಎನ್ನಬೇಕು. ಏಕೆಂದರೆ ವ್ಯವಸ್ಥಾಪಕರು ತಮ್ಮ ಚಾತುರ್ಯವನ್ನೆಲ್ಲ ತೋರಿಸಬೇಕಾಯಿತು. ಸಂಘದ ಸದಸ್ಯರು ತಮ್ಮ ಸಹನೆಯನ್ನೆಲ್ಲ ಉಪಯೋಗಿಸಬೇಕಾಯಿತು. ಸಂಘ ಎಂದರೆ ಒಂದು ಕೆಲಸಗಾರರ ಗಂಪೇ. ಅವರ ಕಾರ್ಯಕ್ರಮ, ಅವರ ಸೇವಾಕ್ಷೇತ್ರ ಇರುವದೆಲ್ಲ ಹಳ್ಳಿಗಳಲ್ಲಿ. ಅಲ್ಲಿ ಈ ಕಷ್ಟ, ತೊಂದರೆ ಸಹಜ. ಸಂಘದ ಸದಸ್ಯರೆಲ್ಲರೂ ಪಟ್ಟಣಿಗರು, ವಿದ್ಯಾವಂತರು ಆದರೂ ತಮ್ಮ ಕೈಕಾಲುಗಳನ್ನು ಉಪಯೋಗಿಸಿ, ಕೆಲಸ ಮಾಡುತ್ತಿದ್ದುದನ್ನು ಹಳ್ಳಿಯವರು ನೋಡಿದರು. ಅಧಿವೇಶನವು ೧೬-೪-೧೯೩೭ರಂದು ಮಧ್ಯಾಹ್ನ ೩-೩೦ಕ್ಕೆ ಪ್ರಾರಂಭ ವಾಯಿತು. ಸ್ವಾಗತಾಧ್ಯಕ್ಷ ಶ್ರೀ ಗಂಗಾಧರರಾವ ದೇಶಪಾಂಡೆ ಅವರು ಸ್ವಾಗತ ಭಾಷಣ ಮಾಡಿದರು.

**ಶ್ರೀ ಗಂಗಾಧರರಾಯರ ಭಾಷಣ:**

ಗಾಂಧೀ ಸೇವಾ ಸಂಘ ಕರ್ನಾಟಕ ಶಾಖೆ ೧೯೨೫ರಲ್ಲಿ ಪ್ರಾರಂಭ ಆಯಿತು. ೧೯೩೭ರ ವೇಳೆಗೆ ಈ ಶಾಖೆಯಲ್ಲಿ ೧೦ ಮಂದಿ ಸೇವಕ ಸದಸ್ಯರೂ, ಮೂವರು ಸಹಯೋಗೀ ಸದಸ್ಯರೂ ಇದ್ದರು. ಅವರ ಕಾರ್ಯಕ್ಷೇತ್ರ ಮತ್ತು ಕೆಲಸ ಹೀಗೆ.

ಶ್ರೀ ದಿವಾಕರರು ಕರ್ನಾಟಕದ ಸಂಘದ ಎಲ್ಲ ಕಾರ್ಯಗಳಲ್ಲಿಯೂ ಅಷ್ಟೋ, ಇಷ್ಟೋ ಭಾಗವಹಿಸುತ್ತಾರೆ. ಪ್ರಾಂತದಲ್ಲಿ ಎಲ್ಲೆಡೆಯಲ್ಲಿಯೂ ತಿರುಗಾಡುತ್ತ ಎಲ್ಲರ ಘನಿಷ್ಠ ಸಂಬಂಧವನ್ನು ಪಡೆದಿದ್ದಾರೆ. ಒಂದು ದಿನಪತ್ರಿಕೆಯನ್ನೂ ನಡೆಸುತ್ತಾರೆ. (ಈಗಲೂ ನಡೆಸುತ್ತ ಇದ್ದಾರೆ.)

ಶ್ರೀ ಹಣಮಂತರಾವ ಕೌಜಲಗಿ ಅನೇಕ ವರ್ಷ ಚರಖಾ ಸಂಘದ ಕೆಲಸಗಾರರಾಗಿದ್ದರು. ಶ್ರೀ ದಿವಾಕರ ರಂಗರಾಯರು ಎಲ್ಲೆಡೆಯಲ್ಲಿಯೂ ತಿರುಗಾಡಿ, ಏನು ಕೆಲಸಮಾಡಬೇಕೋ ಇವರು ಬಿಜಾಪುರ ಜಿಲ್ಲೆಯಲ್ಲಿ ಅದನ್ನೇ ಮಾಡಬೇಕಾಗುತ್ತದೆ. ಶ್ರೀ ಟೇಕೂರು ಸುಬ್ರಹ್ಮಣ್ಯಂ ಬಳ್ಳಾರಿ ಜಿಲ್ಲೆಯಲ್ಲಿ ಇದೇ ಕೆಲಸವನ್ನೇ ಮಾಡುತ್ತಾರೆ. ಇವೆರಡೂ ಜಿಲ್ಲೆಗಳಲ್ಲಿ ಕಳೆದ ಸಲ ಬರ ಬಂದಾಗ ಅಲ್ಲಿನ ಜನರಿಗೆ ಸಹಾಯವಾಡಲು ಇಬ್ಬರೂ ಪ್ರಯತ್ನ ಮಾಡಿದ್ದಾರೆ.

ಬ್ರಹ್ಮಚಾರಿ ಶ್ರೀ ರಾಮಚಂದ್ರ (ಆಗ್ಗೆ ಬೆಂಗಳೂರಿನ ಒಬ್ಬ ಪ್ರಮುಖ ಕೆಲಸಗಾರರು) ಇವರ ಮೂಲಕ 'ದೀನ ಸೇವಾ ಸಂಘ,' 'ಹರಿಜನ ಸೇವಕ ಸಂಘ' ಮುಂತಾದ ಹಲವು ಸಂಸ್ಥೆಗಳು ಬೆಂಗಳೂರಿನಲ್ಲಿಯೂ ಅದರ ಸುತ್ತಮುತ್ತಲಿನ ಹಳ್ಳಿಗಳಲ್ಲಿ ನಡೆಯುತ್ತಿವೆ. ಶ್ರೀ ನಾರಾಯಣ (ಸ್ವಾಮಿ ವಿಶ್ವಾನಂದ) ಅವರ ಸಂಗಡಿಗರು ಬೆಂಗಳೂರಿನ ಸಮೀಪದ ಕೆಂಗೇರಿ ಹಳ್ಳಿಯಲ್ಲಿ ಒಂದು ಗುರುಕುಲವನ್ನು ನಡೆಸುತ್ತಿದ್ದಾರೆ.

ಶ್ರೀ ತಿಮ್ಮಪ್ಪ ನಾಯ್ಕರು ಕಾರವಾರ ಜಿಲ್ಲೆಯಲ್ಲಿ ಹರಿಜನ ಸೇವೆ ಮಾಡುತ್ತಿದ್ದಾರೆ. ತಮ್ಮ ಸೇವೆಯಿಂದ ಹಾಗೂ ನಿರ್ಮಲ ತಪಸ್ಸಿನಿಂದ ಸುತ್ತಲೂ ಒಳ್ಳೆಯ ವಾತಾವರಣವನ್ನು ನಿರ್ಮಿಸಿದ್ದಾರೆ.

ಶ್ರೀ ಮುರುಳಿಧರ ಘಾಟೆ ಅವರು ಬೆಳಗಾಂವಿ ಸಮೀಪದಲ್ಲಿ ಬೆಳಗುಂದಿ ಹಳ್ಳಿಯಲ್ಲಿ ಕಾಕಾ ಸಾಹೇಬ ಕಾಲೇಲ್ಕರರ ಶ್ರೀ ರಾಧಾಲಕ್ಷ್ಮೀ ಹರಿಜನ ಟ್ರಸ್ಟ್ ಮೂಲಕ ಹರಿಜನ ಸೇವೆ ಮಾಡುತ್ತಿದ್ದಾರೆ.

ಶ್ರೀ ಪುಂಡಲೀಕಜಿ, ಶ್ರೀ ರಾಮಚಂದ್ರ ವಡವಿ. ಶ್ರೀ ದಾದಾ ಸಾಹೇಬ ಕಾಳೆ ಗಂಗಾಧರರಾಯರ ಸಂಗಡಿಗರು. ಹುದಲಿಯ ಸಮೀಪದಲ್ಲಿ ಕುಮರಿ ಖಾದಿ ಮಂದಿರದಲ್ಲಿ ಕೆಲಸ ಮಾಡುತ್ತಿದ್ದರು. ಹುದಲಿಯ ಮುಖ್ಯರಸ್ತೆಯನ್ನು ಪೂರ್ಣಗೊಳಿಸುವ ಕೆಲಸ ಇವರದಾಗಿದೆ.

ಸಹಯೋಗಿ ಸದಸ್ಯ ಶ್ರೀ ಮಹದೇವಪ್ಪ ಮಿಂಡಗುದಲಿ ಕರ್ನಾಟಕದ ಲಿಂಗಾಯತ

ಸಮಾಜದ ಒಬ್ಬ ಒಳ್ಳೇ ಕೆಲಸಗಾರರು. ಬೆಳಗಾಂವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನಲ್ಲಿ ಕಾಂಗ್ರೆಸ್ಸು, ಹರಿಜನ ಸೇವೆ, ಗೋಸೇವೆ ಮುಂತಾದ ಕೆಲಸಗಳನ್ನು ಮನಗೊಟ್ಟು ಮಾಡುತ್ತಿದ್ದಾರೆ.

ಸಹಯೋಗಿ ಸದಸ್ಯ ಶ್ರಿ ಹಳ್ಳೀಕೇರಿ ಮತ್ತು ಮಾಗಡಿ ಇಬ್ಬರೂ ಗಾಂಧೀಜಿಯ ಸಿದ್ಧಾಂತಕ್ಕನುಸಾರವಾಗಿ ಕೆಲಸ ಮಾಡಲು ಧಾರವಾಡ ಜಿಲ್ಲೆಯ ಹೊಸರಿತ್ತಿಯಲ್ಲಿ ಒಂದು ಆಶ್ರಮ ಸ್ಥಾಪಿಸಿದ್ದಾರೆ. ಅದರಲ್ಲಿ ೧೮ ಜನ ಕೆಲಸಗಾರರಿದ್ದಾರೆ. ಹಾವೇರಿ ತಾಲ್ಲೂಕಿನಲ್ಲಿ, ಅಕ್ಕಪಕ್ಕದಲ್ಲಿ ಜನಜಾಗೃತಿ ಮಾಡಲು ಈ ಆಶ್ರಮ ಪ್ರಯತ್ನಿಸುತ್ತಿದೆ. ನಾಲ್ಕೈದು ವರ್ಷ ಆಗಲೇ ಸೇವೆ ಸಲ್ಲಿಸಿದ ಆ ಆಶ್ರಮ ಭವಿಷ್ಯತ್ತಿನ ಆಸೆಗೆ ಬೀಜ ಹಾಕಿದೆ. ಕರ್ನಾಟಕದ ಕೆಲಸ ಹೆಚ್ಚು ಅಲ್ಲದಿದ್ದರೂ ಸರಿಯಾದ ದಾರಿಯಲ್ಲಿ ನಡೆಯುತ್ತಾ ಇದೆ.

ಸಂಘದ ಕಾರ್ಯಕ್ಷೇತ್ರ ಕುಂದರ ನಾಡು. ಇದರಲ್ಲಿ ಚಿಕ್ಕ-ಪುಟ್ಟ ಹಳ್ಳಿ ಸೇರಿ ಒಟ್ಟು ೩೫ ಹಳ್ಳಿ. ಎಲ್ಲ ಹಳ್ಳಿಗಳ ಪರಿಚಯವೂ ನಮಗಿದೆ. ಹುದಲಿ ಗ್ರಾಮದ ಜನಸಂಖ್ಯೆ ೨,೨೦೦. ಎಲ್ಲ ಜಾತಿಯ ಜನರೂ ಇಲ್ಲಿದ್ದಾರೆ. ೧೯೨೪ರಲ್ಲಿ ಬೆಳಗಾಂವಿಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ತರುವಾಯ ಖಾದಿ ಪ್ರಚಾರಕ್ಕಾಗಿ ಗಾಂಧೀಜಿ ಕರ್ನಾಟಕದಲ್ಲಿ ಓಡಾಡಿದರು. ಆಗ ಸಂಗ್ರಹವಾದ ಹಣದಲ್ಲಿ ಸ್ವಲ್ಪ ತೆಗೆದುಕೊಂಡು ಈ 'ಕುಮರಿ ಖಾದಿ ಮಂದಿರ'ದಲ್ಲಿ ಕೆಲಸ ಪ್ರಾರಂಭವಾಯಿತು. ಈ ಆಶ್ರಮ ಎಲ್ಲವೂ ಗಾಂಧೀ ಸೇವಾ ಸಂಘಕ್ಕೆ ಸಮರ್ಪಿತವಾಯಿತು ಎಂದು ಶ್ರೀ ಗಂಗಾಧರರಾಯರು ತಮ್ಮ ಸ್ವಾಗತ ಭಾಷಣದಲ್ಲಿ ತಿಳಿಸಿದರು.

ಸ್ವಾಗತಾಧ್ಯಕ್ಷ ಶ್ರೀ ಗಂಗಾಧರರಾಯರ ಸ್ವಾಗತ ಭಾಷಣವಾದ ಮೇಲೆ ಪೂಜ್ಯ ಗಾಂಧೀಜಿಯವರು ಮಾತನಾಡಿದರು.

**ಗಾಂಧೀಜಿಯ ಭಾಷಣ :**

ಬಂಧು ಭಗಿನಿಯರೇ, ನನ್ನ ಧ್ವನಿಯು ನಿಮಗೆ ಕೇಳಿಸದಿದ್ದರೆ ಹೇಳಿರಿ. ಅಂದರೆ ನಾನು ಸ್ವಲ್ಪ ಗಟ್ಟಿಯಾಗಿ ಮಾತನಾಡುವೆನು. ಅಧ್ಯಕ್ಷರು (ಶ್ರೀ ಕಿಶೋರಿಲಾಲ ಮಶ್ರುವಾಲ) ಚರ್ಚೆಯನ್ನು ಪ್ರಾರಂಭಿಸುವ ಮೊದಲು ನಾನು ಕೆಲವು ಮಾತುಗಳನ್ನು ಹೇಳುವೆನೆಂದು ಒಪ್ಪಿಕೊಂಡಿದ್ದೇನೆ. ನಾನು ೬ ದಿನ ಸಮ್ಮೇಳನದಲ್ಲಿ ಭಾಗವಹಿಸುವೆನು.

ಮೊಟ್ಟ ಮೊದಲು ಒಂದು ವಿಷಯವನ್ನು ಹೇಳಬಯಸುತ್ತೇನೆ. ಬೆಳಿಗ್ಗೆ ನಾನು ಬಂದಾಗ ಯಾರೋ ಒಬ್ಬರು ಹೇಳಿದರು – 'ಫೈಜಪುರದ ಕಾಂಗ್ರೆಸ್ ಜವಾಹರಲಾಲ ನೆಹರೂ ಅವರದಾಗಿತ್ತು. ಈಗ ಹುದಲೀ ಕಾಂಗ್ರೆಸ್ ಗಾಂಧೀಜಿಯವರದಾಗುವುದು.' ಈ ಮಾತನ್ನು ಅಧ್ಯಕ್ಷರೋ ಅಥವಾ ಇನ್ನಾರೋ ನನಗೆ ಹೇಳಿದರು. ಇದು ವಿನೋದದ ಮಾತೆಂಬುದನ್ನು ನಾನು ಬಲ್ಲೆ. ಆದರೆ ವಿನೋದದಲ್ಲಿಯಾದರೂ ಇಂಥ ಮಾತುಗಳನ್ನು ಯಾಕೆ ಮಾತನಾಡಬೇಕೆಂದು ನನಗೆ ದುಃಖವಾಯಿತು. ನನ್ನ ಮತ್ತು ಜವಾಹರಲಾಲರ

ನಡುವೆ ಅಥವಾ ಕಾಂಗ್ರೆಸ್ ಮತ್ತು ಗಾಂಧೀ ಸೇವಾ ಸಂಘದ ನಡುವೆ ಸ್ಪರ್ಧೆಯ ಕಲ್ಪನೆಯನ್ನು ಮಾಡುವುದು ವಿನೋದದಲ್ಲಿ ಕೂಡ ಅಪರಾಧವಾಗುತ್ತದೆ. ಗಾಂಧೀ ಸೇವಾ ಸಂಘವು ಕಾಂಗ್ರೆಸ್‌ನ ವಿರೋಧಿಯಲ್ಲ. ಅದು ಅದರ ಸೇವೆಗೋಸ್ಕರವಿದೆ. ಸಂಘವು ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕ್ರಮವನ್ನು ಮುಂದುವರಿಸಲಿಕ್ಕೆ ಹುಟ್ಟಿರುವಾಗ ಅದು ಕಾಂಗ್ರೆಸ್ಸಿನ ವಿರೋಧಿ ಹೇಗೆ ಆಗಲು ಸಾಧ್ಯ? ನಾನು ಇನ್ನೂ ಮುಂದುವರಿದು ಹೇಳುತ್ತೇನೆ. ಕಾಂಗ್ರೆಸ್ ಕೋಟಿ ಕೋಟಿ ಜನಗಳ ಪ್ರತಿನಿಧಿ; ಸಂಘವು ಸತ್ಯ ಮತ್ತು ಅಹಿಂಸೆಯ ಪ್ರತಿನಿಧಿಗಳಿರಬಹುದು. ನೀವು ಹೀಗೆ ಹೇಳಿರಬಹುದು, ಸತ್ಯ ಮತ್ತು ಅಹಿಂಸೆಗಳನ್ನು ಸಂಪೂರ್ಣ ಜಗತ್ತೇ ಪ್ರತಿನಿಧಿಸಬೇಕು ಎಂದು. ಆದರೆ ಅದು ಬೇರೆ ವಿಷಯ. ಗಾಂಧೀ ಸೇವಾ ಸಂಘದ ಸದಸ್ಯರಾದರೋ ಆ ಸ್ಥಿತಿಯಲ್ಲಿಯೂ ನಮ್ಮ ಪ್ರತಿನಿಧಿಗಳೆಂದೇ ಎನಿಸಿಕೊಳ್ಳುವರು. ಆದರೆ ನಾವು ಕೂಡ ಕೋಟಿಗಟ್ಟಲೆ ಜನಗಳ ಪ್ರತಿನಿಧಿಯಾಗಲು ಬಯಸುತ್ತೇವೆ ಅಲ್ಲವೆ? ಮತ್ತು ಕೋಟಿಗಟ್ಟಲೆ ಜನಗಳ ದುಃಖವನ್ನು ದೂರ ಮಾಡಲು ಕಾಂಗ್ರೆಸ್ ಅಂತು ಪ್ರತಿಜ್ಞೆ ಮಾಡಿದೆ. ಅಂದ ಮೇಲೆ ನಮ್ಮ ಮತ್ತು ಕಾಂಗ್ರೆಸ್ಸಿನ ನಡುವೆ ವಿರೋಧ ಹೇಗೆ ಆಗಲಿಕ್ಕೆ ಸಾಧ್ಯ? ನಾನಂತೂ ಹೇಳುತ್ತೇನೆ, ಸಂಘವು ಯಾರ ಜೊತೆಗೂ ಸ್ಪರ್ಧೆಯನ್ನು ಮಾಡಲಾರದು. ವಿನೋದದಲ್ಲಿ ಕೂಡ ಕಾಂಗ್ರೆಸ್ ಮತ್ತು ಸಂಘದ ನಡುವೆ ಸ್ಪರ್ಧೆಯಿದೆ ಎಂದು ಯಾರ ಮುಖದಿಂದಲೂ ಹೊರಡದಿರಲಿ. ಯಾಕೆಂದರೆ ಅದು ಅಸತ್ಯ. ವಿನೋದದಲ್ಲಿಯೂ ಅಸತ್ಯ ಹೇಳುವುದು ನಿಷಿದ್ಧ. ಇಂಥ ಮಾತನ್ನು ಯಾರಾದರೂ ಕೇಳಿದರೆ ಅದನ್ನು ಅಲ್ಲಿಯೇ ನಿಲ್ಲಿಸಬೇಕು. ನಾನು ನಿಮಗೆ ಎಚ್ಚರಿಕೆಯನ್ನು ಕೊಡಬಯಸುತ್ತೇನೆ. ನಾವು ಯಾರ ಜೊತೆಗೂ ಯುದ್ಧ ಮಾಡಲು ಬಯಸುವುದಿಲ್ಲ. ಆದ್ದರಿಂದ ನಾವು ಈ ಪ್ರಕಾರದ ಮಾತು ಕೂಡ ಆಡಬಾರದು.

ಎರಡನೇ ಮಾತನ್ನು ನಾನು ಹೇಳಬಯಸುವುದೆಂದರೆ ಗಾಂಧೀ ಸೇವಾ ಸಂಘದ ಹೆಸರಿನಲ್ಲಿಯೂ ಪರಿವರ್ತನೆಯನ್ನು ಮಾಡುವುದು ಸರಿಯಲ್ಲವೆ? ನೀವು ಸಂಘದ ಜೊತೆಗೆ ನನ್ನ ಹೆಸರನ್ನು ಸೇರಿಸುವಿರಿ. ಇದರ ಅರ್ಥ ನನ್ನ ಕಾರ್ಯಕ್ಷೇತ್ರ. ಇಷ್ಟೇ ಎಂದೇನೂ ಅಲ್ಲ, ನಾನಂತೂ ಸಂಪೂರ್ಣ ಹಿಂದೂಸ್ಥಾನವನ್ನು ನನ್ನ ಕಾರ್ಯಕ್ಷೇತ್ರ ಮಾಡಲು ಬಯಸುತ್ತೇನೆ. ನಾನು ಒಂದು ಮಾರ್ಗವನ್ನು ತೋರಿಸಿರುತ್ತೇನೆ. ಅದನ್ನು ನೀವು ಒಪ್ಪಿರುವಿರಿ. ಆದರೆ ಮನುಷ್ಯನ ಪೂಜೆ ಮಾಡುವುದು ನಮ್ಮ ಕೆಲಸವಲ್ಲ. ಆದರ್ಶ ಮತ್ತು ಸಿದ್ಧಾಂತದ ಪೂಜೆಯನ್ನು ಮಾಡಬಹುದು. ೧೯೨೦ರಲ್ಲಿ ನಾನು ದೇಶದ ಎದುರಿಗೆ ಯಾವ ವಿಷಯಗಳನ್ನಿಟ್ಟೆನೋ ಅದನ್ನು ಪೂರ್ಣ ಮಾಡಲು ನೀವು ಒಪ್ಪಿರುವಿರಿ. ಅವುಗಳಲ್ಲಿ ನೀವು ಯಾವ ವಿಷಯಗಳನ್ನು ಆತ್ಮಸಾತ್ ಮಾಡಿ ಕೊಂಡಿರುವಿರೋ, ಜೀರ್ಣಮಾಡಿಕೊಂಡಿರುವಿರೋ ಅವಷ್ಟೇ ನಿಮ್ಮವು. ಆ ವಿಷಯಗಳ ಮೇಲೆ ನನ್ನ ಶ್ರದ್ಧೆಯು ಮೊದಲಿಗಿಂತ ಎಷ್ಟೋ ಹೆಚ್ಚು ಕಳೆಗೊಂಡಿದೆ. ಆದರೆ ನಾನು ನನ್ನ ಶ್ರದ್ಧೆಯು ಕಡಿಮೆಯಾಗಿದೆ ಎಂದು ಹೇಳಿದರೆ ನೀವು ಅವುಗಳನ್ನು ಬಿಟ್ಟುಬಿಡುವಿರಾ? ನಾನು ಬಿಟ್ಟರೂ ನೀವು ಅವುಗಳನ್ನು ಬಿಡಬಾರದು. ನೀವು ನನ್ನ ಪೂಜಾರಿಯಾಗಬಾರದು.

ಸತ್ಯ ಮತ್ತು ಅಹಿಂಸೆಯ ಪೂಜಾರಿಗಳಾಗಬಹುದು. ಯಾವ ವಿಷಯವನ್ನು ನೀವು ಆತ್ಮಸಾತ್ ಮಾಡಿಕೊಳ್ಳುವಿರೋ ಅದು ಸ್ವತಂತ್ರರೂಪದಿಂದ ನಿಮ್ಮದೇ ಆಗುತ್ತದೆ. ಯಾವುದು ಸ್ವತಂತ್ರರೂಪದಿಂದ ನಿಮ್ಮದೋ ಅದು ನಿಮ್ಮದು. ಆಹಾರದಂತೆ ಎಷ್ಟು ನೀವು ಜೀರ್ಣಮಾಡಿಕೊಂಡಿರುವಿರೋ ಅದೇ ಉಪಯೋಗಿಯಾಗುವುದು. ಒಬ್ಬ ಮನುಷ್ಯನ ವಿಚಾರಗಳನ್ನೇನೋ ನಾವು ಗ್ರಹಿಸಿದೆವು. ಆದರೆ ಅವುಗಳನ್ನು ಜೀರ್ಣಮಾಡಿಕೊಳ್ಳಲಿಲ್ಲ. ಬುದ್ಧಿಯಿಂದ ಅವುಗಳನ್ನು ಗ್ರಹಿಸಿದೆವು, ಆದರೆ ಅವುಗಳಿಗೆ ಹೃದಯದಲ್ಲಿ ಸ್ಥಾನವನ್ನು ಕೊಡಲಿಲ್ಲ. ಅವನ್ನು ಕಾರ್ಯಗತ ಮಾಡಲಿಲ್ಲ. ಅಂಥರೆ ಅದು ಒಂದು ಪ್ರಕಾರದ ಅಜೀರ್ಣ ರೋಗವೇ ಸರಿ. ಅದೊಂದು ಬುದ್ಧಿವಿಲಾಸ. ವಿಚಾರಗಳ ಅಪಚನವು ಆಹಾರದ ಅಪಚನಕ್ಕಿಂತ ಕೆಟ್ಟದು. ಆಹಾರದ ಅಪಚನಕ್ಕೆ ಔಷಧವಿದೆ. ಆದರೆ ವಿಚಾರಗಳ ಅಪಚನವು ಆತ್ಮವನ್ನೇ ಕೆಡಿಸುತ್ತದೆ. ನಾನು ನಿಮಗೆ ಸಹಾಯ ಮಾಡಬೇಕು, ಎಂಬುವುದೇನೋ ಸರಿಯೇ. ಯಾಕೆಂದರೆ ಯಾವ ಸಿದ್ಧಾಂತಗಳ ಪೂಜಾರಿ ನೀವಿರುವಿರೋ ಅವೇ ಸಿದ್ಧಾಂತಗಳ ಪೂಜಾರಿ ನಾನು ಇರುವೆನು. ನಾನು ೧೯೨೦ರಲ್ಲಿ ನಿಮಗೆ ಏನು ಹೇಳಿದ್ದೆನೋ ಅದರ ವಿರುದ್ಧವಾಗಿ ನಾನು ಈಗ ಏನಾದರೂ ಹೇಳಿದರೆ, ನಿಮಗೆ ನನ್ನ ಜೊತೆಗೆ ಜಗಳವಾಡುವ ಅಧಿಕಾರವಿದೆ. ನಾನು ವಿಚಾರಗಳನ್ನು ಸರಿಮಾಡಿರುವೆನೋ ಅಥವಾ ಕೆಡಿಸಿರುವೆನೋ ಇದನ್ನು ನೀವು ಸ್ವತಂತ್ರವಾಗಿ ಯೋಚಿಸಬೇಕು. ನಾನು ಪ್ರತಿ ದಿನ ವಿಕಾಸದ ಕಡೆಗೆ ಹೋಗುತ್ತಿದ್ದೇನೆ; ನನ್ನ ವಿಚಾರಗಳ ಪ್ರಯೋಗ ಪ್ರತಿ ನಿತ್ಯ ಬೆಳೆಯುತ್ತಿದೆ. ಎಂದು ನಾನು ನಿಮಗೆ ಹೇಳಿದರೆ, ಈ ವಿಕಾಸವು ಸರಿಯಾಗಿ ಆಗುತ್ತಿದೆಯೋ ಇಲ್ಲವೋ ಎಂಬುದನ್ನು ನೀವು ನೋಡಬೇಕು, ನೀವು ಸ್ವತಂತ್ರರೂಪದಲ್ಲಿ ವಿಚಾರ ಮಾಡದಿದ್ದರೆ ಇದೆಲ್ಲ ನೀವು ಮಾಡಲಾರಿರಿ. ನೀವು ನನ್ನ ಹೆಸರಿಗೆ ಹೀಗೆ ಅಂಟಿಕೊಂಡರೆ ಜಗತ್ತು ನಿಮ್ಮನ್ನು ಅಪಹಾಸ್ಯ ಮಾಡಬಹುದು. ಆದರೆ ಇನ್ನೊಂದು ಗಂಡಾಂತರವೂ ಇದೆ. ಅದು ಭಯಂಕರವಾಗಿದೆ. ಅದೇನೆಂದರೆ ನಿಮ್ಮ ಸಂಘ ಒಂದು ಸಂಪ್ರದಾಯವಾಗಿಬಿಡುವುದು. ನಾನು ಜೀವಿಸಿರುವಾಗಲೇ ಹೀಗಾಗಬಹುದಾದರೆ ನಾನು ಸತ್ತ ಮೇಲೆ ಏನಾಗಬಹುದು? ಯಾವುದೋ ಒಂದು ಕಠಿಣ ಸಮಸ್ಯೆಯನ್ನು ಎದುರಿಸುವಾಗ ನೀವು ಹೇಳಬಹುದು. "ನೋಡು, ಅವನು 'ಯಂಗ್ ಇಂಡಿಯಾ' ಅಥವಾ 'ಹರಿಜನ'ದಲ್ಲಿ ಏನು ಹೇಳಿದ್ದಾನೆ;" ನೀವು ನಿಮ್ಮೊಳಗಿನ ವಾದ ವಿವಾದದಲ್ಲಿ ಆಣೆಯನ್ನು ಇಡುತ್ತಾ ನನ್ನ ಲೇಖನಗಳ ಪ್ರಮಾಣವನ್ನು ಕೊಡದಿರಿ. ಇದಕ್ಕಿಂತ ನನ್ನ ಮೂಳೆಗಳ ಜೊತೆಗೇ ನನ್ನ ಲೇಖನಗಳೂ ಸುಟ್ಟು ಹೋಗುವುದು ಒಳ್ಳೆಯದು. ಇದನ್ನು ವಿನಯದಿಂದ ಹೇಳುತ್ತಾ ಇಲ್ಲ. ಯಾಕೆಂದರೆ ನಾನು ಇದನ್ನೂ ಹೇಳಿರುವೆ, ವೇದಗಳು ನಷ್ಟವಾದರೂ ಈಶಾವಾಸ್ಯ ಉಪನಿಷತ್ತಿನ ಕೇವಲ ಮೊದಲನೇ ಮಂತ್ರವಷ್ಟೇ ಉಳಿದರೂ ಜಗತ್ತಿನ ಹಾನಿಯೇನೂ ಆಗುವುದಿಲ್ಲ ಎಂದು. ಆದರೆ ಅದನ್ನೂ ನಾವು ತಿಳಿಯದೆ ಅದರಂತೆ ಕೆಲಸವನ್ನೂ ಮಾಡದಿದ್ದರೆ ಅದಾದರೂ ಯಾವ ಕೆಲಸಕ್ಕೆ ಬರುವುದು?

ನಾನು ಹೇಳಿದ್ದರ ಮತ್ತು ಬರೆದಿದ್ದರ ಉಪಯೋಗವಿಷ್ಟೇ. ಅದರಿಂದ ಸತ್ಯ ಮತ್ತು

ಅಹಿಂಸಾ ಸಿದ್ಧಾಂತಗಳನ್ನು ಅರಗಿಸಿಕೊಳ್ಳಲು ನಿಮಗೆ ಸಹಾಯ ಸಿಕ್ಕಿದೆ. ಆದ್ದರಿಂದ ನಾನು ಇವತ್ತು ನಿಮಗೆ ಹೇಳುತ್ತಿರುವುದರ ಮೇಲೆ ನೀವು ಬಹಳ ವಿಚಾರಮಾಡಬೇಕು.

ಸತ್ಯ ಮತ್ತು ಅಹಿಂಸೆಯ ಮೇಲೆ ನನ್ನ ಶ್ರದ್ಧೆಯು ಬೆಳೆಯುತ್ತಲಿದೆ. ಮತ್ತು ನಾನು ನನ್ನ ಜೀವನದಲ್ಲಿ ಅವುಗಳನ್ನು ಹೇಗೆ ಹೇಗೆ ಆಚರಣೆಯಲ್ಲಿ ತರುತ್ತಿರುವೆನೋ ಹಾಗೆ ಹಾಗೆ ನಾನೂ ಬೆಳೆಯುತ್ತಿರುವೆನು. ಅದರ ಜೊತೆಯಲ್ಲಿಯೇ ನನ್ನ ವಿಚಾರಗಳಲ್ಲಿ ಹೊಸತನವು ಬರುತ್ತಿದೆ. ಇದರ ಅರ್ಥ ನಾನು ಅವ್ಯವಸ್ಥಿತ, ನನ್ನ ಮೆದುಳು ಸ್ಥಿರವಾಗಿಲ್ಲ, ನನ್ನ ಬುದ್ಧಿಯು ಹೊಯ್ದಾಡುತ್ತದೆ ಎಂದಲ್ಲ. "ನಾನು ಮುದುಕನಾದರು ನನ್ನ ಬುದ್ಧಿಯು ಕ್ಷೀಣವಾಗಿಲ್ಲ" ಎಂದು ನಾನಂತೂ ಹೇಳುತ್ತೇನೆ. ವಿಚಾರ ಮಾಡದೇ ಏನೋ ಹೇಳಿಬಿಡುತ್ತೇನೆ ಎಂದಲ್ಲ. ನನ್ನ ಬುದ್ಧಿಯು ವಿಕಾಸವಾಗುತ್ತಲೇ ಇದೆ. ಸತ್ಯ ಮತ್ತು ಅಹಿಂಸೆಯ ವಿಷಯದಲ್ಲಿ ಪ್ರತಿದಿನ ಹೊಸ ಹೊಸ ಮಾತುಗಳು ಬುದ್ಧಿಯ ಎದುರಿಗೆ ಬರುತ್ತಿವೆ. ಅವುಗಳಲ್ಲಿ ಹೊಸ ಬೆಳಕನ್ನು ಕಾಣುತ್ತೇನೆ. ಪ್ರತಿ ದಿನ ಹೊಸ ಅರ್ಥವು ಕಾಣುತ್ತದೆ. ಆದ್ದರಿಂದಲೇ ಚರಖಾ ಸಂಘ, ಹರಿಜನ ಸೇವಕ ಸಂಘ, ಮತ್ತು ಗ್ರಾಮೋದ್ಯೋಗ ಸಂಘ ಮೊದಲಾದ ಸಂಸ್ಥೆಗಳೆದುರಿಗೆ ಹೊಸ ಹೊಸ ವಿಚಾರಗಳನ್ನು ಇಡುತ್ತಲೇ ಇದ್ದೇನೆ. ಇದರ ಅರ್ಥವೇನೆಂದರೆ ಆ ಸಂಸ್ಥೆಗಳೂ ಮತ್ತು ಅವುಗಳ ಸಂಚಾಲಕರೂ ಜೀವಂತವಾಗಿದ್ದಾರೆ, ಎಚ್ಚರವಾಗಿದ್ದಾರೆ. ಆ ಸಂಸ್ಥೆಗಳೂ ವೃಕ್ಷಗಳಂತೆ ಪ್ರತಿನಿತ್ಯ ಬದಲಾಗುತ್ತ ಹೋಗುವುವು, ಹೊಸ ಹೊಸ ರೂಪವನ್ನು ಹೊಂದುತ್ತಾ ಹೋಗುವವು, ಅವುಗಳ ಸ್ವಭಾವವೇ ಬೆಳೆಯುತ್ತಿರುವುದು ಮತ್ತು ಪ್ರಗತಿಶೀಲವಾಗಿ ಇರುವುದು. ಇಲ್ಲದಿದ್ದರೆ ಅವು ಬಿದ್ದು ಹೋಗುವವು. ನನಗಂತೂ ನಾನು ಬೀಳುತ್ತಿದ್ದೇನೆ ಎಂದೆನಿಸುವುದಿಲ್ಲ. ನೀವು ನನ್ನ ಜೊತೆಗೇ ವಿಕಾಸದ ಕಡೆ ಬೆಳೆಯಬೇಕು ಎಂದು ನಾನು ಬಯಸುತ್ತೇನೆ.

ನಾನು ಸತ್ತ ಮೇಲೆ ಏನಾಗಬಹುದು ಇದನ್ನು ನಾನು ತಿಳಿಯಬಯಸುವುದಿಲ್ಲ. ನಿಮ್ಮ ಸಂಘವು ವೃಕ್ಷದಂತೆ ಯಾವಾಗಲೂ ಬೆಳೆಯುತ್ತಲೇ ಇರಲೆಂಬುದಿಷ್ಟೇ ನನ್ನ ಇಚ್ಛೆ. ನೀವು ನನ್ನ ಪೂಜಾರಿಯಾಗದೆ ಆದರ್ಶದ ಪೂಜಾರಿಗಳು ಆದ ನನ್ನ ಹೆಸರಿನ ಮೋಹದಲ್ಲಿ ಬೀಳಬೇಡಿರಿ. ನಿಮ್ಮ ಪ್ರತ್ಯಕ್ಷ ಪ್ರವೃತ್ತಿಯನ್ನು ಸತ್ಯ ಮತ್ತು ಅಹಿಂಸೆಯಿಂದ ಅಳೆಯಿರಿ. ಇವುಗಳನ್ನು ನಿಮ್ಮ ಅಳತೆಯನ್ನಾಗಿ ಮಾಡಿದರೆ ನಾನು ಸತ್ತ ಮೇಲೆ ಕೂಡ ನಿರ್ಭಯದಿಂದ ಎಲ್ಲ ಪ್ರಶ್ನೆಗಳ ಮೇಲೆ ವಿಚಾರ ಮಾಡಬಲ್ಲಿರಿ. ಇಲ್ಲಿಗೆ ಬಂದವರೆಲ್ಲರೂ ಸಂಪೂರ್ಣ ಎಚ್ಚರಿಕೆಯನ್ನು ಕಾಪಾಡಿಕೊಳ್ಳಿರಿ. ನಿಮ್ಮೆದುರಿಗೆ, ಹೊಸದಾಗಿ ವಿಚಾರ ಮಾಡಬೇಕಾಗುವಂಥ ಪ್ರಶ್ನೆಗಳು ಬರಲಿವೆ. ಸತ್ಯದ ಬೆಳಕಿನಲ್ಲಿ ನೀವು ಅವುಗಳನ್ನು ಸರಿಯಾಗಿ ಬಿಡಿಸಬಲ್ಲಿರೆಂದು ನನಗೆ ಆಶೆಯಿದೆ.

ಗಾಂಧೀಜಿಯ ಭಾಷಣ ಮುಗಿದ ಮೇಲೆ ಅಧ್ಯಕ್ಷರಾದ ಕಿಶೋರಲಾಲ ಮಿಶ್ರ ಅವರು ಸಂಘದ ವರದಿಯ ಬಗ್ಗೆ ಹೇಳುತ್ತ, ಈಗಾಗಲೇ ಅದರ ಮುದ್ರಿತ ಪ್ರತಿಗಳು ನಿಮ್ಮ ಕೈ ಸೇರಿವೆ. ಅದನ್ನು ಮತ್ತೆ ಇಲ್ಲಿ ಓದುವ ಅವಶ್ಯಕತೆ ಇದೆಯೇ, ಅದು ನಿಮಗೆ

ಸಮ್ಮತವೇ ಎಂದು ಸದಸ್ಯರನ್ನು ಕೇಳಿದರು. ವರದಿ ತಮಗೆ ಒಪ್ಪಿಗೆ ಇದೆ, ಓದುವ ಅಗತ್ಯವಿಲ್ಲ ಎಂದು ಸದಸ್ಯರು ಹೇಳಿದರು. ವರದಿಯ ಸಾರಾಂಶ ಹೀಗಿದೆ:–

**ಸಂಘದ ವರದಿ :**

ಸಂಘದ ವರದಿ ಒಂದು ಲೆಕ್ಕಾಚಾರದ ಕಾಗದ ಇದ್ದಂತೆ ಇದೆ. ಎಷ್ಟೋ ಸ್ವಾರಸ್ಯದ ವಿವರಗಳು ಇವೆ. ಸಂಘದಲ್ಲಿ ಪೂರ್ಣ ಸಮಯದ ಒಟ್ಟು ೧೦೨ ಕೆಲಸಗಾರರು ಇದ್ದಾರೆ. ಇವರೇ ಸಂಘದ ಸಂಪತ್ತು. ಅವರಲ್ಲಿ ನಲವತ್ತು ಜನ ಹಳ್ಳಿಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ೨೦ ಜನ ಖಾದಿ ಕೆಲಸ, ೧೪ ಜನ ರಾಜಕಾರಣದಲ್ಲಿ, ೯ ಜನ ಹರಿಜನ ಸೇವೆ. ಮೂವರು ಸಂಘದ ಕಛೇರಿಯಲ್ಲಿ, ೫ ಜನ ರಾಷ್ಟ್ರೀಯ ಶಿಕ್ಷಣದ ಕ್ಷೇತ್ರದಲ್ಲಿ ಗ್ರಾಮೋದ್ಯೋಗದಲ್ಲಿ ಇಬ್ಬರು, ಚರ್ಮಾಲಯದಲ್ಲಿ ಒಬ್ಬರು, ಹಿಂದೀ ಪ್ರಚಾರದಲ್ಲಿ ಇಬ್ಬರು. ಶ್ರಮಜೀವಿಗಳ ಕಾರ್ಯದಲ್ಲಿ ಒಬ್ಬರು; ಇತರ ಕೆಲಸಗಳಲ್ಲಿ ೫ ಜನ ಪ್ರಾಂತೀಯ ಶಾಸನ ಸಭೆಗಳಿಗೆ ಚುನಾಯಿತರಾದುದರಿಂದ ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟಿದ್ದಾರೆ. ಒಬ್ಬರು ನೈತಿಕ ಪತನಕ್ಕಾಗಿ ಇನ್ನೊಬ್ಬರು ಅಹಿಂಸಾವ್ರತವನ್ನು ಮೀರಿ ನಡೆದುದಕ್ಕಾಗಿ. ಈ ಒಟ್ಟು ೧೨೩ ಜನರಲ್ಲಿ ೨೭ ಜನ ಮಾತ್ರ ಸಂಘದಿಂದ ಸಹಾಯಧನ ಪಡೆದು ಜೀವನ ನಿರ್ವಾಹ ಮಾಡುತ್ತಿದ್ದಾರೆ.

**ಅಧ್ಯಕ್ಷರ ಭಾಷಣ :**

ಸಂಘದ ಅಧ್ಯಕ್ಷರು ಕಿಶೋರಲಾಲ ಮಶ್ರೂವಾಲ. ಸಂಘ ಒಂದು ನೀತಿವಂತರ ಸಂಘಟನೆ. ಅದರ ಅಧ್ಯಕ್ಷರಾಗಲು ಕಿಶೋರಲಾಲಭಾಯಿ ಬಹಳ ತಕ್ಕವರು. ಆಚಾರವಂತರ ಹಾಗೆ ಗಂಟುಮೋರೆ ಇರುವ ವ್ಯಕ್ತಿ ಅಲ್ಲ ಕಿಶೋರ ಲಾಲ್‌ಭಾಯಿ. ಭಗವಂತನನ್ನು ಸಾಕ್ಷಿಯಾಗಿಟ್ಟುಕೊಂಡು ತಮ್ಮ ನಿತ್ಯಜೀವನವನ್ನು ನಡೆಸುವ ವ್ಯಕ್ತಿ. ಗಾಂಧೀಜಿಯ ಮಾರ್ಗದರ್ಶನದಂತೆ ಎಲ್ಲ ಸಮಸ್ಯೆಗಳನ್ನೂ ಪ್ರಸ್ತಾಪಮಾಡಿದ್ದರು. ಅನೇಕ ಮುಖ್ಯ ಸಮಸ್ಯೆಗಳನ್ನು ಎತ್ತಿ ಅನೇಕ ರಚನಾತ್ಮಕ ಸಲಹೆಗಳನ್ನು ನೀಡಿದ್ದರು.

ರಾಜಾಜಿಯಂಥ ಮನುಷ್ಯರು ಪ್ರಾಂತೀಯ ಸಭೆಗಳಿಗೆ ಚುನಾಯಿತರಾದುದರಿಂದ ಗಾಂಧೀ ಸೇವಾ ಸಂಘದ ಸದಸ್ಯತ್ವವನ್ನು ಬಿಟ್ಟುಕೊಡಬೇಕಾಯಿತು ಎಂಬ ಮಾತು ಅವರಿಗೆ ಖೇದಕರವಾಗಿತ್ತು. ಬೇರೆ ಯಾರೂ ಸಿಗದ್ದರಿಂದ ಪೂರ್ಣ ಸಮಯದ ರಚನಾತ್ಮಕ ಕಾರ್ಯಕರ್ತರನ್ನೇ ಶಾಸನ ಸಭೆಗೆ ನಿಲ್ಲಿಸಬೇಕಾಗಿ ಬರುತ್ತಿರುವುದು ಅವರಿಗೆ ದುಃಖ ಉಂಟುಮಾಡಿತ್ತು. ತಮ್ಮ ಪೂರ್ಣ ಸಮಯವನ್ನು ರಚನಾತ್ಮಕ ಕಾರ್ಯಕ್ಕೆ ನೀಡಲು ಶಪಥಮಾಡಿದವರನ್ನು ಚುನಾವಣೆಗಳಿಗೆ ಎಳೆಯುವುದು ತಪ್ಪು ಎಂದರು. ಅವರು ತಮ್ಮ ಸದಸ್ಯತ್ವವನ್ನಾದರೂ ಬಿಡಬೇಕು ಅಥವಾ ಇವರಿಗಾಗಿ ಒಂದು ಹೊಸ ವರ್ಗ ವನ್ನಾದರೂ ಮಾಡಬೇಕು.

**ಏಕಾದಶ ವ್ರತ :**

ಏಕಾದಶ ವ್ರತಗಳನ್ನು ಹಿಡಿದುದರಿಂದ ತಮ್ಮ ಬದುಕನ್ನು ನಿರಾನಂದಮಯ

ಯಾಂತ್ರಿಕ ಆಗಿ ಮಾಡಿಕೊಂಡು ಜೀವನದಲ್ಲಿ ಏನೋ ಬೇಸರ ಎನ್ನುವ ಜನರ ಬಗ್ಗೆ ಸ್ವಲ್ಪ ಟೀಕೆ ಮಾಡಿದ್ದರು. ಅಧ್ಯಕ್ಷ ಭಾಷಣ ಹೀಗಿತ್ತು : ವ್ರತಗಳಿಂದ ನಮಗೆ ಶಕ್ತಿ ಬರಬೇಕು, ಸ್ಫೂರ್ತಿ ಸಿಗಬೇಕು, ಜೀವನದಲ್ಲಿ ಸಂತೋಷ ಸಿಗಲು ಅನುಕೂಲವಾಗಬೇಕು. ನಿರ್ಭಯವಾಗಿ ಬದುಕಿನ ಸಮಸ್ಯೆಗಳನ್ನು ಎದರಿಸಲು ನಮಗೆ ಶಕ್ತಿ ಬರಬೇಕು. ಹಳ್ಳಿಗಳಲ್ಲಿ ಕೆಲಸ ಮಾಡುವವರು ಹಳ್ಳಿಗರ ನಿಷ್ಕ್ರಿಯೆಯನ್ನು, ಸ್ವಾರ್ಥವನ್ನು ಬಡತನದಲ್ಲಿಯೂ ಅವರಿಗಿರುವ ತೃಪ್ತಿಯನ್ನು, ಅವರ ಕೊಳೆಯ ಹೊಲಸನ್ನು, ದುಃಖವನ್ನು ನೀಗಲು ನೆರವಾಗಬೇಕು ಹಳ್ಳಿಯವರಿಗೆ ಎಂದರು. ಹಳ್ಳಿಯ ಬದುಕಿಗೆ ಮೂಲಾಧಾರ ನೈರ್ಮಲ್ಯ ಆರೋಗ್ಯ. ಭಂಗಿ ಕೆಲಸ ಗೊತ್ತಿರದವನು ಗ್ರಾಮ ಸೇವಕ ಆಗಲಾರ. ಇದಕ್ಕೆ ತೀರಾ ನಿಕಟವಾದ ಇನ್ನೊಂದು ಕೆಲಸ ರಸ್ತೆಗಳ ಶುಚಿ, ರಸ್ತೆಗಳ ರಿಪೇರಿ, ನಿರ್ಮಲವಾದ ಸಂಡಾಸುಗಳ ರಚನೆ, ಒಳ್ಳೆಯ ಬಾವಿ, ಆಟದ ಬಯಲು ಇತ್ಯಾದಿಗಳ ನಿರ್ಮಾಣ. ಕೆಲಸಗಾರರಿಗೆ ಈ ಕೆಲಸಗಳಲ್ಲಿ ಅಭಿರುಚಿ ಇರಬೇಕು. ತಾವಿರುವ ಹಳ್ಳಿಯಲ್ಲಿ ಇದನ್ನು ಮಾಡಿದರೆ ಸಾಲದು. ನಮ್ಮ ನೆರೆಹೊರೆಯ ಹಳ್ಳಿಗಳಲ್ಲೂ ಈ ಕೆಲಸ ಹರಡುವಂತೆ ಮಾಡಬೇಕು. ಸದಸ್ಯರು ಪ್ರತಿಯೊಬ್ಬರು ತಮ್ಮ ಕೆಲಸದ ವಿವರಗಳನ್ನು ವರದಿ ಮಾಡಬೇಕು.

ಸಾಲದ ಪ್ರಶ್ನೆ ಬಗ್ಗೆ ಅಧ್ಯಕ್ಷರಾದ ಮಶ್ರುವಾಲಾ ಅವರ ಒಂದು ಸಲಹೆ. ಈ ಎಲ್ಲಾ ಆಪತ್ತಿಗೂ ಕಾರಣ ಈ ಕಾಟದ ಹಣದ ಪದ್ಧತಿ. ಹಳ್ಳಿಯ ಬಡ ರೈತ ಕಂದಾಯವನ್ನು ಜಮೀನುದಾರನಿಗೆ ಮುಟ್ಟಿಸಬೇಕಾದುದ್ದನ್ನೂ, ಸಾಹುಕಾರನ ಬಾಕಿಯನ್ನು ನಗದಾಗಿ ಕೊಟ್ಟು ತನ್ನ ನಿತ್ಯದ ಅಗತ್ಯಗಳನ್ನು ಕೊಳ್ಳಬೇಕು. ಹೀಗಾಗಿ ನಗದು ಹಣ ಯಾರ ಬಳಿ ಇರುತ್ತದೆಯೋ ಅವರ ಗುಲಾಮ ಆಗಬೇಕು. ಅವನು ಉತ್ಪತ್ತಿಮಾಡಿದ ಧಾನ್ಯವನ್ನೂ ವಸ್ತುವನ್ನೂ ಅವರಿಗೇ ಕೊಡುವಂತಾಗದೆ, ಇವರ ಹಿಡಿತ ಹೇಗೆ ತಪ್ಪಿತ್ತು. ಸ್ಥಳೀಯ ಉತ್ಪಾದನೆಯನ್ನೇ ಚಲಾವಣೆಯ ಮಾಧ್ಯಮವಾಗಿ ಬಳಸುವಂತೆ ಮಾಡಲು ಗ್ರಾಮ ಸೇವಕರು ಪ್ರಯತ್ನ ಮಾಡಬೇಕು.

**ಗೋ ರಕ್ಷಣೆ :**

ಸ್ವತಃ ಒಂದು ಹಸುವನ್ನು ಕಾಪಾಡದೆ ಗೋ ರಕ್ಷಣೆಯ ಮಾತನ್ನು ಆಡುವುದು ವ್ಯರ್ಥ ಎಂದರು. ಗೋ ರಕ್ಷಣೆಯ ಮಹತ್ವವನ್ನು, ಬದುಕಿದ್ದಾಗಲೂ ಸತ್ತಾಗಲೂ ಆಕಳು ಎಷ್ಟು ಮುಖ್ಯ ಎಂಬುದನ್ನು ಹಳ್ಳಿಗರಿಗೆ ತಿಳಿಸಿಕೊಡಬೇಕು. ಗೋ ರಕ್ಷಣೆಯ ಸಂಸ್ಥೆಯ ಸದಸ್ಯರು ೧೨ ಸಾವಿರ ಅಡಿ ನೂಲನ್ನು ಶುಲ್ಕವಾಗಿ ಕೊಡಬೇಕು. ಈ ನೂಲು ಏಕೆ? 'ಮತ್ತೇನಾದರೂ ಆಗಬಾರದೆ' ಎಂದು ಕೆಲ ಸದಸ್ಯರು ಪ್ರಶ್ನೆ ಹಾಕಿದರು. ಪ್ರತಿಯೊಬ್ಬರೂ ೧೨ ಸೇರು ಹತ್ತಿಕಾಳನ್ನು ಏಕೆ ಕೊಡಬಾರದು?

ಸಂಯಮ ಇಲ್ಲದ ಬಾಳನ್ನು ಬದುಕುವವರನ್ನು ಕಟುವಾಗಿ ಟೀಕಿಸಿದರು: ಅನೇಕರು ನಿಯಮಿತವಾಗಿ ನೂಲುತ್ತಿರಲಿಲ್ಲ. ಬದುಕಿನಲ್ಲಿ ಒಂದು ನಿಯಮ ಇದ್ದರೆ, ಇದರಿಂದ ದುಃಖ ಆಗುದಿಲ್ಲ. ಯಾವುದಾದರೂ ಒಂದು ಕುಟುಂಬದಲ್ಲಿ ಇಡೀ ವರ್ಷದ ನೂಲನ್ನು

ಒಂದೆರಡು ತಿಂಗಳಲ್ಲಿ ತೆಗೆದರೆ ಆ ಮೇಲಿನ ತಿಂಗಳುಗಳಲ್ಲಿ ಆ ಮನೆಯಲ್ಲಿ ಹಂಜಿ ಸಿಗದಿದ್ದರೂ ಚಿಂತೆಯಿಲ್ಲ, ಗಾಂಧೀಜಿಗೂ ಮನಸ್ಸಂತೋಷವಾಗಿ ಅವರು ಪ್ರಶಂಸಿಸುತ್ತಿದ್ದರು. ಆದರೆ ನಿಜವಾಗಿರುವ ತೊಂದರೆ ನಿಗ್ರಹ ಇಲ್ಲದ್ದು, ಬದುಕಿನಲ್ಲಿ ನಿಯಮ ಇಲ್ಲದ್ದು.

**ಸರ್ವಧರ್ಮ ಸಮಭಾವ :**

ಹಿಂದೂ ಮುಸ್ಲಿಂ ಘರ್ಷಣೆ ಬಗ್ಗೆ ಅಧ್ಯಕ್ಷರು ತಮ್ಮ ದುಃಖವನ್ನು ತೋಡಿಕೊಂಡರು. ಕೆಲವರು ಜವಾಬ್ದಾರಿ ಮನುಷ್ಯರು ಸೈನ್ಯವನ್ನು ಹಿಂತೆಗೆದುಕೊಳ್ಳದಂತೆ ಸರ್ಕಾರವನ್ನು ವಿನಂತಿಸಿಕೊಂಡಿದ್ದು ಅವರಿಗೆ ಹಿಡಿಸಲಿಲ್ಲ. ಅಹಿಂಸೆಯಿಂದಲೇ ದೊಂಬಿಗಳನ್ನು ಅಡಗಿಸಲು ಯತ್ನಿಸುತ್ತಾ ಜೀವ ತೊರೆಯಬೇಕಾಗಿ ಬಂದರೆ ಅದಕ್ಕೂ ಸಿದ್ಧರಾಗಬೇಕು. ಅಹಿಂಸೆಯಿಂದ ದೊಂಬಿಗಳನ್ನು ತಡೆಗಟ್ಟಲು ಪ್ರಯತ್ನ ಮಾಡದಿದ್ದರೆ, ಅಂತಹ ಪ್ರಯತ್ನದಿಂದ ಯಾವ ಪ್ರಯೋಜನವೂ ಇಲ್ಲ. ಸರ್ವಧರ್ಮ ಸಮಭಾವನೆ ಇರಬೇಕು. ಎಂದರೆ ಗೊತ್ತು ಗುರಿ ಇಲ್ಲದೆ ಇತರ ಧರ್ಮಗಳನ್ನು ಹೊಗಳುವುದು ಅಲ್ಲ. ಎಲ್ಲಾ ಧರ್ಮಗಳ ಬಗ್ಗೆಯೂ ವಿಮರ್ಶಾತ್ಮಕ ದೃಷ್ಟಿಯಿಂದ ನೋಡುವ ಕಣ್ಣು ಬೇಕು. ತನ್ನ ಧರ್ಮದ ಬಗ್ಗೆಯೂ ಈ ದೃಷ್ಟಿ ಇರಬೇಕು. ಎಲ್ಲಾ ಧರ್ಮಗಳೂ ಎಲ್ಲಾ ಮತಗಳೂ ಸಮಾನವಾಗಿ ಅಪೂರ್ಣ. ಯಾವ ಧರ್ಮವೂ ನಿಸ್ಸಂದೇಹವಾಗಿ ಕೊಲ್ಲುವುದನ್ನು ಸಮರ್ಥಿಸುತ್ತಿಲ್ಲ. ಕೊಲ್ಲಬೇಡ ಎನ್ನುತ್ತದೆ. ಮನುಷ್ಯನ ಕೊಲೆ ಮಾಡುವುದು ಎಲ್ಲಾ ಧರ್ಮಗಳಲ್ಲಿ ಪಾಪ ಎಂದೇ ಹೇಳಿದೆ. ಪ್ರತಿಯೊಂದು ಧರ್ಮದಲ್ಲಿಯೂ ಮತದಲ್ಲಿಯೂ ಜೀವನದ ಬಗ್ಗೆ ಒಂದು ಗೌರವ. ಜೀವನದಲ್ಲಿ ವಿಭೂತಿ ದರ್ಶನ ಇರದೇ ಇದ್ದರೆ ಅವಕ್ಕೆ ಆಪತ್ತು ಖಂಡಿತ. ಕಟ್ಟಕಡೆಯಲ್ಲಿ ಧರ್ಮ ಜೀವನದ ಅಂಗ ಆಗಬೇಕು. ನಾವು ಮಾಡಿದ ಪ್ರತಿಯೊಂದು ಕರ್ಮವೂ ಪ್ರಾರ್ಥನೆಯಾಗಬೇಕು, ಒಂದು ಯಜ್ಞ ಆಗಬೇಕು ಎಂದು ಹೇಳಿದರು. ತ್ಯಾಗದ ಮೂಲಕ ಭೋಗಿಸಬೇಕು ಎಂಬುದು ಜೀವನದ ನಿಯಮ. ಪ್ರೇಮವಿಲ್ಲದೆ ಅರ್ಥ ತ್ಯಾಗ ಅಸಾಧ್ಯ ಎಂದು ಮಾತು ಮುಗಿಸಿದರು. ಮಶ್ರುವಾಲ ಭಾಷಣದ ಸಾರ ಅಲ್ಲಿಗೆ ಮುಗಿಯಿತು. ಅಧ್ಯಕ್ಷರ ಭಾಷಣವೂ ಅಂದು ಸಾಯಂಕಾಲ ೫ ಗಂಟೆಯವರೆಗೂ ಮುಗಿದಿರಲಿಲ್ಲ. ಆದ್ದರಿಂದ ರಾತ್ರಿ ಊಟ ಮತ್ತು ಪ್ರಾರ್ಥನೆಯ ತರುವಾಯ ಮತ್ತೆ ೮ರಿಂದ ೯ರವರೆಗೆ ಸಭೆ ಸೇರಿ ಚರ್ಚೆ ನಡೆಸಿತು. ಈ ಸಭೆಗೆ ಖಾನ್‌ಅಬ್ದುಲ್‌ಗಫಾರ್‌ಖಾನರು ಉಪಸ್ಥಿತರಿದ್ದರು.

**ಶಾಸನ ಸಭೆಯಲ್ಲಿ ಗಾಂಧೀ ಸೇವಾ ಸಂಘ ಏನು ಮಾಡಬೇಕು :**

ಅಧ್ಯಕ್ಷರು ಎತ್ತಿದ ಪ್ರಶ್ನೆ ಒಂದು ಗಂಭೀರ ಚರ್ಚೆಗೆ ಅವಕಾಶ ಮಾಡಿಕೊಟ್ಟಿತು. ಅಭಿಪ್ರಾಯ ಭೇದ ಬಹಳ ತೀವ್ರವಾಗಿತ್ತು. ಸರದಾರ ವಲ್ಲಭಬಾಯಿ, ಸರ್ವಶ್ರೀ ದಾಸ್ತಾನೆ, ದಿವಾಕರ್ ಮುಂತಾದವರು ಸದಸ್ಯರಿಗೆ ಶಾಸನ ಸಭೆಗೆ ಹೋಗಲು ಅನುಮತಿ ನೀಡಬೇಕು ಎಂದರು. ಬಾಬು ರಾಜೇಂದ್ರ ಪ್ರಸಾದರು, ಶೇಠ್‌ಜಮುನಾಲಾಲರು, ಕಿಶೋರಲಾಲಬಾಯಿ ಮತ್ತು ಸ್ವಾಮಿ ಆನಂದರು ತದ್ವಿರುದ್ಧವಾಗಿ ಹೇಳಿದರು. ದೇಶಪಾಂಡೆ ಗಂಗಾಧರ

ರಾಯರು ಕಾಕಾಸಾಹೇಬ ಕಾಲೇಲ್ಕರರೂ ಎರಡನೇ ಗುಂಪಿಗೆ ಜೊತೆಗಿದ್ದರೂ ಗಾಂಧೀಜಿ ಮಾರ್ಗದರ್ಶನದಂತೆ ನಡೆಯುತ್ತೇವೆ ಎಂದರು. ನಾನಾ ಮುಖಗಳಿಂದ ಪ್ರಶ್ನೆಯನ್ನು ಪರಿಶೀಲಿಸಲಾಯಿತು. ರಚನಾತ್ಮಕ ಕಾರ್ಯಕ್ರಮವನ್ನು ವ್ರತವಾಗಿ ಹಿಡಿದ ಕೆಲಸಗಾರರು ಶಾಸನ ಸಭೆಗೆ ಹೋಗಬಹುದೇ? ಚುನಾವಣೆಯ ಪ್ರಚಾರ ಒಂದು ಬಗೆಯಲ್ಲಿ ಅಹಿಂಸೆಯ ಪರೀಕ್ಷೆ ಎನ್ನುತ್ತ ಶೇಠ್‌ಜಮುನಾಲಾಲರು – ನಮ್ಮ ಚುನಾವಣೆಯ ಪ್ರಚಾರದಲ್ಲಿ ಅಹಿಂಸೆ, ಸತ್ಯಗಳನ್ನು ಕಟ್ಟುನಿಟ್ಟಾಗಿ, ಪ್ರಾಮಾಣಿಕವಾಗಿ ಪಾಲಿಸಲು ಸಾಧ್ಯ ಇಲ್ಲ ಎಂದರು. ಅಲ್ಲದೇ ಗಾಂಧೀ ಸೇವಾ ಸಂಘದ ಸದಸ್ಯರು ಶಾಸನ ಸಭೆಗೆ ಹೋಗಿ ಅಲ್ಲಿ ರಾಜಭಕ್ತಿಯ ಪ್ರತಿಜ್ಞೆಯನ್ನು ಮಾಡಬಹುದೇ? ಈ ಸಂಘ ಹುಟ್ಟಿದ್ದು ಕಾಂಗ್ರೆಸ್ಸಿನ ಅಪರಿವರ್ತನವಾದಿಗಳ ಕಾರ್ಯಕ್ರಮದ ಮೂಲಕ. ಈಗ ಇದರ ಸದಸ್ಯರೇ ಶಾಸನಸಭೆಗಳಿಗೆ ಹೋಗತೊಡಗಿದರೆ? ಶಾಸನ ಸಭೆಗಳಿಗೆ ಹೋಗಿ ಅಲ್ಲಿ ಸರ್ಕಾರವನ್ನು ಭಂಗಗೊಳಿಸುತ್ತೇನೆ ಎನ್ನುವುದು ಸತ್ಯ-ಅಹಿಂಸೆಗಳನ್ನು ಮರೆಮಾಚಿದಂತೆ ಅಲ್ಲವೇ? ಪಾನನಿರೋಧಿಗಳು ಹೆಂಡದ ಅಂಗಡಿಗೆ ಹೋಗಬಹುದೇ? ಶ್ರೀಮತಿ ಪ್ರೇಮಾಬೆನ್ ಕಂಟಕ್ ಬಹಳ ಒರಟು ಒರಟಾಗಿ ಹೇಳಿದಳು–ಸತ್ಯ, ಅಹಿಂಸೆ ಸರಿ, ಆದರೆ ರಾಜಕೀಯವನ್ನು ಬಿಟ್ಟು ಆ ಮಾತನ್ನು ಆಡಿದರೆ ಹಳ್ಳಿಗರಿಗೆ ಆಕರ್ಷಣೆ ಇಲ್ಲ.

ಇಲ್ಲಿಗೆ ಮೊದಲ ದಿನದ ರಾತ್ರಿಯ ಸಭೆ ಮುಗಿಯಿತು.

## ಎರಡನೇ ದಿನ ೧೭-೪-೧೯೩೭

ಬೆಳಿಗ್ಗೆ ೪-೩೦ಕ್ಕೆ ಏಳುವುದು. ೫ ಗಂಟೆಗೆ ಪ್ರಾರ್ಥನೆ. ೬ರಿಂದ ೯ರವರೆಗೆ ಶರೀರ ಶ್ರಮ. ಇದೇ ಸಮಯಕ್ಕೆ ಪೂಜ್ಯ ಬಾಪೂಜಿ ಹೊಸ ಬಾವಿಯ ಗುದ್ದಲಿ ಪೂಜೆ ಮಾಡಿದರು. ಮಧ್ಯಾಹ್ನ ೧೨-೩೦ರಿಂದ ೧ರವರೆಗೆ ಸೂತ್ರಯಜ್ಞ. ೧-೧೫ಕ್ಕೆ ಅಧಿವೇಶನ ಪ್ರಾರಂಭವಾಗಿ ಮುನ್ನಾದಿನ ಚರ್ಚೆ ಮುಂದುವರಿಯಿತು. ಆಗ ಚರ್ಚೆಯಲ್ಲಿ ಭಾಗವಹಿಸಿದವರೆಂದರೆ, ಸರ್ವಶ್ರೀ ಗೋಪಬಾಬು, ದಾಸ್ತನೇಜಿ, ಸ್ವಾಮಿಆನಂದ್, ಆರ್.ಆರ್.ದಿವಾಕರ್‌ಜಿ, ಬ್ರಹ್ಮಚಾರಿ, ನಾರಾಯಣನ್, ಆಚಾರ್ಯಭಾಗವತ, ಗಂಗಾಧರರಾವ, ದೇಶಪಾಂಡೆಜಿ, ಮಹದೇವಪ್ಪ ಮತ್ತು ಪೋತ್ನೀಸ.

ಎಲ್ಲರ ಮಾತುಗಳನ್ನು ಕೇಳಿದ ಮೇಲೆ ಗಾಂಧೀಜಿ ಮಾತನಾಡಿದರು :

**ಗಾಂಧೀಜಿಯ ಎರಡನೇ ದಿನದ ಭಾಷಣ:**

"ಬಂಧು ಭಗಿನಿಯರೇ, ಮೊದಲಿಗೆ ಇವತ್ತಿನ ವಿಷಯಕ್ಕೆ ಸಂಬಂಧಿಸಿದಲ್ಲದಂಥ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಡಾ॥ ಬಟಾರಾ ಇಲ್ಲಿ ಬಂದಿರುವರು. ಇಲ್ಲಿ ಸ್ವಚ್ಛತೆಯನ್ನು ಸರಿಯಾಗಿ ಇಡಲು ಸ್ವಲ್ಪ ಸಹಾಯಮಾಡಬೇಕೆಂದು ಅವರಿಗೆ ಹೇಳಲಾಗಿತ್ತು. ಅವರು ನನಗೆ ಕೆಲವು ಮಾತುಗಳನ್ನು ಹೇಳಿದ್ದಾರೆ. ಅವನ್ನು ನಿಮಗೆ ಹೇಳಬಯಸುತ್ತೇನೆ.

ಮೊದಲನೇ ಮಾತೆಂದರೆ, ಇಲ್ಲಿ ಮಣ್ಣಿಲ್ಲ ಮರಳಿದೆ. ಸ್ವಚ್ಛತೆಗೋಸ್ಕರ ಸ್ವಲ್ಪ ಅಂಶದಲ್ಲಿ ಲವಣಸಾರ (ಅಲ್ಕಲಿ) ಇರಬೇಕು. ಮರಳಿನಲ್ಲಿ ಲವಣಸಾರ (ಅಲ್ಕಲಿ) ಇರುವುದಿಲ್ಲ. ಅದು ಮಣ್ಣಿನಲ್ಲಿ ಸಿಗುತ್ತದೆ. ಆದ್ದರಿಂದ ಮಣ್ಣೇ ನಮ್ಮ ಸಾಬೂನು. ಮಣ್ಣಿನಿಂದ ಕೈ ಎಷ್ಟು ಸ್ವಚ್ಛ ಆಗುತ್ತದೆಯೋ ಅಷ್ಟು ಮರಳಿನಿಂದ ಆಗುವುದಿಲ್ಲ. ಆದ್ದರಿಂದ ಇದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಕಕ್ಕಸದ ಮನೆಗಳ ಹತ್ತಿರ ಮಣ್ಣಿನ ರಾಶಿಯನ್ನಾದರೂ ಹಾಕಬೇಕು. ಇಲ್ಲವೇ ಸದಸ್ಯರು ಸಾಬೂನನ್ನಾದರೂ ಉಪಯೋಗಿಸಬೇಕು.

ಎರಡನೇ ಮಾತೆಂದರೆ, ಕೆಲವರು ತಮ್ಮ ಎಂಜಲ ಪಾತ್ರೆಗಳನ್ನು, ಕುಡಿಯುವ ಬಟ್ಟಲುಗಳನ್ನೂ ನೀರು ತುಂಬಿದ ದೊಡ್ಡ ಪಾತ್ರೆಯಲ್ಲಿ ಅದ್ದುತ್ತಾರೆ. ಇದು ಆರೋಗ್ಯ ಮತ್ತು ಧರ್ಮದ ದೃಷ್ಟಿಯಿಂದ ತುಂಬಾ ಕೆಟ್ಟದ್ದು.

ಮೂರನೇ ಮಾತೆಂದರೆ, ಬಡಿಸುವವರು ದ್ರವ (ತರಲ) ಪದಾರ್ಥಗಳನ್ನು ಬಡಿಸು ವಾಗ ಸೌಟು ಉಪಯೋಗಿಸದೆ ಕೈಯಿಂದ ಬಡಿಸುತ್ತಿರುವುದು ಕಂಡುಬಂದಿದೆ.

ಗಂಗಾಧರರಾಯರು : ಇದನ್ನು ಸರಿಮಾಡಲಾಗಿದೆ ಎಂದು ಹೇಳಿದರು.

ಬಾಪು : ಹಾಗಾದರೆ ಸರಿ. ದ್ರವ ಪದಾರ್ಥಗಳನ್ನು ಯಾವಾಗಲೂ ಚಮಚೆಯಿಂದಾಗಲೀ, ಸೌಟಿನಿಂದಾಗಲೀ ಬಡಿಸಬೇಕು. ಸತ್ಯದ ಪೂಜಾರಿಗಳು ಸಣ್ಣ ಸಣ್ಣ ಮಾತುಗಳ ಕಡೆಗೆ ಕೂಡ ಗಮನವನ್ನು ಕೊಡಬೇಕು. ಹಾಗೆ ಮಾಡದಿದ್ದರೆ ಅದೊಂದು ಸೋಮಾರಿತನ. ಸೋಮಾರಿತನವು ಒಂದು ಪ್ರಕಾರದ ಹಿಂಸೆಯೇ.

ಇನ್ನು ಪ್ರಸ್ತುತ ವಿಷಯವನ್ನು ತೆಗೆದುಕೊಳ್ಳುತ್ತೇನೆ. ಈಗ ಏನು ಚರ್ಚೆಯಾಯಿತೋ ಅದನ್ನು ಬಯಸುತ್ತಿದ್ದೆ. ಯಾಕೆಂದರೆ, ನನ್ನ ಬುದ್ಧಿಯು ಗೊಂದಲದಲ್ಲಿ ಬಿದ್ದಿದೆ. ಈಗಲೂ ಅದು ಪೂರ್ಣ ಸಂಶಯರಹಿತವಾಗಿಲ್ಲ. ಗಂಗಾಧರರಾವ ಮತ್ತು ಆಚಾರ್ಯಭಾಗವತ ಇವರು ಏನು ಹೇಳಿದರೂ ಅದನ್ನು ನಾನು ಸಂಪೂರ್ಣ ಒಪ್ಪುವುದಿಲ್ಲ. ಪ್ರತಿಯೊಂದು ವಿಷಯದಲ್ಲಿ ಪ್ರತಿಯೊಬ್ಬ ಮನುಷ್ಯನು ತನ್ನ ಬುದ್ಧಿಯನ್ನು ನಡೆಸಲಾರನು, ಎಂಬುದು ಸರಿಯೇ. ಎಲ್ಲಿ ನಮ್ಮ ಬುದ್ಧಿಯು ನಡೆಯಲಾರದೋ ಅಲ್ಲಿ ಹಿರಿಯರನ್ನು ಅಥವಾ ತಜ್ಞರನ್ನು ಕೇಳಬಹುದು ಮತ್ತು ಕೇಳುವುದು ಅವಶ್ಯ. ಆದರೆ ಇಲ್ಲಿ ಅಂಥ ಮಾತೇನು ಇಲ್ಲ. ವಿಧಾನಸಭೆಗಳಲ್ಲಿ ಹೋಗಬೇಕೇ ಬೇಡವೇ ಈ ವಿಷಯದಲ್ಲಿ ನಿಮ್ಮ ಮತವನ್ನು ನಾನು ಸ್ವಯಂ ತಿಳಿಯಬಸುತ್ತಿದ್ದೆನು. ಇದು ಕಾಲತ್ರಯದಲ್ಲಿಯೂ ಒಂದೇ ಸಮನಾಗಿರಬೇಕೆಂಬ ಮಾತೇನಲ್ಲ. ವಿಧಾನ ಸಭೆಗಳ ಪ್ರವೇಶದ ವಿಷಯದಲ್ಲಿ ಇದ್ದ ನನ್ನ ವಿರೋಧವು ಕಡಿಮೆಯಾಗಿದೆ ಎಂದು ನಾನು ಒಪ್ಪುತ್ತೇನೆ. ಎಲ್ಲಿ ತತ್ವದ ಹಾನಿ ಯಾಗುವುದಿಲ್ಲವೋ ಅಲ್ಲಿ ಜನರು ಏನು ಬಯಸುತ್ತಾರೆ ಎಂಬುದನ್ನು ನಾನು ನೋಡು ತ್ತೇನೆ. ನಾನು ಸತ್ಯದ ಪೂಜಾರಿಯೂ ಇದ್ದೇನೆ ಮತ್ತು ಜನತೆಯ ಸೇವಕನೂ ಇದ್ದೇನೆ. ನನ್ನ ಮೇಲೆ ಗಾಳಿ ನೀರಿನ ಪರಿಣಾಮ ಆಗುತ್ತದೆ. ಯಾವ ಪ್ರಕಾರದ ವಾತಾವರಣ

ಇರುತ್ತದೆಯೋ ಅದಕ್ಕೆ ಅನುಸರಿಸಿ, ಆ ಸಮಯದಲ್ಲಿ ನನ್ನ ವಿಚಾರಗಳನ್ನು ಕೊಡುತ್ತೇನೆ. ಪಾಟನಾದಲ್ಲಿ ನಾನು ಹೇಳಿದ್ದು ಆ ಸಮಯಕ್ಕೆ ಸರಿಯಾಗೇ ಇತ್ತು. ಪೈಜಾಪುರದಲ್ಲಿ ಹೇಳಿದ್ದು ಆ ಸಮಯುದ ವಾತಾವರಣದ ದೃಷ್ಟಿಯಿಂದ ಅದೇ ಸರಿಯಾಗಿತ್ತು. ವಾತಾವರಣಕ್ಕನುಸರಿಸಿ ನಡೆಯಬೇಕಾದ ಸಾಮಗ್ರಿ ನನ್ನ ಹತ್ತಿರ ಇರುತ್ತದೆ. ಮಳೆ ಬಂದರೆ ಕೊಡೆ ಹಿಡಿಯುವುದು, ಚಳಿಯಾದರೆ ಬೆಚ್ಚಗಿನ ಬಟ್ಟೆ ಹಾಕಿಕೊಳ್ಳುವುದು ಮತ್ತು ಬೇಸಿಗೆಯಲ್ಲಿ ತೆಳುವಾದ ಮಲ್‌ಮಲ್ ಹಾಕಿಕೊಳ್ಳುವುದು. ಗಾಳಿಗನುಸರಿಸಿ ಬಟ್ಟೆಗಳನ್ನು ಹಾಕಿಕೊಂಡು ನಾವು ನಮ್ಮ ಶರೀರವನ್ನು ರಕ್ಷಿಸಿಕೊಳ್ಳುತ್ತೇವೆ. ಜನರೂ ಇದೇ ಸರಿ ಎನ್ನುತ್ತಾರೆ. ನನ್ನ ವಿಚಾರಗಳಲ್ಲಿ ಪರಿವರ್ತನೆಯೇನೂ ಆಗಿಲ್ಲ. ವಾತಾವರಣ ವನ್ನು ನೋಡಿ ಅದಕ್ಕೆ ಅನುಕೂಲವಾಗುವಂತೆ ನನ್ನ ವಿಚಾರಗಳನ್ನು ಪ್ರಕಟಮಾಡುತ್ತೇನೆ.

ಇನ್ನು ಕಾಕಾಸಾಹೇಬರ ಪ್ರಶ್ನೆಯನ್ನು ನೋಡೋಣ. ಅವರು ಹೇಳುತ್ತಾರೆ ೧೯೨೦-೨೨ರವರೆಗೆ ಅಸಹಕಾರದ ಮಾತುಗಳನ್ನಾಡಿದ ನಾನು ಅವನೇ ಇರುವನೋ ಅಥವಾ ಬದಲಾಗಿರುವನೋ ಎಂದು. ನನ್ನ ಉತ್ತರ–ನಾನು ಅವನೇ ಇರುವೆನು ಎಂದು. ಆಗ ನಾನು ಅಸಹಯೋಗಿಯೇ ಇದ್ದರೆ ಈಗಲೂ ಇರುವೆನು. ಆದರೆ ಆಗಲೂ ನಾನು ವಸ್ತುತಃ ಸಹಯೋಗಿಯೇ (ಕೋಆಪರೇಟರ್) ಇದ್ದೆ. ಒಬ್ಬ ಆಂಗ್ಲ ಮ್ಯಾಜಿಸ್ಟ್ರೇಟನು ನನಗೆ ಹೇಳಿದನು. 'ನೀನು ಅಸಹಯೋಗಿಯಾಗಿದ್ದೀಯೇ, ಆದರೆ ಮನಸ್ಸಿನಿಂದ ಸಹಯೋಗವನ್ನು ಬಯಸುತ್ತೀಯೇ' ಎಂದು. ನಾನಂದೆ 'ಸರಿಯೇ ಅಸಹಯೋಗವು ನಾನು ಕಾಲತ್ರಯದಲ್ಲಿಯೂ ನಡೆಸಿಕೊಂಡು ಹೋಗಬೇಕೆಂದು ಮಾಡಿದ ಪ್ರತಿಜ್ಞೆಯನ್ನಲ್ಲ. ಹಿಂದೂಸ್ಥಾನವು ಸಹಯೋಗದಿಂದ ಮುಂದೆ ಹೋಗಬಹುದೆಂದು ಕಂಡರೆ ಅದನ್ನೇ ಉಪಯೋಗಿಸುವೆನು.' ೨೧ ದಿನಗಳ ಉಪವಾಸದ ನಂತರ ಆದ ಸಂಗತಿ. ನನ್ನ ಒಂದು ಹೇಳಿಕೆಯನ್ನು ನಾನು ಹೇಳಿದ್ದೆ 'ಸಹಯೋಗವೂ ನನ್ನ ಧರ್ಮ, ಅದಕ್ಕೋಸ್ಕರವೇ ನಾನು ಸಾಯುತ್ತಿರುವೆನು, ಇಷ್ಟೇ, ಅದು ಮಾನದಿಂದ ಸಿಕ್ಕಬೇಕು.' ಇವತ್ತು ವಿಧಾನ ಸಭೆಯಲ್ಲಿ ಸಹಯೋಗವನ್ನು ಕೊಡಲಿಕ್ಕಿಲ್ಲ, ಆದರೆ ಅದನ್ನು ತೆಗೆದುಕೊಳ್ಳಲಿಕ್ಕೆ ಹೋಗು ತ್ತಿದ್ದೇವೆ. ಇವತ್ತು ವಾತಾವರಣವು ಬದಲಾಗಿದೆ. ಅದು ಬದಲಾದಂತೆ ನಾವು ಔಷಧಿಯನ್ನು ಹುಡುಕಬೇಕು. ನಿನ್ನೆ ಸಹೋದರಿ ಪ್ರೇಮಾ ಇವರು ಹೇಳಿದ ವಿಷಯವನ್ನೂ ಉಲ್ಲೇಖಿಸು ವುದು ಅವಶ್ಯ. ಅವರು ಅದನ್ನು ವಿನೋದದಲ್ಲಿ ಅಥವಾ ವ್ಯಂಗ್ಯವಾಗಿ ಹೇಳಿದ್ದರೆ ಏನು ಅಡ್ಡಿಯಿಲ್ಲ, ಆದರೆ ಇದೆಂಥ ವಿನೋದ ಎಂಬುದು ನನಗೆ ತಿಳಿಯಲೊಲ್ಲದು. ವಿನೋದದ ಪ್ರಸಂಗವೇನೂ ಇರಲಿಲ್ಲ. ನಾನಂತೂ ಅದು ಅವರ ಅನುಭವದ ಮಾತಿರಬಹುದೆಂದು ತಿಳಿದೆ. ಹಾಗಿದ್ದರೆ ಅದು ಸರಿಯಲ್ಲ. ನನ್ನ ಅನುಭವವು ಅದಕ್ಕೆ ವಿಪರೀತವಾಗಿದೆ. ನಾನು ಈ ಪ್ರಕಾರ ಬೆಳೆದುಬಂದಿಲ್ಲ. ನಾನು ಸಣ್ಣವನಾಗಿದ್ದಾಗಲೇ ಸತ್ಯವು ನನ್ನ ಜೀವನದಲ್ಲಿ ಬಂದಿತು. ೧೮ ವರ್ಷದ ವಯಸ್ಸಿನಲ್ಲಿ ಅಹಿಂಸೆಯೂ ಬಂದಿತು. ನಾನೇನೂ ಅಷ್ಟು ಬುದ್ಧಿವಂತನಾಗಿರಲಿಲ್ಲ. ಇಂದೂ ನನಗೆ ಬುದ್ಧಿವಂತಿಕೆಯ ಬಗ್ಗೆ ಅಭಿಮಾನವಿಲ್ಲ. ಶಾಲೆಯಲ್ಲಿ ಉಪಾಧ್ಯಾಯರು ನನ್ನನ್ನು ಚತುರ ಹುಡುಗನೆಂದೇನೂ

ತಿಳಿಯುತ್ತಿರಲಿಲ್ಲ. ಹುಡಗ ಒಳ್ಳೆಯವನೇನೋ ಇದ್ದಾನೆ ಆದರೆ ಜಾಣನಲ್ಲ. ಫರ್ಸ್ಟ್‌ಕ್ಲಾಸ್ ಮತ್ತು ಸೆಕೆಂಡ್ ಕ್ಲಾಸಂತೂ ನನಗೆ ಗೊತ್ತೇ ಇಲ್ಲ. ಹಾಗೂ ಹೀಗೂ ಪಾಸಾಗುತ್ತಿದ್ದೆ. ನಾನೊಬ್ಬ ಮೂರ್ಖ ಹುಡುಗನಿದ್ದೆ. ಮಾತನಾಡುವುದೂ ಗೊತ್ತಿರಲಿಲ್ಲ. ದಕ್ಷಿಣ ಆಫ್ರಿಕಾಕ್ಕೂ ಕೂಡ ಒಬ್ಬ ಕಾರ್ಕೂನ ಆಗಿ ಹೋದೆ. ಫಿರೋಜಶಹರ ಮೆಹತಾನಂತೆ ದಿನ ಒಂದಕ್ಕೆ ಒಂದು ಸಾವಿರ ರೂಪಾಯಿ ತೆಗೆದುಕೊಳ್ಳುವ ಕರಾರಿನಿಂದೇನೂ ಹೋಗಲಿಲ್ಲ. ಒಂದು ವರ್ಷದಲ್ಲಿ ಒಂದೂವರೆ ನೂರು ಪೌಂಡುಗಳು ನನಗೆ ಸಿಗುವುದಿತ್ತು. ಕಾಯದೇ ಕಾನೂನಲ್ಲಿಯಂತೂ ನಾನು "ಢ" ಇದ್ದೆ. ನಾನೇನೂ ವಿದ್ವಾಂಸನಲ್ಲ. ಸತ್ಯದ ಪೂಜಾರಿ ಇದ್ದೇನೆ. ದಕ್ಷಿಣ ಆಫ್ರಿಕಾಕ್ಕೆ ಹೋದರೂ ಮುಸಲ್ಮಾನರ ನಡುವೆ ಹೋಗಿ ಸೇರಿದೆ. ಮಹಮ್ಮದ ಸಾಹೇಬರ ಕೇವಲ ಹೆಸರನ್ನೇ ಕೇಳಿದ್ದೆ. ಮುಸಲ್ಮಾನರ ವಿಷಯದಲ್ಲಿ ನನಗೇನು ತಿಳಿಯುತ್ತಿತ್ತು? ಅವರಿಗೆ ನಾನು ಹರಿಶ್ಚಂದ್ರ ಕಥೆಯನ್ನು ಹೇಳಿದೆ. ಈ ಒರಟುತನದ್ದು ಅವರ ಮೇಲೆ ಸಾಕಷ್ಟು ಪರಿಣಾಮವಾಯಿತು. ಅನಂತರ ಎಷ್ಟೋ ದಿನಗಳ ಮೇಲೆ ನಾನು ರಾಜನೀತಿಯಲ್ಲಿ ಭಾಗ ತೆಗೆದುಕೊಳ್ಳಲು ಪ್ರಾರಂಭಿಸಿದೆ. ಆದರೆ ಮುಖ್ಯ ಸಾಮಗ್ರಿ ಮೊದಲಿನದೇ ಇತ್ತು. ಸತ್ಯ ಮತ್ತು ಅಹಿಂಸೆಗೋಸ್ಕರ ರಾಜನೀತಿಯಲ್ಲಿ ಬೀಳುವುದು ಅವಶ್ಯಕವೆಂದು ಕಂಡಾಗ ಅದರಲ್ಲಿ ಬಿದ್ದೆ. ಆದರೆ ನನ್ನ ಅನುಭವವೇನೆಂದರೆ ನನ್ನ ರಾಜನೀತಿಯಿಂದ ಜನರ ಮೇಲೆ ನನ್ನ ಪ್ರಭಾವವಿಲ್ಲ. ಇದು ಸಂಪೂರ್ಣ ಸತ್ಯ. ಸಾಸವಡದಲ್ಲಿ ವಿಪರೀತ ಅನುಭವವಿದ್ದರೆ ನಾನರಿಯೆ. ನನ್ನದಂತೂ ಸರಿಯಾಗಿ ಇದೇ ಅನುಭವವಿದೆ. ಚಂಪಾರಣ್ಯಕ್ಕೆ ಹೋದದ್ದು ಕೂಡ ಬ್ರಜಕಿಶೋರಬಾಬು ಅವರ ಹೇಳಿಕೆ ಯಿಂದ. ಆದರೆ ಅವರನ್ನು ಕೇವಲ ನೋಡಿದ್ದೆ ಅಷ್ಟೆ. ಜನರೂ ಅವರನ್ನು ವಕೀಲಬಾಬು ಎಂಬ ಹೆಸರಿನಿಂದ ಗುರುತಿಸುತ್ತಿದ್ದರು. ಅವರು ಕಾಂಗ್ರೆಸ್ಸಿನ ಹೆಸರನ್ನು ಕೂಡ ಕೇಳಿರಲಿಲ್ಲ. ನಾನು ಅವರೆಲ್ಲರಿಗೂ ಹೇಳಿದೆ, ಕಾಂಗ್ರೆಸ್ಸಿನ ಹೆಸರನ್ನು ಕೂಡ ತೆಗೆದುಕೊಳ್ಳಬೇಡಿರಿ ಎಂದು. ರಾಜೇಂದ್ರಬಾಬು ಅವರ ಸ್ವಪ್ನದಲ್ಲಿ ಕೂಡ ಅವರನ್ನು ಕಾಂಗ್ರೆಸ್ಸಿನಲ್ಲಿ ತೆಗೆದು ಕೊಂಡು ಬರಬೇಕೆಂಬ ಮಾತಿರಲಿಲ್ಲ. ಇದಂತೂ ಆ ಮೇಲೆ ನನ್ನ ತಲೆಯಲ್ಲಿ ಬಂದಿತು. ಇವತ್ತೂ ಹಿಂದೂಸ್ಥಾನದಲ್ಲಿ ಸ್ವರಾಜ್ಯದ ಅವಶ್ಯಕತೆಯಿಲ್ಲದಂಥ ಸಾವಿರಾರು ಜನರಿರುವರು. ನಾನು ಇರುತ್ತಿರುವ ಸೇಗಾಂವನ್ನೇ ಉದಾಹರಣೆಗೆ ತೆಗೆದುಕೊಳ್ಳಿರಿ. ಅದು ಮಹಾರಾಷ್ಟ್ರದಲ್ಲಿದೆ ಮತ್ತು ಮಹಾರಾಷ್ಟ್ರ ಜನರ ವೃತ್ತಿಯು ಸಾಕಷ್ಟು ರಾಜಕಾರಣದಲ್ಲಿ ತೊಡಗಿದೆ. ಆದರೆ ಅಲ್ಲಿ ಜನರು ಕೂಡ ಸ್ವರಾಜ್ಯವನ್ನು ಬಯಸುವುದಿಲ್ಲ. ನಾನು ಅವರಿಗೆ ಕಾಂಗ್ರೆಸ್ಸಿನ ವಿಷಯವನ್ನು ಹೇಳುವುದಿಲ್ಲ. ಯಾಕೆಂದರೆ ಅದು ಅವರಿಗೆ ತಿಳಿಯುವುದಿಲ್ಲ. ಸ್ಪರ್ಷಾಸ್ಪರ್ಶದ ಮಾತು ಅವರಿಗೆ ತಿಳಿಯುತ್ತದೆ. ಅವರ ವಿರೋಧವನ್ನು ಮಾಡುತ್ತಾರೆ. ಹೆಂಗಸರೊಡನೆ ನಾನು ಚರಕ ಸಂಬಂಧದಲ್ಲಿ ಮಾತನಾಡಬಹುದು. ಮಕ್ಕಳ ವಿಷಯದಲ್ಲಿ ಮಾತನಾಡುತ್ತೇನೆ. ಅವರೊಡನೆ ನಾನು ವಿಧಾನಸಭೆಯ ವಿಷಯದಲ್ಲಿ ಮಾತನಾಡ ತೊಡಗಿದರೆ ಅವರು "ಅಲ್ಲಿಗೆ ಹೋಗಿ ನಮಗೋಸ್ಕರ ಒಂದು ಚೀಲ ಧಾನ್ಯವನ್ನು ತೆಗೆದುಕೊಂಡು ಬರುವಿರಾ?"ಎಂದು ಕೇಳಬಹುದು. ಇವತ್ತು ಸಂಪೂರ್ಣ ಹಿಂದೂಸ್ಥಾನದ

ಸ್ಥಿತಿಯೇ ಹೇಗಿದೆ? ಜನರಿಗೆ ಕೇವಲ ರೊಟ್ಟಿಯ ಮಾತು ತಿಳಿಯುತ್ತದೆ. ಅವರಿಗೆ ರಾಜಕಾರಣದ ಅವಶ್ಯಕತೆಯಿಲ್ಲ. ನಾನು ಇಡೀ ಹಿಂದೂಸ್ಥಾನದಲ್ಲಿ ಚಳವಳಿಯನ್ನು ನಡೆಸಿದೆನು; ಆದರೆ ಕಾಂಗ್ರೆಸ್ಸಿನ ವಿಷಯವನ್ನು ಹೇಳಿ ಅಲ್ಲ. ಇದುವರೆಗೂ ನಾನು ಎಲ್ಲಿಯೂ ಈ ರೀತಿಯಿಂದ ಕೆಲಸ ಮಾಡಿಲ್ಲ. ಈಗ ಚಂಪಾರಣ್ಯದಲ್ಲಿ ಸಾವಿರಾರು ಜನರು ಕಾಂಗ್ರೆಸ್ಸಿನ ವಿಷಯದಲ್ಲಿ ಮಾತನಾಡುತ್ತಾರೆ. ಇದು ಏತರ ಪರಿಣಾಮ? ಹಿಂದೆ ನಾವು ೬ ತಿಂಗಳ ಕಾಲ ಕಾಂಗ್ರೆಸ್ಸಿನ ಹೆಸರು ಕೂಡ ತೆಗೆದುಕೊಳ್ಳದೇ ಮಾಡಿದ ಕೆಲಸದ ಪರಿಣಾಮ ಇದು. ಅವರು ಕಾಂಗ್ರೆಸ್ಸಿಗೆ ಮಾನಕೊಡುವ ಕಾರಣವೆಂದರೆ ಆ ಜನರನ್ನು ತಮ್ಮ ಹಿತಚಿಂತಕರೆಂದು ತಿಳಿಯುತ್ತಾರೆ.

ರಾಜಕಾರಣದ ಮೂಲಕವೇ ಸತ್ಯ ಮತ್ತು ಅಹಿಂಸೆಯ ಪ್ರಭಾವವಾಗುವುದೆಂದು ನಿಮ್ಮ ಪೈಕಿ ಕೆಲವರು ತಿಳಿಯುತ್ತಿರಬಹುದು. ಅವರಿಗೆ ನಾನು ಸ್ಪಷ್ಟ ಹೇಳಬಯಸುತ್ತೇನೆ. ಸತ್ಯ ಮತ್ತು ಅಹಿಂಸೆ ಪರಾವಲಂಬಿ ಅಲ್ಲ. ಸತ್ಯ ಮತ್ತು ಅಹಿಂಸೆ ಇವು ಸ್ವತಂತ್ರ ಯಾವುದನ್ನೂ ಖಾನ್ ಸಾಹೇಬರು ಅಲ್ಲಾಹ್ ಎನ್ನುತ್ತಾರೆ. ನಾನು ರಾಮ ಎನ್ನುತ್ತೇನೆ, ಕ್ರಿಶ್ಚಿನ್ ಜನರು ಕ್ರೈಸ್ತ ಅಥವಾ ಗಾಡ್ ಎನ್ನುತ್ತಾರೆ ನೀವು ಅವನ ಪೂಜಾರಿಗಳಾಗಬೇಕೆಂದು ಬಯಸಿದರೆ ಆಗಿರಿ ಮತ್ತು ಪೂಜಾರಿ ಆಗದಿದ್ದರೆ ಆ ಪರತತ್ವಕ್ಕೆ ಏನೂ ಹಾನಿಯಿಲ್ಲ. ಈಶ್ವರನು ಸ್ವತಂತ್ರನಿದ್ದ ಪಕ್ಷದಲ್ಲಿ, ಆತನಿಗೆ ರಾಜನೀತಿಯದಾಗಲೀ, ನಿಮ್ಮದಾಗಲೀ ಅಥವಾ ನನ್ನದಾಗಲೀ ಅವಶ್ಯಕತೆ ಇಲ್ಲ. ಇದುವರೆಗೂ ಕೋಟ್ಯಂತರ ಜನರು ಅವನನ್ನು ಹುಡುಕುವವರು ಆಗಿಹೋಗಿರುವರು. ಆದರೆ ಅವರು ಅವನ ಬಹುಸ್ವಲ್ಪ ದರ್ಶನವಷ್ಟೇ ಪಡೆದಿರುವರು. ನಾನು ಪ್ರತಿ ದಿನ ಅದರಲ್ಲಿ ಹೊಸ ಶಕ್ತಿಯನ್ನು ಹೊಸ ವಿಷಯವನ್ನು ಕಾಣುತ್ತೇನೆ. ಅವುಗಳನ್ನು ನಾನು ಎಷ್ಟು ಆತ್ಮಸಾತ್ ಮಾಡಬೇಕೆಂದು ಬಯಸುತ್ತಿದ್ದೇನೋ ಅಷ್ಟು ಮಾಡಲು ಸಾಧ್ಯವಾಗಿಲ್ಲ. ಆದ್ದರಿಂದಲೇ ನಿಮ್ಮ ಜೊತೆಗೆ ಸತ್ಯ ಮತ್ತು ಅಹಿಂಸೆಯ ವಿಷಯದಲ್ಲಿ ವಾದ ವಿವಾದ ಮಾಡಬೇಕಾಗಿದೆ. ಆಚರಣೆಯ ಬಲವೆಂದರೇನು? ರಾಮನಾಮವೂ ಒಂದೇ ಇದೆ, ಆದರೆ ಒಬ್ಬನು ರಾಮನ ಹೆಸರನ್ನು ತೆಗೆದುಕೊಂಡರೆ ಅದರ ಪರಿಣಾಮವಾಗುತ್ತದೆ. ಇನ್ನೊಬ್ಬರಿಂದ ಅದು ಆಗುವುದಿಲ್ಲ. ಇದರ ಕಾರಣವೇನು? ಒಬ್ಬನು ಅದನ್ನು ಆತ್ಮಸಾತ್ ಮಾಡಿಕೊಂಡನು, ಇನ್ನೊಬ್ಬನು ಸಿತಾರದಂತೆಯೋ ದಿಲ್‌ರೂಬಾದಂತೆಯೋ ಕೇವಲ ಪ್ರತಿಧ್ವನಿ (ರಾಮ ಎಂಬ)ಯನ್ನು ತೆಗೆಯುತ್ತಾ ಇರುತ್ತಾನೆ. ಗಿಣಿಯ ಕಂಠದಿಂದಲೂ ರಾಮನಾಮ ಹೊರಡುತ್ತದೆ. ಆದರೆ ಅದು ಅದರ ಹೃದಯದೊರೆಗೆ ಮುಟ್ಟುವುದಿಲ್ಲ. ಗಿಣಿಯು ಅದರ ಮಹತ್ವವನ್ನು ತಿಳಿಯುವುದೇ ಇಲ್ಲ. ನಾನೇನು ಸಣ್ಣ ವಸ್ತುವಿನ ಉಪಾಸಕನಿಲ್ಲ. ಇದುವರೆಗೆ ಯಾರೂ ತನಗೆ ಯಾವ ಗುರುವೂ ಇಲ್ಲ ಎಂದು ಹೇಳುತ್ತಾ ಬಂದಿರುವನೋ ಯಾರೂ ಯಾವ ದೇಹದಾರಿಗೂ ಗುರು ಎಂದು ಅಂಗೀಕರಿಸಿಲ್ಲವೋ ಅಂಥವನು ರಾಜನೀತಿಯ ಮೇಲೆ ಅವಲಂಬಿಸಿದ ವಸ್ತುವಿನ ಪೂಜಾರಿಯಾಗಬಲ್ಲನೇ? ಸತ್ಯ ಮತ್ತು ಅಹಿಂಸೆ ಇವು ಬಹಳ ಬೆಲೆಯ

ವಸ್ತುಗಳು ಅವು ನಿರಪೇಕ್ಷವಾಗಿವೆ. ಅವು ವಿಲಕ್ಷಣ ಮತ್ತು ಅವುಗಳ ಉಪಾಸನೆಯ ಸಲಕರಣೆಗಳು ವಿಲಕ್ಷಣವಾಗಿವೆ. ಭಗಿನಿ ಪ್ರೇಮ ಈ ಮಾತನ್ನು ಮರೆಯಲಿ.

[ಟಿಪ್ಪಣಿ : ಕುಮಾರಿ ಪ್ರೇಮಾ ಕಂಟಕ ಅವರು ಗಾಂಧೀಜಿಯ ಭಾಷಣದ ಮುಂಚೆ ಮಾಡಿದ ತಮ್ಮ ಭಾಷಣದಲ್ಲಿ ಹೀಗೆ ಹೇಳಿದ್ದರು:– ಮಹಾತ್ಮಾ ಗಾಂಧಿಯವರಿಗೆ ಸತ್ಯ ಮತ್ತು ಅಹಿಂಸೆಯ ಆಂದೋಲನದಲ್ಲಿ ದೊರೆತಷ್ಟು ಯಶಸ್ಸು ಅವರಿಗಿಂತ ಹಿಂದೆ ಆಗಿ ಹೋದ, ಸತ್ಯ ಮತ್ತು ಅಹಿಂಸಾ ಸಿದ್ಧಾಂತಗಳನ್ನು ಪ್ರಚಾರ ಮಾಡಿದಂಥ ದೊಡ್ಡ ದೊಡ್ಡ ಪುಣ್ಯ ಪುರುಷರಿಗೂ ದೊರೆತಿರಲಿಲ್ಲ ಎಂದು ಅದಕ್ಕೆ ಕಾರಣವೆಂದರೆ ಮಹಾತ್ಮಾ ಗಾಂಧೀಯವರ ಹತ್ತಿರ ರಾಜನೈತಿಕ ಬಲವಿದೆ ಎಂದು ಹೇಳಿದ್ದರು.]

ನಾವು ವಿಧಾನ ಸಭೆಯಲ್ಲಿ ಇವತ್ತು ಹೋದರೆ ಸತ್ಯ ಮತ್ತು ಅಹಿಂಸೆಯನ್ನು ಮುಂದುವರಿಸಲಾರೆವು ಎಂದು ಜಮುನಾಲಾಲ್ ಹೇಳಿದರು. ಅವರು ಇದೊಂದು ಬಹುದೊಡ್ಡ ಮಾತನ್ನು ಹೇಳಿದರು. ನಾನಂತೂ ಇದನ್ನು ಸ್ವಲ್ಪವಾದರೂ ಒಪ್ಪುವುದಿಲ್ಲ. ಸತ್ಯ ಮತ್ತು ಅಹಿಂಸೆಯು ನಡೆಯದಾದರೆ ಪ್ರಜಾತಂತ್ರವೂ ನಡೆಯಲಾರದು. ಯಾಕೆಂದರೆ ಆ ಸ್ಥಿತಿಯಲ್ಲಿ ಅದೂ ಸತ್ಯ ಮತ್ತು ಅಹಿಂಸೆಯ ವಿರುದ್ಧವಾಗುವುದು. ನೀವು ಪ್ರಜಾತಂತ್ರವನ್ನು ಒಪ್ಪುತ್ತಿದ್ದ ಪಕ್ಷದಲ್ಲಿ ಕೋಟ್ಯವಧಿ ಜನರ ಹಿತವನ್ನು ನೀವು ಮಾಡಬೇಕು. ಹಿತದ ವಿಚಾರವನ್ನು ಮಾಡಲು ಎಲ್ಲರೂ ಒಂದು ಕಡೆ ಕೂಡಲಾರರು. ಕೆಲವರನ್ನು ಪ್ರತಿನಿಧಿಗಳನ್ನಾಗಿ ಮಾಡಬೇಕು. ಅವರು ಜನತೆಯ ನಿಜವಾದ ಸೇವಕರಿದ್ದರೆ, ನಿಜವಾದ ಡೆಮಾಕ್ರೆಟ್ಸ ಇದ್ದರೆ, ಶುದ್ಧ ಹೃದಯದಿಂದ ಜನರ ಅಭಿಪ್ರಾಯವನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡುವರು ಮತ್ತು ಅದನ್ನೇ ವ್ಯಕ್ತಮಾಡುವರು. ೨೦ನೇ ಇಸ್ವಿಯಲ್ಲಿ ಕಾಂಗ್ರೆಸ್ಸಿನ ಧ್ಯೇಯವನ್ನು ಬದಲಾಯಿಸುವ ಪ್ರಶ್ನೆ ಬಂದಾಗ, ಮತ್ತು ಬಿಪಿನಚಂದ್ರಪಾಲರು "ಸ್ವರಾಜ್ಯ"ದ ಬದಲು "ಡೆಮಾಕ್ರೆಟಿಕ್ ಸ್ವರಾಜ್ಯ" ಎಂಬ ಶಬ್ದವನ್ನು ಇಡಬೇಕೆಂದು ಹೇಳಿದಾಗ ನಾನು ಅದನ್ನು ವಿರೋಧಿಸಿದೆನು. ಯಾಕೆಂದರೆ, ನಾನು ಸ್ವರಾಜ್ಯ ಶಬ್ದವನ್ನು ವಿಶ್ಲೇಷಿಸಿ ನೋಡಿದಾಗ ಡೆಮಕ್ರೆಸಿ ಇಲ್ಲದೆ ಸ್ವರಾಜ್ಯವಿರಲಿಕ್ಕೆ ಸಾಧ್ಯವಿಲ್ಲ ಎಂದೆನಿಸುತ್ತದೆ. ಬಿಪಿನಚಂದ್ರಪಾಲರ ಅರ್ಥವು ಸ್ವರಾಜ್ಯ ಶಬ್ದದಲ್ಲಿಯೇ ಬಂದು ಹೋಗಿದೆ. ಸ್ವರಾಜ್ಯದಲ್ಲಿ ಕೂಡ ವಿಧಾನಸಭೆಯು ಅಲ್ಪಸ್ವಲ್ಪ ಇದರಂತೆಯೇ ಇರಲೇಬೇಕು. ಬಹುಶಃ ಅದರ ಬಾಹ್ಯ ಸ್ವರೂಪವು ಮಾತ್ರ ಬದಲಾಗಬಹುದು. ಭವ್ಯವಾದ ಸೌಧ ಮತ್ತು ಕುರ್ಚಿಗಳ ಬದಲು ನಾವು ಈಗ ಹೇಗೆ ಕೂತಿದ್ದೇವೆ ಹಾಗೆಯೇ ಕೂಡೋಣ. ಸುಮಾರು ३ರಲ್ಲಿ ೧ ಪಾಲು ಮತದಾರರು ಆಗಿದ್ದಾರೆ. ಮುಂದೆ ೧೨ ಕೋಟಿ ಮತದಾರರಾಗಬಹುದು. ಈಗ ಮೂರು ಕೋಟಿಯಾಗಿರುವುದೇನೂ ಸಣ್ಣ ಮಾತಲ್ಲ. ಇವರ ಕಡೆಗೆ ನಮ್ಮ ಸಾವಿರಾರು ಜನರು ಹೊರಟು ಹೋದರು. ಇದುವರೆಗೂ ಹೀಗೆ ಹೋಗಿರಲಿಲ್ಲ. ಇಷ್ಟು ಸ್ಥಳಗಳಲ್ಲಿ ನಾವು ಕಾಂಗ್ರೆಸ್ಸಿನ ಸಂದೇಶವನ್ನು ಮುಟ್ಟಿಸಿರುವೆವು. ಇದೇನು ಸಣ್ಣ ಮಾತಲ್ಲ. ಗಾಂಧೀ ಸೇವಾ ಸಂಘದ ಸದಸ್ಯರು ಈ ಸಂದೇಶವನ್ನು ತೆಗೆದುಕೊಂಡು ಹೋಗುವುದು ಸರಿಯೇ ಅಥವಾ ಇಲ್ಲವೇ ಅದನ್ನು ನಾನು ಯೋಚಿಸತೊಡಗಿದೆ. ಈ ಬಗ್ಗೆ ಕೇಳಿದವರಿಗೆ

ತೆಗೆದುಕೊಂಡು ಹೋಗಲು ಏನೂ ಅಡ್ಡಿಯಿಲ್ಲ ಅಂತಲೇ ಹೇಳಿದೆ. ಎಲ್ಲಿಯವರೆಗೆ ಕಾಂಗ್ರೆಸ್ಸಿನಲ್ಲಿ ಸತ್ಯ ಮತ್ತು ಅಹಿಂಸೆಗೆ ಸ್ಥಾನವಿದೆಯೋ ಮತ್ತು ಅದು ಅಲ್ಲಿಯವರೆಗೆ ೨೦ನೇ ಇಸವಿಯ ಕಾರ್ಯಕ್ರಮವನ್ನು ಹಾರಿಸಿಬಿಡುವುದಿಲ್ಲವೋ ಅಲ್ಲಿಯವರೆಗೆ ನಾವೂ ಕಾಂಗ್ರೆಸ್ಸಿನ ಸಂಸ್ಥೆಯೇ ಆಗಿದ್ದೇವೆ. ಅದರಿಂದ ನಿರ್ಮಾಣವಾದ ಸಂಸ್ಥೆಯಲ್ಲ, ಆದರೆ ನಾವೇ ಸ್ವೇಚ್ಛೆಯಿಂದ ನಿರ್ಮಾಣ ಮಾಡಿಕೊಂಡ ಸೇವಾ ಸಂಸ್ಥೆ, ಚರಕ ಸಂಘ, ಗ್ರಾಮೋದ್ಯೋಗ ಸಂಘ ಇವು ಕಾಂಗ್ರೆಸ್ ಮಾಡಿದ ಸಂಸ್ಥೆಗಳು ಆದರೆ ಗಾಂಧೀ ಸೇವಾ ಸಂಘವು ಕಾಂಗ್ರೆಸ್ಸಿನಿಂದ ನಿರ್ಮಿತವಾದುದ್ದಲ್ಲ. ೧೯೨೩ರಲ್ಲಿ ನಾನು ೬ ವರ್ಷದ ಶಿಕ್ಷೆಯನ್ನು ಅನುಭವಿಸುತ್ತಿರುವಾಗ, ನನ್ನ ಬಿಡುಗಡೆಯಾಗುವ ಯಾವ ಸಂಭವವೂ ಇಲ್ಲದಂತಿರುವಾಗ ೨೦ನೇ ಇಸವಿಯ ಕಾರ್ಯಕ್ರಮವನ್ನು ಉಳಿಸಲು ಈ ಸಂಸ್ಥೆಯು ನಿರ್ಮಿತವಾಯಿತು. ನಾಳೆ ಕಾಂಗ್ರೆಸ್ಸು ರಚನಾತ್ಮಕ ಕಾರ್ಯಕ್ರಮವನ್ನು ಬಿಟ್ಟುಕೊಟ್ಟರೂ ಸಂಘವೇನೂ ನಿಂತು ಹೋಗುವುದಿಲ್ಲ. ಸಂಘವು ಕಾರ್ಯಕ್ರಮವನ್ನು ಮುಂದುವರಿಸುವುದು. ರಚನಾತ್ಮಕ ಕಾರ್ಯವು ಗಾಂಧೀ ಸೇವಾ ಸಂಘದ ಶಾಶ್ವತ ಕಾರ್ಯ. ಅದು ನಿಂತು ಹೋದರೆ ಸಂಘವೂ ನಿಂತು ಹೋಗುವುದು. ೧೯೨೩ರಲ್ಲಿ ಮೋತಿಲಾಲ ಮೊದಲಾದ ಮುಖಂಡರು ಕೌನ್ಸಿಲಗಳ ಕಾರ್ಯಕ್ರಮವನ್ನು ಕೈಗೊಂಡರು. ನಮಗೆ ಅವರೊಡನೆ ಜಗಳವಾಡುವುದಿರಲಿಲ್ಲ ಮತ್ತು ಕಾಂಗ್ರೆಸ್ಸಿನ ಈ ನಿಜವಾದ ಕಾರ್ಯಕ್ರಮವನ್ನು ಶಾಶ್ವತವಾಗಿ ಇಡುವುದಿತ್ತು. ಯಾಕೆಂದರೆ ೨೦ನೇ ಇಸವಿಯ ಕಾರ್ಯಕ್ರಮವನ್ನು ಕಾಂಗ್ರೆಸ್ ಬಿಟ್ಟುಕೊಟ್ಟರೆ ಅದು ನಷ್ಟವಾಗುವುದು. ಈ ಸ್ಥಿತಿಯಲ್ಲಿ ಇನ್ನೇನು ನಮಗೆ ಮಾಡಲಿಕ್ಕೆ ಸಾಧ್ಯವಿತ್ತು. ಇವತ್ತೂ ಅದನ್ನೇ ಹೇಳುತ್ತೇನೆ. ಇದನ್ನು ಬಿಟ್ಟರೆ ಇನ್ನೊಂದು ಕಾರ್ಯವಿಲ್ಲ. ಆದರೆ ರಚನಾತ್ಮಕ ಕಾರ್ಯಕ್ರಮವು ಸತ್ಯ ಮತ್ತು ಅಹಿಂಸೆಯಂತೆ ತ್ರಿಕಾಲ ಬಾದಿತವಲ್ಲ. ಚರಕಾದ ವಿಷಯವನ್ನೇ ತೆಗೆದುಕೊಳ್ಳಿ. ನಾವು ಉತ್ತರಧ್ರುವ ಹಿಮಾಲಯದ ಶಿಖರದ ಮೇಲೆ ಅಥವಾ ಟಿಬೆಟಿನಲ್ಲಿ ಹೋದರೆ ಅಲ್ಲಿ ಹತ್ತಿಯು ಉಪಯೋಗಕ್ಕೆ ಬರಲಾರದು. ಆದರೂ ರಚನಾತ್ಮಕ ಕಾರ್ಯಕ್ರಮವು ಕೋಟಿಗಟ್ಟಲೆ ಜನರ ಹಿತಕ್ಕೋಸ್ಕರ ಇದೆ ಎಂದು ಹೇಳುತ್ತೇನೆ. ವಿಧಾನ ಸಭೆಯು ಕೆಲವರಿಗೋಸ್ಕರ ಇದೆ. ಆದರೆ ರಚನಾತ್ಮಕ ಕಾರ್ಯಕ್ರಮವು ಎಲ್ಲರಿಗೋಸ್ಕರ ಇದೆ. ಆದ್ದರಿಂದಲೇ ೩ ಕೋಟಿ ಜನರನ್ನು ಬಿಟ್ಟು ೩೦ ಕೋಟಿ ಜನಗಳ ಮಧ್ಯದಲ್ಲಿ ನಾನು ಇರುವುದು ಸರಿಯೇ. ವಿಧಾನಸಭೆಯು ಎಲ್ಲರಿಗೋಸ್ಕರ ಇಲ್ಲ. ಅದರಲ್ಲಿ ಸ್ವಲ್ಪೇ ಜನರು ಹೋಗುವವರು ಮತ್ತು ಹೋಗಬಲ್ಲರು. ಪತ್ರವನ್ನು ಬರೆದು ನನ್ನನ್ನು ಕೇಳಿದವರಿಗೆ ನೀವು ಈ ಗೊಂದಲದಲ್ಲಿ ಬೀಳಬೇಡಿರಿ ಎಂದು ಸಲಹೆ ಕೊಟ್ಟೆ. ಆದರೆ ಅವರು ಅದರ ವಿರುದ್ಧವಾಗಿ ನಡೆದುಕೊಂಡರು. 'ಏನು ಮಾಡುವುದು ನಿರ್ವಾಹವಿಲ್ಲ'. ಎಂದು ಹೇಳಿದರು. ಯಾರನ್ನು ಇಟ್ಟುಕೊಳ್ಳಬೇಕೆಂದು ಮಾಡಿದ್ದೆವೋ ಅವರನ್ನೂ ಸರದಾರರು ಜುಲುಮೆಯಿಂದ ಕರೆದುಕೊಂಡು ಹೋದರು. ಪಂಜಾಬದ ಡಾ॥ ಗೋಪಿಚಂದರ ಉದಾಹರಣೆ ನಿಮ್ಮೆದುರಿಗಿದೆ. ಇನ್ನಿತರ ಜನಗಳ ಜೊತೆಗೂ ಹೀಗೆಯೇ ಮಾಡಲಾಯಿತು.

ಇದೆಲ್ಲ ವಿಶ್ವಾಸಘಾತಕವನ್ನು ಸರದಾರರೇ ಮಾಡಿದರು. ಅವರು ಮಾಡಿದ್ದು ಸರಿಯೇ ಎಂದು ನನಗೂ ಒಪ್ಪಬೇಕಾಯಿತು. ಅವರು ಹಾಗೆ ಮಾಡದಿದ್ದರೆ ಗುಜಾತಿನಲ್ಲಿಯಂತೂ ಸೋಲುತ್ತಿದ್ದರು. ರಾಜಾಜಿಗೆ ನಾನು ನೀವು ಹೋಗಬೇಡಿ ಎಂದು ಹೇಳಿದ್ದರೆ ಅವರು ಹೋಗುತ್ತಿರಲಿಲ್ಲ. ಆದರೆ, ಇವತ್ತು ನನ್ನನ್ನು ಯಾರಾದರೂ ಕೇಳಿದರೆ ಅವರು ಮಾಡಿದ್ದು ಸರಿಯೇ ಎಂದು ಹೇಳುವೆನು. ಇದರ ಇತಿಹಾಸವು ಮನೋರಂಜಕವಾಗಿದೆ. ರಾಜಾಜಿ ನನ್ನ ಮತವನ್ನು ಕೇಳಿದರು. ಆದರೆ ಹೋಗುವ ಮೊದಲಲ್ಲ, ಆಮೇಲೆ ಅವರು ಅದನ್ನು ತಮ್ಮ ಕರ್ತವ್ಯವೆಂದು ತಿಳಿದು ಹೋದರು. ನನಗೆ ಮೆಚ್ಚಿಕೆಯಿಲ್ಲ ಎಂದು ನಾನು ಹೇಳಿದೆ. ಆದರೆ ಅವರು ಸರಿಯೇ ಮಾಡಿದರು. ಮದರಾಸಿನಲ್ಲಿ ಇಷ್ಟು ಕೆಲಸವಾಯಿತು. ಅದರ ಇತಿಹಾಸ ಇದೆ. ಅಲ್ಲಿ ಕೆಲಸ ಮಾಡುವವರು ಚರಕಾ ಸಂಘದ ಜನರು. ಹೆಚ್ಚು ಹೆಚ್ಚು ಕೆಲಸ ಅವರ ಮೂಲಕವೇ ಆಯಿತು. ಇವತ್ತು ರಾಜಗೋಪಾಲಾಚಾರ್ಯರು ಹೊರಟು ಹೋದರು. ನಾಳೆ ಸರದಾರ, ರಾಜೇಂದ್ರ ಪ್ರಸಾದ, ಅಥವಾ ಜಮುನಾಲಾಲರೂ ಕೂಡ ನಾನು ಹೇಳಿದರೆ ಬಿಟ್ಟು ಹೋಗಬಹುದು. ಆದರೆ ಹಾಗೆ ಮಾಡಿದರೆ ನಮ್ಮ ಸಂಘವು ಒಂದು ಸಣ್ಣ ಗುಂಪಾಗಿಬಿಡಬಹುದು.

ನಾವಂತೂ ಎಲ್ಲರೂ ಸಂಘದ ಸದಸ್ಯರಾಗಬೇಕೆಂದು ಬಯಸುತ್ತೇವೆ. ಆದರೆ ಇವತ್ತು ನನ್ನೆದುರಿಗಿರುವ ಪ್ರಶ್ನೆ ಏನೆಂದರೆ ನಮ್ಮ ಜನರನ್ನು ತಡೆದು, ಕೌನ್ಸಿಲ್ ಪ್ರವೇಶ ನಿಷೇಧಿಸಿ ನಮ್ಮ ಕೆಲಸವನ್ನು ಕೆಡಿಸಿಕೊಳ್ಳೋಣವೇ? ಹಾಗೆ ಮಾಡಿದರೆ ಕಾಂಗ್ರೆಸ್ ಯೋಗ್ಯ ಮನುಷ್ಯರನ್ನು ಹುಡುಕಲು ಎಲ್ಲಿ ಹೋಗಬೇಕು? ಗಾಂಧೀ ಸೇವಾ ಸಂಘದ ಸದಸ್ಯರಾದರೂ ಮಾಡಿದ್ದು ಇದನ್ನೇ. ಅವರು ಒಳ್ಳೆಯ ಕೆಲಸವನ್ನು ಮಾಡಿದ್ದರೆಂದು ನನಗೆ ಅನ್ನಿಸುತ್ತದೆ. ಅವರು ಹಾಗೆ ಮಾಡಿರದಿದ್ದರೆ ಕಾಂಗ್ರೆಸ್ಸಿಗೆ ಅಷ್ಟು ಜಯ ದೊರೆಯುತ್ತಿರಲಿಲ್ಲ. ಕಾಂಗ್ರೆಸ್ಸಿನ ಎದುರಿಗೆ ಈ ಸಂಘವು ಬಹಳ ಸಣ್ಣದು. ಕಾಂಗ್ರೆಸ್ ಕೋಟಿಗಟ್ಟಲೆ ಜನರಿಂದ ಆಗಿದೆ. ಅದನ್ನು ನಾವು ಬಿಡಲಾರೆವು. ಅದು ಈ ಕಾರ್ಯಕ್ರಮವನ್ನು ಸ್ಥಾಯಿರೂಪದಿಂದ ತನ್ನ ಕಾರ್ಯಕ್ರಮವೆಂದೇ ತೆಗೆದುಕೊಂಡಿದೆ. ಇದು ಆಪದ್ಧರ್ಮವಲ್ಲ. ಇದು ಸ್ಪಷ್ಟ ಮಾತು. ನಾವು ಕಾಂಗ್ರೆಸ್ಸನ್ನು ಬಿಡಲಾರೆವು. ಇವತ್ತು ವಿಧಾನಸಭೆಗಳಲ್ಲಿ ಹೋಗುವವರು ಸರ್ಕಾರಿ ವಿಧಾನಸಭೆಗಳಲ್ಲಿ ಅಲ್ಲ, ತಮ್ಮ ವಿಧಾನ ಸಭೆಗಳಲ್ಲಿ ಹೋಗುತ್ತಾರೆ. ನಾನು ಹೇಳಿದ್ದು ಸತ್ಯ. ನಾವು ಜನತೆಯ ಪ್ರತಿನಿಧಿಗಳಾಗಿದ್ದೇವೆ. ಮೊದಲು ಸರ್ಕಾರದಿಂದ ಆರಿಸಲ್ಪಟ್ಟವರು ಅಥವಾ ಸ್ವಲ್ಪೇ ಜನರ ಪ್ರತಿನಿಧಿಗಳು ವಿಧಾನ ಸಭೆಗಳಲ್ಲಿ ಹೋಗುತ್ತಿದ್ದರು. ಜನತೆಯ ಪ್ರತಿನಿಧಿಗಳು ತಮ್ಮ ಕರಾರನ್ನು ಸರ್ಕಾರದೆದುರಿಗೆ ಇಟ್ಟಿದ್ದಾರೆ. ವಿಧಾನಸಭೆಗಳಲ್ಲಿ ಸತ್ಯ ಮತ್ತು ಅಹಿಂಸೆಗಳನ್ನು ನಡೆಸುವುದಾದರೆ ನಿಮ್ಮನ್ನು ಬಿಟ್ಟು ಇನ್ನಾರು ನಡೆಸುವರು? ನಮಗಂತೂ ಕಾಂಗ್ರೆಸ್ಸಿನ ಶಕ್ತಿಯನ್ನು ಬೆಳೆಸುವುದಿದೆ. ಹಾಗಾದರೆ ನಾನೇಕೆ ಕಾಂಗ್ರೆಸ್ಸಿನಿಂದ ಹೊರಬಿದ್ದೆ ಎಂದು ನೀವು ಕೇಳಬಹುದು. ನಾನು ಕಾಂಗ್ರೆಸ್ಸಿನಿಂದ ಹೊರಬಿದ್ದಿರುವುದು ಅದರ ಸೇವೆಯನ್ನು ಹೆಚ್ಚು ಮಾಡಲಿಕ್ಕೋಸ್ಕರ. ಎಲ್ಲಿಯವರೆಗೆ ಕಾಂಗ್ರೆಸ್ಸಿಗೆ ನನ್ನ ಸೇವೆ ಅವಶ್ಯಕತೆಯಿದೆಯೋ ಅಲ್ಲಿಯವರೆಗೆ ನಾನು ಸ್ವಯಂ ಅದರ

ಸೇವೆ ಮಾಡುವೆನು. ನಾನೇನು ನಿರಾಶನಾಗಿಲ್ಲ. ನಿರಾಶನಾಗಿ ಸೇಗಾಂವಕ್ಕೆ ಹೋಗಿ ಕುಳಿತಿಲ್ಲ. ನನ್ನಲ್ಲಿರುವ ಅಲ್ಪಸ್ವಲ್ಪ ಶಕ್ತಿಯು ಕಾಂಗ್ರೆಸ್ಸಿಗೋಸ್ಕರ ಇದೆ. ಮತ್ತು ಕಾಂಗ್ರೆಸ್ ನನ್ನದಿದೆ. ನಾನು ನಿಮ್ಮೆದುರಿಗೆ ಇಡುತ್ತಿರುವ ವಿಚಾರಗಳ ಮೇಲೆ ನಿಮ್ಮ ವಿಚಾರಗಳ ಪರಿಣಾಮವೂ ಆಗಿದೆ. ನಾನು ಹೇಳುವ ಸಾರಾಂಶ ಇಷ್ಟೇ, ಈ ಕಾರ್ಯಕ್ರಮಕ್ಕೂ ನಾವು ಆಸ್ಪದವನ್ನು ಕೊಡಬೇಕು. ಆದರೆ ನಾವು ನಮ್ಮ ಕೆಲಸದಲ್ಲಿಯೇ ತೊಡಗಿರಬೇಕು ಎಂಬುದೊಂದು ಕಟ್ಟು. ಯಾವಾಗ ನಮ್ಮ ಸರ್ದಾರ (ನಾಯಕ), ಸರ್ದಾರ ಎಂದರೆ ವಲ್ಲಭಬಾಯಿ ಪಟೇಲ ಅಲ್ಲ, ಕಿಶೋರಲಾಲರ ಅಪ್ಪಣೆಯಾಗುವುದೋ ಆಗ ನಾವು ಕೌನ್ಸಿಲ್‌ಗಳಿಗೂ ಹೋಗಬೇಕು.

ಇನ್ನು ಧರ್ಮಾಧಿಕಾರಿಯವರು 'ಸತ್ಯಾಗ್ರಹಿಗಳಾದ ನಾವು ವಿರೋಧಿ ಸಂಸ್ಥೆಗಳಲ್ಲಿ ಕೂಡ ವಿರೋಧ ಮಾಡಲು ಹೋಗಬಹುದೇ?' ಎಂದು ಕೇಳಿದ್ದಾರೆ. ಸರಿಯೇ. ನಾವು ವಿರೋಧಿ ಸಂಸ್ಥೆಗಳಲ್ಲಿ ಏಕೆ ಹೋಗಬಾರದು? ಸತ್ಯಾಗ್ರಹದ ಎಲ್ಲೆಗಳನ್ನು ನಾವು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ನಾವು ಮೋಸ ಅಥವಾ ಹಿಂಸೆ ಮಾಡಲು ಹೋಗುವುದಿಲ್ಲ. ಪ್ರಕಟವಾಗಿ ವಿರೋಧಿಸಲು ಹೋಗುವುದು ನಮ್ಮ ಕರ್ತವ್ಯವೂ ಆಗಬಹುದು. ಆದರೆ ಇಲ್ಲಿ ಪ್ರಶ್ನೆಯೇ ಇಲ್ಲ. ವಿಧಾನ ಸಭೆಯು ನಮ್ಮ ವಿರೋಧಿ ಸಂಸ್ಥೆಯೇನಲ್ಲ. ವಿಧಾನಸಭೆ ಯಂತೂ ನನಗೆ ಬೇಕಾದ ಸಂಸ್ಥೆಯೇ ಅದು ನನ್ನದೆ. ಗೌರ್ನರನು ಅಧಿಕಾರಿಯಾಗಿ ಕೂತಿರುವವನು. ಆದರೆ ಸಂಸ್ಥೆಯಂತೂ ನನ್ನದೇ. ಒರಿಸ್ಸಾದ ಗೌರ್ನರ್ ಇದನ್ನು ಒಪ್ಪುತ್ತಾನೆ. ನಾನು ವಿಧಾನಸಭೆಯ ಮೂಲಕ ಈಗಿರುವ ರಾಜ್ಯಪದ್ಧತಿಯನ್ನು ಕೆಡವಲು ಬಯಸುತ್ತೇನೆ. ಅಲ್ಲಿ ನಾವು ನಮ್ಮ ಶಕ್ತಿಯನ್ನು ಬೆಳೆಸಲು ಹೋಗುತ್ತಿದ್ದೇವೆ. ಈಗ ನಾವು ವಿಧಾನಸಭೆಗಳನ್ನು ನಿಷ್ಕ್ರಿಯ ಮಾಡಲು ಹೋಗುತ್ತಿಲ್ಲ. ನಾವು ಶತ್ರುವಿನ ಮನೆಗೆ ಹೋದರು ಅವನ ಹೃದಯ ಪರಿವರ್ತನೆ ಮಾಡಲು ಹೋಗುತ್ತೇವೆ. ಹೆಂಡಕುಡುಕರ ಸಭೆಯೊಂದಿದೆ ಎಂದು ಇಟ್ಟುಕೊಳ್ಳೋಣ. ಅದು ನಮ್ಮನ್ನು ಕರೆದು 'ಬಾರಯ್ಯ, ಹೆಂಡಕುಡುಕತನದ ವಿರುದ್ಧ ಏನು ಹೇಳುವುದಿದೆಯೋ ಅದನ್ನು ಹೇಳು' ಎಂದು ಹೇಳುತ್ತದೆ. ಸರಿ; ನಾವು ಅವರ ಸಭೆಯಲ್ಲಿ ಹೋಗುತ್ತೇವೆ. ಯಾರಾದರೂ ಅನ್ನಬಹುದು. ಆ ಹೆಂಡಕುಡುಕರು ನಮ್ಮನ್ನು ಸುಟ್ಟುಬಿಡುವರು ಎಂದು. ಸರಿ ನಾವು ಸಾಯುವೆವು. ಯಾವ ದೃಷ್ಟಿಯಿಂದ ಹೋಗುತ್ತೇವೆ ಇದು ಮಹತ್ವವಿದೆ. ಸತ್ಯವನ್ನು ಬೆಳೆಸಲು ಹೋಗುತ್ತೇವೆಯೊ ಅಥವಾ ಕಡಿಮೆ ಮಾಡಲೋ? ನಾವು ವಿಧಾನಸಭೆಗಳಲ್ಲಿ ಸತ್ಯವನ್ನು ಮುಂದುವರಿಸಲಿಕ್ಕೇ ಹೋಗೋಣ. ವಿಧಾನಸಭೆಯಂತೂ ನಮ್ಮದೇ ಅಲ್ಲವೇ? ಬಹುಮತವಂತೂ ನನ್ನದೇ ಅಲ್ಲವೇ? ಈಗ ಎದುರಿಸಲು ನಮಗೊಂದು ಪ್ರಸಂಗವನ್ನು ಕೊಡಲಾಗಿದೆ. ಹಾಗಿದ್ದಮೇಲೆ ನಾವು ಹೊರಗೆ ಕುಳಿತಿರೋಣವೇ? ಶತ್ರುವಿನ ಗರಡಿಯ ಮನೆಯಲ್ಲಿ ಜನಸಾಮಾನ್ಯ ರೆಲ್ಲರೂ ಹೋಗಬಹುದು. ನಾವೇಕೆ ಹೋಗಬಾರದು? ಭಿಕ್ಷೆ ಬೇಡಲು ಅಲ್ಲ, ಅವನ ಶಕ್ತಿಯನ್ನು ಕಡಿಮೆಮಾಡಲು. ೫-೬ ಲಕ್ಷ ರೂಪಾಯಿಗಳನ್ನು ನಾವು ವ್ಯರ್ಥ ಖರ್ಚು ಮಾಡುವೆವೆ? ಇವತ್ತು ನಾವು ೫-೬ ಲಕ್ಷ ರೂಪಾಯಿ ಖರ್ಚು ಮಾಡಿದೆವು. ಇರಲಿ.

ಆದರೆ ಯಾವಾಗ ಕಾಂಗ್ರೆಸ್ಸಿನ ಪ್ರತಿಷ್ಠೆ ಬೆಳೆಯುವುದೋ ಆಗ ಒಂದು ಕಾಸೂ ಕೂಡ ಖರ್ಚು ಮಾಡಬೇಕಾಗುವುದಿಲ್ಲ. ನಾವು ರಚನಾತ್ಮಕ ಕಾರ್ಯಕ್ರಮದ ಹೆಮ್ಮೆಯನ್ನು ಕೊಚ್ಚುತ್ತೇವೆ. ನಾನು 'ಹರಿಜನ'ದ ಮೂಲಕ ಕೂಗಿ ಕೂಗಿ ಹೇಳುತ್ತೇನೆ, "ಚರಖಾ ವಿಶಾರದರು ಎಷ್ಟು ಜನರಿದ್ದಾರೆ? ಅಸ್ಪೃಶ್ಯತಾ ನಿವಾರಣಾ ವಿಶಾರದರು ಎಷ್ಟಿದ್ದಾರೆ?' ಎಂದು. ಉತ್ತರವು ಸೊನ್ನೆ. ಹೀಗಾಗದಿದ್ದರೆ ಖರ್ಚು ಮಾಡುವ ಪ್ರಸಂಗವೇ ಬರುತ್ತಿರಲಿಲ್ಲ. ನಾವು ನಮ್ಮ ಶಕ್ತಿಯನ್ನೆಲ್ಲಾ ಒಗ್ಗೂಡಿಸಿ ಸೇವೆಯನ್ನು ಮಾಡಬೇಕು. ಸತ್ಯ ಮತ್ತು ಅಹಿಂಸೆಗಳನ್ನು ಪೂರ್ಣವಾಗಿ ಪಾಲಿಸುತ್ತಾ ಹೆಜ್ಜೆಯನ್ನು ಮುಂದಿಡಬೇಕು. ನಿರ್ಭಯತೆ ಮತ್ತು ಶಿಸ್ತು ಈ ಎರಡು ಅಸ್ತ್ರಗಳನ್ನು ನಮ್ಮ ಹತ್ತಿರ ಇಟ್ಟುಕೊಳ್ಳಬೇಕು. ಅವುಗಳನ್ನು ಪಾರ್ಲಿಮೆಂಟಿನಲ್ಲಿ ಉಪಯೋಗಿಸಬೇಕು. ಕಾರ್ಲಾಯಿಲ್ ಹೇಳಿದ್ದ "ಹೌಸ್ ಆಫ್ ಕಾಮನ್ಸದ ಸದಸ್ಯರಿಗೆ ಬುದ್ಧಿಯ ಅವಶ್ಯಕತೆ ವಿಶೇಷ ಇಲ್ಲ" ಎಂದು ಡೆಮಾಕ್ರಸಿ ಇದ್ದಲ್ಲಿ ಹಾಗೇ ಆಗುವುದು. ಮುಖ್ಯ ವಿಷಯವೆಂದರೆ ಶಿಸ್ತು. ನಮ್ಮ ಮುಖಂಡರ ಅಪ್ಪಣೆಯನ್ನು ಪಾಲಿಸುತ್ತಾ ಅಲ್ಲಿ ಮೌನವಾಗಿ ತಕಲಿಯಿಂದ ನೂಲು ತೆಗೆಯುತ್ತ ಕುಳಿತುಕೊಳ್ಳುವಂಥ ಜನರೇ ಅಲ್ಲಿರಬೇಕು. ಇವರಿಗೆ ಕಾಯದೇ ಅಥವಾ ವಿಧಾನ ಶಾಸ್ತ್ರವನ್ನು ತಿಳಿದುಕೊಳ್ಳುವ ಅವಶ್ಯಕತೆ ಇಲ್ಲ. ಯಾವುದು ನಮ್ಮ ಮನೆಯೋ ಅಲ್ಲಿ ನಾವೇಕೆ ಹೋಗಬಾರದು? ಆದರೆ ಅಲ್ಲಿ ಎಲ್ಲರೂ ಹೋಗಲಾರರು. ಆದರೂ ಎಲ್ಲರೂ ಮತ (ಓಟು) ಕೊಡಬೇಕು ನಾನು ಅಪ್ಪಾ ಅವರ ಮಾತನ್ನು ಒಪ್ಪುವುದಿಲ್ಲ. ಅಪ್ಪಾ ಪಟವರ್ಧನರು ಅಡಲ್ಟ್ ಫ್ರಾಂಜಾಯಿಜ್ ಸಿಗುವವರೆಗೆ ತಾವು ಮತದಾರರಾಗಲು ಒಪ್ಪಲಾರೆ ಎಂದಿದ್ದರು, ಪ್ರೈಮರಿ ಓಟರ್ ಅಂತೂ ಎಲ್ಲರೂ ಆಗಲೇಬೇಕು. ನನಗೆ ಕೇಳಬಹುದು "ನೀನೇಕೆ ಓಟರ್ ಆಗಲಿಲ್ಲ" ಎಂದು. ನನ್ನ ಕಾರಣವು ಬೇರೆ ಇತ್ತು. ಎಲ್ಲರಿಗೂ ಓಟ್‌ನ ಅಧಿಕಾರ ಸಿಕ್ಕಿಲ್ಲ, ಆದ್ದರಿಂದ ನಾನೂ ಓಟರ್ ಆಗಲು ಇಷ್ಟಪಡಲಿಲ್ಲ ಎನ್ನುವ ಕಾರಣ ಅಲ್ಲ. ನನ್ನ ಸ್ಥಿತಿ ಬೇರೆ ಇದೆ. ಅದು ನನ್ನ ಮಟ್ಟಿಗಷ್ಟೇ. ಸಂಘದ ಸದಸ್ಯರು ಸತ್ಯದ ಪೂಜಾರಿಗಳು. ಯಾರಿಗೆ ಗಾಂಧೀ ಸೇವಾ ಸಂಘದ ಆಜ್ಞೆಯಾಗುವುದೋ ಅವರು ಹೋಗಬೇಕು. ಇದು ಒಂದು ವ್ಯಕ್ತಿಯ ಪ್ರಶ್ನೆಯಲ್ಲ. ಈ ದೃಷ್ಟಿಯಿಂದ ಇದು ಪ್ರಲೋಭನ ಅಥವಾ ಸ್ವಾರ್ಥದ ಮಾತಲ್ಲ. ಯಾರು ಪ್ರಲೋಭನ ಅಥವಾ ಸ್ವಾರ್ಥಕ್ಕೆ ವಶರಾಗಿ ಹೋಗುವರೋ ಅವರು ಗಾಂಧೀ ಸೇವಾ ಸಂಘ ಮತ್ತು ಸತ್ಯದ ದ್ರೋಹಿಗಳು. ಯಾರಿಗೆ ೨೪ ಗಂಟೆ ಚರಖಾದ ವಿಷಯದಲ್ಲಿಯೇ ಧ್ಯಾನ ಮಾಡುವುದಿದೆಯೋ ಅವರು ವಿಧಾನಸಭೆಯಲ್ಲಿ ಕುಳಿತು ಆ ಕೆಲಸವನ್ನು ಮಾಡಬಹುದು. ಅಲ್ಲಿ ಬುದ್ಧಿಯನ್ನು ಓಡಿಸುವ ಕೆಲಸವಿಲ್ಲ. ಮುಖಂಡನ ಅಪ್ಪಣೆಯಾದ ಕೂಡಲೇ ಕೈ ಎತ್ತುವುದು. ಇದು ಆಪದ್ಧರ್ಮವಲ್ಲ. ಇದು ನಮ್ಮ ಧರ್ಮವಾಗಿದೆ. ನಾವಂತೂ ದರಿದ್ರ ನಾರಾಯಣನ ಸೇವಕರು ಸೇವಕರಾಗಿಯೇ ಹೋಗುವೆವು, ಅದು ಕಾಂಗ್ರೆಸ್ ಕರೆದರೆ ಹೋಗುವೆವು ನಾವು ನಮ್ಮ ಕರಾರಿನ ಮೇಲೆ ಮಂತ್ರಿತ್ವವನ್ನು ಸ್ವೀಕರಿಸಿದರೆ ಸಂಪೂರ್ಣ ಸ್ವರಾಜ್ಯದ ಮಾರ್ಗವೇ ನಮಗೆ ಸಿಕ್ಕಂತೆ. ಇಂಥ ಜನರು ಹೋದಮೇಲೆ ಹನ್ನೊಂದು ಪ್ರಾಂತ್ಯಗಳಲ್ಲಿ

ಒಂದರಲ್ಲಿಯೂ ನಾವು ಸೋಲುವುದಿಲ್ಲ. ಕಾಂಗ್ರೆಸ್ ನಮ್ಮನ್ನು ಕರೆಯದಿದ್ದರೆ. ಇದ್ದಲ್ಲಿಯೇ ಇರುತ್ತೇವೆ ಅಷ್ಟೆ. ಇದು ಶ್ರೇಷ್ಠ ಕನಿಷ್ಠರ ಪ್ರಶ್ನೆಯಲ್ಲ. ನಮ್ಮ ದೃಷ್ಟಿಯಲ್ಲಿ ರಚನಾತ್ಮಕ ಕಾರ್ಯಕ್ರಮ ಮತ್ತು ಈ ಕಾರ್ಯಕ್ರಮ ಇವೆರಡೂ ಸಮಾನವೇ"

(ಇಲ್ಲಿಗೆ ಗಾಂಧೀಜಿಯ ೨ನೇಯ ದಿನದ ಭಾಷಣ ಮುಗಿಯಿತು)

ಇದಾದ ಮೇಲೆ ಜಮುನಾಲಾಲರು ರಾಜನಿಷ್ಠೆಯ ಶಪಥವನ್ನು ಸಂಘದ ಸದಸ್ಯರು ತೆಗೆದುಕೊಳ್ಳಬಹುದೋ ಇಲ್ಲವೋ ಎಂಬ ಪ್ರಶ್ನೆ ಎತ್ತಿದರು. ಸ್ವಾತಂತ್ರ್ಯದ ಧ್ಯೇಯ ವನ್ನಿಟ್ಟುಕೊಂಡು ರಾಜನಿಷ್ಠೆಯ ಶಪಥವನ್ನು ತೆಗೆದುಕೊಳ್ಳಬಹುದೆಂದು ಗಾಂಧೀಜಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಇನ್ನೂ ಅನೇಕ ಚರ್ಚೆ ನಡೆದವು.

ಅಂದು ರಾತ್ರಿ ಪ್ರಾರ್ಥನಾನಂತರ ಅನಿರೀಕ್ಷಿತವಾಗಿ ಮಳೆ ಪ್ರಾರಂಭವಾಯಿತು. ಪ್ರಾರಂಭವಾದ ಮಳೆ ಧಾರಾಕಾರವಾಗಿ ಸುರಿಯತೊಡಗಿತು. ಹಾಕಿದ ಗುಡಿಸಲುಗಳೆಲ್ಲ ಬಿದ್ದು ಹೋದವು. ಎಲ್ಲ ಸದಸ್ಯರಿಗೂ ಹುದಲಿ ಊರೊಳಗೆ ದೊಡ್ಡ ದೊಡ್ಡ ಮನೆಗಳಲ್ಲಿ ಇರಲು ವ್ಯವಸ್ಥೆ ಮಾಡಲಾಗಿತ್ತು. ಸರದಾರ ವಲ್ಲಭಬಾಯಿ ಪಟೇಲ್, ಶ್ರೀ ರಾಜೇಂದ್ರ ಪ್ರಸಾದ, ಖಾನ್‌ಸಾಹೇಬ್ ಅಬ್ದುಲ್ ಗಫಾರ್‌ಖಾನ್ ಮೊದಲಾದವರು ಗಂಗಾಧರರಾಯರ ಮನೆಯಲ್ಲಿ ಉಳಿದರು. ಆದರೆ ಗಾಂಧೀಜಿ, ಕಿಶೋರಲಾಲ, ಮಶ್ರುವಾಲ, ಕಾಕಾಸಾಹೇಬ, ಕಾಲೇಲ್ಕರ ಅವರು ಗಾಂಧೀಜಿಯ ಗುಡಿಸಲಲ್ಲೇ ಬೆಳಗಿನವರೆಗೆ ಇದ್ದರು. ಬೆಳಗಾದರೂ ಮಳೆ ಬೀಳಲಿಲ್ಲ. ಆದ್ದರಿಂದ ಸಮ್ಮೇಳನ ಕುಮರಿ ಆಶ್ರಮದಲ್ಲಿ ನಡೆಯುವುದು ಗೊತ್ತಾಯಿತು. ಎಲ್ಲ ಸದಸ್ಯರನ್ನು ಕುಮರಿಗೆ ಕಳಿಸಲಾಯಿತು.

## ಮೂರನೇ ದಿನ ೧೮-೪-೧೯೩೭

ಈ ದಿನವೂ ಸಂಜೆಯವರೆಗೆ ಮಳೆ ಸುರಿಯುತ್ತಲೇ ಇತ್ತು. ಸರದಾರ ವಲ್ಲಭ ಬಾಯಿ ಪಟೇಲ, ಶ್ರೀ ರಾಜೇಂದ್ರ ಪ್ರಸಾದ, ಖಾನ್ ಸಾಹೇಬ ಮೊದಲಾದ ಸದಸ್ಯರು ಹುದಲಿ ಊರಲ್ಲೇ ಉಳಿದಿದ್ದರು. ಅಂದೂ ಸಹ ಮಳೆ ನಿಂತಿರಲಿಲ್ಲ. ಆದ್ದರಿಂದ ಹಗಲು ಸಮ್ಮೇಳನ ನಡೆಯಲಿಲ್ಲ. ಆ ದಿನ ಬೆಳಿಗ್ಗೆ ಕುಮರಿ ಆಶ್ರಮದಲ್ಲಿ ೨ ಉಪನಯನ ಗಳು ಮತ್ತು ೨ ಮದುವೆಗಳಾದವು. ಗಾಂಧೀಜಿಯ ಮೊಮ್ಮಗಳು ಮನುಗಾಂಧಿ ಅವರ ಮದುವೆ ಕಿಶೋರಲಾಲ ಮಶ್ರವಾಲರ ಅಣ್ಣನ ಮಗನೊಂದಿಗೆ ಆಯಿತು. ಮಹದೇವ ಬಾಯಿ ದೇಸಾಯರ ತಂಗಿ ನಿರ್ಮಲ ದೇಸಾಯಿಯ ಮದುವೆ ಈಶ್ವರ ದಾಸರ ಜೊತೆಗೆ ಆಯಿತು. ಮಹದೇವ ಬಾಯಿಯ ಮಗ ನಾರಾಯಣ ದೇಸಾಯಿಯ ಮುಂಜಿ ನಡದದ್ದು ಇಲ್ಲಿಯೇ. ತರ್ಕತೀರ್ಥ ಲಕ್ಷ್ಮಣಶಾಸ್ತ್ರಿಗಳೂ, ಇನ್ನಿಬ್ಬರು, ಸ್ಥಳೀಯ ಭಟ್ಟರೂ ಶುದ್ಧ ವೈದಿಕ ಪದ್ಧತಿಯಲ್ಲೇ ಇವನ್ನು ನಡೆಸಿದರು.

ಆನಂತರ ಗಾಂಧೀಜಿ ಆ ವೈದಿಕರಿಗೆ ಮದುವೆಗಳನ್ನು ಹೇಗೆ ನಡೆಸಬೇಕು, ಸಂಸ್ಕೃತದ ಶ್ಲೋಕಗಳನ್ನು ಆಯಾ ಪ್ರಾಂತ್ಯ ಭಾಷೆಯಲ್ಲಿ ವಧು-ವರರಿಗೆ ಎಷ್ಟು ಅಗತ್ಯ ಎಂಬುದನ್ನು

ಹೇಳಿದರು. ಆಮೇಲೆ ಅರ್ಧಗಂಟೆ ಹೊತ್ತು ಗಾಂಧೀಜಿ ವಧೂ-ವರರಿಗೆ ಪ್ರತ್ಯೇಕ ಉಪದೇಶ ಮಾಡಿದರು.

"ಕರ್ತವ್ಯದ ಬಗ್ಗೆ ನಮ್ಮಲ್ಲಿ ಜಾಗೃತಿ ಉಂಟುಮಾಡುವಷ್ಟು ಮಾತ್ರ ನನಗೆ ಆಚಾರದಲ್ಲಿ ವಿಶ್ವಾಸ. ನೀವು ಹೇಳಿದ ಎಲ್ಲಾ ಪ್ರತಿಜ್ಞೆಗಳೂ ಮಂತ್ರಗಳೂ ಸಂಸ್ಕೃತದಲ್ಲಿವೆ. ನಿಮಗೆ ತಿಳಿಯಲಿ ಎಂದು ಅದನ್ನು ಭಾಷಾಂತರ ಮಾಡಿದರು. ಆದರೆ ಸಂಸ್ಕೃತದಲ್ಲಿ ಒಂದು ವಿಲಕ್ಷಣ ಶಕ್ತಿ. ಎಲ್ಲರೂ ಅದರ ಸೆಳೆತಕ್ಕೆ ಸಿಗುತ್ತಾರೆ ಸದ್ಗುಣಿ ಹಾಗೂ ಆರೋಗ್ಯವಂತ ಸಂತತಿಗೆ ತಾಯಿಯಾಗು ಎಂದು ಮದುವೆಯಲ್ಲಿ ಕೇಳುತ್ತಾನೆ ಗಂಡ. ಸಂತತಿಯನ್ನು ಪಡೆಯಲೇ ಬೇಕೆಂಬ ನಿಯಮವಿಲ್ಲ. ಸಂತತಿ ಬೇಕಾದವರು ಧಾರ್ಮಿಕ ಕಟ್ಟುಪಾಡನ್ನು ಅನುಸರಿಸಿ ಮದುವೆಮಾಡಿಕೊಳ್ಳಬೇಕು. ಯಾರಿಗೆ ಸಂತಾನ ಬೇಕಾಗಿಲ್ಲವೋ, ಅವರಿಗೆ ಮದುವೆ ಅನಗತ್ಯ.

ಕಾಮತೃಪ್ತಿಗಾಗಿ ಮಾಡಿಕೊಂಡ ಮದುವೆ ನಿಜವಾಗಿ ಮದುವೆಯಲ್ಲ. ಅದು ವ್ಯಭಿಚಾರ. ಗಂಡ ಹೆಂಡಿರಿಬ್ಬರೂ ಸಂತಾನ ಕಾಮ ಇದ್ದರೆ, ಅವರಿಬ್ಬರೂ ಬೆರೆಯಬಹುದು. ಇಲ್ಲದಿದ್ದರೆ ಇಲ್ಲ. ಮದುವೆಯ ಕಲ್ಪನೆಯೇ ಬಹಳ ಮಹತ್ವದ್ದು. ಮದುವೆಯನ್ನು ಪ್ರಾರ್ಥನಾಪೂರ್ವಕ ನೆರವೇರಿಸಬೇಕು. ಇಂದ್ರಿಯಗಳ ಉದ್ರೇಕಕ್ಕೆ-ತೃಪ್ತಿಗೆ ಮದುವೆ ಯಾಗುವುದು ನಮ್ಮ ಪದ್ಧತಿ ಅಲ್ಲ. ಸಂತಾನದ ಅಪೇಕ್ಷೆ ಇದ್ದರೆ ಮಾತ್ರ ಸಂಯೋಗ. ನೈತಿಕ, ಶಾರೀರಕ ಸಾಮರ್ಥ್ಯವಿಲ್ಲದಿದ್ದರೆ ಅಂಥವರು ಸಂಭೋಗದ ಕಡೆ ಹೋಗಬಾರದು. ಮದುವೆ ಅಗ್ನಿಸಾಕ್ಷಿಯಾಗಿ ನಡೆಯುತ್ತದೆ. ಇದುವರೆಗೆ ಕಾಮವಾಸನೆಯ ತೃಪ್ತಿಗೆ ಮದುವೆ ಎಂದು ನೀವು ತಿಳಿದಿದ್ದರೆ ಅದನ್ನು ಮರೆತುಬಿಡಿ. ಪವಿತ್ರವಾದ ಈ ಅಗ್ನಿ ನಿಮ್ಮ ಕಾಮವಾಸನೆಯನ್ನು ಸುಟ್ಟುಬಿಡಲಿ.

ಬ್ರಹ್ಮಚರ್ಯ, ಇಂದ್ರಿಯ ಸಂಯಮ - ಇವು ಅಸ್ವಾಭಾವಿಕ; ನಿಸರ್ಗಳ ಪ್ರೇಮ, ಸ್ವಚ್ಛಂದ ಸ್ವೈರಕಾಮದ ಸಂಪೂರ್ಣ ತೃಪ್ತಿ - ಎಂದು ಈಚೆಗೆ ಹೇಳುತ್ತಿದ್ದಾರೆ. ಇದರಂಥ ವಿನಾಶಕರ ಮಾತು ಮತ್ತೊಂದಿಲ್ಲ. ಈ ಗುರಿಯನ್ನು ಮುಟ್ಟುವ ಶಕ್ತಿ ನಿಮಗೆ ಇಲ್ಲದೇ ಇರಬಹುದು. ಆದರೆ ಗುರಿಯನ್ನು ಕೆಳಗೆ ಇಳಿಸಬೇಡಿ. ಮದುವೆಯ ಗುರಿ ಸಂಯಮ. ಲೈಂಗಿಕ ವಾಸನೆಯನ್ನು ಉತ್ತಮಗೊಳಿಸುವ ವ್ಯವಸ್ಥೆ ಅದು. ಅಧರ್ಮವನ್ನೇ ಧರ್ಮ ಎಂದುಕೊಳ್ಳಬೇಡಿ.

ನಿಮ್ಮಿಬ್ಬರಲ್ಲಿ ಪರಸ್ಪರ ಸಹಾಯ ಅಗತ್ಯ. ಇಬ್ಬರೂ ಸೇರಿ ಸಂಸಾರವನ್ನು ನಿರ್ವಹಿಸ ಬೇಕು. ಒಬ್ಬರಿಗೊಬ್ಬರು ಯಜಮಾನರು. ಉದಾತ್ತ ಮನೋಭಾವ, ಬುದ್ಧಿ ಸಾಮರ್ಥ್ಯ ಇದ್ದರೆ ಗಂಡ ಹೆಂಡತಿಗೆ ಶಿಕ್ಷಕನಾಗಿ ಮಾರ್ಗದರ್ಶಕ ಆಗಬೇಕು. ಅವರಿಗೆ ಸರಿಯಾದ ಮಾರ್ಗವನ್ನು ತೋರಿಸಿ. ಅಡ್ಡದಾರಿನ್ನು ಹಿಡಿಸಬೇಡಿ. ಇಬ್ಬರಿಗೆ ಯಾರಿಗೂ ಗುಟ್ಟು ಗೌಪ್ಯ ಇರಬಾರದು. ಮಿಥ್ಯಾಚಾರಿಗಳು ಆಗಬೇಡಿ, ಆರೋಗ್ಯ ನಾಶಮಾಡಿಕೊಳ್ಳಬೇಡಿ. ಸಂಯಮದಿಂದ ಆರೋಗ್ಯ ಕೆಡುವುದಿಲ್ಲ. ಅದರಿಂದ ಬಲ ಹೆಚ್ಚುತ್ತದೆ. ಈ ಶಾಸ್ತ್ರದಲ್ಲಿ

ವಿಚಾರ ನಿಯಂತ್ರಣ ಮೊದಲನೆಯ ಹೆಜ್ಜೆ. ಮದುವೆ ಎಂದರೆ ಒಂದು ದೀಕ್ಷೆ. ಇದೊಂದು ಹೊಸ ಜನ್ಮ. ನಿಮ್ಮ ವಿಚಾರ ನಿರ್ಮಲವೂ ಬಲಾಢ್ಯವೂ ಆಗಲಿ. ಉದಾತ್ತ ಆದರ್ಶವೇ ನಿಮ್ಮ ಕವಚ. ಹಾಗಿದ್ದರೆ ಲೋಭ, ಮೋಹಗಳು ಕಶ್ಮಲವಿಚಾರ ನಿಮ್ಮನ್ನು ಸೋಕಲಾರವು.

ಅಂದು ಅಂದರೆ, ತಾರೀಖು ೧೮ರ ರಾತ್ರಿ ಪ್ರಾರ್ಥನೆಯ ನಂತರ ೭-೩೦ಕ್ಕೆ ಅಧಿವೇಶನ ಸೇರಿ ರಾತ್ರಿ ೧೦-೩೦ರ ವರೆಗೆ ನಡೆಯಿತು. ಈ ಅಧಿವೇಶನಕ್ಕೆ ಎಲ್ಲ ಸದಸ್ಯರು ಉಪಸ್ಥಿತ ಇಲ್ಲದ್ದರಿಂದ ಆ ದಿನ ಕೈಗೊಂಡ ಗೊತ್ತುವಳಿಯನ್ನು ಮರುದಿನ ಸಮ್ಮೇಳನದ ಮುಂದೆ ಇಡಲಾಗುವುದು ಎಂದು ಅಧ್ಯಕ್ಷರು ಹೇಳಿದರು.

### ನಾಲ್ಕನೇ ದಿನ ೧೯-೪-೧೯೩೭

ಈ ದಿನ ಬೆಳಿಗ್ಗೆ ೭-೧೦ರ ವರೆಗೆ ಕಾರ್ಯಕಾರಿ ಸಮಿತಿಯ ಸಭೆ ನಡೆಯಿತು. ೧೦ ಗಂಟೆಗೆ ಬಹಿರಂಗ ಅಧಿವೇಶನ ಪ್ರಾರಂಭವಾಯಿತು. ಅಧ್ಯಕ್ಷರು ಮುನ್ನಾದಿನ ನಡೆದ ಚರ್ಚೆಯ ಸಾರಾಂಶವನ್ನು ಸಭೆ ಹೇಳಿದರು.

೧೯೩೬ರಲ್ಲಿ ನಡೆದ ಗಾಂಧೀ ಸೇವಾ ಸಂಘದ ಅಧಿವೇಶನದಲ್ಲಿ, ಸಂಘದ ಸದಸ್ಯರು ಖಾದಿ ಮೊದಲಾದ ವಿದಾಯ ಕಾರ್ಯಗಳಲ್ಲಿಯೇ ತೊಡಗಿರಬೇಕು, ಶಾಸನ ಸಭಾ ಮುಂತಾದ ಚುನಾವಣೆಗಳಲ್ಲಿ ಭಾಗ ತೆಗೆದುಕೊಳ್ಳಬಾರದು ಎಂದು ಗೊತ್ತಾಗಿತ್ತು. ಆದರೆ ಸದ್ಯದ ಪರಿಸ್ಥಿತಿಗೆ ಅನುಸರಿಸಿ ೨ ದಿನ ಶಾಸನಸಭಾ ಪ್ರವೇಶದ ಬಗೆಗೆ ಚರ್ಚೆ ನಡೆದು, ಕಾರ್ಯಕಾರಿ ಸಮಿತಿಯವರು ಯಾರಿಗೆ ಅನುಮತಿ ನೀಡುವರೋ ಅವರು ಶಾಸನಸಭೆಗಳಿಗೆ ಹೋಗಬಹುದು ಎಂದು ನಿರ್ಣಯ ಸ್ವೀಕೃತವಾಯಿತು. ಇದಾದನಂತರ ಇನ್ನೂ ಅನೇಕ ನಿರ್ಣಯಗಳು ಅಂಗೀಕೃತವಾದವು. ಕೊನೆಗೆ ಒಬ್ಬರು, ಗ್ರಾಮ ಸೇವೆ ಗುರಿ ಏನು? ರಾಜಕೀಯ ಜಾಗೃತಿಯೋ ಅಥವಾ ಆರ್ಥಿಕ ಸುಧಾರಣೆಯೋ ಎಂಬ ಪ್ರಶ್ನೆ ಎತ್ತಿದರು. ಈ ಪ್ರಶ್ನೆಗೆ ಉತ್ತರವಾಗಿ ಅಧ್ಯಕ್ಷರು ಹೀಗೆ ಹೇಳಿದರು:- ಗಾಂಧೀಜಿಯವರ ಧ್ಯೇಯ ರಾಷ್ಟ್ರೀಯವೇ ಇರುವುದಲ್ಲ? ಗಾಂಧೀಜಿ ಸ್ವತಃ ಹೇಳಿದ್ದಾರೆ. ನಾನು ಹಳ್ಳಿಗಳಲ್ಲಿ ಸೇವೆ ಮಾಡುವಾಗ ಕಾಂಗ್ರೆಸ್ಸಿನ ಹೆಸರನ್ನು ಎತ್ತುವುದಿಲ್ಲ ಎಂದು ಇದನ್ನಂತು ನೀವು ಕೇಳಿಯೇ ಇದ್ದೀರಿ. ಈ ಬಗ್ಗೆ ಚಂಪಾರಣ್ಯದ ಉದಾಹರಣೆ ಸಹ ಕೊಟ್ಟಿದ್ದಾರೆ. ನಾವು ಹಳ್ಳಿಗರ ಸೇವೆ ಮಾಡುತ್ತಾ ಹೋದರೆ ರಾಜಕೀಯ ಜಾಗೃತಿ ತಾನೇ ಆಗುತ್ತದೆ. ಇದರ ಅರ್ಥ, ನಾವು ಕಾಂಗ್ರೆಸ್ಸಿನ ಕೆಲಸ ಮಾಡಬಾರದು ಎಂದೇನಲ್ಲ. ಕಾಂಗ್ರೆಸ್ಸಿನ ಆಜ್ಞೆಯನ್ನು ಪಾಲಿಸುವಾಗ ನಾವು ಎಷ್ಟರ ಮಟ್ಟಿಗೆ ರಾಜಕೀಯ ಕೆಲಸ ಮಾಡುವೆವೋ, ಅಷ್ಟು ರಾಜಕೀಯ ಕೆಲಸವಾಗುವುದು; ಮತ್ತು ಎಷ್ಟರ ಮಟ್ಟಿಗೆ ಸಾಮಾಜಿಕ ಕೆಲಸ ಮಾಡುವೆವೋ ಅಷ್ಟು ಸಾಮಾಜಿಕ ಕೆಲಸವಾಗುವದು. ನಿರಪೇಕ್ಷ ಸೇವೆಯಿಂದಲೇ ರಾಜಕೀಯ ಶಕ್ತಿಯುಂಟಾಗುತ್ತದೆ.

ರಾತ್ರಿ ೮ ಗಂಟೆಗೆ ಕಾರ್ಯಕಾರಿ ಸಮಿತಿ ಸಭೆ ನಡೆಯಿತು.

## ಐದನೇ ದಿನ ೨೦-೪-೧೯೩೭ (ಅಧಿವೇಶನದ ಕೊನೆಯ ದಿನ)

ಈದಿನ ಬೆಳಿಗ್ಗೆ ೭-೨೦ಕ್ಕೆ ಸಮ್ಮೇಳನ ಕಾರ್ಯ ಪ್ರಾರಂಭ ಆಯಿತು. ನಿನ್ನೆ ದಿನ ಸ್ವೀಕೃತವಾದ ಶಾಸನಸಭಾ ಪ್ರವೇಶದ ನಿರ್ಣಯದ ವಿಷಯಕ್ಕೆ ಅಧ್ಯಕ್ಷರು ತಮ್ಮ ಪ್ರತಿಕ್ರಿಯೆಯನ್ನು ಹೀಗೆ ವ್ಯಕ್ತಪಡಿಸಿದರು.

ಈ ನಿರ್ಣಯವೇನೋ ಸ್ವೀಕೃತವಾಯಿತು. ಇದರಿಂದಾಗಿ ಸಂಘದ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು. ಈ ಬಗೆಯಾಗಿ ನಿರ್ಣಯ ಕೈಗೊಳ್ಳುವ ಅಧಿಕಾರ ನಿಮಗೆ ಸಂಪೂರ್ಣ ಉಂಟು. ಆದರೆ ಈ ಹೊಸ ಧೋರಣೆಯನ್ನು ಕಾರ್ಯಗತಗೊಳಿಸಲು, ಅದರಲ್ಲಿ ಶ್ರದ್ಧೆಯುಳ್ಳ ಮತ್ತು ಅದನ್ನು ಕಾರ್ಯರೂಪಕ್ಕೆ ತರುವ ಉತ್ಸಾಹವುಳ್ಳ ವ್ಯಕ್ತಿಯನ್ನು ಅಧ್ಯಕ್ಷರನ್ನಾಗಿ ಮಾಡಬೇಕು. ಈ ಕಾರ್ಯಕ್ಕೆ ನಾನು ಅಸಮರ್ಥನಿದ್ದೇನೆ ಎಂದು ಹೇಳಿದರು.

ಈ ಮೊದಲು ದಿನಗಳಲ್ಲಿ ನಡೆದ ಚರ್ಚೆಗಳನ್ನೂ ಶಾಸನಸಭಾ ಪ್ರವೇಶಕ್ಕೆ ಅಧ್ಯಕ್ಷರು ವ್ಯಕ್ತಪಡಿಸಿದ ಪ್ರತಿಕ್ರಿಯೆಯನ್ನೂ ಗಮನಿಸಿ, ಗಾಂಧೀಜಿ ತಮ್ಮ ಸಮಾರೋಪ ಭಾಷಣ ಮಾಡಿದರು.

**ಗಾಂಧೀಜಿಯ ಸಮಾರೋಪ ಭಾಷಣ :**

"ಇವತ್ತು ನಾನೇ ಸಭಾಪತಿ ಎಂದು ನೀವು ತಿಳಿಯಬಹುದು. ನನಗೇ ಹೆಚ್ಚಾಗಿ ಹೇಳಬೇಕಾಗುವುದು. ವಿಶೇಷವಾಗಿ ಕಿಶೋರಲಾಲರ ಪದತ್ಯಾಗದ ವಿಚಾರದ ವಿಷಯದಲ್ಲಿ. ಅವರು ಅಧ್ಯಕ್ಷ ಪದವಿಯನ್ನು ಬಿಡುವುದಾಗಿ ಆಗ್ರಹವನ್ನು ಮಾಡುತ್ತಿರುವರು. ನನಗೆ ಈ ಮಾತು ಸರಿಬರುತ್ತಿಲ್ಲ. ಅವರು ಅಧ್ಯಕ್ಷ ಪದವಿಯನ್ನು ಬಿಡಲು ಇಷ್ಟಪಡುತ್ತಾರೆಂದು ನನಗೆ ಸಂಶಯ ಕೂಡ ಇರಲಿಲ್ಲ. ಇದರಲ್ಲಿ ಧರ್ಮ ವಿರುದ್ಧ ಕೆಲವು ಅಂಶಗಳಿವೆ. ಅವರ ತ್ಯಾಗದ ಪತ್ರದ ಆಗ್ರಹವು ಅಧರ್ಮದ ಕೆಲಸ. ಅವರು ಇವತ್ತು ಬೆಳಿಗ್ಗೆ ನನ್ನ ಬಳಿಗೆ ಬಂದಿದ್ದರು. ಇದೇ ಕಾರಣದಿಂದ ನನಗೆ ಇಲ್ಲಿಗೆ ಬರಲು ಕೊಂಚ ತಡವಾಯಿತು. ಅವರ ಜೊತೆಗೆ ಮಾತನಾಡುವಾಗ ನಾನು ಅವರಿಗೆ ಕೆಲವು ಪ್ರಶ್ನೆಗಳನ್ನು ಕೇಳಿದೆನು. ಅವರ ಉತ್ತರದಿಂದಲೇ ಇದರಲ್ಲಿ (ಪದತ್ಯಾಗದಲ್ಲಿ) ಅಧರ್ಮವಾಗುತ್ತಿದೆ ಎಂದು ತಿಳಿಯಿತು. ತಿಳಿದು ತಿಳಿದು ಕಿಶೋರಲಾಲ ಧರ್ಮದ ವಿರುದ್ಧ ಕೆಲಸ ಮಾಡುವುದು ಅಸಂಭವ. ಅವರು ಧರ್ಮಭೀರುಗಳು. ಆದರೆ ಧರ್ಮಭೀರು ಜನರೂ ತಿಳಿಯದೆ ಧರ್ಮದ ವಿರುದ್ಧ ಆಚರಿಸುತ್ತಾರೆ. ಇದು ನನ್ನ ಸ್ವಂತ ಅನುಭವ. ಅನ್ಯರ ಅನುಭವದಿಂದಲೂ ಹೇಳುತ್ತೇನೆ. ಧರ್ಮವನ್ನು ಪಾಲಿಸುವ ಇಚ್ಛೆ ಏನೋ ಇರುತ್ತದೆ. ಆದರೂ ಜನರು ಅಧರ್ಮದ ಕೆಲಸವನ್ನು ಮಾಡುತ್ತಾರೆ. ಕಿಶೋರಲಾಲರು ತ್ಯಾಗ ಪತ್ರವನ್ನು ಕೊಡುವ ಆಗ್ರಹವನ್ನು ಬಿಡದಿದ್ದರೆ ಅಧರ್ಮದ ಕೆಲಸವಾಗುವುದು. ನನ್ನ ಹತ್ತಿರ ಇಂತಹ ಅನೇಕ ದೃಷ್ಟಾಂತಗಳಿವೆ. ಆ ದೃಷ್ಟಾಂತಗಳನ್ನು ಇಲ್ಲಿ ಹೇಳಿ ವ್ಯರ್ಥ ಸಮಯವನ್ನು ಕಳೆಯಲಾರೆ. ನಾನು ಕಿಶೋರಲಾಲರಿಗೆ ಒತ್ತಾಯಪಡಿಸಲು ಇಷ್ಟ ಪಡುವುದಿಲ್ಲ.

ಅವರೊಡನೆ ಮಾತನಾಡುವಾಗ ನಾನು ಅವರನ್ನು ಸಾಕಷ್ಟು ಕೇಳಿದೆನು. -ಅವರ ಉತ್ತರದಿಂದಲೂ ಅವರ ತ್ಯಾಗಪತ್ರ ಕೊಡುವುದು ಸಂಘಕ್ಕಾಗಲೀ ಅವರಿಗಾಗಲೀ ಹಿತರಕರವಾಗಲಾರದೆಂದು ತಿಳಿಯುವಂತಿತ್ತು. ಅವರ ಧರ್ಮವನ್ನು ಅವರೇ ಬಲ್ಲರು, ನಾನಂತೂ ತಿಳಿಯಲಾರೆ. ಅವರು ಯಾವುದಕ್ಕೆ ಧರ್ಮ ಎನ್ನುತ್ತಾರೆಯೋ ಅದರಲ್ಲಿ ಅವರಿಗೆ ಸಹಾಯ ಮಾಡುವದಷ್ಟೇ ನನ್ನ ಕೆಲಸ. ಆ ಸ್ಥಿತಿಯಲ್ಲಿ ನಾನು ಮಾಡಲೂ ಬಹುದು. ಆದರೆ ಅವರು ಸ್ಪಷ್ಟವಾಗಿ "ಇದೇ ನನ್ನ ಧರ್ಮ"ವೆಂದು ಹೇಳಲಿಲ್ಲ. ಗೋಮತೀ ಅವರ ಜೊತೆಗಿದ್ದಳು. ಅವಳ ಬುದ್ಧಿಯ ವಿಷಯಕ್ಕೆ ನನ್ನ ಮನಸ್ಸಿನಲ್ಲಿ ಆದರವಿದೆ. ಅವಳನ್ನು ಕೇಳಿದೆ. ಅವಳಿಗೆ ಪೂರ್ಣ ಮಾತನಾಡುವುದೇ ಆಗಲಿಲ್ಲ. ಆದರೆ ಅವಳು ಇಷ್ಟು ಹೇಳಿದಳು.- "ಅವರು ೨ ದಿವಸದಿಂದ ಕಿನ್ನರಾಗಿರುತ್ತಾರೆ'. ನನ್ನ ದೃಷ್ಟಿಯಿಂದ ಇಷ್ಟು ಕಾರಣವು (ತ್ಯಾಗ ಪತ್ರ ಕೊಡಲು) ಸಾಕಷ್ಟು ಆಗಲಾರದು. ಇಷ್ಟರ ಮೇಲಿಂದ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ ಎಂದೂ ನಾನು ಹೇಳುವುದು ಸಾಧ್ಯವಿರಲಿಲ್ಲ. ಆಗ ನಾನು ನಾತಜೀಯವರಿಗೆ ಕರೆ ಕಳಿಸಿದೆ. ಅವರೊಡನೆ ಕಿಶೋರಲಾಲಾರ ಘನಿಷ್ಠ ಸಂಬಂಧ ಇದೆ. ಅದರ ಮೇಲೆ ಕಿಶೋರಲಾಲರ ಸಾಕಷ್ಟು ಶ್ರದ್ಧೆ ಇದೆ. ಸಂಶಯವು ಬಂದಾಗ ಕಿಶೋರಲಾಲರು ನಾತಜೀಯವರ ಆಶ್ರಯವನ್ನು ತೆಗೆದುಕೊಳ್ಳುವರೆಂದು ನಾನು ತಿಳಿದಿದ್ದೆ. ಅವರ ಮನಸ್ಸು ನನ್ನ ಕಡೆಯೇ ಬರುತ್ತಿರುವಂತೆ ತೋರಿತು. ಕಿಶೋರಲಾಲರೊಡನೆ ಮಾತನಾಡುವೆನೆಂದು ಅವರು ಹೇಳಿದರು. ಕಿಶೋರಲಾಲರ ಮೇಲೆ ಅವರು ಪ್ರಭಾವವನ್ನು ಬೀರಬೇಕೆಂದು ನನ್ನ ಇಷ್ಟವಿರಲಿಲ್ಲ. ಗೋಮತಿ ಮತ್ತು ಅವರು ಸ್ಪಷ್ಟವಾಗಿ ಅಧ್ಯಕ್ಷ ಪದತ್ಯಾಗವೇ ಧರ್ಮವೆಂದು ಹೇಳಿದ್ದರೆ ನಾನು ನಿಮಗೆ ಅವರು ತ್ಯಾಗದ ಪತ್ರವನ್ನು ಕೊಡಲಿ ಎಂದು ಹೇಳುತ್ತಿದ್ದೆ. ಆದರೆ ನಾಥಜೀ ಹೇಳಿದರು- "ನಾನು ಸ್ವಯಂ ಈಗ ಏನೂ ಹೇಳಲಾರೆ. ಈ ವಿಷಯದಲ್ಲಿ ನೀವು ಕಿಶೋರಲಾಲರ ಭಾಯಿಗೆ ಅಪ್ಪಣೆ ಮಾಡಿರಿ." ಸಾಮಾನ್ಯವಾಗಿ ನಾನು ಮಕ್ಕಳಿಗೂ ಅಪ್ಪಣೆ ಕೊಡುವುದಿಲ್ಲ. ಆದರೆ ಒಮ್ಮೊಮ್ಮೆ ಮುದುಕರಿಗೂ ಅಪ್ಪಣೆ ಕೊಟ್ಟುಬಿಡುತ್ತೇನೆ. ನಾನು ಒಪ್ಪಿದೆನು. ಈ ಸಮಯದಲ್ಲಿ ಈ ಸ್ಥಾನತ್ಯಾಗವು ಆಗಲೇಕೂಡದು ಎಂದು ಹೇಳಿದೆ. ಈ ಅಪ್ಪಣೆಯನ್ನು ಪಾಲಿಸಲು ಅವರಿಗೆ ದುಃಖವಾಗಲಾರದು. ಯಾಕೆಂದರೆ ಅವರಲ್ಲಿ ಧರ್ಮ ಜಾಗೃತಿ ಇದೆ. ಅವರು ಒಪ್ಪಿಕೊಂಡಿರುವರು. ಈ ವಿಷಯುವನ್ನು ನೀವು ತಿಳಿಯುವುದು ಅವಶ್ಯಕವೆಂದು ನಿಮಗೆ ಹೇಳಿದ್ದೇನೆ. ಅವರ ಮನಸ್ಸಿನಲ್ಲಿರುವ ಸಂಶಯವನ್ನು ದೂರ ಮಾಡುವುದು ನಿಮ್ಮ ಮತ್ತು ನನ್ನ ಕರ್ತವ್ಯ. ನಾವು ಸತ್ಯ ಮತ್ತು ಅಹಿಂಸೆಯ ಪೂಜಾರಿಗಳು. ಅವುಗಳನ್ನು ದೃಢವಾಗಿ ಪಾಲಿಸುವೆವು ಎಂದು ಎದೆ ಮುಟ್ಟಿ ಯಾರು ಹೇಳಬಲ್ಲರು! ಹಾಗೆ ಅಧಿಕಾರದಿಂದ ಹೇಳುವುದು ಮಿಥ್ಯಾಭಿಮಾನವೇ ಆದೀತು. ನಾವು ಅಧಿಕಾರದಿಂದ ಹಾಗೆ ಹೇಳಲಾರೆವು; ಆದರೆ ನಾವು ಆ ಪ್ರಯತ್ನಕ್ಕೆ ಮಾತ್ರ ಅಧಿಕಾರಿಗಳು. ಈಗ ನಾವು ಸತ್ಯ ಮತ್ತು ಅಹಿಂಸೆಯನ್ನು ಬಿಡುತ್ತಿರುವೆವೆಂದು ಕಿಶೋರಲಾಲರಿಗೆ ಹೆದರಿಕೆಯಾಗಿದೆ. ಪಾರ್ಲಿಮೆಂಟರಿ ಪ್ರೋಗ್ರಾಮಿನಲ್ಲಿ ತುಂಬಾ ಆವೇಶವೂ ಬರುತ್ತದೆ.

ಇದರಿಂದ ನಮಗೆ ಸ್ವರಾಜ್ಯ ಬೇಗ ಸಿಗುವುದೆಂದು ನಾವು ತಿಳಿಯುತ್ತೇವೆ. ಇದರಿಂದ ಸಾಧನದ ವಿವೇಕವು ಉಳಿಯುವುದಿಲ್ಲ. ಮನುಷ್ಯನಲ್ಲಿರುವ ಪಶುತ್ವವು ಜಾಗೃತವಾಗುತ್ತದೆ. ಈ ಪ್ರೋಗ್ರಾಮಿನಲ್ಲಿ ಪಶುತ್ವಕ್ಕೆ ಸಾಕಷ್ಟು ಆಸ್ಪದವಿದೆ ಎಂದು ಒಪ್ಪುತ್ತೇನೆ. ಮತ್ತು ಮನುಷ್ಯನಲ್ಲಿ ಪಶುತ್ವವೂ ಬೇಕಾದಷ್ಟಿದೆ ಎಂಬುದೂ ಗೊತ್ತಿದ್ದ ವಿಷಯವೇ. ಪರಮಾತ್ಮನು ನಮ್ಮ ಮತ್ತು ಪಶುಗಳಲ್ಲಿ ಬಾಹ್ಯ ಭೇದವನ್ನಿಟ್ಟಿದ್ದಾನೆ. ಹೇಗೆಂದರೆ, ನಮಗೆ ಕೈಗಳಿವೆ, ಪಶುಗಳಿಗೆ ಇಲ್ಲ. ಆದರೆ ಇದಕ್ಕಿಂತಲೂ ಆಂತರಿಕ ಭೇದವು ಹೆಚ್ಚು ಮಹತ್ವದಿದೆ. ಆಂತರಿಕ ಭೇದದ ಕುರುಹು ಎಂದರೆ ಸಾರಾಸಾರ ವಿವೇಕ. ನಮ್ಮ ಪಶುತ್ವವೇನೋ ಯಾವ ಸ್ಥಿತಿಯಲ್ಲಿಯೂ ಪ್ರಕಟವಾಗಿಯೇ ಆಗುವುದು. ಕೌನ್‌ಸಿಲ್ ಪ್ರೋಗ್ರಾಮ್‌ನಲ್ಲಿ ಅದು ಪ್ರಕಟವಾಗುವ ಪ್ರಸಂಗಗಳು ಹೆಚ್ಚು ಇರಬಹುದು. ಆದರೆ ನಮಗೆ ಮನುಷ್ಯ ಜನ್ಮ ದೊರೆತಿದೆ. ಪಶುತ್ವವನ್ನು ಕಡಿಮೆ ಮಾಡುವುದರಲ್ಲಿ ಅದರ ಸಾರ್ಥಕವಿದೆ. ಪಶುಗಳಲ್ಲಿ ಮತ್ತು ನಮ್ಮಲ್ಲಿರುವ ಭೇದವನ್ನು ನಮ್ಮ ಆಚರಣದಿಂದ ಸಿದ್ಧಮಾಡಬೇಕು. ಇದರಲ್ಲಿಯೇ ಮನುಷ್ಯತ್ವವಿದೆ. ಇದರಲ್ಲಿ ದೇವತ್ವವೇನೂ ಇಲ್ಲ. ನಾನು ಬಲ್ಲೆ ಕೌನ್‌ಸಿಲ್‌ಗಳಲ್ಲಿ ಕೆಲಸ ಮಾಡುವಾಗ ನಾವು ಇಂಗ್ಲೀಷರಿಗೆ ಬೈಯಬಹುದು. ಬಿರುಸು ಶಬ್ದಗಳಲ್ಲಿ ವ್ಯಾಖ್ಯಾನಗಳನ್ನು ಕೊಡ ಬಹುದು. ಆದ್ದರಿಂದ ಬಹಳ ಹೆಮ್ಮೆಯು ಅನಿಸುತ್ತದೆ. ಇವುಗಳಿಂದ ನಾವು ಪಾರಾಗಬೇಕು. ಆದ್ದರಿಂದ ನಮಗೆ ಇಂತಹ ವಿಷಯಗಳಲ್ಲಿ ವಿವೇಕ ಉಳ್ಳಂಥ ಮನುಷ್ಯ ಬೇಕು. ಆದ್ದರಿಂದ ನಾವು ಕಿಶೋರಲಾಲರನ್ನು ಸಭಾಪತಿ ಮಾಡುತ್ತೇವೆ. ಗಾಂಧೀ ಸೇವಾ ಸಂಘದ ಕೆಲಸವು ದುಡ್ಡಿನ ಶಕ್ತಿಯಿಂದ ನಡೆಯಲಾರದು. ಹಾಗಿದ್ದರೆ ನಾವು ಜಮುನಾಲಾಲರನ್ನು ಸಭಾಪತಿ ಮಾಡುತ್ತಿದ್ದೆವು. ಮತ್ತು ಅವರು ಆಗುತ್ತಿದ್ದರು. ಆದರೆ ಅವರು ಯೋಗ್ಯ ಮನಷ್ಯನನ್ನು ನೋಡಿ ಎಂದು ಹೇಳಿದರು ಮತ್ತು ತಾವು ಸ್ವತಃ ದೂರವಾದರು. ಜಮುನಾಲಾಲರ ಸಂಘಕ್ಕೋಸ್ಕರ ಒಂದು ಕೋಟಿ ರೂಪಾಯಿ ಸಂಗ್ರಹಿಸಿದರೆ ಅದರಿಂದ ಸಂಘಕ್ಕೆ ಲಾಭವಾಗಲಾರದು, ಹಾನಿಯೇ ಆಗುವುದು. ಕಿಶೋರಲಾಲರ ಹತ್ತಿರ ಒಂದು ಪೈಸೆ ಕೂಡ ಇಲ್ಲ. ಎಂದೇ ಅವರು ಯೋಗ್ಯ ಸಭಾಪತಿ ಎಂದು ತಿಳಿಯಲಾಗಿದೆ.

ಕಿಶೋರಲಾಲರ ಸಂಶಯವು ಪಾರ್ಲಿಮೆಂಟರಿ ಪ್ರೋಗ್ರಾಮ್ ತುಂಬ ಪ್ರಲೋಭನ ವನ್ನು ಉಂಟುಮಾಡುವಂತಹದಿದೆ ಎಂದು. ಆದರೆ ನಾನು ಹೇಳುವುದೇನೆಂದರೆ ನಾವು ಇಷ್ಟರಿಂದಲೇ ಹೆದರಿ ಅದರಿಂದ ದೂರವಾಗುವುದು ಸರಿಯೇ? ನಾವು ಪ್ರಲೋಭನಗಳನ್ನು ಎದುರಿಸಲೇ ಬಾರದೇ? ಇದರ ಮೇಲೆ ಕಿಶೋರಲಾಲ ಹೇಳುತ್ತಾರೆ, ಇದುವರೆಗೂ ನಾವು ಈ ಪ್ರಲೋಭಗಳಿಂದ ದೂರ ಇದ್ದೇವೆ. ಇನ್ನೂ ಬೇರೆ ಮಹತ್ವಪೂರ್ಣ ಕೆಲಸಗಳನ್ನು ಮಾಡುವುದು ಉಳಿದಿದೆ. ಈ ಸ್ಥಿತಿಯಲ್ಲಿ ನಾವು ಈ ಸಂಕಟವನ್ನು ನಾವಾಗಿಯೇ ಸುಮ್ಮಸುಮ್ಮನೇ ಏಕೆ ಮೈಮೇಲೆ ಕೆಡವಿಕೊಳ್ಳಬೇಕು? ಎಂದು ಮುಂತಾಗಿ. ಆದರೆ ನಾನು ಹೇಳುತ್ತೇನೆ, ನೀವು ನನ್ನ ಹೇಳಿಕೆ ಮೇಲೆ ಹೋಗುತ್ತಿರುವಿರಿ. ಅದರ ಹೊಣೆಯು ನನ್ನ ತಲೆಯ ಮೇಲಿದೆ. ಇದುವರೆಗೂ ನಾವು ಹೋಗಿಲ್ಲ. ಆದರೆ ನಾವು ಮನಸ್ಸಿನಿಂದಲೂ

ಆ ಪ್ರಲೋಭನಗಳ ಸ್ಪರ್ಷವಿಲ್ಲದೆ ಇದ್ದೇವೆ ಎಂದು ಯಾರಾದರೂ ಹೇಳಬಲ್ಲರೇ? ಯಾವ ವಿಷಯವನ್ನು ನಾವು ಬಿಟ್ಟುಬಿಟ್ಟಿದ್ದೇವೆಯೋ ಅದನ್ನೇ ಸತ್ಯ ಮತ್ತು ಅಹಿಂಸೆಯ ದೃಷ್ಟಿಯಿಂದ ಸ್ವೀಕರಿಸುವುದು ಧರ್ಮವಾಗಬಹುದು. ನಮ್ಮ ಧರ್ಮವು ಏಕಪ್ರಕ್ಷೀಯವಲ್ಲ. ಕಿಶೋರಲಾಲರ ಮನಸ್ಸಿನಲ್ಲಿ ಇಂಥ ಶಂಕೆಗಳಿವೆ. ಇದಲ್ಲದೇ ಈಚೀಚೆಗೆ ಕಾಂಗ್ರೆಸ್ಸಿನ ಗೊತ್ತುವಳಿಗಳ ಭಾಷೆ ಸತ್ಯವನ್ನು ಸ್ಪಷ್ಟಮಾಡುವುದಿಲ್ಲ. ಎಂದು ಅವರ ಆಕ್ಷೇಪಣೆ. ಈ ಆಕ್ಷೇಪಣೆಯೂ ಏಕಪಕ್ಷೀಯವೇ. ಗೊತ್ತುವಳಿಯನ್ನು ಮುಂದುವರಿಸುವವನು ತನ್ನ ವಿಚಾರಗಳನ್ನು ಹೇಳುತ್ತಾನೆ. ಕಾಂಗ್ರೆಸ್ಸಿನ ಗೊತ್ತುವಳಿಗಳು ಕಾಂಗ್ರೆಸ್ಸಿನ ದೃಷ್ಟಿಯಿಂದ ಏನು ಸತ್ಯವೆಂದು ಕಾಣುತ್ತದೆಯೋ ಅದನ್ನೇ ಹೇಳುತ್ತೇವೆ. ಆದರೆ ನಮಗೆ ಅದರಲ್ಲಿ ಅಸತ್ಯದ ಗಂಧವು ಬರುತ್ತದೆ. ಗೊತ್ತುವಳಿಯು ಹೇಳುತ್ತದೆ. ನಾವು ಸಂವಿಧಾನ (Constitution)ವನ್ನು ಮುರಿದು ಹಾಕಲು (Wreck) ಹೋಗುತ್ತಿದ್ದೇವೆ ಎಂದು ಯಾವುದನ್ನು ನಾವು ಅಳಿಸಿಬಿಡಲು ಅಪೇಕ್ಷಿಸುತ್ತೇವೆಯೋ ಅದರ ವಿಚಾರವನ್ನಾದರೂ ನಾವು ಏಕೆ ಮಾಡಬೇಕು? ಯಾವುದು ನಮಗೆ ಬೇಕಿಲ್ಲವೋ ಅದರ ಕಡೆ ನಾವೇಕೆ ನೋಡಬೇಕು ಎಂಬ ಮನೋಭಾವ ೧೯೨೦ರಲ್ಲಿ ನಮ್ಮದಾಗಿತ್ತು.

ಕಿಶೋರಲಾಲರ ಮನಸ್ಸಿನಲ್ಲಿ ಕೊರೆಯುವುದೇನೆಂದರೆ ನಾವು ಇದುವರೆಗೂ ನೀರಿನ ಪ್ರವಾಹವನ್ನು ತಡೆದಿಟ್ಟಿದ್ದೆವು. ಈಗ ಅದರ ಕಟ್ಟನ್ನು ಒಡೆಯುತ್ತಿದ್ದೇವೆ. ಆದ್ದರಿಂದ ಅದು ಅವಶ್ಯವಾಗಿ ಅಧೋಮುಖವಾಗಿ ಹೋಗುವುದು. ಇದುವರೆಗೂ ನಾವು ಕೌನ್ಸಿಲ್ಲಾ, ಸ್ಕೂಲ್, ಕೋರ್ಟ್ ಮುಂತಾದವುಗಳನ್ನು ಬಹಿಷ್ಕರಿಸುವ ಮಾತುಗಳನ್ನಾಡಿದ್ದೆವು, ಮತ್ತು ಅವುಗಳನ್ನು ಅಳಿಸಿಬಿಡಲು ಬಯಸಿದ್ದೆವು. ಆದರೆ ಈಗ ಬೇರೆ ಭಾಷೆಯನ್ನಾಡುತ್ತಿದ್ದೇವೆ. ಈ ಮಾತು ಕಿಶೋರಲಾಲರಂತೆ ಉಳಿದವರ ಮನಸ್ಸಿನಲ್ಲಿಯೂ ಚುಚ್ಚುತ್ತಿದೆ. ಇದೆಲ್ಲ ಆಕ್ಷೇಪಣೆ ಕಾಂಗ್ರೆಸ್ಸಿನ ಘೋಷಣಾ ಪತ್ರವನ್ನು ಮುಂದಿಟ್ಟುಕೊಂಡು ಮಾಡಲಾಗುತ್ತದೆ. ನಾವು ಮ್ಯಾನಿಫೆಸ್ಟೋ (ಘೋಷಣಾ ಪತ್ರ)ದ ಭಾಷೆಯ ಮೇಲೆ ಹೇಗೆ ವಿಚಾರಮಾಡಲು ಸಾಧ್ಯ? ಮ್ಯಾನಿಫೆಸ್ಟೋ ಜವಾಹರಲಾಲರೊಬ್ಬರದ್ದೇನಲ್ಲ. ಅದರಲ್ಲಿ ವಲ್ಲಭಬಾಯಿ, ರಾಜೇಂದ್ರಬಾಬು ಮತ್ತು ನನ್ನದೂ ಕೈವಾಡವಿದೆ. ಇದನ್ನು ನಾನು ಮರೆತಿಲ್ಲ. ನಾನು ಅದನ್ನು ೨-೩ ಸಾರಿ ಓದಿದೆ. ಆ ಮ್ಯಾನಿಫೆಸ್ಟೋದೊಂದಿಗೆ ಕಾಂಗ್ರೆಸ್ಸಿನ ಪದಗ್ರಹಣ ಸಂಬಂಧದ ಗೊತ್ತುವಳಿಯು ವಿಸಂಗತವಲ್ಲ. ಆ ಗೊತ್ತುವಳಿಯ ಕಾರ್ಯಗತ ಮಾಡುವ ಭಾಗವನ್ನು ನಾನು ಬರೆದಿರುವೆ. ಇದು ಗೊತ್ತುವಳಿಯ ಮುಕ್ಕಾಲು ಭಾಗದೊಂದಿಗೂ, ಮ್ಯಾನಿಫೆಸ್ಟೋ (ಘೋಷಣಾಪತ್ರ)ದೊಂದಿಗೂ ಸರಿಹೋಗುವುದಿಲ್ಲವೆಂದು ಜವಾಹರಲಾಲರು ಹೇಳಿದರು. ಮ್ಯಾನಿಫೆಸ್ಟೋದ ಅರ್ಥ ಅವರೊಂದು ಬಗೆಯಾಗಿ ಮಾಡಿದರೆ ನಾನೊಂದು ಬಗೆಯಾಗಿ ಮಾಡುತ್ತೇನೆ. ನನಗೆ ಅದರಲ್ಲೇನೂ ಆಕ್ಷೇಪಣೆಯಿಲ್ಲ. ಆ ಶಬ್ದಗಳಲ್ಲಿ ಎರಡರ್ಥಗಳಿವೆ. ಇದರಲ್ಲೇನೂ ಸಂಶಯವಿಲ್ಲ. ಆದರೆ ಸತ್ಯಾಗ್ರಹಿಯು ಎರಡರ್ಥದ ಭಾಷೆಯನ್ನೂ ಮಾತಾಡಬಹುದು. ಸತ್ಯದ ರೂಪವನ್ನು ನಾನು ತಿಳಿದು ಕೊಂಡಂತೆ ಸತ್ಯಾಗ್ರಹಿಯ ಮುಖದಿಂದ ಹೊರಟ ಶಬ್ದಗಳಿಗೆ ಒಂದೇ ಅರ್ಥ ಇರುವ

ಅವಶ್ಯಕತೆ ಇಲ್ಲ. ಅವನು ವ್ಯಕ್ತಪಡಿಸುವ ಭಾಷೆಗೆ ಎರಡೇಕೆ, ಅನೇಕ ಅರ್ಥಗಳೂ ಆಗಬಹುದು. ಇಷ್ಟೇ, ಆ ಅರ್ಥಗಳು ಗೌಪ್ಯವಾಗಿರಬಾರದು. ಯಾರಿಗೂ ಮೋಸ ಮಾಡುವಂತಿರಬಾರದು ಮತ್ತು ಆ ಅರ್ಥಗಳು ಅನಿವಾರ್ಯವಾಗಿರಬೇಕು. ಸತ್ಯವನ್ನು ಮರೆಮಾಚಲು ಆ ಭಾಷೆಯ ಪ್ರಯೋಗವಾಗಬಾರದು. ಎರಡರ್ಥದ ಭಾಷೆಯನ್ನು ಪ್ರಕಟವಾಗಿಯೇ ನಾವು ಆಡುತ್ತಿರುವಾಗ ಸತ್ಯವನ್ನು ಬಿಟ್ಟಂತಾಗುವುದಿಲ್ಲ. ಒಮ್ಮೊಮ್ಮೆ ಹೀಗೆಯೂ ಆಗುತ್ತದೆ, ನಮ್ಮ ಮನಸ್ಸಿನಲ್ಲಿ ಒಂದೇ ಅರ್ಥವಿರುತ್ತದೆ, ಆದರೆ ಜನರು ನಮ್ಮ ಶಬ್ದಗಳ ಅನೇಕ ಅರ್ಥಗಳನ್ನು ಮಾಡಿಕೊಳ್ಳುತ್ತಾರೆ. ಇದರಲ್ಲಿಯೂ ಸತ್ಯದ ತ್ಯಾಗವಿಲ್ಲ. ಇದಕ್ಕೆ ದೊಡ್ಡ ಉದಾಹರಣೆಯೆಂದರೆ ವೇದಗಳು. ಗೀತೆಗೂ ಆಧ್ಯಾತ್ಮಿಕ ಮತ್ತು ಭೌತಿಕ ಎಂದು ಎರಡು ಅರ್ಥಗಳಿವೆ. ಇನ್ನೂ ಅನೇಕ ಅರ್ಥಗಳಿವೆ. ತುಲಸೀದಾಸ ಭಾಷೆಯಲ್ಲಿ ಒಂದೇ ಅರ್ಥವಿದೆಯೆಂದು ನಾವು ಹೇಳಲಾರೆವು. ಪಾಪ! ತುಳಸಿದಾಸರಿಗೂ ಗೊತ್ತಿರಲಾರವು, ಅಂತ ಅನೇಕ ಅರ್ಥಗಳನ್ನು ಜನರು ಅವರ ಭಾಷೆಯಿಂದ ತೆಗೆಯುತ್ತಾರೆ. ಇದರಿಂದ ಗ್ರಂಥಕಾರರಾಗಲಿ, ವ್ಯಾಖ್ಯಾನಕಾರರಾಗಲಿ ಅಥವಾ ಟೀಕಾಕಾರರಾಗಲಿ ಸುಳ್ಳಾಡುವವರು ಎಂದು ಸಿದ್ಧವಾಗುವುದಿಲ್ಲ. ಸತ್ಯದ ಸೇವಕನ ಭಾಷೆಯಲ್ಲಿ ಯಾವಾಗಲೂ ಒಂದೇ ಅರ್ಥವು ಹೊರಡುವುದಿಲ್ಲ. ಇದೇನೂ ಹೆದರುವಂಥ ಮಾತಲ್ಲ. ಅದೇ ಗೊತ್ತುವಳಿಯಿಂದ ನಾನು ಒಂದು ಅರ್ಥವನ್ನು ತೆಗೆದರೆ ಜವಾಹರಲಾಲರು ಇನ್ನೊಂದು ಅರ್ಥವನ್ನು ತೆಗೆಯುತ್ತಾರೆ. ನಿಮ್ಮದೇ ಅರ್ಥವು ಸರಿ ಇರಬೇಕೆಂದೇನೂ ಅಗತ್ಯವಿಲ್ಲ ಎಂದು ನಾನು ಅವರಿಗೆ (ಜವಾಹರಲಾಲರಿಗೆ) ಹೇಳಿದೆ. ಅಧಿಕಾರ ಸ್ವೀಕಾರ (Office acceptance)ದ ಪ್ರಶ್ನೆಯ ಮೇಲೆ ಅವರ ಮತ್ತು ನನ್ನ ವಾದವಿವಾದವಾಯಿತು. ಆ ಗೊತ್ತುವಳಿ ಏನೋ ಸ್ವತಂತ್ರವಾಗಿತ್ತು. ಆದರೆ ಅದು ಮ್ಯಾನಿಫೆಸ್ಟೋದ ವಿಚಾರಧಾರೆಗೆ (ಬ್ಯಾಗ್ರೌಂಡ್) ಸರಿಹೊಂದುವುದಿಲ್ಲವೆಂದು ಜವಾಹರಲಾಲರ ಹೇಳಿಕೆ. ನೀವು ಇಷ್ಟಪಟ್ಟರೆ ಆ ವಿಚಾರಧಾರೆಯ ಜೊತೆಗೆ ಅದು ಸರಿಹೋಗುವಂತೆ ಕೂಡಿಸಿ ತೋರಿಸುವೆನು ಎಂದು ನಾನು ಹೇಳಿದೆ. ಯಾಕೆಂದರೆ ಸಂವಿಧಾನವನ್ನು ಅಳಿಸಿಬಿಡುವೆನು ಎಂದು ನಾನು ಹೇಳುವಾಗ ಅಹಿಂಸೆಯಿಂದ ಅಳಿಸಿಬಿಡುವೆನೆಂದೇ ನನ್ನ ಅರ್ಥ. ನನ್ನ ನಿಬಂಧನೆ (ಶರ್ತ)ಯನ್ನು ಲಕ್ಷದಲ್ಲಿಡಿರಿ. ನಾನಂತೂ ಅದರಲ್ಲೇ ಇದ್ದು ಸ್ವತಂತ್ರವನ್ನು ನಿರ್ಮಿಸಬಲ್ಲೆ. ನಮ್ಮೊಳಗೆ ನಿರ್ಭಯತೆ ಇದ್ದರೆ, ಸ್ವತಂತ್ರತೆ ಇದ್ದರೆ ನಾವು ಸಂವಿಧಾನವನ್ನು ಅಹಿಂಸೆಯಿಂದಲೂ ತೊಡೆದುಹಾಕಬಲ್ಲೆವು. ಈ ಪ್ರಕಾರ ಇದು ಆಗಬಹುದೆಂದು ಜವಾಹರಲಾಲರು ಒಪ್ಪುವುದಿಲ್ಲ. ಅವರಿಗೆ ಮನುಷ್ಯ ಜಾತಿಯ ಮೇಲೆ ಕೊಂಚ ಅವಿಶ್ವಾಸವಿದೆ. ಅವರು ಹೇಳುತ್ತಾರೆ, ನಾವು ಶಾಸನಸಭೆಯಲ್ಲಿ ಏನೂ ಮಾಡಲು ಸಾಧ್ಯವಿಲ್ಲ ಎಂದು. ಆದ್ದರಿಂದ ವರ್ಗ ಸಂಘದಲ್ಲಿ ಅವರ ಭರವಸೆಯಿದೆ. ನನ್ನ ಮತ್ತು ಅವರಲ್ಲಿ ಇದೊಂದು ಮೂಲಭೂತ ಭೇದ. ನಾನು ಹೇಳುತ್ತೇನೆ "ಸಂಪತ್ತಿ" (Capital) ಏನೋ ಜಡ ವಸ್ತು. ಆದರೆ ಧನಿಕನೇನು ಜಡನಲ್ಲ. ಅವರ ಹೃದಯ ಪರಿವರ್ತನವಾಗಬಹುದು" ಹೀಗೆ ಎಂದೂ ಆಗಿಲ್ಲವೆಂದು ಅವರ ಉತ್ತರ. ತಮ್ಮ ಮಾತಿನ ಸಮರ್ಥನೆಗಾಗಿ ಇತಿಹಾಸದ ಪ್ರಮಾಣವನ್ನು ಕೊಡುತ್ತಾರೆ. ನಾನು ಸುಮ್ಮನೆ ಕೇಳುತ್ತೇನೆ. ಆದರೆ ಇದುವರೆಗೂ ಆಗದೇ ಇದ್ದದ್ದನ್ನು

ಅಹಿಂಸೆಯು ಮಾಡದಿದ್ದರೆ ಇನ್ಯಾವ ಶಕ್ತಿಯು ಮಾಡಬಹುದು? ಎಂದು ನಾನು ಕೇಳುತ್ತೇನೆ. ಹಾಗೆ ಆಗದಿದ್ದರೆ ಅಹಿಂಸೆಯ ಮಹತ್ವವೇ ಇಲ್ಲವಾಗುವುದು. ನಾನಂತೂ ಸಾಯುವವರೆಗೂ ಇದನ್ನು ಒಪ್ಪಲಾರೆ ಅರ್ಥಾತ್ ಸಾಯುವವರೆಗೆ ಇದೇ ನನ್ನ ವಿಶ್ವಾಸವಿದ್ದರೆ. ಇವತ್ತಂತೂ ಅಹಿಂಸೆಯೇ ಗೆಲ್ಲುತ್ತದೆಂದು ನನ್ನ ವಿಶ್ವಾಸವಿದೆ. ನಾವೆಲ್ಲರೂ ಸೋತರೆ ಅಹಿಂಸೆಯು ಗೆದ್ದೇ ಗೆಲ್ಲುವುದು. ನಾನಂತೂ ಸಾಯುವತನಕ ಇದನ್ನೇ ಹೇಳುವೆನು. ನಾನೇನೋ ಸರ್ಕಾರದ ಹೃದಯವು ಬದಲಾಗಲೆಂದು ಬಯಸುತ್ತೇನೆ. ಇದಕ್ಕೋಸ್ಕರವೇ ನಾವು ಕೌನ್‌ಸಿಲ್‌ಗಳಲ್ಲಿ ಹೋಗಿರುವೆವು. ನಾನು ಅಧಿಕಾರ ಗ್ರಹಣ ಮಾಡುವುದಾದರೆ ಸ್ವರಾಜ್ಯಕ್ಕಾಗಿ, ಮತ್ತು ನಾವು ಅಧಿಕಾರ ತೆಗೆದುಕೊಳ್ಳಲು ಸಾಧ್ಯ ವಾಗದಿದ್ದರೆ ನಮಗೇನೂ ಹಾನಿಯಿಲ್ಲ. ನಾನೇನೂ ಕಳೆದುಕೊಳ್ಳಲು ಕುಳಿತಿಲ್ಲ. ಯಾವ ಪರಿಸ್ಥಿತಿಯಲ್ಲಿಯೂ ನನ್ನದಂತೂ ವಿಜಯವೇ ವಿಜಯ. ಸಂವಿಧಾನವನ್ನು ನಷ್ಟಪಡಿಸುವ ಉದ್ದೇಶದಿಂದ ಅಧಿಕಾರ ಗ್ರಹಣ ಮಾಡುವುದು ಅಸಂಗತವೆಂದು ತಿಳಿಯುವವನು ಅಧಿಕಾರವನ್ನು ಸ್ವೀಕರಿಸುವುದಿಲ್ಲ. ಆದರೆ ನಾವು ಸತ್ಯ ಮತ್ತು ಅಹಿಂಸೆ, ನಿರ್ಭಯತೆ ಮತ್ತು ನಿಸ್ವಾರ್ಥತೆ ಇವುಗಳ ವ್ರತವನ್ನು ತೆಗೆದುಕೊಂಡು ನಮ್ಮದೇ ನಿಬಂಧನೆಗಳ ಮೇಲೆ ಮಂತ್ರಿ ಪದವನ್ನು ಸ್ವೀಕರಿಸಿದರೆ ಸ್ವರಾಜ್ಯದ ಯುದ್ಧವನ್ನು ಗೆಲ್ಲಬಹುದು. ಮತ್ತು ಈಗಿರುವ ಸಂವಿಧಾನವನ್ನು ತೆಗೆದು ಹಾಕಿ ಅದರ ಸ್ಥಾನದಲ್ಲಿ ನಾವೇ ಹೊಸದಾಗಿ ಮಾಡಿದ ಸಂವಿಧಾನವನ್ನು ಸ್ಥಿರಪಡಿಸಬಹುದು. ಜವಾಹರಲಾಲರ ವಿಚಾರವು ಹೀಗಿಲ್ಲ. ನನ್ನ ಮತ್ತು ಅವರ ನಂಬಿಕೆಗಳು ಬೇರೆ ಬೇರೆಯಾಗಿವೆ. ಇದೇನೂ ಮುಚ್ಚಿಡುವ ಮಾತಲ್ಲ. ರಾಜೇಂದ್ರಬಾಬು, ವಲ್ಲಭಬಾಯಿ, ರಾಜಾಜಿ ಮೊದಲಾದವರ ಬುದ್ಧಿ ಒಂದು ದಿಶೆಯಲ್ಲಿ ಕೆಲಸಮಾಡುತ್ತದೆ. ಜವಾಹರಲಾರರ ಬುದ್ಧಿ ಇನ್ನೊಂದು ದಿಶೆಯಲ್ಲಿ. ಆದರೂ ನಾವೆಲ್ಲಾ ಜೊತೆ ಜೊತೆಗೇ ಕೆಲಸ ಮಾಡುತ್ತಿರುವೆವು. ಇದು ಆಶ್ಚರ್ಯದ ಮಾತೇ. ಆದರೆ ಹೀಗೆ ಮಾಡುವುದು ಅತ್ಯಂತ ಅವಶ್ಯಕವಾಗಿದೆ. ಒಟ್ಟಿನಲ್ಲಿ ನಮಗೆ ಈ ಜಗತ್ತಿನಲ್ಲಿರುವುದಿದೆ. ಬೇರೆ ಬೇರೆ ಅಭಿಪ್ರಾಯ ಉಳ್ಳ ದೇಶಭಕ್ತರ ಜೊತೆ ಕೆಲಸ ಮಾಡುವುದಿದೆ. ಆದ್ದರಿಂದ ಪರಸ್ಪರ ಹೊಂದಿಕೊಂಡು ಒಡಂಬಡಿಕೆಯಿಂದ ಕೆಲಸ ಮಾಡಲೇಬೇಕು. ಇದಕ್ಕೋಸ್ಕರ ನಾವೇ ಮುಂದಾಗಿ(Initiative) ತೆಗೆದುಕೊಂಡು ಪ್ರಯತ್ನ ಮಾಡಬೇಕಾಗುವುದು. ಜವಾಹರಲಾಲರು ನಿಸ್ಸಂಶಯವಾಗಿ ಬಹಳ ತೀಕ್ಷ್ಣವ್ಯಕ್ತಿ. ಬಿರುಸಿನ ಮಾತುಗಳನ್ನು ಆಡಿಬಿಡುತ್ತಾರೆ. ಒಮ್ಮೊಮ್ಮೆ ಬೈದೂ ಬಿಡುತ್ತಾರೆ. ಆದರೂ ತಮ್ಮ ಸಂಗಡಿಗರ ಬೆಲೆ ಅವರಿಗೆ ಗೊತ್ತು. ಶಿಸ್ತು ಮತ್ತು ಸಂಯಮವನ್ನು ಬಲ್ಲರು. ಜವಾಹರಲಾಲರು ತಮ್ಮ ಸಂಗಡಿಗರೊಂದಿಗೆ ಅವರನ್ನು ಒಂದಿಲ್ಲಾ ಒಂದು ದಿನ ತಮ್ಮ ಅಭಿಪ್ರಾಯಕ್ಕೆ ಒಲಿಸಿಕೊಳ್ಳುವ ವಿಶ್ವಾಸದಿಂದ ಕೆಲಸ ಮಾಡುತ್ತಾರೆ. ಅದರ ಜೊತೆಗೆ ಒಂದಿಲ್ಲ ಒಂದು ದಿನ ತಮ್ಮ ಸಂಪರ್ಕದಿಂದ ಅವರ ವಿಚಾರಗಳನ್ನು ಪರಿವರ್ತಿಸುವೆನು ಎಂದು ಆಶಿಸುತ್ತಾರೆ. ಈ ಪ್ರಕಾರ ಕಾಂಗ್ರೆಸ್ಸಿನಲ್ಲಿ ಎರಡು ಮೂರು ಬಗೆಯ ಬುದ್ಧಿಗಳ ಘರ್ಷಣವು ಆಗುತ್ತಲೇ ಬಂದಿದೆ. ನಾನು ವರ್ಕಿಂಗ್ ಕಮಿಟಿಯಲ್ಲಿದ್ದಾಗ ಕೂಡ ಎರಡು ಮೂರು ಬಗೆಯ ಬುದ್ಧಿಗಳ ಸಂಘರ್ಷವು ಆಗುತ್ತಲೇ ಇತ್ತು. ನಾನು ವಿಠ್ಠಲಭಾಯಿ

ಯವರನ್ನು ತಿಳಿದೂ ತಿಳಿದೂ ಸೆಕ್ರೆಟರಿ ಮಾಡಿದೆ. ಆಗಲೂ ಗೊತ್ತುವಳಿಗಳ ಮತ್ತು ಮಸೂದೆಗಳ ಭಾಷೆಯನ್ನು ನಾನೇ ರೂಪಿಸುತ್ತಿದ್ದೆ. ಅದರಲ್ಲಿ ಎರಡು ಅರ್ಥಗಳಿರುತ್ತಿದ್ದವು. ಆ ಬಗ್ಗೆ ನನಗೇನೂ ಆಕ್ಷೇಪಣೆ ಇರುತ್ತಿರಲಿಲ್ಲ. ಏಕೆಂದರೆ ಅವರನ್ನು ನನ್ನ ಜೊತೆಗೆ ತೆಗೆದುಕೊಂಡೇ ಕೆಲಸ ಮಾಡುತ್ತಿದ್ದೆ.

ಸತ್ಯ ಮತ್ತು ಅಹಿಂಸೆ ಕಾಂಗ್ರೆಸ್ಸಿನ ಪ್ರತಿಜ್ಞೆ (Creed)ಯೇನೊ ನಿಜ. ಆದರೂ ಅದನ್ನು ಸಿದ್ಧಾಂತರೂಪದಲ್ಲಿ ಯಾರೂ ಸ್ವೀಕರಿಸಿಲ್ಲ. ಈ ಸಂಘ ಅದನ್ನು ಸಿದ್ಧಾಂತ ರೂಪದಲ್ಲಿ ಸ್ವೀಕರಿಸಿದ ಸಂಘ. ಕಿಶೋರಲಾಲರು ಅನ್ನುವುದೇನೆಂದರೆ, ಇದುವರೆಗೂ ನಾವು ಸತ್ಯ ಮತ್ತು ಅಹಿಂಸೆಯನ್ನು ಸಾಧಿಸಿಕೊಂಡು ಬಂದೆವು, ಆದರೆ ಮುಂದೆ ಶಾಸನಸಭಾ ಪ್ರವೇಶದ ಹೊಸ ನೀತಿಯನ್ನು ಸ್ವೀಕರಿಸುವದರಿಂದ ಸಂಘದ ಸದಸ್ಯರು ವ್ಯವಹಾರದಲ್ಲಿ ಅವುಗಳ (ಸತ್ಯ ಮತ್ತು ಅಹಿಂಸೆಯ) ತ್ಯಾಗ ಮಾಡುತ್ತಾರೆಂದು ಜನರಿಗೆ ಗೊತ್ತಾದರೆ? ಇದಕ್ಕೆ ನನ್ನ ಉತ್ತರವೇನೆಂದರೆ, ಆಗ ನೀವು ಸಂಘವನ್ನು ಬಿಡುವುದರಿಂದ ಕೆಲಸವಾಗುವುದಿಲ್ಲ. ಆಗ ನೀವು ಸಂಘವನ್ನೇ ಮುರಿದು ಹಾಕಿ ಅದನ್ನು ಚೆನ್ನಾಗಿ ಹುಗಿಯಬೇಕಾಗುವುದು. "ಇದನ್ನು ನಾನು ನಡೆಸಲಾರೆ ಮತ್ತು ಇನ್ನಾರೂ ನಡೆಸಲಾರರು" ಎಂದು ಆಗ ನೀವು ಹೇಳಬೇಕು. ಕಿಶೋರಲಾಲ ಕೇಳುತ್ತಾರೆ "ಹೀಗೆ ಮಾಡಲು ನಾನು ಯಾರು?" ಎಂದು. ನಾನು ಅವರಿಗೆ ಹೇಳುತ್ತೇನೆ "ಇದು ನಿಮ್ಮ ಹಕ್ಕು, ನೀವು ಅವರ ಅಧ್ಯಕ್ಷರು. ಹೀಗೆ ಮಾಡುವುದು ನಿಮ್ಮ ಕರ್ತವ್ಯವೂ ಆಗಬಹುದು. ಸಂಘದ ಸದಸ್ಯರು ಅಸತ್ಯ ಮತ್ತು ಹಿಂಸೆಯನ್ನು ವ್ಯವಹಾರದಲ್ಲಿ ತರುವುದಾದರೆ ನೀವಂತೂ ಸಂಘವನ್ನು ಮುಗಿಸಲೇಬೇಕೆಂದು ಹೇಳುವಿರಿ. ಆಮೇಲೆ ಇನ್ನಾರಾದರೂ ಅದನ್ನು ಹಟದಿಂದ ನಡೆಸಿದರೂ ಅದು ಆ ಸ್ಥಿತಿಯಲ್ಲಿ ಸತ್ಯ ಮತ್ತು ಅಹಿಂಸೆಯ ಸಂಘವಾಗಲಾರದು. ಇದನ್ನು ನಾನು ತಿಳಿಯದೇ ಹೇಳುತ್ತಿಲ್ಲ. ಎಲ್ಲ ವಿಚಾರ ಮಾಡಿಯೇ ಹೇಳುತ್ತಿರುವೆ. ನಾನು ಕಿಶೋರಲಾಲರಿಗೆ ಅವರು ಅಧ್ಯಕ್ಷರಾಗಿ ಇರಬೇಕೆಂದು ಅಪ್ಪಣೆ ಮಾಡಿದ್ದೇನೆ. ಈಗ ಅವರು ಅಧ್ಯಕ್ಷರಾಗಿ ಇದ್ದೇ ಇರುವರು. ಇದರಲ್ಲಿ ಅವರಿಗೆ ಯಾವ ದುಃಖವೂ ಇಲ್ಲ, ಈಗ ಈ ಕಥೆಯು ಮುಗಿಯಿತು.

ಇನ್ನು ಪಾರ್ಲಿಮೆಂಟಿನ ವಿಷಯದಲ್ಲಿ ನಿರ್ಧಾರಿತ ನೀತಿಯನ್ನು ತಿಳಿಸುತ್ತೇನೆ. ನಿಮಗೆಲ್ಲರಿಗೂ ಪಾರ್ಲಿಮೆಂಟಗೆ ಹೋಗುವ ಅನುಮತಿಯು ಸಿಕ್ಕಿತೆಂದು ಈ ಗೊತ್ತುವಳಿಯ ಅರ್ಥವಲ್ಲ, ನಮ್ಮ ಕಾರ್ಯಕ್ರಮವಂತೂ ಒಂದೇ ಇದೆ. ಅದು ರಚನಾತ್ಮಕ ಕಾರ್ಯಕ್ರಮ. ಸ್ವರಾಜ್ಯವು ಇದರ ಮೇಲೆಯೇ ಅವಲಂಬಿಸಿದೆ. ನಿಮಗಂತೂ ಇದೇ ಕೆಲಸವನ್ನು ಮಾಡುವುದಿದೆ. ವಿಧಾನಸಭೆಗಳ ಮೂಲಕ ಸ್ವಾತಂತ್ರ್ಯ ಸಿಗುವುದೆಂದು ನನ್ನ ಅಥವಾ ಇನ್ನಾರ ಕನಸಿನಲ್ಲಿಯೂ ಇಲ್ಲ. ಆದರೆ ಅಲ್ಲಿಂದಲೂ ರಚನಾತ್ಮಕ ಕಾರ್ಯಕ್ರಮಕ್ಕೆ ಸಹಾಯವನ್ನು ಮುಟ್ಟಿಸುವುದು ಸಾಧ್ಯವಾಗುವುದಾದರೆ ಹಾಗೇಕೆ ಮಾಡ ಬಾರದು? ಅವುಗಳ (ವಿಧಾನಸಭೆಗಳ) ಮೂಲಕ ಈ ಕಾರ್ಯಕ್ರಮವನ್ನು ಮುಂದು ವರಿಸೋಣ. ಮತ್ತು ಹೊರಗೂ ಸಿದ್ಧತೆ ಮಾಡೋಣ. ಆಗಂತೂ ಸ್ವರಾಜ್ಯವು ಸಿಗುವುದು.

ಅಲ್ಲಿ ಹೋಗಿ ನಾವು ಜಗಳವಾಡಬಹುದೆಂದು ಜವಾಹರಲಾಲರು ಭಾವಿಸುತ್ತಾರೆ. ಜಗಳವನ್ನೇನೋ ಆಡಬಹುದು, ಮತ್ತು ನಾವು ಆಡಿಯೇ ಆಡುವೆವು. ಆದರೆ ಸತ್ಯ ಮತ್ತು ಅಹಿಂಸೆಯನ್ನು ಸ್ವಲ್ಪವಾದರೂ ತ್ಯಜಿಸುವುದಿಲ್ಲ; ನಮಗೆ ಸವಿನಯ (ಕಾಯಿದೆ) ಭಂಗಕ್ಕೋಸ್ಕರ ಸಿದ್ಧತೆಯನ್ನು ಮಾಡುವುದಿದೆ. ಆದರೆ ಅವರು ಅಹಿಂಸೆಯನ್ನು ಏಕಮಾತ್ರ ಸಾಧನವೆಂದು ಒಪ್ಪುವುದಿಲ್ಲ, ಅವರ ದೃಷ್ಟಿಯಲ್ಲಿ ಅಹಿಂಸೆಯು ಸರ್ವೋಪರಿ ಧರ್ಮವಲ್ಲ. ಹಿಂದೂಸ್ಥಾನಕ್ಕೆ ಆರ್ಥಿಕ ಸ್ವಾತಂತ್ರ್ಯವನ್ನು ದೊರಕಿಸುವ ಸಲುವಾಗಿ ನಿರುಪಾಯರಾಗಿ ಅವರಿಗೆ ಇಂಗ್ಲಿಷ್ ಜನರ ಕುತ್ತಿಗೆ ಕತ್ತರಿಸುವ ಪ್ರಸಂಗ ಬಂದರೂ ಅವರು ಅದನ್ನೂ ಮಾಡಲು ಸಿದ್ಧರಿದ್ದಾರೆ. ಆದರೆ ಮುಚ್ಚುಮರೆಯಾಗಿ ಅಲ್ಲ, ಪ್ರಕಟವಾಗಿ. ಆದರೆ ನನ್ನ ನೀತಿಯು ಇದಲ್ಲ. ನಾನಂತೂ ಅಹಿಂಸೆಯನ್ನು ಸರ್ವೋಪರಿ ಎಂದು ಎಣಿಸಿದ್ದೇನೆ. ಹಿಂಸೆಯಿಂದ ಬರುವ ಸ್ವಾತಂತ್ರ್ಯವು ನನ್ನ ದೃಷ್ಟಿಯಿಂದ ಸ್ವಾತಂತ್ರ್ಯವಲ್ಲ. ಆದ್ದರಿಂದ ನಾನಂತೂ ಹಾಗೆಂದೂ ಮಾಡುವುದಿಲ್ಲ. ನೀವು ನನ್ನ ತತ್ವವನ್ನೇ ಒಪ್ಪುತ್ತೀರಿ. ಜವಾಹರಲಾಲರಿಗೆ ಹಿಂಸೆಯು ತ್ಯಾಜ್ಯವಲ್ಲದೇ ಇದ್ದರೂ ಅಹಿಂಸೆಯಿಂದ ಸ್ವಾತಂತ್ರ್ಯವೂ ಸಿಗುವುದಾದರೆ ಅವರಿಗೆ ಸಂತೋಷವೇ ಆಗುವುದು. ಆದ್ದರಿಂದ ಅವರು ನನ್ನ ಪ್ರಯೋಗದಲ್ಲಿ ಸಹಯೋಗವನ್ನು ಕೊಡುತ್ತಿದ್ದಾರೆ. ನಾವು ಯಾವ ಹೊಸ ನೀತಿಯನ್ನೂ ಕೈಗೊಳ್ಳುತ್ತಿಲ್ಲ. ಹಳೇ ನೀತಿಯನ್ನೇ ದೃಢಪಡಿಸಲು ಅಲ್ಲಿ ಹೋಗುತ್ತಿದ್ದೇವೆ. ಗೋಡೆಗಳನ್ನು ಒಡೆಯಲಿಕ್ಕೆ ಹೋಗುತ್ತಿದ್ದೇವೆ. ಮೂರು ಕೋಟಿ ಜನರ ಹೆಸರಿನಲ್ಲಿ ಬೇರೆ ಯಾರಾದರೂ ಅಲ್ಲಿ ಹೋಗಿ ನಮಗೆ ಚರಖಾ ಬೇಡ ಎಂದರೆ ಏನು ಸ್ಥಿತಿಯಾಗಬಹುದು? ನಾನು ಹೇಳುವುದೇನೆಂದರೆ ನೀವು ಅಲ್ಲಿ ಚರಖಾ ಮುಂದುವರಿಸಲಿಕ್ಕೆ ಹೋಗುತ್ತಿದ್ದೀರಿ. ಅಲ್ಲಿ ಜನರ ಪ್ರತಿನಿಧಿಗಳಾಗಿ ಹೋಗುತ್ತಿದ್ದೀರಿ. ನೀವು ಹೇಳುವಿರಿ ಚರಖಾ ಅಂತೂ ಮೊದಲಿನಿಂದಲೇ ನಡೆಯುತ್ತದೆ ಎಂದು. ಹೌದು ಅವಶ್ಯವಾಗಿ ನಡೆಯುತ್ತಲಿದೆ, ಆದರೆ ಜಡವತ್ ನಡೆಯುತ್ತಲಿದೆ. ನಾವೆಲ್ಲರೂ ಜ್ಞಾನಪೂರ್ವಕವಾಗಿ ಚರಖೆಯನ್ನು ನಡೆಸಿದ್ದರೆ ಇಷ್ಟರಲ್ಲಿ ಸ್ವರಾಜ್ಯ ಸಿಕ್ಕುಹೋಗುತ್ತಿತ್ತು; ಮತ್ತು ವಿಧಾನ ಸಭೆಗಳಲ್ಲಿ ಹೋಗುವ ಪ್ರಸಂಗವೂ ಬರುತ್ತಿರಲಿಲ್ಲ. ಈಗಲಾದರೂ ನಾವು ರಾಟೆಯನ್ನು ಜ್ಞಾನಪೂರ್ವಕವಾಗಿ ನಡೆಸಬೇಕು. ೧೯೨೦ರಲ್ಲಿ ಹೇಳಿದ್ದು ಇನ್ನೂ ನನ್ನ ಮನಸ್ಸಿನಲ್ಲಿದೆ. ನಾವು ರಾಟೆಯನ್ನು ಬುದ್ಧಿಯೋಗ ಪೂರ್ವಕವಾಗಿ ನಡೆಸಿದರೆ ಸ್ವರಾಜ್ಯವು ನಮ್ಮ ಕೈಯಲ್ಲಿದೆ. ನಾನು ಎರಡರ್ಥದ ಮಾತು ಹೇಳುತ್ತೇನೆಂದು ನೀವು ಅನ್ನಬಹುದು. ನಾನು ಅನೇಕ ಅರ್ಥವುಳ್ಳ ಮಾತನ್ನು ಹೇಳುತ್ತೇನೆ. ಇಲ್ಲಿ ಚರಖಾ ಅರ್ಥವನ್ನೂ ವ್ಯಾಪಕಮಾಡಬೇಕು. ಇವತ್ತೂ ನಾನು ಅದನ್ನೇ ಹೇಳುತ್ತೇನೆ. ಇಡೀ ದೇಶವು ಜ್ಞಾನಪೂರ್ವಕವಾಗಿ ಚರಖಾ ತೆಗೆದುಕೊಂಡರೆ ಪಾರ್ಲಿಮೆಂಟದ ಹೆಸರೂ ಕೂಡ ತೆಗೆದುಕೊಳ್ಳುವ ಪ್ರಸಂಗ ಬರಲಾರದು. ಆದರೆ ಇವತ್ತು ಆ ಸ್ಥಿತಿಯಿಲ್ಲ. ಇವತ್ತು ಮೂರುಕೋಟಿ ಮತದಾರ ಪ್ರತಿನಿಧಿಗಳ ಸಮೀಪ ಸಂಪರ್ಕವನ್ನು ಇಟ್ಟುಕೊಳ್ಳಬೇಕಾಗಿದೆ. ಅವರಿಂದ ಎಷ್ಟು ಕೆಲಸವನ್ನು ಮಾಡಿಸಬಲ್ಲೆವೋ ಅಷ್ಟು ಏಕೆ ಮಾಡಿಸಬಾರದು? ಇದರರ್ಥ ನಾವೆಲ್ಲರೂ ವಿಧಾನಸಭೆಗಳಲ್ಲಿ ಹೋಗಬೇಕು ಅಥವಾ ಯಾರು

ಹೋಗ ಬಯಸುವರೋ ಅವರಿಗೆ ಅನುಮತಿಯನ್ನು ಕೊಡಬೇಕು ಎಂದಲ್ಲ. ಪ್ರತಿಯೊಬ್ಬರ ವಿಷಯದಲ್ಲಿಯೂ ನಾವು ಚೆನ್ನಾಗಿ ಪರಿಶೀಲನೆ ಮಾಡಿ ನೋಡುವೆವು. ಇದಲ್ಲದೆ ಅವರ ಮೇಲೆ ಪ್ರಭಾವವನ್ನು ಬೀರುವುದಕ್ಕೋಸ್ಕರ ಹೊರಗಿನ ಅನುಸಂಧಾನವೂ ಬೇಕು. ಅದಕ್ಕೋಸ್ಕರ ಪಾರ್ಲಿಮೆಂಟರೀ ಕಮಿಟಿಯು ಬೇಕು. ಅದರಲ್ಲಿ ರಾಜೇಂದ್ರ ಪ್ರಸಾದರೂ ಬೇಕು. ವಲ್ಲಭಭಾಯಿಯವರೂ ಬೇಕು. ಇದರ ಅರ್ಥವೇನೆಂದರೆ ನಾವು ವಿಧಾನಸಭೆಯ ಎಲ್ಲ ಮೆಂಬರಿಗೂ ನಮ್ಮ ಸಂಘದ ಬಾಗಿಲನ್ನು ತೆರೆಯುತ್ತಿಲ್ಲ ರಚನಾತ್ಮಕ ಕಾರ್ಯದ ಪ್ರತಿಜ್ಞೆಯನ್ನು ತೆಗೆದುಕೊಂಡವರಿಗೆ ಮಾತ್ರ ಮತ್ತು ಯಾರು ಹೋಗದಿದ್ದರೆ ಕಾಂಗ್ರೆಸ್ಸಿನ ಒಂದು ಸೀಟು ಕಳೆದುಕೊಳ್ಳುವ ಭಯವಿದೆಯೋ ಅವರಿಗೆ ಮಾತ್ರ (ವಿಧಾನಸಭೆಯ) ಬಾಗಿಲನ್ನು ತೆರೆಯುತ್ತೇವೆ. ಇದರ ನಿರ್ಣಯವನ್ನು ಕಿಶೋರಲಾಲರಿಗೆ ಬಿಟ್ಟುಬಿಟೋಣ. ಇನ್ನಾರೂ ಇದರ ನಿರ್ಣಯವನ್ನು ಮಾಡಲಾರರು. ನಾಳೆ ಸತ್ಯಮೂರ್ತಿಯವರು ಗಾಂಧೀ ಸೇವಾ ಸಂಘದಲ್ಲಿ ತಾವು ಬರಬಹುದೆ ಎಂದು ನನ್ನನ್ನು ಕೇಳಿದರೆ ನಾನು 'ಬೇಡ' ಎಂದು ಹೇಳುವೆನು. ಸತ್ಯಮೂರ್ತಿಯವರ ಮತ್ತು ನನ್ನ ಸಂಬಂಧವು ಚೆನ್ನಾಗಿದೆ. ಮತ್ತು ನನ್ನ ದಾಕ್ಷಿಣ್ಯದಿಂದ ಒಮ್ಮೊಮ್ಮೆ ತಮ್ಮ ಮಗಳಿಗೆ ರಾಟೆಯನ್ನು ನಡೆಸಗೊಡುತ್ತಾರೆ. ಆದರೆ ಅವರಿಗೆ ಚರಖಾದಲ್ಲಿ ವಿಶ್ವಾಸವಿಲ್ಲ. ಆದ್ದರಿಂದ ಅವರು ತಮ್ಮ ಸದಸ್ಯರಾಗಲಾರರು. ಅವರು ತಮ್ಮ ಸಹಾಯವನ್ನೇನೋ ಮಾಡುತ್ತಿರಲಿ. ಇದಂತೂ ಒಂದು ದೃಷ್ಟಾಂತವಾಯಿತು. ಈ ಪ್ರಕಾರ ನಾವು ಬಾಗಿಲನ್ನು ಎಲ್ಲರಿಗೂ ತೆರೆದಿಲ್ಲ. ನಾವಂತೂ ನಮ್ಮ ಜನರಿಗೋಸ್ಕರ ಬಾಗಿಲನ್ನು ತೆರೆದಿದ್ದೇವೆ. ನಾವು ಜೇಠಾಲಾಲರನ್ನು (ವಿಧಾನಸಭೆಗೆ) ಕಳಿಸಲು ಇಷ್ಟಪಡುವುದಿಲ್ಲ ಎಂದು ಇಟ್ಟುಕೊಳ್ಳೋಣ. ಹಾಗಾದರೆ ಅನಂತಪುರದ ಸೀಟು ಕಳೆದುಕೊಳ್ಳೋಣವೇ? ಅವರನ್ನೇ ಕಳಿಸಬೇಕೆಂದು ಡಾ. ಖರೆ ಹೇಳಿದರೆ ನಾನು ಹೇಳುವೆ "ಅವನಂತೂ ಅಂದಗೆಟ್ಟ ಮನುಷ್ಯನಿದ್ದಾನೆ. ಚರಖಾ ಒಂದು ಬಿಟ್ಟು ಅವನಿಗೆ ಇನ್ನೇನೂ ಗೊತ್ತಿಲ್ಲ. ಸರಿಯಾಗಿ ಮಾತನಾಡಲೂ ಬರುವುದಿಲ್ಲ ಎಂದು. ಆದರೂ ಡಾ.ಖರೆ ಅವನನ್ನೇ ಕಳಿಸಬೇಕೆಂದರೆ ನಾನು ಜೇಠಲಾಲರಿಗೆ ಹೇಳುವೆ "ಅವಶ್ಯವಾಗಿ ಹೋಗಪ್ಪ, ಅಲ್ಲಿಯೇ ರಾಟೇ ನಡಿಸುತ್ತ ಕೂಡು" ಎಂದು. ಅಲ್ಲಿ ಒಬ್ಬ ರಾಟೆಯವನ ಅವಶ್ಯಕತೆಯು ಬಿತ್ತಲ್ಲ. ಇದೇ ನನಗೆ ಸಂತೋಷ. ಪ್ರತಿಯೊಬ್ಬ ರಾಟೆ ನಡೆಸುವವನಿಗೆ ಈ ಸ್ಥಿತಿ ಬಂದರೆ ರಾಟೆಯ ಪ್ರಭಾವವು ಬೆಳೆಯುವುದು. ರಾಟೆಯವನೆ (ವಿಧಾನಸಭೆಯಲ್ಲಿ) ಹೋಗುವಂತೆ ಪ್ರಯತ್ನ ಮಾಡಿರಿ. ಆದರೆ ಜನರನ್ನು ಪುಸಲಾಯಿಸಿ ಅಥವಾ ಅವರ ಮುಖಸ್ತುತಿಯಿಂದಲ್ಲ. ಅಂಥ ಜನರು ಹೋಗಿದ್ದಾರೆ. ಸರದಾರ ನನಗೆ ಹೇಳುತ್ತಾರೆ, ಡಾ. ಗೋಪಿಚಂದ ಹೋಗದಿದ್ದರೆ ನಾವು ಅಲ್ಲಿಯ ಸ್ಥಾನವನ್ನು ಕಳೆದು ಕೊಳ್ಳುತ್ತಿದ್ದೆವು. ಈ ಪ್ರಕಾರ ಸಾಕಷ್ಟು ಜನರು ಹೋಗಿರುವರು. ಪ್ರತಿಯೊಂದು ಸ್ಥಳದಲ್ಲಿ ಹೋಗಿರದಿದ್ದರೆ ನಾಚಿಕೊಳ್ಳುವಂಥ ಮಾತು. ಪ್ರತಿಯೊಂದು ಸ್ಥಾನದಲ್ಲಿ ಚರಖಾ ಮತ್ತು ಗ್ರಾಮದ ಪ್ರತಿನಿಧಿಯನ್ನು ಕಳಿಸುವುದು ಸಾಧ್ಯವಾದರೆ ಕಳಿಸಬೇಕು. ನಿಮಗೆ ನಿಮ್ಮ ಕೆಲಸದಲ್ಲಿ ಇವತ್ತಿಗಿಂತ ಸಾವಿರಾರು ಪಟ್ಟು ಹೆಚ್ಚು ಆಸಕ್ತಿಯು ಉತ್ಪನ್ನವಾದಾಗ ನೀವು ನಿಜವಾಗಿಯೂ ಯೋಗ್ಯರಾಗುವಿರಿ. ಆಗ ನೀವು ನಿಮ್ಮ ಪ್ರಯೋಜನದಿಂದಲ್ಲ ಜನರ

ಆಗ್ರಹದಿಂದ ಹೋಗುವಿರಿ. ಒಂದು ಪಕ್ಷ ಸೋಶಾಲಿಸ್ಟ ನಿಮ್ಮ ಪ್ರತಿಸ್ಪರ್ಧಿ ಇದ್ದರೆ ಅವನೂ ನಿಮಗೆ ಹೇಳಬಹುದು "ನಾನು ಹೋಗಲಾರೆನಪ್ಪ, ನೀನೇ ಹೋಗು." ಅಂಥ ಸ್ಥಿತಿಯಲ್ಲಿ ಹೋಗುವುದರಲ್ಲಿಯೇ ಸ್ವಾರಸ್ಯವಿದೆ. ಇನ್ನು ಸೋಶಾಲಿಸ್ಟ ಹೋಗುವವನಾಗಿದ್ದರೆ ಮತ್ತು ನೀನು ಹೋಗುವುದು ಅವಶ್ಯಕವೆಂದು ಅವನಿಗೆ ಅನಿಸದಿದ್ದರೆ ಅವನಿಗೆ ಹೋಗಗೊಡು. ನಮ್ಮ ನಮ್ಮೊಳಗೆ ಜಗಳವಾಡುವುದು ಇಷ್ಟವಿಲ್ಲ. ನಾನಂತೂ ಜಗಳವನ್ನು ತಪ್ಪಿಸುವ ಸಲುವಾಗಿ ಕಾಂಗ್ರೆಸ್ಸನ್ನೇ ಬಿಟ್ಟ ಮನುಷ್ಯ. ನಾನು ಕಾಂಗ್ರೆಸ್ಸಿನಲ್ಲಿದ್ದಾಗ ಕೇಳಕರರನ್ನು ಅಪೇಕ್ಷಿಸುತ್ತೇನೆ ಎಂದು ಹೇಳಿದೆ. ನನ್ನ ಜೊತೆಗೇ ಕೆಲಸ ಮಾಡುತ್ತ ಇದ್ದರೆ ಕೇಳಕರರಿಂದ ಬಹಳ ಕಡಿಮೆ ಹಾನಿ ಒದಗಬಹುದು. ಇಷ್ಟು ನನ್ನಲ್ಲಿ ಕಾರ್ಯಕ್ಷಮತೆ ಇದೆ. (ಕಾಂಗ್ರೆಸ್ ಅಲ್ಲದೆ) ಇನ್ನಾರಾದರೂ (ವಿಧಾನಸಭೆಗೆ) ಹೋಗುವುದು ಅಸಂಭವ ಪ್ರಾಯವಾಗಲೆಂದು ನಾನು ಬಯಸುತ್ತೇನೆ ಮತ್ತು ಚರಖಾದಲ್ಲಿ ವಿಶ್ವಾಸವಿರುವ ಜನರನ್ನೇ ಕಳಿಸಬೇಕು. ನಾಳೆ ವಲ್ಲಭಬಾಯಿ ಚರಖಾ ಬಿಟ್ಟುಬಿಟ್ಟರೆ ಗುಜರಾತದ ಸರದಾರರಾಗಿ ಉಳಿಯುವುದಿಲ್ಲ. ಮತ್ತು ಆ ಸ್ಥಿತಿಯಲ್ಲಿಯೂ ಆಯ್ಕೆಗೆ ನಿಂತು ತಮ್ಮ ಬಲದ ಮೇಲೆ ಗೆದ್ದರೆ ಚರಖಾ ಸಂಘಕ್ಕೆ ಲಜ್ಜಾಸ್ಪದವಾದ ಮಾತಾಗುವುದು. ಬಾರ್ಡೋಲಿಗೆ ನಾಚಿಗೇಡು; ಗುಜರಾತಕೆ ನಾಚಿಕೆಗೇಡು ಮತ್ತು ನಮಗೂ ನಾಚಿಕೆ ಗೇಡು. ಆಗ ಅಲ್ಲಿಗೆ ಯಾರನ್ನು ಕಳಿಸುವಿರಿ?

ಚರಖಾದ ಜನರಲ್ಲಿ ಬುದ್ಧಿಯಿಲ್ಲವೆಂಬ ಒಂದು ಆಕ್ಷೇಪಣೆಯು ಕೇಳಿಬರುತ್ತದೆ. ಇದರಲ್ಲಿ ಸ್ವಲ್ಪ ಸತ್ಯಾಂಶವಿದೆ. ನಾವು ಜಡವತ್ ಚರಖಾ ನಡೆಸಿದರೆ ಅದು ಸಾಧನೆಯಲ್ಲ. ಮಹಾಭಾರತದಲ್ಲಿ ಏಕಲವ್ಯನ ಕಥೆಯಿದೆ. ಅದರ ಕಡೆ ಸ್ವಲ್ಪ ಗಮನಕೊಡಿರಿ. ಅದು ಕೇವಲ ಕಾವ್ಯವಲ್ಲ. ಅದರಲ್ಲಿ ಸತ್ಯವಿದೆ. ಮಣ್ಣಿನಲ್ಲಿ ಚೈತನ್ಯವಿರುವುದಿಲ್ಲ. ಮೂರ್ತಿಯಲ್ಲಿ ಸಾಮರ್ಥ್ಯವಿರುವುದಿಲ್ಲ. ಆದರೆ ಏಕಲವ್ಯನ ದೃಷ್ಟಿಯುಲ್ಲಿ ದ್ರೋಣಾಚಾರ್ಯರ ಮೂರ್ತಿಯು ಮಣ್ಣೆಂದು ಇರಲಿಲ್ಲ. ಅದರಲ್ಲಿ ಅವನು ಸಾಕ್ಷಾತ್ ಗುರು ದ್ರೋಣಾಚಾರ್ಯರನ್ನು ಕಾಣುತ್ತಿದ್ದ. ಅವನು ಅಖಂಡ ಶ್ರದ್ಧೆಯು ಏಕೆ ಫಲಿಸಲಾರದು? ನಾವು ಚರಖಾದಲ್ಲಿ ಇಂಥ ಶ್ರದ್ಧೆಯನ್ನಿಟ್ಟರೆ ಅದು ನಮಗೋಸ್ಕರ ಪ್ರಾಣವಂತ ಪ್ರತಿಮೆಯಾಗಬಲ್ಲದು. ಆಗ ನಾವು ಅದರಲ್ಲಿ ನಮ್ಮ ಸಮಸ್ತ ಸಂಕಲ್ಪ ಶಕ್ತಿಯನ್ನು ಮತ್ತು ಹೃದಯವನ್ನು ತೊಡಗಿಸೋಣ. ಚರಖಾ ಅಂತೂ ನಮಗೆ ಅಹಿಂಸೆಯ ಒಂದು ಪ್ರತೀಕ. ನಿಜವಾದ ವಸ್ತುವು ಮೂರ್ತಿಯಲ್ಲ, ನಮ್ಮ ದೃಷ್ಟಿ. ಒಂದು ದೃಷ್ಟಿಯಿಂದ ಸಂಸಾರವು ಸತ್ಯ. ಇನ್ನೊಂದು ದೃಷ್ಟಿಯಿಂದ ಈಶ್ವರನೇ ಏಕಮಾತ್ರ ಸತ್ಯ. ನಮ್ಮ ನಮ್ಮ ದೃಷ್ಟಿಯಿಂದ ಎರಡು ಮಾತುಗಳು ಸತ್ಯ ನಾವು ನಮ್ಮ ಪ್ರತೀಕದಲ್ಲಿ ಈಶ್ವರನ ಸಾಕ್ಷಾತ್ಕಾರ ಮಾಡಬಲ್ಲವರಾದರೆ ಅದೂ ನಮಗೋಸ್ಕರ ಸತ್ಯವಾಗುತ್ತದೆ. ಅಹಿಂಸೆಯಲ್ಲಿ ಮೂರ್ಖರಿಗೋಸ್ಕರ ಇಲ್ಲ. ನಾವು ಬುದ್ಧಿಯೋಗದಿಂದ ಕೆಲಸ ಮಾಡಬೇಕು. ಅಹಿಂಸೆಯಲ್ಲಿ ಜ್ಞಾನಕ್ಕೂ ಮತ್ತು ಕಾರ್ಯಶಕ್ತಿಗೂ ಸ್ಥಾನವಿದೆ, ಅಂದರೆ ಬುದ್ಧಿಗೂ ಸ್ಥಾನವಿದೆ ಮತ್ತು ನಮ್ಮ ಎಲ್ಲ ಇಂದ್ರಿಯಗಳಿಗೂ, ಈಗಂತೂ ಇದೆಲ್ಲದರ ಉಪಯೋಗವನ್ನು ಅಹಿಂಸೆಯನ್ನು ಅಳಿಸಿಬಿಡಲು ಮಾಡಲಾಗುತ್ತಿದೆ. ನಾವು ಬಯಸುವುದೇನೆಂದರೆ ಇವೆಲ್ಲವೂ ಅವರ

(ಅಹಿಂಸೆಯ) ದಾಸದಾಸಿಯರಾಗಿ ಇರಲಿ. ನಾವು ನಮ್ಮ ಇಂದ್ರಿಯಗಳನ್ನು ಅಹಿಂಸೆಯ ದಾಸರನ್ನಾಗಿ ಮಾಡಿದರೆ ಅವು ತೇಜಸ್ವಿಗಳಾಗುವವು. ಈ ಕ್ಷೇತ್ರದಲ್ಲಿ ಅಹಿಂಸೆಯು ಉಪಯೋಗಕ್ಕೆ ಬರದಿದ್ದರೆ ಇನ್ನೆಲ್ಲಿ ಬರಬಹುದು? ನಾನಂತೂ ಹೆದರಿ ಯಾವ ಕ್ಷೇತ್ರವನ್ನೂ ಬಿಡುವುದಿಲ್ಲ. ಯಾವುದೇ ಒಂದು ಕ್ಷೇತ್ರವನ್ನು ಅಹಿಂಸೆಯು ಅಲ್ಲಿ ಕೆಲಸಕ್ಕೆ ಬಾರದು ಎಂದು ನಾನು ಬಿಟ್ಟುಬಿಟ್ಟರೆ ಅಹಿಂಸೆಯು ಒಂದು ಕಃಪದಾರ್ಥವೆಂದಂತಾಯಿತು. ನಾನು ಯಾವ ಕ್ಷೇತ್ರವನ್ನು ಬಿಡಲಿ? ನನ್ನ ಶರೀರವಂತೂ ಕೆಲಸ ಮಾಡುತ್ತಲೇ ಇರುವುದು. ಇಂದ್ರಿಯ ಪ್ರವೃತ್ತಿ ಅವಶ್ಯವಾಗಿ ನಡೆಯುವುದು. ನಾನು ಆತ್ಮಹತ್ಯೆಯನ್ನು ಮಾಡ ಬಯಸುವುದಿಲ್ಲ; ಕಿವಿಗಳನ್ನೇನೂ ಹರಿಯುವುದಿಲ್ಲ ಮೂಗನ್ನು ಮುಚ್ಚುವುದಿಲ್ಲ; ಮತ್ತೇನು ಮಾಡಲಿ? ನನಗೆ ಒಂದೇ ಮಾರ್ಗವಿದೆ; ಎಲ್ಲ ಇಂದ್ರಿಯಗಳನ್ನೂ ಅಹಿಂಸೆಯ ದಾಸರನ್ನಾಗಿ ಮಾಡುವುದು.

ಇನ್ನೊಂದು ಉಪಾಯವನ್ನು ಕಿಶೋರಲಾಲರು ಪರೀಕ್ಷಿಸಿ ನೋಡಿದರು. ಬಹಳ ಹಳೆಯ ಮಾತು. ಸಾಧನೆಗೋಸ್ಕರ ಅವರು ಏಕಾಂತದಲ್ಲಿ ಕುಳಿತಿದ್ದರು. ರೈಲುಗಾಡಿಯ ಸೀಟಿಯಿಂದ ಅವರ ಶಾಂತಿಯು ಭಂಗವಾಗುತ್ತಿತ್ತು. ನಿತ್ಯದಂತೆ ಒಂದು ದಿನ ಹೋದಾಗ ಅವರು ಹೇಳಿದರು–"ನನಗೆ ಈ ಸೀಟಿಯಿಂದ ಕಷ್ಟವಾಗುತ್ತದೆ. ಕಿವಿಗಳಲ್ಲಿ ಅರಳೆ ಅಥವಾ ರಬ್ಬರ್ ಇಡುವ ವಿಚಾರ ಮಾಡುತ್ತಿರುವೆನು" ಎಂದು. "ಆ ಉಪಾಯವನ್ನೂ ಪರೀಕ್ಷಿಸಿ ನೋಡಿರಿ" ಎಂದು ನಾನು ಹೇಳಿದೆ. ಆದರೆ ಅದು ಕೇವಲ ಬಾಹ್ಯೋಪಚಾರ. ಈಶ್ವರನಲ್ಲಿ ಮನಸ್ಸು ಧ್ಯಾನಮಗ್ನವಾಗುತ್ತಿರಲಿಲ್ಲ; ಆದ್ದರಿಂದ ಸೀಟಿಯ ಸದ್ದು ಕೇಳಿಸುತ್ತಿತ್ತು. ಕಿಶೋರಲಾಲರ ಗಮನಕ್ಕೂ ಈ ಮಾತು ತನ್ನಷ್ಟಕ್ಕೆ ತಾನೇ ಬಂದಿತು. ಆದ್ದರಿಂದ ಮರುದಿನ ನಾನು ಅರಳೆ ಅಥವಾ ರಬ್ಬರನ್ನು ಕಿವಿಯಲ್ಲಿಟ್ಟುಕೊಳ್ಳಲು ಹೇಳಿದಾಗ ಇನ್ನು ಅದರ ಅವಶ್ಯಕತೆಯಿಲ್ಲವೆಂದು ಅವರು ಉತ್ತರ ಕೊಟ್ಟರು. ನಮಗೆ ಕಿವಿಗಳಿವೆ, ಆದರೆ ದುರುಪಯೋಗಕೋಸ್ಕರ ಅಲ್ಲ. ಉಳಿದ ಇಂದ್ರಿಯಗಳ ಮಾತೂ ಹೀಗೆಯೇ ಇದೆ. ಎಲ್ಲ ಇಂದ್ರಿಯಗಳೂ ನಮ್ಮ ಶರೀರವನ್ನು ಸುರಕ್ಷಿತವಾಗಿ ಇಡಲು ಇವೆ. ನಮ್ಮ ನಾಲಿಗೆ ತಿನ್ನುವುದು ಶರೀರದ ಸಂರಕ್ಷಣೆಗಾಗಿ ರುಚಿಗೋಸ್ಕರ ತಿನ್ನುವುದಾದರೆ ನಾವು ಅಹಿಂಸೆಯನ್ನು ಪಾಲಿಸಲಾರೆವು.

ನಮ್ಮನ್ನು ಬಲವಂತದಿಂದ ಯಾರಾದರೂ ಅಲ್ಲಿಗೆ (ವಿಧಾನಸಭೆಗೆ) ಕಳಿಸಿದರೆ ಆಗಲೂ ನಾವು ಅಲ್ಲಿ ನಮ್ಮ ವೃತ್ತಿಯನ್ನೇ ತೆಗೆದುಕೊಂಡು ಹೋಗುವೆವು. ನಾವು ಅಲ್ಲಿ ಹೋದಮೇಲೆ ನಮ್ಮೆಲ್ಲ ಮಾತುಗಳನ್ನೂ ಮರೆತುಬಿಡುವೆವೆಂದು ಕಿಶೋರಲಾಲರಿಗೆ ಭಯವಿದೆ. ಆ ಭಯವು ನನಗೂ ಇದೆ. ಆದರೆ ಆ ಕಾರಣದಿಂದ ನಾನೇಕೆ ಹಿಂಜರಿಯಲಿ? ನಿಮಗೆ ಚರಖಾದಲ್ಲಿ ಮತ್ತು ಕಾಂಗ್ರೆಸ್ಸಿನ ಅನ್ಯ ರಚನಾತ್ಮಕ ಕಾರ್ಯಕ್ರಮದಲ್ಲಿ ಜೀವಂತ ಶ್ರದ್ಧೆಯಿಲ್ಲದಿದ್ದರೆ ಕಿಶೋರಲಾಲರ ಭಯವು ನಿಜವೆಂದು ಸಿದ್ಧವಾಗುವುದು. ಆದರೆ ನಿಮ್ಮ ಮೇಲೆ ನನ್ನ ವಿಶ್ವಾಸವಿದೆ. ಹಾಗಿರದಿದ್ದರೆ ನಾನಿಲ್ಲಿ ಬರುತ್ತಿರಲಿಲ್ಲ. ನಾನು ನಿಮ್ಮ ಮೇಲೆ ಅವಿಶ್ವಾಸವನ್ನೇಕೆ ಮಾಡಲಿ? ನಿಮಗೆ ಎಲ್ಲವನ್ನೂ ಸ್ಪಷ್ಟವಾಗಿ ತಿಳಿಸಿರುವೆನು.

ಇದರಲ್ಲಿ ನೀತಿಯ ತ್ಯಾಗವಿಲ್ಲ. ನಿನ್ನೆ ರಾತ್ರಿ ಬೇರೆ ಬಗೆಯ ಭಾಷೆಯೇ ಬಂದಿತ್ತು. ಆದರೆ ಭಾಷೆಯ ಮಾತು ಹೀಗೆಯೇ ನಡೆಯುತ್ತದೆ. ಕೆಲಸ ಮಾಡುತ್ತ ಮಾಡುತ್ತ ಭಾಷೆಯು ಸ್ಪಷ್ಟವಾಗುತ್ತ ಹೋಗುತ್ತದೆ. ವಿಚಾರ, ಉಚ್ಚಾರ ಮತ್ತು ಆಚಾರಗಳ ಹೊಂದಾಣಿಕೆಯೇ ಸತ್ಯದ ಲಕ್ಷಣ. ಇದರಲ್ಲಿ ಸಂದೇಹವಿಲ್ಲ. ಆದರೆ ವಿಚಾರಗಳು ಮುಂದೆ ಮುಂದೆ ಹೋಗುತ್ತವೆ, ಭಾಷೆಯು ಹಿಂದೆ ಉಳಿಯುತ್ತದೆ. ಕಿಶೋರಲಾಲರಿಗೆ ನಾನು ಯಾಕೆ ಸರಿಯಾಗಿ ತಿಳಿಸಲಾರದ್ದಾದೆ ಎಂದು ನನ್ನ ಮನಸ್ಸಿಗೆ ಅಳುಕಿತು. ನನ್ನ ಭಾಷೆಯು ಅಸ್ಪಷ್ಟವಾಗಿತ್ತು. ನಾನು ಚರ್ಚೆಯನ್ನು ಕೇಳಿದಾಗ ನನ್ನ ವಿಚಾರಗಳು ಸ್ಪಷ್ಟವಾದವು. ಆದರೂ ಭಾಷೆಯು ಸ್ಪಷ್ಟವಾಗಲಿಲ್ಲ. ವಿಚಾರ ಮಾಡಿದ ಮೇಲೆ ನಾನು ಧ್ಯಾನಮಗ್ನನಾಗಿದ್ದಾಗ, ಭಾಷೆಯು ಪ್ರತಿದಿನ ಹೆಚ್ಚು ಹೆಚ್ಚು ಸ್ಪಷ್ಟವಾಗುತ್ತ ಹೋಗುತ್ತದೆ. ಇನ್ನೂ ನನಗೆ ಅವಕಾಶ ಸಿಕ್ಕಿಲ್ಲ. ವಿಧಾನಸಭೆಯ ಕಾರ್ಯಕ್ರಮವನ್ನು ತೆಗೆದುಕೊಂಡು ನಾವು ಅಹಿಂಸೆಯಿಂದ ದೂರಹೋಗುತ್ತಿಲ್ಲ. ಈ ಒಂದು ಹೆಜ್ಜೆಯನ್ನು ಮುಂದೆ ಇಡಿಸುತ್ತಿರುವಾಗ ನಾನು ನಿಮ್ಮನ್ನು ಅಹಿಂಸೆಯ ದಿಶೆಯಲ್ಲಿ ಎರಡು ಹೆಜ್ಜೆ ಮುಂದು ವರಿಸುತ್ತಿದ್ದೇನೆ. ನನ್ನ ಈ ಮಾತನ್ನು ತಿಳಿದುಕೊಂಡು ಅದರಂತೆ ನೀವು ನಡೆದರೆ ಇದುವರೆಗೂ ಮಾಡದಷ್ಟು ಪ್ರಗತಿಯನ್ನು ಈ ವರ್ಷದಲ್ಲಿ ಮಾಡುವಿರಿ. ಈಗ ಹಿಂದೂಸ್ಥಾನವು ಈ ಕಡೆಗಾಗಲೀ ಆ ಕಡೆಗಾಗಲೀ ಹೋಗುವ ಸಮಯ ಬಂದಿದೆ. ಈ ಪ್ರಸಂಗದಲ್ಲಿ ನಾವು ಒಂದು ಕೋಣೆಯಲ್ಲಿ ಬಾಗಿಲು ಮುಚ್ಚಿಕೊಂಡು ಕುಳಿತಿರಲಾರೆವು ಎಂದು ನನಗೆ ಅನಿಸುತ್ತದೆ. ರಾಷ್ಟ್ರರೂಪದಲ್ಲಿ ನಾವು ಸತ್ಯ ಮತ್ತು ಅಹಿಂಸೆಯ ಕಡೆಗೆ ಮುಂದುವರಿಯುತ್ತಿರುವೆವೋ ಇಲ್ಲವೋ ಇದನ್ನು ಸಿದ್ಧಮಾಡಿ ತೋರಿಸುವುದು ಇನ್ನೂ ಉಳಿದಿದೆ. ಮೂರು ಕೋಟಿ ಮತದಾರರನ್ನು ಮರೆತು ನೀವು ಒಂದು ಕಡೆ ಕುಳಿತುಬಿಟ್ಟರೆ ಅದು ಹೇಡಿತನವಾಗುವುದು. ನಮ್ಮ ನಾಲಿಗೆಯ ಮೇಲೆ ಸತ್ಯ ಮತ್ತು ಅಹಿಂಸೆಯಿದ್ದು ಮನಸ್ಸಿನಲ್ಲಿ ಬೇರೆ ಮಾತಿದ್ದರೂ ನಾನು ಮಾಡಿದ್ದು ಒಳ್ಳೆಯದೇ ಎಂದು ಸಿದ್ಧವಾಗುವುದು. ನೀವು ಮಿಥ್ಯಾಚಾರಿಗಳಲ್ಲದ ಪಕ್ಷದಲ್ಲಿ, ವಿಧಾನಸಭೆಗಳಲ್ಲಿಯೂ ಸತ್ಯ ಮತ್ತು ಅಹಿಂಸೆಯ ಸಂಪೂರ್ಣ ಶ್ರದ್ಧಾಬಲ ತೆಗೆದುಕೊಂಡು ಹೋಗುವಿರಿ. ಮತ್ತು ನಿಮ್ಮ ಧ್ಯೇಯದ ಕಡೆಗೆ ಪ್ರಗತಿಯನ್ನು ಮಾಡಬಲ್ಲಿರಿ. ಮತ್ತು ನೀವು ಮಿಥ್ಯಾಚಾರಿಗಳೆಂದು ಸಿದ್ಧವಾದರೂ ನನಗೇನೂ ಕ್ಷೋಭವಾಗಲಾರದು. ಮಿಥ್ಯಾಚಾರವು ಬಯಲಿಗೆ ಬೀಳೋಣದರಿಂದಲೂ ನಮ್ಮ ಹಿತವೇ ಆಗವುದು. ಆತ್ಮ ಹೊರಟು ಹೋದ ಮೇಲೆ ನಮ್ಮ ಪ್ರೀತಿಯ ತಂದೆಯ ಶರೀರವನ್ನೂ ಆನಂದದಿಂದ ಸುಟ್ಟುಬಿಡುತ್ತೇವೆ. ಮತ್ತು ಅದರ ಬೂದಿಯನ್ನು ಗಂಗಾನದಿ ಯಲ್ಲಿ ಹಾಕುತ್ತೇವೆ. ಸಂಘದ ಆತ್ಮ ಅಂದರೆ ಸತ್ಯ ಮತ್ತು ಅಹಿಂಸೆ ಹೊರಟುಹೋದರೆ ಕಿಶೋರಲಾಲರು ಅದಕ್ಕೆ ಅಗ್ನಿಸಂಸ್ಕಾರವನ್ನು ಮಾಡಿಬಿಡಬೇಕು. ಆದರೆ ಆ ಆತ್ಮ ಶಾಶ್ವತವಾಗಿ ಉಳಿದರೆ ಸಂಘದಲ್ಲಿ ಒಂದು ಕಳೆ ಬರುವುದು. ಆ ಆತ್ಮ ಈಗಲೂ ಸಂಘ ದಲ್ಲಿಲ್ಲದಿದ್ದರೆ ಮತ್ತು ನಾವು ಕೇವಲ ಮಿಥ್ಯಾಚಾರಿಗಳಿದ್ದರೆ ಸಂಘವು ಶಾಶ್ವತ ಇರುವುದು ವ್ಯರ್ಥ.

ಸತ್ಯ ಮತ್ತು ಅಹಿಂಸೆ ಇವು ಸೂಕ್ಷ್ಮ ಪದಾರ್ಥಗಳೆಂದು ಶಾಸ್ತ್ರಜ್ಞರು ನನಗೆ ಬರೆದು ತಿಳಿಸಿರುತ್ತಾರೆ. ನಿರಾಕಾರವಸ್ತುಗಳ ಸಂಘವು ಹೇಗಾಗಬಲ್ಲದು? ಸತ್ಯ ಮತ್ತು ಅಹಿಂಸೆಯ ಸಂಘಟನವಾಗಬಲ್ಲದು ಎಂದು ನಾನು ಒತ್ತಿ ಹೇಳುತ್ತೇನೆ. ಅಹಿಂಸೆಯು ಸಂಘಟಿತ ವಾಗಲಾರದಾದರೆ ಅದು ಧರ್ಮವಲ್ಲ. ನನ್ನಲ್ಲಿ ಏನಾದರೂ ವಿಶೇಷವಿದ್ದರೆ ಅದು ಇದೇ: ನಾನು ಸತ್ಯ ಮತ್ತು ಅಹಿಂಸೆ ಇವುಗಳನ್ನು ಸಂಘಟಿಸುತ್ತಿರುವೆನು. ಇಲ್ಲದಿದ್ದರೆ ಅವು ನನ್ನ ದೃಷ್ಟಿಯಲ್ಲಿ ಸನಾತನ ಸಿದ್ಧಾಂತವಲ್ಲ. ನನ್ನ ದೃಷ್ಟಿಯಲ್ಲಿ ಸತ್ಯ ಮತ್ತು ಅಹಿಂಸೆ ಮಿಥ್ಯಾ ವಸ್ತುಗಳಲ್ಲ. ಅವು ಸಾಮುದಾಯಿಕ ಧರ್ಮ ಆಗದಿದ್ದರೆ ಅವು ಮಿಥ್ಯಾ. ನಾನು ಮಾಡಬಯಸುವ ಮತ್ತು ಮಾಡಿ ಸಾಯಬಯಸುವ ವಿಷಯ ಎಂದರೆ ಅಹಿಂಸೆಗೆ ಸಂಘಟಿತ ಸ್ವರೂಪ ಕೊಡುವುದು. ಅದು ಎಲ್ಲ ಕ್ಷೇತ್ರಗಳಲ್ಲಿ ಉಪಯುಕ್ತ ವಿಲ್ಲದಿದ್ದರೆ ಅದು ಸುಳ್ಳು. ನಾನು ಹೇಳುತ್ತೇನೆ ಜೀವನದ ಉಚ್ಚಸ್ತರ ಗಳೆಲ್ಲದರಲ್ಲಿಯೂ ಅಹಿಂಸೆಯ ಉಪಯೋಗವಿದೆ. ನಾನಂತೂ ಜೈನರ ಭಾಷೆಯನ್ನು ಒಪ್ಪುತ್ತೇನೆ. ನಿಯಮವು ನಿರಪವಾದವಾಗಿರಬೇಕೆಂದು ಅವರು ಹೇಳುತ್ತಾರೆ. ಭೂಮಿತಿಯ ಭಾಷೆಯು ಇದೇ. ಸಮಕೋಣದಲ್ಲಿ ೯೦ ಅಂಶಗಳು ಇರಲೇಬೇಕು. ಅಹಿಂಸೆ ಬಾಳುವೆಯ ಯಾವುದೇ ಕ್ಷೇತ್ರದಲ್ಲಿ ನಡೆಯಲಾರದಾದರೆ ಅದು ಸುಳ್ಳು. ಇದೊಂದು ಮಾತನ್ನು ನೆನಪಿನಲ್ಲಿಡಿರಿ. ನೀವೆಲ್ಲರೂ ವಿರುದ್ಧ ದಿಶೆಯಲ್ಲಿ ಹೊರಟು ಹೋದರೆ, ಮತ್ತು ಚರಖಾ ಮತ್ತು ಅಹಿಂಸೆಯನ್ನು ಬಿಟ್ಟುಬಿಟ್ಟರೆ ನಾನು ಹೇಳುವೆನು ನಿಮ್ಮಲ್ಲಿ ಸತ್ಯ ಮತ್ತು ಅಹಿಂಸೆಯು ಎಂದೂ ಇರಲೇ ಇಲ್ಲವೆಂದು. ಬಹುಶಃ ನಿಮಗೂ ಗೊತ್ತಿಲ್ಲದೇ, ನಿಶ್ಚಿತವಾಗಿ ನೀವೆಲ್ಲರೂ ಹಿಂಸಾವಾದಿಗಳಿದ್ದೀರಿ ಎಂದು ತಿಳಿಯಿರಿ. ನಾನು ನಿಮ್ಮ ನಿಂದೆಯನ್ನು ಮಾಡುವುದಿಲ್ಲ. ನೀವು ವಿಚಾರಮಾಡಿ, ತಿಳಿದುಕೊಂಡು ಸತ್ಯದ ಹೆಸರು ತೆಗೆದುಕೊಂಡು ಸಂಘದಲ್ಲಿ ಬರುತ್ತೀರಿ. ಆದರೆ ನೆನಪಿನಲ್ಲಿಡಿರಿ ಸತ್ಯ ಮತ್ತು ಅಹಿಂಸೆಯ ಮಠದಲ್ಲಿರುವ ಸನ್ಯಾಸಿಗಳಿಗೆ ಮಾತ್ರವಲ್ಲ, ನ್ಯಾಯಾಲಯಗಳಲ್ಲಿ ವಿಧಾನಸಭೆಗಳಲ್ಲಿ ಮತ್ತು ಇನ್ನು ಬೇರೆ ವ್ಯವಹಾರಗಳಲ್ಲಿ ಈ ಸನಾತನ ಸಿದ್ಧಾಂತಗಳು ಅನ್ವಯಿಸುತ್ತವೆ. ನಿಮ್ಮ ಶ್ರದ್ಧೆಯು ಬಹಳ ಕಠಿಣವಾದ ಪರೀಕ್ಷೆಗೆ ಒಳಗಾಗಲಿದೆ. ನೀವು ಅದಕ್ಕೆ ಹೆದರಿ ಪ್ರಾಣವನ್ನು ಉಳಿಸಿಕೊಳ್ಳಬಾರದು.

ಇವತ್ತು ಒಂದು ಕಠಿಣ ಪರೀಕ್ಷಾ ಪತ್ರ ನಿಮ್ಮ ಕೈಯಲ್ಲಿ ಕೊಡಲಾಗುತ್ತಿದೆ. ನೀವು ಅದರಲ್ಲಿ ಉತ್ತೀರ್ಣರಾಗುವಿರೊ ಇಲ್ಲವೋ ನಾನು ಅರಿಯೆ. ನಿಮಗೂ ತಿಳಿಯದು. ಆದರೂ ನಾನೇಕೆ ಹೆದರಲಿ? ನಾನು ನಿಮ್ಮನ್ನು ನಪುಂಸಕ ಮತ್ತು ಮೂರ್ಖರನ್ನಾಗಿ ಮಾಡಬಯಸುವುದಿಲ್ಲ. ಸತ್ಯ ಮತ್ತು ಅಹಿಂಸೆಯು ಮೂರ್ಖರಿಗೋಸ್ಕರ ಇಲ್ಲ. ಕಾಂತಿ, ಬಾಳ, ತನುಸುಖ ಮೊದಲಾದವರ ಬುದ್ಧಿಯ ವಿಕಾಸವು ಚರಖಾ ನಡೆಸಿ ಯಾಕೆ ಆಗುವುದಿಲ್ಲ? ಅವರು ಕಾಲೇಜಿಗೆ ಯಾಕೆ ಹೊರಟು ಹೋಗುತ್ತಾರೆ? ಚರಖಾ ನಡೆಸುವ ನಾವು ಕಾಂತಿ, ಬಾಳ ಮತ್ತು ತನುಸುಖ ಇವರು ತೋರಿಸುವಷ್ಟು ಬುದ್ಧಿಯನ್ನು ತೋರಿಸಲಾರೆವಾದರೆ, ನೀವೂ ಕಾಲೇಜಿಗೆ ಹೊರಟು ಹೋಗಿರಿ ಎಂದು ಹೇಳುವೆ. ಆದರೆ ವಸ್ತುತಃ ಕಾಂತಿ ಮೊದಲಾದವರಲ್ಲಿ ಬುದ್ಧಿಯ ವಿಕಾಸವಲ್ಲ, ವಿಲಾಸವಿದೆ. ಸತ್ಯ

ಮತ್ತು ಅಹಿಂಸೆಯ ಶೋಧ ಅಥವಾ ಅನುಸರಣದಿಂದ ಬುದ್ಧಿಯ ವಿಕಾಸವಾಗುತ್ತದೆ. ಹಾಗಾಗದಿದ್ದರೆ ಸತ್ಯ ಮತ್ತು ಅಹಿಂಸೆಯಾದರೂ ಸುಳ್ಳು ಅಥವಾ ನಾವಾದರೂ ಸುಳ್ಳು. ಸತ್ಯ ಮತ್ತು ಅಹಿಂಸೆಯು ಸುಳ್ಳಾಗುವುದು ಅಸಂಭವ. ಆದ್ದರಿಂದ ನಾವೇ ಸುಳ್ಳೆಂದು ಸಿದ್ಧವಾಗುತ್ತದೆ. ಎಲ್ಲ ರಚನಾತ್ಮಕ ಕಾರ್ಯಕ್ರಮವು ಇವುಗಳ ಶೋಧನೆಗೋಸ್ಕರ ಇದೆ. ನಾನೇನೋ ಚರಖಾ ನಡೆಸುತ್ತಲೇ ಇರುತ್ತೇನೆ. ಆದರೆ ೬೯ ವರ್ಷದವನಾಗಿದ್ದೇನೆ. ಆದ್ದರಿಂದ ನನ್ನ ಬುದ್ಧಿಯು ವಿಕಾಸವಾಗುತ್ತಲಿಲ್ಲ ಎಂದಲ್ಲ. ನಾನು ಇದನ್ನೆಲ್ಲ ಎಚ್ಚರಿಕೆಯಿಂದ ಪೂರ್ಣ ತಿಳುವಳಿಕೆಯಿಂದ ಹೇಳುತ್ತಿದ್ದೇನೆ. ವಿಧಾನಸಭೆಗೆ ಹೋಗಿ ಬಾಳ, ಕಾಂತಿ ಮತ್ತು ತನುಸುಖ ಇವರ ಬುದ್ಧಿಯು ವಿಕಾಸವಾಗುವುದಿಲ್ಲ. ಆದರೆ ನೀವು ಹೇಳಬಹುದು "ಉದ್ಯೋಗ ಮಾಡುವವರ ಬುದ್ಧಿಯ ವಿಕಾಸವೂ ಆಗುವುದಿಲ್ಲ" ಎಂದು. ಇದರ ಕಾರಣವೇನೆಂಧರೆ ಅವರು ಜಡವತ್ ಕೆಲಸಮಾಡುತ್ತಾರೆ. ಸಾಯುವರೆಗೂ ನನ್ನ ಬುದ್ಧಿಯ ವಿಕಾಸವು ಆಗುತ್ತ ಹೋಗುವುದು. ನನ್ನ ಬುದ್ಧಿಯ ಆಶ್ರಯ ಚರಖಾ. ಆದರೆ ನನ್ನ ಬುದ್ಧಿಯು ವಿಚಲಿತವಾಗುವುದಿಲ್ಲ. ವಿಲಾಸ ಸಂಬಂಧದ ಮಾತುಗಳನ್ನು ಓದಲು, ನೋಡಲು ಅಥವಾ ಕೇಳಲು ನನಗೆ ಅವಕಾಶವೇ ಸಿಕ್ಕುವುದಿಲ್ಲ. ಚರಖಾದ ಮೂಲಕ ನಾನು ದರಿದ್ರನಾರಾಯಣನ ಅನುಸಂಧಾನ ಮಾಡುತ್ತೇನೆ ಮತ್ತು ಈಶ್ವರನನ್ನು ಸಾಕ್ಷಾತ್ಕರಿಸುತ್ತೇನೆ. ಅದರ ಮೂಲಕ ನನ್ನ ಬುದ್ಧಿಯ ವಿಕಾಸವಾಗುತ್ತದೆ. ಮತ್ತು ಆಜನ್ಮ ಆಗುತ್ತಲೇ ಇರುವುದು. ಮನುಷ್ಯನು ಸಾಯುವವರೆಗೆ ಅವರ ಪೂರ್ಣ ಪರೀಕ್ಷೆಯಾಗುವುದಿಲ್ಲ. ಮೃತ್ಯುಸಮಯದವರೆಗೆ ಅವನ ಬುದ್ಧಿಯು ತೇಜಸ್ವಿಯಾಗಿ ಉಳಿಯದಿದ್ದರೆ ಅವನಿಗೆ ಸಫಲತೆಯು ಸಿಕ್ಕಲಿಲ್ಲ ಎಂದು ನಾನು ಎಣಿಸುತ್ತೇನೆ.

ಚರಖಾ ನಡೆಸುವವನ ಬುದ್ಧಿಯು ತೇಜಸ್ವಿಯಾಗಬಾರದೆಂದು ನಿಯಮವೇನೂ ಇಲ್ಲ. ನಾವು ಅದನ್ನು (ಚರಖಾ ನಡೆಸುವ ಕೆಲಸವನ್ನು) ಬುದ್ಧಿ ಯೋಗಪೂರ್ವಕವಾಗಿ ಮಾಡಬೇಕು. ಬಡಗಿಯ ಕೆಲಸವನ್ನು ಮಾಡಿದರೆ ಬಡಗಿತನದ ಶಾಸ್ತ್ರ ರಚಿಸಬೇಕು. ಇವತ್ತು ಚರಖಾಶಾಸ್ತ್ರಕ್ಕೋಸ್ಕರ ನಾನು ಎಂಥ ಕಠಿಣ ಪ್ರಶ್ನೆ ಎತ್ತುತ್ತಿರುವೆನು? ನನ್ನ ಎಲ್ಲ ಬುದ್ಧಿಯೂ ಅದರಲ್ಲಿ ತೊಡಗಿಹೋಗುತ್ತದೆ. ನಾನು ಚರಖಾದ ವಿಚಾರದಲ್ಲಿ ಮುಳುಗಿದಾಗ ಆನಂದಮಗ್ನನಾಗಿ ಹೋಗುತ್ತೇನೆ. ರಚನಾತ್ಮಕ ಕಾರ್ಯದ ಮೇರೆಯು ಎಲ್ಲಿಯವರೆಗೆ ಹೋಗುವುದೆಂಬುದನ್ನು ನನಗೆ ತಿಳಿಸಲು ಇನ್ನೂ ಸಾಧ್ಯವಾಗಿಲ್ಲ. ಮಣ್ಣಿನ ಸಂಬಂಧದಲ್ಲಿ ನಾನು ಹೇಳಿದ ಮಾತು ಇದರದೇ ಉದಾಹರಣೆ. ರಚನಾತ್ಮಕ ಕಾರ್ಯದ ಸರ್ವಾಂಗೀಣ ವಿಕಾಸವಾಗುವುದು. ಚರಖಾ ಒಂದು ಮಂತ್ರ. ಚರಖಾ ನಡೆಸುವವರು ಹತಾಶರಾದದ್ದು ಕಂಡಾಗ ಚಕಿತನಾಗುತ್ತೇನೆ. ಅವರ ಆತ್ಮದಲ್ಲಿ ವಿಕಾಸವೇಕೆ ಕಾಣುವುದಿಲ್ಲ? ಇದೆಲ್ಲ ಸನಾತನ ಸತ್ಯದ ಮಾತು ಹೇಳುತ್ತಿರುವೆನು. ಯಾಕೆಂದರೆ ನಾನು ಅದರ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಿರುವೆನು. ನಾನು ನಿರಾಶನಾಗಿ ಅಥವಾ ಸೋತು ಸೇಗಾಂವದಲ್ಲಿ ಹೋಗಿ ಕುಳಿತಿಲ್ಲ. ನನಗೆ ಪ್ರೇರಣೆಯಾದರೆ ಸೇಗಾಂವದಿಂದ ಅಲುಗಾಡುವುದಿಲ್ಲ ಎಂದೂ ಹೇಳುವೆನು. ನಾನಲ್ಲಿ ಯಂತ್ರದಂತೆ ಕೆಲಸ ಮಾಡುತ್ತಿಲ್ಲ. ಸತ್ಯ ಮತ್ತು ಅಹಿಂಸೆಯಿಂದ,

ಶರೀರ, ಬುದ್ಧಿ ಮತ್ತು ಆತ್ಮದ ಎಲ್ಲ ಶಕ್ತಿಗಳ ವಿಕಾಸವಾಗುತ್ತದೆ. ಸತ್ಯ ಮತ್ತು ಅಹಿಂಸೆಯ ಮೂಲಕ ನಮ್ಮ ಎಲ್ಲ ಶಕ್ತಿಗಳ ವಿಕಾಸವಾಗದಿದ್ದರೆ ನಾವೇ ಸುಳ್ಳು. ೧೯೨೦ರಿಂದ ನಾನು ಏನು ಸಾಧನೆ ಮಾಡಿರುವೆನೋ ಅದನ್ನೆಲ್ಲ ಚರಖಾ, ಹಿಂದೂ ಮುಸಲ್ಮಾರ ಐಕ್ಯ, ಮತ್ತು ಅಸ್ಪೃಶ್ಯತಾ ನಿವಾರಣೆಯ ಮೂಲಕವೇ ಮಾಡಿರುವೆನು. ನಾನು ಇದನ್ನೇ ಹೇಳಿದ್ದೆ: ಇವು ಸತ್ಯ ಮತ್ತು ಅಹಿಂಸೆಯ ಪ್ರತೀಕಗಳೆಂದು. ಅವುಗಳ ಶೋಧಕ್ಕೋಸ್ಕರ ಇನ್ನಾವ ಕಾರಣದಿಂದಲೂ ಅಲ್ಲ.

ಸತ್ಯ ಮತ್ತು ಅಹಿಂಸೆಯು ಸಾಧ್ಯವೂ ಹೌದು ಮತ್ತು ಸಾಧನವೂ ಹೌದು. ಒಳ್ಳೆ, ಸತ್ಯವಾದಿ ಜನರು ವಿಧಾನಸಭೆಗಳಲ್ಲಿ ಹೋದರೆ, ಅವು (ವಿಧಾನಸಭೆಗಳು) ಸತ್ಯ ಮತ್ತು ಅಹಿಂಸೆಯ ಶೋಧನೆಯ ಸಾಧನಗಳಾಗಬಹುದು. ಹಾಗೆ ಆಗದಿದ್ದರೆ ದೋಷವು ನಮ್ಮದೇ ಹೊರತು ಅವುಗಳದಲ್ಲ. ತಮ್ಮ ಬುದ್ಧಿಯ ವಿಕಾಸವಾಗಿಲ್ಲ ಎಂದೇ ಅವರ ಅರ್ಥವಾಗುವುದು. ಸಾಕು, ಈ ವಿಷಯವನ್ನು ಇಲ್ಲಿಗೇ ಬಿಡುತ್ತೇನೆ.

ಇನ್ನು ಬಾಳುಭಾಯಿಯವರ ಪ್ರಶ್ನೆಯನ್ನು ತೆಗೆದುಕೊಳ್ಳುತ್ತೇನೆ. ಅವರ ಪ್ರಶ್ನೆಯ ಸಾರವೇನೆಂದರೆ ನಾವು ಹಳ್ಳಿಗಳಲ್ಲಿ ಸೇವೆಗಾಗಿ ಹೋಗಬೇಕೆ ಅಥವಾ ರಾಜಕೀಯ ಜಾಗೃತಿಗಾಗಿ? ೧೭ ವರ್ಷಗಳವರೆಗೆ ಈ ಕಾರ್ಯಕ್ರಮವನ್ನು ಕಾರ್ಯಗತ ಮಾಡಿದ ಮೇಲೆಯೂ ಈ ಪ್ರಶ್ನೆಯನ್ನು ಕೇಳುವುದು ಇನ್ನೂ ಉಳಿದಿದೆ. ಇದು ನನಗೆ ವಿಚಿತ್ರ ವೆನಿಸುತ್ತದೆ. ನನ್ನ ದೃಷ್ಟಿಯಲ್ಲಿ ರಚನಾತ್ಮಕ ಕಾರ್ಯಕ್ರಮದಿಂದ ಭಿನ್ನವಾದ ಅಂಥದೇನೂ ರಾಜಕೀಯ ಶಿಕ್ಷಣವಿಲ್ಲ. ನಮ್ಮ ಉದ್ದೇಶ ಚರಖಾ ಮೊದಲಾದ ವಸ್ತುಗಳ ಪ್ರಚಾರ ಮಾಡುವುದೇ ಇದೆ. ಇದರ ಅರ್ಥ ನಾವು ಅವರಿಗೆ (ಹಳ್ಳಿಗರಿಗೆ) ರಾಜಕೀಯ ಶಿಕ್ಷಣವನ್ನು ಕೊಡಬಯಸುವುದಿಲ್ಲ ಎಂದಲ್ಲ. ಆದರೆ ರಾಜಕೀಯ ಶಿಕ್ಷಣ ಎಂದು ಸ್ವತಂತ್ರ ವಸ್ತುವೇನೂ ಇಲ್ಲ. ನಾವು ಅದರ ಜೊತೆಗೆ ನಿರಪೇಕ್ಷ ಸಂಪರ್ಕವನ್ನು ಸ್ಥಾಪಿಸಬೇಕು, ಅವರ ಶಕ್ತಿಯ ವಿಕಾಸವನ್ನು ಮಾಡಬೇಕು. ನಾನಂತೂ ಚರಖಾ, ಅಸ್ಪೃಶ್ಯತಾ ನಿವಾರಣಾ ಮುಂತಾದವು ಗಳನ್ನು ತೆಗೆದುಕೊಂಡು ಹೋಗುತ್ತೇನೆ. ಮತ್ತು ಅವರಿಗೆ ಅವುಗಳ ಶಿಕ್ಷಣ ಕೊಡುತ್ತೇನೆ. ಇದೇ ರಾಜಕೀಯ ಶಿಕ್ಷಣ. ಅದರಿಂದ ಭಿನ್ನವಾದ ವಿಷಯವೇನೂ ಇಲ್ಲ. ಇದಲ್ಲದೆ ಇನ್ನೇನಾದರೂ ಬೇರೆ ಮಾಡುವುದಾದರೆ ಮತ್ತು ಕೇವಲ ಮತ(ವೋಟು) ಬೇಡಲು ಜನರ ಹತ್ತಿರ ನಾನು ಹೋಗುವುದಾದರೆ, ಯಾವುದಕ್ಕೋಸ್ಕರ ನಾವು ಮಿಶನರಿ ಜನರಿಗೆ ದೋಷ ಕೊಡುತ್ತಾ ಬಂದಿದ್ದೇವೆಯೋ ಅದನ್ನೇ ನಾನು ಮಾಡಿದ ಹಾಗಾಗುವುದು. ಅವರ ಹತ್ತಿರ ಹೋಗಿ ನನ್ನ ಸ್ವಾರ್ಥದ ಮಾತುಗಳನ್ನಾಡುವುದಿಲ್ಲ. ನನ್ನ ಸ್ವಾರ್ಥವು ದೇಶದ ರಾಜನೀತಿಗೇ ಸಂಬಂಧಿಸಿದ್ದರೂ ನಾನು ಅವರ ಜೊತೆಗೆ ಆ ಮಾತುಗಳನ್ನಾಡುವು ದಿಲ್ಲ. ರಚನಾತ್ಮಕ ಕಾರ್ಯಕ್ರಮವು ಸ್ವಯಮೇವ ಒಂದು ಪ್ರಕಾರದ ರಾಜನೈತಿಕ ಶಿಕ್ಷಣವಾಗಿದೆ. ನಾನು ದಕ್ಷಿಣ ಆಫ್ರಿಕಾದಲ್ಲಿ ಇದನ್ನೇ ಮಾಡಿದೆ. ಅಲ್ಲಿಯೂ ನನ್ನೆದುರಿಗೆ ಸಂಖ್ಯೆಯ ಪ್ರಶ್ನೆಯಿರಲಿಲ್ಲ. ಅಲ್ಲಿ ಕೂಲೀ ಎಂದೆನಿಸಿಕೊಳ್ಳುವ ಜನರ ಹತ್ತಿರ ಹೋಗಿ ರಾಜನೈತಿಕ ಕೆಲಸದ ಮಾತನಾಡುತ್ತಿರಲಿಲ್ಲ. ಅವರ ಸಂಘಟನವನ್ನು ನಾನು ರಾಜನೈತಿಕ

ಸ್ವಾರ್ಥವನ್ನು ಸಾಧಿಸಲು (Exploitation) ಮಾಡಲಿಲ್ಲ. ಮೂರು ಪೌಂಡಿನ ಜಗಳದ ಮಾತು ಕೂಡ ಆಮೇಲೆ ಬಂದಿತು. ಅವರ ಸಂಘಟನವು ಸತ್ಯಾಗ್ರಹದಲ್ಲಿ ಉಪಯೋಗಕ್ಕೆ ಬಂದಿತು. ಆ ಜಗಳದಲ್ಲಿ ನನಗೆ ಎಷ್ಟೋ ಸಾರೆ ಈಶ್ವರನ ಸಾಕ್ಷಾತ್ಕಾರವಾಯಿತು. ಸಾಕ್ಷಾತ್ಕಾರವು ಇಷ್ಟು ಬಾರಿ ಆಯಿತು, ನಾನು ಕತ್ತೆಯಾದರೂ ಅದನ್ನು ಮರೆಯಲಾರೆ. ನನ್ನ ಸಂಘಟನದಿಂದ ಇಷ್ಟು ದೊಡ್ಡ ಪರಿಣಾಮವಾಗಬಹುದೆಂದು ನನಗೆ ವಿಶ್ವಾಸವಿರಲಿಲ್ಲ. ರಾಜಕೀಯ ಶಿಕ್ಷಣವನ್ನು ದಕ್ಷಿಣ ಆಫ್ರಿಕಾದಲ್ಲಿ ನಾನು ಈ ಪ್ರಕಾರ ಕೊಟ್ಟೆನು. ಅದು ಪೂರ ದಕ್ಷಿಣಾ ಆಫ್ರಿಕಾಕ್ಕೆ ಸಂಬಂಧಿಸಿದ ಮಾತಲ್ಲ, ಕೇವಲ ಟ್ರಾನ್ಸವಾಲಕ್ಕೆ ಸಂಬಂಧಿಸಿದ್ದು. ನನ್ನ ಆಶಯವಿಷ್ಟೆ : ನಾನು ಯಾವ ಜನರಲ್ಲಿ ಕೆಲಸ ಮಾಡಿದೆನೋ ಅವರಿಗೆ ಇದೇ ಪ್ರಕಾರದ ಮೂಕ ನಿರಪೇಕ್ಷ ಸೇವಾಭಾವದಿಂದ ರಾಜಕೀಯ ಶಿಕ್ಷಣವನ್ನು ಕೊಟ್ಟೆ; ಅವರು ತಮ್ಮಷ್ಟಕ್ಕೆ ತಾವೇ ಬಂದು ಕಾಂಗ್ರೆಸ್ಸಿನ ಜಯಘೋಷಣೆಯನ್ನು ಮಾಡ ತೊಡಗಿದರು. ದಕ್ಷಿಣ ಆಫ್ರಿಕಾದಲ್ಲಿರುವ ಸೌತ್ ಇಂಡಿಯನ್ ಕಾಂಗ್ರೆಸ್ಸಿಗೆ ಇರುವ ಪ್ರತಿಷ್ಠೆಗೆ ನೀವು ರಾಜಕೀಯ ಶಿಕ್ಷಣವೆನ್ನದಿದ್ದರೆ ಇನ್ನೇತಕ್ಕೆ ರಾಜಕೀಯ ಶಿಕ್ಷಣವೆನ್ನುವಿರಿ? ಈಚೀಚೆಗೆ ಹರ್ಟಝಾಗನೂ ಇದನ್ನು ಹೇಳುತ್ತಾ ಇದ್ದಾನೆ.

ಸೌತ್ ಆಫ್ರಿಕಾದಿಂದ ಇಲ್ಲಿಗೆ ಬಂದ ಮೇಲೂ ನನ್ನ ಅದೇ ನೀತಿಯು ಸ್ಥಿರವಾಗಿ ಉಳಿಯಿತು. ಖೇಡಾಜಿಲ್ಲೆಯಲ್ಲಿ ಕೆಲಸ ಮಾಡುವಾಗ ಕಾಂಗ್ರೆಸ್ಸಿನ ಹೆಸರು ಕೂಡ ತೆಗೆದುಕೊಳ್ಳಲಿಲ್ಲ. ಕೇವಲ ಕಂದಾಯದ ಮಾತು ಹೇಳಿದೆ. ಕೂಲಿಕಾರರಲ್ಲಿ ಕೆಲಸ ಮಾಡಿದೆ ಆಗಲೂ ಕಾಂಗ್ರೆಸ್ಸಿನ ಹೆಸರು ತೆಗೆದುಕೊಳ್ಳಲಿಲ್ಲ. ಚಂಪಾರಣ್ಯದಲ್ಲಿ ಹೋದೆ. ಅಲ್ಲಿಯೂ ಕಾಂಗ್ರೆಸ್ಸಿನ ಹೆಸರಿನಲ್ಲಿ ನಾನು ಕೆಲಸ ಮಾಡಲಿಲ್ಲ. ನಾನು ಮತ್ತು ನನ್ನ ಸಂಗಡಿಗರು ಕಾಂಗ್ರೆಸ್ಸಿನವರಿದ್ದೆವು. ಇಷ್ಟೆ ಯಥೇಷ್ಟವಾಗಿತ್ತು. ಆದರೆ ಇವತ್ತು ಚಂಪಾರಣ್ಯಕ್ಕೆ ಹೋದರೆ ಅಲ್ಲಿ ಏನು ನೋಡುವಿರಿ? ಅಲ್ಲಿರುವಷ್ಟು ಕಾಂಗ್ರೆಸ್ಸಿನ ಪ್ರಾಬಲ್ಯ ಇನ್ನೆಲ್ಲಾದರೂ ಇರುವುದೆ? ರಾಜೇಂದ್ರಬಾಬು ಬಿಹಾರದಲ್ಲಿ ಚಂಪಾರಣ್ಯದ ಭರವಸೆಯಿಂದಲೇ ಅಧಿಕಾರ ನಡೆಸುತ್ತಿರುವರು. ಇವತ್ತೂ ನಾನು ಅಲ್ಲಿ ಕಾಂಗ್ರೆಸ್ಸಿನ ಮಾತನಾಡುವುದಿಲ್ಲ. ಜಿಜ್ಞಾಸೆಯಿದ್ದಲ್ಲಿ ಜ್ಞಾನವನ್ನು ಕೊಡಬೇಕು. ಇವತ್ತಂತೂ ಅವರ ಹತ್ತಿರ ರೊಟ್ಟಿಯೂ ಇಲ್ಲ. ಅವರಿಗೆ ಚಂಪಾರಣ್ಯದ ಹೊರಗಿನ ಮಾತು ಕಲಿಸಿ ಏನು ಮಾಡಲಿ? ಅವರಿಗೇನು ಭೂಗೋಲ ಕಲಿಸಲೇ, ಇತಿಹಾಸವನ್ನು ಕಲಿಸಲೇ ಅಥವಾ ರಾಜನೀತಿಯನ್ನು ಕಲಿಸಲೇ? ಅವರಿಗೆ ದೇಶದ ವಿಷಯದಲ್ಲಿ ಉದ್ದುದ್ದ ಮಾತುಗಳನ್ನು ಹೇಳಿ ಏನು ಮಾಡಲಿ? ಎಲ್ಲ ವಿಷಯಗಳ ವಿಚಾರ ಮಾಡಿ ನಾನು ತಿಳಿದಿದ್ದೇನೆಂದರೆ. ರಾಜಕೀಯ ಶಿಕ್ಷಣದ ಹೆಸರಿನಿಂದ ರಾಜಕೀಯ ಶಿಕ್ಷಣವನ್ನು ಕೊಡುವುದಾಗುವುದಿಲ್ಲ. ನಾನು ಎಲ್ಲ ವಿಷಯಗಳ ಉದಾಹರಣೆಯನ್ನು ಕೊಟ್ಟು ರಾಜಕೀಯ ಶಿಕ್ಷಣವೆಂದು ಏತಕ್ಕೆ ಅನ್ನುತ್ತಾರೆ ಎಂಬುದನ್ನು ತಿಳಿಸಿದೆ. ರಾಜಕೀಯ ಶಿಕ್ಷಣವು ಬೇರೆ ವಿಷಯವೇನಲ್ಲ.

೧೯೨೦ರಲ್ಲಿ ನಾನು ಬಹಿಷ್ಕಾರವನ್ನು ರಾಜಕೀಯ ಕಾರ್ಯಕ್ರಮದ ಅವಿಭಾಜ್ಯಕ ಅಂಗವನ್ನಾಗಿ ಮಾಡಿದೆ. ಪಾರ್ಲಿಮೆಂಟನ್ನು ಮರೆಯಿರಿ. ಕೋರ್ಟುಗಳನ್ನು ಮರೆಯಿರಿ

ಎಂದು ನಾನು ಹೇಳಿದೆ. ಶಿಕ್ಷಣಾಲಯಗಳನ್ನು ಕೂಡ ಮರೆಯಿರಿ ಅನ್ನುವ ಮಟ್ಟಿಗೆ ಹೇಳಿದೆ. ಇಂಥ ಘೋರ ಕೆಲಸವನ್ನು ಮಾಡುವ ಈ ಮನುಷ್ಯ ಮಹಾ ಅಂದಗೆಟ್ಟವ ಎಂದು ಜನರು ಅನ್ನತೊಡಗಿದರು. ೧೯೨೦ರಲ್ಲಿ ನಾನು ಚರಖಾವನ್ನು ರಾಜನೀತಿಯ ಕೇಂದ್ರವನ್ನಾಗಿ ಮಾಡಿದೆ. ಅದನ್ನು ಯುದ್ಧದ ಸಾಧನವನ್ನಾಗಿ ಮಾಡಿದೆ. ಬಾರ್ಡೋಲಿಯಲ್ಲಿ ಕೂಡ ಇದನ್ನು ಸವಿನಯ ಕಾಯಿದೆ ಭಂಗದ ಅವಿಭಾಜ್ಯ ಅಂಗವನ್ನಾಗಿ ಮಾಡಲಾಯಿತು. ಆದ್ದರಿಂದ ೬ ತಿಂಗಳ ಒಳಗೆ ಪೂರ್ಣ ಬಾರ್ಡೋಲಿ ಖಾದಿಧಾರಿಯಾಗಬೇಕೆಂದು ನಿಬಂಧನೆಯಿತ್ತು. ಆ ಸಮಯದಲ್ಲಿ ಕಾಂಗ್ರೆಸ್ಸಿನ ಭಾಷೆಯೇ ಹೀಗಿತ್ತು. ವಿಠಲ ಭಾಯಿಯವರು ನನ್ನನ್ನು ಹೊಗಳಿದರು. ಆಗ ನನಗೆ ಎಷ್ಟು ನಾಚಿಕೆಯಾಯಿತೆಂದು ಹೇಳಲಿ? ಸರದಾ (ವಲ್ಲಭಬಾಯಿಯವರ)ರ ನಾಚಿಕೆಯನ್ನು ಏನು ಹೇಳಲಿ? ಇವತ್ತಿಗೂ ಬಾರ್ಡೋಲಿಯು ಚರಖಾ ನಿಬಂಧನೆಯನ್ನು ಪೂರ್ಣಗೊಳಿಸಿಲ್ಲ. ಅಲ್ಲಿ ಮದ್ಯಪಾನ ನಿಷೇಧವಾಗಲಿಲ್ಲ. ಅಸ್ಪೃಶ್ಯತಾ ನಿವಾರಣವು ಆಗಲಿಲ್ಲ. ಇವತ್ತು ನಾನು ಬಾರ್ಡೋಲಿಯ ವಿಶ್ವಾಸದ ಮೇಲೆ ಎರಡನೆ ಯುದ್ಧವನ್ನು ಹೂಡುವುದಿಲ್ಲ. ಆದರೆ ನನ್ನದಂತೂ ರಾಜಕೀಯ ಶಿಕ್ಷಣದ ಸಾಧನ ಇದೇ. ಕಾಂಗ್ರೆಸ್ ಕೂಡ ಇನ್ನೇನಾದರೂ ಮಾಡಿದರೆ ಸಫಲವಾಗಲಾರದು. ನಾನು ಇದೇ ಮಾಡುತ್ತ ಹೋಗುವೆನು ಎಂದು ನಾನು ಹೇಳುತ್ತೇನೆ. ನಾನು ಅಭಿಮಾನದಿಂದ ಹೇಳುತ್ತಿಲ್ಲ. ನನ್ನ ಶ್ರದ್ಧೆಯು ಎಷ್ಟು ಅಚಲವಾಗಿದೆ ಎಂಬುದನ್ನು ತೋರಿಸುತ್ತಿದ್ದೇನೆ. ಈ ವಿಷಯದಲ್ಲಿ ಕಾಂಗ್ರೆಸ್ಸಿಗೆ ಶ್ರದ್ಧೆಯಿಲ್ಲದಿದ್ದರೆ ಅವುಗಳನ್ನು ಅದು ಏಕೆ ಬಿಟ್ಟುಬಿಡುವುದಿಲ್ಲ? ನಾನು ಆಗ್ರಹಪೂರ್ವಕವಾಗಿ ಹೇಳುತ್ತೇನೆ. ವಿಷಯಗಳು ಕೆಟ್ಟವಿದ್ದ ಪಕ್ಷದಲ್ಲಿ ಅಥವಾ ವ್ಯರ್ಥವಿದ್ದ ಪಕ್ಷದಲ್ಲಿ ಗಾಂಧೀಜಿಯ ಗೌರವಕ್ಕಾಗಿ ಸ್ವೀಕಾರ ಮಾಡಬೇಡಿರಿ.

ಬಾಳುಭಾಯಿಯವರು M.A.LL.B. ಆಗಿರುವರು. ಆದರೂ ಅವರಿಗೆ ರಾಜಕೀಯ ಜಾಗೃತಿ ಶಾಸ್ತ್ರವು ಗೊತ್ತಿಲ್ಲ. ಈ ಸ್ಥಿತಿಯು ಅವರಲ್ಲೊಬ್ಬರದೇ ಅಲ್ಲ. ಓದು ಬರಹ ಬಲ್ಲ ನಾವು ರಾಜಕೀಯ ಶಿಕ್ಷಣ ಕೊಡುವುದರಲ್ಲೇನೋ ನಿಷ್ಣಾತರೆಂದು ಸಿದ್ಧವಾಗಿದ್ದೇವೆ. ನಮ್ಮ ಎಷ್ಟೋ ವಿಷಯಗಳು ಹೀಗೆ ಇವೆ. ಇಂಗ್ಲೀಷ್ ಶಿಕ್ಷಣದಿಂದ ನಾವು ಅಯೋಗ್ಯರಾಗಿದ್ದೇವೆ. ಪೂರ್ವಜರ ಸಂಸ್ಕಾರಗಳು ಛಿನ್ನಭಿನ್ನವಾಗಿ ಹೋಗಿವೆ. ಆದರೆ ನಾನು ಕೊನೆಗೆ ನಿಮಗೆ ಹೇಳುವುದೇನೆಂದರೆ ರಾಜಕೀಯ ಶಿಕ್ಷಣವಂತೂ ಈ ವಿಷಯಗಳ ಮೂಲಕವೇ ಆಗುವುದು. ಹೀಗೆ ನಮ್ಮ ಶ್ರದ್ಧೆಯಿದ್ದ ಪಕ್ಷದಲ್ಲಿ ನಾವು ದಣಿಯುವುದೂ ಇಲ್ಲ ಮತ್ತು ಸೋಲುವುದೂ ಇಲ್ಲ. ಸೋಶಾಲಿಸ್ಟರು ಬಂದರೆ ಬರಲಿ. ಅವರು ನನ್ನ ಸ್ನೇಹಿತರು. ಅವರು ನನ್ನೊಡನೆ ಜಗಳವಾಡುವುದಿಲ್ಲ. ಮತ್ತು ನಾನು ಅವರೊಡನೆ ಜಗಳಾಡಬಯಸುವುದಿಲ್ಲ. ಅವರು ರಾಜಕೀಯ ಶಿಕ್ಷಣವನ್ನು ಬೇರೆ ರೀತಿಯಿಂದ ಕೊಡಲು ಬಯಸುತ್ತಾರೆ. ನನ್ನ ಮತ್ತು ಅವರ ಸಾಧನಗಳಲ್ಲಿ ಭೇದವಿದೆ, ಸಾಧ್ಯವಲ್ಲಿಲ್ಲ. ಅವರೆದುರಿಗೂ ನಾನು ಇದೇ ಪ್ರೋಗ್ರಾಮ ಇಡುತ್ತೇನೆ. ನಾನೂ ಹೇಳುತ್ತೇನೆ "ಸಬ್ಬೈಭೂಮಿ ಗೋಪಾಲಕೀ (ಎಲ್ಲ ಭೂಮಿಯು ಗೋಪಾಲಕನದು)" ಎಂದು. ಆದರೆ ಇದೇ

ಕಾರ್ಯಕ್ರಮದ ಮೂಲಕವೇ ಸೋಶಾಲಿಷ್ಟರು ಎಲ್ಲ ಭೂಮಿಯು ತಮ್ಮದೆಂದು ಹಕ್ಕಿನಿಂದ ಹೇಳುವ ಸಾಹಸ ಮಾಡಬಲ್ಲರು. ಇವತ್ತು ಭೂಮಿಯ ಮೇಲೆ ಯಾರ ಒಡೆತನ ವಿರುವುದೋ ಅವರಿಂದ ಕಸಿದುಕೊಳ್ಳಬೇಕೆಂದು ನಾನು ಹೇಳಲಾರೆ. ನಾವೆಲ್ಲರೂ ಜಮುನಾಲಾಲರ ಧನದ ಒಡೆಯರಾಗಬೇಕೆಂದು ನಾನು ಬಯಸುತ್ತೇನೆ. ಆದರೆ ನಾನೊಬ್ಬನೇ ಅಲ್ಲ, ಮೂವತ್ತು ಕೋಟಿ ಜನ. ಎಲ್ಲ ಭೂಮಿಯೂ ಈಶ್ವರನದು. ಅಂದರೆ ಜನರದು. ಆದರೆ ಇದರ ಅರ್ಥ ಜಮುನಾಲಾಲರ ಭೂಮಿಯನ್ನು ಮೂವತ್ತು ಕೋಟಿ ಭಾಗಗಳನ್ನಾಗಿ ಮಾಡಬೇಕೆಂದಾಯಿತೇ? ಈ ಮೂವತ್ತು ಕೋಟಿ ಜನರು ಹೇಗೆ ಒಡೆಯರಾಗಬೇಕು, ಅವರನ್ನು ಯಾರು ಮಾಡಬೇಕು, ಮತ್ತು ಇವರಲ್ಲಿ ಯಾರು ಎಲ್ಲರಿಗೋಸ್ಕರ ಅಥವಾ ಎಲ್ಲರ ವತಿಯಿಂದ ಆ ಸಂಪತ್ತಿಯ ಒಡೆಯನಾಗಬೇಕು? ಕೊನೆಗೆ ಯಾರನ್ನಾದರೂ ಪ್ರತಿನಿಧಿ ಮಾಡಲೇಬೇಕಾಗುವುದು. ಇದರ ಬದಲು ಅವರೇ (ಜಮುನಾಲಾಲರೇ) ನಮ್ಮ ಪ್ರತಿನಿಧಿಯಾಗಿ ಹಗಲಿರುಳು, ಇದ್ದು ಮೂವತ್ತು ಕೋಟಿ ಜನರ ಸಂಪತ್ತಿ ಎಂದು ಅನುಸಂಧಾನವನಿಟ್ಟುಕೊಂಡರೆ ಏನು ಕೇಡು? ಅವರು ಶೇಗಾಂವದಲ್ಲಿಯ ಎಲ್ಲ ಭೂಮಿಯನ್ನು ನನಗೆ ಕೊಟ್ಟಿದ್ದಾರೆ. ಆದರೆ ಅದನ್ನು ನಾನು ತೆಗೆದುಕೊಳ್ಳಲಾರೆ. ಯಾಕೆಂದರೆ ನಾನು ಮೂರ್ಖನಿದ್ದೇನೆ. ಈ ವಿಷಯಗಳು ನನಗೆ ತಿಳಿಯವುದಿಲ್ಲ. ಅವರ ದಿವಾನನಿಗೆ ನನಗಿಂತ ಹೆಚ್ಚು ಗೊತ್ತಿದೆ. ಇವತ್ತಂತೂ ನಾನು ಕೇವಲ ಲಾಭದ ಒಡೆಯನು. ಮತ್ತು ಅವರು ಲುಕ್ಸಾನದ ಒಡೆಯರು. ಜಮುನಾಲಾಲಜೀ ಮತ್ತು ರಾಮೇಶ್ವರ ಬಿರಲಾ ಇವರಂಥ ಶ್ರೀಮಂತರ ಹಣದ ಲಾಭವನ್ನು ಪಡೆಯುವುದಿದ್ದರೆ ನನ್ನ ಬುದ್ಧಿಯ ಉಪಯೋಗಮಾಡಿರಿ. ಸೇಗಾಂವದ ಆಸ್ತಿಯಿಂದ ನಾನು ಲಾಭವನ್ನು ಪಡೆಯಲಾರೆ. ಯಾಕೆಂದರೆ ನನ್ನ ಹತ್ತಿರ ಜನರೂ ಇಲ್ಲ ಮತ್ತು ಬುದ್ಧಿಯೂ ಇಲ್ಲ. ಸೇಗಾಂವದ ಹೊರಗಿನ ಸಂಪತ್ತಿಯ ಒಂದು ಕವಡಿಯೂ ನನಗೆ ಬೇಡ. ನನ್ನ ಹತ್ತಿರ ಎಲ್ಲ ಸಾಧನಗಳಿವೆ, ಆದರೆ ಶಿಥಿಲತೆ ನನ್ನದೇ. ಈಚೀಚೆಗೆ ತಿರುವುಮುರುವು ವ್ಯವಹಾರ ವಾಗುತ್ತಿದೆ. ಮನೆಯನ್ನು ನಾನು ಕಟ್ಟುತ್ತೇನೆ, ಅದರ ಹಣವನ್ನು ಅವರೇ ಕೊಡ ಬೇಕಾಗುತ್ತದೆ. ಇದು ನೂರಕ್ಕೆ ನೂರು ಸತ್ಯ. ನಾನು ಎಷ್ಟು ಅರಗಿಸಿಕೊಳ್ಳಬಲ್ಲೆನೋ ಅಷ್ಟು ತೆಗೆದುಕೊಳ್ಳುತ್ತೇನೆ. ಇದಕ್ಕಿಂತ ಹೆಚ್ಚು ಯಾವ ಶ್ರೀಮಂತನಿಂದ ಏನು ಬೇಡಲಿ? ಬನ್ನಿ, ನಾನು ನಿಮಗೆ ನಿಮಂತ್ರಣವನ್ನು ಕೊಡುತ್ತೇನೆ. ಯಾವ ನಿಬಂಧನೆಯಿಂದ ನಾನು ಸೇಗಾಂವದಲ್ಲಿ ಕುಳಿತಿರುವೆನೋ ಅದೇ ನಿಬಂಧನೆಯಿಂದ ನಿಮ್ಮಲ್ಲಿ ಯಾರಾದರೂ ಜಮುನಾಲಾಲರ ಎರಡನೇ ಹಳ್ಳಿಯಲ್ಲಿ ಹೋಗಿ ಕೂಡಿರಿ. ಆದರೆ (ಹಾಗೆ ಹೋಗುವ) ಮನುಷ್ಯನು ನನ್ನ ಮೆಚ್ಚಿಕೆಯವನಿರಬೇಕು (ನಾನು ಹೌದೆಂದು ಒಪ್ಪಿಕೊಂಡವನಿರಬೇಕು.) ಮತ್ತು ನಾನು ಮಾಡಿದ ರಚನಾತ್ಮಕ ಕಾರ್ಯಕ್ರಮವನ್ನು ಪೂರ್ಣಮಾಡಲು ಸಿದ್ಧನಿರಬೇಕು. ಆದರೆ ಇದು ಬೇರೆ ಕಥೆ. ನಾನು ಚರಖಾದ ವಿಷಯದಲ್ಲಿ ಹೇಳುತ್ತಿದ್ದೆ.

ಒಂದು ಸಮಯವಿತ್ತು; ಆಗ ಸಿ.ಪಿ.ರಾಮಸ್ವಾಮಿ ಅಯ್ಯರ ಚರಖಾ ರಾಜಕೀಯ ಶಸ್ತ್ರವೆಂದು ಭಾವಿಸುತ್ತಿದ್ದರು. ಮತ್ತು ಮಹಮ್ಮದಅಲಿ ಅದು ನಮ್ಮ ತೋಪು ಅನ್ನುತ್ತಿದ್ದರು.

ಅದೇ ಸಮಯದಲ್ಲಿ ಖಾಡಿಲ್ಕರ್ ಚರಖಾದ ಮೇಲೆ ಒಂದು ಗೀತೆಯ ಶ್ಲೋಕವನ್ನು ಹಾಡಿತೋರಿಸಿದ್ದರು.

> ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋನ ವಿದ್ಯತೆ!
> ಆದರೆ ಇದಕ್ಕಿಂತಲೂ ಹೆಚ್ಚು ಮಹತ್ವದ್ದು ಶ್ಲೋಕದ ಉತ್ತರಾರ್ಧ.
> ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋಭಯಾತ್.

ಮಹಮ್ಮದ ಆಲಿಯೊಂದಿಗಿದ್ದ ನನ್ನ ಸ್ನೇಹದ ವಿಷಯದಲ್ಲಿ ನನಗೆ ದುಃಖವಿಲ್ಲ. ಅವನು ಪ್ರಾಮಾಣಿಕ ಮತ್ತು ಈಶ್ವರನಲ್ಲಿ ನಂಬಿಕೆಯುಳ್ಳವನಿದ್ದನೆಂದು ಹೇಳುತ್ತೇನೆ. ಆ ಸಮಯದಲ್ಲಿ ಅವನು ಏನು ಹೇಳುತ್ತಿದ್ದನೋ ಅದನ್ನು ಶುದ್ಧ ಮತ್ತು ಸತ್ಯವೆಂದು ತಿಳಿದುಕೊಂಡು ಹೇಳುತ್ತಿದ್ದ. ಆದರೆ ಈಶ್ವರನ ಮಾರ್ಗದಲ್ಲಿ ಕತ್ತಿಯನ್ನೆತ್ತಬಹುದು ಮತ್ತು ಸುಳ್ಳೂ ಆಡಬಹುದು ಎಂದು ಹೇಳುತ್ತಿದ್ದುದೇನೋ ನಿಜ. ಆದರೆ ಎಲ್ಲ ಧರ್ಮಗಳ ಅನುಯಾಯಿಗಳೂ ಹೀಗೆಯೇ ಹೇಳುತ್ತಾರೆ. ಕ್ರಿಶ್ಚನ ಜನರಲ್ಲಿಯೂ ಅಂಥದೇನೂ ಬಂಧನವಿಲ್ಲ. ಸನಾತನಿಗಳಂತೂ ಸ್ಪಷ್ಟವಾಗಿ ಹೇಳುತ್ತಾರೆ, ಮನುವಿನ ಒಂದು ಶ್ಲೋಕದ ಪ್ರಮಾಣವನ್ನೂ ಕೊಡುತ್ತಾರೆ. "ಹಸುವನ್ನು ಉಳಿಸಲೋಸುಗ, ಹೆಂಗಸರೊಡನೆ ಮತ್ತು ವಿವಾಹ ಮೊದಲಾದವುಗಳ ಸಂದರ್ಭದಲ್ಲಿ ಸುಳ್ಳು ಹೇಳಬಹುದು" ಎಂದು. ಧರ್ಮದ ಹೆಸರಿನಲ್ಲಿ ಅಧರ್ಮವೂ ಪ್ರತಿಷ್ಠಿತವಾಗಿಬಿಡುತ್ತದೆ. ಆದರೆ ಇದರಲ್ಲಿ ಧರ್ಮದ ಮಹತ್ವವೇ ಇದೆ. ಸನಾತನಿಗಳಂತೂ ನನಗೆ ಹೇಳಿಬಿಟ್ಟಿದ್ದಾರೆ "ನೀವಂತೂ ಯವನರು. ನೀವು ಧರ್ಮಾಧರ್ಮವನ್ನು ಏನು ಬಲ್ಲಿರಿ? ನಿಮ್ಮ ಸತ್ಯವು ಅಸತ್ಯದಕ್ಕಿಂತ ಹಾನಿಕರ" ಎಂದು. ಧರ್ಮದ ಹೆಸರಿನಲ್ಲಿ ಅಧರ್ಮ ಎಲ್ಲಿಯವರೆಗೆ ಹೋಗಬಹುದು. ಇದಕ್ಕೆ ಈ ವೃತ್ತಿಯೇ ಪ್ರಮಾಣ.

ನಾವು ಹಳ್ಳಿಗಳಲ್ಲಿ ಜನರಿಗೆ ರಾಜನೈತಿಕ ಶಿಕ್ಷಣವನ್ನು ಕೊಡಲು ಹೋಗುತ್ತೇವೆ, ಇದು ನಿಜ. ಆದರೆ ನಾನು ತಿಳಿಸುತ್ತಿರುವಂತೆ ರಚನಾತ್ಮಕ ಕಾರ್ಯಕ್ರಮದಿಂದ ರಾಜನೈತಿಕ ಶಿಕ್ಷಣ ಸಾಧ್ಯ. ಜನರೆದುರಿಗೆ ನಾವು ರಾಜಕೀಯ ಶಬ್ದದ ಉಚ್ಚಾರವನ್ನೂ ಮಾಡಬಾರದು. ಇದೇ ಮಾತು ಧರ್ಮಕ್ಕೂ ಅನ್ವಯಿಸುತ್ತದೆ. ಅವರಿಗೆ ಧರ್ಮದ ಹೆಸರನ್ನೂ ಹೇಳಬಾರದು. ಅವರಿಗೆ "ಕಕ್ಕಸನ್ನು ಸ್ವಚ್ಛ ಮಾಡಿರಿ, ಆಮೇಲೆ ಸ್ನಾನ ಮಾಡಿರಿ" ಎಂದು ಹೇಳಿರಿ. ಆರೋಗ್ಯಶಾಸ್ತ್ರವು ಧರ್ಮದ ಪ್ರತಿಕೂಲವೇನಿಲ್ಲ. ಆದರೆ ಧರ್ಮ ಅವರ ಬುದ್ಧಿಗೆ ನಿಲುಕುವುದಿಲ್ಲ. ಇದು ಅವರ ನಿಕೃಷ್ಟತೆಯ ಪ್ರಮಾಣವಲ್ಲ; ಆದರೆ ನಮ್ಮ ನೀಚತೆಯ ಪ್ರಮಾಣ. ಅವರೆದುರಿಗೆ ಸತ್ಯ ಮತ್ತು ಅಹಿಂಸೆಯ ಹೆಸರು ತೆಗೆದುಕೊಳ್ಳುವಾಗ ನನಗೆ ಸಂಕೋಚವೆನಿಸುತ್ತದೆ. ಇದುವರೆಗೂ ನಾವು ಅವರನ್ನು ಕೆಳಗಿಟ್ಟಿರುವೆವು. ಅವರ ಜೊತೆಗೆ ನಾನು ಕೇವಲ ಆಚರಣದ ಮಾತುಗಳನ್ನಾಡಬಲ್ಲೆ. ನಾನು ಅವರಿಗೆ ಬ್ರಹ್ಮಚರ್ಯವನ್ನೇನು ತಿಳಿಸಲಿ? ಅವರಂತೂ ಅದರ ಉಚ್ಚಾರವನ್ನೂ ಮಾಡಲಾರರು. "ಭರಮಚಾರ" ಎನ್ನುತ್ತಾರೆ. ಅವರಿಗೆ ಅದು ತಿಳಿಯುವುದೇ ಇಲ್ಲವಾದ್ದರಿಂದ ಅವರಿಗೆ ಅದು "ಭರಮ ಚಾರವೇ". ನಾನೋ ಅವರ ನಡತೆ ನಡಾವಳಿಗಳನ್ನು ತಿಳಿಯಬಯಸುತ್ತೇನೆ ಮತ್ತು

ಅವರ ವಿಶ್ವಾಸವನ್ನು ಸಂಪಾದಿಸಲು ಬಯಸುತ್ತೇನೆ. ಅವರಲ್ಲಿ ಒಬ್ಬನು ನನ್ನ ಹತ್ತಿರ ಬಂದು "ನಾನು ಅತ್ತಿಗೆಯ ಜೊತೆಗೂ ಸಂಬಂಧ ಮಾಡುತ್ತೇನೆ; ನಮ್ಮಲ್ಲಿ ಹೀಗೆಯೇ ನಡೆಯುತ್ತವೆ" ಎಂದು ಹೇಳಿದರೆ ನಾನು ಅವನನ್ನು ತಿರಸ್ಕರಿಸಲೆ? ಈ ಪಾಪವಂತೂ ನಮ್ಮ ತಲೆಯ ಮೇಲಿದೆ. ನಾನು ಸತ್ಯ ಮತ್ತು ಅಹಿಂಸೆಯ ಹೆಸರು ತೆಗೆದುಕೊಳ್ಳದೆ ಚಿಕ್ಕ ಚಿಕ್ಕ ಮಾತುಗಳ ಮೂಲಕ ನಿಧಾನವಾಗಿ ಅವುಗಳ ಪ್ರಚಾರ ಮಾಡುತ್ತೇನೆ.

ನಾನು ಬೇರೆ ಯಾವ ರೀತಿಯನ್ನೂ ಅರಿಯೆ. ನಾವು ಅಹಿಂಸಕ ಸ್ವರಾಜ್ಯವನ್ನು ಬಯಸುವುದಾದರೆ ಅದು ಇದೇ ಪ್ರಕಾರ ಬರುವುದು. ಮತ್ತು ಯಾರೂ ನಮ್ಮ ವಿರೋಧವನ್ನು ಮಾಡಲಾರರು, ಇಂಗ್ಲಂಡಾಗಲಿ ಅಥವಾ ಅಮೇರಿಕೆಯಾಗಲಿ ಯಾರೂ ನಮ್ಮ ವಿರೋಧ ಮಾಡಲಾರರು.

ಬಾಳುಭಾಯಿಯವರು ಈಗ ಪ್ರಶ್ನೆ ಮಾಡುತ್ತಿದ್ದಾರೆ. ಇದರ ಉತ್ತರವನ್ನು ೧೭ ವರ್ಷಗಳ ಮೊದಲೇ ಕೊಡಲಾಗಿತ್ತು ೧೯೨೦ರಲ್ಲಿ ಇದೇ ಚರಖಾದ ಮೇಲೆ ಜನರು ಪ್ರಾಣ ಕೊಡುವಷ್ಟು ಅನುರಕ್ತರಾಗಿದ್ದರು. ಮೋತೀಲಾಲಜೀ, ಮಹಮ್ಮದಅಲಿ, ಶೌಕತ್‌ಅಲಿ, ಅಬ್ಬಾಸ ತೈಯಬಜಿ, ಎಲ್ಲರೂ ಮುಗ್ಧರಾಗಿದ್ದರು. ಎಲ್ಲರೂ ನೂಲಲು ತೊಡಗಿದ್ದರು. ಪಾರ್ಲಿಮೆಂಟಿನ ಮೂಲಕ ಕೆಲಸವಾಗದೆಂದು ತಿಳಿಯುತ್ತಿದ್ದರು. ಇವತ್ತು ನಾನೂ ಪಾರ್ಲಿಮೆಂಟಿನಲ್ಲಿ ಹೋಗಲು ಅನುಮತಿ ಕೊಡುವಷ್ಟು ಉದಾರಚಿತ್ತನಾಗಿದ್ದೇನೆ. ರಾಜಕೀಯ ಶಿಕ್ಷಣವನ್ನು ಕೊಡುವ ಅನುಭವಸಿದ್ಧ ಪದ್ಧತಿಯು ಇದೆ. ಇದೇ ಪದ್ಧತಿಯಿಂದ ಜನರು ತಯಾರು ಆಗುವುದು. ನಾಳೆ ಸೇಗಾಂವದ ಎಲ್ಲ ಜನರು ಸ್ವಾವಲಂಬಿಗಳಾಗಿ ತಮ್ಮ ಊರನ್ನು ಚೊಕ್ಕಟವಾಗಿ ಇಟ್ಟು ಯಾರಿಂದಲೂ ಒಂದು ಕಾಸು ಕೂಡ ಬಯಸದಿದ್ದರೆ ಅವರ ಸ್ವಾತಂತ್ರ್ಯದಲ್ಲಿ ಇನ್ನು ಉಳಿಯಿತೇನು? ಅವರು ಹೇಳುವರು "ಜಮುನಾಲಾಲ ಸೇಠ ಯಾರು? ಹೊಲವನ್ನು ನಾವು ಉಳುತ್ತೇವೆ, ಹೊಲವು ನಮ್ಮದು. ಅದಂತೂ ಜಮುನಾಲಾಲರು ಹುಟ್ಟುವುದಕ್ಕಿಂತ ಮೊದಲಿನಿಂದಲೂ ಇದೆ. ನಾವು ಹೆದರುವುದಿಲ್ಲ. ನಾವು ಪೋಕರಿತನವನ್ನು ಮಾಡುವುದಿಲ್ಲ. ಜಮುನಾಲಾಲರ ದಿವಾನರು ಬಂದರೆ ನಾವು ಅವರನ್ನು ಹೊಡೆಯುವುದಿಲ್ಲ. ನಮ್ಮ ಹೊಲದಿಂದ ದೂರ ಸರಿಸುವೆವು". ಅವರಿಗೆ ಇವೆಲ್ಲ ಕಲಿಸಬೇಕಾಗುವುದಿಲ್ಲ. ಎಲ್ಲ ಭೂಮಿಯ ಒಡೆಯರು ಜನರು ಎಂದು ಒಪ್ಪೋಣ. ಆದರೆ ಅದನ್ನು ಹೇಗೆ ಸಿದ್ಧಮಾಡುವುದು? ಎರಡೇ ಪದ್ಧತಿಗಳಿವೆ. ಯುದ್ಧದಿಂದ ಅಥವಾ ತಿಳಿಸೋಣದರಿಂದ. ತಿಳಿಸಿ ಕೆಲಸ ಮಾಡುವುದು ಧರ್ಮಮಾರ್ಗ. ಇದು ನಿಮಗೆ ಮಾಡಲಿಕ್ಕಾಗದಿದ್ದರೆ ಕಿಶೋರಲಾಲರ ಹೇಳಿಕೆ ಸತ್ಯವೆಂದಾಗುವುದು. ಆಗಂತೂ ಸೋಶಾಲಿಸ್ಟ ಜನರೇ ಸತ್ಯವಾದಿಗಳೆಂದು ಸಿದ್ಧವಾಗುವುದು ಮತ್ತು ಆಗ ನಾನು ನಿಮಗೆ ಅವರ ಹಿಂದೇ ಹೋಗಿರಿ ಎಂದು ಹೇಳಬೇಕಾಗುವುದು. ಅವರು ಕೂಡ ಜನರ ಹಿತಕ್ಕೋಸ್ಕರವೇ ನಿಂತಿದ್ದಾರೆ. ಅವರ ಪ್ರಭಾವವು ಜನರ ಮೇಲೆ ಬೀಳದಿದ್ದರೆ ನನಗೆ ನಾಚಿಕೆಯಾಗುವುದು. ಆದರೆ ಸೇವಾ ಕ್ಷೇತ್ರದಲ್ಲಿ ಅವರಿಗಿಂತ ಮುಂಚೆ ನೀವು ಬಂದಿರುವಿರಿ.

ಸಾಕಷ್ಟು ಪರಿಶ್ರಮ ಮಾಡಿರುವಿರಿ. ನಿಮ್ಮ ಪ್ರಭಾವವು ಬೀಳದಿದ್ದರೆ ನನಗೆ ಇನ್ನೂ ಹೆಚ್ಚು ನಾಚಿಕೆಯಾಗುವುದು.

ಆದರೆ ಈ ಪ್ರಭಾವವು ಹೇಗೆ ಬೀಳಬೇಕು? ಗಿಣಿಯಂತೆ 'ರಚನಾತ್ಮಕ ಕಾರ್ಯ' 'ರಚನಾತ್ಮಕ ಕಾರ್ಯ' ಎಂದು ಉರು ಹೊಡಿಯೋಣದರಿಂದ ಕೆಲಸವಾಗದು. ಚರಖಾ ಸಂಘದಕ್ಕಿಂತ ನಿಮ್ಮ ಪ್ರವೃತ್ತಿ ಹೆಚ್ಚು ತೇಜಸ್ವಿಯಾಗಿದೆ. ಚರಖಾ ಸಂಘದಲ್ಲಿ ತಮಗೆ ಕೊಟ್ಟ ಕೆಲಸವನ್ನಷ್ಟು ಮಾಡಿ ಮುಗಿಸುವಂಥ ಜನರೂ ಇದ್ದಾರೆ. ನಿಮ್ಮಲ್ಲಿ ಜ್ಞಾನಪೂರ್ವಕ ವಾಗಿ ಅದರ ಶಾಸ್ತ್ರವನ್ನು ನಿರ್ಮಾಣ ಮಾಡುವಂಥ ಜನರು ಬರುತ್ತಾರೆ. ಚರಖಾ ಸಂಘದ, ಉದ್ಯೋಗ ಸಂಘದ ಕಾರ್ಯಕ್ಷೇತ್ರವು ಮರ್ಯಾದಿತವಾಗಿರುತ್ತದೆ. ಗೋ ಸೇವಾ ಸಂಘದಂಥ ಅನ್ಯ ಸಂಸ್ಥೆಗಳ ಸ್ಥಿತಿಯೂ ಇದೇ. ನಿಮ್ಮ ಕಾರ್ಯಕ್ಷೇತ್ರವು ವ್ಯಾಪಕ. ಗಾಂಧೀ ಸೇವಾ ಸಂಘವು ವಿರಾಟಪುರುಷ. ಕಾಂಗ್ರೆಸ್ಸಿನ ಜೊತೆಗೆ ಸ್ಪರ್ಧೆ ಮಾಡುವ ಮಾತು ಹೇಳುತ್ತಿಲ್ಲ. ಕಾಂಗ್ರೆಸ್ ಕೂಡ ವಿರಾಟಪುರುಷ. ಆದರೆ ಅದು ಲೋಕನಿರ್ಮಿತ. ಅದು ಅವರ (ಜನರ) ಬಲವನ್ನೂ ಮತ್ತು ದುರ್ಬಲತೆಯನ್ನೂ ಪ್ರಕಟಮಾಡುತ್ತದೆ. ಆದರೆ ನಿಮ್ಮ ಸಂಸ್ಥೆಯು ಸ್ವಯಂ ನಿರ್ಮಿತವಾಗಿದೆ. ಅದು ಸತ್ಯ ಮತ್ತು ಅಹಿಂಸೆಯಿಂದ ಹುಟ್ಟಿದ ಎಲ್ಲ ಕಾರ್ಯಕ್ರಮವನ್ನೂ ಪೂರ್ಣ ಮಾಡುವ ನಿಶ್ಚಯ ಮಾಡಿದಂಥ ಜನರ ಸಮುದಾಯ. ಅದೊಂದು ಬಲಿಷ್ಠವೃಕ್ಷ. ಚರಖಾ ಸಂಘ ಮತ್ತು ಉದ್ಯೋಗ ಸಂಘ ಅದರ ಶಾಖೆಗಳು ಎನ್ನಬಹುದು. ನಿಮ್ಮ ಸಂಘವು ನಿಮ್ಮ ಶಕ್ತಿಯ ದ್ಯೋತಕವಾಗಿದೆ ಅಥವಾ ಆಗಬೇಕು. ಸತ್ಯ ಮತ್ತು ಅಹಿಂಸೆಯ ಶಕ್ತಿ ಇದರ ಮೂಲಕ ಪ್ರಕಟವಾಗುವುದು. ಆದ್ದರಿಂದ ಇದರಲ್ಲಿ ಬಲದ ಪ್ರದರ್ಶನವೂ ಆಗಬೇಕು. ಇದನ್ನು ಜಮುನಾಲಾಲಜಿ ಮಾಡಿರಬಹುದು, ಆದರೆ ಇದು ಅವರ ಸಂಸ್ಥೆಯಲ್ಲ. ಸ್ವಯಂ ಜಮುನಾಲಾಲರು ಎಲ್ಲರಿಕಿಂತ ಕೆಳಗಿನ ಶ್ರೇಣಿಯ ಸದಸ್ಯರಾಗಿದ್ದಾರೆ. ಮತ್ತು "ನಾನು ಪದಾಧಿಕಾರಿಯಾಗುವುದಿಲ್ಲ" ಎಂದು ಅವರು ಹೇಳಿದ್ದಾರೆ. ಇದು ಕೇವಲ ಅವರ ನಮ್ರತೆಯ ಪ್ರಮಾಣವಲ್ಲ, ಬುದ್ಧಿಮತ್ತೆಯ ಪ್ರಮಾಣವೂ ಹೌದು".

ನಾವು ರಚನಾತ್ಮಕ ಕಾರ್ಯದ ಮೂಲಕ ಹಿಂದೂಸ್ಥಾನದ ಎಲ್ಲ ಪ್ರಕಾರದ ಉನ್ನತಿ ಮಾಡಬಯಸುತ್ತೇವೆ. ಒಂದೊಂದು ಕೆಲಸವನ್ನು ಬೇರೆ ಬೇರೆಯಾಗಿ ತಮ್ಮ ತಮ್ಮ ಮರ್ಯಾದಿತ ರೂಪದಲ್ಲಿ ಮಾಡುವ ಬೇರೆ ಬೇರೆ ಸಂಸ್ಥೆಗಳಿವೆ. ನಿಮ್ಮ ಕಾರ್ಯವು ಅವುಗಳಿಗೆ ಭೂಷಣವಾಗಬೇಕು. ಇವತ್ತು ನಾನು ನಿಮ್ಮ ಕಾರ್ಯವು ಭೂಷಣವಾಗಿದೆ ಎಂದು ಹೇಳಲಾರೆ. ಆದ್ದರಿಂದ ನಮ್ಮ ಮುಖ್ಯ ಪ್ರವೃತ್ತಿಯು ರಚನಾತ್ಮಕ ಕಾರ್ಯವೆಂದು ಅಸಂದಿಗ್ಧವಾಗಿ ನಾವು ಹೇಳಬೇಕು. ಮತ್ತು ಅದೇ ಉದ್ದೇಶವನ್ನು ಪೂರ್ಣಗೊಳಿಸಲು ಪಾರ್ಲಿಮೆಂಟಿನಲ್ಲಿ ಹೋಗಬಯಸುತ್ತೇವೆ.

ನಾನು ಇದುವರೆಗೆ ಏನು ಹೇಳಿದೆನೋ ಅದರಿಂದ ಪೂರ್ಣ ಸಮಾಧಾನವಾಗದಿದ್ದರೆ ಅದರ ಕಾರಣ ನನ್ನ ಭಾಷೆ. ನನಗೆ ನನ್ನ ಭಾಷೆಯನ್ನು ಕಾಯದೇ ದೃಷ್ಟಿಯಿಂದ

ಪೂರ್ಣಮಾಡಲು ಸಾಧ್ಯವಾಗಿಲ್ಲ. ಆದರೆ ಅದಂತೂ ಮೊನ್ನೆಯಿಂದಲೇ ಸ್ಪಷ್ಟವಾಗಿದೆ. ನನ್ನ ಭಾಷೆಯೇ ಅಪೂರ್ಣ. ಸ್ವಯಂ ಅಪೂರ್ಣನಿದ್ದವನ ಭಾಷೆಯೂ ಅಪೂರ್ಣವಾಗಲೇ ಬೇಕು. ಮತ್ತು ೧೭ ವರ್ಷಗಳಾದಮೇಲೂ ನಿಮಗೆ ತಿಳಿಯದಿದ್ದರೆ ತಿಳಿಸುವವನಾದ ನಾನೂ ಅಪೂರ್ಣ, ತಿಳಿಯುವವರಾದ ನೀವೂ ಅಪೂರ್ಣ.

ಠಕಾರನದೂ ಇಂಥದೇ ಒಂದು ಪತ್ರ ಬಂದಿದೆ. ಪತ್ರವು ಚೆನ್ನಾಗಿದೆ, ಕೇಳಲು ಯೋಗ್ಯವಾಗಿದೆ. ಠಕಾರರಂತೂ ದಿಟ್ಟಪುರುಷರು. ನನಗೆ ಸಮಯವಿಲ್ಲ. ಆದರೆ ಅವರ ಸ್ತುತಿಗೋಸ್ಕರ ಅವರ ಪತ್ರದ ಒಂದು ವಾಕ್ಯವನ್ನು ಓದಿ ಹೇಳಬಯಸುತ್ತೇನೆ.

"ಹೋದ ವರ್ಷ ನನಗೆ ವಿಶೇಷವಾಗಿ ಧೂಲಿಯಾದಲ್ಲಿಯೇ ಇರಬೇಕಾಯಿತು ಮತ್ತು ಮುಂದಾದರೂ ಅಲ್ಲಿಯೇ ಇರಬೇಕಾಗಬಹುದೆಂದೂ ತೋರುತ್ತದೆ. ಆದರೂ ಗ್ರಾಮಸೇವೆಯ ನನ್ನ ಆಸ್ಥೆಯು ಗುಲಗುಂಜಿಯಷ್ಟೂ ಕಡಿಮೆಯಾಗಿಲ್ಲ, ಅಲ್ಲದೆ, ನನ್ನಲ್ಲಿ ಕೊಂಚವಾದರೂ ಪಟ್ಟಣದ ಜೀವನದ ಮೋಹವು ಹುಟ್ಟಿಲ್ಲ."

ಯಾವ ಸೇವಕರ ಮನಸ್ಸಿನಿಂದ ಪಟ್ಟಣದ ಜೀವನದ ಮೋಹವು ನಿಃಶೇಷವಾಗಿ ಹೊರಟು ಹೋಗಿಲ್ಲವೋ ಅವರ ಚರಖಾ ವಿಷಯದಲ್ಲಿದ್ದ ದೃಢವಾದ ಆಗ್ರಹವು ಈಗ ಶಿಥಿಲವಾಗಿದೆ. ಹೀಗಾದರೆ ಮನಸ್ಸಿನಲ್ಲಿ ಸಂಶಯಗಳು ಬರುತ್ತವೆ. ನನಗಂತೂ ಚರಖಾನೇ ಸರ್ವಸ್ವ. ಹಳ್ಳಿಯಲ್ಲಿ ಬಿದ್ದಿರುವೆನು. ಚರಖಾದ ಕೆಲಸವನ್ನೇ ಹೆಚ್ಚಾಗಿ ಮಾಡುತ್ತೇನೆ. ರಾಜ್ಯಪ್ರಕರಣದಲ್ಲಿ ಸಲಹೆಯನ್ನು ಕೊಡುತ್ತೇನೆ. ಅದರ ಮೇಲೆ ಅದನ್ನು ಮರೆತುಬಿಡುತ್ತೇನೆ. ರಚನಾತ್ಮಕ ಕಾರ್ಯಕ್ಕೋಸ್ಕರ ಬರೆಯುತ್ತೇನೆ ಮತ್ತು ಕೆಲಸ ಮಾಡುತ್ತೇನೆ. ನಾನಂತೂ ನಿರಾಶನಾಗುವುದಿಲ್ಲ. ಗಾಂಧೀ ಸೇವಾ ಸಂಘದ ಜನರೂ ಎಚ್ಚರಿಕೆಯಿಂದ ತಮ್ಮ ಕೆಲಸವನ್ನು ಮಾಡಿಲ್ಲ. ಹೆಂಗಸರಿಗೆ ಎರಡು ಬಿಲ್ಲೆ ಅಥವಾ ಎರಡು ಆಣೆ ಕೊಡುವಷ್ಟೇ ಚರಖಾದ ಕೆಲಸವಲ್ಲ. ಚರಖಾದ ಮೂಲಕ ನಾವು ನಮ್ಮ ಬುದ್ಧಿಯ ವಿಕಾಸವನ್ನು ಮಾಡುವುದಾಗದಿದ್ದರೆ ಅದನ್ನು ಬಿಟ್ಟುಬಿಡಿರಿ. ಚರಖಾ ಸ್ವರಾಜ್ಯವನ್ನು ತರವುದೆಂದು ನನ್ನದಂತೂ ಶ್ರದ್ಧೆಯಿದೆ. ಆದರೆ ಇದೆಲ್ಲವನ್ನೂ ನೀವು ನನ್ನ ಗೌರವಕ್ಕೋಸ್ಕರ ಗ್ರಹಣ ಮಾಡುವಿರೆಂದು ಕಿಶೋರಲಾಲರಿಗೆ ಹೆದರಿಕೆಯಿದೆ. ನನ್ನ ತರುವಾಯ ನೀವು ಇದನ್ನು ಬಿಟ್ಟುಬಿಡುವಿರಿ. ಆದ್ದರಿಂದ ಅವರು ನಿಮ್ಮನ್ನು ಪ್ರಲೋಭನಗಳಿಂದ ದೂರ ಇರಿಸಲು ಬಯಸುತ್ತಾರೆ.

ಚರಖಾದಲ್ಲಿ ವಿಶ್ವಾಸವಿಡುವವರಲ್ಲಿ ಉಳಿದವನು ನಾನೊಬ್ಬನೇ ಏಕಾಗಲ್ಲೊಲ್ಲದು. ಅದರ ಸೇವೆಯಲ್ಲಿ ನಾನು ಸತ್ತರೂ ನನಗೆ ಅಭಿಮಾನವೇ ಎನಿಸುವುದು. ಚರಖಾ ನಡೆಸುತ್ತ ಅಥವಾ ಹರಿಜನ ಸೇವೆ ಮಾಡುತ್ತ ಮಾಡುತ್ತ ಸತ್ತು ಹೋದರೆ ನನಗಾಗುವ ಅಭಿಮಾನವು ಕ್ಷಂತವ್ಯವೂ (ಕ್ಷಮ್ಯವೂ) ಆಗುವುದು. ಕೊನೆಗೆ ಯಾವುದೇ ಒಂದು ಸಾಧನದ ಮೂಲಕ ನಮಗೆ ಈಶ್ವರನ ಸಾನ್ನಿಧ್ಯವನ್ನು ಸಾಧಿಸಬೇಕು. ಚರಖಾದ ಮೂಲಕವೇ ಯಾಕಾಗಬಾರದು? ಚರಖಾ ನನ್ನ ಸೇವೆಯನ್ನು ಮಾಡಿದೆ. ಚರಖೆ

ಸೇವೆಯನ್ನು ನಾನು ಮಾಡಿರುವೆ, ಏನೇ ಅನ್ನಿರಿ. ಭಕ್ತನು ಈಶ್ವರನ ದಾಸನಿದ್ದರೆ ಈಶ್ವರನೂ ಭಕ್ತನ ದಾಸಾನುದಾಸನಾಗುತ್ತಾನೆ. ಈ ಅರ್ಥದಲ್ಲಿ ನಾನು ಹೇಳುತ್ತಿದ್ದೇನೆ. ನಾವು ಚರಖಾದ ಮೂಲಕವೇ ಬುದ್ಧಿಯ ವಿಕಾಸವಾಗುವಂಥ ವಾಯುಮಂಡಲವನ್ನು ಉತ್ಪನ್ನಮಾಡದಿದ್ದರೆ, ಕಾಂತಿ ಮತ್ತು ಬಾಳ ಕಾಲೇಜಿಗೆ ಹೋಗದೆ ಇನ್ನೇನು ಮಾಡಬೇಕು? ಅವರಲ್ಲಿ ಏಕಲವ್ಯನ ಅಪೂರ್ವ ಕಲ್ಪನಾ ಶಕ್ತಿಯಂತೂ ಇಲ್ಲ. ನನ್ನ ಮಾತು ನಿಮಗೆ ತಿಳಿದರೆ ಸಂಶಯಕ್ಕೇನೂ ಕಾರಣವಿಲ್ಲ. ಮುಖ್ಯ ಮಾತೆಂದರೆ ಏಕಾಗ್ರತೆ-ತನ್ಮಯತೆ. ಕಿಶೋರಲಾಲರು ತಮ್ಮ ವ್ಯಾಖ್ಯಾನವನ್ನು ಇಡೀ ಜಗತ್ತಿಗೋಸ್ಕರ ಬರೆಯುತ್ತಿರುವರೋ ಏನೋ ಎಂಬಷ್ಟು ತನ್ಮಯತೆಯಿಂದ ಸಿದ್ಧಮಾಡಿದರು. ಇದಕ್ಕೆ ನಾನು ಸಾಕ್ಷಿ. ಕಿಶೋರಲಾಲರಿಗೆ ಸಂಘವೇ ಜಗತ್ತು. ನಿಮ್ಮ ಅನುಕೂಲತೆಗೋಸ್ಕರ ವ್ಯಾಖ್ಯಾನದ ತಾರಣವನ್ನೂ ಮಾಡಿದ್ದಾರೆ. ಅನಾಸಕ್ತಿ ಪೂರ್ವಕ ಕೆಲಸ ಮಾಡಿರುತ್ತಾರೆ. ಅವರೂ ಎಷ್ಟು ಮನೋಯೋಗವಿದೆ? ಅವರಂತೂ ಯುಧಿಷ್ಠಿರ. ನಾನು ಹಾಗಿಲ್ಲ. ನನಗೆ ಭೀಮ ಮತ್ತು ಅರ್ಜುನರ ಶಕ್ತಿಯು ದೊರೆತರೂ ಸಂತುಷ್ಟನಾಗಿರುತ್ತೇನೆ. ನನಗೆ ಜನರು ಕರ್ಮಯೋಗಿ ಎನ್ನುತ್ತಾರೆ. ನಾನು ಕರ್ಮಯೋಗಿಯೋ ಅಥವಾ ಇನ್ನಾವ ಯೋಗಿಯೋ ನನಗೆ ಗೊತ್ತಿಲ್ಲ. ಆದರೆ ನಾನು ಕೆಲಸವಿಲ್ಲದೆ ಜೀವಂತ ಇರಲಾರೆನು. ಇಷ್ಟೆ ನಾನು ಬಲ್ಲೆ. ಯಾವುದಾದರೊಂದು ವಿಷಯ ನನ್ನ ಮನಸ್ಸಿಗೆ ಹಿಡಿದರೆ ಅದನ್ನು ಕಾರ್ಯಗತ ಮಾಡುವವರೆಗೂ ನನಗೆ ನೆಮ್ಮದಿ ಎನಿಸುವುದಿಲ್ಲ. ಜನರು ಅನ್ನುತ್ತಾರೆ "ಇವನೊಬ್ಬ ಹುಚ್ಚ", ಚರಖಾ ಕೈಯಲ್ಲಿ ಹಿಡಿದುಕೊಂಡು ಸಾಯಬಯಸುತ್ತಾನೆ, ಅಂತ ಅನ್ನುತ್ತಾರೆ. "ಸಾಯುವ ಸಮಯದಲ್ಲಿ ಕೈಯಲ್ಲಿ ಮಾಲೆಯನ್ನು ತೆಗೆದುಕೊಳ್ಳಬಯಸುವುದಿಲ್ಲ" ಎಂದು. ಆದರೆ ನಾನು ಮಾಲೆಯನ್ನು ತೆಗೆದುಕೊಳ್ಳುತ್ತೇನೆ. ಆದರೆ ಯಾವಾಗ ತುಂಬಾ ದಣಿದು ಮಲಗಬಯಸುತ್ತೇನೆ ಆಗ. ಏಕಾಗ್ರತೆಗೋಸ್ಕರ ನನಗೆ ಚರಖೆಯೇ ಮಾಲೆ. ನನ್ನ ಬಳಿ ನನ್ನ ಪ್ರಭುವಿನ ಸಾವಿರಾರು ರೂಪಗಳಿವೆ. ಒಮ್ಮೊಮ್ಮೆ ಆತನ ದರ್ಶನವನ್ನು ಚರಖಾದಲ್ಲಿ ಕಾಣುತ್ತೇನೆ. ಒಮ್ಮೊಮ್ಮೆ ಹಿಂದೂ ಮುಸಲ್ಮಾನ್ ಏಕತೆಯಲ್ಲಿ ಒಮ್ಮೊಮ್ಮೆ ಅಸ್ಪೃಶ್ಯತಾ ನಿವಾರಣೆಯಲ್ಲಿ. ನನ್ನ ಭಾವನೆಯು ನನ್ನನ್ನು ಯಾವಾಗ ಯಾವ ರೂಪದ ಕಡೆಗೆ ಎಳೆದುಕೊಂಡು ಹೋಗುತ್ತದೆಯೋ ಆಗ ಆ ರೂಪದ ಕಡೆಗೆ ಹೋಗುತ್ತೇನೆ. ಯಾವಾಗ ಯಾವ ಸಂಸ್ಥೆಯ ಕೋಣೆಯಲ್ಲಿ ಹೋಗಬಯಸುತ್ತೇನೋ ಅಲ್ಲಿ ಹೊರಟು ಹೋಗುತ್ತೇನೆ. ಮತ್ತು ಅಲ್ಲಿಯೇ ಪ್ರಭುವಿನ ಸಾನ್ನಿಧ್ಯವನ್ನು ಹೊಂದುತ್ತೇನೆ. ಗೀತಾದಲ್ಲಿ ಭಗವಾನನು "ನನ್ನ ಉಪಾಸಕನ ಯೋಗಕ್ಷೇಮವನ್ನು ನಾನು ವಹಿಸುತ್ತೇನೆ" ಎಂದು ಹೇಳಿದ್ದಾನೆ. ನೀವು ನನ್ನ ಮಾತನ್ನು ತಿಳಿದುಕೊಂಡಿದ್ದ ಪಕ್ಷದಲ್ಲಿ, ನೀವು ಇದೇ ಶ್ರದ್ಧೆಯಿಂದ ಚರಖಾದಲ್ಲಿ ದೃಢವಾಗಿ ವಿಶ್ವಾಸವಿಡಬೇಕು.

ಈಗ ಮಾಮಾ ಅವರ ಗೊತ್ತುವಳಿಯನ್ನು ತೆಗೆದುಕೊಳ್ಳುತ್ತೇನೆ. ಗೊತ್ತುವಳಿ

**ಹೀಗಿದೆ :**

ರಾಷ್ಟ್ರೀಯ ಮಹಾಸಭೆಯ ರಚನಾತ್ಮಕ ಕಾರ್ಯವನ್ನು ಧಾರ್ಮಿಕ ದೃಷ್ಟಿಯಿಂದ

ನ್ನೋತಿ ಸಫಲಗೊಳಿಸುವುದು ಸಂಘದ ಉದ್ದೇಶವಾದುದರಿಂದ ಅಸ್ಪೃಶ್ಯತಾ ನಿವಾರಣೆ ಯಂಥ ಕಾರ್ಯಗಳಲ್ಲಿ ಭಂಗೀ ಮೊದಲಾದ ಹರಿಜನ ಬಂಧುಗಳ ಪ್ರತ್ಯಕ್ಷ ಸಂಸರ್ಗದಲ್ಲಿ ಬಂದು ಹರಿಜನ ವಿಷಯದಲ್ಲಿ ನಾವು ಯಾವ ಪ್ರಕಾರದ ಭೇದವನ್ನಿಟ್ಟಿಲ್ಲ ಎಂದು ಅವರಿಗೂ (ಹರಿಜನರಿಗೂ) ಮತ್ತು ಇತರರಿಗೂ ತೋರಿಸುವುದು ಸಂಘದ ಸದಸ್ಯರ ಧರ್ಮವಾಗಿದೆ. ಉದಾಹರಣಾರ್ಥ – ಹರಿಜನರಿಗೆ ನಮ್ಮ ಮನೆಯಲ್ಲಿ ಜಾಗ ಕೊಡುವುದು. ಇತರರಿಗೆ ಮಾಡಿದಂತೆ ಹರಿಜನರ ಆತಿಥ್ಯವನ್ನೂ ಮಾಡುವುದು. ಅವರ ಜೊತೆಗೆ ಊಟಮಾಡುವ ಪ್ರಸಂಗವನ್ನು ಹುಡುಕುವುದು. ಯಾವನಾದರೊಬ್ಬ ಹರಿಜನನನ್ನು ಜೊತೆಗೆ ಇಟ್ಟುಕೊಳ್ಳುವುದು. ನಮ್ಮ ಮನೆಯಲ್ಲಿ ಒಬ್ಬ ಹರಿಜನ ಮಗುವಿನ ಪಾಲನೆ ಮಾಡುವುದು. ಹರಿಜನರ ಯಾವ ಕೆಲಸವೂ ನಿಕೃಷ್ಟವಲ್ಲ ಎಂದು ಸ್ಪಷ್ಟ ಮಾಡಲೋಸುಗ ಅವರ ಕೆಲಸಗಳನ್ನು ಪ್ರೇಮದಿಂದ ಮಾಡುವುದು.

ವಲ್ಲಭಭಾಯಿ: ಈ ಗೊತ್ತುವಳಿಯು ಸನಾತನಿಗಳ ಭಯವು ನಿಜವೆಂದು ಸಿದ್ಧ ಮಾಡುತ್ತಲಿದೆ. ಆದ್ದರಿಂದಲೇ ಅವರು ನಿಮಗೆ ಮೋಸಗಾರರು ಎನ್ನುತ್ತಾರೆ. ಅಸ್ಪೃಶ್ಯತೆ ಯನ್ನು ಅಳಿಸುವುದರಿಂದ ಮೊದಲು ಮಾಡಿ ಒಂದೊಂದು ಹೆಜ್ಜೆಯನ್ನು ಮುಂದುವರಿಸುತ್ತ ನೀವು ನಿಧಾನವಾಗಿ ಅವರೊಡನೆ ಮದುವೆಯ ವ್ಯವಹಾರದವರೆಗೂ ತೆಗೆದುಕೊಂಡು ಹೋಗಬಯಸುತ್ತೀರಿ! (ನಗು)

ಬಾಪೂ : ಸರ್ವಸಾಧಾರಣ ಜನರಿಗೆ ಅಸ್ಪೃಶ್ಯತಾ ನಿವಾರಣೆಯು ಸಾಕು. ಆದರೆ ನಿಮಗೆ ಕೇವಲ ಸ್ಪರ್ಶಸಾಕಷ್ಟಲ್ಲ. ನೀವಂತೂ ಮುಂದುವರಿಯುತ್ತಲೇ ಹೋಗಬೇಕು. ನಿಮ್ಮ ಪ್ರಗತಿಯ ಕ್ಷೇತ್ರಕ್ಕೆ ಮೇರೆ ಎಂಬುದೇ ಇಲ್ಲ. ಸಾಮಾನ್ಯ ಜನರು ಆಕಾಶದವರೆಗೆಯೇ ನೋಡಬಲ್ಲರು. ವೈಜ್ಞಾನಿಕರು "ನಾವು ಆಕಾಶ ಗಂಗೆಯ ಜಗತ್ತನ್ನು ನೋಡುತ್ತೇವೆ. ಆದರೆ ಅದರಾಚೆಗೆ ಇನ್ನೇನಾದರೂ ಇದ್ದರೆ ನಮಗೆ ಗೊತ್ತಿಲ್ಲ". ಎಂದು ಹೇಳುತ್ತಾರೆ. ಆದರೆ ಸತ್ಯವು ಆಕಾಶವನ್ನೂ ಭೇದಿಸಿ ಅದರಾಚೆಗೆ ಹೋಗುತ್ತದೆ. ನಮಗಂತೂ ನಮ್ಮ ಜೀವನವನ್ನು ಸತ್ಯಮಯವನ್ನಾಗಿ ಮಾಡುವುದಿದೆ. ನಾವು ಈಗ ನೋಡುವುದೇನೆಂದರೆ, ಸತ್ಯದ ಹೆಸರಿನಲ್ಲಿ ಅಸತ್ಯವು ಜನರ ಆದರಕ್ಕೆ ಪಾತ್ರವಾಗುತ್ತಲಿದೆ. ಧರ್ಮದ ಉದ್ದೇಶವೇನೋ ಬಂಧುತ್ವವನ್ನು ಬೆಳೆಸುವುದು. ಮನುಷ್ಯ ಮನುಷ್ಯರಲ್ಲಿರುವ ಕೃತ್ರಿಮ ಭೇದವನ್ನು ಕಡಿಮೆ ಮಾಡುವುದು. ಆದರೆ ಇವತ್ತು ಅದರ ಹೆಸರಿನಿಂದಲೆ ಅಸ್ಪೃಶ್ಯರ ಜೊತೆಗೆ ವ್ಯವಹಾರವಾಗುತ್ತಲಿದೆ. ನಾನು ಹೇಳಿಬಿಟ್ಟಿದ್ದೇನೆ "ಅಸತ್ಯವು ಸ್ವಯಂ ದುರ್ಬಲ ಮತ್ತು ಪರತಂತ್ರವಿದೆ. ಸತ್ಯದ ಆಧಾರವಿಲ್ಲದೆ ಅದು ನಿಲ್ಲಲೇ ಆರದು" ಎಂದು. ಆದರೆ ಸತ್ಯದ ಹೆಸರಿನಲ್ಲಿ ಅಸತ್ಯವು ಇಷ್ಟು ಜಯಶಾಲಿಯಾಗ ಬಲ್ಲದಾದರೆ ಸ್ವಯಂ ಸತ್ಯವು ಎಷ್ಟು ಜಯಿಸಬಲ್ಲದು? ಯಾರು ಇದರ ಅಳತೆಯನ್ನು ಮಾಡಬಲ್ಲರು?

ಈ ಸಂಘದ ಸದಸ್ಯರಾದ ನಮ್ಮ ಮನಸ್ಸಿನಲ್ಲಿ ಯಾವ ಅನುಚಿತ ಭೇದಕ್ಕೂ ಸ್ಥಾನವಿರಕೂಡದು. ಇದೊಂದು ವಿಚಿತ್ರ ಮಾತು. ಆದರೆ ನನ್ನ ಮನಸ್ಸಿನಲ್ಲಿರುವ

ಭೇದವಂತೂ ಎಂದು ನಾನೊಬ್ಬ ಮುಸಲ್ಮಾನ ಹುಡುಗನ ಜೊತೆಗೆ ಸ್ವಲ್ಪ ಮಾಂಸವನ್ನು ತಿಂದೆನೋ ಅಂದೇ ಅಳಿಸಿಹೋಯಿತು. ಮಾಂಸ ತಿನ್ನುವುದೇನೋ ಕೆಟ್ಟದ್ದಿತ್ತು ಮತ್ತು ಕೆಟ್ಟದ್ದಿದೆ. ಆದರೆ ಇನ್ನೊಂದು ದೃಷ್ಟಿಯಿಂದ ಆ ಸಣ್ಣ ಮಾತು ನನ್ನನ್ನು ಉಳಿಸಿತು. ಸ್ವಲ್ಪ ಮಾಂಸವನ್ನು ತಿನ್ನುವುದರಿಂದ ಅದರಲ್ಲೇನೋ ರುಚಿಯಿಲ್ಲವೆಂಬುದು ನನಗೆ ಗೊತ್ತಾಯಿತು. ಅದರಿಂದ ನಾನು ಇಂಗ್ಲೆಂಡಿನಲ್ಲಿ ಪಾರಾದೆ ಮತ್ತು ನನ್ನ ತಾಯಿಗೆ ಮೋಸಮಾಡಲಿಲ್ಲ. ಕೋಟಿಗಟ್ಟಲೆ ಜನರೆದುರಿಗೆ ನಾನು ಊಟ ಮತ್ತು ಮದುವೆಯ ವ್ಯವಹಾರದ ವಿಷಯ ಎತ್ತಿಲ್ಲ. ಊಟ ಮತ್ತು ಮದುವೆಯ ವ್ಯವಹಾರವನ್ನು ನಾವು ಬ್ರಾಹ್ಮಣರ ಜೊತೆಗೂ ಮಾಡುವುದಿಲ್ಲ. ನನ್ನ ತಾಯಿಯು ವ್ರತ ನಿಯಮಗಳನ್ನು ಪಾಲಿಸುತ್ತಿರುವಾಗ ನನ್ನ ಕೈಯಿಂದಲೂ ಊಟ ಮಾಡುತ್ತಿರಲಿಲ್ಲ. ಹಿಂದೂ ಜನರು ಇನ್ನೂ ಊಟದ ವ್ಯವಹಾರದಲ್ಲಿ ಸಾಕಷ್ಟು ಬಂಧನಗಳನ್ನು ಪಾಲಿಸುತ್ತಾರೆ. ನಾನೂ ಇದುವರೆಗೆ ಅವರ ಜೊತೆಗೆ ಬಂಧನಗಳನ್ನು ಪಾಲಿಸಿದ್ದೇನೆ. ಆದ್ದರಿಂದ ಊಟದ ವ್ಯವಹಾರದ ವಿಷಯದಲ್ಲಿ ಇದುವರೆಗೆ ಅವರಿಗೆ ಏನೂ ಹೇಳಲಿಲ್ಲ.

ಆದರೆ ನಾನು ನಿಮಗೆ ಊಟದ ವ್ಯವಹಾರ ಸಹ ಮಾಡಬೇಕೆಂದು ಹೇಳಿದರೆ ಅದು ಸತ್ಯದ ಕೊಲೆ ಮಾಡಿದಂತಾಗುವುದಿಲ್ಲ. ನಿಮ್ಮೆದುರಿಗಂತೂ ಧರ್ಮದ ಮಾತನ್ನು ಹೇಳಿಬಿಡುವೆನು. ನಾನು ನಿತ್ಯ ಧರ್ಮದ ವಿಷಯವನ್ನು ಹೇಳುತ್ತಿದ್ದೇನೆ. ಇದೇನೂ ನೈಮಿತ್ತಿಕ ಧರ್ಮವಲ್ಲ. ಮದುವೆಯ ವ್ಯವಹಾರದ ವಿಷಯದಲ್ಲಿ ನಿಮ್ಮ ಮೇಲೆ ನನ್ನ ಒತ್ತಾಯವಿಲ್ಲ. ನೀವು ನಿಮ್ಮ ಮಕ್ಕಳ ಮೇಲೆ ಎಂದಿಗೂ ಬಲಾತ್ಕಾರ ಮಾಡಬೇಡಿರಿ. ಊಟದ ವ್ಯವಹಾರ ಬೇರೆ ವಿಷಯ. ನಿಮ್ಮ ತಾಯಿಯು ಇದು ಅಧರ್ಮವೆಂದು ಹೇಳಿದರೆ ನೀವು ಅವರಿಗೆ ಹೇಳಿರಿ "ಅಮ್ಮಾ, ನೀನು ಮಾಡಿದ ಅಡಿಗೆಯನ್ನೂ ಉಣ್ಣುವೆನು ಮತ್ತು ಅಸ್ಪೃಶ್ಯರ ಕೈಯಿಂದ ಅಡಿಗೆಯನ್ನೂ ಉಣ್ಣುವೆನು. ಈ ಕಾರಣದಿಂದ ನೀನು ನನ್ನನ್ನು ತ್ಯಾಗ ಮಾಡಿದರೂ ಅಡ್ಡಿಯಿಲ್ಲ" ಎಂದು. ನೀವು ನಿಮ್ಮ ತಾಯಿ ಮತ್ತು ಧರ್ಮಪತ್ನಿಯ ಜೊತೆಗೂ ಬಲಾತ್ಕಾರ ಮಾಡಕೂಡದು. ಇಂಥ ಪರಿಸ್ಥಿತಿಯಲ್ಲಿ ನೀವು ಎರಡು ಮನೆ ಮಾಡಬೇಕು. ಯಾಕೆಂದರೆ ನಾವು ಅವರ ಮೇಲೆ ಬಲಾತ್ಕಾರ ಮಾಡದೆ ಇರುವಾಗ ನಮ್ಮ ಧರ್ಮದ ಮೇಲೆಯೂ ನಾವು ಬಲಾತ್ಕಾರವನ್ನು ಮಾಡುವುದಿಲ್ಲ. ಅಂದರೆ ನಮ್ಮ ಆತ್ಮದ ಮೇಲೆಯೂ ಬಲಾತ್ಕಾರ ಮಾಡುವುದಿಲ್ಲ. ನಮ್ಮ ತಾಯಿ ಮತ್ತು ಹೆಂಡತಿ ನಮ್ಮನ್ನು ಪರಿತ್ಯಾಗ ಮಾಡುವುದು ತಮ್ಮ ಧರ್ಮವೆಂದು ಅವರು ಭಾವಿಸಬಹುದು. ಹಗೆತನವಿಲ್ಲದೆ ಒಬ್ಬರಿಂದೊಬ್ಬರು ಬೇರೆ ಬೇರೆ ಇರಬೇಕು. ಆ ಸ್ಥಿತಿಯಲ್ಲಿ ನಾನು ಅವರ ಜೊತೆಗೆ ಹೆಚ್ಚು ಪ್ರೇಮಭಾವದಿಂದ ವ್ಯವಹರಿಸುವೆನು. ಅವರ ಭಾವನೆಗಳನ್ನು ನೋಯಿಸದಂತೆ ಪ್ರಯತ್ನ ಮಾಡುವೆನು. ಆದರೆ ಅವರನ್ನು ಸಂತೋಷಗೊಳಿಸಲು ಹರಿಜನರ ಭಾವನೆಗಳನ್ನು ನೋಯಿಸುವುದಿಲ್ಲ. ಇದನ್ನು ನನಗೆ ಸತ್ಯಧರ್ಮ ಮತ್ತು ಹಿಂದೂ ಧರ್ಮ ಕಲಿಸುತ್ತವೆ. ನನ್ನ ದೃಷ್ಟಿಯಲ್ಲಿ ಸತ್ಯಧರ್ಮ ಮತ್ತು ಹಿಂದೂಧರ್ಮ ಪರ್ಯಾಯವಾಚೀ ಶಬ್ದಗಳು. ಹಿಂದೂ ಧರ್ಮದಲ್ಲಿ ಅಸತ್ಯದ

ಸ್ವಲ್ಪ ಅಂಶವಿದ್ದರೆ, ಆ ಅಂಶವನ್ನು ಧರ್ಮವೆಂದು ನಾನು ಒಪ್ಪಲಾರೆ. ಇದಕ್ಕಾಗಿ ಇಡೀ ಹಿಂದೂ ಜಾತಿಯೇ ನನ್ನನ್ನು ತ್ಯಾಗ ಮಾಡಿದರೆ ಮತ್ತು ನಾನು ಒಬ್ಬನೇ ಇರಬೇಕಾದರೂ ನಾನು "ನಾನು ಒಬ್ಬನೇ ಇಲ್ಲ, ನೀವು ಒಬ್ಬರೇ ಇರುವಿರಿ, ಯಾಕೆಂದರೆ ನನ್ನ ಜೊತೆಗೆ ಸತ್ಯವಿದೆ, ನಿಮ್ಮ ಜೊತೆಗೆ ಇಲ್ಲ. ಸತ್ಯವಂತೂ ಪ್ರತ್ಯಕ್ಷ ಪರಮಾತ್ಮ" ಎಂದು ಹೇಳುವೆನು.

ಮಾಮಾ : ಬಾಪೂಜಿ, ನನಗೆ ಪ್ರತ್ಯಕ್ಷ ಪ್ರಮಾಣ ಬೇಕು, ಕೇವಲ ಇಚ್ಛಾ, ಭಾವನಾ ಮತ್ತು ವಿಚಾರ ಇವುಗಳಿಂದ ನನಗೆ ಸಮಾಧಾನವಿಲ್ಲ.

ರಾಮರತನ ಶರ್ಮಾ: ನಾವು ಹರಿಜನರಿಗೆ ನಮ್ಮ ಮನೆಯಲ್ಲಿ ನಮ್ಮ ಜೊತೆಗೆ ಊಟಕ್ಕೆ ಹಾಕಬೇಕು ಇದಂತೂ ಸರಿಯೆ. ಆದರೆ ಆತಿಥ್ಯ ಸ್ವೀಕಾರ ವಿಷಯದಲ್ಲಿ ಸ್ವಲ್ಪ ತಾರತಮ್ಯದ ಅವಶ್ಯಕತೆ ಇದೆಯಲ್ಲವೇ? ನಮಗೆ ಸ್ವಚ್ಛತೆಯ ಕಡೆಗೆ ಗಮನ ಕೊಡ ಬೇಕಾಗುವುದು. ಉದಾಹರಣಾರ್ಥ, ಒಬ್ಬ ಕುಷ್ಟರೋಗಿಯು ಕೊಟ್ಟಂಥ ಅನ್ನ ಜಲವನ್ನು ತುಂಬ ಪ್ರೇಮದಿಂದ ಕೊಟ್ಟಿದ್ದರೂ ನಾವು ಹೇಗೆ ಗ್ರಹಣಮಾಡಬಲ್ಲೆವು?

ಬಾಪೂ : ನಾನು ಕುಷ್ಟರೋಗಿಯ ಆತಿಥ್ಯ ಒಪ್ಪಿಕೊಳ್ಳುವೆನು. ಬೇರೆ ರೀತಿಯಿಂದ. ನಾನು ಅವನಿಗೆ ಪ್ರೇಮದಿಂದ ನನಗೆ ಅಡಿಗೆ ಮತ್ತು ನೀರು ತರುವ ಕೆಲಸವನ್ನು ಮಾಡಗೊಡಲು ಹೇಳುತ್ತೇನೆ. ನನ್ನ ಸ್ವಂತ ವಿಷಯದಲ್ಲಿ ಹೇಳುವುದಾದರೆ, ಕುಷ್ಟರೋಗಿಯು ಆಗ್ರಹ ಮಾಡಿದರೆ ಅವನ ಪ್ರೇಮಕ್ಕಾಗಿ ಅವನು ಕೊಟ್ಟ ಭೋಜನ ಮತ್ತು ನೀರು ಸ್ವೀಕರಿಸುವೆನು. ಅವನ ಪ್ರೇಮಕ್ಕೋಸ್ಕರ ನನಗೆ ಸಾಯುವುದು ಒಪ್ಪಿಗೆ. ಆದರೆ ಇಡೀ ಜಗತ್ತು ಈ ರೂಪದಲ್ಲಿ ಅವನ ಆತಿಥ್ಯವನ್ನು ಸ್ವೀಕರಿಸಲಾರದು. ಆದ್ದರಿಂದ ನಾನೂ ಇಡೀ ಸಮಾಜವು ಯಾವ ಪ್ರಕಾರದಲ್ಲಿ ಅವನ ಆತಿಥ್ಯವನ್ನು ಸ್ವೀಕರಿಸಬಲ್ಲದೋ ಅದೇ ರೀತಿಯಿಂದ ಸ್ವೀಕರಿಸುವೆನು. ನಾನು ಪರಚುರೆಶಾಸ್ತ್ರಿಯ ಜೊತೆಗೂ ಹೀಗೆಯೇ ಮಾಡಿದೆ. ಆದರೆ ಅದು ಬೇರೆ ಕಥೆ. ರೋಗದ ಮಾತನ್ನು ಅಸ್ಪೃಶ್ಯತೆಯ ಜೊತೆಗೆ ಸೇರಿಸಬಾರದು. ಇವೆರಡೂ ಪ್ರಶ್ನೆಗಳು ಬೇರೆ ಬೇರೆ ಇವೆ. ಭಂಗಿಯ ವಿಷಯವು ಕುಷ್ಟರೋಗಿಯಿಂದ ಭಿನ್ನವಾಗಿದೆ. ಅವರೊಡನೆ ಸಂಪರ್ಕ ಬೆಳೆಸೋಣದರಿಂದ ಅವರಿಗೆ ಸ್ವಚ್ಛತೆಯ ಪಾಠವನ್ನು ಕಲಿಸುವ ಪ್ರಸಂಗವು ನಮಗೆ ಸಿಗುತ್ತದೆ. ಇನ್ನೊಂದು ಮಾತು: ಒಬ್ಬ ಭಂಗಿ ನನಗಾಗಲೀ ನಿಮಗಾಗಲೀ ಔತಣವನ್ನು ಕೊಟ್ಟರೆ ಅವನಿಗೇನೇ ಸ್ನಾನಮಾಡಿ ಸ್ವಚ್ಛ ಬಟ್ಟೆಗಳನ್ನು ಉಟ್ಟುಕೊಂಡು ನಮಗೆ ಶುದ್ಧ ಮತ್ತು ಸ್ವಚ್ಛ ಭೋಜನವನ್ನು ಕೊಡಬೇಕೆಂಬ ಚಿಂತೆಯು ಹುಟ್ಟುವುದು.

ದಾಂಡೇಕರ : ಎಲ್ಲರಿಗಿಂತಲೂ ಕಡಿಮೆಯೆಂದು ತಿಳಿಯಲ್ಪಟ್ಟ ಹರಿಜನನಿಂದ ಸೇವೆಯನ್ನು ಪ್ರಾರಂಭಿಸಬೇಕೆಂದು ಇದರಲ್ಲಿ ಹೇಳಲಾಗಿದೆ. ಆದರೆ ಎಲ್ಲರಿಗಿಂತ ಬಡವರ್ಗದಿಂದ ಸೇವೆಯನ್ನು ಪ್ರಾರಂಭಿಸುವುದು ಹೆಚ್ಚು ಉಚಿತವಾಗುವುದಿಲ್ಲವೆ?

ಬಾಪೂ : ನೀವು ದಾರಿದ್ರ್ಯವನ್ನು ಈ ಪ್ರಶ್ನೆಯ ಜೊತೆಗೆ ಸೇರಿಸಬೇಡಿರಿ. ದಾರಿದ್ರ್ಯದ ಪ್ರಶ್ನೆ ಆರ್ಥಿಕ ಮತ್ತು ಅಸ್ಪೃಶ್ಯತಾ ನಿವಾರಣೆಯ ಪ್ರಶ್ನೆಯು ಧಾರ್ಮಿಕ ಅಥವಾ

ಪಾರಮಾರ್ಥಿಕವಾಗಿದೆ. ಒಬ್ಬ ಬಡ ರೈತನ ಬಡತನವನ್ನು ದೂರವಾಡುವುದು ನನಗಾಗದಿದ್ದರೆ ನನ್ನ ಧರ್ಮ ನಾಶವಾಗುವುದಿಲ್ಲ. ಆದರೆ ಒಬ್ಬ ಹರಿಜನದ ಅಸ್ಪೃಶ್ಯತೆಯನ್ನು ಇರಗೊಟ್ಟರೆ (ಅವನು ಧನಾಢ್ಯ ಹರಿಜನನಿದ್ದರೂ) ನನ್ನ ಧರ್ಮ ನಾಶವಾಗುವುದು. ಆದ್ದರಿಂದ ಸೇವಾರಂಭವಂತೂ ಹರಿಜನರಿಂದಲೇ ಆಗಬೇಕು, ದಾರಿದ್ರ್ಯದ ಪ್ರಶ್ನೆ ಇಲ್ಲಿ ಅಪ್ರಸ್ತುತ.

ಇದಾದ ಮೇಲೆ ಪೂಜ್ಯ ಗಾಂಧೀಜಿಯರು ಕೆಳಗೆ ಕಾಣಿಸಿರುವ ಗೋಸೇವಾ ಸಂಬಂಧದ ಗೊತ್ತುವಳಿಯನ್ನಿಟ್ಟರು. ಗೊತ್ತುವಳಿ ಹೀಗಿದೆ :

(೯) ಹಿಂದೂಸ್ಥಾನದ ಆರ್ಥಿಕ ಮತ್ತು ನೈತಿಕ ಉನ್ನತಿಯನ್ನು ಮಾಡುವುದು ಸಂಘದ ಉದ್ದೇಶಗಳಲ್ಲಿ ಒಂದಾಗಿದೆ, ಮತ್ತು ಗೋಧನದ ರಕ್ಷಣೆಯಲ್ಲಿ ಪ್ರತ್ಯಕ್ಷ ಅಹಿಂಸೆ ಮತ್ತು ಕೋಟಿಗಟ್ಟಲೆ ಜನರ ಆರ್ಥಿಕ ಲಾಭವಿದೆ. ಆದ್ದರಿಂದ ಸಂಘದ ಸದಸ್ಯರು ಗೋಸೇವೆಯ ಕಡೆಗೆ ಗಮನ ಕೊಡಬೇಕು. ಗೋಸೇವಾ ಶಾಸ್ತ್ರದ ಯಥಾ ಸಂಭವ ಅಭ್ಯಾಸ ಮಾಡುವುದು, ಗೋಧನದ ಯಥಾಶಕ್ತಿ ರಕ್ಷಣೆ ಮಾಡುವುದು ಸದಸ್ಯರ ಧರ್ಮ. ಕನಿಷ್ಠ ಪಕ್ಷ ಎಲ್ಲ ಸದಸ್ಯರು ಎಮ್ಮೆಯ ಹಾಲಿಗಿಂತ ಹಸುವಿನ ಹಾಲನ್ನೇ ಮತ್ತು ಅದರಿಂದ ಉತ್ಪನ್ನವಾಗುವ ಪದಾರ್ಥಗಳನ್ನೇ ಯಥಾಶಕ್ತಿ ಉಪಯೋಗಿಸುವ ಪ್ರಯತ್ನ ಮಾಡಬೇಕು. ಮತ್ತು ಹಸುವಿನ ಹಾಲು ಮೊದಲಾದವುಗಳ ಪ್ರಚಾರ ಮಾಡಬೇಕು.

ಬಾಪೂ : ಇವತ್ತು ನಾನು ಈ ಗೊತ್ತುವಳಿಯ ಮೇಲೆ ವಿಶೇಷ ಒತ್ತಾಯವನ್ನು ಮಾಡುವುದಿಲ್ಲ. ನಿಮ್ಮ ಮನಸ್ಸಿನಲ್ಲಿ ಶಂಕೆಯಿದ್ದರೆ ಮತ್ತು ಇದರ ಮೇಲೆ ಚರ್ಚೆ ಮಾಡಲು ಅಪೇಕ್ಷಿಸುತ್ತಿದ್ದರೆ ಇದನ್ನು ನಾವು ಬಿಟ್ಟುಬಿಡೋಣ. ಯಾಕೆಂದರೆ ಇದೊಂದು ಹೊಸ ವಿಷಯ ಮತ್ತು ಅದರ ಭಾಷೆ ಕಾಂಗ್ರೆಸ್ಸಿನ ಭಾವಕ್ಕಿಂತ ಬೇರೆಯಾಗಿದೆ. ಕಿಶೋರಲಾಲರು ತಮ್ಮ ಅಭಿಭಾಷಣದಲ್ಲಿ ಬರೆದ ಮಾತುಗಳು ಸುಲಭವಾಗಿಯೇನೋ ಇವೆ, ಆದರೆ ಹೆಚ್ಚು ಪ್ರಯೋಜನಕಾರಿಯಿಲ್ಲ. ನಾನು ಈ ಗೊತ್ತುವಳಿಯನ್ನು ಕಾಂಗ್ರೆಸ್ಸಿನ ಮುಂದೆ ಇಟ್ಟಿಲ್ಲ. ಯಾಕೆಂದರೆ ಈ ರೂಪದಲ್ಲಿ ಅದು ಹಿಂದೂಗಳನ್ನು ಬಿಟ್ಟು ಇತರರಿಗೆ ಸಂಬಂಧಿಸಿಲ್ಲ. ಇದು ಹಿಂದೂ ಧರ್ಮದ ಒಂದು ಅವಿಭಾಜ್ಯ ಅಂಗವಾಗಿದೆ. ಸನಾತನೀ ಜನರು ನನ್ನ ಗೋಸೇವಾ ಪದ್ಧತಿಯನ್ನು ತ್ಯಾಜ್ಯವೆಂದು ತಿಳಿಯುತ್ತಾರೆ, ಮತ್ತು ಈಗ ನಡೆದಿರುವ ಗೋರಕ್ಷಣೆ ಕಾರ್ಯಪದ್ಧತಿ ಸರಿಯೆಂದು ತಿಳಿಯುತ್ತಾರೆ. ಇದರಲ್ಲಿ ಅವರ ಘೋರ ಅಜ್ಞಾನವಿದೆ. ನಾನು ಪ್ರಚಲಿತ ಗೋರಕ್ಷಣವನ್ನು ಗೋಭಕ್ಷಣವೆಂದು ಹೇಳಿದ್ದೇನೆ. ಮತ್ತು ಆ ಶಬ್ದಗಳನ್ನು ಇದುವರೆಗೂ ತಿರುಗಿ ತೆಗೆದುಕೊಂಡಿಲ್ಲ. ಇದಕ್ಕೋಸ್ಕರ ಜನರು ನನ್ನ ಮೇಲೆ ಬಹಳ ಸಿಟ್ಟಾಗಿದ್ದಾರೆ. ಆದರೆ ಅವರು ನನ್ನ ಕುತ್ತಿಗೆಯನ್ನು ಕೊಯ್ದರೂ ನಾನು ಏನು ಸತ್ಯವೋ ಅದನ್ನೇ ಹೇಳುವೆನು. ನಮ್ಮ ಧರ್ಮದಲ್ಲಿ ಮೊದಲು ಹಸುವಿನ ಪ್ರತಿಪಾಲನೆಯ ಆಗ್ರಹವಿದೆ, ಆಮೇಲೆ ಬ್ರಾಹ್ಮಣನ–ಗೋಬ್ರಾಹ್ಮಣ ಪ್ರತಿಪಾಲನ.

ಗೋ ಸೇವೆಯು ನಮ್ಮ ಧರ್ಮದ ಅವಿಭಾಜ್ಯ ಅಂಗವು. ಆದರೆ ಇವತ್ತು ನಾವು ಗೋರಕ್ಷಕರಲ್ಲ ಗೋಭಕ್ಷಕರು. ಹಸುವಿಗೋಸ್ಕರ ಅವು ಸಾಯಬೇಕು. ಇವತ್ತು ನಾವು ನಮಗೋಸ್ಕರ ಅದನ್ನು ಸಾಯಗೊಡುತ್ತೇವೆ. ಹಿಂದೂ ಧರ್ಮದಲ್ಲಿ ಸಾಮಾನ್ಯವಾಗಿ ಆತ್ಮಹತ್ಯೆಯು ಪಾಪವೆಂದು ತಿಳಿಯಲ್ಪಟ್ಟಿದೆ. ಆದರೆ ವಿಶೇಷ ಪ್ರಸಂಗಗಳಲ್ಲಿ ನಮ್ಮ ಧರ್ಮವು ಆತ್ಮಹತ್ಯೆಗೆ ಕೇವಲ ಅನುಮತಿಯನ್ನಲ್ಲ, ಆಜ್ಞೆಯನ್ನೂ ಕೊಡುತ್ತದೆ. ಇದಕ್ಕನುಸರಿಸಿ ಹಸುವನ್ನು ಉಳಿಸಲೋಸುಗ ಪ್ರಸಂಗ ಬಂದರೆ ನಾವು ಸಾಯಲೂಬೇಕು.

ಈ ಗೊತ್ತುವಳಿಯಲ್ಲಿ ಸದಸ್ಯರು ಹಸುವಿನ ಹಾಲು ತುಪ್ಪವನ್ನು ತಿನ್ನುವ ಆಗ್ರಹವನ್ನಿಡಬೇಕು ಎಂದು ಇಷ್ಟೇ ಹೇಳಲಾಗಿದೆ, ವ್ರತದ ಮಾತಲ್ಲ. ಆಗ್ರಹದ ಆಶಯವೇನೆಂದರೆ, ಪ್ರಾಣವನ್ನು ಉಳಿಸಿಕೊಳ್ಳಲು ಒಂದ್ಕು ವೇಳೆ ಎಮ್ಮೆಯ ಹಾಲು ಅಥವಾ ತುಪ್ಪವನ್ನು ಉಪಯೋಗಿಸುವ ಪ್ರಸಂಗ ಬಂದರೆ ಉಪಯೋಗಿಸಬಹುದು. ಆದರೆ ವ್ರತದಲ್ಲಿ ಇದಕ್ಕೆ ಅವಕಾಶವಿಲ್ಲ. ನೀವು ಇಷ್ಟಪಟ್ಟರೆ 'ಆಗ್ರಹ'ದ ಬದಲು 'ಯಥಾಶಕ್ತಿ ಪ್ರಯತ್ನ' ಎಂದು ಇಡಬಹುದು. ಅದರಿಂದ ಭಾಷೆ ಮತ್ತು ಭಾವ ಎರಡೂ ಮೆತ್ತಗಾಗುವವು. ನಾಳೆ ನಾನು ಧೋತ್ರೆಯ ಮನೆಗೆ ಹೋದರೆ ಅಲ್ಲಿ ನಾನು ಆಗ್ರಹಮಾಡಬಲ್ಲೆ ಮತ್ತು ಮಾಡಬೇಕು. ಹೀಗೆಯೇ ಎಲ್ಲ ಕಡೆಯಲ್ಲಿಯೂ ಮಾಡುವೆನು. "ಯಥಾಶಕ್ತಿ ಪ್ರಯತ್ನ" ನನ್ನ ದೃಷ್ಟಿಯಿಂದ ಅರ್ಥಹೀನ ಶಬ್ದಪ್ರಯೋಗ.

ಸರದಾರ : ಕಾಯಿಲೆ ಇದ್ದವನು, ಅಥವಾ ಯಾವಾಗಲೂ ಪ್ರವಾಸ ಮಾಡುವವನು ಆಗ್ರಹವನ್ನೂ ನಿರ್ವಹಿಸಲಾರನು.

ಬಾಪು : ಅಂಥ ಸ್ಥಿತಿಯಲ್ಲಿ ಎಮ್ಮೆಯ ತುಪ್ಪ ಅಥವಾ ಹಾಲನ್ನು ತೆಗೆದುಕೊಳ್ಳುವುದು ಆಗ್ರಹದಲ್ಲಿ ಬರುತ್ತದೆ "ಯಥಾಶಕ್ತಿ ಪ್ರಯತ್ನ" ಬೇರೆ ಮಾತು. ಅದಕ್ಕೆ ಮಿತಿಯೇ ಇಲ್ಲ. ನಾನು ಇದನ್ನು ಧರ್ಮದ ದೃಷ್ಟಿಯಿಂದ ನೋಡುತ್ತೇನೆ. ಮತ್ತು ನನಗಂತೂ ಧರ್ಮಸೇವೆ ಮತ್ತು ದೇಶಸೇವೆ ಒಂದೇ.

ಬಾಪೂಜಿ : ತುಪ್ಪಕ್ಕೋಸ್ಕರ ಇಷ್ಟೊಂದು ಕಠಿಣ ನಿರ್ಬಂಧವಿಡದಿದ್ದರೆ ಒಳ್ಳೆಯದು. ಯಾಕೆಂದರೆ ಹಸುವಿನ ತುಪ್ಪ ಆರ್ಥಿಕ ದೃಷ್ಟಿಯಿಂದ ದುಬಾರಿ ಮತ್ತು ಸಿಗುವುದೂ ಕಷ್ಟ.

ಬಾಪೂ : ಈ ಹೊಣೆಗಾರಿಕೆ ಜಮುನಾಲಲಜಿಯಂಥವರದಿದೆ. ನನ್ನ ಹತ್ತಿರ ಹಸುವಿನ ತುಪ್ಪದ ಒಂದು ಯೋಜನೆ ಸಿದ್ಧವಾಗಿದೆ. ಮೂರು ನಾಲ್ಕು ಲಕ್ಷ ರೂಪಾಯಿಗಳನ್ನು ಈ ಪ್ರಯೋಗದಲ್ಲಿ ಅವರು ಯಾಕೆ ಹಾಕಬಾರದು?

ಸಾಕಷ್ಟು ಚರ್ಚೆಯಾದ ಮೇಲೆ ಆಗ್ರಹದ ಬದಲು ಯಥಾಶಕ್ತಿ ಪ್ರಯತ್ನ ಎಂಬ ಶಬ್ದಗಳನ್ನು ಹಾಕಬೇಕು ಎಂದು ನಿರ್ಣಯವಾಯಿತು. ಮತ್ತು ಅದೇ ರೂಪದಲ್ಲಿ ಗೊತ್ತುವಳಿಯು ಸ್ವೀಕೃತವಾಯಿತು.

**ಮುಂದಿನ ಸಮ್ಮೇಳನ :**

ಬಂಗಾಲ, ಸಂಯುಕ್ತ ಪ್ರಾಂತ ಮತ್ತು ಉತ್ಕಲ ಈ ಮೂರು ಪ್ರಾಂತಗಳ ನಿಯಂತ್ರಣವನ್ನು ಉಲ್ಲೇಖಿಸುತ್ತ ಗಾಂಧಿಯವರು ಹೇಳಿದರು :

ಉಡೀಸಾ (ಉತ್ಕಲ, ಓರಿಸಾ)ದ ವಿಷಯದಲ್ಲಿ ನನಗೆ ವಿಶೇಷ ಪಕ್ಷಪಾತವಿದೆ. ಅಲ್ಲಿ ವರ್ಗಣಿಯೂ ಹುದಲಿಗಿಂತ ಹೆಚ್ಚು ಸಿಗುವ ಆಶೆಯಿದೆ. ಆದರೆ ನನ್ನ ಅಭಿಪ್ರಾಯದಲ್ಲಿ ಪ್ರವಾಸದ ಖರ್ಚು ಕೊಡುವುದು ಉಚಿತವಲ್ಲ. ಸದಸ್ಯರು ತಮ್ಮ ಖರ್ಚಿನಿಂದಲೇ ಬರಬೇಕು. ಯಾರು ಪ್ರವಾಸದ ಖರ್ಚನ್ನು ವಹಿಸಲಾರರೋ ಅವರಿಗೋಸ್ಕರ ಕಾರ್ಯಾಲಯವು ಶಿಫಾರಸ್ಸು ಮಾಡಿದರೆ ಗೋಪಬಾಬು ಅಷ್ಟು ಹಣ ಸಂಗ್ರಹಿಸಿ ಅವರಿಗೆ ಕೊಡಬೇಕು. ಆದರೆ ಅವರೂ ಸಂಗ್ರಹಿಸಲಾರದಾದರೆ ಅವರು ನಿಮಂತ್ರಣವನ್ನು ಕೊಡಕೂಡದು. ಗೋಪಬಾಬು ಎಲ್ಲ ನಿಬಂಧನೆಗಳನ್ನು ಒಪ್ಪಿದ್ದಾರೆ. ಇನ್ನೊಂದು ಕಾರಣವಿದೆ. ಓರಿಸಾದಲ್ಲಿ ಕಾಂಗ್ರೆಸ್ ಬಹಳ ಕಡಿಮೆ ಕೆಲಸ ಮಾಡಿದೆ. ಇಲ್ಲಿ ಕಾಂಗ್ರೆಸ್ಸಿಗೆ ಬಹುಮತವು ಸಿಕ್ಕಿತು ಇದೊಂದು ಚಮತ್ಕಾರ. ಕಾಂಗ್ರೆಸ್ಸಿನ ಒಬ್ಬ ಮನುಷ್ಯನೇ ಅಲ್ಲಿ ಸೋತ, ಅದೂ ನನ್ನ ಕಾರಣದಿಂದ. ಅವನು ತಿಳಿಗೇಡಿ. ಅವನು ಸೋತದ್ದು ಕಾಂಗ್ರೆಸ್ಸಿಗೆ ಲಾಭವೇ ಆಯಿತು. ಓರಿಸಾದ ಜನರನ್ನು, ಪಾಪ, ಭೋಳೆ ಜನ (ಸಪ್ಪೆಜನ) ಎನ್ನುತ್ತಾರೆ. ಅವರು ಕರೆಯುತ್ತಿರುವಾಗ ನಾವು ಬಿಹಾರ ಮತ್ತು ಬಂಗಾಲ ಬಿಟ್ಟುಬಿಡಬೇಕು. ಗುಜರಾತಿನಲ್ಲಿ ಕಾಂಗ್ರೆಸ್ಸಿನ ನಿರ್ಣಯವನ್ನು ಕೊಡುವಾಗ ನಾನು ಇದೇ ನ್ಯಾಯವನ್ನು ಅನುಸರಿಸಿದೆನು. ರಾಸ ಮತ್ತು ಬಾರಡೋಲಿ ಇವುಗಳ ನಡುವೆ ವಿವಾದವಿತ್ತು. ರಾಸ ಬಲವಾನ್ ಇದ್ದುದರಿಂದ ಅದನ್ನು ಬಿಡಬೇಕು ಎಂದು ನಾನು ಹೇಳಿದೆ. ಅದ್ದರಿಂದ ರಾಸದ ಮನವನ್ನು ನೋಯಿಸಿ ಬಾರಡೋಲಿಯ ಪಕ್ಷಪಾತವನ್ನು ಮಾಡಿದೆ.

*　　*　　*

ಮುಂದಿನ ಸಮ್ಮೇಳವು ಎಲ್ಲಿ ಆಗಬೇಕು ಈ ವಿಷಯದಲ್ಲಿ ಓರಿಸಾದ ಪರವಾಗಿಯೇ ನಿರ್ಣಯವಾಯಿತು.

ಎಲ್ಲ ಗೊತ್ತುವಳಿಗಳೂ ಮುಗಿದ ಮೇಲೆ ತಮ್ಮ ಸ್ಥಿತಿಯನ್ನು ಸ್ಪಷ್ಟಮಾಡುವುದಕ್ಕೋಸ್ಕರ ಸಂಘದ ಅಧ್ಯಕ್ಷರು ಕೆಳಗೆ ಕಾಣಿಸಿದ ಆಶಯದ ಭಾಷಣವನ್ನು ಕೊಟ್ಟರು.

ಅಧ್ಯಕ್ಷರು : ನಿನ್ನೆ ನಾನು ನನ್ನ ಸ್ಥಿತಿಯನ್ನು ನಿಮ್ಮೆದುರಿಗೆ ಇಟ್ಟಿದ್ದೆನು. ನಾನು ಬರಹ ಮೂಲಕ ರಾಜೀನಾಮೆಯನ್ನು ಯಾಕೆ ಕೊಡಲಿಲ್ಲ ಎಂಬುದನ್ನೂ ತಿಳಿಸಿದ್ದೆನು. ಪೂಜ್ಯ ಬಾಪು ಅವರು ನನಗೆ ಬಲವಂತ ಪಡಿಸಿದ್ದಾರೆ. ನಾನು ಅವರ ನಿರ್ಣಯಗಳನ್ನು ನಿರ್ವಾಹವಿಲ್ಲದೆ ಒಪ್ಪಿಕೊಂಡಿದ್ದೇನೆ. ಆದರೆ ಪೂಜ್ಯ ಬಾಪು ಅವರು ಈ ವಿಷಯವನ್ನು ಯಾವ ರೀತಿಯಲ್ಲಿ ನಿಮ್ಮೆದುರಿಗಿಟ್ಟಿದ್ದಾರೆಯೋ ಆ ರೀತಿಯಲ್ಲಿ ನಾನು ಅದನ್ನು ಒಪ್ಪುವುದಿಲ್ಲ. ಧರ್ಮಾಧರ್ಮದ ವಿಷಯದಲ್ಲಿ ನನ್ನ ಮನಸ್ಸಿನಲ್ಲಿ ಸಂಶಯವಿತ್ತೆಂದು ನಾನು ಒಪ್ಪುವುದಿಲ್ಲ. ನನ್ನ ಹೆಂಡತಿಯು ನಾನು ಖಿನ್ನನಿದ್ದೇನೆಂದು ಹೇಳಿದಳು. ಅದು

ತಪ್ಪು. ನಾನು ದಣಿದಿದ್ದನೆಂಬುದೇನೋ ನಿಜ. ಆದರೆ ನಾನು ಖಿನ್ನನಿರಲಿಲ್ಲ. ಇವತ್ತು ಖಿನ್ನನಿದ್ದೇನೆ. ಆ ದಿನಗಳಲ್ಲಂತೂ ವ್ಯಾಕುಲನೂ ಇರಲಿಲ್ಲ, ಪ್ರಸನ್ನನಿದ್ದೆ. ಬಾಪು ಅವರ ಈ ಅಪ್ಪಣೆಯನ್ನು ಪಾಲಿಸುವುದರಲ್ಲಿ ನನಗೆ ಕಷ್ಟವೆನಿಸುತ್ತದೆ; ಖೇದವಲ್ಲ. ಈ ಹೊಸ ಪರಿಸ್ಥಿತಿಯಲ್ಲಿ ನಾನು ಅನುಪಯುಕ್ತ (Misfit) ಎಂದು ನನಗೆ ಅನಿಸುತ್ತದೆ. ಬಾಪು ಅವರು ಅನೇಕ ಸಲ ಹೇಳಿದ್ದು ನಿಜ : ನನ್ನ ವಿಚಾರ ಧಾರೆಯು ಬಾಪೂ ಅವರ ಅನುಗಾಮಿಯಲ್ಲ ಆದರೆ ಸಮಾನಾಂತರ ರೇಖೆಯಲ್ಲಿ ನಡೆಯುತ್ತದೆ. ನಾನೊಬ್ಬ ಅಲ್ಪ, ಆದರೆ ಸ್ವತಂತ್ರ ಸತ್ಯದ ಪೂಜಾರಿ ಇರುವೆನು. ಅದರಲ್ಲಿ ನನಗೆ ಬಾಪು ಅವರಿಂದಲೂ, ಅನ್ಯರಿಂದಲೂ ಮಾರ್ಗದರ್ಶನ ದೊರೆತಿದೆ. ಬಾಪೂ ಅವರು ತಾವು ಜನ್ಮದಿಂದಲೇ ಸತ್ಯೋಪಾಸಕರಿರುವೆವು, ಆದರೆ ಅಹಿಂಸಕರವಲ್ಲ ಎಂದು ಹೇಳಿದ್ದಾರೆ. ನನ್ನದು ಇದರಿಂದ ವಿರುದ್ಧವಾಗಿದೆ. ನಾನು ಸ್ವಭಾವದಿಂದ ಅಹಿಂಸೆಯ ಉಪಾಸಕನಿದ್ದು ತರುವಾಯ ಸತ್ಯೋಪಾಸಕನಾದೆನು. ಬಾಪು ಅವರಿಗೆ ಸತ್ಯಶೋಧನೆಯಲ್ಲಿ ಅಹಿಂಸೆಯು ಸಿಕ್ಕಿತು. ಮತ್ತು ನನಗೆ ಅಹಿಂಸೆಯ ಮೂಲಕ ಸತ್ಯದ ದರ್ಶನವಾಯಿತು. ಆದ್ದರಿಂದ ಒಂದು ವಿಷಯವು ಸತ್ಯವೆಂದು ನನ್ನಲ್ಲಿ ದೃಢಶ್ರದ್ಧೆಯುಂಟಾದರೂ ಅದನ್ನು ಆಚರಣೆಯಲ್ಲಿ ತರುವಾಗ ಸಾಧ್ಯವಾದ ಮಟ್ಟಿಗೆ ಎಲ್ಲರ ಅವಿರೋಧವನ್ನು ಸಾಧಿಸಲು ಬಯಸುತ್ತೇನೆ. ಇದೇ ಈಗ ಬಾಪು ಅವರು ಬೇರೇ ಸಂದರ್ಭದಲ್ಲಿ ಯಾವ ನನ್ನ ಏಕಾಂತವಾಸ ವಿಷಯ ಹೇಳಿದರೋ, ಅದರಲ್ಲಿಯೂ ನನ್ನದು ಅದೇ ವೃತ್ತಿಯಿತ್ತು. ನನ್ನ ಹೆಂಡತಿಗೆ ಅತಿಶಯ ಕ್ಲೇಶವಾಯಿತು. ನಾನು ಎಲ್ಲಿಯಾದರೂ ಓಡಿಹೋಗಬಹುದೆಂಬ ಭಯದಿಂದ ಅವಳು ರಾತ್ರಿ ಎರಡು ಗಂಟೆಯವರೆಗೆ ನಿದ್ರೆ ಹೋಗುತ್ತಿರಲಿಲ್ಲ. ಪ್ರಾಚೀನ ಕಾಲದಲ್ಲಿ ವಿರಕ್ತ ಜನರ ರೀತಿ ಹೀಗೆಯೇ ಇತ್ತು. ಆದರೆ ನಾನು ಓಡಿಹೋಗಲಿಲ್ಲ. ನಾನು ಯೋಚಿಸಿದೆ: ನಾನು ಸತ್ಯ ಧರ್ಮದ ಮೇಲೆ ಆರೂಢನಿದ್ದ ಪಕ್ಷದಲ್ಲಿ ಒಂದಿಲ್ಲ ಒಂದು ದಿನ ನನ್ನ ಹೆಂಡತಿಯು ಅದನ್ನು ಒಪ್ಪುವಳು, ಮತ್ತು ಅವಳ ಅನುಮತಿಯಿಂದ ಹೊಗುವುದು ಸಾಧ್ಯವಾದರೆ ಅದು ಸಿಗುವಂತೆ ಯಾಕೆ ಪ್ರಯತ್ನಿಸಬಾರದು ಎಂದು ನಿಮ್ಮೆಲ್ಲರ ಸಮ್ಮತಿಯನ್ನು ಪಡೆದು ಹೋಗಲು ಎರಡು ದಿನದಿಂದ ಪ್ರಯತ್ನ ಮಾಡು ತ್ತಿದ್ದೇನೆ. ನನ್ನ ಅಹಿಂಸೆಯ ಉಪಾಸನೆಯಿಂದ ನನ್ನ ವೃತ್ತಿಯು ಹೀಗಾಗಿದೆ. ಇದೇ ಶೋಧನೆಯಲ್ಲಿ ನಾಥಜಿಯವರ ಪರಿಚಯವಾಯಿತು. ಅವರು ನನ್ನ ಬುದ್ಧಿಯನ್ನು ನಿಚ್ಚಳಗೊಳಿಸಿದರು. ನಾನು ನನ್ನ ಗುರುಭಕ್ತಿಯನ್ನು ಅವರಿಗೆ ಅರ್ಪಿಸಿದೆನು. ನಾನು ಬಿಡುವುದಾದರೂ ಸರ್ವಸಮ್ಮತಿಯಿಂದ ಬಿಡಬೇಕು, ಎಂಬುದು ನನ್ನ ಸ್ವಭಾವವೇ ಆಗಿದೆ. ಸತ್ಯ ಧರ್ಮದ ಪಾಲನೆಯಲ್ಲಿ ತತ್ಪರತೆಯಿರಬೇಕೆಂಬ ದೃಷ್ಟಿಯಿಂದ ನೋಡಿದರೆ ಇದರಲ್ಲಿ ಸತ್ಯದ ತ್ಯಾಗ ಆಗುತ್ತದೆ ಎಂದು ಎಣಿಸಬಹುದು. ಆದರೂ ಇದು ನನ್ನ ಸ್ವಭಾವ. ನಾನೊಮ್ಮೆ ಹಳ್ಳಿಯಲ್ಲಿ ಹೋಗಿ ಕುಳಿತಿದ್ದೆ. ವಲ್ಲಭಭಾಯಿಯವರೂ ಒತ್ತಾಯ ದಿಂದ ನನ್ನನ್ನು ತಿರುಗಿ ಕರೆದುಕೊಂಡು ಹೋದರು ಮತ್ತು ನಾನು ಒಪ್ಪಿ ಗುಜರಾತ ವಿದ್ಯಾಪೀಠದ ಕೆಲಸವನ್ನು ಮಾಡತೊಡಗಿದೆ. ಇದೇ ಪ್ರಕಾರ ಇವತ್ತೂ ನಾನು ಅಧ್ಯಕ್ಷನಾಗಿ

ಇರುವೆನು. ಆದರೆ ಹೇಣದಂತೆ, ಅಂದರೆ ನಾನು ಪೂಜ್ಯ ಬಾಪು ಅವರಿಗೆ ಹೇಳಿದಂತೆ ಕಾರ್ಯವಾಹಕ ಸಮಿತಿಯು ಏನು ಬಯಸುವುದೋ, ಮತ್ತು ಹೇಗೆ ಬಯಸುವದೋ ಆ ಪ್ರಕಾರ ಮಾಡುವೆನು. ಇಷ್ಟವಿದ್ದಲ್ಲಿ ಕಾರ್ಯವಾಹಕ ಸಮಿತಿಯು ಬಾಪು ಅವರ ಅಭಿಪ್ರಾಯವನ್ನು ತೆಗೆದುಕೊಳ್ಳಬಹುದು. ಆ ಭಾರವನ್ನು ಅದೇ ಹೊರುವುದು. ನಾನು ಕೇವಲ ಅದನ್ನು ಕಾರ್ಯಗತ ಮಾಡುವೆನು.

ಅಧ್ಯಕ್ಷ ಶ್ರೀ ಕಿಶೋರಲಾಲರ ಮೇಲ್ಕಾಣಿಸಿದ ಸಂಕ್ಷಿಪ್ತ ಭಾಷಣಾನಂತರ ಮಾತ್ರ ವಂದನೆಯಾದ ಮೇಲೆ ಅಧಿವೇಶನವು ಸಮಾಪ್ತವಾಯಿತು.

❑

# ಅಧ್ಯಾಯ ೭



## ಕರ್ನಾಟಕಕ್ಕೆ ಸಂಬಂಧಪಟ್ಟ ಗಾಂಧೀಜಿಯ ಲೇಖನಗಳು

(ಕರ್ನಾಟಕದಲ್ಲಿದ್ದಾಗ ಬರೆದಂಥವು)

**ಓರ್ವ ಸರಕಾರಿ ನೌಕರ ಮತ್ತು ಖಾದಿ ಹೊತ್ತು ಮಾರುವವ**

ಖಾದಿ ಧರಿಸುವುದು, ಖಾದಿಗೆ ಧನಸಹಾಯ, ಖಾದಿ ಹೊತ್ತು ಮಾರಾಟ ಮಾಡುವುದು, ಈ ಮಾರ್ಗಗಳಿಂದ ಖಾದಿಗೆ ಸರ್ಕಾರಿ ನೌಕರರು ನೆರವು ನೀಡಬಹುದೇ ಎಂಬ ಪ್ರಶ್ನೆಯನ್ನೆತ್ತಿ ಒಂದು ಪತ್ರವನ್ನು ಈ ಪತ್ರಿಕೆಯಲ್ಲಿ ಈಚೆಗೆ ಪ್ರಕಟಿಸಲಾಗಿತ್ತು. ಸುಮಾರು ಗಣ್ಯಸ್ಥಾನದಲ್ಲಿರುವ ಓರ್ವ ಸರ್ಕಾರಿ ನೌಕರ ಈ ಪ್ರಶ್ನೆಗೆ ತಾನೇ ಸ್ವತಃ ಉತ್ತರ ನೀಡಿದ್ದಾನೆ. ತನ್ನ ಜಿಲ್ಲೆಯಲ್ಲಿ ಈತ ಒಬ್ಬ ಶ್ರೇಷ್ಠ ಖಾದಿ ಕೋಠಿ ಶೆಟ್ಟಿಯಾಗಿರುತ್ತಾನೆ. ಬೆಳಗಾಂವಿಯಿಂದ ಬೆಂಗಳೂರಿಗೆ ಪ್ರಯಾಣ ಮಾಡುತ್ತಿದ್ದಾಗ ಒಬ್ಬ ಸಜ್ಜನ ಶುಭ್ರವಾದ ಖಾದಿ ನಿಲುವಂಗಿ ಧೋತ್ರ ಮತ್ತು ಪೇಟ ಧರಿಸಿ ಹಾಡು ಹಾಡುತ್ತ ರೈಲ್ವೆ ನಿಲ್ದಾಣದಲ್ಲಿ ಖಾದಿ ಮಾರಾಟ ಮಾಡುತ್ತಿದ್ದುದನ್ನು ಕಂಡೆ. ಅವರ ವಯಸ್ಸು, ರೂಪು, ಖಾದಿ ಉಡುಪು ಇವು ನನಗೆ ಶ್ರೀ ಅಮೃತಲಾಲ ಠಕ್ಕರ್ ಅವರ ನೆನಪು ತಂದುಕೊಟ್ಟಿತು. ನನ್ನ ಜೊತೆಯಲ್ಲಿ ಪ್ರಯಾಣ ಮಾಡುತ್ತಿದ್ದ ಧಾರವಾಡ ಮತ್ತು ಹುಬ್ಬಳ್ಳಿಯ ಗೆಳೆಯರ ಮಾತುಗಳನ್ನು ಕೇಳಿ ನನಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಶ್ರೀ ಅಮೃತಲಾಲ ಠಕ್ಕರ ಅವರು ಒಮ್ಮೆ ಇಂಜನಿಯರಾಗಿದ್ದರೆ ಈ ಸಜ್ಜನರೂ ಕಾರಾವರ ಜಿಲ್ಲೆಯಲ್ಲಿ ಅಸಿಸ್ಟೆಂಟ ಇಂಜನಿಯರಾಗಿದ್ದವರು. ಖಾದಿಯಲ್ಲಿ ಇವರಿಗಿದ್ದ ಭಕ್ತಿ, ಅನೇಕ ಖಾದಿ ಕೆಲಸಗಾರ ರಲ್ಲಿದ್ದುದಕ್ಕಿಂತ ಅಪರಿಮಿತವಾಗಿದ್ದು, ಕಛೇರಿಯ ವೇಳೆಬಿಟ್ಟು ಕಳೆದುಳಿದ ಎಲ್ಲ ಸಮಯ ವನ್ನೂ ಖಾದಿ ಪ್ರಚಾರಕ್ಕೆ ವಿನಿಯೋಗಿಸುತ್ತಿದ್ದರು. ನೋಡಲು ಗುಜರಾತಿಯಂತಿದ್ದ ಇವರು ಮರಾಠಿ ಮತ್ತು ಸ್ವಲ್ಪ ಕನ್ನಡ ಮಾತನಾಡುತ್ತಿದ್ದರು. ಇವರು ಯಾವ ಪ್ರಾಂತದವರಿರ ಬಹುದು ಎಂದು ನನಗೆ ಅಚ್ಚರಿಯಾಗುತ್ತಿದ್ದಂತೆ ಅವರು ಸಿಂಧಿಯಲ್ಲಿ ಹಾಡಲು ಪ್ರಾರಂಭಿಸಿದರು. ಇದರಿಂದ ಯಾವ ಪ್ರಾಂತದವರೆಂದು ತಾನಾಗಿಯೇ ವ್ಯಕ್ತವಾಯಿತು.

ಶ್ರೀ ಟಿ.ಎಂ. ಕಾನತ್ ಅವರು ನಾಲ್ಕು ವರ್ಷಗಳಿಂದ ಖಾದಿ ಪ್ರಚಾರದಲ್ಲಿ ತೊಡಗಿರುವುದಾಗಿ ಶ್ರೀ ಗಂಗಾಧರರಾವ ದೇಶಪಾಂಡೆಯವರು ನನಗೆ ತಿಳಿಸಿದರು. ಮತ್ತು ಇದನ್ನು ಅವರು ಗೋಪ್ಯವಾಗಿಟ್ಟಿರಲಿಲ್ಲ. "ಈ ದಿನ ಇವರು ಇಲ್ಲಿಗೇಕೆ ಬಂದರು" ಎಂದೆ. "ಈಸ್ಟರ್ ರಜಾ ದಿನಗಳನ್ನು ಈ ರೀತಿಯಲ್ಲಿ ಅವರು ವಿನಿಯೋಗಿಸುತ್ತಿದ್ದಾರೆ" ಎಂದು ಉತ್ತರ ದೊರೆಯಿತು. ಸ್ವತಃ ತಾವು ಖಾದಿ ವಿಕ್ರಯ ಮಾಡುವುದಲ್ಲದೆ, ಖಾದಿ ಹೊತ್ತು ಗ್ರಾಮಗಳಲ್ಲಿಯೂ, ಪಟ್ಟಣಗಳಲ್ಲಿಯೂ ಮಾರಾಟ ಮಾಡಲು ಕೆಲವರನ್ನು ನೇಮಿಸಿಕೊಂಡು, ಅವರಿಗೆ ತಮ್ಮ ಸ್ವಂತ ಕಿಸೆಯಿಂದ ರೊಕ್ಕ ಕೊಡುತ್ತಿದ್ದರೆಂದು ತಿಳಿದು ಬಂತು. ಈ ರೀತಿ ನಾನು ಮಾತನಾಡಿಕೊಳ್ಳುತ್ತಿದ್ದಂತೆ ಶ್ರೀ ಕಾನತ್ ಅವರು ರೈಲು ಗಾಡಿಯಲ್ಲಿಯೇ ಹಲವು ಗಿರಾಕಿಗಳನ್ನು ಮಾಡಿಕೊಂಡು ಖಾದಿ ಟವಲ್ ಅವರಿಗೆ ಮಾರಾಟ ಮಾಡುತ್ತ ಖಾದಿ ಕೊಂಡು ಧರಿಸಿ ಎಂದು ಹಾಡನ್ನು ಹಾಡುತ್ತಿದ್ದರು.

"ಇವರ ಈ ಕಾರ್ಯಚಟುವಟಿಕೆಯನ್ನು ಯಾವ ದೃಷ್ಟಿಯಲ್ಲಿ ಸಕಾರ ನೋಡುತ್ತದೆ" ಎಂದು ಕೇಳಿದೆ. ನಮಗೆ ತಿಳಿದಮಟ್ಟಿಗೆ ಇವರ ಈ ಧಾರ್ಮಿಕ ಕಾರ್ಯಕ್ಕೆ ಸರ್ಕಾರ ಯಾವ ಆತಂಕವನ್ನೂ ಇದುವರೆಗೂ ಒಡ್ಡಿರುವುದಿಲ್ಲ. ತಮ್ಮ ಕೆಲಸವನ್ನು ದಕ್ಷತೆಯಿಂದ ನಡೆಸಿಕೊಂಡು ಬರುತ್ತಿರುವವರೆಗೆ ಸರ್ಕಾರ ಬಹುಶಃ ಯಾವ ಅಡಚಣೆಯನ್ನೂ ಮಾಡಲಾರದು.

ಸರ್ಕಾರದ ಧೋರಣೆಯನ್ನು ಪರೀಕ್ಷಿಸಲು ಶ್ರೀ ಕಾನತ್ ಅವರದು ಒಂದು ಯತಸ್ಸೀ ಪ್ರಯೋಗವೆಂದು ಹೇಳಬಹುದು. ಸರ್ಕಾರಿ ನೌಕರರ ಭಯ ಮತ್ತು ಸಂದೇಹ ಮತ್ತು ಇದರಿಂದ ನಿವೃತ್ತಿಯಾದೀತು. ಈ ಬಡವರ ಬಂಧು ರಾಜಕೀಯದಲ್ಲಿ ಯಾವ ಪಾತ್ರವನ್ನೂ ವಹಿಸುವುದಿಲ್ಲ. ಇವರಿಗೂ ಮತ್ತು ದರಿದ್ರರಿಗೂ ಖಾದಿಯು ಬಂಧುತ್ವ ಕಲ್ಪಿಸುತ್ತದೆ. ಖಾದಿಯೇ ಅವರ ಸರ್ವಸ್ವ. ಸಕಲ ಮಹತ್ತರ ವಸ್ತುಗಳಂತೆ ಖಾದಿಯಲ್ಲಿಯೂ ಅನೇಕ ಮಹತ್ವಗಳಿವೆ. ಶ್ರೀ ಕಾನತ್ ಅವರನ್ನು ಖಾದಿಯಲ್ಲಿ ಅಡಕವಾಗಿರುವ ಆರ್ಥಿಕ ವಿಷಯಗಳು ಬಹಳ ಆಕರ್ಷಿಸಿವೆ. ಖಾದಿಯನ್ನು ಉಪವೃತ್ತಿಯಾಗಿ ಮಾಡಿಕೊಂಡು, ಅರೆಹೊಟ್ಟೆಯ ಸಂಕಟದಿಂದ ಪಾರಾಗಿರುವ ದೀನ ದರಿದ್ರರ ಕಿಸೆಯಲ್ಲಿ ನಾಲ್ಕು ಕಾಸುಗಳನ್ನು ಹಾಕಲು ಖಾದಿ ಮಾರಾಟ ಮತ್ತು ಖಾದಿ ಧರಿಸುವಿಕೆಯಿಂದ ತಾನು ನೆರವಾಗುತ್ತಿರುವುದಾಗಿ ಅವರು ಭಾವಿಸುತ್ತಾರೆ.

**ಮಹದೇವ ದೇಸಾಯಿ**

*(ಯಂಗ್ ಇಂಡಿಯಾ ೨೮-೪-೧೯೨೭)*

**ನಮ್ಮ ಕಳಂಕ**

ಡಾ॥ ಎಸ್. ಡಿ. ನಾಡಕರ್ಣಿಯವರ ಬರವಣಿಗೆ ತಿಳಿ. ಅಸ್ಪೃಶ್ಯರೆಂದು ಕರೆಯಲ್ಪಡುವವರ ವಿಷಯದಲ್ಲಿ ಅವರದು ತುಂಬು ಹೃದಯ. ದಲಿತ ವರ್ಗದವರ ಬಗೆಗೆ ತಮ್ಮ ಅನುತಾಪ ತೋಡಿಕೊಂಡಿರುವ ಅವರ ಪತ್ರವನ್ನು ಸ್ವಲ್ಪವೂ ಬದಲಾವಣೆ ಮಾಡದೆ ಇನ್ನೊಂದು ಕಡೆ ಪ್ರಕಟಿಸಿರುತ್ತೇನೆ.

ಸ್ಪೃಶ್ಯರನ್ನು ಖಂಡಿಸುವ ನೆಪದಲ್ಲಿ ಅವರಿಗೆ ಹೊರಿಸಬೇಕೆಂಬ ಆರೋಪಗಳನ್ನು ನನ್ನ ಮೇಲೆ ಹೊರಿಸಿದ್ದಾರೆ. ನನ್ನ ವಿಚಾರ ಹಾಗಿರಲಿ. ಸಾಮಾನ್ಯವಾಗಿ ತರ್ಕಬದ್ಧ ಸರಣಿ ಅವರನ್ನು ತೊರೆಯುವುದಿಲ್ಲ. ಆದರೆ ಈ ಸಂದರ್ಭದಲ್ಲಿ ಅವರ ಗಾಢ ಅನುತಾಪ ಈ ದಾರಿ ತಪ್ಪಿಹೋಗಿದೆ. ಅಸ್ಪೃಶ್ಯತೆಯ ವಿಷಯ ಎಷ್ಟೇ ಭಯಂಕರವಿರಲಿ, ಬೊಂಬಾಯಿಯಲ್ಲಿ ನೆರೆದ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯಲ್ಲಾಗಲೀ, ಅಥವಾ ದಿಲ್ಲಿಯಲ್ಲಿ ನಡೆದ ಐಕ್ಯತಾ ಸಮಿತಿಯಲ್ಲಾಗಲೀ ಅದರ ಚರ್ಚೆಗೆ ಅವಕಾಶವಿರಲಿಲ್ಲ. ಹಿಂದೂ-ಮುಸ್ಲಿಂ ಐಕ್ಯತೆಯ ಪ್ರಶ್ನೆಯೊಂದೇ ಅವರ ಮುಂದಿದ್ದುದು. ಬಾಲವಿಧವೆಯರ ಸಮಸ್ಯೆಯೂ ಭಯಂಕರವಾದುದು, ದುಃಖಮಯವಾದುದು. ಈ ಸಮಸ್ಯೆಯನ್ನು ಮೇಲ್ಕಂಡ ಸಭೆಗಳಲ್ಲಿ ಚರ್ಚೆಗೆ ತೆಗೆದುಕೊಳ್ಳುವುದು ಎಷ್ಟು ಸಮಂಜಸವೋ, ಅಷ್ಟೇ ಸಮಂಜಸ ಅಸ್ಪೃಶ್ಯರ ವಿಷಯವನ್ನು ಈ ಸಭೆಗಳಲ್ಲಿ ತೀರ್ಮಾನಕ್ಕೆ ತೆಗೆದುಕೊಳ್ಳುವುದು. ಆದರೆ ಬಹಳ ಸಾಮರ್ಥ್ಯದಿಂದ ಶ್ರೀ ನಾಡಕರ್ಣಿಯವರು ನಮ್ಮ ಮುಂದಿಟ್ಟಿರುವದು ಬಹಳ ಪ್ರಮುಖವಾದ ಪ್ರಶ್ನೆ. ಅವರ ಪತ್ರ ತರ್ಕಬದ್ಧವಾಗಿಲ್ಲ ಎಂಬ ಅಲ್ಪಕಾರಣ ನಮ್ಮ ದೃಷ್ಟಿಯನ್ನು ಕೆಡಿಸಬಾರದು. ಹಿಂದೂ-ಮುಸ್ಲಿಂ ಐಕ್ಯತೆಯಿಲ್ಲದೆ ಸ್ವರಾಜ್ಯವಿಲ್ಲ ಎಂದು ಒಪ್ಪಿಕೊಳ್ಳುವುದಾದರೆ, ಹಿಂದೂ ಧರ್ಮಕ್ಕೆ ಖಂಡಿತ ಕಳಂಕವಾದ ಅಸ್ಪೃಶ್ಯತೆಯನ್ನು ತೊಡೆದು ಹಾಕುವವರೆಗೂ ಸ್ವರಾಜ್ಯವಿಲ್ಲ, ಎಂಬ ಅವರ ವಾದಕ್ಕೆ ನನ್ನ ಸಂಪೂರ್ಣ ಒಪ್ಪಿಗೆಯುಂಟು. ಮುಂದೆ ರಚಿತವಾಗಲಿರುವ ರಾಜಕೀಯ ಸಂವಿಧಾನದಲ್ಲಿ ಅಸ್ಪೃಶ್ಯರ ಸ್ಥಾನವೇನು ಎಂಬ ವಿಷಯ ನನಗೆ ಬೇಡ. ಹಿಂದೂಗಳಾದ ನಾವು ನಮ್ಮ ಪಾತ್ರ ಸರಿಯಾಗಿ ವಹಿಸದೆಹೋದರೆ, ಸಂವಿಧಾನದಲ್ಲಿ ಅವರ ರಕ್ಷಣೆಗೆ ನಾವು ನಿರ್ಮಿಸಿಕೊಡಬಹುದಾದ ಪ್ರತಿಯೊಂದು ಊರುಗೋಲು ಚೂರುಚೂರಾಗಿ ಒಡೆದು ಹೋದೀತು. ಪ್ರತ್ಯೇಕ ಚುನಾವಣೆ, ವಿಶೇಷ ಸೌಲಭ್ಯ ಇವುಗಳನ್ನು ರಾಜ್ಯಾಂಗದಲ್ಲಿ ಒದಗಿಸಿಕೊಡುವುದರ ವಿರುದ್ಧ ನಾನು ಸೂಚಿಸಿರುವ ಅಂಶಗಳು, ಅಸ್ಪೃಶ್ಯತೆಯನ್ನು ತೊಡೆದು ಹಾಕುವುದು ಸಾಧ್ಯವಿಲ್ಲ. ಹಿಂದೂಗಳ ಅಂತರಾತ್ಮ ಕದಡಿ ಕಾರ್ಯೋನ್ಮುಖವಾಗಿ ಸ್ವಪ್ರೇರಣೆಯಿಂದ ಈ ಕಳಂಕವನ್ನು ತೊಡೆದು ಹಾಕಿದಾಗ, ಅಸ್ಪೃಶ್ಯತೆ ನಾಶವಾದೀತು. ಸ್ಪೃಶ್ಯರು ಅಸ್ಪೃಶ್ಯರಿಗೆ ಸಲ್ಲಿಸಬೇಕಾದ ಕರ್ತವ್ಯವಿದು.

ದಲಿತವರ್ಗದ ಸಂಘ ಸಂಸ್ಥೆಗಳು ಮತ್ತು ಸ್ಪೃಶ್ಯ ಅಸ್ಪೃಶ್ಯ ಇವರುಗಳ ನಡುವೆ ಘರ್ಷಣೆ ನಡೆಯುವವರೆಗೂ ಭಾರತೀಯರಲ್ಲಿ ತುಂಬ ನಿರ್ಗತಿಕರಾದ ಜನರ ಬೇಡಿಕೆಗಳತ್ತ ಅವರ ಕಣ್ತೆರೆಸುವವರೆಗೂ ಅವರು ಕಾದು ಕುಳಿತಿರಬೇಕಾದ್ದಿಲ್ಲ. ಈ ಪತ್ರದ ಕಡೆಯಲ್ಲಿ ಬರುವ ಭಯಂಕರವಾಕ್ಯವಿದು. ಇದರ ಹಿಂದಿರುವ ಶಕ್ತಿಯನ್ನು ತೃಣೀಕರಿಸುವಂತಿಲ್ಲ. ಗೋಖಲೆಯವರು ಸ್ವರ್ಗಸ್ಥರಾಗುವ ಮುನ್ನ ದಿವಂಗತ ಹರಿನಾರಾಯಣ ಆಪ್ಟೆ ಮತ್ತು ನನಗೂ ನಡೆದ ಸಂಭಾಷಣೆಯ ನೆನಪು ಇದು ತರುತ್ತದೆ. ಇದು ನಡೆದುದು ಪೂನಾದ ಸರ್ವೆಂಟ್ಸ ಆಫ್ ಇಂಡಿಯಾ ಸೊಸೈಟಿಯಲ್ಲಿ. ಕ್ರಿಶ್ಚಿಯನ್ ಪಾದ್ರಿಯವರು ದಲಿತವರ್ಗದವರಲ್ಲಿ ಕೆಲಸಮಾಡುತ್ತಾ ಅವರಲ್ಲಿ ಕ್ಷೋಭೆ ಏಳುವಂತೆ ಮಾಡುವುದಕ್ಕೆ ಪ್ರತಿಯಾಗಿ

ಉಚ್ಚವರ್ಣದವರೆಂದು ಹೇಳಿಸಿಕೊಳ್ಳುವವರಲ್ಲಿ ನಾನು ಪ್ರಾರ್ಥನೆ ಸಲ್ಲಿಸುತ್ತಿದ್ದೆ. ಈ ಕೆಲಸ ನನಗೆ ಹೊಸತು. ಹರಿನಾರಾಯಣ ಆಪ್ಟೆಯವರಂತೆ ನರಕಸದೃಶ ಸಂಕಟ ಸಾಗರದಲ್ಲಿ ಮುಳುಗಿಹೋಗುತ್ತಿದ್ದ ದಲಿತವರ್ಗದವರ ಸಂಕಟವನ್ನು ನಾನು ಅನುಭವಿಸಿ ಅರಿತಿರಲಿಲ್ಲ. ಏನೋ ಬಹಳ ಅರಿತ ಪಂಡಿತನಂತೆ, ಈ ದಲಿತ ವರ್ಗದವರನ್ನು ತುಳಿಯುತ್ತಿದ್ದ ಮತ್ತು ತುಳಿಯುವ ವರ್ಗಕ್ಕೆ ತಾನೂ ಸೇರಿದವನೆಂಬ ಅಪವಾನ ಕ್ರೋಧಗಳಿಂದ ದಹಿಸುತ್ತಿದ್ದ ಈ ಸಮಾಜೋದ್ಧಾರಕನನ್ನು ನಾನು ಕೇಳಿದೆ "ಈ ದಲಿತವರ್ಗದವರನ್ನು ನಮ್ಮ ವಿರುದ್ಧ ನೀವು ಎತ್ತಿ ಕಟ್ಟುವಿರಾ?" ಎಂದು. ತತ್‌ಕ್ಷಣ ಕ್ರೋಧಾನ್ವಿತವಾದ ಅವರ ಉತ್ತರ ಬಂತು, "ಖಂಡಿತ, ಸಾಧ್ಯವಿದ್ದಲ್ಲಿ, ಹಾಗೆ ಮಾಡುತ್ತಿದ್ದೆ." ಕರ್ತವ್ಯದೃಷ್ಟಿಯಿಂದ ಸ್ವಇಚ್ಛೆಯಿಂದ ಸ್ವಯಂಪ್ರೇರಿತರಾಗಿ ನಾವು ಕೊಡಬೇಕಾದದ್ದನ್ನು ಅವರಿಗೆ ಕೊಡದೆಹೋದಲ್ಲಿ ನಮ್ಮ ವಿರುದ್ಧ ಬಂಡಾಯವೇಳುವಂತೆ ಅವರನ್ನು ಖಂಡಿತ ಎತ್ತಿಕಟ್ಟುತ್ತಿದ್ದೆ - ನಾವು ಕೊಡಲು ಹಿಂಜರಿಯುತ್ತಿದ್ದುದನ್ನು ಬಲವಂತಿಕೆಯಿಂದ ನಮ್ಮಿಂದ ಕಸಿದುಕೊಳ್ಳಲು.

ಈ ಸುಧಾರಣೆ ಬಹಳ ಪ್ರಗತಿ ಸಾಧಿಸಿದೆ. ಆದರೆ ಸಾಧಿಸಬೇಕಾದ್ದು ಇನ್ನೂ ಅಪಾರವಿದೆ. ಬಹುತೇಕ ಸುಧಾರಣೆಗಳು ರಕ್ತಪಾತದ ಹಿನ್ನೆಲೆಯಲ್ಲಿ ಸಾಧಿತವಾಗಿವೆ. ದಲಿತ ವರ್ಗದವರ ತಾಳ್ಮೆ ಮಿತಿ ಮೀರಿ ಹೋಗುವ ಘಳಿಗೆ ಕೂಡಿ ಬರುತ್ತದೆ. ಕೋಪತಾಪಗಳಿಂದ ಹುಚ್ಚು ಹಿಡಿದುಹೋದ ಅವರು ನ್ಯಾಯ ಧರ್ಮಗಳನ್ನು ಬದಿಗೊತ್ತಿ, ಸ್ವೇಚ್ಛಾವರ್ತಿಗಳಾಗಿ, ತಮ್ಮನ್ನು ತುಳಿದುಹತ್ತಿಕ್ಕಿದವರನ್ನು ಧ್ವಂಸ ಮಾಡಿಬಿಡುತ್ತಾರೆ. ಈ ಸಮಯ ದೊರೆತಾಗ, ತಮ್ಮ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದವರು ಮಾಡುತ್ತಿದ್ದ ಅಪರಾಧಗಳೆಲ್ಲವನ್ನೂ ಇವರೂ ಮಾಡತೊಡಗುತ್ತಾರೆ. ಶ್ರೀ ಹರಿನಾರಾಯಣ ಆಪ್ಟೆ ಕ್ರೋಧದಲ್ಲಿ ನಾನೂ ಪೂರ್ಣ ಭಾಗಿಯಾಗುವುದಾದರೂ, ಕಾಲ ಮೀರಿ ಹೋಗುವದೊರಳಗಾಗಿಯೇ, ತಾವು ಉನ್ನತ ವರ್ಗಕ್ಕೆ ಸೇರಿದವರೆಂದು ಹೇಳಿಸಿಕೊಳ್ಳುವ ಹಿಂದೂಗಳು ತಮ್ಮ ಹೆಜ್ಜೆ ಹಿಂತೆಗೆದುಕೊಂಡು, ದಲಿತ ವರ್ಗಕ್ಕೆ ಬಹುಕಾಲಕ್ಕೆ ಹಿಂದೆಯೇ ದೊರೆಯಬೇಕಾಗಿದ್ದ ನ್ಯಾಯವನ್ನು ದೊರಕಿಸಿಕೊಡುವರೆಂದು ಆಶಿಸುತ್ತೇನೆ. ಆದರೆ ಉತ್ತಮ ವರ್ಣದವರೆನಿಸಿಕೊಳ್ಳುವವರು ಪಶ್ಚಾತ್ತಾಪ ವ್ಯಕ್ತಪಡಿಸದಿದ್ದರೆ ಅವರ ವಿರುದ್ಧ ದಲಿತ ವರ್ಗದವರು ಬಂಡಾಯ ಮಾಡದೆ ಬೇರೆ ಒಳ್ಳೆಯ ಮಾರ್ಗ ಹಿಡಿಯುವರೆಂದು ಆಶಿಸುತ್ತೇನೆ. ದಲಿತರು ತಮ್ಮ ಮತ್ತು ಹಿಂದೂ ಧರ್ಮದ ಉದ್ಧಾರಕ್ಕಾಗಿ ಸ್ವತಃ ಕಷ್ಟ ಸಹಿಸಿ ಸ್ವಶುದ್ಧಿಮಾಡಿಕೊಳ್ಳಲು ಮನಸಾಶ್ರಮಿಸುವರೆಂಬ ಆಕಾಂಕ್ಷೆಯಿಂದ ನಾನು ದುಡಿಯುವೆ. ಮಾನವನ ಹಾಗೂ ಭಗವಂತನ ದೃಷ್ಟಿಯಲ್ಲಿ ತಮ್ಮನ್ನೂ ಹಿಂದೂ ಧರ್ಮವನ್ನೂ ಅಪಮಾನಕ್ಕೆ ಈಡು ಮಾಡುತ್ತಿರುವ ಹಿಂದೂಗಳಿಗಿಂತಲೂ ತಾವು ಉತ್ತಮ ಹಿಂದೂಗಳೆಂದು ದಲಿತರು ತಮ್ಮ ಆಚರಣೆಯಿಂದ ತೋರಿಸಿಕೊಡುವರೆಂದೂ ಆಶಿಸುತ್ತೇನೆ. ಶ್ರೀ ನಾಡಕರ್ಣಿಯವರು ಅಸ್ಪೃಶ್ಯರ ವಿಷಯದಲ್ಲಿ ಸಂಕಟ ಪಡುತ್ತಿರುವಂತೆಯೇ ದುಃಖಿಸುವವರು. ಗಂಡಸಾಗಲೀ,

ಹೆಂಗಸಾಗಲೀ, ತಾವೂ ಸಹ ಅಸ್ಪೃಶ್ಯರಂತೆಯೇ ಅವರ ದುಃಖ ಸಂಕಟಗಳಲ್ಲಿ ಸಹಭಾಗಿಗಳಾಗಿ, ಅಸ್ಪೃಶ್ಯರಾಗಿ ಸಹೃದಯರಾಗಿ ಸಮಭಾಗಿಗಳಾಗಲಿ.

**ಮೋ.ಕ. ಗಾಂಧಿ**

*(ಯಂಗ್ ಇಂಡಿಯಾ : ೩೦-೬-೧೯೨೭)*

**ಬೆಂಗಳೂರು ಖಾದಿ ಪ್ರದರ್ಶನ :**

ಮೋ.ಕ ಗಾಂಧಿ, ಶ್ರೀ ಸಿ. ರಾಜಗೋಪಾಲಾಚಾರಿ ಮತ್ತು ಶ್ರೀ ಗಂಗಾಧರರಾವ ದೇಶಪಾಂಡೆ ಇವರು ಬೆಂಗಳೂರಿನ ಖಾದಿ ಪ್ರದರ್ಶನ ಪೂರ್ಣ ಯಶಸ್ವಿಯಾಗುವಂತೆ ಮಾಡಲು ಮಹತ್ತರ ಪ್ರಯತ್ನ ನಡೆಸುತ್ತಿದ್ದಾರೆ. ಅವರು ಗುಣಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿದ್ದಾರೆ, ಗಾತ್ರಕ್ಕಲ್ಲ. ಈ ದೃಷ್ಟಿಯನ್ನಿಟ್ಟುಕೊಂಡು ಪ್ರದರ್ಶನದ ವ್ಯಾಪಕತೆಯನ್ನು ಉದ್ದೇಶಪೂರ್ವಕವಾಗಿಯೇ ಅವರು ಮಿತಿಗೊಳಿಸಿದ್ದಾರೆ. ಆದ್ದರಿಂದ ಇದು ಅಖಿಲ ಭಾರತವಾಗದೆ ದಕ್ಷಿಣ ಭಾರತ ಪ್ರದರ್ಶನವಾಗುತ್ತಿದೆ. ಆದರೆ ಈ ಪ್ರದರ್ಶನವನ್ನು ಸಾಕಷ್ಟು ಬೋಧಪ್ರದವಾಗಿ ಮಾಡಲು. ಎಲ್ಲ ಪ್ರಾಂತಗಳಿಂದಲೂ ಅಗತ್ಯವಾದ ತಾಂತ್ರಿಕ ನೆರವು ಪಡೆಯಲು ಅನೇಕರನ್ನು ಅವರು ಆಹ್ವಾನಿಸುತ್ತಿದ್ದಾರೆ. ಈ ಕಾರಣಕ್ಕಾಗಿ ಹತ್ತಿಯ ಕಾಳು ಬಿಡುಸುವದರಿಂದ ಬಟ್ಟೆ ನೇಯುವವರೆಗೆ ಖಾದಿಯಲ್ಲಿ ಬಳಸುವ ಉಪಕರಣಗಳನ್ನು ನೋಡ ಬಯಸುವವರು ತಪ್ಪದೇ ಈ ಪ್ರದರ್ಶನ ನೋಡಬೇಕು. ಕುಶಲ ಕೈಗಳ ಈ ಉಪಕರಣಗಳನ್ನು ಬಳಸುವುದನ್ನು ಪ್ರತ್ಯಕ್ಷ ನೋಡಬೇಕು. ಈ ಪ್ರದರ್ಶನ ವೆಚ್ಚಕ್ಕಾಗಿ ಮೈಸೂರು ಸರ್ಕಾರದವರು ೫೦೦ ರೂಪಾಯಿಗಳ (ಐದುನೂರು ರೂಪಾಯಿಗಳ) ಧನಸಹಾಯ ನೀಡಿರುವುದು ಮತ್ತು ಕೈಗಾರಿಕೆ ಇಲಾಖೆಯ ಡೈರೆಕ್ಟರು ಪ್ರದರ್ಶನ ಸಮಿತಿಯ ಸದಸ್ಯರಾಗಿರಲು ಒಪ್ಪಿರುವುದೂ ಮೈಸೂರಿನಲ್ಲಿ ಖಾದಿಯ ಭವಿತವ್ಯಕ್ಕೆ ಇದು ಶುಭಸೂಚಕವಾಗಿದೆ. ಖಾದಿಯಲ್ಲಿ ಅಡಕವಾಗಿರುವ ಅರ್ಥವ್ಯವಸ್ಥೆ ಹಾಗೂ ಜನಹಿತ ಇಷ್ಟು ಮಹತ್ವಪೂರ್ಣವಾಗಿದ್ದರೂ ರಾಜ ಮಹಾರಾಜರು ಖಾದಿ ಆಂದೋಲನಕ್ಕೆ ನೀಡಬೇಕಾದಷ್ಟು ಬೆಂಬಲ ನೀಡದಿರುವದು ಸೋಜಿಗವೇ ಸರಿ. ಲಕ್ಷಾಂತರ ಹಳ್ಳಿಗರಿಗೆ ಉಪಕಸುಬು ಅತ್ಯಗತ್ಯ ಎಂದು ಎಲ್ಲರೂ ಒಪ್ಪುತ್ತಾರೆ. ಗ್ರಾಮಾಭ್ಯುದಯವನ್ನು ಬಯಸಿ ರಚಿಸಿರುವ ಅನೇಕ ಯೋಜನೆಗಳ ಕಾಗದಗಳು ಬೀದಿ ಬೀದಿಗಳಲ್ಲಿ ಮಾರಾಟವಾಗುತ್ತವೆ. ಆದರೆ ಖಾದಿಯ ವಿಶ್ವವ್ಯಾಪಕತೆಯನ್ನು ಬೇರೆ ಯಾವ ಯೋಜನೆಯೂ ಪಡೆಯಲಾರದು. ನನಗೆ ತಿಳಿದಿರುವ ಮಟ್ಟಿಗೆ, ಖಾದಿ ಯೋಜನೆಯಷ್ಟು ವ್ಯಾಪಕವಾಗಿ ಬೇರೆ ಯಾವ ಯೋಜನೆಯೂ ನಡೆಯುತ್ತಿಲ್ಲ. ಕನಿಷ್ಠ ೧೫೦೦ ಗ್ರಾಮಗಳಲ್ಲಿ ಖಾದಿ ಯೋಜನೆಯ ಪ್ರಯೋಗ ನಡೆಯುತ್ತಿರುವುದು ಅಲ್ಪ ಸಾಹಸವೇನೂ ಅಲ್ಲ.

ಖಾದಿಗೆ ರಾಜಕೀಯ ಗಂಧ ಇದೆ ಎಂದು ಸರಕಾರದ ನೌಕರರು ಸಹ ಗಾಬರಿ ಪಡಬೇಕಾದ್ದಿಲ್ಲ. ಖಾದಿಗೆ ರಾಜಕೀಯ ಸಂಬಂಧ ಉಂಟೆಂದು ಹೇಳಿದರೆ ಅನೇಕ ತಜ್ಞರಾಜಕಾರಣಿಗಳು ನಗುತ್ತಾರೆ. 'ಶಾಸನಸಭೆ' ಎಂಬ ಪದವನ್ನು ರಾಜಕೀಯದಲ್ಲಿ ಯಾವ ಅರ್ಥದಲ್ಲಿ ಬಳಸಲಾಗುತ್ತದೆಯೋ ಅದೇ ಅರ್ಥದಲ್ಲಿ 'ಖಾದಿ' ಪದವನ್ನು ಪ್ರಯೋಗಿಸುವುದಾದರೆ ಅವರು ಹೇಳುವುದು ನಿಜವೇ ಆದೀತು. ಶಿಕ್ಷಣ, ಸಹಕಾರ

ವ್ಯವಸ್ಥೆ, ಕುಡಿತ ಇವುಗಳಿಗೆ ರಾಜಕೀಯ ಸಂಬಂಧ ಎಷ್ಟಿದೆಯೋ ಅಷ್ಟೇ ಸಂಬಂಧ ಖಾದಿಗೂ ಇದೆ. ಒಂದು ರಾಷ್ಟ್ರವು ಯಾವುದೇ ಒಂದು ಪ್ರಗತಿಪರ ಕಾರ್ಯಕ್ರಮ ಕೈಗೊಂಡಾಗ ಅದರಿಂದಾಗುವ ರಾಜಕೀಯ ಪರಿಣಾಮದಿಂದ ಪಾರಾಗುವುದು ಅಸಾಧ್ಯ. ವೈಸ್‌ರಾಯರು, ರಾಜ ಮಹಾರಾಜರು, ಮತ್ತು ಇತರರೆಲ್ಲರೂ ಅವರು ದೇಶ ದ್ರೋಹಿಗಳಾಗಿರದಿದ್ದಲ್ಲಿ – ಹಿಂದೂ ಮುಸ್ಲಿಂ ಐಕ್ಯಸಾಧಿಸಲು ಸಕ್ರಿಯ ಪಾತ್ರ ವಹಿಸಬೇಕು. ಹಿಂದೂ–ಮುಸ್ಲಿಂ ಐಕ್ಯದಲ್ಲಿ ಪ್ರಚಂಡ ರಾಜಕೀಯ ಪ್ರಭಾವ ಇದ್ದೇ ಇದೆ. ಆದರೂ ಇದನ್ನು ಯಾರೂ ಹೀಯಾಳಿಸುವ ಸಾಹಸ ಮಾಡಿಲ್ಲ. ಇದು ಮಾತ್ರವಲ್ಲ, ಹಿಂದೂ–ಮುಸ್ಲಿಂ ಐಕ್ಯತಾ ಚಳವಳಿಯಲ್ಲಿ ಪ್ರಚಂಡ ರಾಜಕೀಯ ಪರಿಣಾಮ ಗುಂಭವಾಗಿದೆ ಎಂಬ ಕಾರಣದಿಂದ ಈ ಐಕ್ಯತೆಯನ್ನು ಬೆಳೆಸುವ ಪ್ರಯತ್ನದಿಂದ ದೂರವಾಗಿರುವ ಒಬ್ಬ ವ್ಯಕ್ತಿಯನ್ನೂ ನಾನು ಕಂಡರಿಯೆ. ಖಾದಿ ಪೂರ್ಣ ಯಶಸ್ವಿಯಾಗಿ ಅದರ ರಾಜಕೀಯ ಪರಿಣಾಮ ಪ್ರಭಾವಶಾಲಿಯಾಗಬೇಕಾದರೆ ಅದಕ್ಕೆ ರಾಜಕೀಯದ, ರಾಜಕೀಯದಲ್ಲಿ ಭಾಗವಹಿಸಿದವರ, ಶ್ರೀಮಂತರ, ಬಡವರ, ಜಮೀನುದಾರರ, ರೈತರ ಎಲ್ಲರ ಪ್ರೋತ್ಸಾಹವೂ ಅತ್ಯಗತ್ಯ. ಆದ್ದರಿಂದಲೇ ಖಾದಿಯನ್ನು ರಾಜಕೀಯ ಗೊಂದಲದಿಂದ ದೂರವಿಡಲು ಸರ್ವಪ್ರಯತ್ನ ಮಾಡಲಾಗುತ್ತಿದೆ. ಇದು ದಂಗೆಯ ಚಿಹ್ನೆಯಲ್ಲ. ಇದು ಸ್ವಶಕ್ತಿಯ ಸ್ವಾಭಿಮಾನದ ಮತ್ತು ಧನಿಕ–ದರಿದ್ರ, ಬಂಡವಾಳಗಾರ–ಶ್ರಮಜೀವಿ ಎಂಬ ಭಿನ್ನತೆಗಳನ್ನು ತೊಡೆದುಹಾಕಿ ಉಭಯ ಗುಂಪುಗಳಲ್ಲಿಯೂ ಅನ್ಯೋನ್ಯತೆ ಬೆಳೆಸುವ ಪ್ರತೀಕವಾಗಿದೆ. ಆದ್ದರಿಂದ ಬರಲಿರುವ ಪ್ರದರ್ಶಕ್ಕೆ, ಬೆಂಗಳೂರು ದಂಡಿನ ಪ್ರದೇಶದಲ್ಲಿ ನೆಲೆಸಿರುವ ಐರೋಪ್ಯರೂ ಸೇರಿ, ಎಲ್ಲ ಗುಂಪಿನ ಜನರೂ ಒಮ್ಮತದಿಂದ ಖಚಿತ ಸಹಾಯ ನೀಡುವರೆಂದು ನಾನು ಆಶಿಸುತ್ತಿದ್ದೇನೆ. ಅಧಿಕ ಸಂಖ್ಯೆಯ ದಂಡಿನ ಐರೋಪ್ಯರು ಇತರರೊಡನೆ ಒಂದುಗೂಡುವುದು ಸ್ವಾಗತಾರ್ಹ. ನಂದೀಬೆಟ್ಟದಲ್ಲಿ ಮತ್ತು ಬೆಂಗಳೂರಿನಲ್ಲಿ ಅನಾರೋಗ್ಯದಿಂದ ಚೇತರಿಸಿಕೊಳ್ಳುತ್ತಿದ್ದಾಗ ಕೃಪೆಯಿಟ್ಟು ನನ್ನನ್ನು ನೋಡಬಂದ ಆಂಗ್ಲಮಿತ್ರರೊಡನೆ ಮಾತನಾಡುವಾಗ ಭಾರತದ ಹಸಿದ ಲಕ್ಷಾಂತರ ಜನರ ಸಂದೇಶವೇ ಖಾದಿ ಎಂದು ತಿಳಿಸಲು ಮತ್ತು ಅಂತೆಯೇ ಅದನ್ನು ಅಂಗೀಕರಿಸಲು ನಾನು ಹಿಂಜರಿದಿಲ್ಲ.

ನೀಟುಗಾರರಾದ ಬೆಂಗಳೂರಿನ ಜನರಲ್ಲಿ ನನ್ನದೊಂದು ಮಾತು. ಉಡುಪು ಧರಿಸುವದರಲ್ಲಿ ಆದಷ್ಟು ಕಡಿಮೆ ಬಟ್ಟೆ ಬಳಸುವಂತೆ ತಿರುಚನಾಪಳ್ಳಿಯ ಒಬ್ಬ ಉಪಾಧ್ಯಾಯರ ಪ್ರಾರ್ಥನೆ ನನ್ನ ಗಮನಕ್ಕೆ ಬಂದಿದೆ. ಕೆಲವು ದಿನಗಳ ಹಿಂದೆ ಶ್ರೀಯುತ ಶ್ರೀನಿವಾಸಶಾಸ್ತ್ರಿಗಳು ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತಾ ಬೆಂಗಳೂರಿನ ಸೊಗಸುಗಾರರಾದ ಜನರು ಅಗತ್ಯಕ್ಕಿಂತ ಅಧಿಕ ಬಟ್ಟೆ ತೊಡುತ್ತಿರುವದಾಗಿ ತಮಗೆ ತಿಳಿದಿರುವಂತೆ ತಿಳಿಸಿರುವುದೂ ನನ್ನ ಗಮನಕ್ಕೆ ಬಂದಿದೆ. ಬೆಂಗಳೂರಿನ ನವನಾಗರಿಕತೆಯ ಸಮ್ಮುಖದಲ್ಲಿ, ಖಾದಿಯಲ್ಲಿ ನಂಬಿಕೆಯುಳ್ಳವರು ಸಹ, ಸರಳ ಉಡುಪನ್ನು ತೊಡಲು ಸಂಕೋಚದಿಂದ ಹಿಂತೆಗೆಯುತ್ತಿರುವದನ್ನು ನಾನು ಗಮನಿಸಿರುತ್ತೇನೆ. ಈ ಸೊಗಸುಗಾರಿಕೆಯನ್ನು ಬದಿಗೊತ್ತುವ ಧೈರ್ಯ ತಾಳಿರೆಂದು ನಾನು ಪ್ರಾರ್ಥಿಸುತ್ತೇನೆ. ನಮ್ಮ ನೆರೆಹೊರೆಯವರ ಉಪವಾಸ

ಸಂಕಟದ ಬೇಗೆಯ ಮೇಲೆ ಈ ಸೊಗಸುಗಾರಿಕೆ ಬಾಳಬೇಕಾಗುವುದು. ಹಣವಿದ್ದವರು ಸೊಗಸಾದ ಉಡಿಗೆ-ತೊಡಿಗ ತೊಡಲಿ, ಸುಖಮಯ ಬದುಕು ಬಾಳಲಿ. ಆದರೆ ಒಂದು ವ್ಯವಸ್ಥಿತ ಸಮಾಜದಲ್ಲಿರಬೇಕಾದಂತೆ, ಶ್ರೀಮಂತರ ಮತ್ತು ಹೊಟ್ಟೆಕಟ್ಟಿ ಬಾಳುವ ನಿರ್ಗತಿಕರ ಇರುವಿಕೆಯಲ್ಲಿ ಒಂದು ಮಿತಿ-ಪ್ರಮಾಣ ಇರಲಿ ಎಂದು ನಾನು ಬೇಡುತ್ತೇನೆ. ಭಾರತೀಯರಿಗೆ ಬೇಕಾಗುವ ತೀರ ಕಡಿಮೆ ಬಟ್ಟೆ ಎಂದರೆ ಒಂದು ಲಂಗೋಟಿ. ಅದರ ಅಳತೆ ಒಂದು ಚದುರ ಗಜದ ಆರನೆಯ ಭಾಗ ಮಾತ್ರ. ನಮ್ಮ ಸೊಗಸುಗಾರಿಕೆಯು, ಈ ಕನಿಷ್ಠ ಪ್ರಮಾಣವನ್ನು ಅನುಸರಿಸಿ ಇರಬೇಕು. ಈ ಕನಿಷ್ಠಾಂಶವನ್ನು ಅಧಿಕಗೊಳಿಸ ಬೇಕೆಂದು ಬಯಸುವವರು, ಮತ್ತು ಹೀಗೆ ಭಾರತದ ಜನತೆಯ ಅಗತ್ಯಗಳನ್ನು ಹೆಚ್ಚಿಸುವು ದರಿಂದ ಭಾರತವನ್ನು ಪುನಶ್ಚೇತನಗೊಳಿಸಬಹುದೆಂದು ಹಂಬಲಿಸುವವರು, ಮೊಟ್ಟ ಮೊದಲು ತಮ್ಮ ಅಗತ್ಯತೆಗಳನ್ನು ಬಡಜನರ ಶೋಷಣೆಯ ಮೂಲಕ ಹೆಚ್ಚಿಸಿಕೊಳ್ಳುವು ದರಿಂದ ಈ ಗುರಿ ಸಾಧಿಸಿದಂತಾಯಿತೆಂದು ತಿಳಿಯದಿರಲಿ. ಬಡವರು ತಮ್ಮ ಜೀವನದ ಅವಶ್ಯಕತೆಳನ್ನು ಹೆಚ್ಚಿಸಿಕೊಳ್ಳಲು ಅವರಿಗೆ ಪ್ರೋತ್ಸಾಹ ನೀಡದೆ, ಬಡವರ ಹೊಟ್ಟೆಯ ಮೇಲೆ ಬಡಿದು ತಮ್ಮ ಅವಶ್ಯಕತೆಗೆಗಳನ್ನು ಹೆಚ್ಚಿಸಿಕೊಳ್ಳದಿರಲಿ. ಲಕ್ಷಾಂತರ ಸಂಖ್ಯೆ ಯಲ್ಲಿರುವ ಈ ಬಡವರ ಮಟ್ಟ ಏರಿಸಲು ಸೊಗಸುಗಾರರಾದ ಮಧ್ಯಮ ವರ್ಗದ ಜನ ಖಾದಿ ಧರಿಸಿ ಆ ಬಡಜನರ ಕೈಗೆ ಕೆಲವು ಕಾಸುಗಳಾದರೂ ಸೇರುವಂತೆ ಮಾಡ ಬಹುದು. ಬಡತನ ಹೋಗಲಾಡಿಸಲು ವಿಶ್ವವ್ಯಾಪಕ ತ್ವರಿತ ಪರಿಣಾಮಕಾರಿ ಮಾರ್ಗ ಖಾದಿ ಧಾರಣೆ, ಬೆಂಗಳೂರಿನಲ್ಲಿ ಅನೇಕರು ಖಾದಿಗೆ ಧನಸಹಾಯ ನೀಡಿರುತ್ತಾರೆ. ಆದರೆ ಇದು ಸಾಲದು. ಖಾದಿಯನ್ನು ಧರಿಸುವವರಿಲ್ಲದಿದ್ದರೆ, ಖಾದಿ ನಿಜವಾದ ಪ್ರಗತಿ ಹೊಂದದು. ಆದ್ದರಿಂದ ಬೆಂಗಳೂರು ಮತ್ತು ಅದರ ಸುತ್ತಮುತ್ತಲ ಜಿಲ್ಲೆಗಳ ಮಹಾಜನರಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ-ಪ್ರದರ್ಶನಕ್ಕೆ ಭೇಟಿಕೊಡಿ. ಅದಕ್ಕೆ ಧನಸಹಾಯ ನೀಡಿ. ಆದರೆ ಇಷ್ಟರಿಂದಲೇ ತೃಪ್ತರಾಗಬೇಡಿ. ಖಾದಿಯನ್ನು ಧರಿಸುವದರಿಂದ ಬಡವ ರೊಂದಿಗೆ ನಾವು ಹೊಂದಿ ಬಾಳುತ್ತೇವೆ ಎಂದು ತೋರಿಸಿಕೊಡಿ. ಇದೇ ನನ್ನ ಸೂಚನೆ

*(ಯಂಗ್ ಇಂಡಿಯಾ : ೩೦-೬-೧೯೨೭)*

**ಮೈಸೂರಿನಲ್ಲಿ ಗೋರಕ್ಷಣೆ :**

ಮೈಸೂರು ಸರಕಾರದವರು ನೇಮಿಸಿರುವ "ಮೈಸೂರು ಗೋರಕ್ಷಣಾ ಸಮಿತಿ"ಗೆ ನಾನು ಬರೆದಿರುವ ಪತ್ರವನ್ನು ಪ್ರತಿಭಟಿಸಿ ಮೈಸೂರು ಸಂಸ್ಥಾನದ ಗೋರಕ್ಷಣಾ ಸಮಿತಿ ಗಳಿಂದ ನನಗೆ ಪತ್ರಗಳು ಬಂದಿವೆ. ಆ ಸಮಿತಿಯವರು ಹೊರಡಿಸಿರುವ ಪ್ರಶ್ನಾವಳಿಗೆ ಉತ್ತರವಾಗಿತ್ತು ನನ್ನ ಪತ್ರ. ಮದರಾಸಿನ ಪತ್ರಿಕೆಗಳು ನನ್ನ ಪತ್ರದಿಂದ ಕೆಲವು ಅಂಶಗಳನ್ನು ಮಾತ್ರ ಪ್ರಕಟಿಸಿರುವುದು, ಎಲ್ಲ ಸಂದರ್ಭಗಳಲ್ಲಿಯೂ ಗೋಹತ್ಯೆಯನ್ನು ಶಾಸನಬದ್ಧವಾಗಿ ತಡೆಗಟ್ಟುವುದನ್ನು ನಾನು ವಿರೋಧಿಸುವದಾಗಿ, ಈ ಗೋಕರಕ್ಷಣಾ ಮಂಡಲಿಗಳು ತಿಳಿಯಲು ಕಾರಣವಾಗಿರುತ್ತದೆ. ಈ ಕಾಗದಗಳನ್ನು ನೋಡಿ ನನಗೆ ಪರಮಾಶ್ಚರ್ಯ ವಾಯಿತು. ಮೈ ಮರೆತು ಅಥವಾ ಅಜಾಗರೂಕತೆಯಿಂದ, ಯಾವ ಸನ್ನಿವೇಶದಲ್ಲಿಯೋ

ಗೋಹತ್ಯವನ್ನು ಶಾಸನ ಬಲದಿಂದ ನಿಷೇಧಿಸುವುದು ಸರಿಯಲ್ಲ ಎಂದು ಎಲ್ಲಿಯಾದರೂ ಹೇಳಿರಬಹುದೇನೋ ಎಂದು ನನಗೆ ಆಶ್ಚರ್ಯವೆನಿಸಿತು. ಆದ್ದರಿಂದ ಗೋರಕ್ಷಣಾ ಸಮಿತಿಗೆ ನಾನು ಬರೆದಿರುವ ಪತ್ರದ ನಕಲನ್ನು ಕಳುಹಿಸುವಂತೆ ಪ್ರಾರ್ಥಿಸಿದೆ. ಕೃಪೆಯಿಟ್ಟು ಪತ್ರದ ನಕಲನ್ನು ಅವರು ಕಳುಹಿಸಿರುತ್ತಾರೆ. ನನ್ನ ತೂಗಿದ ಅಭಿಪ್ರಾಯ ಈ ಪತ್ರದಲ್ಲಿ ಅಡಕವಾಗಿರುವದರಿಂದಲೂ ಮತ್ತು ಅದಕ್ಕೆ ಈ ಸಮಿತಿಯಿಂದ ಸ್ವಲ್ಪ ಪ್ರಾಮುಖ್ಯತೆ ದೊರಕಿರುವುದರಿಂದಲೂ ಮತ್ತು ತುಂಬ ಗಹನವಾದ ಈ ವಿಷಯದಲ್ಲಿ ಆಸಕ್ತರಾಗಿರುವ ಮೈಸೂರಿನ ಜನರಲ್ಲಿ ತಪ್ಪು ಅಭಿಪ್ರಾಯಕ್ಕೆ ಎಡೆಯಾಗಿರುವದರಿಂದಲೂ ಈ ಪತ್ರದ ಪೂರ್ಣ ಪಾಠವನ್ನು ಈ ಕೆಳಗೆ ಕೊಟ್ಟಿರುತ್ತೇನೆ:

"೨೭ನೇ ನವೆಂಬರ್ ೧೯೨೬ರಲ್ಲಿ ಕಳುಹಿಸಿಕೊಟ್ಟ ಪತ್ರಕ್ಕೆ ಇಷ್ಟು ದೀರ್ಘಕಾಲ ಉತ್ತರ ಕೊಡದೆ ಇದ್ದುದಕ್ಕಾಗಿ ತಮ್ಮ ಕ್ಷಮೆ ನಾನು ಬೇಡಬೇಕಾಗಿದೆ ತಮ್ಮ ಮೊದಲ ಪತ್ರ ನನಗೆ ಸಕಾಲಕ್ಕೆ ಬಂದಿತು. ಇದು ಕೇವಲ ಔಪಚಾರಿಕವೆಂದು ಉತ್ತರಿಸಲಿಲ್ಲ ಅಲ್ಲದೆ ಪರಿಣಾಮಕಾರಿಯಾಗುವಂತೆ ಹೇಳಲು ಆಗ ಏನೂ ಇರಲಿಲ್ಲ. ಆದರೆ ನಿಮ್ಮ ಎರಡನೆಯ ಪತ್ರದಿಂದ, ನನ್ನ ಅಭಿಪ್ರಾಯ ತಿಳಯಲು ತಾವು ಕುತೂಹಲವಾಗಿರುವುದು ನನಗೆ ತಿಳಿಯಿತು. ಆದರೆ ತಮ್ಮ ಪತ್ರ ಮುಟ್ಟಿದ ಸಂದರ್ಭದಲ್ಲಿ, ನಾನು ಕೆಲಸದಲ್ಲಿ ಮುಳುಗಿ ಹೋಗಿದ್ದೆ. ನನ್ನ ಅಭಿಪ್ರಾಯಗಳನ್ನು ಕ್ರೋಡೀಕರಿಸಿ, ಸೂಕ್ತ ಉತ್ತರ ನೀಡಲು ನನಗೆ ಸಾಕಷ್ಟು ಬಿಡುವಿರಲಿಲ್ಲ. ಈಗಲೂ ಸಹ ಬಿಹಾರಿನ ನನ್ನ ಪ್ರವಾಸದ ಗಲಾಟೆಯಲ್ಲಿ, ಬಿಡುವು ಮಾಡಿಕೊಂಡು ಈ ಉತ್ತರ ಕಳಹಿಸುತ್ತಿದ್ದೇನೆ. ತಮಗೆ ಉತ್ತರ ಕಳುಹಿಸಿಕೊಡಲು ತಡವಾದದ್ದಕ್ಕೆ ಈ ಕಾರಣಗಳು ಸಾಕಷ್ಟು ತಿಳುವಳಿಕೆ ನೀಡುತ್ತವೆ ಎಂದು ನಾನು ಭಾವಿಸುತ್ತೇನೆ. ಬಹುಶಃ ಈಗ ಈ ಉತ್ತರ ನಿಷ್ಪ್ರಯೋಜಕವಾಗಿದ್ದೀತು. ತಮ್ಮ ಪತ್ರಕ್ಕೆ ಸಕಾಲದಲ್ಲಿ ಪ್ರತ್ಯುತ್ತರ ಕಳುಹಿಸಿಕೊಡದೆ ಇದ್ದುದರ ಹಿನ್ನೆಲೆಯಲ್ಲಿ ಯಾವ ತಿರಸ್ಕಾರ ಭಾವನೆ ಇಲ್ಲವೆಂದು ಮೊದಲೇ ಹೇಳಿಬಿಡುತ್ತೇನೆ. ಸಮಯ ತೀರಿಹೋದ ಮೇಲೆ ಈ ಉತ್ತರ ಕಳುಹಿಸಿಕೊಟ್ಟಿರುವುದರಲ್ಲಿ ಯಾವ ದುರುದ್ದೇಶವೂ ಇಲ್ಲವೆಂದು ನನ್ನ ಮನಸ್ಸಿಗಾದರೂ ಸಮಾಧಾನ ತಂದುಕೊಳ್ಳುವ ಉದ್ದೇಶದಿಂದ ಈ ಪತ್ರ ಬರೆದು ಕಳುಹಿಸುತ್ತಿದ್ದೇನೆ.

"ಧಾರ್ಮಿಕ ವಿಷಯಗಳಲ್ಲಿ ಸರಕಾರವು ಪ್ರವೇಶಿಸುವದನ್ನು ನಾನು ವಿರೋಧಿಸುತ್ತೇನೆ, ಮತ್ತು ಭಾರತದಲ್ಲಿ ಗೋವಿನ ಪ್ರಶ್ನೆಯಲ್ಲಿ ಧಾರ್ಮಿಕ ಹಾಗೂ ಆರ್ಥಿಕ ವಿಷಯಗಳು ಬೆರೆತುಕೊಂಡಿವೆ. ಆರ್ಥಿಕ ದೃಷ್ಟಿಯಿಂದ ಅದು ಹಿಂದೂಗಳದೇ ಆಗಲಿ ಮುಸಲ್ಮಾನರದೇ ಆಗಲಿ ಗೋಧನವನ್ನು ರಕ್ಷಿಸುವುದು ಪ್ರತಿಯೊಂದು ರಾಜ್ಯದ ಕರ್ತವ್ಯವೆಂದು ನಿಸ್ಸಂದೇಹವಾಗಿ ಹೇಳಬಹುದು. ಆದರೆ ತಮ್ಮ ಪ್ರಶ್ನಾವಳಿಯನ್ನು ನಾನು ಸರಿಯಾಗಿ ಗ್ರಹಿಸಿರುವದೇ ಆದರೆ ಹಿಂದೂ-ಮುಸಲ್ಮಾನರ ನಡುವೆ ಸರಕಾರ ಪ್ರವೇಶಿಸಬಹುದೇ ಮತ್ತು ತಮ್ಮ ಧರ್ಮಾಚರಣೆಗಾಗಿ ಗೋವಧೆ ಮಾಡಬೇಕೆಂದು ಮುಸಲ್ಮಾನರು ಅಪೇಕ್ಷಿಸುವ ಸಂದರ್ಭದಲ್ಲಿಯೂ ಸರಕಾರ ಗೋವಧೆಯನ್ನು ಶಾಸನ ಸಮ್ಮತವಾಗಿ ನಿಷೇಧಿಸಬಹುದೇ ಎಂಬುದೇ

ನಿಮ್ಮ ಪ್ರಶ್ನಾವಳಿಯ ಹಿನ್ನೆಲೆ. ಹಿಂದೂಸ್ಥಾನವು, ಅದರಲ್ಲಿ ಜನಿಸಿದ ಹಿಂದೂಗಳಿಗೆ ಸೇರಿದ್ದು ಮಾತ್ರವಲ್ಲ, ಇಲ್ಲಿ ಜನಿಸಿರುವ ಮುಸಲ್ಮಾನ್, ಕ್ರಿಶ್ಚಿಯನ್ ಮತ್ತು ಇತರರಿಗೂ ಸೇರಿದ್ದು, ಯಾವುದೇ ಧರ್ಮಕ್ಕೆ ಸೇರಿದ ಅನುಯಾಯಿಗಳು ಧಾರ್ಮಿಕ ದೃಷ್ಟಿಯಿಂದ ಗೋವಧೆ ಮಾಡಬೇಕೆಂದು ಬಯಸಿದ್ದೇ ಆದರೆ, ಹಿಂದೂ ರಾಜ್ಯ ಸಹ ಅಂತಹ ಮತಾನುಯಾಯಿಗಳಲ್ಲಿ ಬುದ್ಧಿವಂತರಾದ ಬಹು ಜನರ ಸಮ್ಮತಿ ಪಡೆಯದೆ ಗೋವಧೆ ನಿಷೇಧಿಸಲಾಗದು. ಧರ್ಮಾಚರಣೆಗಾಗಿ ಮಾತ್ರ ಅವರು ಗೋವಧೆಯನ್ನು ಹಿಂದೂಗಳಿಗೆ ಸಿಟ್ಟುಬಾರದಂತೆ, ಅವರನ್ನು ಉದ್ರೇಕಗೊಳಿಸದಂತೆ, ಖಾಸಗೀ ಸ್ಥಳದಲ್ಲಿ ಸದ್ದಿಲ್ಲದೇ ನಡೆಸಬಹುದು. ಇಂಥ ಗೋವಧೆಯ ಸುದ್ದಿ ಹಿಂದೂಗಳ ಕಿವಿಗೆ ಬೀಳುತ್ತದೆ. ಅವರು ಕುಪಿತರಾಗುವುದು ಸ್ವಾಭಾವಿಕ, ಸಹಜ. ಆದರೆ, ದುರದೃಷ್ಟವಶಾತ್, ಭಾರತದಲ್ಲಿ ಗೋವಧೆಯು ಹಿಂದೂಗಳ ಮನಸ್ಸನ್ನು ನೋಯಿಸಬೇಕು, ಸಿಟ್ಟಿಗೆಬ್ಬಿಸಬೇಕು ಎಂಬ ಉದ್ದೇಶದಿಂದಲೇ ನಡೆಸಲ್ಪಡುತ್ತದೆ ಎಂಬುದು ನಮಗೆ ತಿಳಿದಿದೆ. ತನ್ನ ಪ್ರಜೆಗಳ ಬಗ್ಗೆ ಯತ್ಕಿಂಚಿತ್ ಭಾವನೆಯುಳ್ಳ ಯಾವ ಸರಕಾರವೇ ಆಗಲಿ, ಇಂಥ ಪ್ರವೃತ್ತಿಯನ್ನು ಸದೆಬಡಿಯಬೇಕು. ಆದರೆ ನನ್ನ ಅಭಿಪ್ರಾಯದಲ್ಲಿ ಗೋ ಸಂಬಂಧದ ಆರ್ಥಿಕ ಪ್ರಶ್ನೆಯನ್ನು ಸರಿಯಾಗಿ ಹತೋಟಿಗೆ ತೆಗೆದುಕೊಂಡಲ್ಲಿ, ಮುಂದೆ ತಾನೇ ತಾನಾಗಿ ನಾಜೂಕಾದ ಧಾರ್ಮಿಕ ಪ್ರಶ್ನೆಯೂ ಸರಿಹೋಗುತ್ತದೆ. ಗೋವಧೆ ಆರ್ಥಿಕ ದೃಷ್ಟಿಯಿಂದ ಅಸಾಧ್ಯವೆನಿಸುವಂತೆ ಮಾಡಬಹುದು, ಮಾಡಬೇಕು. ದುರದೃಷ್ಟವಶಾತ್ ಜಗತ್ತಿನ ಎಲ್ಲ ಪ್ರದೇಶಗಳಿಗಿಂತಲೂ ಭಾರತದಲ್ಲಿ, ಹಿಂದೂಗಳು ಪವಿತ್ರವೆಂದು ಭಾವಿಸುವ ಪ್ರಾಣಿ ಕೊಲೆಗೆ ಅತ್ಯಂತ ಅಗ್ಗವಾಗಿದೆ. ಈ ಗುರಿ ಸಾಧಿಸಲು ಈ ಕೆಳಕಂಡ ಸೂಚನೆಗಳನ್ನು ನಾನು ಕೊಡಬಯಸುತ್ತೇನೆ :

೧) ಮಾರುಕಟ್ಟೆಯ ಮಾರಾಟಕ್ಕೆ ಬರುವ ಪ್ರತಿಯೊಂದು ದನವನ್ನು ಎಲ್ಲರಿಗಿಂತಲೂ ಅಧಿಕ ಧಾರಣೆಗೆ ಸವಾಲು ಮಾಡಿ ರಾಜ್ಯ ಸರಕಾರ ಕೊಂಡುಕೊಳ್ಳಬೇಕು.

೨) ಪ್ರತಿಯೊಂದು ಮುಖ್ಯ ಪಟ್ಟಣದಲ್ಲಿಯೂ ಸರಕಾರ ಕ್ಷೀರಕ್ಷೇತ್ರಗಳನ್ನು ಸ್ಥಾಪಿಸಿ ಹಾಲು ಸುಲಭ ದರದಲ್ಲಿ ದೊರಕುವಂತೆ ವ್ಯವಸ್ಥೆ ಮಾಡಬೇಕು.

೩) ತನ್ನ ದೇಶದಲ್ಲಿರುವ ಎಲ್ಲ ಸತ್ತ ದನಗಳ ತೊಗಲು, ಮೂಳೆ ಇತ್ಯಾದಿಗಳನ್ನು ಸರಿಯಾಗಿ ಉಪಯೋಗಕ್ಕೆ ಬರುವಂತೆ ಚರ್ಮಾಲಯ (ಟ್ಯಾನರಿ)ಗಳನ್ನು ಸರಕಾರದವರು ಏರ್ಪಡಿಸಬೇಕು; ಅಲ್ಲದೆ ಖಾಸಗಿಯವರ ದನಗಳು ಸತ್ತಾಗ ಅವುಗಳನ್ನು ಸಹ ಬಹಿರಂಗ ಮಾರುಕಟ್ಟೆಯಲ್ಲಿ ಇದಕ್ಕಾಗಿ ಕೊಳ್ಳಬೇಕು.

೪) ಸರಕಾರ ಮಾದರಿ ಪಶುಪಾಲನಾ ಕೇಂದ್ರಗಳನ್ನು ಸ್ಥಾಪಿಸಿ ದನಗಳ ಪಾಲನೆ, ಪೋಷಣೆ, ತಳಿಗಳ ವೃದ್ಧಿ ಇವುಗಳನ್ನು ಜನರಿಗೆ ಅರಿವಾಗುವಂತೆ ಕಲಿಸಿಕೊಡಬೇಕು.

೫) ದನಗಳ ಮೇವಿಗಾಗಿ ಗೋಮಾಳಗಳಿಗೆ ಉದಾರವಾಗಿ ಸರಕಾರ ಭೂಮಿ ಮೀಸಲಾಗಿರಿಸಬೇಕು; ಮತ್ತು ಗೋಪಾಲನೆಯನ್ನು ಜನರಿಗೆ ಶಾಸ್ತ್ರೀಯವಾಗಿ

ತಿಳಿಸಲು ಪ್ರಪಂಚದಲ್ಲಿ ದೊರೆಯುವ ಶ್ರೇಷ್ಠ ನಿಷ್ಣಾತರನ್ನು ಇದಕ್ಕಾಗಿ ಬರಮಾಡಿಕೊಳ್ಳಬೇಕು.

೬) ಈ ಉದ್ದೇಶ ಸಾಧನೆಗಾಗಿಯೇ ಪ್ರತ್ಯೇಕ ಇಲಾಖೆ ಇರಬೇಕು, ಈ ಇಲಾಖೆಯ ಉದ್ದೇಶ ಲಾಭ ಗಳಿಕೆ ಇರಲಾಗದು, ಉತ್ತಮ ತಳಿಯ ಅಭಿವೃದ್ಧಿ ಆಗುವಂತೆ ಮತ್ತು ಪಶುಪಾಲನೆಗೆ ಸಂಬಂಧಪಟ್ಟ ಸಮಗ್ರ ವಿಷಯಗಳು ಜನರಿಗೆ ಅರಿವಾಗುವಂತೆ ಜನರು ಇವುಗಳ ಪೂರ್ಣ ಪ್ರಯೋಜನ ಪಡೆಯುವಂತೆ ಲಾಭ ಗಳಿಕೆಯಿಲ್ಲದೆ ಈ ಇಲಾಖೆ ಕೆಲಸ ಮಾಡಬೇಕು.

"ಈ ಹಿಂದಿನ ಯೋಜನೆಯು ಮುದಿ, ಕುಂಟು, ಕಾಯಿಲೆ ಮತ್ತು ಅನುಪಯುಕ್ತವಾದ ದನಗಳ ಪೋಷಣೆಯನ್ನು ಸರಕಾರ ಕೈಕೊಳ್ಳುವದೆಂದು ನಿರೀಕ್ಷಿಸುತ್ತದೆ. ಇದರಿಂದ ಬಹಳ ವೆಚ್ಚಕ್ಕೆ ದಾರಿಯಾಗುವುದೇನೋ ನಿಜ. ಆದರೆ ಈ ಭಾರವನ್ನು ಎಲ್ಲ ಸರಕಾರಗಳೂ, ಅದರಲ್ಲಿಯೂ ಹಿಂದೂ ರಾಜ್ಯಗಳು ಸಂತೋಷದಿಂದ ಭರಿಸಲೇಬೇಕು. ಈ ಸಮಸ್ಯೆಯ ಆಳವಾದ ಅಭ್ಯಾಸದಿಂದ ನನಗೆ ಹೀಗನಿಸುತ್ತದೆ – ಪಶುಪಾಲನಾ ಕ್ಷೇತ್ರಗಳನ್ನು, ಚರ್ಮಾಲಯಗಳನ್ನು, ಶಾಸ್ತ್ರೀಯವಾಗಿ ನಡೆಸಿಕೊಂಡು ಬರುವದರಿಂದ, ಆರ್ಥಿಕ ದೃಷ್ಟಿಯಿಂದ ನಿರುಪಯೋಗಿ ದನಗಳ ಪಾಲನೆಗಾಗಿ ಸರಕಾರ ವೆಚ್ಚಮಾಡುವ ಹಣ ಈ ಮೇಲ್ಕಂಡ ಎರಡು ಸಂಸ್ಥೆಗಳಿಂದಲೇ ಗಳಿಸಬಹುದು, ಅಲ್ಲದೆ ಅವುಗಳಿಂದ ದೊರೆಯುವ ಗೊಬ್ಬರ ಮತ್ತು ಹಾಲು ಮತ್ತು ಅದರ ಉತ್ಪನ್ನಗಳು, ಹಾಗೂ ಚರ್ಮ, ಚರ್ಮದಿಂದ ತಯಾರಾದ ಮಾಲು ಮತ್ತು ಸತ್ತ ದನಗಳಿಂದ ತಯಾರಿಸಬಹುದಾದ ನಾನಾ ಬಗೆಯ ಸರಕುಗಳು, ಇವುಗಳ ಮಾರಾಟದಿಂದ ವೆಚ್ಚ ಸರಿದೂಗಿಸಬಹುದು ಎಂದು ನನ್ನ ಅಭಿಪ್ರಾಯ. ಇದಲ್ಲದೆ, ಇಂದು ವೈಜ್ಞಾನಿಕ ತಿಳುವಳಿಕೆಯ ಅಭಾವದಿಂದ ಅಥವಾ ತಪ್ಪು ಭಾವನೆಯಿಂದ ಮೃತ ದನಗಳಿಂದ ತಯಾರಿಸಬಹುದಾದ ಅನೇಕ ಪದಾರ್ಥಗಳು ಉತ್ಪನ್ನವಾಗದೆ ನಷ್ಟವಾಗಿ ಹೋಗುತ್ತಿವೆ ಅಥವಾ ಅವುಗಳಿಂದ ಪೂರ್ಣ ಪ್ರಯೋಜನ ನಾವು ಪಡೆಯುತ್ತಿಲ್ಲ. ತಮಗೆ ಒಪ್ಪಿಸಿರುವ ಯೋಜನೆಯ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ಬೇಕಾಗಿದ್ದಲ್ಲಿ, ದಯಮಾಡಿ ನನಗೆ ತಿಳಿಸುವುದು".

ಅನೇಕ ಗೋಸೇವಾ ಮಂಡಲಿಯ ಸದಸ್ಯರುಗಳೊಡನೆ ನಡೆಸಿದ ಮಾತು ಕತೆಗಳಿಂದಾಗಲೀ, ಅಥವಾ ನನ್ನ ಮುಂದಿರುವ ಕಾಗದ ಪತ್ರಗಳಿಂದಾಗಲೀ, ಈ ಪತ್ರದಲ್ಲಿ ಸೂಚಿಸಿರುವ ನನ್ನ ಅಭಿಪ್ರಾಯ ಬದಲಾಯಿಸಲು ಕಾರಣಗಳೇ ನನಗೆ ಕಾಣುವುದಿಲ್ಲ. ಯಾವ ಸಂದರ್ಭದಲ್ಲಿಯೂ ಗೋಹತ್ಯೆ ನಿಷೇಧಿಸುವ ಶಾಸನ ಮಾಡಲೇಬಾರದೆಂದು ನಾನು ಎಲ್ಲಿಯೂ ಹೇಳಿಲ್ಲ ಎಂಬುದನ್ನು ವಾಚಕರು ಗಮನಿಸಬಹುದು. ಆದರೆ ನಾನು ಹೇಳಿರುವುದು ಹೀಗಿದೆ – ಗೋವಧೆಯ ನಿಷೇಧದಿಂದ ಯಾರಿಗೆ ಅನಾನುಕೂಲವಾಗುತ್ತದೆಯೋ ಆ ಜನರ ಪೈಕಿ ಬುದ್ಧಿಶಾಲಿಗಳ ಬಹುಜನಾಭಿಪ್ರಾಯದ ಸಮ್ಮತಿ ಪಡೆಯದೆ ಗೋಹತ್ಯೆ ನಿಷೇಧ ಕಾನೂನು ಮಾಡಲಾಗದು. ಮೈಸೂರು ಸಂಸ್ಥಾನದ

ತಿಳಿವಳಿಕೆಯುಳ್ಳ ಬಹುಸಂಖ್ಯಾತ ಮುಸಲ್ಮಾನ ಪ್ರಜೆಗಳ ಸಮ್ಮತಿ ಪಡೆದು ಮೈಸೂರು ಸರಕಾರ ಗೋಹತ್ಯಾ ನಿಷೇಧ ಕಾನೂನು ಮಾಡುವದು ಬಹಳ ಸೂಕ್ತ. ಈ ಅಭಿಪ್ರಾಯ, ನಿಷೇಧದ ಪರ ಇದ್ದಲ್ಲಿ ಅಂಥ ಕಾನೂನು ಮಾಡಲೇಬೇಕು. ಗೋ ಸಂರಕ್ಷಣಾ ಸಂಸ್ಥೆಗಳ ಪ್ರತಿನಿಧಿಗಳು ನನ್ನನ್ನು ಭೇಟಿ ಮಾಡಿ, ಮೈಸೂರು ಸಂಸ್ಥಾನದಲ್ಲಿ ಹಿಂದೂ-ಮುಸ್ಲಿಂ ಬಾಂಧವ್ಯ ಮಧುರವಾಗಿರುವುದಾಗಿಯೂ ಮೈಸೂರಿನಲ್ಲಿರುವ ಬಹುಸಂಖ್ಯಾತ ಮುಸಲ್ಮಾನರು, ಗೋಹತ್ಯಾ ನಿಷೇಧ ಪರವಾಗಿ ಹಿಂದೂಗಳಷ್ಟೇ ಉತ್ಸಾಹಿಗಳಾಗಿರುವು ದಾಗಿಯೂ ತಿಳಿಸಿದರು. ಅಲ್ಲದೆ, ಅನೇಕ ಐರೋಪ್ಯರೂ, ಅದರಲ್ಲಿಯೂ ಕ್ರೈಸ್ತಪ್ರಾದಿಗಳು ಗೋಹತ್ಯೆ ನಿಷೇಧ ಕಾನೂನಿನ ಪರ ಇರುವುದಾಗಿ ತಿಳಿಸಿರುವ ಭರವಸೆಯಿಂದ ನನಗೆ ತುಂಬ ಸಂತೋಷವಾಗಿದೆ. ಈ ಕಾರಣಗಳಿಂದ ಗೋಹತ್ಯವನ್ನು ಶಾಸನ ಬಲದಿಂದ ನಿಷೇಧಿಸಲು-ಅವರು ನನಗೆ ತಿಳಿಸಿರುವ ವಿಷಯಗಳು ಸರಿಯಾಗಿದ್ದಲ್ಲಿ-ಮಾರ್ಗ ಸುಗಮ ವಾಗಿದೆ. ನನ್ನ ಪತ್ರದಲ್ಲಿ ನಾನು ಸೂಚಿಸಿರುವಂತೆ ಮತ್ತು ಈ ಪತ್ರಿಕೆಯ ಪುಟಗಳಲ್ಲಿ ಮರಳಿ ಮರಳಿ ನಾನು ಒತ್ತಾಯ ಮಾಡಿ ಹೇಳಿರುವಂತೆ, ಗೋಹತ್ಯೆಯನ್ನು ಶಾಸನ ಸಮ್ಮತವಾಗಿ ನಿಷೇಧಿಸುವುದು, ಗೋಸಂರಕ್ಷಣೆಯ ಕಾರ್ಯಕ್ರಮದಲ್ಲಿ ಬಹು ಸಣ್ಣ ಭಾಗ. ನನಗೆ ಬಂದಿರುವ ಪತ್ರಗಳ ಧಾಟಿ, ಮತ್ತು ಅನೇಕ ಗೋಸೇವಾ ಸಂಸ್ಥೆಗಳ ಕಾರ್ಯಚಟುವಟಿಕೆಗಳನ್ನು ಗಮನಿಸಿದರೆ, ಶಾಸನ ಸಮ್ಮತವಾಗಿ ಗೋಹತ್ಯೆಯನ್ನು ನಿಷೇಧಿಸುವುದರಲ್ಲಿಯೇ ಅವರು ಸಂತೃಪ್ತರಾಗಿರುವುದಾಗಿ ಕಾಣಿಸುತ್ತದೆ. ಈ ರೀತಿಯ ಶಾಸನ ಜಾರಿಗೆ ಬಂದರೆ ತಮ್ಮ ಕಾರ್ಯ ಮುಗಿದಂತೆಯೇ ಎಂದು ತಿಳಿಯುವವರಿದ್ದಾರೆ. ತಮ್ಮ ಸರ್ವಸ್ವವನ್ನು ಅದರಲ್ಲಿಯೇ ಕಾಣುವವರಿಗೆ ನಾನು ಎಚ್ಚರಿಕೆ ಕೊಡಬಯಸುತ್ತೇನೆ. ಶಾಸನಗಳಿಂದ ತುಂಬಿ ತುಳುಕುತ್ತಿರುವ ಈ ನಾಡಿನಲ್ಲಿ ಸಾಕಷ್ಟು ಶಾಸನಗಳಿವೆ. ಯಾವುದೋ ಒಂದು ದೋಷ ನಿವಾರಿಸಲು, ಆ ದೋಷ ಬೇರೆ ಪ್ರಯತ್ನವಿಲ್ಲದೆ ತಾನಾಗಿಯೇ ನೀಗಿ ಹೋಗುವುದಾಗಿ ಅನೇಕರು ತಿಳಿದಿರುತ್ತಾರೆ. ಇದಕ್ಕಿಂತ ಸ್ವಕಲ್ಪಿತ ಮೋಸ ಬೇರೆ ಇರಲಾರದು. ದುರ್ಬುದ್ಧಿಯಿಂದ ಕೂಡಿದ ಅಲ್ಪಸಂಖ್ಯಾತರ ವಿರುದ್ಧ ಅಥವಾ ತಿಳಿವಳಿಕೆಯಿಲ್ಲದ ಸ್ವಲ್ಪ ಜನರ ವಿರುದ್ಧ ಕಾನೂನು ಯಶಸ್ವಿಯಾದೀತು; ಆದರೆ ಬುದ್ಧಿವಂತರಿಂದ ಕೂಡಿದ ವ್ಯವಸ್ಥಿತ ಸಾರ್ವಜನಿಕ ಪ್ರಜಾಭಿಪ್ರಾಯದ ವಿರುದ್ಧ, ಅಥವಾ ಉನ್ನತಾಭಿಮಾನವುಳ್ಳ ಮತಾಂಧರು ಧರ್ಮದ ಸೋಗಿನಲ್ಲಿ ನಡೆಸುವ ಚಳವಳಿಯ ವಿರುದ್ಧ, ಶಾಸನ ಎಂದಿಗೂ ಯಶಸ್ವಿಯಾಗದು. ಗೋಸಂರಕ್ಷಣೆಯ ವಿಷಯವನ್ನು ಹೆಚ್ಚು ಹೆಚ್ಚಾಗಿ ಅಭ್ಯಸಿಸಿದಂತೆ, ಗೋವು ಮತ್ತು ಅದರ ಸಂತಾನದ ರಕ್ಷಣೆ ನಾನು ಸೂಚಿಸಿರುವ ರಚನಾತ್ಮಕ ವಿಧಾನದಲ್ಲಿ ಎಡೆಬಿಡದೆ ಒಂದೇ ಸಮನೆ ಕೆಲಸ ಮಾಡಿಕೊಂಡು ಬರುವುದರಿಂದ ಮಾತ್ರವೇ ಯಶಸ್ವಿಯಾದೀತೆಂಬ ನನ್ನ ವಿಶ್ವಾಸ ಮತ್ತಷ್ಟು ಖಚಿತವೂ ಭದ್ರವೂ ಆಗುತ್ತದೆ. ನನ್ನಿಂದ ಸೂಚಿತವಾಗಿರುವ ರಚನಾತ್ಮಕ ಕಾರ್ಯಕ್ರಮವನ್ನು ತಿದ್ದುಪಡಿಮಾಡಲು ಅಥವಾ ಅದನ್ನು ಇನ್ನಷ್ಟು ಕ್ರಮಬದ್ಧ ಮಾಡಲು ಸಾಕಷ್ಟು ಅವಕಾಶವಿದ್ದೀತು. ಆದರೆ ಹಿಂದೂಸ್ಥಾನದ ಗೋಧನ ನಾಶವಾಗದಂತೆ ರಕ್ಷಿಸಲ್ಪಡ ಬೇಕಾದರೆ, ವ್ಯಾಪಕ ರಚನಾತ್ಮಕ ಕಾರ್ಯಕ್ರಮ ಕೈಗೊಳ್ಳಬೇಕಾದ್ದು ಅಗತ್ಯ. ಇದನ್ನು

ಕುರಿತು ಶಂಕಿಸಲು ಎಡೆಯಿಲ್ಲ. ಭಾರತದ ಪಶು ಸಂಪತ್ತಿನ ರಕ್ಷಣೆ ಎಂದರೆ ನಿಜವಾಗಿಯೂ ಆ ದನಗಳ ಪಾಡಿಗೆ ಇಳಿದಿರುವ ಹಸಿವಿನಿಂದ ಕಂಗಾಲಾಗಿರುವ ಭಾರತದ ಲಕ್ಷಾಂತರ ಸ್ತ್ರೀ ಪುರುಷರ ರಕ್ಷಣೆ ಎಂದೇ ಆಗುತ್ತದೆ. ಅನೇಕ ವಿಷಯಗಳಲ್ಲಿ ದೇಶೀ ಸಂಸ್ಥಾನಗಳು ಉಳಿದ ಭಾರತದ ಪ್ರಾಂತಗಳಿಗೆ ಮಾರ್ಗದರ್ಶಿಯಾಗಿರುವಂತೆ ಈ ವಿಷಯದಲ್ಲೂ ನಿಸ್ಸಂದೇಹವಾಗಿ ಮೇಲ್ಪಂಕ್ತಿಯಾಗಬಹುದು. ಈ ಪಥದಲ್ಲಿ ಸರಿಯಾದ ಅಡಿಯಿಡಲು, ದೇಶೀಯ ಸಂಸ್ಥಾನಗಳಲ್ಲಿ ಮೈಸೂರಿಗಿಂತ ಹೆಚ್ಚು ಯೋಗ್ಯವಾದ, ಸಾಮರ್ಥ್ಯಶಾಲಿ ಸಂಸ್ಥಾನ ಬೇರೆಯಿರಲಾರದು. ನನಗೆ ತಿಳಿದುಬಂದಿರುವ ಎಲ್ಲಾ ವರದಿಗಳಿಂದಲೂ, ಮೈಸೂರಿನಲ್ಲಿ ಜನಪ್ರಿಯ ದೊರೆ, ತಿಳಿವಳಿಕೆಯುಳ್ಳ ಪ್ರಜಾಭಿಪ್ರಾಯ, ಹಿಂದೂ-ಮುಸ್ಲಿಂ ಸಮಸ್ಯೆರಹಿತ, ಸಹಾನುಭೂತಿಯುಳ್ಳ ದಿವಾನರು ಇದ್ದಾರೆ. ಮೈಸೂರಿನಲ್ಲಿ ಇಂಪೀರಿಯಲ್ ಡೈರಿ ಮತ್ತು ಪಶು ಸಂಗೋಪನ ಕ್ಷೇತ್ರ ಉಂಟು. ಇಂಪೀರಿಯಲ್ ಡೈರಿ ತಜ್ಞ ವಿಲಿಯಂ ಸ್ಮಿತ್ ಅವರು ಬೆಂಗಳೂರಿನಲ್ಲಿಯೇ ಇರುತ್ತಾರೆ. ಆದ್ದರಿಂದ ರಚನಾತ್ಮಕ ಯೋಜನೆ ಕೈಗೊಳ್ಳಲು ಅಗತ್ಯವಾದ ಸಕಲ ಸೌಲಭ್ಯಗಳೂ ಈ ಸಂಸ್ಥಾನದಲ್ಲಿರುತ್ತವೆ. ಜೊತೆಗೆ ಅತ್ಯಂತ ಉತ್ಕೃಷ್ಟವಾದ ಹವೆಯನ್ನು ಮೈಸೂರು ರಾಜ್ಯಕ್ಕೆ ನಿಸರ್ಗ ಕರುಣಿಸಿದೆ. ಗೋ ಬ್ರಾಹ್ಮಣ ಹಿತರಕ್ಷಕ ಎಂಬ ಕೀರ್ತಿ ಗಳಿಸಬೇಕೆಂದು ಹಿಂದೂ ರಾಜರು ಅತ್ಯಂತ ತವಕ ಪಡುತ್ತಾರೆ. ಗೋವು ಎಂದರೆ ಹಾಲು, ಹೈನು, ಗೊಬ್ಬರ ಇತ್ಯಾದಿ ಅನೇಕ ಪದಾರ್ಥಗಳನ್ನು ಭಾರತಕ್ಕೆ ನೀಡುತ್ತಲಿರುವ ಚತುಷ್ಪಾದ ದನ ಮಾತ್ರವೇ ಅಲ್ಲ, ನಿಸ್ಸಹಾಯಕ, ದಲಿತ, ನಿರ್ಗತಿಕ, ದರಿದ್ರ ಎಂದೂ ಅರ್ಥಮಾಡಿಕೊಳ್ಳಬೇಕು. ಬ್ರಾಹ್ಮಣ ಎಂದರೆ ಬ್ರಹ್ಮಜ್ಞಾನಿ ದೈವಜ್ಞಾನಿ, ಅನುಭವಿ ಎಂದು ತಿಳಿಯಬೇಕು. ಆದರೆ ದುರ್ದೈವದಿಂದ ಇಂದು ಹಿಂದೂ ರಾಜರು ನಿಸ್ಸಹಾಯಕರಾಗಿದ್ದಾರೆ; ಅನೇಕ ಸಂದರ್ಭಗಳಲ್ಲಿ ಉದಾಸೀನರಾಗಿಯೂ ಮತ್ತು ಈ ರಕ್ಷಣೆ ನೀಡಲು ಮನಸ್ಸಿಲ್ಲದವರಾಗಿಯೂ ಇರುತ್ತಾರೆ. ಪಶು ಸಂಗೋಪನ, ಉತ್ತಮ ಜಾತಿ ತಳಿಯ ಅಭಿವೃದ್ಧಿ, ಹಾಲಿನ ಉತ್ಪನ್ನ, ಮೃತ ದನಗಳ ದೇಹದ ಸದುಪಯೋಗ ಇವುಗಳನ್ನು ರಾಷ್ಟ್ರದ ಇಡೀ ಜನರ ಹಿತಕ್ಕಾಗಿ ವಿನಿಯೋಗಿಸಲು, ಸಂಸ್ಥಾನಗಳು ಮತ್ತು ಜನತೆ ಒಂದಾಗಿ ಪರಸ್ಪರ ಸಹಯೋಗಿಗಳಾಗಿ ವರ್ತಿಸದೆ ಹೋದಲ್ಲಿ ಭಾರತದ ದನಗಳು, ಗೋವಧೆಯ ವಿರುದ್ಧ ಎಷ್ಟೇ ಶಾಸನಗಳು ಶಾಸನ ಕಡತಕ್ಕೆ ಏರಿಸಲ್ಪಟ್ಟರೂ, ಬೆಳೆದು ದೊಡ್ಡವಾಗಿ ಅನ್ಯಾಯವಾಗಿ ಕಟುಕನ ಕೈಗೆ ಬಲಿಯಾಗುತ್ತವೆ. ದೇವರ ಮುಂದೆ ವರದಿ ಒಪ್ಪಿಸಲು ವಿಚಾರಣೆಗೆ ನಿಂತಾಗ, ನಿಸರ್ಗ ನಿಯಮದ ಅರಿವು ನಮಗಿರಲಿಲ್ಲ ಎಂದು ಭಾರತ ಸ್ತ್ರೀ ಪುರುಷರು ಅಜ್ಞಾನದ ನೆಪ ಹೂಡಿದರೆ ಅದು ಅಂಗೀಕೃತವಾಗದು.

ಬೆಂಗಳೂರು ಮತ್ತು ಮೈಸೂರಿನ ಸರ್ಕಾರಿ ಮೃಗಾಲಯಗಳಲ್ಲಿರುವ ವನ್ಯಪ್ರಾಣಿಗಳಿಗೆ ಗೋಮಾಂಸ ಕೊಡಲಾಗುತ್ತಿದೆಯೆಂದೂ, ಎಲ್ಲ ಮಾಂಸಗಳಿಗಿಂತ ಗೋಮಾಂಸ ಬಹಳ ಅಗ್ಗವೆಂದೂ ಇತರ ಹಿಂದೂಗಳಂತೆ ರಾಮಾಯಣ ಮತ್ತು ಮಹಾಭಾರತಗಳನ್ನು ಬಲ್ಲ ಮತ್ತು ತಾವು ಹಿಂದೂಗಳೇ ಎಂದು ಹೇಳಿಕೊಳ್ಳುವ ಹಾಗೂ ಹಿಂದೂಗಳೆಂದೇ

ಪರಿಗಣಿಸಲ್ಪಡುವ ಆದಿಕರ್ನಾಟಕರು ಗೋಮಾಂಸ ತಿನ್ನುವ ಅಭ್ಯಾಸವಿಟ್ಟುಕೊಂಡಿರುವುದಾಗಿಯೂ ತಿಳಿದು ನನಗೆ ಸಿಡಿಲು ಬಡಿದಂತಾಯಿತು. ಇವೆಲ್ಲವೂ ನಿಜವೇ ಇದ್ದಲ್ಲಿ, ಉತ್ತಮ ಸ್ಥಾನದಲ್ಲಿರುವ ಹಿಂದೂಗಳೂ ಈ ಅಪವಾದಕ್ಕೆ ಸ್ಪಷ್ಟವಾಗಿ ಗುರಿಯಾಗಬೇಕಾಗುತ್ತದೆ. ಆದಿಕರ್ನಾಟಕರಿಗೆ ಗೋವಿನ ಪಾವಿತ್ರ್ಯತೆಯ ಅರಿವಿಲ್ಲದಿದ್ದಲ್ಲಿ, ಅದಕ್ಕೆ ಕಾರಣ ಅವರ ಅಜ್ಞಾನ, ತಿಳಿವಳಿಕೆಯ ಅಭಾವ. ಆದರೆ ಹಿಂದೂ ಧರ್ಮದ ಮೂಲ ಸತ್ಯ ಅವರಿಗೆ ತಿಳಿಸಿ ಹೇಳದೆ, ತಮ್ಮ ಸಹೋದರರನ್ನು ಈ ದುರ್ಗತಿಗೆ ತಂದಿರುವ ಇತರ ಹಿಂದೂಗಳ ವಿಷಯದಲ್ಲಿ ಏನು ಹೇಳೋಣ?

*(ಯಂಗ್ ಇಂಡಿಯಾ : ಜುಲೈ ೭, ೧೯೨೭)*

**ಆದಿಕರ್ನಾಟಕರು :**

ಆದಿಕರ್ನಾಟಕರು ಯಾರು ಎಂದು 'ಯಂಗ್ ಇಂಡಿಯಾ' ಪತ್ರಿಕೆಯ ಎಲ್ಲ ವಾಚಕರಿಗೂ ತಿಳಿಯದೆ ಇರಬಹುದು. ಅವರು ಕರ್ನಾಟಕದ ದಲಿತ ವರ್ಗಕ್ಕೆ ಸೇರಿದವರು. ರಾಣಿಪರಾಜೆ ಸಮ್ಮೇಳನದಲ್ಲಿ ರಾಣಿಪರಾಜೆ ಕೋಮಿನ ಗೆಳೆಯರು. ಕಾಳಿಪರಾಜೆ ಎಂಬ ಹೆಸರನ್ನು ಬಹಳ ಸೂಕ್ತವಾಗಿ ರಾಣಿಪರಾಜೆ ಎಂದು ಕರೆದಿರುವಂತೆ, ಅಖಿಲ ಭಾರತದಲ್ಲಿರುವ ದಲಿತ ವರ್ಗದವರು ತಮ್ಮ ಕೋಮುಗಳ ನಾಮಧೇಯವನ್ನು ಕೀಳು ಅರ್ಥ ಬರದ ಹೆಸರುಗಳಿಗೆ ಬದಲಾಯಿಸಿಕೊಳ್ಳುತ್ತಿರುವುದರಲ್ಲಿ ಅಕ್ರಮವೇನೂ ಕಾಣುತ್ತಿಲ್ಲ. ಈ ಧೋರಣೆಯನ್ನೇ ಅನುಸರಿಸಿ, ಆದಿಕರ್ನಾಟಕ ಎಂದು ಕರ್ನಾಟಕದ ದಲಿತ ವರ್ಗದವರು ಬದಲಾಯಿಸಿಕೊಂಡಿರುತ್ತಾರೆ. ಮೈಸೂರಿನ ದಿವಾನರು ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಪ್ರಾರಂಭ ಭಾಷಣದಲ್ಲೇ ಈ ಶಿರೋನಾಮೆಯ ಕೆಳಗೆ ಸೂಚಿಸಿರುವ ಎರಡು ಕಲಂಕಗಳು ನನ್ನ ಗಮನಕ್ಕೆ ಬಂದಿರುತ್ತವೆ. ಈ ಪ್ಯಾರಾಗಳಲ್ಲಿ, ಈ ಕೋಮಿನ ಜನರಿಗೆ ಶಿಕ್ಷಣ ನೀಡಲು ವಿಶೇಷ ಸೌಲಭ್ಯ ಏರ್ಪಡಿಸಲಾಗಿದೆ ಮತ್ತು ಕೋಮಿನ ಜನರ ಸ್ಥಿತಿಗತಿಗಳಿಗನುಗುಣವಾಗಿ ಅವರಿಗಾಗಿ ವಿಶೇಷ ವ್ಯವಸ್ಥೆ ಮಾಡಲಾಗಿದೆ" ಎಂದು ಹೇಳಿದೆ. 'ವಿದ್ಯಾರ್ಥಿವೇತನ ಶಾಲೆಗೆ ಸಲ್ಲಿಸಬೇಕಾದ ರುಸುಮಿನ ಮಾಫಿ, ಉಚಿತ ಬಟ್ಟೆಬರೆ, ವಿದ್ಯಾರ್ಥಿಗಳಿಗೆ ಅಗತ್ಯವಾದ ಪುಸ್ತಕಗಳು ಮತ್ತು ಇತರ ಉಪಕರಣಗಳನ್ನು ಉಚಿತವಾಗಿ ಒದಗಿಸುವುದು, ಉಚಿತ ವಿದ್ಯಾರ್ಥಿ ನಿಲಯ. ಇವೆಲ್ಲಕ್ಕೂ ಮಿಗಿಲಾಗಿ ಯಾವ ಶಾಲೆಗಾದರೂ ಸೇರಬಹುದಾದ ಹಕ್ಕು, ಅಲ್ಲದೆ ೬೦೫ ಪ್ರತ್ಯೇಕ ಶಾಲೆಗಳ ವ್ಯವಸ್ಥೆ ಇವರಿಗಾಗಿ ಮಾಡಲ್ಪಟ್ಟಿದೆ. ಇವು ಈ ಕೋಮಿನವರಿಗಾಗಿ ಒದಗಿಸಿರುವ ವಿಶೇಷ ಸೌಲಭ್ಯಗಳು. ಒಟ್ಟಿನಲ್ಲಿ ಈ ಕೋಮಿಗೆ ಸೇರಿದ ೧೬,೫೭೫ ವಿದ್ಯಾರ್ಥಿಗಳು ಮೈಸೂರು ಸಂಸ್ಥಾನದಲ್ಲಿ ಈಗ ಶಿಕ್ಷಣ ಪಡೆಯುತ್ತಿದ್ದಾರೆ. ಸಹಕಾರ ತತ್ತ್ವದ ಮೇಲೆ, ಭೂಮಿ, ಜಾನುವಾರು ಮತ್ತು ಸೂಕ್ತ ಮಾರ್ಗದರ್ಶನ ನೀಡಲು ಸಹಕಾರಿ ಬೇಸಾಯ ಪದ್ಧತಿಯ ಯೋಜನೆಯೊಂದು ರೂಪಿತವಾಗುತ್ತಿದೆ.

ಈ ಪ್ಯಾರಾ ಈ ಕೆಳಕಂಡ ಸೂಚನೆಗಳಿಂದ ಮುಕ್ತಾಯವಾಗುತ್ತವೆ.

"ಈ ಜನ ನಮ್ಮ ಶಕ್ತಿಗೆ ಮತ್ತುಷ್ಟು ಶಕ್ತಿ ನೀಡುವಂಥವರಾಗಿರಬೇಕು. ಅವರು ನಮ್ಮ ದೌರ್ಬಲ್ಯದ್ಯೋತಕವಾಗಿ ಉಳಿಯುವಂತೆ ಬಿಟ್ಟುಬಿಡೋಣವೇ? ತಮಗೆ ಅನ್ಯಾಯ ವಾಗಿದೆ ಎಂಬ ನೋವು ಅವರನ್ನು ಪ್ರತಿಕಾಲಕ್ಕೂ ಬಾಧಿಸುತ್ತದೆ. ದಯವೇ ಈ ನೋವನ್ನು ಉಪಶಮನ ಮಾಡಬಲ್ಲದು. ಅವರನ್ನು ಹಿಂದೂ ಧರ್ಮದ ವೃತ್ತದೊಳಗೆ ಸೇರಿಸಿಕೊಳ್ಳಲು ಹೆಚ್ಚು ಹೆಚ್ಚು ಪ್ರಯತ್ನ ನಡೆಯಬೇಕು. ಏಕೆಂದರೆ ಅವರೂ ಹಿಂದೂ ಧರ್ಮಕ್ಕೆ ಸೇರಿದವರೇ. ಹಿಂದೂ ಧರ್ಮದಲ್ಲಿಯೇ ಉಳಿದುಕೊಳ್ಳಲು ಎಲ್ಲಾ ಸೌಲಭ್ಯಗಳನ್ನೂ ಅವರಿಗೆ ಒದಗಿಸಿ ಕೊಡಬೇಕು. ಅವರು ನಮ್ಮ ರಾಜಕೀಯಕ್ಕೆ ಹೆಚ್ಚಿನ ಬಲ ಕೊಡಬಲ್ಲರು. ಹೀಗೆ ಮಾಡದೆ ಹೋದಲ್ಲಿ ಅಷ್ಟೇ ಶಕ್ತಿ ನಮ್ಮ ದೇಶ ಕಳೆದುಕೊಳ್ಳಲು ನಾವು ದಾರಿ ಮಾಡಿಕೊಟ್ಟಂತೆ ಆಗುತ್ತದೆ. ಅವರನ್ನು ದೂರವಾಗಿರಿಸುವುದರಿಂದ, ಮತ್ತೊಂದು ಭಿನ್ನ ಶಕ್ತಿಗೆ ಪ್ರೋತ್ಸಾಹ ನೀಡಿದಂತಾಗುತ್ತದೆ. ಈಗಾಗಲೇ ಜಟಿಲವಾಗಿರುವ ಆಡಳಿತಕ್ಕೆ ಮತ್ತೊಂದು ಸಮಸ್ಯೆ ಜೋಡಿಸಿದಂತಾಗುತ್ತದೆ. ದಲಿತರ ಸ್ಥಿತಿಯನ್ನು ಸುಧಾರಿಸಬಹುದಾದ ಯಾವ ಅವಕಾಶವನ್ನೂ ಕಡೆಗಣಿಸಲಾಗದು. ಹಿಂದೂ ಸಮಾಜದ ಎಲ್ಲ ಗೆಳೆಯರೂ, ಮೈಸೂರಿನ ಪ್ರತಿಯೊಬ್ಬ ಪ್ರೇಮಿಯೂ ಸರ್ಕಾರದ ಪ್ರಯತ್ನಕ್ಕೆ ತನ್ನ ಸರ್ವಶಕ್ತಿಯನ್ನೂ ನೀಡಿ ಪೋಷಿಸಬೇಕು."

ಕ್ರೈಸ್ತರು ಮತ್ತು ಮುಸಲ್ಮಾನರ ಮಿಷಿನರಿಗಳು ದಲಿತವರ್ಗದ ಈ ಜನರನ್ನು ಹಿಂದೂ ಧರ್ಮದಿಂದ ತಮ್ಮ ಕಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸುವುದು ಸೂಕ್ತವಲ್ಲವೆಂದು ಉಭಯತ್ರರಿಗೂ ಇದು ಸೌಮ್ಯ ಎಚ್ಚರಿಕೆಯಾಗಿದೆ. ಆದರೂ ಅವರು ಇದರಲ್ಲಿ ಪ್ರವೇಶಿಸ ಬೇಕೆಂದು ಅಪೇಕ್ಷಿಸುವುದಾದರೆ ದಲಿತರು ಉತ್ತಮ ಹಿಂದೂಗಳಾಗುವಂತೆ ಪ್ರೋತ್ಸಾಹ ನೀಡುವುದು ಉಚಿತ. ಈ ಸಲಹೆಯಂತೆ ಸಂಬಂಧಪಟ್ಟ ಎಲ್ಲ ಪಕ್ಷಗಳೂ ನಡೆದುಕೊಳ್ಳುವು ದಾದರೆ, ದೇಶದಲ್ಲಿ ನಿಜಶಾಂತಿ ನೆಲೆಸುವಂತೆ ಮಾಡುವುದರಲ್ಲಿ ಬಹಳ ಹಿರಿಯ ಪಾತ್ರ ವಹಿಸುವಂತೆ ಆಗುತ್ತದೆ.

*(ಯಂಗ್ ಇಂಡಿಯಾ : ಜುಲೈ ೭, ೧೯೨೭)*

**ಬಾಪೂಜಿಯವರ ಆಶೀರ್ವಚನ (೮-೭-೧೯೨೭)**

ಬಂಧುಗಳೆ, ಭಗಿನಿಯರೆ,

ಶ್ರೀ ರಾಜಗೋಪಾಲಚಾರಿಯವರಿಗೆ ಆರು ದಿನಗಳ ಕಾರ್ಯದ ಪರಿಣಾಮವಾಗಿ ಹೆಮ್ಮೆ ಎನಿಸಿದೆ, ತೃಪ್ತಿಯೆನಿಸಿದೆ. ಆದರೆ ಒಂದು ಕಡೆ ಬೆಂಗಳೂರಿನಲ್ಲಿ ಜವಳಿ ಅಂಗಡಿ ಗಳನ್ನೂ, ಅವುಗಳಲ್ಲಿ ನಡೆಯುತ್ತಿರುವ ಹೇರಳ ವ್ಯಾಪಾರವನ್ನೂ, ಇನ್ನೊಂದು ಕಡೆ ನೀವು ಧರಿಸಿರುವ ಉಡುಪು, ಮತ್ತು ಖಾದಿಯನ್ನು ಧರಿಸುವ ನಿಮ್ಮ ನಿರ್ಧಾರ ಇವುಗಳನ್ನೂ ತುಲನಾತ್ಮಕವಾಗಿ ನೋಡಿದರೆ, ಇಲ್ಲಿ ನಡೆದಿರುವ ಖಾದಿ ವ್ಯಾಪಾರದ ವಿಷಯದಲ್ಲಿ ನನಗೆ ಏನೇನೂ ಸಮಾಧಾನವಿಲ್ಲ. ಖಾದಿ ಮಾರಾಟ ಮಾಡುವುದು ಕಠಿಣ ಕಾರ್ಯ. ತೊಂದರೆ ಏನಿದ್ದರೂ ವ್ಯಾಪಾರ ಸಮರ್ಪಕವಾಗಿತ್ತು. ಇದರಿಂದ ಸಂತೋಷಪಡಬೇಕಾದದ್ದೇ. ಶ್ರೀ ರಾಜಗೋಪಾಲಾಚಾರಿಯವರ ಸಂತೋಷವೂ

ಇದರಲ್ಲಿಯೇ ಇದೆ. ನಮ್ಮಲ್ಲಿ ಆಧುನಿಕ ನಗರ ನಾಗರಿಕತೆ ಇಲ್ಲ. ಈ ನಾಗರಿಕತೆಯನ್ನು ನಾವು ಮುಟ್ಟಬಹುದೆಂದು ಯಾರಾದರೂ ಕನಸು ಕಾಣುತ್ತಿದ್ದರೆ, ಅದನ್ನು ಸಾಧಿಸಲು ಇನ್ನೂ ಅನೇಕ ತಲೆಮಾರುಗಳು ಅಗತ್ಯ ಎಂದು ನಾನು ಘೋಷಿಸುತ್ತೇನೆ.

ನಮ್ಮ ಮಾತೃಭೂಮಿಯ ಅಭ್ಯಾಸ ಮಾಡಿ, ಏಳು ಲಕ್ಷ ಗ್ರಾಮಗಳು ಇಂಡಿಯಾದ ಉದ್ದ ೧,೯೦೦ ಮೈಲಿಗಳು, ಅಗಲ ೧,೫೦೦ ಮೈಲಿಗಳು. ಸಂಯುಕ್ತ ಅಮೆರಿಕ ಸಂಸ್ಥಾನವೂ ಹೊಸತಾಗಿ ಜನ್ಮ ತಾಳಿದ ರಾಷ್ಟ್ರ. ಲಕ್ಷಾಂತರ ಎಕರೆಗಳು ಅಲ್ಲಿ ಬಂಜರು ಬಿದ್ದಿವೆ.

ಭೂಮಿ ಉತ್ತು ಫಸಲು ಪಡೆಯಬಹುದು. ಅಲ್ಲಿನ ಜನಬಾಹುಳ್ಯವೂ ಬಹಳ ಕಡಿಮೆ. ಆಂಗ್ಲೇಯ ಅಲ್ಲಿಗೆ ಹೋಗಿ ಒಂದು ನೂತನ ನಾಗರಿಕತೆ ಸ್ಥಾಪಿಸಿದ. ಆ ದೇಶಕ್ಕೆ ಆ ನಾಗರಿಕತೆ ಒಪ್ಪವಾಗಿರಬಹುದು. ಪುಣ್ಯ ನದಿಗಳಿಂದಲೂ, ಪಾವನ ಹಿಮಾಲಯ ದಿಂದಲೂ, ಪುರಾತನ ಕಾಲದಿಂದ ನಡೆದು ಬಂದಿರುವ ಉದಾತ್ತ ಪರಂಪರೆಗಳಿಂದಲೂ, ಮತ್ತು ಧರ್ಮದ ಮೂಲಕ ಬೆಳೆದು ಬಂದಿರುವ ಈ ನಾಗರಿಕತೆಯನ್ನು ನಾಶ ಮಾಡುವು ದಿದ್ದರೆ ವಿದೇಶದ ಆ ನಾಗರಿಕತೆಯನ್ನು ಈ ನಮ್ಮ ಪುರಾತನ ನಾಡಿಗೆ ತರುವುದೊಂದೇ ಮಾರ್ಗ. ಅದು ಚಂಗೀಸ್‌ಖಾನನ ಮಾರ್ಗ. ಈ ಕಾರ್ಯ ಸಾಧಿಸಲು ನೂರಾರು ಚಂಗೀಸ್‌ಖಾನರು ಅಗತ್ಯ. ಹಳ್ಳಿಯ ಎಲ್ಲ ಜನರನ್ನೂ ಸಂಹರಿಸಿ, ಕೆಲವು ಸ್ವಪ್ರತಿಷ್ಠಿತ ಪಟ್ಟಣಿಗರನ್ನು ಉಳಿಸಿಕೊಳ್ಳುವುದರಿಂದ ಮಾತ್ರವೇ ಈ ಕಾರ್ಯ ಸಾಧಿಸಬಹುದು. ಈ ನಗರ ನಿವಾಸಿಗಳು ನವ ನಾಗರಿಕತೆಯ ಕೈಗೊಂಬೆಯಾಗಬಲ್ಲರು.

ಆಧುನಿಕ ನಾಗರೀಕತೆಯಲ್ಲಿರುವ ಶ್ರೇಷ್ಠ ಗುಣಗಳನ್ನು ಪುರಾತನ ಭಾರತೀಯ ನಾಗರಿಕತೆಯೊಂದಿಗೆ ಮಿಳಿತವಾಗುವಂತೆ ಮಾಡುವುದು ನಿಜವಾದ ಲಾಭದಾಯಕವಾದ ಮಾರ್ಗ. ಹಿಂದೂ-ಮುಸ್ಲಿಂ ಮತ್ತು ಇತರರೆಲ್ಲರಲ್ಲಿಯೂ ಸಮಾನ ಪ್ರಮಾಣದಲ್ಲಿರುವುದು ಕಡು ದಾರಿದ್ರ್ಯ. ಕ್ರಿಕೆಟ್, ಫುಟ್‌ಬಾಲ್, ಕುದುರೆ ಜೂಜು ಮೊದಲಾದ ಕ್ರೀಡೆಗಳಲ್ಲಿ ಜಯ ಗಳಿಸಿದವರಿಗೆ ಬಹುಮಾನ ವಿನಿಯೋಗವಾಗುತ್ತಿರುವಲ್ಲಿ ನಿಮ್ಮಲ್ಲಿ ಕಂಡುಬರುವ ಮಿತಿಮೀರಿದ ಉತ್ಸಾಹವನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಆದರೆ ಈ ಪ್ರದರ್ಶನ ವೀಕ್ಷಿಸಿದ ಮೇಲೂ ಚರಖವನ್ನು ಅರಿತುಕೊಂಡು ಅದರ ಮರ್ಮ ಗ್ರಹಿಸಿರುವಿರೋ ಇಲ್ಲವೋ ನಾನರಿಯೆ. ಈ ಪ್ರದರ್ಶನದ ಅಂತರಾರ್ಥ ಅರಿತುಕೊಳ್ಳಬಲ್ಲ ಒಳನೋಟ ವನ್ನೂ ಮತ್ತು ಮನೋಶಕ್ತಿಯನ್ನೂ ಕರುಣಿಸಲೆಂದು ಪರಮಾತ್ಮನಲ್ಲಿ ಮೊರೆಯಿಡು ತ್ತಿದ್ದೇನೆ. ಈ ವಿಷಯ ಕುರಿತು ಮಾತನಾಡುತ್ತಿದ್ದರೆ, ನನ್ನ ಹೃದಯದಲ್ಲಿ ಉಕ್ಕಿ ಬರುವ ವೇದನೆ ತಡೆದುಕೊಳ್ಳುವುದು ನನಗೆ ಕಠಿಣವೆನಿಸುತ್ತದೆ. ಸಾಧಾರಣ ಕಾಲದಲ್ಲಿ ಮಾತ ನಾಡುವಂತೆ ಆಗ ಮಾತನಾಡಲಾರೆ. ನನ್ನ ಅಂತರಾಳದ ವೇದನೆ ನಿಮ್ಮ ಕಣ್ಣಿಗೆ ಗೋಚರಿಸು ವಂತೆ ಭಗವಂತ ಕರುಣಿಸಲೆಂದು ಮೊರೆಯಿಡುತ್ತೇನೆ ಭಗವಂತನ ಕರುಣೆ ನಿಮ್ಮೆಲ್ಲರ ಮೇಲಿರಲಿ.

*(ಯಂಗ್ ಇಂಡಿಯಾ : ೮-೭-೧೯೨೭)*

**ದಕ್ಷಿಣ ಭಾರತ ಖಾದಿ ಸಮ್ಮೇಲನ ಮತ್ತು ಪ್ರದರ್ಶನ,**
**ಬೆಂಗಳೂರು, ಜುಲೈ ೧೯೨೭**
**ಗಾಂಧೀಜಿಯವರ ಭಾಷಣ :**

ಈ ದಿನ ಸುಂದರ ಬೆಂಗಳೂರು ನಗರದಲ್ಲಿ ತಮ್ಮ ಮಧ್ಯೆ ಮತ್ತು ನಮ್ಮ ಪೂಜ್ಯ ಹಿರಿಯರಾದ ಪಂಡಿತ್ ಮದನಮೋಹನ ಮಾಳವೀಯ ಅವರೊಡನೆ ಉಪಸ್ಥಿತನಾಗಿರಲು ನನಗೆ ತುಂಬಾ ಸಂತೋಷವಾಗುತ್ತದೆ. ಪುರಾತನ ಆರ್ಯ ಸಂಪ್ರದಾಯದಲ್ಲಿ ಹುಟ್ಟಿ ಬೆಳೆದು ಬಂದವನು ನಾನು; ಮಾಳವೀಯಜಿ ಇರುವ ಯಾವ ಸಭೆಯಲ್ಲಾದರೂ ಪ್ರಮುಖ ಪಾತ್ರ ವಹಿಸಲು ನನಗೆ ತುಂಬ ಸಂಕೋಚವಾಗುತ್ತದೆ. ನನ್ನ ಮಾತೃಭೂಮಿಗೆ ಮರಳಿ ಬಂದ ಮೊದಲ್ಗೊಂಡು ಅವರು ನನ್ನ ಹಿರಿಯ ಸಹೋದರ ಎಂದು ನಾನು ಭಾವಿಸಿಕೊಂಡಿದ್ದೇನೆ. ಆದರೆ ನನಗೊಪ್ಪಿಸಿರುವ ಕೆಲಸ ನಿರ್ವಹಿಸುವುದು ನನ್ನ ಕರ್ತವ್ಯ ಎಂದು ನಾನು ತಿಳಿದಿರುತ್ತೇನೆ. ಆದ್ದರಿಂದ ಈ ಸಂಕೋಚದಿಂದ ಪಾರಾಗಲು ನನಗೆ ಸಾಧ್ಯವಾಗಿರುತ್ತದೆ.

ನನ್ನ ಕಾಯಿಲೆ ಗುಣವಾಗಿ ನನ್ನ ದೇಹಸ್ಥಿತಿ ಸುಧಾರಿಸಿಕೊಂಡ ಮೇಲೆ ದೊಡ್ಡ ಸಭೆಯಲ್ಲಿ ಮಾತನಾಡಲು ಬಂದಿರುವುದು ಇದೇ ಮೊದಲು. ಈ ಸಂದರ್ಭದಲ್ಲಿ ಮೈಸೂರಿನ ಶ್ರೀಮನ್ಮಹಾರಾಜರವರು ಮತ್ತು ಇಲ್ಲಿನ ಜನತೆ ನನ್ನ ವಿಷಯದಲ್ಲಿ ನಾನು ದೀರ್ಘಾವಧಿ ಕಾಯಿಲೆಯಾಗಿದ್ದು ಗುಣವಾಗುತ್ತಿದ್ದ ಅವಧಿಯಲ್ಲಿ ತೋರಿರುವ ಪ್ರೀತಿ ವಾತ್ಸಲ್ಯಗಳನ್ನು ಸ್ಮರಿಸಿಕೊಳ್ಳದಿರಲು ಮತ್ತು ನನ್ನ ಗಾಢ ಕೃತಜ್ಞತೆಗಳನ್ನು ಸಮರ್ಪಿಸದಿರಲು ನನ್ನಿಂದ ಸಾಧ್ಯವಾಗದು. ನಿಮ್ಮ ಪ್ರೀತಿ ಮತ್ತು ಅತಿಥಿ ಸತ್ಕಾರದ ಸುರಿಮಳೆಯಿಂದ ಕಾಯಿಲೆ ಬೀಳುವುದೂ ಒಂದು ಸುಕೃತವೇನೋ ಎನಿಸುವಂತಾಗಿದೆ.

ಆದರೆ ನನ್ನ ಹಲವು ಗೆಳೆಯರು ಒಂದು ವಿಷಯದಲ್ಲಿ ನನಗೆ ಎಚ್ಚರಿಕೆ ನೀಡಿರುತ್ತಾರೆ. ಖಾದಿ ಪ್ರಸಾರಕ್ಕಾಗಿ ತಮಗೆ ಮಾಡಿಕೊಂಡಿರುವ ಪ್ರಾರ್ಥನೆಯಲ್ಲಿ, ತಾವು ಖಾದಿ ಕೊಂಡು ಧರಿಸುವುದಾದರೆ, ನನ್ನ ಕಾಯಿಲೆ ಬಹುಮಟ್ಟಿಗೆ ಇಳಿಮುಖವಾಗುವುದಾಗಿ, ನನ್ನ ಅನಾರೋಗ್ಯವನ್ನೇ ನೆಪ ಮಾಡಿಕೊಂಡು ತಿಳಿಸಿರುತ್ತಾರೆ. ಈ ಬಗೆಯ ಕಲ್ಪನೆಗಳನ್ನು ನಿಮ್ಮ ಮನಸ್ಸಿನಿಂದ ತೊಡೆದುಹಾಕಿಬಿಡಬೇಕಾಗಿ ಕೇಳಿಕೊಳ್ಳುತ್ತೇನೆ. ರಾಷ್ಟ್ರೀಯ ದೃಷ್ಟಿಯಿಂದ ಖಾದಿಗೆ ಬೆಲೆಯಿಲ್ಲ. ಆರ್ಥಿಕ ದೃಷ್ಟಿಯಲ್ಲಿ ನಮ್ಮ ದೇಶದ ಆರ್ಥಿಕ ಪ್ರಗತಿಗೆ ಖಾದಿಯಿಂದ ಏನೂ ಅನುಕೂಲವಾಗದು ಎಂದು ನೀವು ಭಾವಿಸುವುದಾದರೆ, ಈ ಬಗ್ಗೆ ನನ್ನ ಭಾವನೆಗಳು ಏನೇ ಇರಲಿ, ಖಾದಿಯನ್ನು ನೀವು ತೊರೆಯಬೇಕು. ಪ್ರಮುಖ ರಾಷ್ಟ್ರೀಯ ವಿಚಾರಗಳಲ್ಲಿ, ಹಲವು ಜನರ ಇಚ್ಛೆ ಮತ್ತು ಪೂರ್ವ ದೂಷಿತ ಅಭಿಪ್ರಾಯಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಗದು. ನನ್ನ ತುಲನಾತ್ಮಕ ಪರಿಜ್ಞಾನ ಮತ್ತು ವಿಚಾರಶೀಲತೆ, ವಿಶ್ವಸನೀಯ ಟೀಕೆಗಳನ್ನು ತಡೆದುಕೊಳ್ಳಲಾರದಷ್ಟು ದುರ್ಬಲವಾಗಿದ್ದಲ್ಲಿ, ಸದಾಕಾಲಕ್ಕೆ ನಾನು ಕಾಯಿಲೆ ಮನುಷ್ಯನಾಗಿರುವುದೇ ಮೇಲೆಂದು ನನಗನಿಸುತ್ತದೆ; ಆಗ ನನ್ನಿಂದ ಮಾತೃಭೂಮಿಗೆ ಏನೂ ತೊಂದರೆಯಾಗಲಾರದು.

ಇಷ್ಟರಲ್ಲೇ ನಾನು ಪ್ರಾರಂಭೋತ್ಸವ ನಡೆಸಲಿರುವ ಪ್ರದರ್ಶನ ಜನರ ಹೃದಯವನ್ನು ಕರಗಿಸುವ ಯೋಗ್ಯ ಸಾಧನ. ಖಾದಿ ಎಂದರೇನು? ಖಾದಿಯಿಂದ ಇದುವರೆಗೂ ಕೈಗೂಡಿರುವುದೇನು? ಈ ಪ್ರಶ್ನೆಗಳಿಗೆ ಸೂಕ್ತ ಉತ್ತರ ನೀಡುವ ಸಲುವಾಗಿ ಈ ಪ್ರದರ್ಶನವನ್ನು ಜಾಗರೂಕತೆಯಿಂದ ಅಣಿಗೊಳಿಸಲಾಗಿದೆ. ಯಾವ ಪೂರ್ವ ದೂಷಿತ ಭಾವನೆಯೂ ಇಲ್ಲದೆ ಈ ಪ್ರದರ್ಶನವನ್ನು ವಿಶ್ವಾಸದಿಂದ ವೀಕ್ಷಿಸಿ, ಖಾದಿಯ ಮಹತ್ವ ನೀವು ಅರಿತುಕೊಂಡ ನಂತರವೂ, ನಿಮ್ಮ ಅರಿವಿಗೆ ಅನುಗುಣವಾಗಿ ನಡೆದುಕೊಳ್ಳಲು ನಿಮಗೆ ಸಾಕಷ್ಟು ಎದೆಗಾರಿಕೆಯಿಲ್ಲದೆ ಹೋದರೆ, ನನ್ನಲ್ಲಿ ನಿಮಗಿರುವ ಪ್ರೀತಿ ನಿಮ್ಮ ದುರ್ಬಲತೆಯನ್ನು ಹೋಗಲಾಡಿಸಲು ಸಾಕಷ್ಟು ಧೈರ್ಯ ಸ್ಥೈರ್ಯ ಕೊಡಲಿ. ದುಡಿದು ಸಂಪಾದಿಸಲು ಯೋಗ್ಯ ಉದ್ಯೋಗವಿಲ್ಲದೆ, ಹಸಿವಿನಿಂದ ತಲ್ಲಣಿಸುತ್ತಿರುವ ಲಕ್ಷಾಂತರ ಮೂಕ ಜನತೆಯ ಪ್ರತಿನಿಧಿಯಾಗಿ ನಾನು ನಿಮ್ಮ ಮುಂದೆ ನಿಂತಿರುವುದರಿಂದಲೇ ಈ ಮಾತುಗಳನ್ನು ಆಡುತ್ತಿದ್ದೇನೆ. ದೇಶಬಂಧು ಚಿತ್ತರಂಜನದಾಸರು ಇವರನ್ನು ದರಿದ್ರ ನಾರಾಯಣರು ಎಂದು ಕರೆದಿರುವುದು ಸೂಕ್ತವಾಗಿದೆ. ನೀವು ಕೊಡುವ ಪ್ರತಿಯೊಂದು ಕಾಸೂ ಮತ್ತು ಕೊಳ್ಳುವ ಪ್ರತಿಯೊಂದು ಗಜ ಬಟ್ಟೆಯೂ ಈ ದರಿದ್ರರಿಗೆ ತಾವು ತೋರಿಸುವ ನಿರ್ದಿಷ್ಟ ಸಹಾನುಭೂತಿಯ ಪ್ರದರ್ಶನವೇ ಸರಿ.

ಈ ದರಿದ್ರ ನಾರಾಯಣರ ಸೇವೆಯಲ್ಲಿ ತಮ್ಮ ಸರ್ವಶಕ್ತಿಯನ್ನು ವಿನಿಯೋಗಿಸುತ್ತಿರುವ ಹಲವು ಸಜ್ಜನರ ಅಭಿಪ್ರಾಯ ನಿಮ್ಮ ಮುಂದಿಡುವೆ. ಈ ಅಭಿಪ್ರಾಯಗಳ ನಿಜತ್ವ ನಿಮ್ಮ ಸುತ್ತಮುತ್ತಲಿರುವ ದೃಶ್ಯವನ್ನು ಜಾಗರೂಕತೆಯಿಂದ ಪರಿಶೀಲಿಸಿ, ಖಾದಿಯ ಪ್ರಚಾರದ ಪರಿಣಾಮವನ್ನು ಅರಿಯಬಹುದು. ಕೈನೂಲಿನ ವಿಷಯವಾಗಿ ಲೇಖನಗಳನ್ನು ಬರೆದು ಶ್ರೀ ಎಸ್.ಬಿ.ಪುಣತಾಂಬೇಕರ ಮತ್ತು ಶ್ರೀಯುತ ಎನ್.ಎಸ್. ವರದಾಚಾರಿಯವರು ಪಾರಿತೋಷಕಗಳನ್ನು ಪಡೆದಿರುತ್ತಾರೆ. ಈ ಲೇಖನಗಳಲ್ಲಿ ಕೈರಾಟೆಯಿಂದ ನೂಲುವ ಗ್ರಾಮಗಳ ಏಕೈಕ ಕಸುಬು ಯಾವ ರೀತಿಯಲ್ಲಿ ನಾಶವಾಯಿತೆಂಬುದನ್ನು ಹೃದಯಂಗಮವಾಗಿ ವಿವರಿಸಿರುತ್ತಾರೆ. ವರುಷದಲ್ಲಿ ಕನಿಷ್ಠಪಕ್ಷ ನಾಲ್ಕು ತಿಂಗಳುಗಳ ಕಾಲ ಉದ್ಯೋಗವಿಲ್ಲದೆ ಗ್ರಾಮೀಣರಿಗೆ ರಾಟೆಯಿಂದ ನೂಲು ತೆಗೆಯುವುದು ಲಾಭದಾಯಕವಾದ ಕಸುಬು ಎಂಬುದನ್ನು ವಿವರಿಸಿರುತ್ತಾರೆ.

ನಮ್ಮ ಗ್ರಾಮಗಳ ಪುನರುದ್ಧಾರಕ್ಕಾಗಿ ದೊಡ್ಡ ಪ್ರಮಾಣದ ಭವ್ಯ ಯೋಜನೆಗಳನ್ನು ಅನೇಕ ಸಹೃದಯರು ಸೂಚಿಸಿರುತ್ತಾರೆ. ಇವುಗಳಲ್ಲಿ ಒಂದು ಯೋಜನೆಯೂ ಜೀವಂತವಾಗಿಲ್ಲ: ಇವುಗಳಲ್ಲಿ ಯಾವುದೇ ಒಂದು ಯೋಜನೆಯನ್ನು ಸದ್ಯದ ಪರಿಸ್ಥಿತಿಯಲ್ಲಿ ಜಾರಿಗೆ ತರಲು ಸಾಧ್ಯವಾಗದೆಂದು ಧೈರ್ಯವಾಗಿ ವಿಶ್ವಾಸದಿಂದ ನಾನು ನುಡಿಯಬಲ್ಲೆ. ಸದ್ದಿಲ್ಲದೆ ನಿಧಾನವಾಗಿ, ಆದರೂ ಯಶಸ್ವಿಯಾಗಿ ದೇಶದ ಎಲ್ಲ ಭಾಗಗಳಿಗೂ ಪಸರಿಸುತ್ತಿರುವುದು ಚರಖ ಒಂದೇ. ಚರಖದ ಪುನರುಜ್ಜೀವನ ೧೯೨೦ರಲ್ಲಿ ಪ್ರಾರಂಭವಾಯಿತು. ನಗರಗಳಲ್ಲಿ ಮತ್ತು ದೊಡ್ಡ ಪಟ್ಟಣಗಳಲ್ಲಿ ಎಲ್ಲೆಲ್ಲಿಯೂ ಖಾದಿ ಟೋಪಿ ನಮ್ಮ ದೃಷ್ಟಿಗೆ ಬೀಳುತ್ತದೆ. ಆದರೆ ಯಾವ ಊರಿನಲ್ಲಿಯೂ ಖಾದಿ ದಾಸ್ತಾನು ಒಂದು ಲಕ್ಷ

ರೂಪಾಯಿಗೂ ಮೀರಿರುವುದಿಲ್ಲ. ಅಖಿಲ ಭಾರತ ಚರಖಾ ಸಂಘದವರು ತಯಾರಿಸಿರುವ ಗತವರುಷದ ವರದಿ ನೋಡಿದರೆ, ೧೯೨೬ರಲ್ಲಿಯೇ ೨೮ ಲಕ್ಷ ರೂಪಾಯಿ ಬೆಲೆ ಬಾಳುವ ಖಾದಿ ಉತ್ಪನ್ನವಾಗಿ ೨೩ ಲಕ್ಷ ರೂಪಾಯಿಗಳ ಖಾದಿ ಖರೀದಿಯಾಗಿರುತ್ತದೆ. ಸಂಘದವರು ವಿನಯೋಗಿಸಿರುವ ಮೂಲ ಧನ ೧೮ ಲಕ್ಷ ರೂ.ಗಳನ್ನು ಮೀರಿರುತ್ತದೆ. ಆ ವರುಷದಲ್ಲಿ ಸುಮಾರು ೫೦,೦೦೦ ಜನರು ಖಾದಿಗಾಗಿ ನೂಲು ನೂತಿದ್ದಾರೆ. ಖಾದಿ ಉತ್ಪನ್ನ ಕೈಗೊಳ್ಳುವ ಮುನ್ನ ಈ ಜನರಿಗೆ ಸಂಪಾದನೆಯ ಯಾವ ಉದ್ಯೋಗವೂ ಇರಲಿಲ್ಲ. ಈ ನಿರುಪಯೋಗ ವೇಳೆ ಅವರು ಖಾದಿ ತಯಾರಿಕೆಗೆ ಕೊಟ್ಟರು. ಈ ಕಸುಬಿಗೆ ಪ್ರತಿಯೊಬ್ಬನೂ ವಿನಿಯೋಗಿಸಿದ ಕಾಲ ಮತ್ತು ಶ್ರಮಕ್ಕನುಗುಣವಾಗಿ ಅವರು ದಿನವೊಂದಕ್ಕೆ ಮೂರು ಕಾಸಿನಿಂದ ಎರಡು ಆಣೆಯವರೆಗೂ ಗಳಿಸಿರುತ್ತಾರೆ.

ನಮಗೆ ಈ ವರಮಾನ ಅಲ್ಪ ಮತ್ತು ನಿರುಪಯೋಗಿ ಎನಿಸುತ್ತದೆ. ಆದರೆ ೫೦,೦೦೦ ಜನ ಈ ಉಪ ಕಸಬನ್ನು ಉತ್ಸಾಹದಿಂದ ಕೈಗೊಂಡಿರುತ್ತಾರೆಂಬುದನ್ನು ನಾವು ಮನಸ್ಸಿಗೆ ತಂದುಕೊಂಡರೆ, ಈ ವರಮಾನ ಅಲ್ಪವೂ ಅಲ್ಲ, ಅಗಣನೀಯವೂ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅನೇಕ ಕಡೆ ರಾಟೆಗೆ ಹತ್ತಿಯನ್ನು ಕೊಳ್ಳಲು ನಾಲ್ಕು ಮೈಲುಗಳ ದೂರ ನಡೆಯುತ್ತಾರೆ. ಕೈನೂಲಿನ ಸುತ್ತ ಅನೇಕ ಸಣ್ಣ ಉದ್ಯಮಗಳು ಬೆಳೆಯುತ್ತವೆ. ನೇಕಾರ, ಅಗಸ, ರಂಗಾರ. ಕಲೆಗಾರ ಇವರೆಲ್ಲ ಮತ್ತೆ ತಲೆ ಎತ್ತುತ್ತಿದ್ದಾರೆ. ಪಿಂಜಾರಿಗಳು ನಾಶವಾಗಿದ್ದರೆ ಅಥವಾ ನಾಶವಾಗುವುದರಲ್ಲಿದ್ದರೆ ಈ ಎಲ್ಲ ಜನರು ರಾಟೆಗೂ ಒಳ್ಳೆಯ ಪ್ರೋತ್ಸಾಹ ನೀಡಿ, ಹಳೆಯ ಕಸಬುಗಳಿಗೆ ಜೀವಕಳೆ ತುಂಬುತ್ತಿದೆ. ಹತ್ತು ಜನ ನೂಲುವವರು, ಒಬ್ಬನೇ ನೇಕಾರ ಮತ್ತು ಒಬ್ಬ ಪಿಂಜಾರಿಗೆ ಉದ್ಯೋಗ ಕಲ್ಪಿಸಿಕೊಡುತ್ತಾರೆ. ಇವರು ದಿನ ಒಂದಕ್ಕೆ ನಾಲ್ಕಾಣೆಯಿಂದ ಒಂದು ರೂಪಾಯಿಯವರೆಗೂ ಗಳಿಸುತ್ತಾರೆ. ಸುಮಾರು ೧೫೦೦ ಗ್ರಾಮಗಳಲ್ಲಿ ವಿದ್ಯಾವಂತ ತರುಣರು ನೂಲುವುದು ಮತ್ತು ಇತರ ಉಪ ಕಸಬುಗಳ ಪುನರುಜ್ಜೀವನಕ್ಕಾಗಿ ಶ್ರಮಿಸುತ್ತಿದ್ದಾರೆ. ಅವರ ಮಾಸಿಕ ವೇತನ ಹತ್ತರಿಂದ ಐವತ್ತು ರೂಪಾಯಿಗಳವರೆಗೂ ಇದೆ. ಈ ರೀತಿಯಲ್ಲಿ ಒಂದು ಸಾವಿರಕ್ಕೂ ಹೆಚ್ಚು ಯುವ-ಯುವತಿಯರು, ಸ್ತ್ರೀ-ಪುರುಷರು, ನ್ಯಾಯವಾದ ಶ್ರಮದಿಂದ ಫಲ ಪಡೆದು ಬದುಕುತ್ತಿದ್ದಾರೆ; ಅಲ್ಲದೆ ಅದೇ ಕಾಲದಲ್ಲಿ ತಮ್ಮ ನಾಡಿನ ಅದೃಷ್ಟಹೀನ ಜನರ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಸ್ಪೃಶ್ಯ, ಮುಸ್ಲಿಂ, ಕಿರಸ್ತಾನ, ಪಾರ್ಸಿ, ಸಿಖ್ ಹೀಗೆ ಎಲ್ಲ ವರ್ಗದವರೂ, ಎಲ್ಲ ಜಾತಿಯವರೂ ನೂಲತೊಡಗಿದ್ದಾರೆ. ಯಾವ ಪ್ರತಿಫಲವನ್ನೂ ಪಡೆಯದೆ ತ್ಯಾಗಬುದ್ಧಿಯಿಂದ ಕೆಲಸ ಮಾಡುವ ಜನರೂ ಇದ್ದಾರೆ. ಬಂಗಾಳ ತನ್ನ ಸುಪುತ್ರರಲ್ಲಿ ಶ್ರೇಷ್ಠರಾದ ಪ್ರಫುಲ್‌ಚಂದ್ರ ಘೋಷ ಮತ್ತು ಸತೀಶ್ ಚಂದ್ರದಾಸ್ ಗುಪ್ತ ಈರ್ವರನ್ನು ಖಾದಿ ಸೇವೆಗಾಗಿ ಅರ್ಪಿಸಿರುತ್ತದೆ. ಪ್ರಫುಲ್ಲ ಚಂದ್ರರಾಯ ಅವರಿಗಾಗಿ ಸತೀಶ್‌ಚಂದ್ರದಾಸ್‌ಗುಪ್ತ ಅವರು ರಾಸಾಯನಿಕ ಪ್ರಯೋಗ ಶಾಲೆ ಕಟ್ಟಿಸಿ ಕೊಟ್ಟರು. ಪ್ರಫುಲ್‌ಚಂದ್ರಘೋಷ್ ಅವರು ಸರ್ಕಾರದ ಟಂಕಶಾಲೆಯಲ್ಲಿ ಲೋಹ ಪರೀಕ್ಷಕರಾಗಿ

ಕೆಲಸ ಮಾಡುತ್ತಿದ್ದರು. ಇಬ್ಬರೂ ಅಧಿಕ ವೇತನದ ಸರ್ಕಾರಿ ನೌಕರಿಯನ್ನು ಖಾದಿಗಾಗಿ ಬಿಟ್ಟರು. ಪ್ರವರ್ಧಮಾನರಾಗಿದ್ದ ಅನೇಕ ಗಣ್ಯವಕೀಲರೂ ವೈದ್ಯರೂ ಖಾದಿ ಪ್ರಚಾರಕ್ಕಾಗಿ ತಮ್ಮ ವೃತ್ತಿಗಳನ್ನು ತೊರೆದಿರುವುದು ತಮಗೆಲ್ಲರಿಗೂ ತಿಳಿದೇಯಿದೆ. ವ್ಯಾಪಾರದ ಕ್ಷೇತ್ರಗಳಲ್ಲಿ ಕೆಲಸ ಮಾಡಲು ಉನ್ನತ ಮಟ್ಟದ ವಣಿಕ್ ಬುದ್ಧಿವಂತಿಕೆ ಅಗತ್ಯವಿರುವಂತೆ ಖಾದೀ ಕ್ಷೇತ್ರದಲ್ಲಿ ದುಡಿಯಲೂ ಅಷ್ಟೇ ಬುದ್ಧಿವಂತಿಕೆ ಅಗತ್ಯವೆಂದು ಅನೇಕ ವರ್ತಕರು ಗ್ರಹಿಸಿರುತ್ತಾರೆ. ಆಧುನಿಕ ಕಾಲದಲ್ಲಿ ಸಹಕಾರವು ಎಲ್ಲ ವಾಣಿಜ್ಯ ಕ್ಷೇತ್ರಗಳಿಗೂ ವ್ಯಾಪಿಸಿರುತ್ತದೆ. ಈ ನೂತನ ವಾಣಿಜ್ಯ ಪ್ರಪಂಚದಲ್ಲಿ ಖಾದಿ ಪ್ರಚಾರಕ್ಕೂ ಒಂದು ಪ್ರಮುಖಸ್ಥಾನವಿದೆ. ಕಳೆದ ಆರು ವರ್ಷಗಳಲ್ಲಿ ಗಳಿಸಿರುವ ಪ್ರಗತಿ ಮಂದಗತಿಯಲ್ಲಿ ಸಾಗುತ್ತಿರುವಂತೆ ಕಾಣಬಹುದು. ಆದರೆ ಈ ಪ್ರಗತಿ ಮುಂದಿನ ಬೆಳವಣಿಗೆಯ ಕುರುಹು ಎಂದು ನೀವು ಭಾವಿಸುವುದಾದರೆ, ಭಗವಂತ ಇಚ್ಛಿಸಿದಲ್ಲಿ, ನಶಿಸಿ ನಾಶವಾಗುತ್ತಿರುವ ನಮ್ಮ ಗ್ರಾಮಗಳು, ಅನತಿದೂರ ಕಾಲದಲ್ಲಿ ಕೈಗಾರಿಕೆಯ ಹಾಗೂ ಸುಖ ಶಾಂತಿಯ ಬೀಡಾಗಿ ಪರಿಣಮಿಸಬಹುದು.

ಅರಳೆ ಅನೇಕ ರೂಪಾಂತರಗಳನ್ನು ಹೊಂದಿ ಕಡೆಯಲ್ಲಿ ಬಟ್ಟೆಯಾಗಿ ನಿಮ್ಮ ಕೈಸೇರುವ ಹಂತಗಳನ್ನು ಈ ಪ್ರದರ್ಶನದಲ್ಲಿ ನೋಡುವಿರಿ. ರೂಪಾಂತರದ ಈ ವಿಧಾನಗಳನ್ನು ಎಲ್ಲ ಹಂತಗಳಲ್ಲಿಯೂ ಸ್ಪಷ್ಟವಾಗಿ ವಿವರವಾಗಿ ಇಲ್ಲಿ ನೀವು ನೋಡುವಿರಿ. ಪ್ರತಿಯೊಂದು ಹಂತದಲ್ಲಿ ಬಳಸುವ ಆಯುಧಗಳನ್ನು, ಉಪಕರಣಗಳನ್ನು ನೋಡುವಿರಿ. ಚಿತ್ರಗಳು ಮತ್ತು ಕೆಲವು ಉಪಕರಣಗಳ ವಿನಾ ನೀವು ನೋಡುವ ಮಿಕ್ಕ ಎಲ್ಲವನ್ನೂ ನಮ್ಮ ಹಳ್ಳಿಯಲ್ಲಿಯೇ ತಯಾರಿಸಬಹುದು.

ಕಸೂತಿ ಕೆಲಸ ಮಾಡಿರುವ ನವುರಾದ ಸುಂದರ ಖಾದಿ ಬಟ್ಟೆಯನ್ನು ಈ ಪ್ರದರ್ಶನದಲ್ಲಿಡಲಾಗಿದೆ. ನನ್ನ ಎದುರು ಈ ಸಭೆಯಲ್ಲಿ ಕುಳಿತಿರುವ ಶ್ರೀಮಂತರ ಗಮನವನ್ನು ಅತ್ತ ಸೆಳೆಯ ಬಯಸುತ್ತೇನೆ.

ಈ ಸುಂದರ ವಸ್ತು ತಯಾರಿಕೆಯಲ್ಲಿ ಬೊಂಬಾಯಿ ೪೦೦ ಸ್ತ್ರೀಯರು ದಿನ ವಹಿ ೬ ಆಣೆಗಳಿಂದ ಒಂದು ರೂಪಾಯಿಯವರೆಗೆ ಗಳಿಸುತ್ತಾರೆ. ಈ ಎಲ್ಲ ಕೆಲಸ ಬೊಂಬಾಯಿ ಸ್ತ್ರೀಯರು ರಾಷ್ಟ್ರೀಯ ಸಂಸ್ಥೆಯ ಅಧೀನದಲ್ಲಿರುತ್ತದೆ. ಭಾರತದ ವೃದ್ಧ ಪಿತಾಮಹ. ದಾದಾಭಾಯಿ ನವರೋಜಿ ಅವರ ಮೊಮ್ಮಗಳು ಮತ್ತು ಖ್ಯಾತಿವೆತ್ತ ಪೆಟಿಟ್ ಕುಟುಂಬಕ್ಕೆ ಸೇರಿದ ಒಬ್ಬ ಸ್ತ್ರೀ ಸಹ ಇಲ್ಲಿಗೆ ಬಂದಿರುವ ಕೆಲಸಗಾರರಲ್ಲಿ ಒಬ್ಬರಾಗಿರುತ್ತಾರೆ.

ಮಧುಸೂಧನದಾಸ ಕಟಕ್ಕಿನ ಒಬ್ಬ ಶ್ರೀಮಂತ ವಕೀಲ. ಉತ್ಕಲಕ್ಕೆ ಸೇರಿದ ತನ್ನ ದೀನದಲಿತ ಬಂಧುಗಳ ಪರಿಸ್ಥಿತಿ ಅವರನ್ನು ಸುಖ ಸುಪ್ತಾವಸ್ಥೆಯಿಂದ ಕಣ್ತೆರೆಸಿ ಎಚ್ಚರಿಸಿತು. ಒಂದು ಜೊತೆ ಎತ್ತು ಮತ್ತು ನೇಗಿಲು ಹಿಡಿದು ಭೂಮಿ ಉಳುವುದು ಸಾಕಷ್ಟು ಒಳ್ಳೆಯ ಕೆಲಸವಾದರೂ ಅದರೊಂದಿಗೆ ಯಾವುದಾದರೂ ಒಂದು ಕೈಕೆಲಸ ಕೂಡಿಕೊಂಡಿರದಿದ್ದರೆ.

ಅದರಲ್ಲಿ ಸಾಕಷ್ಟು ಸಂತಸ, ಸಂತೃಪ್ತಿ, ಕಾರ್ಯ ಪರಿಪೂರ್ಣತೆ ಅನುಭವಿಸಲು ಸಾಧ್ಯವಾಗದೆಂದು ಅವರು ಅರಿತರು.

ಆದರೆ, ಕಣ್ಣುಗಳನ್ನು ನಿಜವಾಗಿಯೂ ತಣಿಸುವ ಪ್ರದರ್ಶನ ತಾವು ನೋಡುವುದರಲ್ಲಿ ನಾನು ಅಡ್ಡಬರಲಾಗದು. ನಮ್ಮ ಗ್ರಾಮಗಳ ಪುನರುದ್ಧಾರದ ಕೇಂದ್ರ ಬಿಂದುವಾದ ಖಾದಿ ಪ್ರದರ್ಶನ ನೋಡಿ ಅದರ ಮೌಲ್ಯ ಅರಿತುಕೊಳ್ಳುವಿರೆಂದು ನಾನು ಆಶಿಸುತ್ತೇನೆ. ಗ್ರಾಮ ಸೇವೆ ಸಲ್ಲಿಸಬೇಕೆಂಬ ಆಕಾಂಕ್ಷೆ ಮತ್ತು ವಿರಾಮ ಯಾರಿಗುಂಟೋ ಅವರೆಲ್ಲರೂ ಗ್ರಾಮಗಳಿಗೆ ಹೋಗಿ ಖಾದಿ ಪ್ರಚಾರ ನಡೆಸುವ ಉತ್ತೇಜನ, ಪ್ರತಿಭೆ ಈ ಪ್ರದರ್ಶನ ನಿಮಗೀಯಲಿ; ನೀವು ಖಾದಿ ಮತ್ತು ಖಾದಿ ಮಾತ್ರವೇ ಧರಿಸುವಂತೆ ಪ್ರೇರಕವಾಗಲಿ. ನೀವು ಮತ್ತು ಗ್ರಾಮಸ್ಥರು ನಿಮ್ಮೀರ್ವರ ನಡುವೆ ಜೀವಂತ ಬಾಂಧವ್ಯ ಅದು ಏರ್ಪಡಿಸಲಿ. ಈ ಪವಿತ್ರ ಕಾರ್ಯದಲ್ಲಿ, ಪವಿತ್ರವೆಂದು ಧೈರ್ಯದಿಂದ ಹೇಳಬಯಸುತ್ತೇನೆ; ಧಾನ್ಯ ಯಥೇಚ್ಛವಿದೆ. ಆದರೆ ಕೊಯ್ಲು ಮಾಡುವವರೇ ಕಡಿಮೆ ಎಂಬ ಮಾತಿದೆ ಮನಸ್ಸು ಮಾಡಿದರೆ ಕುಯ್ಲು ಮಾಡುವವರ ಸಂಖ್ಯೆ ನೀವು ಅಪಾರವಾಗಿ ಹೆಚ್ಚಿಸಬಹುದು.

ಈ ಪ್ರದರ್ಶನ ಪ್ರಾರಂಭವಾಗಿದೆ ಎಂದು ಹೇಳಲು ನನಗೆ ತುಂಬ ಸಂತೋಷ. ಪರಮಾತ್ಮನ ದೃಷ್ಟಿಯಲ್ಲಿ ಈ ಕೆಲಸ ಸರಿ ಮತ್ತು ಯೋಗ್ಯ ಎಂದು ಕಂಡುಬಂದರೆ ಮತ್ತು ಇಲ್ಲಿನ ಕೆಲಸಗಾರರು ಪ್ರಾಮಾಣಿಕರು ಮತ್ತು ಶ್ರದ್ಧಾಭಕ್ತಿಯುಳ್ಳವರು ಎಂದು ಆತನಿಗೆ ತೋರಿದರೆ, ಈ ಪ್ರಯತ್ನವನ್ನು ಭಗವಂತ ಆಶೀರ್ವದಿಸಲಿ. ಇದೇ ನನ್ನ ಪ್ರಾರ್ಥನೆ ಭಗವಂತನಲ್ಲಿ.

**ಮತ್ತೊಂದು ಖಾದಿ ಭಂಡಾರ:**

ಗೌ. ಕಾರ್ಯದರ್ಶಿ. ಖಾದಿ ಕೋ-ಆಪರೇಟಿವ್ ಸೊಸೈಟಿ. ಲಿಮಿಟೆಡ್ ಶಿವಮೊಗ್ಗ, ಇವರು ತಮ್ಮ ಖಾದಿ ಭಂಡಾರವನ್ನು ಕರ್ನಾಟಕ ಖಾದಿ ಭಂಡಾರಗಳ ಪಟ್ಟಿಯಲ್ಲಿ ಸೇರಿಸಬೇಕೆಂದು ಬರೆಯುತ್ತಾರೆ. ಈ ಭಂಡಾರ ನೂತನವಾಗಿ ಸ್ಥಾಪಿತವಾಯಿತು. ಈ ಭಂಡಾರದ ಹೆಸರನ್ನು ಸಂತೋಷದಿಂದ ಸೇರಿಸುತ್ತೇನೆ. ಆದರೆ ಹೊಸದಾಗಿ ಖಾದಿ ಭಂಡಾರಗಳನ್ನು ಸ್ಥಾಪಿಸಲು ಹೊರಟಿರುವವರಿಗೆ, ಈ ಭಂಡಾರಗಳನ್ನು ವ್ಯಾಪಾರದ ದೃಷ್ಟಿಯಲ್ಲಿ ನಡೆಸಿಕೊಂಡು ಬರಬೇಕೆಂದೂ, ಖಾದಿ ವ್ಯಾಪಾರದಲ್ಲಿ ಸ್ವಲ್ಪ ಅನುಭವನ್ನಾದರೂ ಪಡೆದವರು ಮಾತ್ರ ಇದಕ್ಕೆ ಕೈಹಾಕಬೇಕೆಂದೂ, ಎಚ್ಚರಿಕೆ ಕೊಡಬಯಸುತ್ತೇನೆ. ಪ್ರತಿಯೊಬ್ಬರೂ ಖಾದಿ ಭಂಡಾರವನ್ನು ಯಶಸ್ವಿಯಾಗಿ ನಡೆಸಿಕೊಂಡು ಬರಲು ಸಾಧ್ಯವಿಲ್ಲ; ಬಟ್ಟೆ ಅಂಗಡಿಯಲ್ಲಿ ಅನುಭವ ಪಡೆದ ಎಲ್ಲರಿಂದಲೂ ಸಹ ಇದು ಸಾಧ್ಯವಾಗದು. ಖಾದಿ ಭಂಡಾರದ ವ್ಯವಸ್ಥಾಪಕ, ಖಾದಿಯಲ್ಲಿರುವ ವಿವಿಧ ಪ್ರಕಾರಗಳನ್ನು ತಿಳಿದಿರಬೇಕು. ನಿಜ ಖಾದಿ ಮತ್ತು ನಕಲಿ ಖಾದಿ ಇವುಗಳ ಭಿನ್ನತೆ ಹೇಗೆ ಗೊತ್ತುಮಾಡುವುದು ಎಂಬುದನ್ನೂ ತಿಳಿದಿರಬೇಕು ಆಕರ್ಷಕ ರೀತಿಯಲ್ಲಿ ಗಿರಾಕಿಗಳಿಗೆ ಖಾದಿ ತೋರಿಸಿ, ಮೆಚ್ಚಿಸುವುದೂ ಅರಿತಿರಬೇಕು. ಎಲ್ಲಕ್ಕೂ ಮಿಗಿಲಾಗಿ ಅವನು ಪೂರ್ಣ ಸತ್ಯಶೀಲನಾಗಿರ

ಬೇಕು. ಶಿವಮೊಗ್ಗದ ಖಾದಿ ಭಂಡಾರದಂತಿರುವ ಇತರ ಖಾದಿ ಭಂಡಾರಗಳಿಗೂ ತಮ್ಮ ಪೂರ್ಣ ಹೆಸರು ವಿಳಾಸ ಸಂಪೂರ್ಣ ಮಾಹಿತಿಗಳೊಂದಿಗೆ, ಕಾರ್ಯದರ್ಶಿ ಅಖಿಲ ಭಾರತ ನೂಲುವವರ ಸಂಘ, ಅಹಮದಾಬಾದ್ ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

ಎಂ.ಕೆ.ಗಾಂಧಿ

*(ಯಂಗ್ ಇಂಡಿಯಾ : ೧೧-೮-೧೯೨೭)*

**ಇದು ವಿವಾಹವೇ?**

ಈಚೆಗೆ ನಾನು ಕಾಯಿಲೆಯಾಗಿದ್ದ ಪ್ರಥಮದಲ್ಲಿ, ಕಾಗದಪತ್ರವನ್ನು ನೋಡಲು ಸಾಧ್ಯವೇ ಇಲ್ಲದಂತೆ ಆಗಿದ್ದಾಗ, ನನಗೆ ಮುಟ್ಟಿದ ಪತ್ರವನ್ನು ಈ ಕೆಳಗೆ ಕೊಟ್ಟಿರುತ್ತೇನೆ. ಇದರ ಬಾತ್ಮೀದಾರ ತನ್ನ ಪತ್ರದಲ್ಲಿ ಎಲ್ಲರ ಹೆಸರುಗಳನ್ನು ತಿಳಿಸಿದ್ದರೂ, ಅವನ್ನು ನಾನು ಇಲ್ಲಿ ಬಿಟ್ಟಿರುತ್ತೇನೆ.

"ಈ ವರುಷದ ಮದುವೆ ಕಾಲದಲ್ಲಿ, ಕಾರವಾರದ ಸದಾಶಿವಘಡದಲ್ಲಿ ಎದೆ ಬಿರಿಯುವಂಥ ವಿವಾಹವು ಒಂದು ನಡೆದಿರುತ್ತದೆ. ವಧುವಿನ ವಯಸ್ಸು ಸುಮಾರು ೧೨, ಗೋವಾದ ಬಡ ಕುಟುಂಬಕ್ಕೆ ಸೇರಿದವಳು. ವರನ ವಯಸ್ಸು ೬೦. ವರನ ಮೊದಲನೆ ಹೆಂಡತಿ ಸುಮಾರು ಮೂರು ವರ್ಷಗಳ ಹಿಂದೆ ಮೃತಳಾದಳು. ಎಂಟು -ಒಂಬತ್ತು ಮಕ್ಕಳಲ್ಲಿ ಆಕೆಯ ಇಬ್ಬರು ಮಕ್ಕಳು ಜೀವಂತರಾಗಿದ್ದಾರೆ. ವರ ಒಂದು ಆಂಗ್ಲ ಶಾಲೆಯ ಸ್ಥಾಪಕ. ಕಳೆದ ವರ್ಷ ಕಿರಿಯ ವಯಸ್ಸಿನ ಕನ್ಯೆಯನ್ನು ಪಡೆಯಲು ಪ್ರಯತ್ನಿಸಿ ಸ್ವಜಾತಿಯ ಬಾಂಧವರಲ್ಲಿ ಗುಲ್ಲು ಎದ್ದು ಪ್ರಯತ್ನ ಫಲಿಸಲಿಲ್ಲ. ಈ ವರುಷ ವಧುವಿನ ಮಾತಾಪಿತೃಗಳಿಗೆ ಇನ್ನೂರು ರೂಪಾಯಿಗಳನ್ನು ಕೊಟ್ಟು ಸಫಲತೆ ಪಡೆದಿರುತ್ತಾನೆ. ಈ ಬಗ್ಗೆ ಮಾಡತಕ್ಕದ್ದೇನು? ಸ್ಥಳೀಯ ಸಮಾಜ ಸುಧಾರಕರಾದ ಶ್ರೀ...ಅವರು ಈ ಅಮಾನುಷ ಕೃತ್ಯದ ವಿರುದ್ಧ ಒಂದು ಕಿರುಬೆರಳನ್ನೂ ಎತ್ತುವುದಿಲ್ಲ."

ಈ ಪತ್ರದಲ್ಲಿ ಕಾಣಿಸಿರುವ ವಿಷಯದ ವಾಸ್ತವಿಕತೆಯನ್ನು ಅನುಮಾನಿಸ ಬೇಕಾಗಿಲ್ಲವೆಂದು ನನಗೆ ತೋರುತ್ತದೆ. ಈ ಪತ್ರದ ಸಾರಾಂಶ ಮೇಲ್ಕಾಣಿಸಿದಂತೆ ಕೊಟ್ಟಿರುತ್ತೇನೆ. ಇದು ಬಹಳ ಅಪರೂಪ ಘಟನೆಯೆಂದು ಹೇಳಿಕೊಳ್ಳಲು ಸಾಧ್ಯವಿರಬಾರದೆ. ಆದರೆ ಇಂಥ ಘಟನೆಗಳು ಆಗಿಂದಾಗ ಸಂಭವಿಸುತ್ತಿರುವುದರಿಂದ, ಇದಕ್ಕೆ ಬಲವಾದ ಮದ್ದು ಅಗತ್ಯವಾಗಿದೆ. ಇಂಥ ಪ್ರತಿಯೊಂದು ಘಟನೆಯನ್ನೂ ಬಹಿರಂಗವಾಗಿ ಪ್ರಸಿದ್ಧಪಡಿಸಿ, ಸ್ತ್ರೀ ಜಾತಿಯ ವಿರುದ್ಧ ಈ ಬಗೆಯ ದುಷ್ಕೃತ್ಯಗಳು ನಡೆಯದಂತೆ ಪ್ರಬಲ ಮತ್ತು ಯೋಗ್ಯ ಸಾರ್ವಜನಿಕಾಭಿಪ್ರಾಯ ಮೂಡುವಂತೆ ಮಾಡುವುದು ಒಂದು ಯುಕ್ತ ಮಾರ್ಗವೇ ಸರಿ. ಇಂಥ ಘಟನೆಗಳು ಸಂಭವಿಸಬಹುದಾದ ಸೂಚನೆಗಳು ಕಂಡುಬಂದಾಗ ಸ್ಥಳೀಯ ಚಳವಳಿ ಕೈಗೊಳ್ಳುವುದು ತುಂಬ ಪರಿಣಾಮಕಾರಿಯಾದುದು ಎನ್ನುವುದರಲ್ಲಿ

ಸಂದೇಹವೇ ಇಲ್ಲ. ಎಂಟು ಮಕ್ಕಳನ್ನು ಹುಟ್ಟಿಸಿರುವ ಈ ತಂದೆ ಪುನರ್ವಿವಾಹ ಮಾಡಿಕೊಳ್ಳಲು ನಡೆಸಿದ ಪ್ರಥಮ ಪ್ರಯತ್ನ ವಿಫಲವಾಗಲು ಮುಖ್ಯ ಕಾರಣ ಸಕಾಲದಲ್ಲಿ ಕೈಗೊಂಡ ಚಳವಳಿಯೆಂದು ಈ ಸುದ್ದಿಗಾರ ತಿಳಿಸುತ್ತಾನೆ. ಈ ಸಂದರ್ಭದಲ್ಲಿ ಅಂಥ ಚಳವಳಿ ಏಕೆ ನಡೆಯಲಿಲ್ಲವೋ ನನಗೆ ಅಚ್ಚರಿಯಾಗುತ್ತದೆ. ಸ್ಥಳದ ಬಹು ಜನರಿಗೆ ಈ ವಿದುರ, ಎಳೆವಯಸ್ಸಿನ ಹುಡುಗಿಯನ್ನು ಪಡೆಯಲು ಪ್ರಯತ್ನಿಸುತ್ತಿದ್ದುದು ತಿಳಿದೇ ಇರಬೇಕು. ಚಿತ್ರಹಿಂಸೆ ಮತ್ತು ಸಂಕಟದ ಬದುಕಿನಿಂದ ಈ ಹುಡುಗಿಯನ್ನು ಪಾರು ಮಾಡಲು ಕೂಡಲೇ ಚಳವಳಿ ಏಕೆ ಕೈಗೊಳ್ಳಲಿಲ್ಲ ಎಂದು ನನಗೆ ಅಚ್ಚರಿಯಾಗುತ್ತದೆ. ವಿವಾಹಿತಳಾದ ಈ ಹುಡುಗಿಗೆ ನೆರವು ನೀಡಲು ಸ್ಥಳೀಯ ಸಾರ್ವಜನಿಕಾಭಿಪ್ರಾಯ ರೂಢಿಸಲು ಈಗಲೂ ಕಾಲ ಮೀರಿಲ್ಲವೆಂದು ನನ್ನ ಅಭಿಪ್ರಾಯ. ಈ ವಿದುರ ಒಂದು ಕಾಲದಲ್ಲಿ ದಾನಿಯಾಗಿದ್ದನೆಂದು ನನ್ನ ಬಾತ್ಮಿದಾರನ ಕಾಗದ ತಿಳಿಸುತ್ತದೆ. ವಯಸ್ಸಾಗುವ ವರೆಗೆ ಈ ಹುಡುಗಿಯನ್ನು ಸೇವಾಸದನ ಅಥವಾ ಅಂಥದ್ದೇ ಯಾವುದಾದರೂ ಸಂಸ್ಥೆ ಯಲ್ಲಿ ಶಿಕ್ಷಣಕ್ಕಾಗಿ ಬಿಟ್ಟು ಪೂರ್ಣ ವಯಸ್ಸಿಗೆ ಬರುತ್ತಲೇ ಆತನೊಡನೆ ಸ್ವಇಚ್ಛೆಯಿಂದ ಉಳಿಯುವುದಾಗಲಿ ಅಥವಾ ವಿವಾಹ ವಿಚ್ಛೇದಿತವಾದಂತೆ ಪರಿಗಣಿಸುವುದಕ್ಕಾಗಲಿ ಅವಕಾಶ ಮಾಡಿಕೊಡುವಂತೆ ಅವನ ಮನಸ್ಸನ್ನು ಪರಿವರ್ತನಗೊಳಿಸಬಹುದಲ್ಲವೇ? ಆದರೆ ಪಾಚಿ ಕಟ್ಟಿಕೊಂಡಿರುವ ಸಮಾಜದ ಇಂದಿನ ಪರಿಸ್ಥಿತಿಯಲ್ಲಿ ಇಂಥ ಕ್ರಮ ಕೈಗೊಳ್ಳುವುದು ಸಾಧ್ಯವೋ ಅಸಾಧ್ಯವೋ ಏನೇ ಇರಲಿ, ಸಚ್ಚಾರಿತ್ರ್ಯವಂತರಾದ ತರುಣರು ಎಲ್ಲ ಸಂಭಾವಿತ ನ್ಯಾಯ ಸಮ್ಮತ ಮಾರ್ಗಗಳಿಂದ ಇಂಥ ಸಣ್ಣ ಮಕ್ಕಳ ಮದುವೆ ತಡೆಗಟ್ಟಲು ಮತ್ತು ಎಳೆ ವಯಸ್ಸಿನ ವಿಧವೆಯರ ಪುನರ್ವಿವಾಹ ಪ್ರೋತ್ಸಾಹಿಸಲು ದಯಾ ದೃಷ್ಟಿಯ ತಂಡಗಳನ್ನೇಕೆ ರಚಿಸಿಕೊಳ್ಳಬಾರದು. ಇವೆರಡು ಕೈಗೂಡಿಸಿ ಒಟ್ಟಿಗೇ ಹೋಗುತ್ತೇವೆಂದು ನನ್ನ ಮತ. ಈ ದಯಾಪೂರಿತ ಸಂಸ್ಥೆಗಳು ಸಾರ್ಥಕ ಕೆಲಸ ಮಾಡಲು ತಮ್ಮ ಸಂಘ ಶಕ್ತಿಯನ್ನು ಸ್ಥಳದಲ್ಲಿಯೇ ಕೇಂದ್ರೀಕರಿಸಬೇಕು. ಕೆಲವು ವರುಷ ಗಳಲ್ಲಿ ನಾವು ತುಂಬ ಪ್ರಭಾವಶಾಲಿ ಸಂಸ್ಥೆಯಾಗುವುದು ಅವರಿಗೆ ತಿಳಿದುಬಂದೀತು. ಬಹುತೇಕ ನಮ್ಮ ಊರುಗಳ ಜನಸಂಖ್ಯೆ ಕೇವಲ ಅಲ್ಪ. ಆದ್ದರಿಂದ ಈ ಬಾತ್ಮೀದಾರ ನಮ್ಮ ಗಮನಕ್ಕೆ ತಂದಿರುವ ಅನೀತಿ ವ್ಯಾಪಾರಗಳು ಸಂಭವಿಸುವುದರಲ್ಲಿವೆ ಎಂದು ತಿಳಿಯುವುದಾಗಲಿ, ಅಥವಾ ತಮ್ಮ ಪಟ್ಟಣಗಳ ಬಾಲ ವಿಧವೆಯರನ್ನು ಅರಿಯುವುದಾಗಲಿ ಕಠಿಣವಲ್ಲ. ಆದರೆ ಈ ದಯಾಪೂರಿತ ಸಂಸ್ಥೆಗಳು ಬಹಳ ಜಾಗ್ರತೆ ಹಾಗೂ ಅತ್ಯಂತ ಅನುಕರಣೀಯ ಆತ್ಮಸಂಯಮದಿಂದ ವರ್ತಿಸಬೇಕೆನ್ನುವದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಸ್ವಲ್ಪ ತಾಳ್ಮೆಗೆಟ್ಟರೂ ಸರಿ ಅಥವಾ ಹಿಂಸಾ ಪ್ರವೃತ್ತಿ ವ್ಯಕ್ತಪಡಿಸಿದರೂ ಸರಿ ತಮಗೆ ತಾವೇ ವಿರೋಧ ಕಟ್ಟಿಕೊಂಡಂತಾಗಿ ಅವರು ಕೈಗೊಂಡಿರುವ ಉದ್ದೇಶಕ್ಕೆ ಧಕ್ಕೆಯಾದೀತು.

**ಮೋ.ಕ.ಗಾಂಧಿ**

*(ಯಂಗ್ ಇಂಡಿಯಾ : ೧-೯-೧೯೨೭)*

**ದ್ವಿಗುಣ ಪಾಪ:**

(ಸೆಪ್ಟೆಂಬರ್ ೧, ೧೯೨೭ರ ಯಂಗ್ ಇಂಡಿಯಾದಲ್ಲಿ ಪ್ರಕಟವಾದ "ಇದು ವಿವಾಹವೇ?" ಎಂಬ ಲೇಖನ ಕುರಿತು ದೀರ್ಘ ಪತ್ರವೊಂದನ್ನು ನನಗಾಗಿ ಮಾತ್ರ ತಮ್ಮ ಹೆಸರು ತಿಳಿಯಪಡಿಸಿರುವ "ಓರ್ವ ಬ್ರಹ್ಮಚಾರಿ" ಬರೆದಿರುತ್ತಾನೆ. ಅದನ್ನು ಸಂಕ್ಷೇಪಿಸಿ ಕೆಳಗೆ ಕೊಡಲಾಗಿದೆ.)

"ಇದು ವಿವಾಹವೇ" ಎಂಬ ಶಿರೋನಾಮೆಯಲ್ಲಿ ಸೆಪ್ಟೆಂಬರ್ ಮೊದಲನೇ ತಾರೀಖಿನಲ್ಲಿ ತಮ್ಮ ಪತ್ರಿಕೆಯಲ್ಲಿ ಪ್ರಕಟವಾಗಿರುವ ಲೇಖನವನ್ನು ಕುತೂಹಲದಿಂದ ಓದಿದ್ದೇನೆ. ಅಲ್ಲಿ ಉಲ್ಲೇಖಿತವಾಗಿರುವವರ ಹೆಸರುಗಳು ಪ್ರಕಟಿಸಲ್ಪಡದಿದ್ದರೂ, ಕಾರವಾರದಲ್ಲಿರುವ ಗೌಡ ಸಾರಸ್ವತ ಬ್ರಾಹ್ಮಣರಿಗೆ ಇದು ಬಹಿರಂಗವಾದ ಗುಟ್ಟು. ಈ ವಿವಾಹ ನಡೆದ ಜಾಗೆಗೆ ಸೇರಿದ ನಾನು ಇಡೀ ಹಿಂದೂಸ್ಥಾನದಲ್ಲಿರುವ ಗೌಡ ಸಾರಸ್ವತ ಬ್ರಾಹ್ಮಣರ ಹಾಗೂ ಸಾರ್ವಜನಿಕರ ವಿಚಾರಪೂರಿತ ವಿಮರ್ಶೆಗಾಗಿ ಈ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ.

"ಒಬ್ಬ ವ್ಯಕ್ತಿ ಒಂದು ಹುಡುಗಿಯನ್ನು ಕೊಳ್ಳುವುದು ಅಪಮಾನವೇ ಸರಿ. ಆದರೆ ಇಷ್ಟೇ ಕೆಟ್ಟುದಾದ ಮತ್ತೊಂದು ದುಷ್ಟ ಪದ್ಧತಿ ನಮ್ಮಲ್ಲಿ ಜಾರಿಯಲ್ಲಿದೆ. ತಂದೆಯಾದವನು ನಮ್ಮಲ್ಲಿ ತನ್ನ ಮಗಳಿಗಾಗಿ ಗಂಡನನ್ನು ಕೊಳ್ಳಬೇಕಾಗಿದೆ. ಗಂಡನ ಕೈಸೇರುವ ಈ ಹಣಕ್ಕೆ ವರದಕ್ಷಿಣೆ ಎಂದು ಹೆಸರು. ವಧುವಿನ ಮಾತಾಪಿತೃಗಳ ಹಣದ ಚೀಲದ ಶಕ್ತಿಗನುಗುಣವಾಗಿ ಇದಿರುವುದಿಲ್ಲ; ಆದರೆ ವರನ ಆನುವಂಶೀಯ ಐಶ್ವರ್ಯ ಅಥವಾ ಕೆಲವು ಸಂದರ್ಭಗಳಲ್ಲಿ ಅವನ ವಿದ್ಯಾ ಶಿಕ್ಷಣಕ್ಕನುಗುಣವಾಗಿರುತ್ತದೆ ವರದಕ್ಷಿಣೆ. ಅವನು ಶಿಕ್ಷಣ ಪಡೆದಂತೆ, ಅವನು ಪದವೀಧರನಾದಂತೆ ವರಾನ್ವೇಷಣೆಯ ಮಾರುಕಟ್ಟೆಯಲ್ಲಿ ಅವನ ಕಿಮ್ಮತ್ತೂ ಅಧಿಕವಾಗುತ್ತ ಹೋಗುತ್ತದೆ.

"ಕೆಲವು ತಿಂಗಳುಗಳ ಹಿಂದೆ ಬೊಂಬಾಯಿಯಲ್ಲಿ ಓರ್ವ ಸುಶಿಕ್ಷಿತ ಸಂಭಾವಿತನ ಮದುವೆಯಾಯಿತು. ಸರ್ಕಾರದಲ್ಲಿ ದೊಡ್ಡ ಹುದ್ದೇದಾರನಾದ ಈತನಿಗೆ ೨೦.೦೦೦ರೂ.ಗಳ ವರದಕ್ಷಿಣೆ ಸಂದಾಯವಾಯಿತೆಂದು ಹೇಳಲಾಗುತ್ತದೆ. ಯಾವ ದುಷ್ಟ ಪದ್ಧತಿಯನ್ನು ಅವರು ತೊಡೆದು ಹಾಕಲೇಬೇಕೆಂದು ಸಮಾಜ ನಿರೀಕ್ಷಿಸುತ್ತಿದೆಯೋ ಅದನ್ನೇ ಆಶ್ರಯಿಸಿಕೊಂಡು, ಉಚ್ಚ ಶಿಕ್ಷಣ ಪಡೆದಿರುವ ಇವರು ಅಧೋಗತಿಗೆ ಇಳಿಯುತ್ತಿದ್ದಾರೆ".

ಇದೇ ಜಾತಿಗೆ ಸೇರಿದ ಮತ್ತೊಬ್ಬರಿಂದ ಇದೇ ವಿಷಯದಲ್ಲಿ ಮತ್ತೊಂದು ಪತ್ರ ನನಗೆ ಬಂದಿರುತ್ತದೆ. ಹೆಣ್ಣು ಕೊಳ್ಳಬಯಸುವವರು ಗೋವಾಗೆ ಹೋಗುತ್ತಾರಂತೆ. ಇಲ್ಲಿ ವಧುವಿನ ತಂದೆ ತಾಯಿಗಳು ತಾತ ಮುತ್ತಾತ ಎನಿಸಿಕೊಳ್ಳುವಷ್ಟು ವಯಸ್ಸಾಗಿರುವ ವರನಿಗೆ, ಬಡ ಸಾರಸ್ವತ ಬ್ರಾಹ್ಮಣರು ತಮ್ಮ ಮಕ್ಕಳನ್ನು ಮಾರಿ ಶ್ರೀಮಂತರಾಗಲು ನಾಚಿಕೆಪಡುವುದಿಲ್ಲ. ಹೀಗೆ ಈ ಜಾತಿ, ದ್ವಿಗುಣಿತ ಪಾಪಕಾರ್ಯವೆಸಗುತ್ತಿದೆ. ತನ್ನನ್ನು ಅತ್ಯಂತ ಅಧಿಕ ಬೆಲೆಗೆ ಮಾರಿಕೊಂಡು ಕನ್ಯೆಯ ಕೈಹಿಡಿಯಲು ವಿದ್ಯಾವಂತ ತರುಣ

ಗಂಡು ಸಿದ್ಧ. ಅಂತೆಯೇ ತುಂಬ ವಯಸ್ಸಾದವರಿಗೆ (ಇವರಲ್ಲನೇಕರು ವಿದ್ಯಾವಂತರು) ಎಳೆ ವಯಸ್ಸಿನ ತಮ್ಮ ಮಕ್ಕಳನ್ನು ವರಿಷ್ಠ ಬೆಲೆ ಕೊಡುವವರಿಗೆ ತಂದೆ ತಾಯಿಗಳು ಕೊಡಲು ಸಿದ್ಧ. ಸಾರಸ್ವತ ಜಾತಿಯವರು ಏನೋ ನೆಪ ಹೂಡಿ ಈ ದಿಶೆಯಲ್ಲಿ ಸುಧಾರಣೆ ಮಾಡಲು ಅಪೇಕ್ಷಿಸುವುದಾದರೆ, 'ಇತರ ಜಾತಿ'ಗಳಲ್ಲಿಯೂ ಈ ಕೆಟ್ಟ ಪದ್ಧತಿ ಜಾರಿಯಲ್ಲಿದೆ ಎಂದು ಹೇಳಿಕೊಂಡು ಈ ಅಪವಾದದಿಂದ ಸಮಾಧಾನ ತಂದುಕೊಳ್ಳಬಹುದು. ಅವರು ಹಾಗೆ ಬಯಸುವುದಾದರೆ ಏನಾದರೂ ಇದರಲ್ಲಿ ವ್ಯತ್ಯಾಸ ವಿದ್ದರೆ ಅದು ಆಂಶಿಕ ಮಾತ್ರ. ಈ ದ್ವಿಗುಣ ಪಾಪವನ್ನು ತೊಡೆದು ಹಾಕಬಯಸುವದಾದರೆ, ಈ ದುಷ್ಟ ಪದ್ಧತಿ ಬಯಲಾಗಿರುವುದರಿಂದ. ನಿಮ್ಮಲ್ಲಿಯೂ ಈ ಪದ್ಧತಿ ಇದ್ದೇ ಇದೆ ಎಂಬ ಸಂದೇಹಾಸ್ಪದ ಸಮಾಧಾನ ತಂದುಕೊಳ್ಳದೆ ಸಾರಸ್ವತ ಪಂಗಡದವರು ಸುಧಾರಣೆಯ ಮುಂದಾಳಾಗಬೇಕು.

**ಮೋ.ಕ.ಗಾಂಧಿ**

*(ಯಂಗ್ ಇಂಡಿಯಾ : ೬-೧೦-೧೯೨೭)*

**ಹಿಂದೂ ನ್ಯಾಯ ಶಾಸನ ಮತ್ತು ಮೈಸೂರು:**

ಅಕ್ಟೋಬರ್ ೧೩, ೧೯೨೭ರ ಯಂಗ್ ಇಂಡಿಯಾದಲ್ಲಿ ಬೆಂಗಳೂರಿನ (ದಿ.ಮಂತ್ರಿ) ಕೆ.ಟಿ.ಭಾಷ್ಯಂ ಅಯ್ಯಂಗಾರ್ಯರು 'ಹಿಂದೂ ನ್ಯಾಯಶಾಸ್ತ್ರದ ಬಗ್ಗೆ ಟೀಕೆಮಾಡಿ, ಕೆಲವು ಸುಧಾರಣೆಗಳನ್ನು ಸೂಚಿಸಿದ್ದರು. ಅದಕ್ಕೆ ಉತ್ತರ ಕೊಡುತ್ತ ಗಾಂಧೀಜಿ ಹೀಗೆ ಬರೆದರು:

ಮೇಲಿನ ಪತ್ರಕ್ಕೆ ನಾನು ಕೊಟ್ಟಿರುವ ಪ್ರಾಮುಖ್ಯತೆಯಿಂದ, ಅವರು ಹೇಳಿರುವ ಎಲ್ಲ ಸುಧಾರಣೆಗಳನ್ನು ನಾನು ಒಪ್ಪುತ್ತೇನೆಂದು ತಿಳಿಯಬಾರದು. ಕೆಲವಂತೂ ಕೂಡಲೇ ಸರಪಡಿಸಬಹುದಾದಂಥವು, ನಿಸ್ಸಂದೇಹ. ಅವರು ಸೂಚಿಸಿರುವ ಎಲ್ಲ ಸಲಹೆಗಳೂ ಹಿಂದೂ ಸಮಾಜವನ್ನು ಕಳಂಕರಹಿತವಾಗಿ ಮಾಡಲು ಪ್ರಯತ್ನಿಸುವವರ ಗಮನಕ್ಕೂ ಖಂಡಿತ ಬೀಳಬೇಕಾದ್ದೇ ಎಂಬುದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ.

ಬ್ರಿಟಿಷರು ಬರುವ ಮೊದಲು ಈ ದೇಶದಲ್ಲಿ ಕೋಟ್ಯಂತರ ಜೀವಗಳನ್ನು ನಿಯಂತ್ರಿಸುವ ಅನಿವಾರ್ಯವಾದ "ಹಿಂದೂ ನ್ಯಾಯ ಶಾಸನ" ಯಾವದೂ ಇರಲಿಲ್ಲ. ನಿಯಮಗಳ ಸಂಹಿತೆ ಆದ ಸ್ಮೃತಿಗಳು ಸೂಚಕಗಳೇ ವಿನಾ ನಡತೆಯ ನಿರ್ದಿಷ್ಟ ಅಪರಿಹಾರ್ಯಸೂತ್ರಗಳಲ್ಲ. ಈಗಿನ ಕಾಲದ ವಕೀಲರಿಗೆ ಅರ್ಥವಾಗುವ ಹಾಗೆ ಅದಕ್ಕೆ ನ್ಯಾಯಶಕ್ತಿಯೂ ಇರಲಿಲ್ಲ, ಶಾಸನಶಕ್ತಿಯೂ ಇರಲಿಲ್ಲ. ಸ್ಮೃತಿಗಳ ಶಾಸನವು ಕಾನೂನು ಸಮ್ಮತವಲ್ಲ, ಸಮಾಜ ಸಮ್ಮತ. ಸ್ಮೃತಿಗಳಲ್ಲಿ ಪರಸ್ಪರ ವಿರುದ್ಧವಾದ ಶ್ಲೋಕ ಇವೆ. ನಮ್ಮ ಹಾಗೆಯೇ ಅವು ವಿಕಾಸಗೊಳ್ಳುತ್ತ ಬಂದಿವೆ ಎಂಬುದು. ಸಮಾಜಶಾಸ್ತ್ರದಲ್ಲಿ ಹೊಸ ಹೊಸ ಶೋಧನೆ ಆದಂತೆ ಅದಕ್ಕೆ ಹೊಂದಿಕೊಳ್ಳುತ್ತಿದ್ದವೂ ಎಂಬುದು ಸ್ಪಷ್ಟ. ವಿವೇಕಶಾಲಿ ರಾಜರು ಹೊಸ ಹೊಸ ಪರಿಸ್ಥಿತಿಗನುಸಾರವಾಗಿ ಹೊಸ ವ್ಯಾಖ್ಯಾನಗಳನ್ನು ಮಾಡಿಸುತ್ತಿದ್ದರು. ಹಿಂದೂಧರ್ಮಕ್ಕೂ, ಹಿಂದೂ ಶಾಸ್ತ್ರಗಳಿಗೂ ಈಗ ಕೊಡಲು ಪ್ರಯತ್ನ

ಆಗುತ್ತಿರುವ ಅಪರಿವರ್ತನೀಯ ಸ್ವಭಾವ ಎಂದೂ ಇರಲಿಲ್ಲ. ಆಗ ರಾಜರೂ ಅವರ ಮಂತ್ರಿಗಳೂ ಸಮಾಜ ಗೌರವಕ್ಕೆ ಅನುಸರಣೆಗೆ ಯೋಗ್ಯವಾದ ಅಧಿಕಾರವನ್ನೂ, ವಿವೇಕ ವನ್ನೂ ಪಡೆದಿದ್ದರು. ಈಗಂತೂ ಒಂದು ಅಭಿಪ್ರಾಯ ಬೆಳೆದಿದೆ. ಸ್ಮೃತಿಗಳು, ಶಾಸ್ತ್ರಗಳೂ ಎಂಬುದೆಲ್ಲವೂ ಅಪರಿವರ್ತನೀಯ. ನಮ್ಮ ನೀತಿಯ ದೃಷ್ಟಿಗೆ ಯಾವದು ಪೂರಾ ಅಸಹ್ಯವೋ, ಯಾವುದನ್ನೂ ಕಾರ್ಯಗತ ಮಾಡಲು ಸಾಧ್ಯ ಇಲ್ಲವೋ, ಅಂಥ ಶ್ಲೋಕಗಳನ್ನು ಅನುಕೂಲವಾಗಿ ಉದಾಸೀನ ಮಾಡುತ್ತೇವೆ. ಮಾನವೀಯ ವಿಕಾಸದಲ್ಲಿ ಹಿಂದೂ ಸಮಾಜವು ಇಂದು ಪ್ರಗತಿಶೀಲ ಘಟಕ ಆಗಬೇಕಾಗಿದ್ದರೆ, ಈ ಅಸಮಾಧಾನಕರ ಪರಿಸ್ಥಿತಿ ಎಂದಾದರೂ ಒಂದು ದಿನ ಬದಲು ಆಗಲೇಬೇಕು. ಬ್ರಿಟಿಷ್ ಆಳರಸರು ಈ ವ್ಯತ್ಯಾಸವನ್ನು ಮಾಡಲಾರರು. ಏಕೆಂದರೆ ಅವರ ಮತವೇ ಬೇರೆ ಅವರ ಆದರ್ಶವೇ ಬೇರೆ. ಯಾವುದೇ ಎಲ್ಲಾದರೂ ಹೋಗಲಿ-ನೀತಿ ನೆಗೆದುಬಿದ್ದು ಹೋಗಲಿ. ಎಲ್ಲವನ್ನೂ ತ್ಯಾಗ ಮಾಡಿ ತಮ್ಮ ಆದರ್ಶ ಆದ ತಮ್ಮ ವ್ಯಾಪಾರಿ ಆಧಿಪತ್ಯವನ್ನು ಉಳಿಸಿಕೊಳ್ಳಲು ಯೋಚಿಸುತ್ತಾರೆ. ಅಷ್ಟರಿಂದ ಹಿಂದೂ ಸಾರ್ವಜನಿಕಾಭಿಪ್ರಾಯ ಸ್ಪಷ್ಟವಾಗಿ ಬೇಡಿದರೆ, ಅವರ ಆದರ್ಶಕ್ಕೆ ಏನೂ ಬಾಧಕ ಬರದಂತೆ ಪ್ರಯತ್ನಿಸಿದರೆ ಇಂಥ ಶಾಸನಗಳನ್ನು ಅವರು ಗಮನಿಸಿಲು ಸಾಧ್ಯ. ಆದರೆ ಹಿಂದೂ ಸಾರ್ವಜನಿಕಾಭಿಪ್ರಾಯವನ್ನು ಬಹು ವಿಶಾಲವಾದ ಬ್ರಿಟಿಷ್ ಹಿಂದೂಸ್ಥಾನದಲ್ಲಿ ರೂಪಿಸುವುದು ಈಗ ಬಹುಕಷ್ಟ. ಇದರಲ್ಲಿರುವ ವಿಚಾರ, ಸ್ಮೃತಿ, ಭಿನ್ನ ಭಿನ್ನ. ಈ ದೇಶದಲ್ಲಿರುವ ಸಾರ್ವಜನಿಕಾಭಿಪ್ರಾಯಕ್ಕೆ ಸ್ವರಾಜ್ಯ ಸಂಗ್ರಾಮ ಬಿಟ್ಟು ಬೇರೆ ಯಾವದೂ ಈಗ ಬೇಕಿಲ್ಲ. ಮೈಸೂರಂಥ ಸಂಸ್ಥಾನಕ್ಕೆ ಇಂಥ ಪರಿಮಿತಿಗಳು ಇಲ್ಲ. ನನ್ನ ವಿನಮ್ರ ಅಭಿಪ್ರಾಯದಲ್ಲಿ ಹಿಂದೂ ಶಾಸನದಲ್ಲಿರುವ ಇಂದಿನ ಕಾಲಕ್ಕೆ ಹೊಂದದ ಅಂಶಗಳನ್ನೂ ಅಂಥ ಇನ್ನಿತರ ದೋಷಗಳನ್ನೂ ಬ್ರಿಟಿಷ್ ಹಿಂದೂಸ್ತಾನ ಕ್ಕಿಂತ ಮೊದಲೇ ತೆಗೆದು ಹಾಕುವುದು ಮೈಸೂರು ಸಂಸ್ಥಾನದ ಕರ್ತವ್ಯವಾಗಿದೆ. ಇಂಥ ಪರಿವರ್ತನೆಗಳನ್ನು ಮಾಡಲು ಮೈಸೂರು ಸಂಸ್ಥಾನ ಪರಿಮಿತ ರಾಜಸತ್ತೆಯ ರಾಜಕಾರಣಕ್ಕೆ ಬರುತ್ತದೆ. ಇದರಲ್ಲಿ ಒಂದು ಶಾಸನಸಭೆಯೂ ಇದೆ. ಸಾಮಾಜಿಕ ಬದಲಾವಣೆಗಳನ್ನು ಮಾಡಲು ಅದಕ್ಕೆ ಸಾಕಷ್ಟು ಪ್ರಾತಿನಿಧ್ಯ ಇದೆ. ಹಿಂದೂ ನ್ಯಾಯ ಶಾಸನದಲ್ಲಿ ಏನೇನು ಪರಿವರ್ತನೆ ಮಾಡಬೇಕೋ ಅದನ್ನೂ ಸೂಚಿಸಲು ಒಂದು ಸಮಿತಿಯನ್ನು ನೇಮಕ ಮಾಡುವಂತೆ ಇಲ್ಲಿನ ಶಾಸನ ಸಭೆಯಲ್ಲಿ ತೀರ್ಮಾನ ಆಗಿದೆ. ಸಂಪ್ರದಾಯಸ್ಥ ಹಿಂದೂಗಳು ಹಾಗೂ ಪ್ರಗತಿಪರ ಹಿಂದೂಗಳ ಅಭಿಪ್ರಾಯಗಳನ್ನು ಪ್ರತಿನಿಧಿಸುವ ಒಂದು ಬಲವಾದ ಸಮಿತಿಯನ್ನು ನೇಮಿಸಿದರೆ ಅದರ ಸಲಹೆಗಳು ಉಪಯುಕ್ತವಾದವು. ಅಗತ್ಯ ಪರಿವರ್ತನೆಗಳನ್ನು ಮಾಡುವುದಕ್ಕೆ ದಾರಿ ಸುಗಮವಾದೀತು. ಮೈಸೂರು ಶಾಸನಸಭೆಯಲ್ಲಿ ಇಂಥ ಸಮಿತಿಗಳ ರಚನೆಗೆ. ಏನೇನು ನಿಯಮಗಳಿವೆಯೋ ನನಗೆ ಗೊತ್ತಿಲ್ಲ. ಆದರೆ ಅದರಲ್ಲಿ ಮೈಸೂರಿನ ಹೊರಗಡೆಯ ಸದಸ್ಯರನ್ನು ಸೇರಿಸಿಕೊಳ್ಳಲು ಸಾಕಷ್ಟು ಅನುಕೂಲ ಇದೆ ಎಂದು ತಿಳಿದುಕೊಂಡಿದ್ದೇನೆ. ಅದೇನೆ ಇರಲಿ, ಕೆಲವು ಸಂದರ್ಭಗಳಲ್ಲಿ ಹಿಂದೂ ಶಾಸನವನ್ನು ತಿದ್ದುಪಡಿ ಮಾಡುವುದು ಅತ್ಯಗತ್ಯ ಎಂದು

ಭಾಷ್ಯಂ ಅಯ್ಯಂಗಾರರು ತೋರಿಸಿಕೊಟ್ಟಿದ್ದಾರೆ. ಬಹಳ ತಡವಾಗಿ ಬರುವ ಈ ಸುಧಾರಣೆಯನ್ನು ಮಾಡುವ ಉಪಕ್ರಮಕ್ಕೆ ಮೈಸೂರಿಗಿಂತ ಹೆಚ್ಚು ಯಾವ ಸಂಸ್ಥಾನವೂ ಉತ್ತಮ ಅಲ್ಲ.

**ಮೋ. ಕ. ಗಾಂಧಿ**

*(ಯಂಗ್ ಇಂಡಿಯಾ : ೧೩-೧೦-೧೯೨೭)*

**ಅಸ್ಪೃಶ್ಯತಾ ನಿವಾರಣೆ:**

ಶ್ರೀ ಎಸ್.ಡಿ.ನಾಡಕರ್ಣಿ (ಕಾರವಾರ) ಅವರು ತಾರೀಖು ೧೦ರ ಸೆಪ್ಟೆಂಬರ್ ೧೯೨೭ರಲ್ಲಿ ಕಾರವಾರದಿಂದ ಪತ್ರ ಬರೆಯುತ್ತಾ ಈ ರೀತಿ ಹೇಳುತ್ತಾರೆ:

"ಕಳೆದ ವಾರ ನನ್ನ ಸಹೋದರ ಮತ್ತು ನಾನು, ಕೆಲವು ಗೆಳೆಯರ ಗುಂಪಿನ ಸಹಾಯದಿಂದ ಅನೇಕ ಅನಿರೀಕ್ಷಿತ ತೊಂದರೆಗಳನ್ನು ಎದುರಿಸಿ ಯಶಸ್ವಿಯಾಗಿ "ನಿಜವಾದ ಸಾರ್ವಜನಿಕ ಗಣೇಶೋತ್ಸವ" ನಡೆಸಿದೆವು. ಇತರ ಹಿಂದೂಗಳೊಡನೆ 'ಅಸ್ಪೃಶ್ಯರನ್ನು' ಜೊತೆಗೂಡಿಸಿಕೊಂಡು, ಪೂಜೆ, ಭಜನೆ, ಆರತಿ ಕೀರ್ತನೆ, ಪುರಾಣಪಠನ ಮೊದಲಾದ ಕಾರ್ಯಕ್ರಮಗಳನ್ನು ಆಚರಿಸಿದೆವು. ಕಡೆಯದಾಗಿ ಇದಕ್ಕಾಗಿಯೇ ಬರೆದ ನಾಟಕವನ್ನು ಎರಡಾವರ್ತಿ ಆಡಲಾಯಿತು. ಈ ನಾಟಕವು ನಮ್ಮ ಜಿಲ್ಲಾ ಸ್ಕೂಲ ಬೋರ್ಡಿನ ಒಬ್ಬ ಹರಿಜನ ಸದಸ್ಯರ ಅನುಭವದ ಆಧಾರದ ಮೇಲೆ ರಚಿತವಾಗಿದೆ. ಪಕ್ಕದ ಹಳ್ಳಿಯ ದೇವಾಲಯದಲ್ಲೊಂದು ಶಾಲೆ. ಈ ಶಾಲೆಯ ತಪಾಸಣೆಗಾಗಿ ಈ ಹರಿಜನ ಸದಸ್ಯನೂ ಒಬ್ಬ ಮುಸಲ್ಮಾನ ಸದಸ್ಯನೂ ಕೂಡಿ ಹೋದರು. ಮುಸಲ್ಮಾನ ಸದಸ್ಯನಿಗೆ ಶಾಲೆಯನ್ನು ಪ್ರವೇಶಿಸಲು ಅವಕಾಶ ದೊರೆತರೂ ಹರಿಜನ ಸದಸ್ಯನಿಗೆ ಪ್ರವೇಶ ನಿರಾಕರಿಸಲ್ಪಟ್ಟಿತು! ಇದನ್ನು ತಾವು ನಂಬಬಲ್ಲಿರಾ! ಈ ನಾಟಕವು ಮುಸಲ್ಮಾನರಿಗೆ ವಿರುದ್ಧವಾಗಿದೆ ಎಂಬ ಸಂಪೂರ್ಣ ಸುಳ್ಳುನೆಪದ ಮೇಲೆ, ನಮ್ಮ ಸಜ್ಜನ ಬಾಂಧವರು ಸ್ಥಳೀಯ ಮುಸಲ್ಮಾನರನ್ನು ಎತ್ತಿಕಟ್ಟಿ, ಈ ನಾಟಕವನ್ನು ಆಡದಂತೆ ತಡೆ ಆಜ್ಞೆ ಹೊರಡಿಸ ಬೇಕೆಂದು ಅಧಿಕಾರಿಗಳಲ್ಲಿ ಅರ್ಜಿ ಹಾಕಿಕೊಳ್ಳುವಂತೆ ಪ್ರೇರೇಪಿಸಿದರು. ನಮ್ಮ ಜನರೇ, ನಮ್ಮ ಸಮಾಜದ ಒಂದು ಮಹತ್ವದ ಸುಧಾರಣೆಯನ್ನು ಈ ರೀತಿ ವಿರೋಧಿಸುವಷ್ಟು ಆತ್ಮಘಾತಕ ಮಾರ್ಗ ಇನ್ನಾವುದಿದ್ದೀತು? ಆದರೆ, ಸಾಮಾನ್ಯ ವಿವೇಕ ಮತ್ತು ನ್ಯಾಯಬುದ್ಧಿ ಇವುಗಳಿಂದಾಗಿ ಅವರ ಪ್ರಯತ್ನ ವಿಫಲವಾಯ್ತು.

"ಇದಕ್ಕಾಗಿಯೇ ಪೂನಾದ ಮಹಾರಾಷ್ಟ್ರ ಹಿಂದೂ ಸಭೆಯ ಅಧ್ಯಕ್ಷ ಚಿತ್ರಶಾಸ್ತ್ರಿ ಅವರನ್ನು ಬರಮಾಡಿಕೊಂಡು ಅವರ ಸಹಾಯದಿಂದ ಅಸ್ಪೃಶ್ಯತೆಯ ವಿರುದ್ಧ ಹೋರಾಡಲು ಮತ್ತು ಸಾರ್ವಜನಿಕ ದೇವಾಲಯಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ದೊರಕಿಸಲು ಸ್ಥಳೀಯ ಹಿಂದೂ ಸಭೆಯ ಶಾಖೆಯೊಂದನ್ನು ಸ್ಥಾಪಿಸಿಕೊಂಡೆವು".

ಯಾರು ತಾನೇ ಶಾಸ್ತ್ರೀಯ ಸಂಪ್ರದಾಯವಾದಿ ಹಿಂದೂಗಳೆಂದು ಹೇಳಿಕೊಳ್ಳು ತ್ತಾರೋ ಯಾರನ್ನು ಶ್ರೀ ನಾಡಕರ್ಣಿ ಅವರು "ನನ್ನನ್ನು ಮುಟ್ಟಬೇಡ" ಎಂಬ

ಹಿಂದೂಗಳೆಂದು ಹೆಸರಿಸುತ್ತಾರೋ ಅಂಥವರು ಅಸ್ಪೃಶ್ಯರೆಂದು ಕರೆಯಲ್ಪಡುವವರ ವಿರುದ್ಧ ಕೈಗೊಂಡ ಮಾರ್ಗ ಸರಿಯಲ್ಲ; ಇಷ್ಟೇ ಅಲ್ಲ, ಸುಧಾರಕರಿಂದ ಏರ್ಪಡಿಸಲ್ಪಟ್ಟ ಸರಳ ನಿರ್ದೋಷ ನಾಟಕ ಆಡಲು ಅವರು ಒಡ್ಡಿದ ವಿರೋಧ ಅವರಿಗಾಗಲಿ ಅಥವಾ ಹಿಂದೂ ಧರ್ಮಕ್ಕಾಗಲಿ ಗೌರವ ತರವಂತಹದಲ್ಲ. ಪವಿತ್ರ ಧರ್ಮದ ಹೆಸರಿನಲ್ಲಿ ಕುರುಡು ಮಡಿವಂತಿಕೆಯು ಯಾವ ಮಟ್ಟಕ್ಕೆ ಹೋಗಬಲ್ಲದು ಎಂಬುದನ್ನು ಇದು ತೋರಿಸುತ್ತದೆ. ಶ್ರೀ ನಾಡಕರ್ಣಿ ಮತ್ತು ಅವರ ಗೆಳೆಯರು ಅಸ್ಪೃಶ್ಯರನ್ನು ಮೆರವಣಿಗೆಯ ಜೊತೆಯಲ್ಲಿ ಒಯ್ದುದಕ್ಕಾಗಿಯೂ ಮತ್ತು ನಾಟಕದಲ್ಲಿ ತಮ್ಮೊಡನೆ ಪಾಲ್ಗೊಳ್ಳುವುದಕ್ಕಾಗಿ ಅವಕಾಶ ಮಾಡಿಕೊಟ್ಟುದಕ್ಕಾಗಿಯೂ ಅವರನ್ನು ವಂದಿಸುತ್ತೇನೆ. ಪ್ರತಿಯೊಬ್ಬ ಸುಧಾರಕನೂ, ಎಷ್ಟೇ ಆಗಲಿ, ಈ ಬಗೆಯ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಳ್ಳುವುದರಿಂದ ಮಾತ್ರವೇ ಅಸ್ಪೃಶ್ಯತೆಯನ್ನು ದೂರ ಮಾಡಬಹುದು. ದಲಿತ ವರ್ಗದವರ ಪರ ಈ ರೀತಿಯಲ್ಲಿ ನಯವಾಗಿ ಆದರೂ ದೃಢವಾಗಿ ವರ್ತಿಸುವುದರಿಂದ ಮಾತ್ರವೇ ಮೂಢನಂಬಿಕೆ ಮತ್ತು ದುರಭಿಪ್ರಾಯವೆಂಬ ಎರಡು ಗೋಡೆಗಳನ್ನು ಒಡೆದು ಹಾಕಲು ಸಾಧ್ಯ. ಅಸ್ಪೃಶ್ಯರಿಗೆ ದೇವಾಲಯದ ಪ್ರವೇಶಕ್ಕೆ ಅವಕಾಶ ಮಾಡಿಕೊಡುವ ಪ್ರಯತ್ನದಲ್ಲಿ ಕಾರವಾರದ ಸುಧಾರಕರಿಗೆ ಜಯ ದೊರಕೀತೆಂದು ಆಶಿಸುತ್ತೇನೆ.

**ಮೋ.ಕ. ಗಾಂಧೀ**

*(ಯಂಗ್ ಇಂಡಿಯಾ : ೨೭-೧೦-೧೯೨೭)*

**ಮೈಸೂರು ಸರಕಾರದ ಖಾದಿ ಕೇಂದ್ರ:**

**(ಎಂ.ಕೆ.ಗಾಂಧೀ)**

ಮೈಸೂರು ಸರ್ಕಾರದವರು ಬದನವಾಳ ಎಂಬ ಸ್ಥಳದಲ್ಲಿ ಅತ್ಯಂತ ಆಸಕ್ತಿಯಿಂದ ಪ್ರಾಯೋಗಿಕವಾಗಿ ಉತ್ಪಾದನಾ ಕೇಂದ್ರವೊಂದನ್ನು ಸ್ಥಾಪಿಸಿರುತ್ತಾರೆ. ಕೆಲಸಗಾರರು ಮತ್ತು ಕೆಲಸದ ಯೋಜನೆಗಾಗಿ ಅಖಿಲ ಭಾರತ ಚರಖಾ ಸಂಘದ ನೆರವು ಪಡೆದುಕೊಂಡಿರುತ್ತಾರೆ. ಅಲ್ಲಿನ ಒಬ್ಬ ಕೆಲಸಗಾರನಿಂದ ಶ್ರೀಯುತ ರಾಜಗೋಪಾಲಚಾರಿ ಯವರಿಗೆ ಕೆಲಸದ ಪ್ರಗತಿಯ ಕುರಿತು ಬಂದಿರುವ ಸ್ವಾರಸ್ಯಕರ ಪತ್ರದಿಂದ ಕೆಲಭಾಗ ಇಲ್ಲಿ ಕೊಡಲಾಗಿದೆ.

ಉಪಕಸುಬು ಅಗತ್ಯವಾಗಿ ಬೇಕಾಗಿರುವ ಗ್ರಾಮಗಳಲ್ಲಿ ಸರಿಯಾದ ಮಾರ್ಗದಲ್ಲಿ ಈ ಕೆಲಸ ಕೈಗೊಂಡರೆ ಎಷ್ಟು ಸುಲಭವಾಗಿ ಈ ಉದ್ಯಮ ಹರಡುತ್ತದೆ ಎಂಬುದನ್ನು ಇದರಿಂದ ತಿಳಿಯಬಹುದು.

"೩೦೦ ನೂಲುವವರು ಹತ್ತಿಯ ರೂಪದಲ್ಲಿ ಅಥವಾ ಹತ್ತಿ ಕೊಳ್ಳಲು ನಮ್ಮಿಂದ ನಗದು ಸಹಾಯ ಪಡೆದಿರುತ್ತಾರೆ. ಇದಲ್ಲದೆ ಇತರ ೧೦೦ ಜನ ನಮ್ಮಿಂದ ಯಾವ ಸಹಾಯವನ್ನೂ ಪಡೆಯದೆ ತಾವಾಗಿಯೇ ನೂಲು ನಮಗೆ ಕೊಡುತ್ತಿದ್ದಾರೆ. ಪ್ರತಿಯೊಬ್ಬ ನೂಲುವವನೂ ನಮ್ಮಿಂದ ಪಡೆದಿರುವ ಸರಾಸರಿ ಸಾಲ ರೂ. ಒಂದು. ನೂಲುವ ಪ್ರದೇಶ ಬದನವಾಳಿನ ದಕ್ಷಿಣಕ್ಕೆ ಹದಿನೈದು ಮೈಲಿಗಳ ದೂರ. ಗುಂಡ್ಲುಪೇಟೆ ತಾಲ್ಲೂಕಿನ

ಒಳಭಾಗದವರೆಗೂ ಹಬ್ಬಿದೆ. ಬದನವಾಳಿನ ನೂಲಿನ ಕೇಂದ್ರ ಈಗ ಅಂಡಾಕಾರವಾಗಿ ಬೆಳೆದಿದೆ. ಈ ಕಾರಣದಿಂದ ಕೆಲಸ ಸಮರ್ಪಕವಾಗಿ ನಡೆಯಲು ಮತ್ತೊಂದು ಕೇಂದ್ರ ಸ್ಥಾಪಿಸುವದು ಅಗತ್ಯವಾಗಿದೆ. ಈ ವೃತ್ತದ ಬಿಂದುವನ್ನು ಗೊತ್ತುಮಾಡಿದ ವ್ಯವಸ್ಥಾಪಕರ ಕಲ್ಪನೆಗೆ ಬಾರದೆ ಇದ್ದ ಬೇರೊಂದು ಕಡೆಯಿಂದ ಬದನವಾಳಕ್ಕೆ ಮೂರನೇ ಎರಡು ಭಾಗ ಬರುತ್ತದೆ. ಬದನವಾಳವನ್ನು ಕೇಂದ್ರವಾಗಿ ಗೊತ್ತುಮಾಡುವುದಕ್ಕೆ ಪೂರ್ವಭಾವಿಯಾಗಿ ಈ ಭಾಗದ ಸರ್ವೆ ನಡೆದಿದ್ದರೆ, ಬದನವಾಳಕ್ಕೂ ಗುಂಡ್ಲುಪೇಟೆಗೂ ನಡುವೆ ನೂಲುವ ಕೇಂದ್ರವನ್ನು ಸ್ಥಾಪಿಸುತ್ತಿದ್ದರು. ಆದರೆ ಈ ಪುನರ್ವ್ಯವಸ್ಥೆಯನ್ನು ಕೂಡಲೇ ಕೈಗೊಳ್ಳಲು ಸಾಧ್ಯವಾಗದು.

ಕೆಳಗೆ ಕೊಟ್ಟಿರುವ ಪಟ್ಟಿ ಸದ್ಯದ ಪರಿಸ್ಥಿತಿಯನ್ನು ವಿಶದಪಡಿಸುತ್ತದೆ :

| | | **ನವೆಂಬರ್ ೩೦ರಲ್ಲಿ** | **ಡಿಸೆಂಬರ್ ೨೬ರಲ್ಲಿ** |
|---|---|---|---|
| ನಮ್ಮ ಕಾರ್ಯವ್ಯಾಪ್ತಿಯ ಗ್ರಾಮಗಳ ಸಂಖ್ಯೆ | : | ೨೫ | ೪೦ |
| ನೂಲುವವರ ಸಂಖ್ಯೆ | : | ೨೩೦ | ೪೦೦ |
| ನೂಲು ತಯಾರಾದ್ದು | : | ರೂ. ೧೬೦ (೨೧೨ ಪೌಂಡು) | ರೂ. ೫೦೨ (೭೧೫ ಪೌಂಡು) |
| ಬಟ್ಟೆ ತಯಾರಾದ್ದು | : | ರೂ. ೧೪೫ (೩೮೦ ಗಜ) | ರೂ. ೪೪೫ (೮೨೫ ಗಜ) |
| ನೂಲುವವರ ಸಾಪ್ತಾಹಿಕ ವರಮಾನ | : | | ೦-೯ ಆಣೆ |
| ನೇಯುವವರ ಸಾಪ್ತಾಹಿಕ ವರಮಾನ | : | | ರೂ. ೩-೬ ಆಣೆ |

ಬಟ್ಟೆ ಚಲುವೆ ಮಾಡಲು ಇನ್ನೂ ಯಾವ ಯೋಗ್ಯ ವ್ಯವಸ್ಥೆಯನ್ನೂ ಮಾಡಿಲ್ಲ. ಇದರಿಂದ ಖಾದಿಯನ್ನು ಕೂಡಲೇ ವಿಲೇವಾರಿ ಮಾಡುವುದು ಕಠಿಣವಾಗಿದೆ. ಈ ಕಷ್ಟ ಪರಿಸ್ಥಿತಿಯಿಂದ ಪಾರಾಗಲು ಪ್ರಯತ್ನಿಸುತ್ತಿದ್ದೇವೆ.

ಈ ಭಾಗದಲ್ಲಿ ಹತ್ತಿ ಆದಾಯ ತರುವ ಕೃಷಿಯಾಗಿಲ್ಲ. ಎಂದಿಗೂ ಆಗಲಾರದು ವಿಸ್ತಾರ ಕೃಷಿ ನಡೆಯುತ್ತಿಲ್ಲ. ಮುಂದಿನ ವರುಷ ಪ್ರತಿಯೊಬ್ಬ ನೂಲುವವನೂ ತನಗೂ ತನ್ನ ಎಮ್ಮೆಗೂ ಅಗತ್ಯವಾದ ಹತ್ತಿಯನ್ನು ಶೇಖರಿಸಿ ಇಡುವುದರಲ್ಲಿ ಯಾವ ಸಂಶಯವೂ ಇಲ್ಲ. ಹತ್ತಿ ನೂಲಾಗಿ ದಪ್ಪನೆ ಬೆಚ್ಚನೆ ದುಪ್ಪಟಿಯಾಗುತ್ತದೆ; ಹತ್ತಿಯ ಕಾಳು, ಸುಖಜೀವಿಗಳಾದ ಪಟ್ಟಣವಾಸಿಗಳ ಬೊಜ್ಜು ಬೆಳೆಯಿಸಲು ಬೆಣ್ಣೆಯಾಗುತ್ತದೆ. ನಂಜನಗೂಡಿನ ಖಾದಿ ಮತ್ತು ಬೆಣ್ಣೆ ಇವುಗಳಲ್ಲಿ ಬೆಂಗಳೂರು ನಿವಾಸಿಗಳಿಗೆ ಯಾವುದು ಹೆಚ್ಚು ಹಿತಕರವಾಗುತ್ತದೆಯೋ ನಾನರಿಯೆ.

ಇನ್ನು ಕೆಲವು ದಿವಸಗಳಲ್ಲಿ ಗಂಡ್ಲುಪೇಟೆಯ ವಿಭಾಗಕ್ಕೆ ಹೋಗುವವರಿದ್ದೇವೆ. ಹಿಂತಿರುಗಲು ಒಂದು ವಾರವಾದೀತು.

*(ಯಂಗ್ ಇಂಡಿಯಾ : ೧೨-೧-೧೯೨೮)*

**ಮೈಸೂರಿನಲ್ಲಿ ಕೈನೂಲು :**

ಮೈಸೂರು ರಾಜ್ಯ ಕ್ರಮಬದ್ಧವಾಗಿ ಕೈಯಿಂದ ನೂಲುವುದಕ್ಕೆ ಕೊಟ್ಟಿರುವಷ್ಟು ಪ್ರೋತ್ಸಾಹ ಭಾರತದ ಬೇರೆ ಯಾವ ಸಂಸ್ಥಾನವೂ ಕೊಟ್ಟಿರುವುದಿಲ್ಲ. ಮೈಸೂರು ಸಂಸ್ಥಾನದ ಕೈಗಾರಿಕೆ ಇಲಾಖೆಯ ಡೈರೆಕ್ಟರಾದ ಶ್ರೀ ಸಿ.ರಂಗನಾಥರಾವ್ ಸಾಹೇಬ ಅವರು ರಾಜ್ಯ ಸರ್ಕಾರದಿಂದ ನೇಮಿತವಾಗಿರುವ ಕೈನೂಲು ಉಪಸಮಿತಿಯ ಮುಂದಿಡಲು ವರದಿಯೊಂದನ್ನು ಸಿದ್ಧಗೊಳಿಸಿದ್ದಾರೆ. ಅವರ ವರದಿಯ ಪೂರ್ಣಪಾಠ ವನ್ನು ಇಲ್ಲಿ ಕೊಡುತ್ತೇನೆ:

"ನಮ್ಮ ರೈತರು ಕೈಯಿಂದ ನೂಲುವುದನ್ನು ಒಂದು ಉಪ ಉದ್ಯಮವಾಗಿ ಮಾಡಿಕೊಳ್ಳ ಬಹುದು ಎಂಬುದರ ಸಾಧ್ಯಾಸಾಧ್ಯತೆಯನ್ನು ನಂಜನಗೂಡಿನಿಂದ ದಕ್ಷಿಣಕ್ಕೆ ಏಳು ಮೈಲಿಗಳ ಅಂತರದಲ್ಲಿರುವ ಬದನವಾಳಿಯಲ್ಲಿ ತೀವ್ರ ಪರಿಶ್ರಮದಿಂದ ನಿರ್ಧರಿಸುವ ಪ್ರಯತ್ನ ನಡೆಯುತ್ತಿದೆ. ಬದನವಾಳ ಮತ್ತು ಅದರ ಸುತ್ತಮುತ್ತಲಿನ ಗ್ರಾಮಗಳು ಇಂಥ ಪರೀಕ್ಷೆ ಕೈಗೊಳ್ಳಲು ಬಹಳ ಅನುಕೂಲವಾಗಿದೆ. ಇಲ್ಲಿನ ರೈತರು ಸ್ಥಳೀಯ ನಮೂನೆಯ ಹತ್ತಿ ಬೆಳೆಯುತ್ತಾರೆ. ಬಹುಜನ ರೈತ ಕಡುಬಡವರು. ಭೂ ಸಾಗುವಳಿ ಮಾಡುತ್ತಿರುವ ಸಮಯ ಹೊರತುಪಡಿಸಿ ಮಿಕ್ಕಕಾಲದಲ್ಲಿ ರೈತರಿಗೆ ಪೂರ್ಣವಿರಾಮ ವಿರುತ್ತದೆ. ಹೆಸರು ಹೇಳುವಂಥ ಯಾವ ಉದ್ಯೋಗವನ್ನೂ ಅವನು ಮಾಡುವುದಿಲ್ಲ. ಸುಮಾರು ೨೦ ವರ್ಷಗಳ ಅವಧಿಯೊಳಗೆ ಕೈಯಿಂದ ನೂಲುವುದು ನಶಿಸಿ ಹೋಯಿತು. ಅನೇಕ ಮುದುಕಿಯರು ತಮ್ಮ ಬಾಲ್ಯದಲ್ಲಿ ಕೈಯಿಂದ ನೂಲು ತೆಗೆಯುತ್ತಿದ್ದದನ್ನು ಮರೆತಿಲ್ಲ. ಅವರು ಉಪಯೋಗಿಸುತ್ತಿದ್ದ ರಾಟೆಗಳು ಇನ್ನೂ ಅಟ್ಟದ ಮೇಲೆ ಹಾಗೆಯೇ ಇವೆ. ನೂಲು ಕೊಳ್ಳುವವರೇ ಇಲ್ಲದೇ ಹೋದುದರಿಂದ ಈ ಉದ್ಯೋಗ ನಿಂತು ಹೋಯಿತು. ಕೆಲವು ಆದಿಕರ್ನಾಟಕರು ಬಟ್ಟೆ ನೇಯುತ್ತಾರೆ. ಆದರೆ ಇದಕ್ಕೆ ಅವರು ಗಿರಣಿ ನೂಲನ್ನು ಬಳಸುತ್ತಾರೆ.

"ಇಲ್ಲಿ ಪ್ರಾಯೋಗಿಕವಾಗಿ ತೀವ್ರ ಕ್ರಮ ಕೈಗೊಳ್ಳಬೇಕೆಂದು ನಿರ್ಧರಿಸಲಾಯಿತು. ಅಖಿಲ ಭಾರತ ಚರಖಾ ಸಂಘದ ಕಾರ್ಯದರ್ಶಿಗಳಿಂದ ಒಂದು ಯೋಜನೆ ಇದಕ್ಕಾಗಿ ತರಿಸಿಕೊಳ್ಳಲಾಯಿತು. ಶಿಕ್ಷಿತರಾದ ಒಬ್ಬ ಕಾರ್ಯಕರ್ತರನ್ನು ನಮಗೆ ಕೊಟ್ಟಿದ್ದು ಮಾತ್ರ ವಲ್ಲದೆ, ಇಲ್ಲಿ ಸಿದ್ಧವಾದ ಬಟ್ಟೆಯನ್ನು ಮಾರಾಟ ಮಾಡಿಕೊಡಲೂ ಅವರು ಒಪ್ಪಿಕೊಂಡರು. ಹತ್ತಿ ಕೊಳ್ಳಲು ಮತ್ತು ನೂಲುವರಿಗೂ ನೇಕಾರರಿಗೂ ಮುಂಗಡ ಹಣ ಕೊಡಲು ೩,೫೦೦ ರೂ.ಗಳು ಮಂಜೂರಾಯಿತು. ಸಿಬ್ಬಂದಿ ಖರ್ಚಿಗಾಗಿ ೧,೭೨೫ ರೂ.ಗಳ ನಿಧಿ ಪ್ರತ್ಯೇಕವಾಗಿ ತೆಗೆದಿಡಲ್ಪಟ್ಟಿತು. ಪ್ರಾರಂಭದಲ್ಲಿ ಈ ಪ್ರಯೋಗವನ್ನು ಕೈಗೊಳ್ಳುವುದರ

ಪರಿಣಾಮವಾಗಿ ೫೦೦ ರೂ.ಗಳ ನಷ್ಟ ಸಂಭವಿಸಬಹುದೆಂದು ನಿರೀಕ್ಷಿಸಿ, ಅದಕ್ಕಾಗಿ ಪ್ರತ್ಯೇಕ ವ್ಯವಸ್ಥೆ ಮಾಡಲಾಯಿತು. ಚಾಲ್ತಿವೆಚ್ಚದ ಮೂಲಧನವನ್ನು ಸರ್ಕಾರದವರು ೧,೦೦೦೦ಕ್ಕೆ ಹೆಚ್ಚಿಸಿದರು.

ಅಖಿಲ ಭಾರತ ನೂಲುವವರ ಸಂಘದಿಂದ ಕಳುಹಿಸಲ್ಪಟ್ಟ ಕಾರ್ಯಕರ್ತರು ನವೆಂಬರ್ ೧,೧೯೨೭ರಲ್ಲಿ ಕೆಲಸ ಪ್ರಾರಂಭಿಸಿದರು. ಅರವತ್ತೆರಡು ನೂಲುವವರು ಬಹುತೇಕ ಆದಿಕರ್ನಾಟಕ ನೇಕಾರರು–ತಮಗೆ ಹತ್ತಿ ಕೊಟ್ಟು, ತಮ್ಮ ನೂಲು ಕೊಳ್ಳುವ ಭರವಸೆ ದೊರೆತರೆ ತಮ್ಮ ಚರಖಾಗಳನ್ನು ತಿರಿಗಿಸುವ ಭರವಸೆಯಿತ್ತರು. ವಿಶೇಷ ಕಾರ್ಯಕರ್ತ ಕೆಲಸ ಮಾಡುವುದಕ್ಕೇ ಬಂದಿರುತ್ತಾರೆ ಎಂದು ಅವರಿಗೆ ವಿಶ್ವಾಸ ಮೂಡುತ್ತಲೇ, ಸುತ್ತ ಮುತ್ತಲಿನ ಗ್ರಾಮಗಳಿಗೂ, ನೂಲುವದು ತೀವ್ರಗತಿಯಲ್ಲಿ ಹಬ್ಬಿತು. ಮೊದಲ ಮೂರು ತಿಂಗಳಲ್ಲಿ ೫೦೦ ಪೌಂಡು ನೂಲು ತಯಾರಿಸಲ್ಪಟ್ಟಿತು. ಮತ್ತು ಇದೇ ಅವಧಿಯಲ್ಲಿ ರಾಟೆಗಳ ಸಂಖ್ಯೆ ೩೯೮ ಆಯಿತು. ಮುಂದಿನ ಮೂರು ತಿಂಗಳಲ್ಲಿ ೭೪೦ ಪೌಂಡು ನೂಲು ಸಿದ್ಧವಾಯಿತು ಮತ್ತು ಚರಕಗಳ ಸಂಖ್ಯೆ ೫೦೦ಕ್ಕೆ ಏರಿತು. ಜೂನ್ ೧೯೨೮ರ ಅವಧಿಯ ಕೊನೆಗೆ ರಾಟೆಗಳ ಸಂಖ್ಯೆ ಒಂದು ಸಾವಿರಕ್ಕೆ ಏರಿತು. ಈ ಕೇಂದ್ರ ಪ್ರಾರಂಭವಾದಂದಿನಿಂದ ಆಗಸ್ಟ್ ೧೯೨೮ಕ್ಕೆ ಅಂತ್ಯವಾದ ಹತ್ತು ತಿಂಗಳ ಅವಧಿಯಲ್ಲಿ ೭೭೪೪ ಪೌಂಡು ಪರಿಣತಿ ಪಡೆದವರಿಗೆ ಅರಳೆ ಕೊಡುತ್ತಿದ್ದ ಪದ್ಧತಿಯನ್ನು ತಪ್ಪಿಸಲಾಯಿತು. ನೂಲುವವರೇ ಹತ್ತಿ ಕೊಳ್ಳಬೇಕೆಂದು ತಿಳಿಸಲಾಯಿತು. ಮೇ ೧೯೨೮ರಂದು ಮುಂಗಡ ಹಣ ಕೊಡುವುದನ್ನು ನಿಲ್ಲಿಸಲಾಯಿತು. ಪ್ರಾರಂಭದಲ್ಲಿ ಒಂದು ಒರಟಾದ ಆರರಿಂದ ಎಂಟು ನಂಬರಿನ ೧೩ ತೊಲಿ ತೂಗುವ ನೂಲಿನ ಉಂಡೆಯನ್ನು ನಾಲ್ಕಾಣೆ ದರಕ್ಕೆ ಕೊಳ್ಳಲಾಗುತ್ತಿತ್ತು. ಉತ್ತಮದರ್ಜೆ ನೂಲು ನೂಲುವುದನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ನೂಲು ತೂಗಿ ಕೊಳ್ಳುವುದನ್ನು ತಪ್ಪಿಸಿ ಉದ್ದ ಮತ್ತು ನಂಬರಿನ ಮೇಲೆ ತೂಗಿಕೊಳ್ಳುವುದನ್ನು ಆಚರಣೆಗೆ ತರಲಾಗಿದೆ. ಈಗ ೧೦ರಿಂದ ೧೩ ನಂಬರಿನ ದರ್ಜೆಯ ನೂಲು ಬರುತ್ತಿದೆ.

"ಹೀಗೆ ಕೆಲಸವಿಲ್ಲದ ಕಾಲದಲ್ಲಿ ನೂಲು ನೂಲುವುದರಿಂದ ತಿಂಗಳೊಂದಕ್ಕೆ ಸರಾಸರಿ ೨ ಪೌಂಡು ನೂಲು ಪ್ರತಿಯೊಬ್ಬರೂ ನೂಲುತ್ತಾರೆ. ಇದರಿಂದ ಅವರಿಗೆ ಪ್ರತಿದಿನ ಮುಕ್ಕಾಲರಿಂದ ಒಂದು ಆಣೆಯವರೆಗೆ ವರಮಾನ ದೊರೆಯುತ್ತದೆ. ದೊರೆಯುವ ವರಮಾನ ಇಷ್ಟು ಅಲ್ಪವೆಂದು ತೋರಿದರೂ ಸುಮಾರು ೧೦೦೦ ಜನ ಇದಕ್ಕಾಗಿ ದಿನ ವೊಂದಕ್ಕೆ ಮೂರು ನಾಲ್ಕು ತಾಸುಗಳ ಕಾಲ ವಿನಿಯೋಗಿಸುವುದ ಲಾಭದಾಯಕ ವೆಂದೇ ಪರಿಗಣಿಸುತ್ತಾರೆ.

"ಇತ್ತ ನೂಲು ತಯಾರಾಗುತ್ತಿದ್ದಂತೆ ಇದೇ ನೂಲಿನಿಂದ ಬದನವಾಳದಲ್ಲಿ ಬಟ್ಟೆ ನೇಯುವ ವ್ಯವಸ್ಥೆ ಮಾಡಲಾಯಿತು. ಪ್ರಾರಂಭದಲ್ಲಿ ಟವಲುಗಳನ್ನು ಮಾತ್ರ ಈ ನೂಲಿನಿಂದ ತಯಾರಿಸುವುದಕ್ಕೆ ಬರುತ್ತಿತ್ತು. ತೆಳ್ಳನೆಯ ನೂಲು ತಯಾರಾಗುತ್ತಿದ್ದಂತೆ

ಷರಟು, ಕೋಟು, ರುಮಾಲು ಇವುಗಳಿಗೆ ಯೋಗ್ಯವಾದ ಅರಿವೆ ತಯಾರಿಕೆಗೆ ಮೊದಲಾಯಿತು. ಈ ಕೇಂದ್ರದಿಂದ ದೊರೆಯುತ್ತಿರುವ ನೂಲಿನಿಂದ ಬಟ್ಟೆ ತಯಾರಿಸಲು ೬೨ ಕೈಮಗ್ಗಗಳು ಕೆಲಸ ಮಾಡುತ್ತಿವೆ. ಎಲ್ಲ ಬಗೆಯ ಬಟ್ಟೆ ತಯಾರಾಗುತ್ತಿದೆ. ಜೂನ್ ೧೯೨೮ಕ್ಕೆ ಕೊನೆಗೊಂಡ ಅವಧಿಯಲ್ಲಿ ರೂ. ೩,೭೪೧ ಬೆಲೆ ಬಾಳುವ ೩೦೨೮ ಪೌಂಡು ತೂಗುವ ೯೨೦೦ ಗಜ ಅಳತೆಯ ಖಾದಿ ಸಿದ್ಧವಾಯಿತು. ೧೯೨೮ ಜುಲೈ ಮತ್ತು ಆಗಸ್ಟ್ ತಿಂಗಳಲ್ಲಿ ರೂ. ೩,೩೭೨ ಖಾದಿ, ಎಂದರೆ ತಿಂಗಳಿಗೆ ಸರಾಸರಿ ರೂ.೧,೬೮೬ಗಳ ಖಾದಿ ತಯಾರಾಯಿತು.

"ಜೂನ್ ಅಂತ್ಯಕ್ಕೆ ಕೊನೆಗೊಂಡ ಅವಧಿಯಲ್ಲಿ ರೂ. ೩,೭೭೭ ಬೆಲೆ ಬಾಳುವ ಖಾದಿ ಮಾರಾಟವಾಯಿತು. ಇದರಲ್ಲಿ ರೂ. ೭೧೪ ಬೆಲೆ ಬಾಳುವ ಬಟ್ಟೆ ಸ್ಟೋರ್ ಪರ್ಚೇಸ್ ಕಮಿಟಿಯ ಮೂಲಕ ಮಾರಲಾಯಿತು. ಸದ್ಯಕ್ಕೆ ಸ್ಟೋರ್ಸ್ ಪರ್ಚೇಸ್ ಕಮಿಟಿಯವರು ೧೫೦೦೦ ಗಜಗಳ ಎರಡು ಎಳೆ ದಾರದ (ಗಿಂಟ) ಕೋಟಿನ ಬಟ್ಟೆಗೂ, ೬೦೦ ಪೇಟಾಗಳಿಗೂ ಕೋರಿಕೆ ಸಲ್ಲಿಸಿದ್ದಾರೆ. ಕೇಂದ್ರದ ತಯಾರಿಕೆಯಲ್ಲಿ ಸುಮಾರು ಅರ್ಧ ಅಂಶದಷ್ಟು ಖಾದಿಯನ್ನು ಈ ಸಮಿತಿಯೇ ಖರೀದಿ ಮಾಡುತ್ತಿದೆ.

"ನೇಕಾರರ ವರಮಾನದ ಅಂಕಿ ಸಂಖ್ಯೆಗಳನ್ನು ಜಾಗರೂಕತೆ ವಹಿಸಿ ಇಡಲಾಗುತ್ತದೆ. ಸರಿ ಸುಮಾರು ತಿಂಗಳೊಂದಕ್ಕೆ ಅವರು ೭೨ ಗಜ ಬಟ್ಟೆ ನೇಯುತ್ತಾ, ತಿಂಗಳಿಗೆ ರೂ. ೭ ಗಳಿಸುತ್ತಿದ್ದಾರೆ. ದಿನವೂ ಅವರು ಎರಡು ಮೂರು ತಾಸು ಕೆಲಸ ಮಾಡುತ್ತಾರೆ. "ಜೂನ್ ೧೯೨೮ಕ್ಕೆ ಕೊನೆಗೊಂಡ ಅವಧಿಯ ಲಾಭ ನಷ್ಟದ ತಃಖ್ತೆ ತಯಾರಾಯ್ತು. ಚಾಲ್ತಿ ವೆಚ್ಚದ ನಿಧಿ ಕುಗ್ಗದೆ ರೂ. ೧೫೨ ಅಧಿಕವಾಗಿರುವುದು ಕಂಡುಬಂದಿತು. ರೂ. ೫೦೦ ನಷ್ಟವಾದೀತು ಎಂದು ಮಾಡಿದ್ದ ಅಂದಾಜು ಸುಳ್ಳಾಯಿತು.

"ಈ ಪ್ರಯೋಗದಲ್ಲಿ ಅಡಕವಾಗಿರುವ ಸಿದ್ಧಾಂತಗಳು ತುಂಬ ಮಹತ್ವದ್ದಾಗಿರುವುದರಿಂದ, ಪ್ರಾರಂಭದಲ್ಲಿ ಆಗಬಹುದಾದ ಹಲವು ರೂಪಾಯಿಗಳ ಲಾಭ ಅಥವಾ ನಷ್ಟ ಅಷ್ಟೇನೂ ಗಣನೀಯವಾಗದು. ನಮ್ಮ ಗ್ರಾಮಗಳ ಪುನರುದ್ಧಾರವಾಗಬೇಕಾದರೆ ವಿರಾಮ ಕಾಲದಲ್ಲಿ ಅವರು ಮಾಡಬಹುದಾದ ಲಾಭದಾಯಕ ಉಪಕಸುಬನ್ನು ಒದಗಿಸಿಕೊಡುವುದು ಅತ್ಯಗತ್ಯ. ರೈತರು ವಿರಾಮ ವೇಳೆಯನ್ನು ಲಾಭದಾಯಕವಾಗಿ ಉಪಯೋಗಿಸಿಕೊಳ್ಳಲು ಅವರಿಗೊಂದು ಉಪಕಸುಬು ಕಲ್ಪಿಸಿಕೊಡುವುದು ಅತ್ಯಗತ್ಯವೆಂದು ವ್ಯವಸಾಯ ತಜ್ಞರ ಮಂಡಲಿಯ ಅಭಿಪ್ರಾಯ ಪಡುತ್ತದೆ. ಆದರೆ ಯಾವ ಕಸಬು ಯೋಗ್ಯ ಎಂದು ಮಾತ್ರ ಸೂಚಿಸುತ್ತಿಲ್ಲ. ನೂಲುವದರಿಂದ ಬರುವ ವರಮಾನ ಕೇವಲ ಅಲ್ಪವಾಗಿರುವದರಿಂದ ಇದನ್ನು ಅವರು ತಮ್ಮ ವರದಿಯಲ್ಲಿ ಸೂಚಿಸಿರಲಿಕ್ಕಿಲ್ಲ. ಆದರೆ ನಮ್ಮ ದೇಶದ ಪರಿಸ್ಥಿತಿಯೇ ವಿಚಿತ್ರವಿದೆ. ಗ್ರಾಮೀಣರಲ್ಲಿ ಬಹು ಜನರಿಗೆ ಬಹುತೇಕ ನೂಲುವದರಿಂದ ದೊರೆಯುವ ಅಲ್ಪ ವರಮಾನವು ಕೂಡ ಉದ್ಯೋಗದಲ್ಲಿ ತೊಡಗಲು ಅವರಿಗೆ ಸಾಕಷ್ಟು ಪ್ರೋತ್ಸಾಹದಾಯಕವಾಗಿದೆ. ಅವರ ಮುಖ್ಯ ಉದ್ಯೋಗಕ್ಕೆ ಸ್ವಲ್ಪವೂ

ಅಡಚಣೆಯಾಗದಂತೆ ಅತ್ಯಲ್ಪ ಶ್ರಮದಿಂದ ಅತಿ ಸುಲಭದಲ್ಲಿ ಅಭ್ಯಾಸ ಮಾಡಿಕೊಳ್ಳ ಬಹುದಾದ ಕಸುಬು ನೂಲುವದನ್ನು ಬಿಟ್ಟರೆ ಬೇರೊಂದಿಲ್ಲ. ನಗರವಾಸಿಗಳ ದೃಷ್ಟಿಯಿಂದ ನೂಲುವುದರಲ್ಲಿ ದೊರೆಯುವ ವರಮಾನ ಅಗಣನೀಯ. ಆದರೂ ಇದಕ್ಕೂ ಹೆಚ್ಚು ಲಾಭದಾಯಕವಾದ ಉದ್ಯೋಗ ಕಲ್ಪಿಸಿಕೊಡುವುದು ದಡ್ಡತನವಾದೀತು. ನೂಲುವುದ ಕ್ಕಿಂತಲೂ ಹೆಚ್ಚು ಲಾಭದಾಯಕವಾದ ಬೇರೊಂದು ಉಪ-ಉದ್ಯೋಗ ಸ್ಥಾಪಿಸುವುದು ಶಕ್ಯವಾದಲ್ಲಿ ನೂಲುವದನ್ನು ಆಚರಣೆಗೆ ತರುವುದು ಅಸಂಭವ ಮತ್ತು ಅದನ್ನು ಪ್ರೋತ್ಸಾಹಿಸುವುದೂ ಯೋಗ್ಯವಲ್ಲ. ಆದರೆ ಇದಕ್ಕಿಂತ ಅನುಕೂಲವಾದ ಉಪವೃತ್ತಿ ದುರ್ಲಭವಾದ ಕೇಂದ್ರಗಳಲ್ಲಿ ನೂಲುವುದಕ್ಕೆ ಪ್ರೋತ್ಸಾಹ ದೊರೆಯಲೇಬೇಕು. ಬದನವಾಳ ಕೇಂದ್ರಗಳಲ್ಲಿ ಹತ್ತು ತಿಂಗಳಕಾಲ ರಾಟೆಯಿಂದ ನೂಲು ತೆಗೆಯುವ ಪ್ರಯೋಗ ನಡೆಸಿದ್ದರಲ್ಲಿ, ದೊಡ್ಡ ಗಾಲಿಯ ರಾಟೆ ಮತ್ತು ಉದ್ದನೆ ಎಳೆಯ ಅರಳೆಯಿಂದ ಉತ್ತಮ ಸಣ್ಣ ನೂಲು ತೆಗೆಯುವುದು ಸಾಧ್ಯವೆಂದು ಗೊತ್ತಾಗಿದೆ. ಸುಧಾರಿತ ರಾಟೆಗಳನ್ನು ಬಳಕೆಗೆ ತರಲಾಗುತ್ತಿದೆ. ನಮ್ಮ ವ್ಯವಸಾಯ ಇಲಾಖೆ ಕಂಡುಹಿಡಿದಿರುವ ನೂತನ ಬಗೆಯ ಹತ್ತಿಯ ಕಾಳನ್ನು ಬರುವ ಋತುವಿನಲ್ಲಿ ಬಿತ್ತಲಾಗುವುದು. ಸಣ್ಣ ನೂಲು ತಯಾರಿಸಲು ಆತಂಕವೆಂದರೆ ಅರಳೆಯನ್ನು ಚೆನ್ನಾಗಿ ಹಿಂಜಿ ಹಂಜಿಗಳನ್ನು ಮಾಡದೆ ಇರುವುದು. ಸರ್ಕಾರಿ ನೇಯ್ಗೆ ಕಾರ್ಖಾನೆಯಲ್ಲಿ ಹಂಜಿ ಮಾಡುವ ತಕ್ಕ ಯಂತ್ರವನ್ನು ಸಿದ್ಧಗೊಳಿಸಲಾಗುತ್ತಿದೆ. ಇದರಿಂದ ಮೇಲ್ಕಂಡ ದೋಷವನ್ನು ಬೇಗನೆ ನಿವಾರಿಸಬಹುದು. ಈ ಸುಧಾರಣೆಗಳನ್ನು ಜಾರಿಗೆ ತಂದಮೇಲೆ ೨೫ರಿಂದ ೩೦ ನಂಬರಿನ ನೂಲು ನೂಲುವುದು ಸಾಧ್ಯವಾಗಿದೆ. ಈ ಕೈಗಾರಿಕೆಯನ್ನು ಭದ್ರವಾದ ಬುನಾದಿಯ ಮೇಲೆ ಸ್ಥಾಪಿಸಲು ಸಾಧ್ಯವಾಗಬಹುದು. ಈ ಟಿಪ್ಪಣಿ ಓದಿದ ಮೇಲೆ, ಉಪಸಮಿತಿ ಕೆಳಕಂಡಂತೆ ನಿರ್ಣಯ ಮಾಡಿತು :-

೧. ಈ ಟಿಪ್ಪಣಿಯಲ್ಲಿ ಸೂಚಿತವಾಗಿರುವಂತೆ ಬದನವಾಳಿಯಲ್ಲಿ ನಡೆಯುತ್ತಿರುವ ಕೆಲಸವನ್ನು ಟಿಪ್ಪಣಿಯಲ್ಲಿ ಸೂಚಿತವಾಗಿರುವ ರೀತಿಯಲ್ಲಿ ಮುಂದುವರಿಸಿಕೊಂಡು ಬರತಕ್ಕದ್ದು.

೨. ಈ ಟಿಪ್ಪಣಿಯನ್ನು ಎಲ್ಲ ಡೆಪ್ಯೂಟಿ ಕಮೀಶನರುಗಳಿಗೂ ಕಳುಹಿಸಿಕೊಟ್ಟು, ಇದೇ ರೀತಿಯ ಕೇಂದ್ರಗಳನ್ನು ತಮ್ಮ ತಮ್ಮ ಜಿಲ್ಲೆಗಳಲ್ಲಿ ಸ್ಥಾಪಿಸಿ ಕೆಲಸ ನಡೆಸಿಕೊಂಡು ಬರಲು ಸೂಕ್ತ ಕೇಂದ್ರಗಳನ್ನು ಗೊತ್ತುಮಾಡುವಂತೆ ಪ್ರಾರ್ಥಿಸಿ ಕೊಳ್ಳುವುದು.

"ಜಿಲ್ಲೆಯ ಎಕನಾಮಿಕ್ ಸೂಪರಿಂಟೆಂಡೆಂಟರು ಬದನವಾಳ ಕೇಂದ್ರಕ್ಕೆ ಭೇಟಿಯಿತ್ತು ಪ್ರತಿಯೊಂದು ಜಿಲ್ಲೆಯಲ್ಲಿ ತದನುಸಾರವಾದ ಕೇಂದ್ರಗಳನ್ನು ಸ್ಥಾಪಿಸುವಂತೆ ಅವರಿಗೆ ಜವಾಬ್ದಾರಿ ವಹಿಸಿ ಕೊಡಬೇಕು. ಈ ಕೇಂದ್ರಗಳಲ್ಲಿ ಕೆಲಸ ನಿರ್ವಹಿಸಲು ಬದನವಾಳಿನಲ್ಲಿ ಶಿಕ್ಷಣ ಪಡೆದ ನೂಲುವ ಶಿಕ್ಷಕರನ್ನು ಬಳಸಿಕೊಳ್ಳತಕ್ಕದ್ದು. ಹೀಗೆಂದು ಉಪಸಮಿತಿ ಅಭಿಪ್ರಾಯ ಪಡುತ್ತದೆ"

ದೇಶದ ಅತಿ ಪ್ರಮುಖವಾದ ಈ ಗ್ರಾಮೋದ್ಯೋಗವನ್ನು ಡೈರೆಕ್ಟರ್ ಮತ್ತು ಉಪಸಮಿತಿ ಬಹಳ ತೃಪ್ತಿಕರವಾದ ರೀತಿಯಲ್ಲಿ ಕೂಲಂಕಷವಾಗಿ ವಿಚಾರಮಾಡಲು ಕ್ರಮ ಕೈಗೊಳ್ಳುತ್ತಿರುವುದಕ್ಕಾಗಿ ಇವರೆಲ್ಲರನ್ನೂ ನಾನು ಅಭಿನಂದಿಸುತ್ತೇನೆ. ತಮ್ಮ ವರದಿ ಒಪ್ಪಿಸುವುದರಲ್ಲಿ ಡೈರೆಕ್ಟರ್‌ರು ಬಹಳ ಎಚ್ಚರಿಕೆಯಿಂದಿರುವುದು ಸಹಜ. ನೂಲುವ ವ್ಯವಸ್ಥೆ ಮಾಡುವುದರಲ್ಲಿ ಹೆಜ್ಜೆ ಹೆಜ್ಜೆಗೂ ತುಂಬ ಎಚ್ಚರಿಕೆ ವಹಿಸಿ, ದೂರಾಲೋಚನೆಯಿಂದ ಅಡಿಯಿಡುತ್ತಿರುವುದೂ ಸಹಜವೇ. ಪ್ರಾರಂಭದಿಂದಲೇ ಮೂಲಧನ ನಷ್ಟವಾಗದಂತೆ ಕೆಲಸ ಸಾಗಿಸಿಕೊಂಡು ಬರಲು ಇಲಾಖೆಗೆ, ತತ್ಪರಿಣಾಮವಾಗಿ ಸಾಧ್ಯವಾಗಿರುತ್ತದೆ. ಅಖಿಲ ಭಾರತ ಚರಖಾ ಸಂಘದ ಅನುಭವದ ಪ್ರಯೋಜನ ಪಡೆಯುವುದು ತಮ್ಮ ಗೌರವಕ್ಕೆ ಕಡಿಮೆ ಎಂದು ಇವರು ತಿಳಿಯಲಿಲ್ಲ, ಮತ್ತು ಅವರಿಂದ ಕೊಡಲ್ಪಟ್ಟ ತಾಂತ್ರಿಕ ನೆರವನ್ನು ನಿರ್ಲಕ್ಷಿಸಲಿಲ್ಲ. ರಾಟೆಯನ್ನು ಬಳಕೆಗೆ ತರಬೇಕಾದ ಪ್ರದೇಶ ಬಹಳ ವಿಶಾಲ ವಾಗಿದೆ. ಆದ್ದರಿಂದ ಈ ಕ್ಷೇತ್ರ ಅನೇಕ ಕಾರ್ಯಕರ್ತರ ಲಕ್ಷ್ಯವನ್ನು ಸೆಳೆದಿದೆ. ಗ್ರಾಮದಲ್ಲಿ ಬಳಸಲು ಯೋಗ್ಯವಾದ ಹಿಂಜುವ ಯಂತ್ರ ನಿರ್ಮಾಣದ ಪ್ರಯೋಗಗಳು ಯಶಸ್ವಿ ಆಗಲಿ ಎಂದು ನಾನು ಆಶಿಸುತ್ತೇನೆ. ಈ ಯಂತ್ರವನ್ನು ಹಳ್ಳಿಯವರೇ ನಡೆಸಿಕೊಳ್ಳುವಂತಿರ ಬೇಕು, ಹಾಗಿದ್ದರೆ ಮಾತ್ರವೇ ಅದು ಯಶಸ್ವಿಯಾದೀತು. ನಮ್ಮ ಗ್ರಾಮಗಳಲ್ಲಿ ಬಳಕೆ ಯಲ್ಲಿರುವ ಎಕ್ಕುಬಿಲ್ಲನ್ನು (ಪಿಂಜಣ) ಸುಧಾರಿಸುವುದು ಸಾಧ್ಯವಿಲ್ಲವೆಂದು ನನ್ನ ನಮ್ರ ಅಭಿಪ್ರಾಯ. ಮೂಲ ಧನುಸ್ಸಿನಲ್ಲಿ ಕೆಲವು ಸಣ್ಣ ಬದಲಾವಣೆಗಳನ್ನು ಮಾಡಬೇಕೆಂದು ಅಖಿಲ ಭಾರತ ಚರಖಾ ಸಂಘದವರು ಪ್ರಯತ್ನಿಸಿದರು. ಧನುಸ್ಸಿನ ಉದ್ದೇಶವೇನಿತ್ತು. ಎಂಬುದನ್ನು ನಾವು ಮನಸ್ಸಿಗೆ ತಂದುಕೊಂಡರೆ, ಮೂಲದಲ್ಲಿ ಬದಲಾವಣೆ ಮಾಡುವುದು ಅಸಾಧ್ಯವೆನಿಸುತ್ತದೆ. ಎಕ್ಕ ಬೇಕಾದ ಅರಳೆ ಸ್ವಚ್ಛವಾಗಿದ್ದಲ್ಲಿ ಧನುಸ್ಸಿನಿಂದ ಅರಳೆ ಎಕ್ಕುವುದು ಸುಲಭ, ಸರಳ ಮತ್ತು ಬೇಗವೂ ಆಗುತ್ತದೆ. ಕೋಮಲ ಶರೀರವುಳ್ಳ ಸ್ತ್ರೀ–ಪುರುಷರೂ ಈ ಕೆಲಸ ಕೈಗೊಳ್ಳಬಹುದು. ಮೂವತ್ತನೇ ನಂಬರು ನೂಲು ಒಂದು ಗಂಟೆಕಾಲ ನೂಲಲು ಅಗತ್ಯವಾದ ಹಂಜಿಯನ್ನು ಎಕ್ಕಿ ತಯಾರಿಸಲು ಐದು ನಿಮಿಷಗಳಿಗಿಂತಲೂ ಹೆಚ್ಚಿನ ಸಮಯ ಬೇಕಾಗುವುದಿಲ್ಲವೆಂದು ನನ್ನ ಅನುಭವ. ಮೂವತ್ತನೇ ನಂಬರಿನ ಅರ್ಧತೊಲದಲ್ಲಿ ೩೨೦ ಗಜಗಳ ನೂಲಿರುತ್ತದೆ. ಇದು ನುರಿತ ನೂಲುವವನ ಉತ್ತಮ ಸರಾಸರಿ ವೇಗ. ಅರ್ಧತೊಲ ಅರಳೆ ಎಕ್ಕಲು ಸುಮಾರಾಗಿ ಪರಿಶ್ರಮ ಪಡೆದ ಎಕ್ಕುವವನಿಗೆ ಐದು ನಿಮಿಷಗಳಿಗಿಂತ ಹೆಚ್ಚು ಕಾಲ ಅನಗತ್ಯ. ಡೈರೆಕ್ಟರವರು ಸೂಚಿಸಿರುವ ೧೦೦೦ ನೂಲುವವರು ಅರಳೆಯನ್ನು ಹೊಡೆದು ಹಂಜಿ ಮಾಡುವುದನ್ನು ಕಲಿಯುವಂತೆ ಮಾಡಿದರೆ ಪ್ರತಿ ಗಂಟೆಯ ಅವರ ಕೆಲಸಕ್ಕೆ ಒಂದಿಷ್ಟು ಹೆಚ್ಚು ಹಣ ಗಳಿಸಲು ಅವರಿಗೆ ಸಾಧ್ಯವಾದೀತು. ಏಕೆಂದರೆ ತಮ್ಮ ಹಂಜಿಯನ್ನು ತಾವೇ ಮಾಡಿಕೊಳ್ಳುವ ನೂಲುವವರಿಗೆ, ಇತರರಿಂದ ತಯಾರಿಸಲ್ಪಟ್ಟ ಹಂಜಿಯನ್ನು ಉಪಯೋಗಿಸುವವರಿಗಿಂತ ಸ್ವಲ್ಪ ಹೆಚ್ಚು ವೇತನ ಕೊಡಬಹುದು.

ಮೈಸೂರು ಸರ್ಕಾರದವರು ಕಡುಬಡವರಾದ ರೈತರ ವಿಷಯದಲ್ಲಿ ತೋರುತ್ತಿರುವ

ಉತ್ಸಾಹಕ್ಕಾಗಿ ಅವರನ್ನು ಅಭಿನಂದಿಸುತ್ತಾ ಒಂದು ಮಾತು ಮತ್ತೊಮ್ಮೆ ಅವರ ನೆನಪಿಗೆ ತರಬಯಸುತ್ತೇನೆ. ಮೈಸೂರಿನ ಶ್ರೀಮಂತ ವರ್ಗದ ನಾಗರಿಕರು ಮತ್ತು ಅಧಿಕಾರಿಗಳು, ಈ ಎರಡು ವರ್ಗದವರೂ ಖಾದಿಯನ್ನು ಸ್ವತಃ ಬಳಸದಿದ್ದರೆ, ಮೈಸೂರು ಜನರ ಮನೆಗಳಲ್ಲಿ ಖಾದಿ ಶಾಶ್ವತ ನೆಲೆಸಲಾರದು. ತಾವು ಬಯಸಿದಷ್ಟು ಉತ್ತಮ ಖಾದಿ ಈಗ ಪಡೆಯಲು ಸಾಧ್ಯ ಎಂದೂ ಅವರು ಬಲ್ಲರು. ಉತ್ತಮ ವರ್ಗದವರು ಎಂದು ಹೇಳಿಕೊಳ್ಳುವವರು ನುಡಿದಂತೆ ನಡೆಯುವವರಲ್ಲೆಂದು ಸರಳ ಹಳ್ಳಿಗರು ತಿಳಿದುಕೊಳ್ಳುವಂತೆ ಮಾಡಿ ಅವರನ್ನು ಗೊಂದಲಕ್ಕೆ ಗುರಿಪಡಿಸಬೇಡಿ. ಭಗವದ್ಗೀತೆ ಈ ವಾಕ್ಯಗಳು ಅವರ ನೆನಪಿನಲ್ಲಿರಲಿ.

**"ಯದ್ಯದಾಚರತಿಶ್ರೇಷ್ಠ: । ತತ್ತದೇವೇತರೇ ಜನಾ:॥"**

*(ಯಂಗ್ ಇಂಡಿಯಾ : ೨೯-೧೧-೧೯೨೮)*

(ಕೆಲವರು ಗೆಳೆಯರ ಜೊತೆಯಲ್ಲಿ ಒಂದು ಆಶ್ರಮವನ್ನು ಒಬ್ಬ ಕೆಲಸಗಾರ ಸ್ಥಾಪಿಸಿದ್ದಾನೆ. ಅದರ ಉದ್ದೇಶ ಅವರೆಲ್ಲರೂ ಆದರ್ಶ ರೈತರು ಆಗಬೇಕು ಎಂದು. ಅದಕ್ಕಾಗಿ ಬೇಸಾಯವನ್ನೂ, ನೂಲುಗಾರಿಕೆ, ನೇಕಾರಿಕೆಯನ್ನೂ ಅವಲಂಬಿಸಿದ್ದಾನೆ. ಆಶ್ರಮ ತಕ್ಕಷ್ಟು ಮಟ್ಟಿಗೆ ಸ್ವಸಂಪೂರ್ಣವಾಗಿದೆ. ಶ್ರಮದ ದುಡಿತದಿಂದ ಉತ್ಪಾದನೆ ಮಾಡಿ ಊಟ ಮಾಡಬೇಕು ಎಂಬ ಕಾಯಕದ ತತ್ವವನ್ನು ಅವರು ನಂಬಿದ್ದಾರೆ. ಆಶ್ರಮದಲ್ಲಿ ಹಿಟ್ಟು ಬೀಸುತ್ತಾರೆ. ಆಶ್ರಮದಲ್ಲಿ ಸಕ್ಕರೆ ರುಚಿಯನ್ನೇ ಕಂಡಿಲ್ಲ.

ಆಶ್ರಮ ಪ್ರಾರಂಭವಾದಾಗ ಹರಿಜನ ಸೇವೆ ಮಾಡಿ, ಹಳ್ಳಿಗರ ಸೇವೆ ಸಲ್ಲಿಸಬಹುದು ಎಂದುಕೊಂಡಿದ್ದೆವು. ಇದರ ಜೊತೆಗೆ ತಪೋಜೀವನವನ್ನು ಅವಲಂಬಿಸಿದ್ದರಿಂದ ಆಹಾರದಲ್ಲೂ ಬಹಳ ಮಿತಿ ಆಯಿತು. ತರಕಾರಿಯನ್ನು ಕೂಡ ಹೆಚ್ಚಾಗಿ ಉಪಯೋಗಿಸುತ್ತಿರಲಿಲ್ಲ. ಹಾಲು, ಬೆಣ್ಣೆ, ಮೊಸರು, ತುಪ್ಪಗಳನ್ನು ಶ್ರೀಮಂತಿಕೆ ಎಂದು ಕೈಬಿಟ್ಟರು. ತಿಂಗಳಿಗೆ ಊಟಕ್ಕೆ ಮೂರು ರೂಪಾಯಿ, ಉಳಿದ ವೆಚ್ಚಕ್ಕೆ ಒಂದು ರೂಪಾಯಿ. ಒಟ್ಟಿಗೆ ನಾಲ್ಕು ರೂಪಾಯಿನಲ್ಲಿ ಜೀವನ ನಿರ್ವಾಹ. ಹೀಗೆಂದು ಆಶ್ರಮ ಸಂಚಾಲಕರಾದ ಕರ್ನಾಟಕ ವಿಧಾಯಕ ಕಾರ್ಯಕರ್ತರ ಮುಖಂಡರಾದ ಶ್ರೀ ತಿಮ್ಮಪ್ಪನಾಯಕ ಮಾಸ್ತರರು ಕಿಶೋರಲಾಲಭಾಯಿಗೆ ಬರೆದು ತಿಳಿಸಿದರು. ಈ ಪತ್ರ ಗಾಂಧೀಜಿ ಕೈಗೆ ಹೋಯಿತು. ಅವರು ಹರಿಜನದಲ್ಲಿ ಹೀಗೆ ಬರೆದರು:

**ಒಬ್ಬ ಕೆಲಸಗಾರನ ಹೋರಾಟ :**

ಕಿಶೋರಲಾಲ ಮಶ್ರೂವಾಲಾ ಬರೆದ ಪತ್ರದಿಂದ ಇದನ್ನು ತೆಗೆದುಕೊಂಡಿದ್ದೇನೆ. ಈ ಪತ್ರ ಬರೆದವರು ಉನ್ನತ ವಿದ್ಯೆ ಪಡೆದ, ಸ್ವಾರ್ಥತ್ಯಾಗಿ ಕೆಲಸಗಾರರು ಒಬ್ಬರು. ಒಬ್ಬ ಪ್ರಾಮಾಣಿಕ ಕೆಲಸಗಾರನ ಹೋರಾಟದ ಚಿತ್ರವನ್ನು ಇದಿರಿಗೆಇಟ್ಟು, ಇಂಥ ಸೇವಾಮಯ ಜೀವನ ನಡೆಸುವ ಎಲ್ಲರಿಗೂ ಇದರ ಉಪಯೋಗವಾದೀತೆಂದು ಬಯಸಿದ್ದೇನೆ.

ಈ ಪ್ರಯತ್ನ ಸ್ತುತ್ಯ. ಪತ್ರಲೇಖಕನೂ ಆತನ ಸಹಕಾರ್ಯಕರ್ತರೂ ತಾವು ತಪ್ಪು ಮಾಡಿದೆವು ಎಂದು ತಿಳಿದಾಗ, ಅದನ್ನು ತಿದ್ದಿಕೊಳ್ಳಲು ಹಿಂಜರಿಯುವುದಿಲ್ಲ.

ಈ ಪತ್ರದಿಂದ ಉದ್ಭವಿಸಿದ ಪ್ರಶ್ನೆಗಳಿಗೆ ಕಿಶೋರಲಾಲಭಾಯಿ ಏನು ಉತ್ತರ ಕೊಟ್ಟಿದ್ದಾರೋ ಗೊತ್ತಿಲ್ಲ. ನನ್ನ ಮಟ್ಟಿಗೆ ನಾನು ಕೆಲವು ಮಾತನ್ನು ಹೇಳಿದರೆ ಇದರಿಂದ ಪ್ರಯೋಜನವಾದೀತು ಎಂದು ನಂಬಿದ್ದೇನೆ.

ಬ್ರೆಡ್ ಲೇಬರ್ (ಕಾಯಕದಿಂದ ಊಟ) ತತ್ವದ ಬಗ್ಗೆ ಸ್ವಲ್ಪ ಗೊಂದಲ ಇದೆ ಈ ಪತ್ರದಲ್ಲಿ. ಸಮಾಜ ಸೇವೆಗೂ ಅದಕ್ಕೂ ವಿರೋಧವಿಲ್ಲ. ಬುದ್ಧಿವಂತ ತನದ ಬ್ರೆಡ್ ಲೇಬರ್ ಎಂದಿದ್ದರೂ ಉತ್ತಮ ಸಮಾಜ ಸೇವೆ ದೇಶದ ಸಂಪತ್ತಿಗೆ ತಾನು ಕೈಯಾರೆ ದುಡಿದು, ಅದನ್ನು ಹೆಚ್ಚಿಸುವುದಕ್ಕಿಂತ ಬೇರೆ ಏನಿದೆ ಮನುಷ್ಯ ಮಾಡಬಹುದಾದುದು? ಹಾಗೆ ಮಾಡುವುದರಿಂದಲೇ ಮನುಷ್ಯ.

ಶ್ರಮ ಎಂಬುದಕ್ಕೆ 'ಬುದ್ಧಿವಂತ' ಎಂಬ ವಿಶೇಷಣ ಜೋಡಿಸಿ ಸಮಾಜಸೇವೆ ಆಗಬೇಕಾದರೆ, ಶ್ರಮಕ್ಕೆ ಒಂದು ಸ್ಪಷ್ಟ ಉದ್ದೇಶ ಇರಬೇಕೆಂದು ಹೇಳಲಾಗಿದೆ. ಇಲ್ಲದೇ ಇದ್ದರೆ ಪ್ರತಿಯೊಬ್ಬ ಕೆಲಸಗಾರನೂ ತಾನು ಸಮಾಜಸೇವೆ ಮಾಡಿದೆ ಎನ್ನಬಹುದು. ಅವನದೂ ಒಂದು ಬಗೆಯಲ್ಲಿ ಸಮಾಜಸೇವೆಯೇ. ಆದರೆ ಇಲ್ಲಿ ಅದಕ್ಕಿಂತ ಹೆಚ್ಚಿನ ಅರ್ಥ. ಸರ್ವರ ಹಿತಕ್ಕಾಗಿ ದುಡಿಯುವವನು ಸಮಾಜಸೇವೆ ಮಾಡುತ್ತಾನೆ. ಅವನ ದುಡಿತಕ್ಕೆ ಬೆಲೆ ಉಂಟು. ಆದ್ದರಿಂದ ಹಾಗೆ ಅನ್ನಕ್ಕಾಗಿ ದುಡಿಯುವದು ಸಮಾಜಸೇವೆಯೇ ವಿನಾ ಬೇರೆ ಅಲ್ಲ. ತನ್ನ ಉದರಂಭರಣಕ್ಕಾಗಿ ಅಥವಾ ಕುಟುಂಬಕ್ಕಾಗಿ ಜನಕೋಟಿ ಮಾಡುವ ಕೆಲಸವನ್ನು ಸಮಾಜಸೇವಕ ಸರ್ವಜನ ಹಿತಕ್ಕಾಗಿ ಮಾಡುತ್ತಾನೆ. ಆಶ್ರಮ ದಲ್ಲಿರುವ ಏಳು ಜನಕ್ಕೆ ತಮ್ಮ ದಿನದ ಹಿಟ್ಟನ್ನು ಗಳಿಸಲು. ಮಾಡಿದ ದುಡಿತದ ತರುವಾಯ ಸಮಾಜಸೇವೆಗೆ ವೇಳೆ ಉಳಿಯುವುದೇ ಇಲ್ಲ. ತಮ್ಮ ಕೆಲಸದಲ್ಲಿ ಅವರು ನಿಷ್ಣಾತರಾಗಿದ್ದರೆ ಹೀಗೆ ಆಗುತ್ತಿರಲಿಲ್ಲ. ಅವರು ನಿಷ್ಣಾತರಲ್ಲ. ಸಾಧಾರಣ ಕೆಲಸಗಾರರಿಗೆ ಇವರು ಸಮ ಅಲ್ಲ. ಕೈಗಾರಿಕೆಯಲ್ಲಿ ಇವರು ಹೊಸಬರು. ಉಪಕರಣಗಳನ್ನು ಜಾಣತನದಿಂದ ಉಪಯೋಗಿಸಿದರೆ ಒಂದಕ್ಕೆ ಎರಡು ಪಟ್ಟು ನೂಲಬಹುದು ಎಂದು ಈಚೆಗೆ ಎಲ್ಲರಿಗೂ ಗೊತ್ತಾಗಿದೆ. ಎಂದರೆ ರಾಟೆಯಿಂದ ಇಮ್ಮಡಿ ಗಳಿಕೆ. ಎಲ್ಲ ವಿಷಯಗಳಲ್ಲೂ ಇಷ್ಟೇ ವ್ಯವಸಾಯದಲ್ಲಿಯೂ ಅಭಿವೃದ್ಧಿಗೆ ಅವಕಾಶ ಇದೆ. ಪ್ರಕೃತಿಯ ಏಕೋಪಕ್ಕೆ ಗುರಿ ಯಾಗದಿದ್ದರೆ ರೈತ ತನ್ನ ಜಾಣತನದಿಂದ ಇರುವ ಮಟ್ಟನ್ನೇ ಉಪಯೋಗಿಸಿ. ಅಷ್ಟೇ ಹೊತ್ತು ಕೆಲಸಮಾಡಿ, ಒಂದಕ್ಕೆ ನಾಲ್ಕರಷ್ಟು ಗಳಿಸಬಹುದು. ಎಂದರೆ ಅವನಿಗೆ ಈಗಿನ ಸಂಪಾದನೆಗೆ ಎಷ್ಟು ಕಷ್ಟಪಡುತ್ತಿದ್ದಾನೋ ಅಷ್ಟು ಪಡಬೇಕಾಗಿಲ್ಲ. ಈ ಕೆಲಸಗಾರರಿಗೆ ಕೈ ಪಳಗಿದ ಮೇಲೆ, ಸ್ವಲ್ಪ ತೊಡಕು. ಆದರೆ ತ್ಯಾಗ ಜೀವನ ನಡೆಸುವ ಕೆಲಸಗಾರನಿಗೆ ತಿಂಗಳಿಗೆ ನಾಲ್ಕು ರೂಪಾಯಿ ಸಾಕು. ಇದರಿಂದ ಆತನು ತನ್ನ ಹೊಟ್ಟೆಗಾಗಿ ದುಡಿದಮೇಲೆ ಕೂಡ ಹೆಚ್ಚಿನ ಕೆಲಸಕ್ಕೆ ವೇಳೆ ಉಳಿಯುತ್ತದೆ.

ಆದರೆ ತಿಂಗಳಿಗೆ ಮೂರು ರೂಪಾಯಿ ಸಾಕೇ ಅನ್ನಕ್ಕೆ ಒಬ್ಬನಿಗೆ ಡಾ॥ ತಿಲಕ್

ಬೊಂಬಾಯಿಯಲ್ಲಿ ಐದು ರೂಪಾಯಿ ಸಾಕು ಎನ್ನುತ್ತಾರೆ. ಹಾಗಿದ್ದರೆ ಗ್ರಾಮ ಜೀವನಕ್ಕೆ ಮೂರು ರೂಪಾಯಿ ಸಾಕು. ತಿಲಕರು ಹೇಳಿದ್ದಕ್ಕೆ ನನ್ನ ಅನುಭವವನ್ನು ಜೊತೆಗೂಡಿಸಿದರೆ ಏನೂ ಕಷ್ಟವಿಲ್ಲ. ತಿಲಕರು ಹೇಳುವಂತೆ ಹಾಲನ್ನು ಬಿಡಲು ಸಾಧ್ಯವಿಲ್ಲ. ಆಹಾರದಿಂದ ಹಾಲನ್ನು ವರ್ಜ್ಯಮಾಡಿ ಆಶ್ರಮವಾಸಿಗಳು ತಪ್ಪು ಮಾಡಿದರು. ನಮ್ಮಲ್ಲಿ ಕೋಟ್ಯಂತರ ಜನಕ್ಕೆ ಒಂದು ತೊಟ್ಟೂ ಹಾಲು ಸಿಕ್ಕುವುದಿಲ್ಲ. ನಿಜ. ಆದರೆ ಇನ್ನೂ ಎಷ್ಟೋ ಪದಾರ್ಥ ಅವರಿಗೆ ಸಿಗುವುದಿಲ್ಲ ನಮಗೆ ಬೇಕಾದ್ದು. ನಮ್ಮದು ಸೇವಾಮಯ ಜೀವನ, ಶರೀರ ಪೋಷಣೆಗೆ ಎಷ್ಟು ಅಗತ್ಯವೋ ಅಷ್ಟನ್ನು ನಾವೇ ಉತ್ಪನ್ನ ಮಾಡಿ, ತೆಗೆದುಕೊಳ್ಳಬೇಕು. ಗೋದಿ, ಅಕ್ಕಿ, ಸಜ್ಜೆ, ಜೋಳ ಇಂಥ ಧಾನ್ಯ ಪಕ್ವ ಮಾಡಿದ ರುಚಿಯಾದ ಸೊಪ್ಪು, ಹಾಲು, ಹಳ್ಳಿಯಲ್ಲಿ ಸಿಗುವ ಹಣ್ಣು, ಮಾವು, ನೇರಲೆ, ಸೀಬೆ, ಬೋರೆ ಮುಂತಾದವು ಆಯಾ ಕಾಲದಲ್ಲಿ ಸಿಗುತ್ತವೆ. ಹಳ್ಳಿಗಳಲ್ಲಿ. ಇವು ಆರೋಗ್ಯ ಜೀವನಕ್ಕೆ ತುಂಬ ಒಳ್ಳೆಯವು. ತಿನ್ನುವುದಾದ ಎಲೆ ಸೊಪ್ಪುಗಳಲ್ಲಿ ಬೇವಿನ ಸೊಪ್ಪು ರಾಜ. ಭಾರತದಲ್ಲಿ ಎಲ್ಲಿ ಬೇಕಾದರೂ ಇದನ್ನು ಗಿಡಗಳಿಂದ ಹರಿದುಕೊಳ್ಳಬಹುದು. ಇನ್ನೂ ಮನುಷ್ಯ ತಿನ್ನಬಹುದಾದ ಎಷ್ಟೋ ಹುಲ್ಲು ಇದೆ. ನಮಗೆ ಅದು ಗೊತ್ತಿಲ್ಲ. ಹುಣಿಸೆ ಹಣ್ಣು ಎಲ್ಲೆಲ್ಲೂ ಸಿಗುತ್ತದೆ. ಕೆಲವರಲ್ಲಿ ಹುಣಿಸೇ ಹಣ್ಣಿನ ಬಗ್ಗೆ ಏನೋ ಒಂದು ಪೂರ್ವಗ್ರಹ ಇದೆ. ಏತಕ್ಕೋ ನನಗೆ ಅರ್ಥ ವಾಗುತ್ತಿಲ್ಲ. ನಿಂಬೆ ಹಣ್ಣು ಬಹಳ ತುಟ್ಟಿ ಎಂದು ಹುಣಿಸೆ ಹಣ್ಣುಗಳನ್ನು ನಾನು ಧಾರಾಳವಾಗಿ ಉಪಯೋಗಿಸುತ್ತಿದ್ದೇನೆ. ಅದರಿಂದ ನನಗೆ ಬಹಳ ಲಾಭ ಆಗಿದೆ. ಆಹಾರ ಸುಧಾರಣೆಯ ಸಂಶೋಧನೆ ಅನಂತವಾಗಿದೆ. ಜಗತ್ತಿಗೇ ಅದರ ಪರಿಣಾಮ ಬಹಳ ಆಗಬೇಕಾಗಿದೆ. ಅದರಲ್ಲೂ ಉಪವಾಸ ಸಾಯುತ್ತಿರುವ ಭಾರತದ ಬಡಬಗ್ಗರಿಗೆ ಅದು ಆರೋಗ್ಯಕರ. ರಸ್ಕಿನ್ನನ ಭಾಷೆಯಲ್ಲಿ ಎರಡೂ ಒಂದೇ-ಆರೋಗ್ಯವೇ ಭಾಗ್ಯ. ಸರಿಯಾಗಿ, ನಿಯಮ ಬದ್ಧವಾಗಿ ಬದುಕುವುದೇ ಒಂದು ಸೇವೆ-ಎಂಬ ವಿಚಾರ ಆಶ್ರಮದವರ ತಲೆಯಲ್ಲಿ ಸುಳಿದದ್ದು ಸರಿ. ಅವರ ಪ್ರಭಾವ ಅನಂತವಾಗಿ ತಮ್ಮ ಸುತ್ತ ಮುತ್ತ ಮೊದಲು ಭಾರತಕ್ಕೆ ಆಮೇಲೆ ವಿಶ್ವಕ್ಕೆ ಹರಡೀತು. ಈ ಸೇವೆಯಲ್ಲಿ ವ್ಯಷ್ಟಿಯ ಕ್ಷೇಮವೇ ಸಮಷ್ಟಿಯ ಸೇವೆ; ಒಬ್ಬರ ಕ್ಷೇಮವೇ ಎಲ್ಲರ ಕ್ಷೇಮ.

**ಮೋ.ಕ.ಗಾಂಧೀ**

(ಹರಿಜನ)



# ಅಧ್ಯಾಯ ೮



# ಗಾಂಧೀಜಿಯ ಬಗೆಗೆ ವೈಯಕ್ತಿಕ ನೆನಹುಗಳು

ಗಾಂಧೀಜಿಯ ಜೊತೆಗೆ ಸಂಪರ್ಕ ಬಂದ ಮುಖಂಡರು ಮತ್ತು ಕಾರ್ಯಕರ್ತರು ಕರ್ನಾಟಕದಲ್ಲಿ ಅನೇಕರಿದ್ದಾರೆ. ಹೀಗೆ ಸಂಪರ್ಕ ಬಂದವರು ತಮ್ಮ ತಮ್ಮ ನೆನಹುಗಳನ್ನೂ ಪತ್ರಗಳನ್ನೂ, ಭಾವಚಿತ್ರಗಳನ್ನೂ ಕಳಿಸಿಕೊಡಬೇಕೆಂದು ವೃತ್ತಪತ್ರಗಳ ಮೂಲಕ ಕೆಲವು ಸಲ ಬಿನ್ನವಿಸಿ ಕೊಳ್ಳಲಾಗಿತ್ತು. ಬಿನ್ನಹಕ್ಕೆ ಮನ್ನಣೆ ಕೊಟ್ಟು ಕಳುಹಿಸಿದವರ ನೆನಹುಗಳನ್ನೂ ಪತ್ರಗಳನ್ನೂ ಈ ಪುಸ್ತಕದಲ್ಲಿ ಕೊಡಲಾಗಿದೆ.

## ೧. ಸೇವಾಗ್ರಾಮ

**(ಹೆಚ್.ಸಿ. ದಾಸಪ್ಪ)**

ಸೇವಾಗ್ರಾಮಕ್ಕೆ ಎರಡು ಸಲ ಆರಾರು ತಿಂಗಳ ಮಟ್ಟಿಗೆ ಹೋಗಿ ನೆಲೆಸುವ ಭಾಗ್ಯ ನನಗೆ ದೊರಕಿತು. ಈ ವಿಷಯವನ್ನು ಪ್ರಸ್ತಾಪಿಸುವ ಮೊದಲು ನಾನು ಅವರ ಆಶ್ರಮಕ್ಕೆ ಹೋಗಲು ಕಾರಣವೇನೆಂಬುದನ್ನು ತಿಳಿಸುವುದು ಅಗತ್ಯ. ಎಲ್ಲರನ್ನೂ ಗಾಂಧೀಜಿ ಮಕ್ಕಳಂತೆ ಕಾಣುತ್ತಿದ್ದುದರಿಂದ ಎಲ್ಲರಿಗೂ ಅವರು ತಂದೆಯಾದರು.

೧೯೩೯ನೇ ಸಾಲಿನಲ್ಲಿ ನಾನು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷನಾಗಿದ್ದಾಗ ಜವಾಬ್ದಾರಿ ಸರಕಾರಕ್ಕಾಗಿ ನಡೆಸಿದ ಸತ್ಯಾಗ್ರಹ ಸಮಯದಲ್ಲಿ ಅನೇಕರು ಕಾರಾಗೃಹ ವಾಸವನ್ನು ಸೇರಿದರು. ಆ ಸಮಯದಲ್ಲಿ ಅಂಥ ಅಧಿಕಾರಿಗಳ ದಬ್ಬಾಳಿಕೆ ಬಹಳವಾಗಿತ್ತು. ಸತ್ಯಾಗ್ರಹಿಗಳ ಮೇಲೆ ಪೊಲೀಸರು ಅನೇಕ ಅತ್ಯಾಚಾರಗಳನ್ನು ನಡೆಸಿದ್ದರು. ದಿವಾನ್ ಸರ್ ಮಿರ್ಜಾರವರು (ಅತ್ಯಾಚಾರಗಳ ಆರೋಪಣೆ ಸರಿಯಿಲ್ಲವೆಂದು ವಾದಿಸಿ) ಗಾಂಧೀಜಿಯವರಿಗೆ ಪತ್ರ ಬರೆದು ಬೇಕಾದರೆ ತಮ್ಮ ಆಪ್ತಕಾರ್ಯದರ್ಶಿಯವರಾದ ಶ್ರೀ ಮಹದೇವ ದೇಸಾಯಿಯವರನ್ನು ಕಳುಹಿಸಿ ವಿಚಾರಿಸಬಹುದೆಂದು ಆಹ್ವಾನಿಸಿದರು. ಅವರು ಬಂದು

ಸಂಸ್ಥಾನಾದ್ಯಂತವೂ ಸಂಚಾರಮಾಡಿ ಜೈಲುಗಳಿಗೆ ಭೇಟಿಕೊಟ್ಟು ಅನೇಕ ಸತ್ಯಾಗ್ರಹಿಗಳ ಸಾಕ್ಷ್ಯವನ್ನು ತೆಗೆದುಕೊಂಡು ವರದಿಯನ್ನೊಪ್ಪಿಸಿದರು. ಆಗ ಗಾಂಧೀಜಿಯವರಿಗೆ ಮೈಸೂರಿನವರು ಎಷ್ಟರ ಮಟ್ಟಿಗೆ ಅಹಿಂಸಾ ತತ್ತ್ವವನ್ನು ಪಾಲಿಸುತ್ತಿದ್ದರೆಂದು ತಿಳಿಯಬಂತು. ಆದಾದ ಕೆಲವು ದಿನಗಳಲ್ಲಿ, ಅಂದರೆ ೧೯೪೦ರ ಜನವರಿಯಲ್ಲಿ ಖಾಯಿಲೆ ಬಿದ್ದು ನನಗೆ ವ್ಯಾದಿ ಕಠಿಣವಾಯಿತು. ಈ ವಿಚಾರ ಗಾಂಧೀಜಿಯವರಿಗೆ ತಿಳಿಯಬಂತು. ಕೂಡಲೇ ಶ್ರೀ ದೇಸಾಯಿಯವರ ಮೂಲಕ ಅವರು ಪತ್ರ ಬರೆಸಿದರು. ನಿನ್ನ ಖಾಯಿಲೆ ಉಗ್ರವಾದುದ್ದು; ಅದನ್ನು ಉದಾಸೀನದಿಂದ ಕಾಣಬಾರದು. ಸೇವಾಗ್ರಾಮಕ್ಕೆ ಬಂದರೆ ಎರಡು ತಿಂಗಳೊಳಗಾಗಿ ನಿನ್ನನ್ನು ಗುಣಪಡಿಸಿ ವಾಪಸ್ಸು ಕಳುಹಿಸುತ್ತಾರೆ. ಏತಕ್ಕೆ ಒಡನೆಯೇ ಬರಬಾರದು ಎಂದು ಬರೆದರು. ಹೀಗೆ ಮೈಸೂರಿನ ಒಬ್ಬ ಸಾಧಾರಣ ವ್ಯಕ್ತಿಯ ವಿಚಾರದಲ್ಲಿ ಗಾಂಧೀಜಿಯವರು ಅಷ್ಟು ಆಸಕ್ತಿಯನ್ನು ತೋರಿಸಬೇಕಾದರೆ ಅವರ ಹೃದಯ ಎಷ್ಟು ವಿಶಾಲವಾಗಿತ್ತು, ಹೇಗೆ ನಾನಾ ಭಾಗಗಳ ಜನಾಂಗದವರ ಭಕ್ತಿ ಪ್ರೇಮಗಳನ್ನು ಅವರು ಸಂಪಾದಿಸುತ್ತಿದ್ದರೆಂಬುದು ಅರ್ಥವಾಗುತ್ತದೆ. ಆಗ ನಾನು ಹೋಗಲಿಕ್ಕೆ ಸಾಧ್ಯವಾಗದೆ ಕೆಲವು ತಿಂಗಳ ನಂತರ ಹೋದೆ. ಶ್ರೀ ದೇಸಾಯಿಯವರ ಬಿಡಾರದಲ್ಲೇ ಇರಲು ಅಪ್ಪಣೆಯಾಯ್ತು. ಗಾಂಧೀಜಿ ರಾಜಕೀಯವೇತ್ತರು, ನಿಜ. ಸಮಾಜ ಸುಧಾರಕರೂ ನಿಜ. ಅವರ ಆರ್ಥಿಕ ಯೋಜನೆಗಳು ಶ್ಲಾಘನೀಯವಾದವುಗಳು. ಅವರು ಸರ್ವಧರ್ಮ ಸಮನ್ವಯ ಮಾರ್ಗಿಗಳು, ಇವೆಲ್ಲದರ ಜೊತೆಗೆ ಅವರು ವೈದ್ಯರೂ ಆಗಿದ್ದರು, ಪ್ರಕೃತಿ ಚಿಕಿತ್ಸೆ ನಡೆಸುತ್ತಿದ್ದರು.

ನನ್ನ ತೂಕ ಕಡಿಮೆಯಾದ ಹೊರತು ನನ್ನ ಆರೋಗ್ಯ ಗುಣಹೊಂದುವುದಿಲ್ಲವೆಂದು ಚಿಕಿತ್ಸೆ ಪ್ರಾರಂಭ ಮಾಡಿದರು. ಮೂರು ತಿಂಗಳುಗಳಲ್ಲಿ ೧೫೫ರಿಂದ ೧೧೪.೫೦ ಪೌಂಡಿಗೆ ಇಳಿದಿದೆ; ಉಪವಾಸವೇ ಔಷಧಿ. ನನ್ನ ವ್ಯಾಧಿ ಮಾಯವಾಯ್ತು. ಗಾಂಧೀಜಿಯವರಿಗೆ ಆಶ್ಚರ್ಯ. ಅವರು ಒಬ್ಬ ಡಾಕ್ಟರ್ ಕೈಕೆಳಗೆ ಕೊಟ್ಟರು. ಅವರು ನನ್ನನ್ನು ಘೋರತರವಾದ ಉಪವಾಸಕ್ಕೆ ಗುರಿಮಾಡಿದರು. ನನಗೆ ಸ್ವಲ್ಪ ಕಷ್ಟವಾಯಿತು. ಇದು ನನ್ನ ಮೊದಲ ಸಲದ ಆಶ್ರಮ ಜೀವನ. ಎರಡನೇ ಸಲದ ಭೇಟಿಗೆ ಕಾರಣ ಇಷ್ಟೇ. ೧೯೪೪ನೇ ಸಾಲಿನಲ್ಲಿ ಅವರು ಕಾರಾಗೃಹದಿಂದ ಬಿಡುಗಡೆಯಾದ ಬಳಿಕ ಪಂಚಗಣಿಯಲ್ಲಿ ಆರೋಗ್ಯಕ್ಕಾಗಿ ವಿರಾಮ ಹೊಂದುತ್ತಿದ್ದರು. ನಾನು ಅವರ ಭೇಟಿಗಾಗಿ ಹೋದೆ. ಶ್ರೀ ರಾಜಾಜಿಯವರೊಬ್ಬರು ಹತ್ತಿರವಿದ್ದರು. ನಮಸ್ಕಾರ ಮಾಡಿದೊಡನೆ ರಾಜಾಜಿಯವರ ಕಡೆ ತಿರುಗಿ 'ದಾಸಪ್ಪ' ತನ್ನ ಮಾತನ್ನು ಇನ್ನೂ ನಡೆಸಿಕೊಟ್ಟಿಲ್ಲ–ನನ್ನ ಫೀಸು ಕೊಟ್ಟಿಲ್ಲ. ವಾಗ್ದಾನವನ್ನು ಮರೆತಂತಿದೆ" ಎಂದರು. ನನಗೆ ಆಶ್ಚರ್ಯವಾಯಿತು. "ಏನೂ ಗೊತ್ತಿಲ್ಲವಲ್ಲ, ದಯವಿಟ್ಟು ತಿಳಿಸಿ" ಎಂದೆ. ಅದಕ್ಕವರು "ನಿನ್ನ ಕಾಯಿಲೆಯನ್ನು ಗುಣಪಡಿಸಿದರೆ ನನ್ನ ಫೀಸು ಕೊಡಬೇಕು. ನಿನ್ನ ಹೆಂಡತಿ ಮಕ್ಕಳನ್ನು ಆಶ್ರಮಕ್ಕೆ ಕರೆದುಕೊಂಡು ಬರುವುದೇ ಫೀಸೆಂದು ತಿಳಿಸಿದ್ದೆ. ಮರೆತಿರುತ್ತಿ" ಎಂದು ಜ್ಞಾಪಿಸಿದರು. ಎಂತಹ ಪ್ರೇಮ! ಅದಾದ ಬಳಿಕವೇ ನಾವೀರ್ವರೂ ೧೯೪೪ರ ಅಕ್ಟೋಬರ್‌ನಲ್ಲಿ ಅಲ್ಲಿಗೆ ಹೋಗಿ ೬

ತಿಂಗಳು ಕಾಲ ಅವರ ಸೇವೆಯಲ್ಲಿದ್ದುದು. ಇದೇ ರೀತಿ ಭಾರತ, ಅಷ್ಟೇಕೆ ಪ್ರಪಂಚದ ನಾನಾ ಜನಗಳನ್ನು, ಅವರು ತಮ್ಮ ಪ್ರೇಮ ಬಂಧನದಿಂದ ವಶಪಡಿಕೊಂಡಿದ್ದಾರೆ.

ಆಶ್ರಮದ ನಿತ್ಯ ಜೀವನದ ವಿಚಾರ ಕೆಲ ಮಾತುಗಳನ್ನಾಡಬೇಕಾಗಿದೆ. ಚಳಿಗಾಲ ವಾಗಲೀ ಬೇಸಿಗೆಯಾಗಲೀ ಬೆಳಿಗ್ಗೆ ನಾಲ್ಕು ಗಂಟೆಗೆ ಸರಿಯಾಗಿ ಗಂಟೆ ಹೊಡೆದ ತಕ್ಷಣ ಆಶ್ರಮದವರೇಳಬೇಕು. ೪-೨೦ ರಿಂದ ೫ ಗಂಟೆಯುವರೆಗೆ ಪ್ರತಿನಿತ್ಯ ತಪ್ಪದೆ ಪ್ರಾರ್ಥನೆ. ಗಾಂಧೀಜಿಯವರ ಕಾರ್ಯಕ್ರಮದಲ್ಲಿ ಪ್ರಾರ್ಥನೆಗೆ ಬಹು ಪ್ರಧಾನಸ್ಥಾನ. ಪ್ರಾತಃಕಾಲದಲ್ಲಿ ಭಜನೆಯಲ್ಲಿ ಗೀತಾಧ್ಯಯನ ಇದ್ದೇ ಇರುತ್ತಿತ್ತು. ವಾರಕ್ಕೊಮ್ಮೆ ಗೀತೆಯ ೧೮ ಅಧ್ಯಾಯಗಳನ್ನೂ ಓದಿಸುತ್ತಿದ್ದರು. ಅನಾಸಕ್ತಿ ಯೋಗವೆಂದು ಕರೆದು ಗಾಂಧೀಜಿ ಯವರೇ ಗೀತೆಯ ವ್ಯಾಖ್ಯಾನ ಬರೆದಿದ್ದರೂ ಪ್ರತಿ ಬೆಳಿಗ್ಗೆಯೂ ಗೀತಾಧ್ಯಯನವನ್ನು ಮಾಡದೆ ಇರುತ್ತಿರಲಿಲ್ಲ. ರಾಮನಾಮ, ಅದಾದ ಬಳಿಕ ೫ ಗಂಟೆಯಿಂದ ಆವರವರು ತಮ್ಮ ಕೆಲಸದಲ್ಲಿ ನಿರತರಾಗುತ್ತಿದ್ದರು. ಅಲ್ಲಿ ಫ್ಲೋರ್ ಮಿಲ್ಲುಗಳು ಇಲ್ಲ. ಆದ್ದರಿಂದ ಆಶ್ರಮಕ್ಕೆ ಬೇಕಾಗುವ ಗೋದಿಯನ್ನೆಲ್ಲ ನಾವೇ ಬೀಸಬೇಕು. ಉದ್ಯೋಗವೇ ಪುರುಷಲಕ್ಷಣ ವೆಂಬುದು ಅಲ್ಲಿ ಕಾರ್ಯಾಚರಣೆಯಲ್ಲಿತ್ತು.

ಈ ಆಶ್ರಮ ಕೆಲಸಗಳಲ್ಲಿ ಎಲ್ಲರೂ ಭಾಗಿಯಾಗಬೇಕು. ದೊಡ್ಡವರೂ ಧನಿಕರು ಎಂದು ಭೇದವೇ ಇಲ್ಲ. ನನ್ನ ಆರೋಗ್ಯ ನೆಟ್ಟಗಾದ ಒಡನೆಯೇ ಕೆಲಸಗಳನ್ನು ಪ್ರಾರಂಭಮಾಡಿದೆ. ಗೋದಿ ಬೀಸುವುದೊಂದು ಭಾಗ. ಒಂದು ದಿನ ಬೀಸಲಿಕ್ಕೆ ಹೋದಾಗ ಪಂಜಾಬಿನ ದೊಡ್ಡ ಮನುಷ್ಯರೊಬ್ಬರು ಧನಿಕರು ಮತ್ತು ಶಾಸನ ಸಭಾಧ್ಯಕ್ಷರು-ಇವರು ತಮ್ಮ ಡ್ರೈವರಿನೊಡನೆ ಕೂತು ಗೋದಿ ಬೀಸುತ್ತಿದ್ದರು. ಪ್ರೊಫೆಸರ್ ಭನ್‌ಸಾಲೆಯವರೂ ಆಶ್ರಮವಾಸಿಗಳಾದ ಎಂ.ಎಸ್‌ಸಿ. ಪಾಸ್ ಮಾಡಿದವರೊಬ್ಬರೂ ಗೋದಿ ಬೀಸುವುದರಲ್ಲಿ ನಿಪುಣರು. ಗಾಂಧೀಜಿಯವರು ಸಾಬರಮತಿ ಆಶ್ರಮದಲ್ಲಿದ್ದಾಗ ಬಹಳ ಚನ್ನಾಗಿ ಬೀಸು ತ್ತಿದ್ದರಂತೆ. ಇದಾದ ಮೇಲೆ ೬-೩೦ ಗಂಟೆಗೆ ಫಲಾಹಾರ, ಸಾಧಾರಣವಾಗಿ ನಮಗೆ ಹಾಲು ಮತ್ತು ದಲಿಯಾ ಎಲ್ಲರಿಗೂ ಹಾಲು ಸಾಕಾದಷ್ಟು ಒದಗಿಸಬೇಕೆಂದು ಅವರ ಅಭಿಲಾಷೆ. ಕಾಲು ಪೌಂಡು ಹಾಲು ಒಬ್ಬರಿಗೆ ಕೊಡುತ್ತಿದ್ದರು. ಅದಾದ ಕೂಡಲೇ ತರಕಾರಿ ಹೆಚ್ಚುವುದು ವಗೈರೆ ಕೆಲಸ ಒಂದು ಗಂಟೆ ಕಾಲ ಆ ಬಳಿಕ ಸ್ವಾರಸ್ಯವಾದ ಮತ್ತೊಂದು ಕೆಲಸ. ಅದೇನೆಂದರೆ ಅಲ್ಲಿ ಹೊರಗಡೆಗೆ ಬಕೆಟ್ಟುಗಳನ್ನು ಇಡುವ ಪದ್ಧತಿ. ಅದನ್ನೆಲ್ಲಾ ಒಂದು ಕಡೆ ಚರಂಡಿಗೆ ಹಾಕಿ ಬಕೆಟ್ಟುಗಳನ್ನು ತೊಳೆದಿಡುವದು. ಆ ಕೆಲಸವೇ ಒಂದು ಕಲೆಯಾಗಿರುತ್ತಿತ್ತು. ನಾವು ಕೆಲವರು ಅದರಲ್ಲಿ ಪ್ರವೀಣರಾಗಿದ್ದೆವು. ಅದರಿಂದ ಬಹು ಉತ್ತಮ ಗೊಬ್ಬರವಾಗುತ್ತೆ. ಆ ವಿಧಾನ ತಪ್ಪಿದರೆ ಚರಂಡಿ ಕಕ್ಕಸ್ಸುಗಳನ್ನು ಸುಲಭ ರೀತಿಯಲ್ಲಿ ವ್ಯವಸ್ಥೆ ಮಾಡಬಹುದು. ಆರೋಗ್ಯ ನಿಯಮಗಳಿಗನುಸಾರವಾಗಿ ಸ್ವಚ್ಛವಾಗಿ ಇರುವಂತೆ ಮಾಡುವುದು ಸುಲಭ.

ಗಾಂಧೀಜಿಯವರು ಬೆಳಿಗ್ಗೆ ೭ರಿಂದ ೯ ಗಂಟೆಯವರೆಗೆ ಗಾಳೀ ಸಂಚಾರಕ್ಕಾಗಿ

ಹೊರಡುತ್ತಿದ್ದರು. ಅವರು ಹೊರಟರೆ ಅವರ ಹಿಂದೆ ಹೆಣ್ಣುಮಕ್ಕಳು ಸಣ್ಣ ಮಕ್ಕಳು ಎಲ್ಲರೂ ಹೊರಡುವರು. ಗಾಂಧೀಜಿಯವರ ಭೇಟಿ ಮಾಡಬೇಕೆಂದಿದ್ದರೆ ಆಗಲೇ ಆ ಕೆಲಸವೂ ಮುಗಿಯುತ್ತಿದ್ದಿತು. ಅದು ಮುಗಿದನಂತರ ಆಶ್ರಮದಲ್ಲಿ ಯಾರ್ಯಾರು ಕಾಯಿಲೆ ಆಗಿದ್ದರೇ ಅವರನ್ನೆಲ್ಲಾ ನೋಡಿಕೊಂಡು ಕೊನೆಯಲ್ಲಿ ಅಲ್ಲೇ ಪ್ರತ್ಯೇಕ ಗುಡಿಸಿಲಿನಲ್ಲಿದ್ದ ರೋಗಿ ಒಬ್ಬರ ಭೇಟಿಮಾಡುತ್ತಿದ್ದರು. ಅವರ ಹೆಸರು ಪರಚುರೆಶಾಸ್ತ್ರಿಯೆಂದು. ಮಹಾರಾಷ್ಟ್ರ ದವರು, ಮಹಾಪಂಡಿತರು. ಅವರು ಇಲ್ಲಿ ಬಂದು ನೆಲೆಸಿದ್ದರು. ಒಂದು ಸಲ ಶಾಸ್ತ್ರಿ ಯವರು, ಜಿಗುಪ್ಸೆಯಿಂದ ಪ್ರಾಯೋಪವಾಸವನ್ನು ಕೈಗೊಂಡರು. ಆಗ ಗಾಂಧೀಜಿಯವರು ತಮ್ಮ ಕೈಯಿಂದಲೇ ದಿನವೂ ಅವರಿಗೆ ಮಾಲೀಸು ಮಾಡುತ್ತಿದ್ದರು. ಉಪವಾಸದಿಂದ ಅವರು ಗುಣಹೊಂದಿ ಅವರ ವ್ರತವನ್ನು ನಿಲ್ಲಿಸಿದರು. ಬೆಳಿಗ್ಗೆ ಸಂಚಾರ ಮುಗಿದನಂತರ ಗಾಂಧೀಜಿಯವರು ಒಂದು ಗಂಟೆ ತಪ್ಪದೆ ಮಾಲೀಸು ಮಾಡಿಸಿಕೊಳ್ಳುತ್ತಿದ್ದರು. ಅವರ ಸ್ನಾನವಾದ ನಂತರ ಅವರ ಕೆಲಸ ಪ್ರಾರಂಭವಾಗುತ್ತಿತ್ತು. ೧೧ ಗಂಟೆಗೆ ಊಟ. ಊಟದ ವಿಧಾನವೂ ನಿರ್ಧರಿಸಿದ ಹಾಗೆ. ಅದಕ್ಕೂ ನಿಬಂಧನೆಗಳು. ಎಷ್ಟುಬೇಕೋ ಅಷ್ಟು ಬಡಿಸಿಕೊಳ್ಳಬೇಕು. ನನಗೆ ಮೊದಲು ಪಾಠ ಹೇಳಿದ್ದು ಚನ್ನಾಗಿ ಅಗಿಯಬೇಕು ಎಂದು. ಅವರು ನಿಧಾನವಾಗಿ ಊಟ ಮಾಡುತ್ತಿದ್ದರು. ಗಾಂಧೀಜಿಯವರ ಊಟ ಬಹಳ ಸರಳ. ಮೇಕೆಹಾಲು, ಅವರು ಆಕಳ ಹಾಲನ್ನು ಅನೇಕ ವರ್ಷಗಳ ಹಿಂದೆಯೇ ತ್ಯಜಿಸಿದ್ದರು, ಟೊಮೇಟೋ ರಸ, ಹಸಿ ಮತ್ತು ಉಗಿಯಲ್ಲಿ ಬೇಯಿಸಿದ ತರಕಾರಿ, ಉಪ್ಪು ಸಹಿತ ತ್ಯಾಜ್ಯ, ಬೇವಿನಚೆಟ್ನಿ ಇವೆ ಮುಖ್ಯ ಊಟ.

ಗಾಂಧೀಜಿಯವರ ಆಶ್ರಮದ ಶಿಷ್ಯಮಂಡಳಿಯಲ್ಲಿ ಭಾರತದ ನಾನಾ ಪ್ರಾಂತ ದವರಿದ್ದರು. ಹಿಂದೂ ಮುಸಲ್ಮಾನ ಈಸಾಯಿಯವರೆಲ್ಲರೂ ಯಾವ ಭೇದಭಾವವಿಲ್ಲದೆ ಇದ್ದರು. ಬೆಳಿಗ್ಗೆ ಸಂಜೆ ಪ್ರಾರ್ಥನೆ ನಡೆಸುತ್ತಿದ್ದವರು ಶ್ರೀ ಪ್ರಭಾಕರ ಎಂಬುವ ಹರಿಜನ ಕ್ರಿಶ್ಚಿಯನ್ ಅಡಿಗೆಗೆ ಸಹಾಯ ಮಾಡುತ್ತಿದ್ದವರು ಹರಿಜನರು ಯಾರಿಗೂ ಗೊತ್ತಾಗು ತ್ತಿರಲಿಲ್ಲ.

ಅಲ್ಲಿನ ಜೀವನ ಬಹಳ ಕಠಿಣವಾಗುತ್ತಿತ್ತು. ಅನೇಕರು ಆಶ್ರಮಕ್ಕೆ ಬರಲು ಬಹಳ ತವಕ ಪಡುತ್ತಿದ್ದರು. ಪ್ರತಿನಿತ್ಯವೂ ಆಶ್ರಮದಲ್ಲಿ ಬಂದಿರಬೇಕೆಂದು ಪತ್ರ ಬರೆಯುತ್ತಿದ್ದರು. ಬಂದಬಳಿಕ ಕಷ್ಟದ ಕೆಲಸಮಾಡಿ ಅವರಾಗಿ ಬೇಗ ಬಿಟ್ಟು ಹೋಗುತ್ತಿದ್ದರು.

ಗಾಂಧೀಜಿಯವರ ಜೀವನ ಕಠಿಣವಾಗಿದ್ದರೂ, ಇತರ ಅತಿಥಿಗಳ ವಿಚಾರದಲ್ಲಿ ಅವರು ಬಹಳ ರಿಯಾಯಿತಿಗಳನ್ನು ಒದಗಿಸುತ್ತಿದ್ದರು. ಕಾಫೀ ಕುಡಿಯುವವರು ಬಂದರೆ ಅವರಿಗೆ ಕಾಫಿಯನ್ನು ಒದಗಿಸಲು ಏರ್ಪಾಡು ಮಾಡುತ್ತಿದ್ದರು. ಈ ಸೌಕರ್ಯ ಅತಿಥಿಗಳಿಗೆ ಮಾತ್ರ; ಆಶ್ರಮವಾಸಿಗಳಿಗಲ್ಲ. ಶ್ರೀ ರಾಜಾಜಿಯವರಿಗೆ ಕಾಫಿ ಒದಗಿಸುವ ಜವಾಬ್ದಾರಿ ಯನ್ನು ನನಗೆ ವಹಿಸಿದ್ದರು. ನನ್ನ ನೈಪುಣ್ಯತೆಯನ್ನು ಪ್ರದರ್ಶಿಸಿ ರಾಜಾಜಿಯವರಿಂದ ಸರ್ಟೀಫಿಕೇಟ್ ಪಡೆದೆ.

ನಾವೆಲ್ಲರೂ ಹಿಂದೀ ಕಲಿಯಬೇಕೆಂದು ಗಾಂಧೀಜಿಯವರ ಆಸೆ. ನಮಗೆ ಅಲ್ಲಿ ಪಾಠ ಹೇಳಿಸಲು ಏರ್ಪಾಡು ಮಾಡಿಕೊಟ್ಟಿದ್ದರು.

ಒಂದು ದಿನ ಮಾತನಾಡುತ್ತಾ ಅವರು ತಿಳಿಸಿದರು, ನನಗೂ ಇತರರಿಗೂ ಏನು ವ್ಯತ್ಯಾಸವೆಂದರೆ ನಾನು ೨೪ ಗಂಟೆಯೂ ದೀನರ ದಲಿತರ ಧ್ಯಾನ ಮಾಡುತ್ತಿರುತ್ತೇನೆ. ಅಷ್ಟೇ ವ್ಯತ್ಯಾಸ ಎಂದರು. ಇದು ಸತ್ಯ.

ಗಾಂಧೀಜಿಯವರ ಜನ್ಮೋತ್ಸವ ನಡಿಸಿದರೆ ಸಾಲದು. ಅವರ ತತ್ವಗಳಿಗನುಸಾರವಾಗಿ ನಡೆಯಬೇಕು. ಇದು ಸುಲಭ ಸಾಧ್ಯವಲ್ಲ. ಜಾತಿ ಮತ ಭೇದಗಳಿಂದ ಕೂಡಿದ ಈ ನಾಡು ಒಂದಾಗಬೇಕಾದರೆ–ಬಡತನ, ಅಜ್ಞಾನ, ಅನಾರೋಗ್ಯ ಇವುಗಳಿಂದ ದೂರವಾಗ ಬೇಕಾದರೆ ದೇಶದಲ್ಲಿ ಶಾಂತಿ ಸುಖ ನೆಲೆಸಬೇಕಾದರೆ ಗಾಂಧೀಜಿಯವರು ಹಾಕಿಕೊಟ್ಟಿರುವ ಮಾರ್ಗ ಒಂದೇ.

* * *

## ೨. ಶ್ರೀ ನಿಟ್ಟೂರು ಶ್ರೀನಿವಾಸರಾಯರ ನೆನಹು

ವಾಸ್ತವವಾಗಿ ಗಾಂಧೀಜಿಯವರ ಹೆಸರು ಮೊಟ್ಟಮೊದಲು ನನ್ನ ದೃಷ್ಟಿಗೆ ಬಿದ್ದುದು ನಾನು ಇನ್ನೂ ಬಾಲಕನಾಗಿರುವಾಗ. ವೃತ್ತಪತ್ರಿಕೆಯೊಂದರಲ್ಲಿ ಅವರ ವಿಷಯವಾಗಿ ಒಂದು ಸಣ್ಣ ಲೇಖನ ಇದ್ದಿತು. ಅದರ ತಾತ್ಪರ್ಯ ಏನೆಂದರೆ : ಅವರು ಗುಜರಾತಿನಲ್ಲೋ ಅಥವಾ ಸಿಂಧ ಪ್ರಾಂತದಲ್ಲೋ ಗಾಡಿಯಲ್ಲಿ ಪ್ರಯಾಣ ಮಾಡುತ್ತಿದ್ದಾಗ ಗಾಡಿಯವನು ಗಾಡಿ ಕುದುರೆಗೆ ತುಂಬ ಹಿಂಸೆ ಕೊಡುತ್ತಿದ್ದನೆಂದೂ ಗಾಂಧೀಜಿಯವರು ಎಷ್ಟು ಹೇಳಿದರೂ ಅವನು ಅವರ ಮಾತನ್ನು ಕೇಳಲಿಲ್ಲವೆಂದೂ ಆದ್ದರಿಂದ ಅವರು ಗಾಡಿಯಿಂದ ಇಳಿದು ತಮ್ಮ ಗಂಟನ್ನು ಹೊತ್ತುಕೊಂಡು ಕಾಲು ನಡಿಗೆಯಲ್ಲಿ ಪ್ರಯಾಣ ಬೆಳೆಸಿದರೆಂದೂ ಆ ಲೇಖನದಲ್ಲಿದ್ದಿತು. ಆ ವರ್ತನೆಯ ವೈಚಿತ್ರ್ಯವು ಮನಸ್ಸಿಗೆ ನಾಟಿತೇ ಹೊರತು ಅದು ಅವರ ಸತ್ಯಾಗ್ರಹ ಮಾರ್ಗದ ದೃಷ್ಟಾಂತವೆಂದು ಆಗ ನನಗೆ ಹೊಳೆಯಲಿಲ್ಲ. ಅದಾದ ಕೆಲವು ವರ್ಷಗಳ ಮೇಲೆ ಅವರು ರೌಲತ್ ಕಾನೂನು ಪ್ರಸಂಗದಲ್ಲಿ ನಮ್ಮ ದೇಶದ ಜನರೆಲ್ಲರ ದೃಷ್ಟಿಯನ್ನು ಆಕರ್ಷಿಸಿದರೆಂಬುದು ಇತಿಹಾಸದ ವಿಷಯ. ಅಷ್ಟು ಹೊತ್ತಿಗೆ ನನಗೂ ಸ್ವಲ್ಪ ವಯಸ್ಸಾಗಿ ಅವರ ವ್ಯಕ್ತಿತ್ವದ ಮಹತ್ವವನ್ನು ತಕ್ಕ ಮಟ್ಟಿಗೆ ಅರ್ಥಮಾಡಿ ಕೊಳ್ಳುವ ಶಕ್ತಿ ಬಂದಿದ್ದಿತು.

ನಾನು ಗಾಂಧೀಜಿಯವರನ್ನು ಮೊಟ್ಟಮೊದಲು ಪ್ರತ್ಯಕ್ಷನಾಗಿ ಕಂಡದ್ದು ೧೯೨೦ರಲ್ಲಿ. ಅದಕ್ಕೆ ಕೆಲವು ವರ್ಷಗಳ ಮುಂಚೆಯೇ ನನ್ನ ತಲೆಮಾರಿನ ಎಲ್ಲ ಯುವಕರಂತೆ ನಾನೂ ಅವರ ಪ್ರಭಾವಕ್ಕೆ ಒಳಗಾಗಿದ್ದೆ. ಅವರು ನಮ್ಮಗಳ ಹೃದಯದಲ್ಲಿ, ವಿಚಾರಿಸುವ, ನಮಗೆ ಸ್ಫೂರ್ತಿ ಕೊಡುವ, ಆದರ್ಶಮೂರ್ತಿಯಾಗಿದ್ದರು. ಅದು ಏನೆ ಇರಲಿ, ಪ್ರತ್ಯಕ್ಷ ದರ್ಶನದ ಅನುಭವ ವರ್ಣಿಸಲು ಅಸದಳವಾದದ್ದು. ಆಗ ಅಸಹಕಾರ ಮತ್ತು ಖಿಲಾಫತ್ ಆಂದೋಲನಕ್ಕೆ ಉತ್ಸಾಹ ಉಕ್ಕೇರಿ ಬಂದ ಕಾಲ. ಬೆಂಗಳೂರಿನ ಜನತೆಗೆ ಜನತೆಯೇ

ಕಂಟೋನ್ಮೆಂಟಿನ ಈದ್ಗ ಮೈದಾನದಲ್ಲಿ ಗಾಂಧೀಜಿಯವರ ದರ್ಶನ ಪಡೆಯಲು ಸೇರಿತ್ತು. ಗಾಂಧೀಜಿಯವರು ಬರುವದು ಒಂದೆರಡು ಗಂಟೆ ತಡವಾಯಿತು. ಈ ಮಧ್ಯೆ ಮಳೆ ಬಂತು. ಆದರೂ ಅಲ್ಲಿ ನೆರೆದಿದ್ದ ಅಗಾಧ ಜನಸ್ತೋಮದಲ್ಲಿ ಯಾರೂ ಕದಲಲಿಲ್ಲ. ಅವರು ಬಂದೊಡನೆ "ಮಹಾತ್ಮಾ ಗಾಂಧೀಜಿಕಿ ಜೈ" ಮತ್ತು "ಅಲ್ಲಾ ಹೋ ಅಕ್ಬರ್" ಎಂಬ ಕೂಗುಗಳು ಗಗನವನ್ನು ಭೇದಿಸಿದವು. ಆದರೆ ಗಾಂಧೀಜಿಯವರು ಮಾತನಾಡಲು ಆರಂಭಿಸುತ್ತಲೇ ಸಂಪೂರ್ಣ ನಿಶ್ಶಬ್ದತೆ ನೆಲೆಸಿತು. ಅವರ ಮಾತಿನ ರೀತಿಯಲ್ಲಿ ಆಡಂಬರವಿಲ್ಲ. ಧ್ವನಿಗಳ ಏರಿಳಿತಗಳಿಲ್ಲ. ಆದರೂ ಅದರ ಪ್ರಭಾವ ಮಿಂಚಿನಂತೆ ಜನತೆಯ ಮನಸ್ಸನ್ನೂ ಹೃದಯವನ್ನೂ, ಅವರಿಸಿತು. ಆಗ ಅವರು ಇನ್ನೂ ತಾವು ಹಾಕಿಕೊಳ್ಳುತ್ತಿದ್ದ ಬಟ್ಟೆಯ ಮಿತಿಯನ್ನು ಅತ್ಯಲ್ಪ ಪರಿಮಾಣಕ್ಕೆ ಇಳಿಸಿರಲಿಲ್ಲ. ಮೊಣಕಾಲ್ಮಟ್ಟಕ್ಕೆ ಬರುವ ಪಂಚೆ, ಒಂದು ಕುಡುತ, ಬಿಳಿ ಟೋಪಿ. ಇದಕ್ಕೆ ಆ ಮೇಲೆ ಗಾಂಧೀ ಟೋಪಿ ಎಂಬ ಹೆಸರು ಬಂತು. ಎಲ್ಲಾ ಬಿಳಿಯ ಬಟ್ಟೆಯದು. ಅದು ಅವರ ಉಡುಪು. ಭಾಷಣ ಮಾಡುವಾಗ ಆಗಾಗ ನೀರು ಕುಡಿಯುತ್ತಿದ್ದರು. ಅಂದಿನ ಚಿತ್ರವು ಇಂದೂ ಕಣ್ಣಿಗೆ ಕಟ್ಟಿದಂತಿದೆ.

ಅನಂತರ ನಾನು ಗಾಂಧೀಜಿಯವರನ್ನು ನೋಡಿದ್ದು ಮದ್ರಾಸಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ. ಆಗ ಕೇರಳದಲ್ಲಿರುವ ವೈಕಂ ದೇವಸ್ಥಾನದಲ್ಲಿ ಹರಿಜನರ ಪ್ರವೇಶಕ್ಕಾಗಿ ಸತ್ಯಾಗ್ರಹ ನಡೆಯುತ್ತಿದ್ದಿತು. ದೇಶದ ಗಮನವೆಲ್ಲಾ ಅದರ ಕೇಂದ್ರೀಕೃತವಾಗಿದ್ದಿತು. ಗಾಂಧೀಜಿಯವರು ೧೯೨೨ರಲ್ಲಿ ಶಿಕ್ಷೆಗೊಳಗಾಗಿ ಕಾರಾಗೃಹಕ್ಕೆ ಒಯ್ಯಲ್ಪಟ್ಟರು. ಅವರ ಶಿಕ್ಷಾವಧಿ ಮುಗಿಯುವುದಕ್ಕೆ ಮುಂಚೆಯೇ ಅನಾರೋಗ್ಯದ ನಿಮಿತ್ತ ಬಿಡುಗಡೆಯಾದರು. ತದನಂತರ ಅವರು ಕೈಗೊಂಡ ಮೊಟ್ಟಮೊದಲ ಕಾರ್ಯಕ್ರಮಗಳಲ್ಲಿ ಇದು ಒಂದೆಂದು ನನಗೆ ಜ್ಞಾಪಕವಿದೆ. ವೈಕಂಗೆ ಹೋಗುವಾಗ, ಮತ್ತು ಬರುವಾಗ, ಎರಡು ಬಾರಿಯೂ ಮದ್ರಾಸಿಗೆ ಭೇಟಿ ಇತ್ತು ಸಮುದ್ರದ ತೀರದ ಮರಳಿನ ಮೈದಾನದಲ್ಲಿ ಭಾಷಣ ಮಾಡಿದರು. ಮೈದಾನವೆಲ್ಲ ಜನರಿಂದ ತುಂಬಿ ಹೋಗಿತ್ತು. ಅವರ ಭಾಷಣದಲ್ಲಿ ಹೇಳಿದ ಒಂದು ವಾಕ್ಯ ಈಗಲೂ ನನಗೆ ಜ್ಞಾಪಕ ಬರುತ್ತದೆ. ಅದೇನೆಂದರೆ ನಮ್ಮ ಪ್ರತಿಯೊಂದು ವಿಚಾರವನ್ನೂ ಕೆಲಸವನ್ನೂ ಸತ್ಯವನ್ನೇ ಅಡಿಗಲ್ಲಾಗಿಟ್ಟು ಅಹಿಂಸೆಯೆಂಬ ಸುತ್ತಿಗೆಯ ಬಡತನದಿಂದ ಪರೀಕ್ಷಿಸಬೇಕು. ಆ ಪರೀಕ್ಷೆಯಲ್ಲಿ ಸಲ್ಲುವುದು ಮಾತ್ರ ನಿಲ್ಲತಕ್ಕದ್ದು" ಎಂದು.

ತದನಂತರ ಗಾಂಧೀಜಿಯವರು ತಮ್ಮ ದೇಹಾರೋಗ್ಯದ ನಿಮಿತ್ತ ನಂದೀಬೆಟ್ಟದಲ್ಲೂ ಬೆಂಗಳೂರಿನಲ್ಲೂ ಕೆಲವು ತಿಂಗಳ ಕಾಲ ಇದ್ದ ಸಂದರ್ಭದಲ್ಲಿ ಅವರ ಸಾನ್ನಿಧ್ಯದಲ್ಲಿ ಇರುವ ಮಹದವಕಾಶ ನನಗೆ ಲಭಿಸಿತು. ಇದನ್ನು ನನ್ನ ಪುಣ್ಯ ವಿಶೇಷವೆಂದು ಬೇರೆ ಹೇಳಬೇಕಾಗಿಲ್ಲ. ಅವರು ಯಾವ ರೀತಿ ನಡೆದುಕೊಳ್ಳುವರೆಂಬುದು ೨೪ ಗಂಟೆ ಕಾಲವೂ ನೋಡಿ ತಿಳಿದುಕೊಳ್ಳುವ ಅವಕಾಶ ನನಗೆ ದೊರಕಿತು. ಪ್ರತಿಯೊಂದು ಕ್ಷಣವೂ ಅವರು ಎಂತಹ ಮಹಾಪುರುಷರೆಂಬುದನ್ನು ತೋರಿಸುತ್ತಿತ್ತು. ಅವರ ಕೆಲಸ, ಆಹಾರ, ನಿದ್ರೆ ಎಲ್ಲವೂ ಕಟ್ಟುನಿಟ್ಟಾದ ಕ್ರಮದಿಂದಲೂ ಶಿಸ್ತಿನಿಂದಲೂ ನಡೆಯುತ್ತಿತ್ತು. ಒಂದು ಕ್ಷಣವೂ

ದಂಡವಾಗುತ್ತಿರಲಿಲ್ಲ ಅವರು ಕೋಪಗೊಂಡದ್ದನ್ನು ನಾನು ಎಂದು ಕಾಣಲಿಲ್ಲ. ಆದರೂ ಅವರಿಗೆ ಒಪ್ಪಿಗೆಯಾಗದ ಸಂದರ್ಭದಲ್ಲಿ ಅವರು ಅದನ್ನು ಯಾವ ಸಂಕೋಚವೂ ಇಲ್ಲದೆ ತಿಳಿಸುತ್ತಿದ್ದರು. ಆದರೆ ಇದು ಹಿತಮಿತ ನುಡಿಗಳಿಂದಲೇ. ಇದು ಕೋಪದ ಅಥವಾ ಅಧಿಕಾರದ ಮಾತಿಗಿಂತ ಹೆಚ್ಚು ಪರಿಣಾಮಕಾರಿಯಾಗುತ್ತಿತ್ತು. ಮತ್ತು ಅವರ ಸುತ್ತಮುತ್ತಲಿನವರಲ್ಲಿ ಯಾರಾದರೂ ಅವರು ಮಾಡಬೇಕಾದ ಕೆಲಸವನ್ನು ಮಾಡದೇ ಹೋದರೆ ಗಾಂಧೀಜಿಯವರು ತಾವೇ ಅದನ್ನು ಮಾಡಿಬಿಡುತ್ತಿದ್ದರು. ಇದರ ಪರಿಣಾಮವು ಗಂಭೀರವಾಗಿರುತ್ತಿತ್ತು.

ಅವರು ಯಾವ ವಿಷಯಕ್ಕೆ ಗಮನ ಕೊಟ್ಟರೂ ಅದು ತಾತ್ವಿಕವಾಗಿ ಸರಿಯಾಗಿ ಇರಬೇಕಾಗಿತ್ತಲ್ಲದೆ ಅವರು ಪ್ರತಿಯೊಂದು ವಿವರವನ್ನೂ ಪರಿಶೀಲಿಸುತ್ತಿದ್ದರು. ಇದಕ್ಕೆ ಉದಾಹರಣೆಯಾಗಿ ಒಂದು ಸಂದರ್ಭವನ್ನು ಹೇಳಬಹುದು. ಅವರು ಬೆಂಗಳೂರಿನಲ್ಲಿದ್ದಾಗ ಗುಜರಾತಿನಲ್ಲಿ ಮಹಾ ಪ್ರವಾಹದಿಂದ ಸಾವಿರಾರು ಮಂದಿ ಮನೆಮಾರುಗಳನ್ನು ಕಳೆದುಕೊಂಡು ಬಹು ಕಷ್ಟಕ್ಕೆ ಗುರಿಯಾದರು. ಬೆಂಗಳೂರಿನ ಗುಜರಾತಿ ನಿವಾಸಿಗಳ ಪೈಕಿ ಕೆಲವರು ಗಾಂಧೀಜಿಯವರ ಬಳಿಗೆ ಬಂದು ತಮ್ಮ ಪ್ರದೇಶದ ಬಾಂಧವರಿಗೆ ಒದಗಿದ ಕಷ್ಟ ಪರಿಹಾರ ಮಾಡುವ ವಿಷಯ ಪ್ರಸ್ತಾಪ ಮಾಡಿದರು. ಆದರೆ ಹಾಗೆ ಮಾತನಾಡುವುದರಲ್ಲಿ ಅವರು ಕೆಲವು ಕಾಲವನ್ನು ದುಃಖ ಸೂಚಿಸುವುದರಲ್ಲೂ ಕಷ್ಟಗಳನ್ನು ವರ್ಣಿಸುವುದರಲ್ಲೂ ಕಳೆದರು. ಗಾಂಧೀಜಿಯವರು ಅವರ ಮಾತನ್ನು ತಡೆದು, "ಈ ವಿಷಯಕ್ಕೆ ಎಂದರೆ ಶೋಕ ಪ್ರದರ್ಶನಕ್ಕಾಗಿ ಅಷ್ಟೊಂದು ಕಾಲ ಕಳೆಯುವುದರಲ್ಲಿ ಅರ್ಥವಿಲ್ಲ. ಅದಲ್ಲದೆ ಅದಕ್ಕೆ ಮನಸ್ಸು ಕೊಡುವುದರಿಂದ ನಮ್ಮ ಧೈರ್ಯ ಕುಂದುತ್ತದೆ. ನೀವು ಈ ಸಂಜೆಯೊಳಗಾಗಿ ಎಲ್ಲ ವಿವರವನ್ನೊಳಗೊಂಡ, ಎಂದರೆ ಯಾವ ಯಾವ ಭಾಗದಲ್ಲಿ ಎಷ್ಟೆಷ್ಟು ಮಂದಿ ಯಾವ ಯಾವ ರೀತಿ ತೊಂದರೆಗೊಳಗಾಗಿದ್ದಾರೆ, ಅವರಿಗೆ ಪರಿಹಾರ ಯಾವ ರೀತಿ ಸಾಧ್ಯ. ಅದಕ್ಕೆ ಎಷ್ಟು ವೆಚ್ಚ ತಗಲುತ್ತದೆ, ನೀವುಗಳು ಏನು ಕೊಡಲು ಸಿದ್ಧರಾಗಿದ್ದೀರಿ. ಇವನ್ನೆಲ್ಲಾ ಒಳಗೊಂಡ ಒಂದು ವರದಿಯನ್ನು ಸಿದ್ಧಗೊಳಿಸಿ ತಂದರೆ ನಿರ್ದಿಷ್ಟ ರೀತಿಯಲ್ಲಿ ಮುಂದಿನ ಕಾರ್ಯದ ರೂಪುರೇಖೆಯನ್ನು ಚಿತ್ರಿಸಬಹುದು". ಎಂದು ತಿಳಿಸಿದರಲ್ಲದೆ ಪುನಃ ಬಂದಾಗ ಕೂಡ ಇಷ್ಟು ಕಾಲದೊಳಗಾಗಿ ತಮ್ಮೊಡನೆ ಅವರ ಕೆಲಸವನ್ನು ಮುಗಿಸಬೇಕೆಂದು ಸ್ಪಷ್ಟೋಕ್ತಿಯಿಂದ ಹೇಳಿದರು. ಗಾಂಧೀಜಿಯವರು ಇಲ್ಲಿದ್ದ ಕಾಲದಲ್ಲಿಯೇ ನಮ್ಮ ಹಿಂದಿನ ಮಹಾರಾಜರ ಆಳ್ವಿಕೆಯ ರಜತ ಮಹೋತ್ಸವ ನಡೆಯುವ ಸಂದರ್ಭ ಒದಗಿತು. ಇಲ್ಲಿನ ಮಾನ್ಯ ಪತ್ರಿಕಾಕರ್ತರೊಬ್ಬರು ರಜತ ಮಹೋತ್ಸವದ ವಿಶೇಷ ಸಂಚಿಕೆಯನ್ನು ಪ್ರಕಟಿಸಲು ನಿಶ್ಚಯಿಸಿ ಅದಕ್ಕೆ ಗಾಂಧೀಜಿಯವರ ಸಂದೇಶವನ್ನು ಬಯಸಿದರು. ಅವರು ನನಗೆ ಮಿತ್ರರಾಗಿದ್ದರಿಂದ ಆ ಕಾರ್ಯವನ್ನು ನನಗೆ ಒಪ್ಪಿಸಿದರು. ನಾನು ಗಾಂಧೀಜಿಯವರಲ್ಲಿ ಈ ಕೋರಿಕೆಯನ್ನು ಸಲ್ಲಿಸಲು ಅವರು ಸುಲಭವಾಗಿ ಒಪ್ಪಲಿಲ್ಲ. ಅವರು ಆ ಪತ್ರಿಕೆ ಹುಟ್ಟಿದ್ದು, ಬೆಳೆದದ್ದು, ಅದರ ಇತಿಹಾಸ, ಅದರ ನೀತಿ, ದೃಷ್ಟಿ ಇವುಗಳನ್ನೆಲ್ಲಾ ಸೂಕ್ಷ್ಮವಾಗಿ ವಿಚಾರಿಸಿದರಲ್ಲದೆ ಅದರ ಹತ್ತಾರು

ಸಂಚಿಕೆಗಳನ್ನು ತರಿಸಿಕೊಂಡು ಅವುಗಳಲ್ಲಿ ಇದ್ದ ಲೇಖನಗಳ ಭಾಷಾಂತರವನ್ನು ಕೇಳಿ ಅವುಗಳಲ್ಲಿನ ವಿಷಯ, ಪತ್ರಿಕೆಯ ಧೋರಣೆ, ಬರವಣಿಗೆಯ ಗಾಂಭೀರ್ಯ, ಅಸಾಧು ವಿಷಯಗಳ ಬಗ್ಗೆ ಜಾಹೀರಾತುಗಳನ್ನು ಪ್ರಕಟಿಸುವುದರಿಂದ ಉತ್ಪತ್ತಿಯನ್ನೇನಾದರೂ ಪಡೆಯುತ್ತಿತ್ತೇ ಇವೇ ಮುಂತಾಗಿ ಎಲ್ಲಾ ವಿಷಯಗಳನ್ನು ಪರಿಶೀಲಿಸಿ ತಮ್ಮ ಮನಸ್ಸಿಗೆ ತೃಪ್ತಿಯಾದ ಮೇಲೆ ಒಪ್ಪಿದರು.

ಇದೇ ವಿಷಯಕ್ಕೆ ಸಂಬಂಧಪಟ್ಟ ಇನ್ನೊಂದು ವಿಷಯವನ್ನು ಹೇಳಬೇಕು. ಅವರು ಇಲ್ಲಿನ ಸರ್ಕಾರದ ಎಂದರೆ ಮಹಾರಾಜರ ಅತಿಥಿಯಾಗಿ ಇಲ್ಲಿಗೆ ಬಂದಿದ್ದರು. ಏಕೆಂದರೆ ಇಲ್ಲಿನ ಸರ್ಕಾರವು ವಾಸ್ತವವಾಗಿ ಮಹಾರಾಜರ ಸರ್ಕಾರವೇ ಆಗಿತ್ತು. ಆದರೆ ಅವರು ತಾವು ಇತ್ತ ಸಂದೇಶದಲ್ಲಿ ಮಹಾರಾಜರ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರೂ ಅದರ ಜೊತೆಗೆ ಅವರು "ನನಗೆ ತಿಳಿದ ಮಟ್ಟಿಗೆ" ಎಂಬ ಪದಗಳನ್ನು ಸೇರಿಸಿದ್ದರು. ಈ ರೀತಿ ವಿಶೇಷಣ ಸಹಿತವಾಗಿ ಶ್ಲಾಘಿಸುವುದು ಸಾಮಾನ್ಯ ದೃಷ್ಟಿಯಿಂದ ಅತಿಥಿಯ ನೀತಿಗೆ ತಕ್ಕದ್ದಲ್ಲವೆಂದು ಅಥವಾ ಅನುಚಿತವೆಂದು ಕಾಣಬಹುದು. ಆದರೆ ಇದು ಗಾಂಧೀಜಿಯವರು ಸತ್ಯದಲ್ಲಿಟ್ಟಿದ್ದ ಪೂರ್ಣ ಶ್ರದ್ಧೆಯನ್ನು ತೋರಿಸುತ್ತದೆ.

ಗಾಂಧೀಜಿಯವರು ನೈರ್ಮಲ್ಯದ ವಿಷಯದಲ್ಲಿ ಅತ್ಯಂತ ಲಕ್ಷ್ಯ ಕೊಡುತ್ತಿದ್ದರು. ಅವರು ಸದಾ ಶುಭ್ರ ಧವಳ ವಸ್ತ್ರಧಾರಿಗಳಾಗಿರುತ್ತಿದ್ದರು. ಅವರ ಆವರಣದಲ್ಲಿ ಎಲ್ಲ ಪದಾರ್ಥಗಳೂ ಶುಚಿಯಾಗಿ, ಅಚ್ಚುಕಟ್ಟಾಗಿ ಇರುತ್ತಿದ್ದವು. ಅಲ್ಪ ಸ್ವಲ್ಪ ಏನಾದರೂ ವ್ಯತ್ಯಾಸವಾದರೆ ತಕ್ಷಣವೇ ಅವರ ಗಮನ ಆ ಕಡೆ ಹೋಗುತ್ತಿತ್ತು. ಅವರು ನಂದಿ ಬೆಟ್ಟದಲ್ಲಿರುವಾಗ ಒಂದು ದಿನ ಅವರು ಇದ್ದ ಕೋಣೆಯಲ್ಲಿ ಒಂದೆರಡು ನೊಣ ಬಂದಿದ್ದನ್ನು ಅವರು ಕಂಡರು. ಸುತ್ತ ಮುತ್ತಲಿದ್ದವರನ್ನು ಸಂಬೋಧಿಸಿ–ಅವರು "ಇಲ್ಲಿಗೆ ಸಮೀಪದಲ್ಲಿ ಎಲ್ಲಿಯೋ ಕೊಳೆ ಸೇರಿರಬೇಕು. ಅದಕ್ಕೇ ಈ ನೊಣಗಳು ಬರುತ್ತಿವೆ" ಎಂದರು. ಅಲ್ಲಿದ್ದವರು "ಇಲ್ಲಿ ಎಲ್ಲವೂ ಶುಚಿಯಾಗಿದೆ ಎಲ್ಲೂ ಕೊಳೆ ಸೇರಿಲ್ಲ" ಎಂದರು. ಗಾಂಧೀಜಿಯವರು "ಹಾಗಿರಲೇ ಇರದು, ಪುನಃ ಹೋಗಿ ನೋಡಿ" ಎಂದರು. ಹಾಗೆ ನೋಡಲು ಕಟ್ಟಡಕ್ಕೆ ಸ್ವಲ್ಪ ದೂರದಲ್ಲಿ ಒಂದು ಕಡೆ ಪಾತ್ರೆಗಳನ್ನು ತೊಳೆದ ಮುಸುರೆ ಪದಾರ್ಥ ಬಿದ್ದಿತ್ತು. ನೊಣಗಳು ಅದನ್ನು ಮುತ್ತಿದ್ದವು. ಅದನ್ನು ತೆಗೆದು ಹಾಕಿದ ಮೇಲೆ ನೊಣಗಳು ಮಾಯವಾದವು.

–ನಿಟ್ಟೂರು ಶ್ರೀನಿವಾಸರಾಯ

* * *

## ೩. ನಾ ಕಂಡ ಗಾಂಧೀಜಿ

(ಶ್ರೀ ಟೇಕೂರು ಸುಬ್ರಹ್ಮಣ್ಯಂ)

೧೯೩೩ನೇ ಇಸವಿಯಲ್ಲಿ ಪೂನಾ ನಗರದಲ್ಲಿ ಅಖಿಲ ಭಾರತ ಕಾಂಗ್ರೆಸ್ ಕಮಿಟಿ ಸಮಾವೇಶವಾಯಿತು. ಸತ್ಯಾಗ್ರಹ ಉದ್ಯಮ ಯಾವ ಸ್ವರೂಪ ತಾಳಬೇಕೆಂದು ಚರ್ಚೆ

ನಡೆಯುತ್ತಿತ್ತು. ಮಹಾತ್ಮಾ ಗಾಂಧೀಜಿ ೨೧ ದಿವಸ ಉಪವಾಸ ಮುಗಿಸಿ, ಪರ್ಣಕುಟಿಯಲ್ಲಿ ವಿಶ್ರಾಂತಿಗಾಗಿ ಬಂದಿದ್ದರು.

ಪ್ರಾತಃಕಾಲದಿಂದ ಕಾರ್ಯಕರ್ತರು ತಮ್ಮ ಸ್ಥಾನಿಕ ಸಮಸ್ಯೆಗಳ ಚರ್ಚೆಗಾಗಿ, ಮಹಾತ್ಮಾಜಿಯವರನ್ನು ಕಾಣಲು ಅವಿಶ್ರಾಂತವಾಗಿ ಪರ್ಣಕುಟಿಗೆ ಬಂದು ಹೋಗುತ್ತಿದ್ದರು. ಸಾಯಂಕಾಲದ ಸಮಯ, ಕರ್ನಾಟಕ ಪ್ರಾಂತ್ಯದ ನಾಲ್ಕೈದು ಸ್ನೇಹಿತರು ಮಹಾತ್ಮಾಜಿಯವರನ್ನು ಕಂಡು, ಇಲ್ಲಿ ಸತ್ಯಾಗ್ರಹ ಚಳವಳಿ ಯಾವ ಸ್ವರೂಪ ತಾಳಬೇಕೆಂದು ಅವರ ಸಲಹೆ ತೆಗೆದುಕೊಳ್ಳಬೇಕೆಂದು ಹೋಗಿದ್ದೆವು. ದಿ॥ ಕಾರ್ನಾಡ ಸದಾಶಿವರಾಯರು ನಮ್ಮ ಜೊತೆಯಲ್ಲಿದ್ದರು. ಮಹಾತ್ಮಾಜಿಗೆ ಆಗ ಬಹಳ ದುರ್ಬಲಸ್ಥಿತಿ. ಅತಿಶಯಪ್ರೇಮ, ಪ್ರಶಾಂತಿಗಳಿಂದ ಅವರು ಹೇಳಿದರು, "ಮುಂಜಾನೆಯಿಂದ ವಿವಿಧ ಪ್ರಾಂತಗಳ ಸ್ನೇಹಿತರು ನನ್ನ ಸಂಗಡ ಒಂದೇ ಸಮನೆ ಮಾತನಾಡುತ್ತ ಬಂದಿದ್ದಾರೆ. ಈ ದೇಹ ವಿಶೇಷ ಪ್ರಯಾಸದಿಂದ ಬಳಲಿದೆ. ಅದಕ್ಕೆ ಸ್ವಲ್ಪ ವಿಶ್ರಾಂತಿ ಕೊಡಿ. ಸ್ವಲ್ಪ ವಿಶ್ರಮಿಸಿಕೊಂಡು ಮತ್ತೆ ನಿಮ್ಮ ಸಂಗಡ ಚರ್ಚಿಸುತ್ತೇನೆ. ಇಲ್ಲದಿದ್ದರೆ ಈ ದೇಹ ಬಿದ್ದುಹೋಗಬಹುದು. ಅದರಿಂದ ಸಂಭವಿಸುವ ನಷ್ಟ ನಿಮ್ಮದು. ಇದನ್ನು ವಿಶ್ವಸ್ಥ ಸಾಧನವಾಗಿ ವಿನಿಯೋಗಿಸಬೇಕು. ಆದ ಕಾರಣ ಕೆಲವು ನಿಮಿಷ ವಿಶ್ರಾಂತಿಗಾಗಿ ನಿದ್ರಿಸುತ್ತೇನೆ" ಎಂದು ಹೇಳಿ ತತ್‌ಕ್ಷಣ ನಿದ್ದೆ ಹೋದರು.

ಆಗ ನಾವು ನಾಚಿಕೆಪಟ್ಟೆವು. ಅವರ ದುರ್ಬಲಸ್ಥಿತಿಯಲ್ಲಿ ಅವರಿಗೆ ತೊಂದರೆ ಕೊಡುವುದು ಅನುಚಿತವೆಂದು ಭಾವಿಸಿ, ನಿಮ್ಮ ದರ್ಶನಕ್ಕಾಗಿ ಮತ್ತೆ ಬರುತ್ತೇವೆಂದು ಬರೆದಿಟ್ಟು, ಅವರಿಗೆ ಹೆಚ್ಚು ತೊಂದರೆ ಕೊಡದೆ ಅಲ್ಲಿಂದ ಹೊರಟುಬಂದೆವು.

ಅವರು ದೇಹದ ಬಗ್ಗೆ ಯಾವ ದೃಷ್ಟಿ ಹೊಂದಿದ್ದರೆಂಬ ವಿಷಯವನ್ನು ಈ ಸಂದರ್ಭದಲ್ಲಿ ಗಮನಿಸಿದೆವು. ಅದು ನಮ್ಮ ಸ್ವಂತ ವಸ್ತುವಲ್ಲ, ರಾಷ್ಟ್ರದ ಅಥವಾ ಮಾನವ ಸಮಾಜದ ಸೇವೆಗಾಗಿ ಸದ್ವಿನಿಯೋಗ ಮಾಡಲು ಅದನ್ನು ಜಾಗರೂಕತೆಯಿಂದ ಅಹಂಕಾರ ಮಮಕಾರ ಭಾವನೆಯಿಲ್ಲದೆ ನಿಸ್ಸಂಗಬುದ್ಧಿಯಿಂದ ನೋಡುವ ಅವರ ಅದ್ವಿತೀಯ ಧೋರಣೆ ಪ್ರತ್ಯಕ್ಷವಾಗಿ ನಮ್ಮ ಗಮನಕ್ಕೆ ಬಂತು.

೧೯೩೪ರಲ್ಲಿ ಮಹಾತ್ಮಾ ಗಾಂಧೀಜಿ ಹರಿಜನ ಸೇವೆಗಾಗಿ ಕರ್ನಾಟಕದಲ್ಲಿ ಪ್ರವಾಸ ಮಾಡಿದರು. ಬಳ್ಳಾರಿ ಜಿಲ್ಲೆಯಲ್ಲಿ ಹರಪನಹಳ್ಳಿ, ಕೂಡ್ಲಿಗಿ ತಾಲ್ಲೂಕುಗಳಲ್ಲಿ ಪ್ರವಾಸ ಮುಗಿಸಿಕೊಂಡು ಸಾಯಂಕಾಲಕ್ಕೆ ಸೊಂಡೂರಿಗೆ ಬಂದರು. ಅಲ್ಲಿ ಹವಾಮಾನ ತಂಪಾಗಿತ್ತು. ರಾತ್ರಿ ಡಾಕ್ಟರ್ ಎಸ್.ಬಿ., ಸರಾಫ್‌ರ ಮನೆಯಲ್ಲಿ ವಿಶ್ರಾಂತಿ ಪಡೆದರು.

ಸೊಂಡೂರಿನಲ್ಲಿ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತ ಈ ಸಂಸ್ಥಾನದ ತರುಣ ಅರಸರು ಶ್ರೀ ಯಶವಂತರಾವ್ ಘೋರ್ಪಡೆ ಹರಿಜನ ಸೇವೆಗಾಗಿ ಬಹಳ ಸುಧಾರಣೆ ಮಾಡಿದ್ದಾರೆ ಎಷ್ಟೋ ಸಂಸ್ಥಾನಗಳಿಗಿಂತ ಇದು ಉತ್ತಮ ಎಂದರು.

ಮರುದಿನ ಪ್ರಾತಃಕಾಲ ಪ್ರಾರ್ಥನೆ ಮುಗಿದಮೇಲೆ ಆ ದಿವಸದ ಕಾರ್ಯಕ್ರಮವನ್ನು ಕುರಿತು ನನ್ನ ಸಂಗಡ ಚರ್ಚಿಸಿದರು. ಮುಂಚೆ ಸೇರಿಸದಿದ್ದ ಒಂದು ಗ್ರಾಮವನ್ನು ಕಾರ್ಯಕ್ರಮದಲ್ಲಿ ಸೇರಿಸಲಾಗಿತ್ತು. ಆಗ, ಇದನ್ನು ಏಕೆ ಸೇರಿಸಿದಿರೆಂದು ನನ್ನನ್ನು ಪ್ರಶ್ನಿಸಿದರು. ಹರಿಜನ ಉದ್ಯಮ ಚೆನ್ನಾಗಿ ನಡೆಯಬೇಕೆಂಬ ಆಕಾಂಕ್ಷೆಯಿಂದಲೂ, ಅಧಿಕ ಹಣ ವಸೂಲು ಮಾಡುವ ಉತ್ಸಾಹದಿಂದಲೂ ಅದನ್ನು ಸೇರಿಸಲಾಯಿತೆಂದು ಹೇಳಿ, ನನ್ನ ಜವಾಬ್ದಾರಿಯನ್ನೂ, ತಪ್ಪನ್ನೂ ನಾನು ಸ್ವೀಕರಿಸಿದೆ. ಆಗ, ಅವರು ಕುರುಗೋಡು ಗ್ರಾಮಕ್ಕೆ ಹೋಗದೆ ಇದ್ದದ್ದಕ್ಕೆ ಅಲ್ಲಿನ ಸ್ನೇಹಿತರಿಗೆ ಪತ್ರ ಬರೆಯಲು ಹೇಳಿ, ಅಧಿಕ ಹಣ ವಸೂಲು ಮಾಡುವ ವಿಷಯವನ್ನು ಬಹಳ ದೀರ್ಘವಾಗಿ ಮಾತನಾಡಿದರು. ಧ್ಯೇಯಗಳೂ, ನಿಯಮಗಳೂ ಮುಖ್ಯವೆಂತಲೂ ಹಣ ವಸೂಲು ಮಾಡುವದು ಗೌಣವೆಂತಲೂ ಹೇಳಿದರು. ಬೊಂಬಾಯಿ ನಗರದ ಒಬ್ಬ ವ್ಯಕ್ತಿ ಅನೇಕ ಸಾವಿರಗಳ ಮೊತ್ತಕ್ಕೆ ಒಂದು ಚೆಕ್ಕು ಕಳಿಸಿ, ಅದನ್ನು ಹರಿಜನ ಸೇವೆಯಲ್ಲಿ ವಿನಿಯೋಗಿಸ ಬಾರದೆಂದು ತಿಳಿಸಿದ್ದ. ಆ ಸಂದರ್ಭದಲ್ಲಿ ಆ ಚೆಕ್ಕನ್ನು ವಾಪಸ್ಸು ಮಾಡಲಾಯಿತೆಂದು ಮಹಾತ್ಮಾ ಗಾಂಧೀಜಿ ನನಗೆ ತಿಳಿಸಿದರು.

ಹೊಸಪೇಟೆಯಲ್ಲಿ ರೈಲು ನಿಂತಷ್ಟು ಹೊತ್ತಿನಲ್ಲೇ ಒಂದು ಬಹಿರಂಗ ಸಭೆ ನಡೆಯಿತು. ಹೊರಗಡೆ ಗಾಂಧೀಜಿ ಒಂದೇ ಮಾತನ್ನು ಹೇಳಿ ಮುಗಿಸಿದರು. – "ಅಸ್ಪೃಶ್ಯತೆಯನ್ನು ಬೇರು ಸಹಿತ ಕಿತ್ತುಹಾಕಬೇಕು"

ಹಿಂದೂಸ್ತಾನದಲ್ಲಿ ಎಲ್ಲಾ ಪ್ರಾಂತಗಳ ಎಲ್ಲಾ ಕಾರ್ಯಕರ್ತರ ಜೀವನದ ಮಾಹಿತಿ ಅವರಿಗೆ ತಿಳಿದಿತ್ತು. ಇನ್ನು ಬೇರೆ ಯಾವ ರಾಷ್ಟ್ರೀಯ ಮುಖಂಡರಿಗೂ ಆ ಮಾಹಿತಿ ಇರಲಿಲ್ಲ. ಬೇರೆ ಯಾರಾದರೂ ಆ ಪ್ರೇಮ ಸಂಬಂಧವನ್ನು ಬೆಳೆಸಲಿಲ್ಲ. ಅದಕ್ಕಾಗಿಯೇ ಪ್ರಾಂತೀಯ ಮತ್ತು ಸ್ಥಾನಿಕ ಕಾರ್ಯಕರ್ತರನ್ನು ಅಸಂಖ್ಯಾತ ಪ್ರಮಾಣದಲ್ಲಿ ತಯಾರು ಮಾಡಿದರು ಗಾಂಧೀಜಿ. ಎಂದೇ ಈ ಕಾರ್ಯಕರ್ತರು ನಿರ್ಮಾಣ ಕಾರ್ಯಕ್ರಮಗಳಲ್ಲಿ, ಸತ್ಯಾಗ್ರಹ ಉದ್ಯಮಗಳಲ್ಲಿ ಭಾಗವಹಿಸಲು ಸಾಧ್ಯವಾಯಿತು.

ಬಳ್ಳಾರಿಯ ಪ್ರವಾಸ ಮುಗಿಸಿ, ಹೊಸಪೇಟೆಯ ರೈಲು ಸ್ಟೇಶನದಲ್ಲಿ ಅತಿಶಯ ಆತ್ಮೀಯತೆಯಿಂದ ಮಾತನಾಡುತ್ತ ಕರ್ನಾಟಕದಲ್ಲಿ ಇಬ್ಬರು ಟಿ.ಸುಬ್ರಹ್ಮಣ್ಯಂರು ಕಾರ್ಯ ಕರ್ತರಿದ್ದಾರೆ. ಒಬ್ಬರು ತುಮಕೂರು ಜಿಲ್ಲೆಯಲ್ಲಿ ಮತ್ತೊಬ್ಬರು ಬಳ್ಳಾರಿ ಜಿಲ್ಲೆಯಲ್ಲಿ– ಎಂದು ನಗುತ್ತಾ ಹೇಳಿದರು.

ಅವರ ಜ್ಞಾಪಕಶಕ್ತಿ ಅಸಾಧಾರಣವಾದುದ್ದು. ಹಿಂದೂಸ್ತಾನದದಲ್ಲಿ ಅಸಂಖ್ಯಾತ ಪಟ್ಟಣಗಳನ್ನೂ, ಹಳ್ಳಿಗಳನ್ನು ಅವರು ಪ್ರವಾಸಗಳಲ್ಲಿ ನೋಡಿದ್ದರು. ಬಳ್ಳಾರಿಗೆ ೧೯೨೧ನೇ ಇಸ್ವಿಯಲ್ಲಿ ಮೊಟ್ಟಮೊದಲು ಬಂದಿದ್ದರು. ಆಗ ಇಲ್ಲಿ ಕೇಳ್ಕರರ ತೀರ್ಪಿನ ಮುಂದೆ ಎರಡು ಜಿಲ್ಲಾ ಕಾಂಗ್ರೆಸ್ ಕಮಿಟಿಗಳಿದ್ದವು.

ಸಾಯಂಕಾಲ ದೊಡ್ಡ ಬಹಿರಂಗ ಸಭೆಯನ್ನು ಮುಗಿಸಿ ರಾತ್ರಿ ರೈಲು ಸ್ಟೇಶನ್ನಿನ

ಪ್ಲಾಟ್‌ಫಾರಂ ಮೇಲೆ ತಮ್ಮ ಖಾದಿವಸ್ತ್ರ ಒಂದನ್ನು ಹಾಸಿಕೊಂಡು ಮಲಗಿದರಂತೆ. ಬೆಳಗು ಮುಂಜಾನೆ ಎದ್ದು ಮುಂದಿನ ಪ್ರವಾಸಕ್ಕಾಗಿ ತಯಾರಾಗಿದ್ದರೂ ತಮಗೆ ಟಿಕೆಟ್ ಕೊಡಿಸಲು ಯಾವ ಕಾಂಗ್ರೆಸ್ ಕಮಿಟಿಯ ಪ್ರತಿನಿಧಿಯೂ ಬರಲಿಲ್ಲ. ತಮ್ಮ ಟಿಕೆಟ್ಟನ್ನು ತಾವೇ ಖರೀದಿ ಮಾಡಿ, ಪ್ರಯಾಣ ಬೆಳೆಸಿದರು. ೧೯೩೫ರಲ್ಲಿ ನಾನು ವಾರ್ಧಾಕ್ಕೆ ಹೋದಾಗ ಈ ವಿಷಯವನ್ನು ನನಗೆ ಮಾತಿನ ಸಂದರ್ಭದಲ್ಲಿ ತಿಳಿಸಿದರು. (I was left in the lurch by both the committees. I had to purchase my own ticket). ಈಗಿನ (೧೯೩೫) ಪರಿಸ್ಥಿತಿ ಹೇಗೆ ಎಂದು ನನ್ನನ್ನು ಕೇಳಿದರು. ಆಗ ನಾನು – "ಈಗ ಒಂದು ಕಾಂಗ್ರೆಸ್ ಕಮಿಟಿ ಇದೆ. ಅದಕ್ಕೆ ನಾನು ಕಾರ್ಯದರ್ಶಿ ಆಗಿದ್ದೇನೆಂದು ತಿಳಿಸಿದೆ". ಆಗ ಅವರು ದೇವರನ್ನು ಸ್ತುತಿಸಬೇಕು (God be praised)ಎಂದು ಹೇಳಿದರು.

ಸಾಯಂಕಾಲ ವಾರ್ಧಾದಿಂದ ಹಿಂದಕ್ಕೆ ಪ್ರಯಾಣ ಮಾಡಲು ರೈಲು ಸ್ಟೇಶನ್ನಿಗೆ ಹೋಗಲು ಟಾಂಗಾ ತರಿಸಿ, ಶ್ರೀ ಜಮುನಾಲಾಲ ಬಜಾಜರ ಅತಿಥಿಗೃಹದ ಹತ್ತಿರ ನನ್ನ ಸಾಮಾನು ತರಿಸುತ್ತಿದ್ದೆ. ಆಗ ಮಹಾತ್ಮಾ ಗಾಂಧೀಜಿಯವರು ಶ್ರೀಮತಿ ಕಸ್ತೂರಬಾಯಿ ಗಾಂಧೀಜಿಯವರನ್ನು ಮಾತನಾಡಿಸಲು ಅಲ್ಲಿಗೆ ಬಂದರು. ಅವರನ್ನು ಕಂಡು ಅವರ ಅಪ್ಪಣೆ, ಆಶೀರ್ವಾದ ಪಡೆಯಲು ಅವರ ಸಮೀಪಕ್ಕೆ ಹೋದೆ. ಅವರು ಟಾಂಗಾತನಕ ಆತ್ಮೀಯತೆ, ಪ್ರೇಮಗಳಿಂದ ನನ್ನ ಸಂಗಡ ಮಾತನಾಡುತ್ತಾ ಬಂದಾಗ ನಾನು, ನನ್ನ ಜೀವನದ ಮೂಲ ವಿಚಾರ ಕಾರ್ಯಕಲಾಪಗಳಿಗಾಗಿ ನೀವಿತ್ತ ಸಲಹೆಗೆ ನಾನು ನಿಮಗೆ ತುಂಬಾ ಋಣಿ ಎಂದು ನಮ್ರತೆಯಿಂದ ನಿವೇದಿಸಿದೆ. ಆಗ ಅವರು ಮತ್ತೆ ದೇವರನ್ನು ಸ್ತುತಿಸಬೇಕು (God be praised) ಎಂದು ಪ್ರಶಾಂತವಾಗಿ ಹೇಳಿದರು.

ಅವರಿಗೆ ಯಾವಾಗಲೂ ದೇವರಲ್ಲಿ ಅಚಲವಾದ ಭಕ್ತಿ, ವಿಶ್ವಾಸಗಳಿದ್ದವು. ಆಸ್ತಿಕ್ಯ ಭಾವನೆ, ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ಅವರ ಜೀವನವನ್ನು ಪ್ರಚೋದನೆ ಗೊಳಿಸಿ. ಅವರಿಗೆ ಅಸಾಧಾರಣ ಆಂತರೀಕ ಶಕ್ತಿಯನ್ನು ಕೊಡುವ ಅನನ್ಯ ಆಧಾರವಾಗಿತ್ತು.

ನಾಸ್ತಿಕ ಭಾವಗಳು ಭೌತಿಕ ಭಾವನೆಗಳು ವಿಧ್ವಂಸಕ ಶಕ್ತಿಗಳು ಮಾನವ ಸಮಾಜದಲ್ಲಿ ತುಂಬಿ ತಾಂಡವವಾಡುವ ಈ ಕಾಲದಲ್ಲಿ ಅವರ ದೈವೀಶಕ್ತಿ, ಆಸ್ತಿಕ ಸದ್ಭಾವನೆ ಅಚಲವಾಗಿ. ಪ್ರಶಾಂತವಾಗಿ ಅವರ ಜೀವನದಲ್ಲಿ ವ್ಯಕ್ತವಾದುದ್ದು ನಾನು ಪ್ರತ್ಯಕ್ಷ ಕಂಡ ವಿಷಯ.

*   *   *

## ೪. ಕೆ. ಚಂಗಲರಾಯರೆಡ್ಡಿ ಅವರ ನೆನಹು

**ಆಶ್ರಮದಲ್ಲಿ :**

ನಾನು ಮಹಾತ್ಮಾ ಗಾಂಧಿಯವರನ್ನು ಮೊಟ್ಟಮೊದಲು ೧೯೨೭ನೇ ಇಸವಿಯಲ್ಲಿ ಭೇಟಿ ಮಾಡುವ ಸೌಭಾಗ್ಯ ಪಡೆದೆ. ಅದಕ್ಕೂ ಮುಂಚೆ ಅವರ ಭಾಷಣಗಳನ್ನು ಹಲವಾರು ಸಾರಿ ಕೇಳುವ ಸುಯೋಗ ಲಭಿಸಿತ್ತು. ವಿಶ್ರಾಂತಿಗಾಗಿ ಗಾಂಧೀಜಿಯವರು ನಂದಿ ಬೆಟ್ಟದಲ್ಲಿ

ಬಿಡಾರ ಮಾಡಿದ್ದಾಗ, ಅವರೊಡನೆ ಇರುವ ಅವಕಾಶ ನನಗೆ ದೊರೆಯಿತು. ಅವರ ಮಾರ್ಗದರ್ಶನ ಮತ್ತು ಬುದ್ಧಿವಾದ ಈಗಲೂ ನನ್ನ ಕಿವಿಗಳಲ್ಲಿ ಮೊರೆಯುತ್ತವೆ. ಅವರ ಪ್ರಗಲ್ಭ ಸೂಚನೆಯ ಮೇರೆ ನನ್ನ ಜೀವಿತದ ವಿಷಯವಾಗಿ ಆಗ ಒಂದು ನಿರ್ಧಾರಕ್ಕೆ ಬಂದೆನು. ವಕೀಲ ವೃತ್ತಿಯನ್ನು ಬಿಟ್ಟು ಸಾರ್ವಜನಿಕ ಸೇವೆಗೆ ನನ್ನನ್ನು ಅರ್ಪಣೆ ಮಾಡಿಕೊಳ್ಳಲು ನಿರ್ಧರಿಸಿದೆನು. ಅಂದಿನಿಂದಲೂ ಯಥಾಶಕ್ತಿ ಅದೇ ಮಾರ್ಗದಲ್ಲಿ ಮುನ್ನುಗ್ಗುತ್ತಿದ್ದೇನೆ. ಮತ್ತೆ ನಾನು ಗಾಂಧೀಜಿಯವರನ್ನು ಭೇಟಿ ಮಾಡಿದುದು ೧೯೩೬ರಲ್ಲಿ. ಆಗ ನಾನು ಕೋಲಾರ ಜಿಲ್ಲಾ ಬೋರ್ಡಿನ ಅಧ್ಯಕ್ಷನಾಗಿದ್ದೆ. ಗಾಂಧೀಜಿ ನಂದೀಬೆಟ್ಟದಲ್ಲಿ ಸುಮಾರು ಒಂದೂವರೆ ತಿಂಗಳು ಇದ್ದರು. ಕೋಲಾರ ಜಿಲ್ಲೆಯಲ್ಲಿ ಮಹಾತ್ಮರ ಪ್ರವಾಸವನ್ನು ಏರ್ಪಡಿಸುವಂತೆ ನಾನು ಆಪ್ತಕಾರ್ಯದರ್ಶಿ ಶ್ರೀ ಮಹದೇವ ದೇಸಾಯಿಯವರನ್ನು ಪ್ರಾರ್ಥಿಸಿದೆ. ಹರಿಜನ ನಿಧಿಗೆ ಎಷ್ಟು ನಿಧಿ ಸಂಗ್ರಹ ಮಾಡುವೆಯೆಂದು ಗಾಂಧೀಜಿ ನನ್ನನ್ನು ಕೇಳಿದರು. ಕೇವಲ ೨-೩ ದಿನಗಳ ಅವಕಾಶ ಮಾತ್ರ ಇದ್ದುದರಿಂದ ಒಂದುಸಾವಿರ ರೂಪಾಯಿ ಸಂಗ್ರಹಿಸುವಾಗ ಹೇಳಿದೆ. ಗಾಂಧೀಜಿ ಅಷ್ಟು ಕಡಿಮೆ ಸೂಚಿಸಲು ನಾಚಿಕೆಯಾಗದೇ ಎಂದು ಆಕ್ಷೇಪಿಸಿದರು. ಅನಂತರ ಪ್ರವಾಸ ಕೈಗೊಳ್ಳಲು ಒಪ್ಪಿಕೊಂಡರು. ಸುಮಾರು ೧೫೦ ಮೈಲಿಯಷ್ಟು ದೂರ ಗಾಂಧೀಜಿ ಸಂಚರಿಸಿದರು. ಅವರ ಭಾಷಣಗಳು, ನಿಧಿ ಸಂಗ್ರಹಣೆ, ಒಟ್ಟಿನಲ್ಲಿ ಪ್ರವಾಸ ಕಾರ್ಯಕ್ರಮದ ಏರ್ಪಾಡು ಸಮರ್ಪಕವಾಗಿ ನಡೆಯಿತು. ಕೊನೆಯಲ್ಲಿ ಗಾಂಧೀಜಿ ಹೋಗುವಾಗ, "ನಾವು ನಿಮಗೆ ಬಹಳ ತೊಂದರೆ ಕೊಟ್ಟೆವೆಂದು" ಹೇಳಿ ಅವರ ಕ್ಷಮೆ ಬೇಡಿದೆನು. ಕೂಡಲೇ ಗಾಂಧೀಜಿ ಹೇಳಿದರು "ಇತರರಿಗೆ ತೊಂದರೆ ಕೊಡುವವರು ತಾವೂ ಸಹ ತೊಂದರೆ ಪಡಲೇಬೇಕಾಗುವದು" ಎಂದು ಈ ಮಾತಿನಲ್ಲಿ ಬಹಳ ಅರ್ಥವಿದೆ. ಆದರೆ ಇದರ ವಿಷಯವಾಗಿ ಹೆಚ್ಚು ಹೇಳದೆ ನಿಮ್ಮ ಆಲೋಚನೆಗೆ ಒಪ್ಪಿಸುತ್ತೇನೆ.

ಗಾಂಧೀಜಿಯವರನ್ನು ಭೇಟಿ ಮಾಡಲು ಸದವಕಾಶ ನನಗೆ ಹಲವು ಬಾರಿ ದೊರಕಿತು. ಪ್ರತಿಯೊಂದು ಬಾರಿಯೂ ಅವರು ನನಗೆ ಒಳ್ಳೆಯ ಸಲಹೆಯಿತ್ತು, ಬುದ್ಧಿ ಹೇಳುತ್ತಿದ್ದರು. ೧೯೪೦ನೇ ಇಸವಿಯಲ್ಲಿ ಸರ್ ಮಿರ್ಜಾ ಇಸ್ಮೇಲ್ ಅವರು ಮೈಸೂರಿನ ದಿವಾನರಾಗಿದ್ದಾಗ, ಇಲ್ಲಿನ ಪರಿಸ್ಥಿತಿಯನ್ನು ಗಾಂಧೀಜಿಯವರಿಗೆ ತಿಳಿಸಲು ಕಾಂಗ್ರೆಸ್ಸಿನ ನನ್ನ ಸ್ನೇಹಿತರು ನನ್ನನ್ನು ಕಳುಹಿಸಿದರು. ನಾನು ಹೋದ ಮೊದಲ ದಿನಗಳಲ್ಲಿ ನಾನು ಮೈಸೂರಿನಿಂದ ಬಂದವನೆಂದು ತಿಳಿದು, ನನ್ನ ಅಭ್ಯಾಸಕ್ಕೆ ಅನುಸಾರವಾಗಿ ಬೆಳಿಗ್ಗೆ ಕಾಫಿ ತೆಗೆದುಕೊಳ್ಳುವಂತೆ ಅವರೇ ಸೂಚಿಸಿದರು. ಸಂಕೋಚಪಡದೆ ಕಸ್ತೂರಿಬಾ ಅವರನ್ನು ಕಾಫಿ ಕೇಳುವಂತೆ ಅವರೇ ಹೇಳಿದರು. ಅಲ್ಲದೆ ಬೆಚ್ಚನೆಯ ಬಟ್ಟೆಗಳನ್ನು ತೆಗೆದುಕೊಳ್ಳುವಂತೆ ಸಲಹೆ ಮಾಡಿದರು. ಎಲ್ಲರನ್ನೂ ಅವರು ತಾವೇ ವಿಚಾರಿಸಿಕೊಳ್ಳುತ್ತಿದ್ದರು. ಆಶ್ರಮದಿಂದ ಬೇರೆ ಕಡೆಗೆ ಹೋಗಿದ್ದಾಗ ಕೂಡ ಆಶ್ರಮದಲ್ಲಿದ್ದ ರೋಗಿಗಳ ವಿಷಯವಾಗಿ ಪ್ರತಿದಿನ ವರದಿ ಕಳುಹಿಸುವಂತೆ ಶ್ರೀ ಮಹದೇವ ದೇಸಾಯರಿಗೆ ಆಜ್ಞಾಪಿಸಿದ್ದರು. ನನ್ನ ಸಹೋದ್ಯೋಗಿಗಳಾದ ಶ್ರೀ ಹೆಚ್.ಸಿ.ದಾಸಪ್ಪನವರು ಗಾಂಧೀಜಿಯವರ ಆಶ್ರಮದಲ್ಲಿದ್ದು ಅವರ ಚಿಕಿತ್ಸೆ ಮತ್ತು ಶುಶ್ರೂಷೆಗೆ ಒಳಗಾಗಿದ್ದರು.

ಮಹಾತ್ಮರು ಬಹಳ ದೈವಭಕ್ತರು. ದೇವರಲ್ಲಿ ಅವರಿಗೆ ಅಚಲವಾದ ನಂಬಿಕೆ ಮತ್ತು ಭಕ್ತಿ ಇತ್ತು.

ದೀನ ದರಿದ್ರರ ವಿಷಯದಲ್ಲಿ ಗಾಂಧೀಜಿಗೆ ವಿಶೇಷವಾದ ಆಸಕ್ತಿ ಮತ್ತು ವಿಶ್ವಾಸವಿತ್ತು. ಬಡರೈತರನ್ನು ಸಂತೋಷಗೊಳಿಸಲು ತಾವೇ ಯತ್ನಿಸುತ್ತಿದ್ದರು. ಒಂದು ಸಾರಿ ಗಾಂಧೀಜಿ ಹೋಗುತ್ತಿದ್ದಾಗೆ ರೈತನೊಬ್ಬ ಮುಂದೆ ಬಂದು "ಗಾಂಧೀಜಿ ಕಿ ಜೈ" ಎಂದ. ಮಹಾತ್ಮಾಜಿ ಕೂಡಲೇ "ಕಿಸಾನ್ ಕಿ-ಜೈ" ಎಂದರು. ರೈತರ ಬಗ್ಗೆ ಅವರಿಗಿದ್ದ ಪ್ರೇಮಕ್ಕೆ ಇದೊಂದು ನಿದರ್ಶನ ಸಾಕು. ಗಾಂಧೀಜಿಯವರು ಆಶ್ರಮದಲ್ಲಿದ್ದ ರೋಗಿಗಳೊಡನೆಯಾಗಲಿ, ಬೀದಿಯಲ್ಲಿ ಬಡಜನರು ಮತ್ತು ಸಣ್ಣ ಮಕ್ಕಳೊಡನೆ ಇರುತ್ತಿದ್ದಾಗಲಾಗಲಿ, ನನಗೆ ಯೇಸು ಕ್ರಿಸ್ತನ ನೆನಪು ಬರುತ್ತಿತ್ತು.

ಮಹಾತ್ಮಾ ಗಾಂಧೀಯವರು ಜೀವಿಸಿದ್ದ ಕಾಲದಲ್ಲಿ ನಾವೂ ಬದುಕಿದ್ದೇವೆಂದು ಹೆಮ್ಮೆ ಪಡುತ್ತೇವೆ. ಅವರ ಭಾವಚಿತ್ರ ನನಗೆ ಯಾವಾಗಲೂ ಸ್ಫೂರ್ತಿಯನ್ನೀಯಲಿ. ಶಾಂತಿಮಾರ್ಗದಲ್ಲಿ ಜೀವಿಸಲು ನಮಗೆ ಅವರ ಆತ್ಮಜ್ಯೋತಿ ಮಾರ್ಗದರ್ಶನವಾಗಲಿ. ಜೈ ಹಿಂದ್.

**ಕೆ. ಚಂಗಲರಾಯರೆಡ್ಡಿ**

* * *

## ೫. ಸರದಾರ ಪದ್ಮಶ್ರೀ ವೀರನಗೌಡ ಪಾಟೀಲರ ನೆನಹು

**ಕ್ಷಣ ಕ್ಷಣಕ್ಕೂ ಸತ್ಯಾಗ್ರಹಿ :**

೧೯೩೪ರ ಪ್ರಾರಂಭದಲ್ಲಿ ಗಾಂಧೀಜಿ ಕರ್ನಾಟಕದಲ್ಲಿ ಹರಿಜನ ಪ್ರವಾಸ ಕೈಗೊಂಡರು. ಆ ಮೊದಲು ಬೇರೆ ಕಡೆಗಳಲ್ಲಿ ದಿನಕ್ಕೆ ಎರಡು ನೂರು ಮೈಲಿಗಿಂತ ಹೆಚ್ಚು ಪ್ರವಾಸಮಾಡಿ ಗಾಂಧೀಜಿ ಬಹಳ ದಣಿದಿದ್ದರು. ಇದನ್ನು ಅರಿತ ನಾವು ಕರ್ನಾಟಕದಲ್ಲಿ ಗಾಂಧೀಜಿಗೆ ತುಸು ವಿಶ್ರಾಂತಿ ಕೊಡಲು ಯೋಚಿಸಿದೆವು. ಗಾಂಧೀಜಿ ಅವರ ಜೊತೆಗೆ ನಾನು ಮತ್ತು ಠಕ್ಕರಬಾಪಾ ಇನ್ನಿತರರು ೩ ದಿನ ನೀಲಗಿರಿಯಲಿದ್ದು ಪ್ರವಾಸ ಕಾರ್ಯಕ್ರಮವನ್ನು ಗೊತ್ತುಪಡಿಸಿದೆವು. ನಾನು ಕರ್ನಾಟಕದ ಎಲ್ಲ ಜಿಲ್ಲೆಗಳ ಕಾರ್ಯಕರ್ತರೊಂದಿಗೂ ಮೊದಲೇ ಸಂಪರ್ಕ ಬೆಳೆಸಿದ್ದೆ; ಮತ್ತು ಗಾಂಧೀಜಿಯ ಪ್ರವಾಸದ ಯೋಜನೆಗೆ ಅವರ ನೆರವು ಸಲಹೆ ಕೇಳಿಕೊಂಡು ಅದರಂತೆ ಯೋಜನೆ ಸಿದ್ಧಗೊಳಿಸಲಾಯಿತು. ಪ್ರವಾಸವನ್ನು ಮೈಸೂರಿನಿಂದ ಪ್ರಾರಂಭಮಾಡಿ ಕೊಡಗು ಪ್ರಾಂತದಲ್ಲಿ ಕಾಲಿಟ್ಟಾಗ ಸಂಭವಿಸಿದ ಒಂದು ಘಟನೆ ಈಗ ನನ್ನ ನೆನಪಿಗೆ ಬರುತ್ತದೆ.

ಅಲ್ಲಿ ಒಬ್ಬ ಶ್ರೀಮಂತ ಕಾಫಿಪ್ಲಾಂಟರರ ಮನೆಯಲ್ಲಿ ಮಧ್ಯಾಹ್ನದ ಊಟ ಎಂದು ಗೊತ್ತಾಗಿತ್ತು. ಆ ಪ್ರಕಾರ ನಾನು ಗಾಂಧೀಜಿ ಮತ್ತು ಅವರ ಪರಿವಾರದವರ ಬಿಡಾರ, ಸ್ನಾನ, ಊಟ ಇವುಗಳ ವ್ಯವಸ್ಥೆ ಮಾಡಲು ವಾಡಿಕೆಯಂತೆ ಮೊದಲೇ ಆ ಸ್ಥಳಕ್ಕೆ

ಹೋದೆ. ಅಲ್ಲಿ ಸ್ನಾನದ ಮನೆಯ ವ್ಯವಸ್ಥೆ ನೋಡಲಾಗಿ, ಗಾಂಧೀಜಿಗೆ ಒಪ್ಪಿಗೆ ಆಗುವ ಮಟ್ಟಿಗೆ ಅಲ್ಲಿ ಸ್ವಚ್ಛತೆ ಕಾಣಲಿಲ್ಲ. ಸ್ನಾನ ಸ್ಥಳ ಹಾವುಸಕಟ್ಟ ಜಾರುವ ಹಾಗಿತ್ತು. ಇದನ್ನು ಸ್ವಚ್ಛ ಮಾಡಲೆಂದು ನಾನು ತೆಂಗಿನ ಚಿಪ್ಪಿನಿಂದ ಬಚ್ಚಲು ಬಂಡೆಯನ್ನು ಉಜ್ಜಲು ಪ್ರಾರಂಭಿಸಿದೆ. ಸ್ವಲ್ಪ ಹೊತ್ತಿನ ತರುವಾಯ ಗಾಂಧೀಜಿ, ಅವರ ಪರಿವಾರದವರು ಬಂದರು. ಗಾಂಧೀ ಸ್ನಾನಮಾಡುವ ಸ್ಥಳ ನೋಡಲು ಆಗ ಮಿರಾಬೆನ್ (ಫ್ರೆಂಚ್ ಕ್ಯಾಪ್ಟನ್ ಒಬ್ಬರ ಮಗಳು ಮಿಸ್‌ಸ್ಲೇಡ) ಅಲ್ಲಿಗೆ ಬಂದು, ನಾನು ರಭಸದಿಂದ ಬಂಡೆಗಲ್ಲು ಉಜ್ಜುವುದನ್ನು ಕಂಡರು. ಇದೇನು ನಡೆದಿದೆ ಎಂದು ಆಕೆ ಕೇಳಿದರು. ಬಂಡೆ ಜಾರುವ ಹಾಗಿದೆ, ಅದನ್ನು ತಿಕ್ಕಿ ಚೊಕ್ಕಟ ಮಾಡುತ್ತಿದ್ದೇನೆ ಎಂದು ನಾನು ಹೇಳಿದೆ. ಇದನ್ನು ಆಕೆ ಗಾಂಧೀಜಿಗೆ ತಿಳಿಸಿದಳು. ಗಾಂಧೀಜಿ ಹೇಳಿದರು, ನಾನು ಬಚ್ಚಲಲ್ಲಿ ಸ್ನಾನ ಮಾಡುವುದಿಲ್ಲ; ತೋಟದ ಬಯಲಲ್ಲಿ ಒಂದು ಹಲಗೆ ಹಾಕಿದರೆ ಸಾಕು, ಅಲ್ಲೇ ಸ್ನಾನ ಮಾಡುವೆ ಎಂದು. ಆಗ ಆ ಕೆಲಸ ಅಲ್ಲಿಗೇ ಬಿಟ್ಟು ಬಿಸಿನೀರಿನ ವ್ಯವಸ್ಥೆಗೆ ಧಾವಿಸಿದೆ. ಕಾಸಲು ಇಟ್ಟ ಹಂಡೆಯ ನೀರಿನಲ್ಲಿ ಮೇಲೆ ಎಣ್ಣೆ ತೇಲುತ್ತಿತ್ತು. ಈ ಸಂಗತಿಯನ್ನು ಸಹ ಮೀರಾಬೆನ್ ಗಾಂಧೀಜಿಗೆ ತಿಳಿಸಿದಳು. ಇದನ್ನು ಅರಿತ ಗಾಂಧೀಜಿ, ತಮಗೆ ಇಂದು ಸ್ನಾನವೇ ಬೇಡ ಎಂದುಬಿಟ್ಟರು. ನನಗೆ ತುಂಬಾ ವ್ಯಥೆಯಾಯಿತು. ಗಾಂಧೀಜಿ ಯಾರಿಗೂ ತೊಂದರೆ ಕೊಡದೆ, ಉಪದೇಶ ಮಾಡದೆ, ಸಿಟ್ಟೂ ಆಗದೆ ಪರರು ಎಚ್ಚರಿಕೆ ವಹಿಸುವಂತೆ ಮಾಡುವ ಕಟ್ಟುನಿಟ್ಟಿನ ಸತ್ಯಾಗ್ರಹಿ ಎಂದು ನನಗೆ ಅಂದು ಅನುಭವಕ್ಕೆ ಬಂದಿತು. ಅಲ್ಲಿಂದ ಹೊರಟಾಗ ಮನೆಯವರನ್ನೆಲ್ಲ ಗಾಂಧೀಜಿ ಹಸನ್ಮುಖರಾಗಿ ಆಶೀರ್ವಾದ ಮಾಡಿದರು. ತಮಗಾದ ತೊಂದರೆಯ ಸುಳಿವನ್ನೇ ಅವರಿಗೆ ಗಾಂಧೀಜಿ ಹತ್ತಗೊಡಲಿಲ್ಲ.

**ಅರ್ಧಂಬರ್ಧ ದಕ್ಕಿದ ಕಾಣಿಕೆ :**

ಇನ್ನೊಂದು ಮೋಜಿನ ಪ್ರಸಂಗ. ಒಬ್ಬ ಹರಿಜನ ಭಕ್ತ ತಾನು ಮಾಡಿದ ಒಂದು ಜೋಡು ಪಾದರಕ್ಷೆ ಗಾಂಧೀಜಿಗೆ ಕಾಣಿಕೆ ಕೊಟ್ಟಿದ್ದ. ಸೇಡಬಾಳಕ್ಕೆ ಹೋಗುವ ಮಾರ್ಗದಲ್ಲಿ ಎಂದು ನನಗೆ ನೆನಪು. ಗಾಂಧೀಜಿಯ ಪ್ರವಾಸಕ್ಕೆ ದೊರಕಿದ ಅಂದಿನ ಕಾರು ಅಷ್ಟೊಂದು ಹೊಸದಿರಲಿಲ್ಲ. ಕಾರಿನಿಂದ ಗಾಂಧೀಜಿ ಇಳಿಯುವಾಗ ಕಾಣಿಕೆ ಕೊಟ್ಟ ಪಾದರಕ್ಷೆ ಕಾರಿನಲ್ಲಿ ಕಾಣಲಿಲ್ಲ. ಅವರ ಜತೆಯಲ್ಲಿ ನಾನಿದ್ದೆ. ಅವನ್ನು ಹುಡುಕಿ ತಾ ಎಂದು ನನಗೆ ಹೇಳಿ ಸಭೆಗೆ ಹೋಗಿಬಿಟ್ಟರು. ನಾನು ಅದೇ ಕಾರಿನಲ್ಲಿ ಬಂದ ಹಾದಿಗುಂಟ ಹಿಂದಿರುಗಿ ಜೋಡನ್ನು ಹುಡುಕುತ್ತ ಹೊರಟೆ. ೨-೩ ಮೈಲಿನ ಮೇಲೆ ಪಾದರಕ್ಷೆಯಲ್ಲಿ ಒಂದು ಮಾತ್ರ ಕಣ್ಣಿಗೆ ಬಿತ್ತು. ಇನ್ನೊಂದು ಸಿಕ್ಕಲಿಲ್ಲ. ಅದನ್ನು ಹುಡುಕಿ ನಿರಾಶನಾಗಿ ಹಿಂದಿರುಗಿದೆ. ಗಾಂಧೀಜಿ ಈ ಬಗ್ಗೆ ಕೇಳಲಾಗಿ ಒಂದು ಮಾತ್ರ ಸಿಕ್ಕಿದೆ ಇನ್ನೊಂದು ಸಿಕ್ಕಲಿಲ್ಲ ಎಂದೆ. ಗಾಂಧೀಜಿ ನಗುತ್ತ, ಅರ್ಧಜಯಶಾಲಿಯಾದೆಯಲ್ಲ ಎಂದು ಮತ್ತಷ್ಟು ನಕ್ಕರು. ಪರರು ಪ್ರೀತಿಯಿಂದ ಕೊಟ್ಟ ವಸ್ತುವನ್ನು ಬಹಳ ಜತನದಿಂದ ಕಾಪಾಡಿಕೊಳ್ಳುವುದೇ ಧರ್ಮ. ಅದೇ ಕೊಟ್ಟವರ ಪ್ರೀತಿಯ ಪ್ರತಿಫಲ. ಇದಕ್ಕಾಗಿಯೇ ಗಾಂಧೀಜಿ ಆ ಜೋಡನ್ನು ನನ್ನಿಂದ ಹುಡುಕಿಸಿದ್ದು.

**ಅಬಲಾ ಅಮಲಾ ಆದದ್ದು :**

೧೯೩೭ರಲ್ಲಿ ಗಾಂಧೀ ಸೇವಾ ಸಂಘದ ಸಮ್ಮೇಳನ ಬೆಳಗಾವಿ ಜಿಲ್ಲೆಯ ಹುದಲಿ ಎಂಬ ಹಳ್ಳಿಯಲ್ಲಿ ನಡೆಯಿತು. ಆಗ ಮಶ್ರುವಾಲಾ, ವಲ್ಲಭಭಾಯಿ ಪಟೇಲ, ರಾಜೇಂದ್ರ ಪ್ರಸಾದ, ಇವರೇ ಮೊದಲಾದ ಪ್ರತಿಷ್ಠಿತರು ಆ ಸಮ್ಮೇಳನಕ್ಕೆ ಆಗಮಿಸಿದ್ದರು. ನಾನು ಮತ್ತು ನನ್ನ ಶ್ರೀಮತಿ ನಾಗಮ್ಮ ಹಾಗೂ ಆಕೆ ನಡೆಸುತ್ತಿದ್ದ ಹುಬ್ಬಳ್ಳಿ ಹರಿಜನ ಬಾಲಿಕಾಶ್ರಮದ ಹುಡುಗಿಯರು, ಮತ್ತು ಕೆಲಸಗಾರರು ಹಾಗೂ ನನ್ನ ಮಕ್ಕಳೊಂದಿಗೆ ಹೋಗಿದ್ದೆವು. ನನ್ನ ಉದ್ದೇಶಗಳಲ್ಲಿ ಒಂದೆಂದರೆ ಒಂದು ತಿಂಗಳದ ನನ್ನ ಹೆಣ್ಣುಮಗುವಿಗೆ ಗಾಂಧೀಜಿ ಅವರಿಂದ ಹೆಸರಿಡಿಸಬೇಕು ಎಂದು. ಪ್ರಾರ್ಥನಾ ಕಾರ್ಯಕ್ರಮ ಮುಗಿದ ಮೇಲೆ, ನನ್ನ ಹೆಂಡತಿ ತನ್ನ ಮಗನನ್ನು ಗಾಂಧೀಜಿಯ ಎದುರಿಗೆ ಮಲಗಿಸಿ ಕೂಸಿಗೆ ನೀವೇ ಹೆಸರಿಡಬೇಕೆಂದು ಕೇಳಿಕೊಂಡಳು. ಆ ಸಂದರ್ಭದಲ್ಲಿ ನಾನು ಮುಕ್ತಮನಸ್ಸಿನಿಂದ ಗಾಂಧೀಜಿಗೆ ನಗುತ್ತ ಹೇಳಿದೆ – ಈ ಮಗು ತನ್ನ ತಂದೆ ತಾಯಿಗಳ ಮನೋದೌರ್ಬಲ್ಯದ ಫಲ ಎಂದು. ಗಾಂಧೀಜಿ ನಗುತ್ತಲೇ ಹೇಳಿದರು, ಹಾಗಾದರೆ ಕೂಸನ್ನು ಅಬಲಾ ಎಂದು ಹೆಸರಿಡಿರಿ ಎಂಬುದಾಗಿ ಹೇಳಿದರು. ಆಗ, ಅಲ್ಲಿದ್ದ ಮಹಿಳೆಯರು ಗಾಂಧೀಜಿಯ ಈ ಸೂಚನೆಯನ್ನು ಪ್ರತಿಭಟಿಸಿದರು. ತಂದೆ ತಾಯಿಯವರ ದೌರ್ಬಲ್ಯಕ್ಕೆ ಮಗು ಏಕೆ ಹೊಣೆ ಆಗಬೇಕು ಎಂದು ಅವರ ವಾದ. ಇದನ್ನು ಒಪ್ಪಿ, ತಾವು ಸೂಚಿಸಿದ ಅಬಲಾ ಹೆಸರಿನ ಕುಂದನ್ನು ತೊಡೆದುಹಾಕಲೋ ಎಂಬಂತೆ ಗಾಂಧೀಜಿ ಅಮಲಾ ಎಂದು ಕೂಸಿಗೆ ನಾಮಕರಣ ಮಾಡಿದರು. ಆ ಕೂಸು ದೊಡ್ಡವಳಾಗಿ ಕಲಿತು ಇಂಗ್ಲೆಂಡಿಗೆ ಹೋಗಿ ಒಬ್ಬ ಸರ್ಜನನ ಕೈ ಹಿಡಿದು ಈಗ ಸುಖವಾಗಿದ್ದಾಳೆ. ಇದೆಲ್ಲ ಗಾಂಧೀಜಿಯ ಆಶೀರ್ವಾದ.

* * *

## ೬. ಶ್ರೀಮತಿ ನಾಗಮ್ಮ ಪಾಟೀಲರ ನೆನಹು

(ಸರದಾರ ವೀರನಗೌಡರ ಪತ್ನಿ)

೧೯೩೪ರ ಗಾಂಧೀಜಿಯ ಹರಿಜನ ಪ್ರವಾಸ ಕರ್ನಾಟಕದಲ್ಲಿ ನಡೆದಿತ್ತು. ಆಗ ನಾನು ಕಚವಿ ಎಂಬ ಹಳ್ಳಿಯಿಂದ ಮೋಟಿಬೆನ್ನೂರಿಗೆ ಬಂದಿದ್ದೆ. ಗಾಂಧೀಜಿ ಅಲ್ಲಿಗೆ ಬಂದಿದ್ದರು. ಗಾಂಧೀಜಿಗೆ ಸ್ವಾಗತ ಮಾಡುವ ಹಾಡುಗಳನ್ನು ನಾನು ಚಿಕ್ಕಮಕ್ಕಳಿಗೆ ಕಲಿಸಿದ್ದೆ. ಆಗ ನನ್ನ ಯಜಮಾನರಿಗೆ ಇವರಾರು ಎಂದು ಗಾಂಧೀಜಿ ಕೇಳಿದರು. ನನ್ನ ಪತ್ನಿ ಎಂದು ಇವರು ಹೇಳಿದರು. ಸಭೆ ಪ್ರಾರ್ಥನೆ ಎಲ್ಲ ಮುಗಿದ ಮೇಲೆ ತಮ್ಮ ಜೊತೆಗೆ ಬರಲು ಹೇಳಿದರು. ನಾನೂ ನನ್ನ ಯಜಮಾನರೂ ಗಾಂಧೀಜಿಯ ಜೊತೆಗೆ ಹೊರಟೆವು. ಕಾರಿನಲ್ಲಿ ಹಿಂಬದಿಗೆ ಕುಳಿತವರೆಂದರೆ ನಾನು, ಗಾಂಧೀಜಿ ಮತ್ತು ಠಕ್ಕರಬಾಪ. ಇವರು ಮುಂದೆ ಕುಳಿತಿದ್ದರು. ಕಾರಿನಲ್ಲಿ ಕುಳಿತಾಗ ನಾನು ಗಾಂಧೀಜಿಯ ಕಾಲು ಒತ್ತುತ್ತಲಿದ್ದೆ. ಆ ಕಾಲದಲ್ಲಿ ಗಾಂಧೀಜಿ ನನಗೆ ಅಂದರು. – ನಿಮ್ಮ ಯಜಮಾನರು

ಕರ್ನಾಟಕ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿದ್ದಾರೆ. ಎಂದ ಮೇಲೆ ನೀವಾದರೂ ಕೆಲವು ಹರಿಜನ ಹುಡುಗಿಯರನ್ನು ಮನೆಯಲ್ಲಿ ಏಕೆ ಜೋಪಾನ ಮಾಡಬಾರದು, ಎಂದು. ನಾನೇನೂ ಬಹಳ ಕಲಿತವಳಲ್ಲ, ನನಗೇನೂ ಬರುವುದಿಲ್ಲ ಎಂದು ನಾನು ಹೇಳಿದೆ. ಹರಿಜನ ಮಕ್ಕಳ ಮೈತೊಳೆಯಲು, ತಲೆಬಾಚಲು, ಬಟ್ಟೆ ಒಗೆಯಲು, ಇತ್ಯಾದಿ ಸ್ವಚ್ಛತೆಯ ಕೆಲಸವಾದರೂ ಬರುವದೋ ಇಲ್ಲವೋ ಎಂದು ನನ್ನನ್ನು ಗಾಂಧೀಜಿ ಕೇಳಿದರು. ಇದೇನು ದೊಡ್ಡ ಕೆಲಸ? ಇಷ್ಟನ್ನು ಯಾರಾದರೂ ಮಾಡಬಹುದು ಎಂದು ನಾನು ಹೇಳಿದೆ. ಆಗ ಗಾಂಧೀಜಿ, ಹಾಗಾದರೆ ನಿಮ್ಮ ಮಕ್ಕಳಂತೆ ಇಬ್ಬರು ಹುಡುಗಿಯರನ್ನು ಪೋಷಿಸು ಎಂದು ಹೇಳಿದರು. ಆ ಪ್ರಕಾರ ನಾನು ಇದೇ ರಾಮವಚನವೆಂದು ತಿಳಿದು, ತಾರಾ, ಮಧುರಾ ಎಂಬ ಇಬ್ಬರು ಹುಡುಗಿಯರನ್ನು ನನ್ನ ಮಕ್ಕಳ ಜೊತೆಗೆ ಸಾಕಲು ಪ್ರಾರಂಭಿಸಿದೆ. ಅಂದಿನಿಂದ ಇಂದಿನವರೆಗೂ, ಅಂದರೆ ೩೪-೩೫ ವರ್ಷ ಒಂದಿಲ್ಲೊಂದು ಬಗೆಯಾಗಿ ನಾನು ಮತ್ತು ನನ್ನ ಯಜಮಾನರು ಹಿಂದುಳಿದವರ ಸೇವಾಕಾರ್ಯದಲ್ಲಿಯೇ ಇದ್ದೇವೆ. ಇದು ಗಾಂಧೀಜಿ ನಮಗೆ ಕೊಟ್ಟ ಸೇವಾದೀಕ್ಷೆ. ಇದರ ಫಲವಾಗಿ ಪ್ರಾರಂಭದಲ್ಲಿ ಕೆಲವು ವರ್ಷ "ಹರಿಜನ ಬಾಲಿಕಾಶ್ರಮ" ನಡೆಸಿದವು. ಅದೇ ಮುಂದೆ ವಿಕಾಸಗೊಂಡು ಹುಬ್ಬಳ್ಳಿ "ಮಹಿಳಾ ವಿದ್ಯಾಪೀಠ"ವಾಗಿ ಪರಿಣಮಿಸಿತು.

**ಈ ಮಹಿಳಾ ವಿದ್ಯಾಪೀಠದ ಅಂಗ ಸಂಸ್ಥೆಗಳು ಹೀಗಿವೆ :**

(೧) ಶಿಶುವಿಹಾರ, (೨) ಶಿಶುವಿಹಾರ ಶಿಕ್ಷಕಿಯರ ತರಬೇತಿ ಕಾಲೇಜು. (೩) ಪ್ರೈಮರಿ ಸ್ಕೂಲ್, (೪) ಪ್ರೈಮರಿ ಟೀಚರ್ಸ್‌ಟ್ರೈನಿಂಗ್ ಕಾಲೇಜು, (೫) ಗರ್ಲ್ಸ್ ಹೈಸ್ಕೂಲ್, (೬) ಅಕ್ಕಮಹಾದೇವಿ ಕಾಲೇಜ್ ಹಾಸ್ಟೆಲ್, (೭) ಹೋಂ ಫಾರ್ ಬ್ಲೈಂಡ ಗರ್ಲ್ಸ್, (೮) ಟೈಲರಿಂಗ್, ಡಾಲ್ ಮೇಕಿಂಗ್, ಸಂಗೀತ ಕಲಾ ಉದ್ಯೋಗ ಮಂದಿರ, (೯) ಅನಾಥ ಮಕ್ಕಳ ಆಶ್ರಮ, (೧೦) ಹೋಂ ಸೈನ್ಸ್, ಸೈನ್ಸ್ ಅಂಡ್ ಆರ್ಟ್ಸ್ ಕಾಲೇಜ, (೧೧) ಗ್ರಾಮೋದ್ಯೋಗ, (೧೨) ಉಚಿತ ಪ್ರಸಾದ ನಿಲಯ ಇತ್ಯಾದಿ (ಕಸ್ತೂರಬಾ ಬಾಲಿಕಾಶ್ರಮವು ಉಚಿತ ಪ್ರಸಾದ ನಿಲಯವಾಗಿ ಸೇವೆ ಸಲ್ಲಿಸುತ್ತಿದೆ.)

ಹಿಂದುಳಿದ ಮತ್ತು ಹಳ್ಳಿಯ ಬಾಲಕಿಯರಿಗೆ ಹಾಗೂ ಸ್ತ್ರೀಯರಿಗೆ ಈ ಸಂಸ್ಥೆಗಳ ಸೇವೆ ಮೀಸಲಾಗಿದೆ. ಅವರಿಗೆ ಉಚಿತ ಶಿಕ್ಷಣ ಸಹ ಇಲ್ಲಿ ಲಭ್ಯವಾಗಿದೆ. ಪ್ರಾರಂಭಿಕ ದೆಶೆಯಲ್ಲಿ ಈ ಸಂಸ್ಥೆಯ ಆಗುಹೋಗುಗಳ ಬಗೆಗೆ ಗಾಂಧೀಜಿ ಉತ್ಸುಕರಾಗಿದ್ದರು; ಇಷ್ಟೇ ಅಲ್ಲ, ಈ ಬಗ್ಗೆ ಸ್ವತಃ ಪತ್ರವ್ಯವಹಾರ ಮಾಡುತ್ತಿದ್ದರು. ಗಾಂಧೀಜಿ ತಮ್ಮ ಆಶ್ರಮದಿಂದ ಇಲ್ಲಿಯ ನಮ್ಮ ಆಶ್ರಮಕ್ಕೆ ಮೀರಾ ಎಂಬ ಹರಿಜನ ಹುಡುಗಿಯನ್ನು ಕಲಿಯಲು ಕಳಿಸಿಕೊಟ್ಟರು. ೧೯೪೦ರಲ್ಲಿ ನಮ್ಮ ಹರಿಜನ ಬಾಲಿಕಾಶ್ರಮದಿಂದ, ಈರವ್ವ ಎಂಬ ಸಿರಸಿಯ ಹರಿಜನ ಹುಡುಗಿಯನ್ನು ಗಾಂಧೀಜಿಯ ಸೇವಾಗ್ರಾಮಕ್ಕೆ ಕಳಿಸಿದ್ದಲ್ಲದೆ, ಆಕೆಯನ್ನು ಸಂಗೂರು ಕರಿಯಪ್ಪ ಎಂಬುವನೊಡನೆ ನಮ್ಮ ಆಶ್ರಮದಲ್ಲಿ ಮದುವೆ ಮಾಡಿದೆವು. ಈ ದಂಪತಿಗಳು ಸಂಗೂರಿನಲ್ಲಿ ಇಂದಿಗೂ ಗಾಂಧೀ ತತ್ವದ ಪ್ರಕಾರ ಸೇವಾಕಾರ್ಯದಲ್ಲಿ ತೊಡಗಿದ್ದಾರೆ. ನಮ್ಮ ಆಶ್ರಮದಲ್ಲಿ ಇದೇ ರೀತಿ ಅನೇಕ ಹರಿಜನ

ಹುಡುಗಿಯರ ಲಗ್ನ ಮಾಡಿದ್ದೇವೆ. ಇದೆಲ್ಲ ಗಾಂಧೀಜಿ ನಮಗೆ ಕೊಟ್ಟ ಸೇವಾದೀಕ್ಷೆಯ ಪ್ರಭಾವ.

* * *

## ೭. ಶ್ರೀ ಕೆ. ಸಂಪದ್ಗಿರಿರಾಯರ ನೆನಹುಗಳು

**ಕಣ್ಣಾರೆ ದೇಶ ನೋಡಿರಿ :**

೧೯೧೬ರಲ್ಲಿ ಗಾಂಧೀಜಿ ಮದರಾಸಿಗೆ ಬಂದಿದ್ದ ಕಾಲದಲ್ಲಿ ಮಧ್ಯಾಹ್ನದ ಮೇಲೆ ೩ ರಿಂದ ೪ರ ವರೆಗೂ ಜಿ.ಎ.ನಟೇಶ್ ಪುಸ್ತಕದ ಅಂಗಡಿಯ ಮಹಡಿಯ ಮೇಲೆ ಒಂದು ಕೋಣೆಯಲ್ಲಿ ಯಾರಾದರೂ ಅವರನ್ನು ಭೇಟಿ ಮಾಡುವ ಅವಕಾಶವಿತ್ತು. ವಿಶೇಷವಾಗಿ ಸುತ್ತ ಮುತ್ತ ವಿದ್ಯಾರ್ಥಿನಿಲಯಗಳಲ್ಲಿದ್ದ ವಿದ್ಯಾರ್ಥಿಗಳು ಈ ಅವಕಾಶವನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಮತ್ತು ಪ್ರಶ್ನೋತ್ತರಗಳು ಆಗುತ್ತಿದ್ದವು. ೩೦ರಿಂದ ೪೦ ಜನರು ಸೇರುತ್ತಿದ್ದರು. ಇವುಗಳಲ್ಲಿ ಕೆಲವು ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ನಿಂತಿವೆ.

ಒಬ್ಬ ವಿದ್ಯಾರ್ಥಿ ಹೊರದೇಶಕ್ಕೆ ಭಾರತೀಯರು ವಲಸೆ ಹೋಗುವ ಪ್ರಶ್ನೆಯನ್ನು ಎತ್ತಿದ. ಒಂದು ದೇಶದಲ್ಲಿ ಜನಸಂಖ್ಯೆ ಹೆಚ್ಚಾದಾಗ ಆ ದೇಶದ ಜನರು ವಲಸೆ ಹೋಗುತ್ತಾರೆ. (ಇದು ನನ್ನ ಪಠ್ಯಪುಸ್ತಕದಿಂದ ನಾನು ಗ್ರಹಿಸಿದ ವಿಷಯ). ಆದ್ದರಿಂದ ಭಾರತ ದೇಶದ ಜನಸಂಖ್ಯೆ ಹೆಚ್ಚಾಗುತ್ತಿರುವುದರಿಂದ ಭಾರತೀಯರು ದಕ್ಷಿಣ ಆಫ್ರಿಕಾಕ್ಕೆ ಹೋಗಬೇಕಾಯಿತು ಎಂದ.

ಗಾಂಧೀಜಿ ಈ ಮಾತು ಕೇಳಿ ನಕ್ಕರು. ವಿದ್ಯಾರ್ಥಿಯನ್ನುದ್ದೇಶಿಸಿ ಹೀಗೆಂದರು – "ನೀವು ಕಾಲೇಜಿಗೆ ರಜೆ (ಸೂಟಿ) ಇದ್ದಾಗ ನಿಮ್ಮ ಊರಿಗೆ ಹಳ್ಳಿಗೆ ರೈಲಿನಲ್ಲಿ ಪ್ರಯಾಣ ಮಾಡುವಿರಲ್ಲವೆ? ಮುಂದಿನ ಸಲ ಪ್ರಯಾಣ ಮಾಡಿದಾಗ ಕಿಟಕಿಯ ಬಳಿ ಕುಳಿತುಕೊಳ್ಳಿ. ಸುತ್ತಲಿನ ಪ್ರದೇಶವನ್ನು ಗಮನಿಸುತ್ತ ಹೋಗಿ. ಎಷ್ಟು ಬಯಲು ಪ್ರದೇಶ ಕ್ಷಿತಿಜದವರೆಗೂ ಕಾಣಿಸುತ್ತದೆ ಎಂದು ನೋಡಿ. ಕೇವಲ ಪುಸ್ತಕದಲ್ಲಿ ಬರೆದಿರುವುದನ್ನೇ ಆಧಾರವಾಗಿಟ್ಟು ಕೊಂಡು ಮಾತನಾಡಬೇಡಿ. ನೀವು ಕಣ್ಣಾರೆ ದೇಶವನ್ನು ನೋಡಬೇಕು. ನಮ್ಮ ದೇಶದವರು ಹೊರ ದೇಶಕ್ಕೆ ಹೋಗಬೇಕಾಗುವಷ್ಟು ಜನ ಸಂಖ್ಯೆ ನಿಬಿಡವಾಗಿ ಬೆಳೆದಿದೆಯೇ ನೀವು ವಿಚಾರ ಮಾಡಿ ತೀರ್ಮಾನಿಸಬೇಕು.

**ಮೋಕ್ಷವೆಂದರೇನು ?**

ಮತ್ತೊಂದು ದಿನ ಒಬ್ಬ ವಿದ್ಯಾರ್ಥಿ–ಅಹಿಂಸೆ, ಸಸ್ಯಾಹಾರ ಈ ವಿಷಯಗಳ ಪ್ರಸ್ತಾಪ ವಾಗುತ್ತಿದ್ದಾಗ "ನೀವು ಜೆ.ಸಿ. ಬೋಸ್ ಹೇಳುವ–ಸಸ್ಯ ಪ್ರಾಣಿಗಳಿಗೂ ಪ್ರಾಣವಿದೆ ಯೆಂಬುದರ ವಿಷಯ ಬಲ್ಲಿರಲ್ಲವೆ?" ಗಾಂಧೀಜಿ ವಿದ್ಯಾರ್ಥಿಯ ಇಂಗಿತವನ್ನು ತಕ್ಷಣ ಗ್ರಹಿಸಿದರು. "ಸಸ್ಯಗಳಿಗೂ ಪ್ರಾಣವಿದೆ. ಅವುಗಳನ್ನು ಕಿತ್ತು ನಮ್ಮ ಆಹಾರಕ್ಕೆ ಬಳಸುವು ದರಿಂದ ನಾವು ಹಿಂಸೆಯನ್ನು ಎಸಗುತ್ತಿದ್ದೇವೆ. ಇದೇ ಅಲ್ಲವೆ ನಿಮ್ಮ ಪ್ರಶ್ನೆ? ಹೌದು ಈ ದೇಹಧಾರಣವೇ ಒಂದು ಅನಿಷ್ಟದ ವಿಷಯ. ಭೌತಿಕ ಪ್ರಪಂಚದಲ್ಲಿ ಒಂದನ್ನು

ತಿಂದು ಮತ್ತೊಂದು ಬದುಕಬೇಕಾಗಿದೆ. ಇದು ಅನಿವಾರ್ಯವಾಗಿದೆ. ಆದರೆ ಈ ಸ್ಥಿತಿಯಲ್ಲಿಯೂ ನಾವು ಆದಷ್ಟು ಕಡಿಮೆ ಹಿಂಸೆಯನ್ನೇ ಎಸಗಿ ನಮ್ಮ ಪ್ರಾಣಧಾರಣವನ್ನು ಮಾಡುವುದು ಒಳಿತಲ್ಲವೆ? ಅದಕ್ಕೆ ನಾನು ಮೋಕ್ಷವನ್ನು ಬಯಸುವುದು. "ಶುದ್ಧ ಆತ್ಮಸ್ವರೂಪವಾಗಿ-ಪಾಂಚಭೌತಿಕ ದೇಹದ ನಿರ್ಬಂಧವಿಲ್ಲದೆ-ಇರಬೇಕೆಂಬ ಬಯಕೆ ಇದೇ ಅಲ್ಲವೇ ಮೋಕ್ಷ?"

**ಭಗವಂತನ ಸಹಾಯ :**

ಗಾಂಧೀಜಿ ದಕ್ಷಿಣ ಆಫ್ರಿಕಾದಲ್ಲಿ ಸತ್ಯಾಗ್ರಹ ನಡೆಸುತ್ತಿದ್ದಾಗ ಭಾರತ ದೇಶದಿಂದ ನಿಧಿಯನ್ನು ಕೂಡಿಸಿ ಅಲ್ಲಿಗೆ ಕಳುಹಿಸಲಾಗುತ್ತಿತ್ತು. ಮದರಾಸಿನಲ್ಲಿಯೂ ಅನೇಕ ವಿದ್ಯಾರ್ಥಿಗಳು ಈ ನಿಧಿಯ ಸಂಗ್ರಹಕ್ಕೆ ಕೆಲಸ ಮಾಡಿದ್ದರು. ಗಾಂಧೀಜಿಯ ಹೆಸರು ಅವರಿಗೆ ಸುಪರಿಚಿತವಾಗಿದ್ದಿತು. ಆದರೆ ಮೂರ್ತಿಯನ್ನು ನೋಡಿದ ಕೆಲವರಿಗೇಕೋ "ಇಷ್ಟೇನೇ?" ಅನಿಸಿರಬಹುದು. ಒಂದು ದಿನ ಒಬ್ಬ ವಿದ್ಯಾರ್ಥಿ ಸ್ವಲ್ಪ ಲಘುವಾಗಿಯೇ "ನಿಮ್ಮ ಸತ್ಯಾಗ್ರಹವು ಯಶಸ್ವಿಯಾದುದು ನಿಮ್ಮ ಸಂತ್ರಸ್ತರಿಗೆ ನಾವು ಕೂಡಿಸಿ ಕಳುಹಿಸಿದ ನಿಧಿಯಿಂದಲ್ಲವೇ" ಅಂದುಬಿಟ್ಟ. ಹಸನ್ಮುಖರಾಗಿ ಬಹು ಸರಳತೆಯಿಂದ ಮಾತಾಡುತ್ತಿದ್ದ ಗಾಂಧೀಜಿ ಗಂಭೀರ ಮುಖಮುದ್ರೆಯನ್ನು ತಾಳಿದರು. "ಹೌದು. ನೀವು ಶ್ರಮಪಟ್ಟು ನಿಧಿಯನ್ನು ಕೂಡಿಸಿದಿರಿ. ಅದಕ್ಕೆ ನಾನು ಸದಾ ಕೃತಜ್ಞನಾಗಿದ್ದೇನೆ. ಆದರೆ ಇದನ್ನು ನೆನಪಿನಲ್ಲಿಡಿ, ಸತ್ಯಾಗ್ರಹಿಗಳು ಪ್ರಮಾಣವನ್ನು ಮಾಡಿದ್ದರು. ತಮ್ಮ ಹೋರಾಟವನ್ನು ಮುಂದುವರಿಸುತ್ತಲೇ ಇದ್ದರು. ಎಂತಹ ಕಷ್ಟಗಳು ಒದಗಿದಾಗ್ಯೂ ಅವರು ಹಿಮ್ಮೆಟ್ಟುತ್ತಿರಲಿಲ್ಲ -ಪ್ರಾಣಾರ್ಪಣೆಗೂ ಸಿದ್ಧರಾಗಿದ್ದರು." ಸಭಿಕರಲ್ಲಿ ಮೌನ ಮೂಡಿತು. ಗಾಂಧೀಜಿಯ ರೌದ್ರ ಸ್ವರೂಪ ಒಂದು ಕ್ಷಣ ಅವರಿಗೆ ದರ್ಶನವಾಯಿತು. ಒಂದು ಕ್ಷಣದ ನಂತರ ಗಾಂಧೀಜಿ ಮುಂದುವರಿದರು. "ನಿಮ್ಮ ಸಹಾಯ ಬಹು ಉಪಕಾರವಾಯಿತು-ಆದರೆ ನಮ್ಮ ನಿಲುವು ಸತ್ಯದ್ದು. ಅದಕ್ಕೆ ಭಗವಂತನೇ ಸಹಾಯ ಮಾಡಿದ. ನಿಮ್ಮಲ್ಲಿ ನಿಂತು ನಿಮ್ಮನ್ನು ಪ್ರೇರೇಪಿಸಿದ" ಎಂದರು.

ಅಂದಿನಿಂದ ವಿದ್ಯಾರ್ಥಿಗಳಲ್ಲಿ ಅವರನ್ನು ಲಘುವಾಗಿ ಪ್ರಶ್ನೆ ಮಾಡುವ ವೃತ್ತಿ ದೂರವಾಯಿತು.

**ಗಾಂಧೀಜಿಯವರ ಸಂದಾನ ಮಾರ್ಗ :**

೧೯೨೪ರ ಡಿಸೆಂಬರಿನಲ್ಲಿ ಬೆಳಗಾಂವಿಯಲ್ಲಿ ನಡೆದ ಕಾಂಗ್ರೆಸ್ ಮಹಾಧಿವೇಶನಕ್ಕೆ ಗಾಂಧೀಜಿಯೇ ಅಧ್ಯಕ್ಷರಾಗಿದ್ದರು. ಬಹಿರಂಗ ಅಧಿವೇಶನದ ಕಾರ್ಯಕಲಾಪ, ತಮ್ಮ ಕಾಲಕ್ಲುಪ್ತತೆಯ ಕಟ್ಟುನಿಟ್ಟಾದ ಆಚರಣೆಯ ಫಲವಾಗಿ ಎರಡು ದಿನಗಳಲ್ಲಿ ಮುಗಿದು ಹೋದವು. ಪ್ರತಿಯೊಂದು ಪ್ರಾಂತದ ಮುಖ್ಯ ಕಾರ್ಯಕರ್ತರನ್ನು ತಮ್ಮ ಬಿಡಾರಕ್ಕೆ ಕರೆಯಿಸಿ, ಅವರ ಸಮಸ್ಯೆಗಳನ್ನು ಚರ್ಚಿಸಿ ತಮ್ಮ ಸಲಹೆಗಳನ್ನು ತಿಳಿಸುವುದೇ ಅವರ ಮುಖ್ಯ ಕಾರ್ಯಕ್ರಮವಾಗಿತ್ತು.

ಕರ್ನಾಟಕದ ಕಾರ್ಯಕರ್ತರ ಸಭೆಯಲ್ಲಿ ನಡೆದ ಕಾರ್ಯಕಲಾಪ, ಆ ಸಭೆಯಲ್ಲಿದ್ದವರ ನೆನಪಿನಲ್ಲಿ ಅಚ್ಚಳಿಯದೆ ನಿಂತಿರುವ ವಿಷಯವಾಗಿದೆ.

'ಆ ಸಮಯದಲ್ಲಿ ದಿ॥ ಗಂಗಾಧರರಾವ ದೇಶಪಾಂಡೆಯವರೇ ಕರ್ನಾಟಕ ಪ್ರಾಂತದ ಕಾಂಗ್ರೆಸ್ಸಿನ ಮುಖಂಡರು. ಗಾಂಧೀವಾದವನ್ನು ಪೂರ್ಣವಾಗಿ ಒಪ್ಪಿಕೊಂಡವರೆಂದೂ, ಖಾದಿ ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಶ್ರದ್ಧೆಯಿಂದ ನಡೆಸುವವರೆಂದೂ ಹೆಸರುಳ್ಳವರಾಗಿದ್ದರು.

ಕರ್ನಾಟಕ ಪ್ರಾಂತದಲ್ಲಿ ಶ್ರೀನಿವಾಸರಾವ ಕೌಜಲಗಿಯವರು ಸ್ವರಾಜ್ಯ ಪಕ್ಷಕ್ಕೆ ಸೇರಿದವರೆಂದೂ ಗಾಂಧೀವಾದದಲ್ಲಿ ಪೂರ್ಣ ನಂಬಿಕೆ ಇಲ್ಲದವರೆಂದೂ ಅನಿಸಿ ಕೊಂಡಿದ್ದರು. ಈ ಈರ್ವರಲ್ಲಿ ವೈಯಕ್ತಿಕವಾಗಿ ಯಾವ ವೈರಭಾವವಿಲ್ಲದಿದ್ದರೂ ಅವರ ಅನುಯಾಯಿಗಳಲ್ಲಿಯಂತೂ ತೀವ್ರವಾದ ವಾಗ್ಯುದ್ಧ. ಅನುಚಿತ ಟೀಕೆಗಳು-ಇತ್ಯಾದಿ ನಡೆಯುತ್ತಿದ್ದುದರಿಂದ ಕಾಂಗ್ರೆಸ್ಸಿನಲ್ಲಿ ವೈಮನಸ್ಸುಗಳು ಬೆಳೆದಿದ್ದವು. ಪ್ರಾಂತದ ಕಾಂಗ್ರೆಸ್ಸಿನ ಅಧ್ಯಕ್ಷರಾಗಿರಬೇಕೆಂಬುದರ ಬಗೆಗೆ ಬಹಳ ಮಟ್ಟಿಗೆ ಭಿನ್ನಾಭಿಪ್ರಾಯಗಳು ಉಗ್ರ ರೂಪವನ್ನೇ ತಾಳಿದ್ದುವು.

ಗಂಗಾಧರರಾಯರನ್ನೂ ಶ್ರೀನಿವಾಸರಾಯರನ್ನೂ ತಮ್ಮ ಎರಡು ಪಾರ್ಶ್ವಗಳಲ್ಲಿ ಕೂರಿಸಿಕೊಂಡು-ಅವರ ಬೆನ್ನುಗಳನ್ನು ಸವರುತ್ತಾ ಗಾಂಧೀಜಿ ಈ ರೀತಿ ಆರಂಭಿಸಿದರು-

"ಕರ್ನಾಟಕದಲ್ಲಿ ಒಂದೇ ಜಾಗದಲ್ಲಿ ಎರಡು ದೊಡ್ಡ ಗಿಡಗಳು ಬೆಳೆದಿದೆ. ಒಂದಕ್ಕೊಂದು ಬೆಳೆಯಲು ಅವಕಾಶ ಕೊಡುವುದಿಲ್ಲ. ಆದ್ದರಿಂದ ಒಂದನ್ನು ಕಡಿಯ ಬೇಕಾಗಿದೆ. ಅಲ್ಲವೆ? ಅಥವಾ ಎರಡನ್ನೂ ಕಡಿಯಬೇಕೋ? ಇರಲಿ ವೈಮನಸ್ಯಕ್ಕೆ ಕಾರಣವೇನು? ವೈಯಕ್ತಿಕವಾಗಿ ಏನಿಲ್ಲವಷ್ಟೇ?

ಗಂಗಾಧರರಾಯರು-ಅಂಥದೇನೂ ಇಲ್ಲ. ತಾವು ಕಂಡಹಾಗೆ ನಾನು ಮೊದಲಿನಿಂದಲೂ ರಚನಾತ್ಮಕ ಕೆಲಸಗಳಲ್ಲಿಯೇ ಶ್ರದ್ಧೆಯುಳ್ಳವನು.

ಇಷ್ಟರಲ್ಲಿ ಅವರ ಅನುಯಾಯಿಗಳು ಮಧ್ಯೆ ಮಾತಾಡಿ ಶ್ರೀನಿವಾಸರಾಯರ ಗುಂಪಿನವರು ಗಾಂಧೀಜಿಯವರ ಕಾರ್ಯಕ್ರಮ ಧೋರಣೆಗಳ ಬಗೆಗೆ ಹೀಯಾಳಿಕೆ ತೋರಿಸುತ್ತಿರುವರೆಂದು ಹೇಳಿದರು.

> ಶ್ರೀನಿವಾಸರಾವ ಕೌಜಲಗಿ-ಮಹಾತ್ಮಾಜೀ-ತಮ್ಮಲ್ಲಿ ನನಗೆ ಅಪಾರ ಶ್ರದ್ಧೆಯಿದೆ. ಆದರೆ ಇದು ರಾಜಕೀಯ. ಕೇವಲ ಧಾರ್ಮಿಕ ಆಂದೋಲನವನ್ನಲ್ಲ. ನಮ್ಮ ಅಧ್ಯಕ್ಷರು ನಾವು ಶಾಸನಸಭೆಗಳನ್ನು ಬಹಿಷ್ಕರಿಸುವುದನ್ನು ತಮ್ಮ ಅನುಕೂಲಕ್ಕೆ ಉಪಯೋಗಿಸಿಕೊಂಡಿದ್ದಾರೆ. ಇದರಿಂದ ದೇಶಕ್ಕೆ ಹಾನಿಯೆಂದು ಪಂಡಿತ್ ಮೋತಿಲಾಲರು ಬರೆದಿರುವುದನ್ನು ನಾನೂ ಒಪ್ಪುತ್ತೇನೆ. ಇದು ನೇರವಾದ ಭಿನ್ನಾಭಿಪ್ರಾಯ. ಅಂದ ಮಾತ್ರಕ್ಕೆ ನಾನು ದ್ರೋಹಿ. ಬಂಡಾಯಗಾರ ಎಂಬುದಾಗಿ ನನ್ನ ವಿಷಯದಲ್ಲಿ ಅಪಪ್ರಚಾರ ಮಾಡುವುದು ನ್ಯಾಯವೇ? ತಾವೇ ಹೇಳಿ.

ಮತ್ತೆ ಕೆಲವರು ಮಾತಾಡಲು ಆರಂಭಿಸಿದ್ದರಿಂದ ಸ್ವಲ್ಪ ಗೊಂದಲವೇ ಆಯಿತು. ಗಾಂಧೀಜಿ ನಗುತ್ತಾ – "ತಡೆಯಿರಿ, ನಾನೊಂದು ವಿಷಯ ಹೇಳುತ್ತೇನೆ. ಒಂದು ಕಥೆ" ಗಾಂಧೀಜಿ ಮುಂದುವರಿಸಿದರು. ಸಭೆಯು ಮೌನದಿಂದ ಕೇಳತೊಡಗಿತು.

"ನಾನು ದಕ್ಷಿಣ ಆಫ್ರಿಕಾದಿಂದ ಇಂಗ್ಲೆಂಡಿಗೆ ಹೋಗಬೇಕಾದ ಪ್ರಸಂಗವಿತ್ತು. ಅಲ್ಲಿನ ಅಧಿಕಾರಿಗಳೊಂದಿಗೆ ಕೆಲವು ಸಮಸ್ಯೆಗಳನ್ನು ಕುರಿತು ಚರ್ಚಿಸಲು ಯಥಾರೀತಿ ನಮ್ಮ ಭೀಷ್ಮರಂತಿದ್ದ ದಾದಾಭಾಯಿಯವರನ್ನು ಭೇಟಿಯಾದೆ. ಅವರು ಒಂದು ಸಣ್ಣ ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದರು. ಅದರಲ್ಲಿಯೇ ಅವರ ಪುಸ್ತಕಗಳು, ಕಾಗದಗಳು, ವಿಶ್ರಾಂತಿ ಸ್ಥಳ. ಅವರನ್ನು ಭೇಟಿ ಮಾಡಲು ಬರುವವರಿಗೆ ಕೂಡಲು ನಾಲ್ಕು ಕುರ್ಚಿಗಳನ್ನು ಹಾಕಲೂ ಸಹ ಸ್ಥಳ ಇಲ್ಲ. ಇಂತಹ ಸಣ್ಣ ಕೋಣೆಯಲ್ಲಿ ಕುಳಿತು ಅವರು ತಮ್ಮ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಏನು ಸರಳ ಜೀವನ, ಎಷ್ಟು ನಿರಾಡಂಬರ! ನಾನು ಮುಗ್ಧನಾದೆ. ನಮ್ಮ ಮಾತು ಮುಗಿದ ಮೇಲೆ ನಾನು ಹೊರಡುವ ಮುನ್ನ ದಾದಾಭಾಯಿ ಕೇಳಿದರು–"ನೀವು ಭಾರತಕ್ಕೆ ಈಗ ಹೋಗುತ್ತಿರುವಿರಲ್ಲವೇ?" "ಹೌದು" ಎಂದೆ. "ಹಾಗಾದರೆ ನನ್ನದೊಂದು ಪ್ರಾರ್ಥನೆ" ಬೊಂಬಾಯಿಗೆ ಹೋದ ಕೂಡಲೇ, ಫೆರೋಜ ಷಾ ಮೇಹ್ತಾ ಅವರನ್ನು ಭೇಟಿಯಾಗಬೇಕು. ಈ ಡಿಸೆಂಬರಿನಲ್ಲಿ ನಡೆಯುವ ಕಾಂಗ್ರೆಸ್ ಅಧಿವೇಶನಕ್ಕೆ ನನ್ನನ್ನು ಅಧ್ಯಕ್ಷರನ್ನಾಗಿ ಆರಿಸಿದ್ದಾರೆ. ನೀವು ಮೆಹ್ತಾ ಅವರನ್ನು ಕಂಡು ನಾನು ಬೊಂಬಾಯಿ ನಗರಕ್ಕೆ ಬಂದಾಗ ಹಿಂದೆ ಯಾರೂ ಕಾಣದಷ್ಟು ಅದ್ದೂರಿಯಾದ ಸ್ವಾಗತ, ಮೆರವಣಿಗೆ ಇತ್ಯಾದಿ ನನಗೆ ಮಾಡಿಸಬೇಕೆಂದು ಹೇಳಿ."

ನನಗೆ ಈ ಮಾತು ಕೇಳಿ ಆಶ್ಚರ್ಯವಾಯಿತು. ಇದನ್ನು ಅವರು ಗ್ರಹಿಸಿದರು. "ನಿಮಗೆ ಅಚ್ಚರಿಯಾಗುತ್ತದಲ್ಲವೇ? ನಾನು ಜಂಭದ ಮನುಷ್ಯನೆಂದು ಭಾವಿಸುತ್ತೀರಲ್ಲವೇ? ಹಾಗಲ್ಲ. ನಾನು ಇಂಗ್ಲೆಂಡಿನಲ್ಲಿ ಭಾರತೀಯರಿಗಾಗಿ ಹೊಡೆದಾಡುತ್ತಿರುವ ಸಾಮಾನ್ಯ ಮನುಷ್ಯ. ಆದರೆ ನನ್ನ ಮಾತಿಗೆ ಈ ಜನ ಬೆಲೆ ಕೊಡಬೇಕಾದರೆ ನನಗೆ ಭಾರತದಲ್ಲಿ ಎಂತಹ ಗೌರವವಿದೆ. ಪ್ರತಿಷ್ಠೆ ಇದೆ ಎನ್ನುವುದನ್ನು ಇವರು ಮನಗಾಣಬೇಕು ಆಗ ನನ್ನ ಮಾತಿಗೆ ಹೆಚ್ಚು ಬೆಲೆ ಕೊಡುವರು. ಇದು ನನಗಾಗಿ ಅಲ್ಲ. ನಾನು ಕೇಳುತ್ತಿರುವುದು ಭಾರತಕ್ಕಾಗಿ."

ಈ ಕಥೆಯ ಸಾರವೇನು? ಮೋತಿಲಾಲ ನೆಹ್ರು, ಚಿತ್ತರಂಜನದಾಸ್ ನಮ್ಮ ಪರವಾಗಿ ಹೋರಾಡುವವರಿದ್ದಾರೆ. ಅವರ ದೇಶಭಕ್ತಿ, ನಿಸ್ಪೃಹತೆ ಇವುಗಳ ಬಗ್ಗೆ ನಿಮಗೆ ಏನಾದರೂ ಸಂಶಯವೇ? ಅವರು ಅನುಸರಿಸುವ ಮಾರ್ಗದಲ್ಲಿ ನನಗೆ ಪೂರ್ಣ ವಿಶ್ವಾಸವಿಲ್ಲದಿರಬಹುದು. ಆದರೆ ಅವರು ಸರಿಯೆಂದು ಆರಿಸಿಕೊಂಡ ಮಾರ್ಗದಲ್ಲಿ ಅವರು ಮುಂದುವರಿಯಲು ನಾವು ಅಡ್ಡಿಬರಬಹುದೇ? ಅವರಿಗೆ ಶುಭ ಕೋರುವುದು ನಮ್ಮ ಕರ್ತವ್ಯ. ಅವರ ಪ್ರತಿಷ್ಠೆಯನ್ನು ಹೆಚ್ಚಿಸುವುದು ನಮ್ಮ ಕರ್ತವ್ಯ ಅವರೂ ರಚನಾತ್ಮಕ ಕಾರ್ಯಗಳಿಗೆ ಬೆಂಬಲಕೊಡಲು ಸಮ್ಮತಿಸಿದ್ದಾರೆ. ಅವರಿಗೆ ಕಾಂಗ್ರೆಸ್ ಸಂಸ್ಥೆಯಲ್ಲಿ ಅಧಿಕಾರ ಸ್ಥಾನಗಳನ್ನು ನೀವು ಬಿಟ್ಟುಕೊಡಿ. ಈ ಪರಸ್ಪರ ಅಸೂಯೆಯ ಮನೋಧರ್ಮ

ವನ್ನು ದೂರಮಾಡಿ. ಇಷ್ಟು ಔದಾರ್ಯ ನಿಮ್ಮಲ್ಲಿ ಇಲ್ಲದಿದ್ದರೆ ಸ್ವರಾಜ್ಯವನ್ನು ಸ್ಥಾಪನೆಯ ಮಹತ್ಕಾರ್ಯವನ್ನು ನೀವು ಹೇಗೆ ತಾನೆ ಮಾಡಬಲ್ಲಿರಿ? ಇತ್ಯಾದಿಯಾಗಿ ಮನಮುಟ್ಟುವಂತೆ ಮಾತಾಡಿದ ಮೇಲೆ ಅಲ್ಲಿರುವವರಲ್ಲಿ ಗಂಭೀರ ಮೌನ ಮೂಡಿತು.

ಗಾಂಧೀಜಿ ಮುಂದುವರಿದು,-ನಾನೇನೋ ಮಂತ್ರವಾದಿ, ಜಾದೂಗಾರನೆಂದು ಜನ ತಿಳಿಯುತ್ತಾರೆ. ನನ್ನ ಜಾದೂ ಅಥವಾ ಸಂಧಾನ ಚತುರತೆ ಇಷ್ಟೇ. ನನ್ನ ಅಂತರಂಗದಿಂದ ಸತ್ಯವನ್ನು ನುಡಿಯುತ್ತೇನೆ. ನಿಮ್ಮ ನಿಜವಾದ ಅಂತರಂಗ ಅದಕ್ಕೆ ಮಿಡಿಯುತ್ತೆ. ಒಪ್ಪಿಗೆ ಕೊಡುತ್ತೆ. ಗಂಗಾಧರರಾಯರು ಪರವಶರಾಗಿ "ಮಹಾತ್ಮಾಜಿ – ನೀವು ಹೇಳಿದಂತೆ ಮಾಡುತ್ತೇವೆ. ನೀವೇ ನಮ್ಮ ತಂದೆ" ಎಂದರು.

"ಎಲ್ಲವನ್ನೂ ಕ್ಷಮಿಸುತ್ತೇನೆ" ಎಂದು ತಕ್ಷಣ ಹೇಳಿ ನಕ್ಕರು. ಸಭೆಯ ವಾತಾವರಣ ಹಗುರವಾಯಿತು. ಅನಂತರ ಪ್ರಾಂತದ ಮುಂದಿನ ಕಾಂಗ್ರೆಸ್ ಅಧ್ಯಕ್ಷ ಪದವಿಗೆ ಒಮ್ಮತ ದಿಂದ ಕಾರ್ನಾಡ್ ಸದಾಶಿವರಾಯರನ್ನು ಆರಿಸಬೇಕೆಂದು ತೀರ್ಮಾನವಾಯಿತು.

**ಚಕಮುಕಿಯ ಮಾತು :**

ಬಸವನಗುಡಿಯಲ್ಲಿರುವ ನ್ಯಾಷನಲ್ ಹೈಸ್ಕೂಲಿನಲ್ಲಿ ದಕ್ಷಿಣ ಭಾರತ ಖಾದಿ ಪ್ರದರ್ಶನ ವನ್ನು ೧೯೨೭ರಲ್ಲಿ ಜುಲೈ ತಿಂಗಳಲ್ಲಿ ಗಾಂಧೀಜಿ ಉದ್ಘಾಟಿಸಿದರು. ತಮಿಳುನಾಡು, ಆಂಧ್ರ, ಕೇರಳ ಮತ್ತು ಕರ್ನಾಟಕ ಪ್ರಾಂತಗಳಿಂದ ಖಾದಿ ಬಟ್ಟೆಗಳು ಮಾರಾಟಕ್ಕೆ ಬಂದದ್ದು ಮಾತ್ರವಲ್ಲದೆ ಹತ್ತಿಯನ್ನು ಎಕ್ಕುವುದು ನೂಲುವುದು, ನೇಯ್ಗೆ ಮುಂತಾದ ಪ್ರಯೋಗಗಳೂ ಏರ್ಪಾಡಾಗಿದ್ದವು. ಈ ಪ್ರಾಂತಗಳ ಹಳ್ಳಿಗಳಿಂದ ಕಸಬುದಾರರು ಹೆಂಗಸರೂ, ಗಂಡಸರೂ ಬಂದು ಪ್ರೇಕ್ಷಕರಿಗೆ ತಮ್ಮ ಕೌಶಲ್ಯವನ್ನು ತೋರಿಸುತ್ತಿದ್ದರು. ಆದುದರಿಂದ ಈ ಪ್ರದರ್ಶನವು ಬಹಳ ಶಿಕ್ಷಣಪ್ರದವಾಗಿತ್ತು.

ಎಷ್ಟು ಜನ ಪ್ರದರ್ಶನಕ್ಕೆ ಇಂದು ಬಂದಿದ್ದರು, ಪ್ರತಿಷ್ಠಿತರು ಯಾರು ಯಾರು ಬಂದಿದ್ದರು? ಮುಂತಾದ ಪ್ರಶ್ನೆಗಳನ್ನು ಗಾಂಧೀಜಿ ದಿನವಹಿ ಕೇಳುತ್ತಿದ್ದರು. ಅವರು ಆಗ ಕುಮಾರಾ ಪಾರ್ಕಿನಲ್ಲಿ ಬಿಡಾರ ಮಾಡುತ್ತಿದ್ದರು.

ಒಂದು ದಿನ ಸರ್.ಎಂ.ವಿಶ್ವೇಶ್ವರಯ್ಯನವರು ದಯಮಾಡಿಸಿದರು. ರಾಜಾಜಿ ಅವರನ್ನು ಸ್ವಾಗತಿಸಿ ಪ್ರದರ್ಶನದಲ್ಲಿದ್ದ ವಸ್ತುಗಳನ್ನು ತೋರಿಸುತ್ತಿದ್ದರು. ವಿಶ್ವೇಶ್ವರಯ್ಯನವರಿಗೂ ರಾಜಾಜಿಯವರಿಗೂ ಚಕಮುಕಿ ಮಾತುಗಳು ನಡೆಯುತ್ತಿದ್ದವು. "ಭಾರತ ಹಳ್ಳಿಗಳ ದೇಶ" ಎಂದು ಒಂದು ಫಲಕದ ಮೇಲೆ ಬರೆದಿತ್ತು. "ಏಕೆ ಹೀಗೆಯೇ ಮುಂದು ವರಿಯಬೇಕು?" ಎಂದು ಸರ್.ಎಂ.ವಿಶ್ವೇಶ್ವರಯ್ಯನವರ ಪ್ರಶ್ನೆ. "ಖಾದಿ ಉಪಕಸುಬು. ಬೇಸಾಯಗಾರರಿಗೆ ವಿರಾಮ ಕಾಲದ ಉದ್ಯೋಗ ಆಗಬಲ್ಲದು" ಎಂದು ಬರೆದಿತ್ತು. "ಆದರೆ ಎಷ್ಟು ವರಮಾನ?" ಎಂದು ಸರ್.ಎಂ. ವಿಶ್ವೇಶ್ವರಯ್ಯನವರ ಪ್ರಶ್ನೆ. ಉತ್ತರ-ತಿಂಗಳಿಗೆ ೫-೧೦ ರೂ. ಒಂದು ಕುಟುಂಬದವರು ಗಳಿಸಬಹುದೆಂದು. "ಇಷ್ಟೇನೆ? ಅದರಿಂದ ತೃಪ್ತರಾಗಬೇಕೆ? ಸಾಲದು. ಸರ್ವಥಾ ಸಾಲದು. ದೇಶದಲ್ಲಿ ಆಧುನಿಕ

ರೀತಿಯ ಕೈಗಾರಿಕೆಗಳು ಹರಡಬೇಕು" ಎಂದು ಸರ್.ಎಂ.ವಿಶ್ವೇಶ್ವರಯ್ಯನವರ ವಾದ. "ಹೌದು ಅನೇಕ ದೊಡ್ಡ ಗಿರಣಿಗಳನ್ನು ಸ್ಥಾಪಿಸಿದರೆ ಅವಕ್ಕೆ ಗಿರಾಕಿಗಳನ್ನು ಒದಗಿಸುವುದು ಹೇಗೆ?" ಎಂದು ರಾಜಾಜಿಯವರ ಪ್ರಶ್ನೆ. "ಹೋಗಲಿ, ನಿಮ್ಮ ಚರಕಾ ಉದ್ಯಮದಲ್ಲಿ ಒಟ್ಟು ದೇಶದಲ್ಲಿ ವರ್ಷಕ್ಕೆ ಉತ್ಪನ್ನವೆಷ್ಟು?" "ಸುಮಾರು ಒಂದು ಕೋಟಿ ರೂಪಾಯಿಯಷ್ಟು" ಅಷ್ಟೇನೇ? ಬೊಂಬಾಯಿಯ ಒಂದು ಗಿರಣಿಯಲ್ಲಿ ಇಷ್ಟು ಉತ್ಪನ್ನವಾಗಬಹುದು. ಇಷ್ಟು ಶ್ರಮ, ಕಾಲಹರಣ ಎಲ್ಲವೂ ವ್ಯರ್ಥ. ಈ ಚರಕದ ಉದ್ಯಮದ ಹಿಂದೆ ಇರುವ ಶ್ರದ್ಧೆಯನ್ನೂ ಉದಾರ ಭಾವವನ್ನು ನಾನು ಮೆಚ್ಚುತ್ತೇನೆ. ಆದರೆ ಇಷ್ಟೂ ನಿರರ್ಥಕವಾಗುತ್ತಿದೆಯಲ್ಲಾ ಎಂಬುದೇ ನನ್ನ ಚಿಂತೆ". ತಮ್ಮ ವ್ಯವಸಾಯೋದ್ಯಮಕ್ಕೆ ಅಡ್ಡಿಬಾರದ ಯಾವ ಕಸಬೇ ಆಗಲಿ, ಅದು ಚರಕಾಗಿಂತಲೂ ಹೆಚ್ಚಾದ ಉತ್ಪನ್ನ ಕೊಡುವುದಾದರೆ ಗಾಂಧೀಜಿ ಅದಕ್ಕೆ ಅಡ್ಡಿಮಾಡರು. ತಮ್ಮ ಬಟ್ಟೆಗಾಗಿ ಹಳ್ಳಿಯ ಜನ ಸ್ವಾವಲಂಜಿಗಳಾಗಿರುವುದೇ ಈ ಉದ್ಯಮದ ಮುಖ್ಯ ಉದ್ದೇಶ. ಇವೇ ಮುಂತಾದ ವಾದಗಳಿಗೆ ಸರ್.ಎಂ. ವಿಶ್ವೇಶ್ವರಯ್ಯವರು ಗಮನ ಕೊಡಲಿಲ್ಲ. "ಒಳ್ಳೆಯ ಧ್ಯೇಯ, ಒಳ್ಳೆಯ ದೀಕ್ಷೆ. ಆದರೆ ಒಟ್ಟಿನಲ್ಲಿ ಲಾಭದಾಯಕವಲ್ಲ" ಎಂದು ಹೇಳಿ ಸರ್.ಎಂ. ವಿಶ್ವೇಶ್ವರಯ್ಯ ಅವರು ಬೀಳ್ಕೊಂಡರು. ಸರ್. ಎಂ. ವಿಶ್ವೇಶ್ವರಯ್ಯ ಅವರು ಖಾದಿ ಪ್ರದರ್ಶನಕ್ಕೆ ಭೇಟಿಕೊಟ್ಟಿದ್ದನ್ನೂ, ಅವರು ಖಾದಿಯ ಉದ್ಯಮದ ಬಗೆಗೆ ಮಾಡಿದ ಟೀಕೆಗಳನ್ನೂ ಯಾರೋ ಗಾಂಧೀಜಿಯವರಿಗೆ ತಿಳಿಸಿದರು. ಗಾಂಧೀಜಿಗೆ ಬಹಳ ನಿರಾಶೆಯುಂಟಾಯಿತು.

ಪ್ರದರ್ಶನದ ಕೊನೆಯ ದಿನ ಪೂರ್ವಾಹ್ನದಲ್ಲಿ ಗಾಂಧೀಜಿಯವರ ಹಸ್ತದಿಂದ ನೂಲುವವರಿಗೆ, ನೇಯುವವರಿಗೆ (ಎಲ್ಲರೂ ಹಳ್ಳಿಯವರು) ಬಹುಮಾನ ವಿನಿಯೋಗ ಮತ್ತು ಅವರ ಮುಕ್ತಾಯ ಭಾಷಣ ಏರ್ಪಾಡಾಗಿತ್ತು. ಸಭಾ ಮಂದಿರಕ್ಕೆ ಪ್ರವೇಶ ಮಾಡಲು ಶುಲ್ಕ ಇತ್ತು. ಪ್ರದರ್ಶನವನ್ನು ಆ ವೇಳೆಗೆ ಅನೇಕರು ನೋಡಿದ್ದ ಕಾರಣ ಮುಕ್ತಾಯ ಸಮಾರಂಭಕ್ಕೆ ಹೆಚ್ಚು ಜನ ಬಂದಿರಲಿಲ್ಲ. ಗಾಂಧೀಜಿಗಾದರೋ ಆ ಹಳ್ಳಿಯವರಿಗೆ ಬಹುಮಾನ ವಿತರಣೆ ಮಾಡುವ ಇಂತಹ ಸಂದರ್ಭದಲ್ಲಿ ನಾಗರಿಕರು ಹೆಚ್ಚು ಸಂಖ್ಯೆಯಲ್ಲಿ ಪಾಲುಗೊಳ್ಳಲಿಲ್ಲವಲ್ಲ ಎಂಬ ಅಸಮಾಧಾನ. ಗಾಂಧೀಜಿ ತಮ್ಮ ಮುಕ್ತಾಯ ಭಾಷಣವನ್ನು ಆರಂಭಿಸಿದರು. ಖಾದಿ ಹೇಗೆ ನಾಗರಿಕರಿಗೂ ಹಳ್ಳಿಯವರಿಗೂ ಮಧುರ ಬಾಂಧವ್ಯವನ್ನು ಕಲ್ಪಿಸಬಹುದೆಂಬುದನ್ನು ತಿಳಿಸಿದರು. ಇದ್ದಕ್ಕಿದ್ದಂತೆಯೇ ಅವರ ಮಾತುಗಳು ನಿಂತುವು. ಕಂಠ ಗದ್ಗದವಾಯಿತು. ಅವರ ಕಣ್ಣಿನಲ್ಲಿ ಹನಿ ತುಂಬಿತು. ಸಭಿಕರು ಒಂದುಕ್ಷಣ ಸ್ತಬ್ಧರಾದರು. ಗಾಂಧೀಜಿ ಚೇತರಿಸಿಕೊಂಡು ಮುಂದುವರಿಸಿದರು. "ಸಂಯಮ ಮಾಡುವ ಅಭ್ಯಾಸ ನನಗೆ ಹೊಸದಲ್ಲ. ಆದರೆ ನಾಗರಿಕ ಉದಾಸೀನತೆ, ಕಠಿಣ ಹೃದಯ, ಅನುಕಂಪರಾಹಿತ್ಯ ನನಗೂ ಸಹಿಸಲು ಒಮ್ಮೊಮ್ಮೆ ದುಸ್ಸಾಧ್ಯವಾಗುತ್ತದೆ. ಕೆಲವರು ಈ ದೇಶದ ಆರ್ಥಿಕ ಅಭ್ಯುದಯವನ್ನು ಬೃಹದ್ಯಂತ್ರಗಳ ಮೂಲಕವೆಂದು ಕನಸು ಕಾಣುತ್ತಿದ್ದಾರೆ. ನಾನೂ ಒಬ್ಬ ಕನಸುಗಾರನೇ. ನಾನು ಕಾಣುವ ಕನಸು ಬೇರೆ ರೀತಿಯಲ್ಲಿ; ಭಾರತಾದ್ಯಂತ ಹಳ್ಳಿಗಳು ಗ್ರಾಮೋದ್ಯೋಗಿಗಳ ಮೂಲಕ ಪುಷ್ಟವಾಗಿ

ಬೆಳೆಯಲೆಂದು. ಪಾಶ್ಚಾತ್ಯ ದೇಶಗಳನ್ನು ಅನುಕರಿಸುವುದರಲ್ಲಿ ನಮಗೆ ಸುಖವಿಲ್ಲ"- ಇವೇ ಮುಂತಾದ ಮಾತುಗಳನ್ನು ಹೇಳಿ ಗಾಂಧೀಜಿ ಭಾಷಣವನ್ನು ಮುಗಿಸಿದರು.

ಆ ದಿನಗಳಲ್ಲಿ ಬೆಂಗಳೂರಿನಲ್ಲಿ ಕುದುರೆ ಜೂಜುಗಳು ನಡೆಯುತ್ತಿದ್ದುವು. ಕುಮಾರಾ ಪಾರ್ಕಿನಿಂದ ರೇಸ್‌ಕೋರ್ಸ್ ಕಡೆ ಅವರು ಬಂದಾಗಲೆಲ್ಲ ಅಲ್ಲಿ ನೆರೆಯುತ್ತಿದ್ದ ಜನಸ್ತೋಮ ವನ್ನು ಅವರು ಗಮನಿಸುತ್ತಿದ್ದರು. ಇಲ್ಲಿ ಪ್ರದರ್ಶನದ ಬಹುಮಾನ ವಿನಿಯೋಗ ಸಮಾರಂಭಕ್ಕೆ ಬಂದ ಅಲ್ಪಸಂಖ್ಯಾತರಿಗೂ ಅಲ್ಲಿನ ಸಂದಣಿಗೂ ಇದ್ದ ಅಂತರ ಅವರಿಗೆ ವ್ಯಾಕುಲವನ್ನುಂಟು ಮಾಡಿತ್ತು. ಸರ್.ಎಂ. ವಿಶ್ವೇಶ್ವರಯ್ಯ ಅವರ ಟೀಕೆಗಳೂ ಅವರ ಮನಸ್ಸಿನಲ್ಲಿದ್ದಿರಬಹುದು.

ಕೆಲವು ಕಾಲದ ನಂತರ ಸರ್.ಎಂ.ವಿಶ್ವೇಶ್ವರಯ್ಯ ಮದರಾಸಿನಲ್ಲಿ ವಸ್ತುಪ್ರದರ್ಶನವನ್ನು ಉದ್ಘಾಟಿಸುತ್ತಾ ಖಾದಿಯ ಬಗ್ಗೆ ತಮ್ಮ ನಿಲುವನ್ನು ಬದಲಾಯಿಸಿಕೊಂಡಿದ್ದು ಗಮನಾರ್ಹ.

* * *

ದಕ್ಷಿಣ ಭಾರತ ಖಾದಿ ಪ್ರದರ್ಶನದಲ್ಲಿ, ಒಂದು ಕೊಠಡಿಯಲ್ಲಿ, ಹಿಂದಿನ ಕಾಲದ ಕೆಲವು ತೆಳುವಾದ ಖಾದಿ ಬಟ್ಟೆಗಳನ್ನು ಶೇಖರಿಸಿಡಲಾಗಿತ್ತು. ಢಾಕಾ ಮಸ್ಲಿನಿನ, ನಾನಾ ಫಡನೀಸನ ಅಂಗರೇಖಾ, ಮೈಸೂರು ಅರಮನೆಯಿಂದ ಬಂದಿದ್ದ ಸುಮಾರು ನೂರು ವರ್ಷಗಳ ಹಿಂದೇ ಉಪಯೋಗಿಸಲಾಗುತ್ತಿದ್ದ ದಾರದ ಸೀರೆಗಳೂ ಇತ್ಯಾದಿ. ಗಾಂಧೀಜಿ ಇವುಗಳನ್ನೆಲ್ಲವನ್ನೂ ಕುತೂಹಲದಿಂದ ನೋಡುತ್ತಿದ್ದರು. ಅವುಗಳ ಬಗೆಗೆ ರಾಜಾಜಿ ವಿವರಗಳನ್ನು ನೀಡುತ್ತಿದ್ದರು. ಮೈಸೂರು ಅರಮನೆಯ ಪೂರ್ವಕಾಲದ ಬಟ್ಟೆಯನ್ನು ಕೈಯಲ್ಲಿ ಹಿಡಿದು ಅವುಗಳ ಮೇಲೆ ಕೈಯಾಡಿಸುತ್ತಾ ರಾಜಾಜಿ ಹೇಳಿದರು. "ಎಷ್ಟು ತೆಳುವಾದ ಬಟ್ಟೆಯಾದರೂ, ಅಸಮಾನತೆ ಇದ್ದೇ ಇದೆ." ಗಾಂಧೀಜಿ ಹೇಳಿದರು "ಹೌದು ಅದೇ ಪ್ರಕೃತಿಯ ವಿಶೇಷ. ಉದಾಹರಣೆಗೆ ಹಿಮಾಲಯ ಪರ್ವತ ಶೃಂಗಗಳನ್ನು ನೋಡಿ. ಎಲ್ಲವೂ ಅಸಮಾನ, ಹು ರಮ್ಯ ಅದಕ್ಕೆ ಬದಲಾಗಿ ಈ ಶೃಂಗಗಳು ಜಾಮಿತಿಯ ಆಕೃತಿಗಳಂತೆ ಕೇವಲ ಸರಳ ರೇಖೆಗಳೂ, ತ್ರಿಕೋಣಗಳೂ. ಚತುಃಕೋಣಗಳೂ ಆಗಿದ್ದರೆ ಎಷ್ಟು ಘೋರ, ಅಭಾಸ? ಆಗ ಹಿಮಾಲಯವನ್ನು ನೋಡಿ ಆನಂದಪಡುವಂತಿತ್ತೇ?" ಎಂದರು.

* * *

ಗಾಂಧೀಜಿ ೧೯೨೭ರಲ್ಲಿ ದಕ್ಷಿಣ ದೇಶದ ಯಾತ್ರೆ ಕೈಗೊಂಡಿದ್ದರು. ರಾಜಾಜಿಯವರು ಆಗ ಬೆಂಗಳೂರಿನಲ್ಲಿದ್ದರು. ಆಗಿನ ಮೈಸೂರು ದಿವಾನರಾದ ಮಿರ್ಜಾ ಇಸ್ಮೇಲ್ ಸಾಹೇಬರನ್ನು ಭೇಟಿ ಮಾಡಿ ಗಾಂಧೀಜಿಯವರನ್ನು ಚಿಕಿತ್ಸೆಗಾಗಿಯೂ, ವಿಶ್ರಾಂತಿಗಾಗಿಯೂ ನಂದಿಬೆಟ್ಟದ ಮೇಲೆ ವ್ಯವಸ್ಥೆ ಮಾಡಬೇಕೆಂದು ದಿವಾನರನ್ನು ಒಡಂಬಡಿಸಿದರು. ಏಪ್ರಿಲ್ ತಿಂಗಳಲ್ಲಿ ತನ್ನ ಪರಿವಾರದೊಂದಿಗೆ ನಂದಿಬೆಟ್ಟಕ್ಕೆ ಆಗಮಿಸಿದ್ದರು. ಸಂಸ್ಥಾನದ ಇಬ್ಬರು

ಹಿರಿಯ ವೈದ್ಯರು ಗಾಂಧೀಜಿಯನ್ನು ಸರದಿಯ ಮೇಲೆ ನಿತ್ಯ ಪರೀಕ್ಷಿಸಬೇಕೆಂದು ನಿಯೋಜಿತರಾಗಿದ್ದರು.

ವೈದ್ಯರು ಅವರ ನಾಡಿ, ರಕ್ತದ ಒತ್ತಡ ಇತ್ಯಾದಿಗಳನ್ನು ಪರೀಕ್ಷಿಸುತ್ತಿದ್ದರೇ ಹೊರತು ಅವರಿಗೆ ಔಷಧಗಳನ್ನು ಕೊಟ್ಟು ಚಿಕಿತ್ಸೆಯನ್ನು ಮಾಡಲು ಗಾಂಧೀಜಿ ಬಹುಮಟ್ಟಿಗೆ ಸಮ್ಮತಿಸಿರಲಿಲ್ಲ. ತಮ್ಮ ಪ್ರಕೃತಿ ಚಿಕಿತ್ಸೆಯನ್ನೇ ಅವರು ಹೆಚ್ಚಾಗಿ ಅವಲಂಬಿಸಿದರು. ಆಹಾರ ನಿಯಮ, ಶೀರ್ಷಾಸನ, ಬೇವಿನೆಲೆ, ಬೆಳ್ಳುಳ್ಳಿ ಇತ್ಯಾದಿಗಳ ಸೇವನೆ, ಮಿತವಾದ ಓಡಾಟ ಇತ್ಯಾದಿ.

ಶುಭ್ರವಾದ ದಾರಗಳ ಎಳೆಗಳನ್ನು ನಾಸಿಕದ ಎಡ ರಂಧ್ರದಲ್ಲಿ ಬಿಟ್ಟು ಮೇಲಕ್ಕೆಳೆದು ಬಲರಂಧ್ರದಲ್ಲಿ ಬರುವಂತೆ ಮಾಡಿ ನಾಸಿಕ ರಂಧ್ರಗಳನ್ನು ಶುದ್ಧಿ ಮಾಡುವ ಕ್ರಿಯೆಗೆ "ನೇತಿ" ಎಂದು ಹಠಯೋಗದಲ್ಲಿ ಹೇಳುತ್ತಾರೆ. ಈ ಕ್ರಿಯೆಯನ್ನು ಗಾಂಧೀಜಿ ಮಾಡು ತ್ತಿದ್ದರು. ಆದರೆ ಅವರು ಮಾಡುತ್ತಿದ್ದ ಶೀರ್ಷಾಸನ, ನೇತಿಕ್ರಿಯೆ ಇವು ಸರಿಯೇ ಎಂದು ನೋಡಿ ಹೇಳಲು ಪೂನಾ ಬಳಿಯಿರುವ ಲೋಣಾವಳದಲ್ಲಿದ್ದ ಸ್ವಾಮಿ ಕುವಲಯಾನಂದರನ್ನು ಕರೆಯಿಸಲಾಗಿತ್ತು. ಸ್ವಾಮಿ ಕುವಲಯಾನಂದರು ನಂದಿಬೆಟ್ಟಕ್ಕೆ ಹೋಗಿ ಎರಡು ದಿನ ಬಂದರು. ಅವರನ್ನು ಕೇಳಿದ್ದಕ್ಕೆ ಹೀಗೆ ಹೇಳಿದರು. – "ಮಹಾತ್ಮಾಜಿ ಆಸನವನ್ನೂ ನೇತಿಕ್ರಿಯೆಯನ್ನೂ ಶಾಸ್ತ್ರೀಯ ರೀತಿಯಲ್ಲಿ ಮಾಡುತ್ತಾರೆ. ಅವರಿಗೆ ನಾನು ಯಾವ ಸಲಹೆಯನ್ನೂ ಕೊಡಬೇಕಾಗಿರಲಿಲ್ಲ" "ಗಾಂಧೀಜಿ, ಯೋಗಃ ಕರ್ಮ ಸುಕೌಶಲಂ" ಎನ್ನುವ ಸಿದ್ಧಾಂತವನ್ನು ಎಲ್ಲ ವಿಷಯಗಳಲ್ಲಿಯೂ ಪಾಲಿಸುತ್ತಿದ್ದರು.

**ಕೆ.ಸಂಪದ್ಗಿರಿರಾವ್**

* * *

## ೮. ರಾಮಚಂದ್ರ ವಡವಿ ಅವರ ನೆನಹುಗಳು

**ನೀವು ಓಡಿಬಂದವರು**

ಸಾಬರಮತಿ ನದಿಯ ದಂಡೆಯ ಮೇಲೆ ಕಟ್ಟಲಾಗಿರುವ ಆಶ್ರಮವು ಪಟ್ಟಣದ ಯಾವ ಸದ್ದುಗದ್ದಲವೂ ಇಲ್ಲದೆಯೆ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವಂತಿತ್ತು. ಚಿಕ್ಕವಾದರೂ ಚೊಕ್ಕಟವಾದ ಚಿಕ್ಕ ಚಿಕ್ಕ ಹೆಂಚಿನ ಮನೆಗಳು. ಎಲ್ಲವೂ ಅಚ್ಚುಕಟ್ಟಾಗಿಯೂ, ಸ್ವಚ್ಛವಾಗಿಯೂ, ಇರುತ್ತಿತ್ತು. ಶುಭ್ರ ಖಾದಿಧಾರಿಗಳಾಗಿದ್ದ ಅಲ್ಲಿನವರೆಲ್ಲ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರು.

ಗಾಂಧೀಜಿಯವರು ನನ್ನ ಹೆಸರು ವಿಚಾರಿಸಿದಾಗ ನಾನು ಆರ್.ವಿ.ವಡವಿ ಎಂದು ಹೇಳಿದೆ. "ಯೆ ಠೀಕ ನಹೀ ಹೈ ತುಮಾರಾ ಪೂರಾ ನಾಮ್ ಕಹೋ" ಎಂದರವರು. ರಾಮಚಂದ್ರ ವೆಂಕಟೇಶ ವಡವಿ ಎಂದು ನಾನು ಹೇಳಿದಾಗ, 'ರಾಮಚಂದ್ರ ನಾಮ ಠೀಕ ಹೈ' ಎಂದು ಹೇಳಿದರು. ಅಂದಿನಿಂದ ಎಲ್ಲರೂ ನನ್ನನ್ನು ರಾಮಚಂದ್ರ ಎಂದೇ

ಕರೆಯತೊಡಗಿದರು. ಅಲ್ಲದೆ ಇಂದಿಗೂ ನಾನು 'ರಾವ್' ಅಥವಾ "ಆಚಾರ್ಯ" ಎಂಬ ಯಾವದೇ ಬಹುಮಾನವಾಚಕರನ್ನು ಅದಕ್ಕೆ ಜೋಡಿಸದೆಯೇ ಅದನ್ನೇ ಉಪಯೋಗಿಸುತ್ತ ಬಂದಿರುವೆ. ಆಗ ನನ್ನ ಜೊತೆಗೆ ಇನ್ನಿಬ್ಬರಿದ್ದರು. ಅವರೆಂದರೆ ಹನುಮಂತ ಜೋಶಿ ಮತ್ತು ನರಸಿಂಹ ದೇಸಾಯ ಕುಲಕರ್ಣಿ ಎಂಬವರು. ನಾವು ಕರ್ನಾಟಕದವರೆಂದು ತಿಳಿದು ಗಾಂಧೀಜಿ ನಮ್ಮನ್ನು ಕಾಕಾಸಾಹೇಬ ಕಾಲೇಲ್ಕರರೆಡೆಗೆ ಕಳುಹಿಸಿದರು.

ನಮ್ಮ ಶಿಕ್ಷಣ ಮುಂದುವರಿಸುವುದಕ್ಕಾಗಿ ನಾವು ಅವರ ಸಹಾಯ ಯಾಚಿಸಿದಾಗ ಅವರು 'ನೀವು ಓಡಿ ಬಂದವರು. ನಿಮ್ಮ ಸ್ವಭಾವ ನಮಗೆ ಗೊತ್ತಿಲ್ಲ. ನಾಲ್ಕಾರು ತಿಂಗಳು ನಿಮ್ಮ ಕಾಲ ಮೇಲೆಯೇ ನೀವು ನಿಂತಿರಾದರೆ ನಿಮ್ಮ ಸ್ವಭಾವ ನೋಡಿಕೊಂಡು ನಿಮಗೆ ಸಹಾಯ ಮಾಡುವೆವು' ಎಂದುತ್ತರಿಸಿದರು.

**ಭಂಗಿಯ ಕೆಲಸಕ್ಕೆ ಭಾಷೆ ಏಕೆ?**

"ನಮಗೆ ಇಲ್ಲಿಯ ಭಾಷೆ ಗೊತ್ತಿಲ್ಲ. ನೀವೇ ಯಾವುದಾದರೂ ಕೆಲಸ ಕೊಡಿರಿ ಮಾಡುವೆವು."

"ಕೆಲಸ ಮಾಡುವುದಕ್ಕೆ ಭಾಷೆ ಏಕೆ ಬೇಕು? ರೇಲ್ವೆ ಸ್ಟೇಶನ್ನಿಗೆ ಹೋದರೆ ಅಲ್ಲಿ ಹಮಾಲಿ ಸಿಗುತ್ತದೆ. ಮುನಸಿಪಾಲ್ಟಿಯಲ್ಲಿ ಹೋಗಿ ಭಂಗಿ ಕೆಲಸ ಕೇಳಿದರೆ ಕೊಡುತ್ತಾರಲ್ಲ; ಅದಕ್ಕೇನೂ ಭಾಷೆ ಬೇಕಾಗಿಲ್ಲ."

ಅವರೊಮ್ಮೆ ಈ ರೀತಿ ನುಡಿದಾಗ ನಾವು ಅವಾಕ್ಕಾದೆವು. ಅಲ್ಲಿಂದಿಲ್ಲಿಯವರೆಗೆ ರಾಷ್ಟ್ರಸೇವೆಗೆಂದು ಎಲ್ಲವನ್ನೂ ತೊರೆದು ಬಂದ ನಮ್ಮಂಥವರಿಗೆ ಇವರು ಭಂಗಿ ಕೆಲಸ ಹೇಳುತ್ತಾರಲ್ಲಾ ಎಂದು ಕಾಕಾ ಅವರ ಬಗೆಗೆ ತುಸು ತಿರಸ್ಕಾರವೂ ಉಂಟಾಯಿತು.

ಮುಂದೆ ಕೆಲ ಕ್ಷಣಗಳ ನಂತರ ಅವರೇ ಒಂದು ಚೀಟಿ ಬರೆದು ನಮ್ಮ ಕೈಗಿಡುತ್ತ - ನವಜೀವನ ಮುದ್ರಣಾಲಯಕ್ಕೆ ಹೋಗಿ ಅಲ್ಲಿರುವ ಸ್ವಾಮಿ ಆನಂದ ಎಂಬುವರಿಗೆ ಅದನ್ನು ಕೊಟ್ಟರೆ ಅವರೇನಾದರೂ ಕೆಲಸ ಕೊಡಬಹುದೆಂದು ಹೇಳಿದರು.

ನಾವು ಚೀಟಿ ತೆಗೆದುಕೊಂಡು ಅಲ್ಲಿಂದ ಹೊರಬಿದ್ದಾಗ ಸಂಜೆ ಆರು ಗಂಟೆಯ ಸಮಯವಾಗಿರಬಹುದು. ಧಾರವಾಡ ಬಿಟ್ಟಾಗಿನಿಂದ ಊಟವನ್ನೇ ಕಂಡಿರದಿದ್ದ ನಮಗೆ ಅದನ್ನೆಂದಾದರೂ ಕಂಡೇವೋ ಇಲ್ಲವೋ ಎಂದೆನಿಸಿ ಹೋಗಿತ್ತು. ಸಾಬರಮತಿ ಸೇತುವೆಯನ್ನು ದಾಟಿ ಬಂದು ಮತ್ತೆ ನಾಲ್ಕಾಣೆಯ ಚುರಮುರಿಕೊಂಡು ಕೊಂಡು ಹತ್ತಿರದ ಉದ್ಯಾನದಲ್ಲಿ ಕುಳಿತುಕೊಂಡೆವು. ಒಂದು ವಿಧದ ನಿರಾಸೆಯ ಛಾಯೆ ನಮ್ಮನ್ನಾವರಿಸಿತ್ತು. ಆದರೂ ಕಾಕಾಸಾಹೇಬರು ನಮಗಿತ್ತ ಚೀಟಿಯಲ್ಲಿ ಬರೆದಾದ್ದಾದರೂ ಏನು ಎಂದು ನೋಡಬೇಕೆನಿಸಿದ್ದರಿಂದ ಅದನ್ನು ಬಿಡಿಸಿ ನೋಡಿದರೆ ಅದು ಮರಾಠಿಯಲ್ಲಿತ್ತು. ನಮ್ಮಲ್ಲಿ ದೇಸಾಯಿ ಕುಲಕರ್ಣಿಗೆ ತುಸುಮಟ್ಟಿಗೆ ಮರಾಠಿ ಅರ್ಥ

ವಾಗುತ್ತಿತ್ತು. "ಈ ಹುಡುಗರು ಓಡಿ ಬಂದಿದ್ದಾರೆ. ಇವರಿಗೆ ಯಾವುದಾದರೂ ಬಿನ್ ಜವಾಬ್ದಾರಿ ಕೆಲಸವಿದ್ದರೆ ಕೊಡಿರಿ" ಎಂದು ಬರೆದಿತ್ತು. ಅದನ್ನು ಓದಿದಾಗ ನಮಗೆ ನಮ್ಮ ಭವಿಷ್ಯ ಶೂನ್ಯವಾಗಿಯೇ ತೋರತೊಡಗಿತು. ನಾವು ಓಡಿ ಬಂದವರೆಂದು ಬರೆದಿರುವರೆಂದಾಗ ಸ್ವಾಮಿ ಆನಂದರು ನಮಗೆ ಕೆಲಸ ಕೊಡಲಾರರೆಂದೇ ಅನಿಸಿತು. ಅಂದು ರಾತ್ರಿ ಊಟ, ವಸತಿಯ ಸಮಸ್ಯೆ ನಮ್ಮನ್ನು ಕಾಡತೊಡಗಿ ಮುಂದುಗಾಣದಾದೆವು.

ದೇವರ ಮೇಲೆಯೇ ಭಾರ ಹಾಕಿ, ನಾವು ಕುಳಿತಿದ್ದಂತೆಯೇ ಅಲ್ಲಿಯೇ ಹಾಯ್ದು ಹೊರಟಿದ್ದ ವ್ಯಕ್ತಿಯೊಬ್ಬರು ನಮ್ಮ ವೇಷಭೂಷಣ ನೋಡಿ ನಮ್ಮೆಡೆ ಒಂದು "ತುಮಿ ಕುಠಲೆ" (ನೀವೆಲ್ಲಿಂದ ಬಂದಿರಿ?) ಎಂದು ಮರಾಠಿಯಲ್ಲಿ ಕೇಳಿದರು.

ನಮಗೆ ಮರಾಠಿ ಬರುವುದಿಲ್ಲವೆಂದು ನಾವು ಇಂಗ್ಲೀಷಿನಲ್ಲಿ ಹೇಳುವಷ್ಟರಲ್ಲೇ, "ಕನ್ನಡ ಬರುತ್ತದೆಯೇ?" ಎಂದವರು ಕೇಳಿದಾಗ, ನಮ್ಮ ಮೊರೆ ಕೇಳಿ ದೇವರೇ ನಮಗೆ ಪ್ರತ್ಯಕ್ಷನಾದನೇನೋ ಎನಿಸಿಬಿಟ್ಟಿತು. ಮಾತು ಮುಂದುವರಿದಂತೆ ಆ ವ್ಯಕ್ತಿ ನಮ್ಮ ಪರಿಚಿತ, ರಾಣೆಬೆನ್ನೂರು ನಾಯಕರ ಮನೆತನದ ಕೃಷ್ಣ. ಅವರು ಧಾರವಾಡದಲ್ಲಿ ನಾವಿದ್ದ ಶುಕ್ರವಾರಪೇಟೆಯಲ್ಲೇ ಇದ್ದರು. ಎರಡು ವರುಷಗಳ ಹಿಂದೆ ಧಾರವಾಡದಿಂದ ಅಹಮದಾಬಾದಿಗೆ ಬಂದು ತಮ್ಮ ಸೋದರಮಾವನ ಬಳಿ ಇದ್ದರು.

ಅವರೊಂದಿಗೆ ಅವರ ಮನೆಗೆ ಹೋದೆವು. ಆದರೆ ಅಲ್ಲಿ ಅವರ ಸೋದರ ಮಾವನ ಹೆಂಡತಿಗೆ ಕಾಯಿಲೆಯಾದ್ದರಿಂದ ಗುಜರಾತಿ ಹೋಟೆಲೊಂದಕ್ಕೆ ನಮ್ಮನ್ನವರು ಊಟಕ್ಕೆ ಕರೆದೊಯ್ದರು. ಎರಡು ದಿನಗಳಿಂದ ಊಟ ಮಾಡಿರಲಿಲ್ಲ. ಇಲ್ಲಿಯ ಊಟವೂ ಚೆನ್ನಾಗಿತ್ತು. ಊಟವಾದ ನಂತರ ಕೈಗೆ ಬಂದ ಬಿಲ್ಲು ನೋಡಿ ಬೆರಗಾದೆವು. ಮೂರು ರೂಪಾಯಿ; ನಮ್ಮಲ್ಲುಳಿದಿದ್ದ ಆ ಹಣವನ್ನೆಲ್ಲ (ಇದ್ದದ್ದೂ ಮೂರೇ ರೂಪಾಯಿ) ಹೋಟೆಲಿನವನ ಕೈಗೆ ಹಾಕಿ ಅಕ್ಷರಶಃ ಬರಿಗೈಯಿಂದ ಮನೆಗೆ ಬಂದೆವು.

ಆ ರಾತ್ರಿ ನಮಗೆ ಯಾರಿಗೂ ನಿದ್ರೆಯೇ ಬರಲಿಲ್ಲ. ಮುಂದೇನು? ಎಂಬುದು ಕ್ಷಣಕ್ಷಣಕ್ಕೂ ಬೃಹದ್ಗಾತ್ರವನ್ನೇ ತಳೆಯುತೊಡಗಿತ್ತು. ಹಾಗೆಯೇ ಊರಿಗೆ ಮರಳಿ ಹೋಗುವುದಕ್ಕೆ ಅಭಿಮಾನ ಅಡ್ಡಬಂದರೆ, ಅಲ್ಲಿಯೇ ಉಳಿಯುವುದು ಹೇಗೆ ಎಂಬುದೇ ತೋಚದಾಗಿತ್ತು. ಕೊನೆಗೆ ಕಾಕಾಸಾಹೇಬ ಕಾಲೇಲ್ಕರರ ಪತ್ರದೊಂದಿಗೆ ಸ್ವಾಮಿ ಆನಂದರನ್ನು ಕಾಣುವದೆಂಬ ನಿರ್ಧಾರಕ್ಕೆ ನಾನು ಬಂದೆ.

**ದೇವರ ದಯೆ:**

ಮರುದಿನ ಮುಂಜಾನೆ ಈ ನಮ್ಮ ಮಿತ್ರರಿಂದಲೇ ತುಸು ಹಣ ಪಡೆದುಕೊಂಡು ದೇಸಾಯಿ ಕುಲಕರ್ಣಿಯು, ನಾವೆಲ್ಲ ಅಹಮದಾಬಾದಿಗೆ ಬಂದಿರುವ ವಿಷಯ ತಿಳಿಸಿ ತಿರುಗಿ ಬರಲು ಹಣ ಕಳಿಸಿರೆಂದು ತಮ್ಮ ಮನೆಗೆ ತಂತಿ ಕಳಿಸಿದರು. ಅನಂತರ ನಾವು ನವಜೀವನ ಮುದ್ರಣಾಲಯಕ್ಕೆ ಬಂದು ಸ್ವಾಮಿ ಆನಂದರನ್ನೂ ಕಂಡೆವು.

ಸ್ವಾಮಿ ಆನಂದರು ಕೆಂಪು ವರ್ಣದ, ಕಿರು ನಿಲುವಿನ ತೆಳ್ಳನೆಯ ಆಳು. ಮುಖದ ಮೇಲೆ ಉಕ್ಕುವ ತೇಜಸ್ಸು. ವಯಸ್ಸು ಸುಮಾರು ೪೫ ಆಗಿರಬಹುದು. ಕಾಕಾಸಾಹೇಬರ ಪತ್ರವನ್ನೋದಿದ ನಂತರ ಅವರು "ನಿನ್ನೆಯೇ ಏಕೆ ಬರಲಿಲ್ಲ?" ಎಂದು ಕೇಳಿದರು.

ನಮ್ಮ ಮಿತ್ರರು ಭೆಟ್ಟಿಯಾದುದರಿಂದ ಅದು ಸಾಧ್ಯವಾಗಲಿಲ್ಲವೆಂದುತ್ತರಿಸಿದೆವು.

ನಮ್ಮೊಂದಿಗೆ ಸುಮಾರು ಅರ್ಧಗಂಟೆ ಕಾಲ ಮಾತಾಡಿದ ಅವರು ನಮಗೆ ಸಾಕಷ್ಟು ಪ್ರೋತ್ಸಾಹವಿತ್ತರಲ್ಲದೆ ಲೋಕಮಾನ್ಯ ತಿಲಕರಾರಂಭಿಸಿದ ಆಂದೋಲನದಿಂದ ಪ್ರಭಾವಿತರಾದ ತಾವು ಸಹ ತಮ್ಮ ಎಳೆ ವಯಸ್ಸಿನಲ್ಲೇ ಮನೆ ಬಿಟ್ಟು ಕಲಕತ್ತೆಗೆ ಓಡಿಹೋದುದನ್ನು ಒಳ್ಳೆಯ ಸ್ವಾರಸ್ಯವಾಗಿ ಹೇಳಿದರು. ಅಲ್ಲದೆ, ನಮಗೆ ಕೆಲಸ ಕೊಡುವುದಾಗಿಯೂ. ಶಿಕ್ಷಣಕ್ಕೆ ಅವಕಾಶ ಮಾಡಿಕೊಡುವುದಾಗಿಯೂ ಅವರು ಹೇಳಿದ್ದರಿಂದ ಕಳೆದು ಹೋಗಿದ್ದ ಧೈರ್ಯ ಮರಳಿ ಬಂದಂತಾಯಿತು. ಏನೇ ಕಷ್ಟ ಬಂದರೂ ಅಲ್ಲಿದ್ದೇ ತೀರುವುದೆಂದು ನಾನಾಗಲೇ ನಿರ್ಧರಿಸಿದ್ದೆನು.

ಸ್ವಾಮಿ ಯಾರನ್ನೋ ಕರೆದು ನಮ್ಮಿಬ್ಬರಿಗೂ ಗುಜರಾತಿ "ನವಜೀವನ"ದ ೨೫-೨೫ ಪ್ರತಿಗಳನ್ನು ಕೊಡಲು ಹೇಳಿದರು. ಅದು ಅಂದೇ ಪ್ರಕಟವಾಗಿತ್ತು. "ಇದೋ ಇವು ಗುಜರಾತಿ ನವಜೀವನ. ರಸ್ತೆಯಲ್ಲಿ ಕೂಗುತ್ತ ಹೋಗಿ ನೀವಿವನ್ನು ಮಾರಾಟ ಮಾಡಿಕೊಂಡು ಬರಬೇಕು" ಎಂದು ವಿಧಿಸಿದರು. "ನವಜೀವನ" ಎಂದು ಕೂಗಿರಿ. ಯಾರಾದರೂ ಕೇಳಿದರೆ ಐದು ಬಿಲ್ಲೆಗೊಂದರಂತೆ ಕೊಡಿರಿ. ತಿರುಗಿ ಬರಲು ರಸ್ತೆ ಗೊತ್ತಾಗದಿದ್ದರೆ "ತೀನ ದರವಾಜಾ ಎಲ್ಲಿ?" ಎಂದು ಕೇಳಿದರೆ ಯಾರಾದರೂ ತೋರಿಸುವರು. ಅಲ್ಲಿಗೆ ಬಂದರೆ ನವಜೀವನ ಮುದ್ರಣಾಲಯ ನಿಮಗೆ ಕಂಡೆ ಕಾಣುವುದು" ಎಂದೂ ಹೇಳಿದರು.

ಬೀದಿಯಲ್ಲಿ ಪತ್ರಿಕೆ ಮಾರುತ್ತ ರಸ್ತೆಗಳಲ್ಲಿ ತಿರುಗುವುದು ಕೀಳೂ ಎಂಬ ಭಾವನೆ ಅರೆನಿಮಿಷ ಸುಳಿದು ಹೋಯಿತಾದರೂ ಇಷ್ಟಕ್ಕೇ ಹಿಂಜರಿದರೆ ಮುಂದೆ ನಾವೆಂಥ ರಾಷ್ಟ್ರಸೇವೆ ಮಾಡಬಹುದು ಎಂದುಕೊಂಡು ಕೆಲಸಕ್ಕಣಿಯಾದೆವು. ಹಿಂದೆ ಶಾಂತೇಶ ವಾಚನಾಲಯಕ್ಕಾಗಿ ಮನೆಮನೆಗೆ ವೃತ್ತಪತ್ರಿಕೆ ಹಂಚಿದ್ದು ನೆನಪಿಗೆ ಬಂತು. ಅಲ್ಲದೆ ದತ್ತಾತ್ರೆಯ ಗುಡಿಯ ಹತ್ತಿರ ನಿಂತು ರಾಜಾಚಾರ್ಯರೆಂಬುವರು "ರಾಜಹಂಸ" ಪತ್ರಿಕೆಯ ಶೀರ್ಷಿಕೆಗಳನ್ನು ಕೂಗುತ್ತ ಮಾರುತ್ತಿದ್ದುದೂ ನೆನಪಾಯಿತು. ಅಲ್ಲದೆ ಈ ಅಪರಿಚಿತ ಊರಿನಲ್ಲಿ ನಾಚುವ ಪ್ರಶ್ನೆಯೂ ಇರಲಿಲ್ಲ.

"ನವಜೀವನ" ಎಂದು ಕೂಗುತ್ತ ನಾನು ಬೀದಿಯಲ್ಲಿ ನಡೆಸಿದ್ದಂತೆಯೇ ಜನ ತಾವಾಗಿಯೇ ನನ್ನ ಕೈಗೆ ಐದು ಬಿಲ್ಲೆ ಹಾಕಿ ಪ್ರತಿ ಪಡೆದುಕೊಳ್ಳುತ್ತಿದ್ದರು. ಆ ಕಾಲದಲ್ಲಿ "ನವಜೀವನ" ಹಾಗೂ "ಯಂಗ್ ಇಂಡಿಯಾ"ಗಳ ಪ್ರಭಾವ ಅಷ್ಟೊಂದಿತ್ತು.

"ನವಜೀವನ"ದ ಪ್ರತಿಗಳನ್ನೆಲ್ಲ ಮಾರಿ ಮುದ್ರಣಾಲಯಕ್ಕೆ ಮರಳುವ ಹೊತ್ತಿಗೆ

ಮಧ್ಯಾಹ್ನ ೧೨ ಗಂಟೆಯಾಗಿತ್ತು. ಮುಂದೆ ತುಸು ಹೊತ್ತಿಗೆ ಜೋಶಿಯೂ ಬಂದನು. ಪತ್ರಿಕೆ ಮಾರಿ ಬಂದ ಹಣವನ್ನೆಲ್ಲ ಇಬ್ಬರೂ ಸ್ವಾಮಿ ಆನಂದರ ಕೈಗಿತ್ತನಂತರ ಅವರು ನಾಲ್ಕು ನಾಲ್ಕಾಣೆಗಳನ್ನು ಇತ್ತು ಊಟ ಮಾಡಿ ಬರಲು ಹೇಳಿದರು.

ನಾಲ್ಕಾಣೆಯಲ್ಲಿ ಹೇಗೆ ಊಟ ಮಾಡಬೇಕೆಂಬುದೇ ತಿಳಿಯದಾಯಿತು. ಚುರುಮರಿ, ಸೇಂಗಾ ಮುಂತಾದುವನ್ನೇ ತಿಂದು ಎರಡು ಗಂಟೆಗೆ ಮರಳಿದೆವು.

ನಮಗೆ ಗುಜರಾತಿ ಬಾರದ್ದರಿಂದ 'ಯಂಗ್ ಇಂಡಿಯಾ'ದ ಇಂಗ್ಲೀಷ್ ಕಂಪೋಜಿಂಗನ್ನೇ ಕಲಿಸಲಾಯಿತು. ಸಂಜೆಯ ೬ ಗಂಟೆಯವರೆಗೆ ಅದನ್ನೇ ನಾವು ರೂಢಿ ಮಾಡಿಕೊಂಡೆವು.

ಆ ಸುಮಾರಿಗೆ ಸ್ವಾಮಿಜೀ ಮತ್ತೆ ನಾಲ್ಕು ನಾಲ್ಕಾಣೆ ಕೊಟ್ಟು ಊಟಮಾಡಿಕೊಂಡು ಬರಲು ಹೇಳಿದರು. ಮತ್ತೆ ಅದೇ ದಿಗಿಲು. ನಾಲ್ಕಾಣೆಯಲ್ಲಿ ಊಟ ಹೇಗೆ ಮಾಡಬೇಕು? ಅದಕ್ಕಿಂತ ಹೆಚ್ಚಿನ ಬಿಡಿಗಾಸೂ ನಮ್ಮಲ್ಲಿಳಿದಿರಲಿಲ್ಲ. ಆದರೂ ಏನೇ ಬಂದರೂ ಯಾರಿಗೂ ಹೇಳದೆಯೇ ಸಹಿಸಬೇಕೆಂಬ ಮನೋನಿರ್ಧಾರದಿಂದ ಮತ್ತೇನನ್ನೋ ತಿಂದು ೮ ಗಂಟೆಯ ಸುಮಾರಿಗೆ ಮರಳಿದೆವು.

ಎರಡು ದಿನಗಳ ಪ್ರವಾಸ ಹಾಗೂ ದಿನವಿಡೀ ದುಡಿತದಿಂದಾಗಿ ಇಬ್ಬರಿಗೂ ತೀರಾ ಆಯಾಸವಾಗಿತ್ತು. ಕೂಡಲೇ ಮಲಗಿಬಿಡಬೇಕೆಂದು ನಾವು ಬಂದರೆ ಸ್ವಾಮೀಜಿ "ಚಲೋ ರಾಮಚಂದ್ರ" ಎಂದರು. ಎಲ್ಲಿಗೆ ಎಂದು ಕೇಳವಷ್ಟೂ ಅವಕಾಶವಿರಲಿಲ್ಲ. ಮುದ್ರಣ ಕಾರ್ಯ ರಾತ್ರಿ ೮ ಗಂಟೆಗೆ ಪ್ರಾರಂಭವಾಗಿ ಕೆಳ ತನಕ ನಡೆಯುತ್ತಿತ್ತು. ಅಚ್ಚಾಗಿ ಬಂದ ಪತ್ರಿಕೆಗಳನ್ನು ಸರಿಯಾಗಿ ಜೋಡಿಸುವ ಕೆಲಸವನ್ನು ನನಗೆ ಹೇಳಿದರು. ಇದನ್ನು ಆ ಯಂತ್ರದ ಎತ್ತರದ ಮಂಚಿಕೆಯ ಮೇಲೆ ಕುಳಿತುಕೊಂಡು ಮಾಡಬೇಕಾಗಿತ್ತು. ನನ್ನನ್ನು ಆ ಕೆಲಸಕ್ಕೆ ಹಚ್ಚಿ ಜೋಶಿಗೆ ಮಲಗಲು ಹೇಳಿದರು.

ರಾತ್ರಿ ಸರಿದಂತೆ ನಿದ್ರೆಯ ಗುಂಗೂ ಹೆಚ್ಚತೊಡಗಿತು. ನನಗೆ ಇಷ್ಟೊಂದು ದುಡಿದೂ ಗೊತ್ತಿರಲಿಲ್ಲ. ನಿದ್ರೆ ಕಟ್ಟಿ ರೂಢಿಯೂ ಇರಲಿಲ್ಲ. ಆದರೂ ಮನಸ್ಸು ಗಟ್ಟಿ ಮಾಡಿ ರಾತ್ರಿ ೧೨ ಗಂಟೆಯವರೆಗೆ ಹಾಗೂ ಹೀಗೂ ಕೆಲಸ ಮಾಡಿದೆ. ಮುಂದೆ ಮಾತ್ರ ನಿದ್ರೆಯ ಆ ನೈಸರ್ಗಿಕ ಶಕ್ತಿ ನನ್ನನ್ನು ಆವರಿಸಿರಬೇಕು. ಕೆಳಗೆ ಬೀಳುವಷ್ಟರಲ್ಲಿಯೇ ಪ್ರೆಸ್‌ಮನ್ ಬಂದು ನನ್ನನ್ನು ಹಿಡಿದ.

ಆಗ ಸ್ವಾಮೀಜಿ ಬಂದು, "ರಾಮಚಂದ್ರ, ಈಗ ನೀನು ಹೋಗಿ ಮಲಗು. ಜೋಶಿ ಯನ್ನು ಎಬ್ಬಿಸಿ ಕಳಿಸು" ಎಂದರು. ಬೆಳಗಿನ ನಾಲ್ಕು ಗಂಟೆಯವರೆಗೂ ಜೋಶಿ ಆ ಕೆಲಸ ಮಾಡಬೇಕಾಯಿತು.

**ನಾನು ಏಕಾಕಿಯಾದೆ:**

ಮರುದಿನ ಬೆಳಗಿನ ಆರು ಗಂಟೆಯ ಸುಮಾರಿಗೆ ಯಾರೋ ನಮ್ಮನ್ನೆಬ್ಬಿಸಿದಾಗ

ನಾವಿನ್ನೂ ಗಾಢ ನಿದ್ರೆಯಲ್ಲಿದ್ದೆವು. ಧಾರವಾಡದಲ್ಲಿಯ ನಮ್ಮ ನಮ್ಮ ಮನೆಯಲ್ಲೇ ನಾವಿರುವುದು ಎಂದು ನಮ್ಮ ಭಾವನೆ ಆಗಿತ್ತು ಆ ಕ್ಷಣಕ್ಕೆ. ಆದರೆ ಕಣ್ಣುಜ್ಜಿಕೊಂಡು ನೋಡಿದಾಗಲೇ ವಸ್ತು ಸ್ಥಿತಿಯ ಅರಿವು ನಮಗೆ ಉಂಟಾಯಿತು. ನಾವಿದ್ದುದು ಅಹಮದಾಬಾದಿನ ನವಜೀವನ ಮುದ್ರಣಾಲಯದಲ್ಲಿ.

ಅಂದು ಸಹ ನಮ್ಮಿಬ್ಬರಿಗೂ ಪತ್ರಿಕೆಗಳ ಒಂದೊಂದು ಗಂಟನ್ನು ಕೊಡಲಾಯಿತು. ಈ ಸಲ 'ಯಂಗ ಇಂಡಿಯಾ' ಗಾಂಧೀಜಿಯವರ ಈ ವಾರಪತ್ರಿಕೆಗಳೆರಡೂ ಮೂರು ಮೂರು ದಿನದ ಅಂತರದಲ್ಲಿ ಹೊರಡುತ್ತಿದ್ದವು. ಅಂತೆಯೆ ವಾರಪಿಡಿ ನಮಗೆ ಮಾರಾಟದ ಕೆಲಸ ಇದ್ದೇ ಇರುತ್ತಿದ್ದವು. ಮುಂಜಾನೆ ಪತ್ರಿಕೆಗಳನ್ನು ಮಾರಿಕೊಂಡು ಬರುವುದಾದರೆ ಮಧ್ಯಾಹ್ನ ಕಂಪೋಜಿಂಗ್ ಹಾಗೂ ರಾತ್ರಿ ಪತ್ರಿಕೆಗಳನ್ನು ಜೋಡಿಸುವದು ಇದು ನಮ್ಮ ನಿತ್ಯ ಕಾರ್ಯಕ್ರಮವೇ ಆಯಿತು.

ನಾನು ಮತ್ತು ಜೋಶಿ ಇಬ್ಬರೂ ಎಂದೂ ಈ ರೀತಿ ಮೈಮುರಿದು ದುಡಿದವರಲ್ಲ. ಆದರೆ ಎಷ್ಟೇ ಕಷ್ಟ ಬಂದರೂ ಸಹಿಸತಕ್ಕದೆಂಬ ನಿರ್ಧಾರದಿಂದ ನಾವಿದ್ದುದರಿಂದ ಅದರಲ್ಲಿಯೇ ಒಂದು ಬಗೆಯ ಸಮಾಧಾನ ದೊರೆಯುತ್ತಿತ್ತು.

ನನ್ನನ್ನು ಕರೆತರಲು ಅಹಮದಾಬಾದಿನವರೆಗೆ ಬರುವಂತಹರಾರೂ ನಮ್ಮ ಮನೆಯಲ್ಲಿರಲಿಲ್ಲ, ಹಾಗೂ ನಮ್ಮ ಆರ್ಥಿಕ ಪರಿಸ್ಥಿತಿಯೂ ಅದಕ್ಕನುವಾಗುವಂತಿರಲಿಲ್ಲ. ಜೋಶಿಯ ಮನೆಯ ಪರಿಸ್ಥಿತಿ ನಮಗಿಂತ ತುಸು ಉತ್ತಮವಾಗಿತ್ತು. ಅಲ್ಲದೆ ಅವನ ಸೋದರ ಮಾವ ಶ್ರೀ ವೇದವ್ಯಾಸ ಏರಿ ಎಂಬವರು ಅಹಮದಾಬಾದಿನವರೆಗೆ ಹೋಗಿ ಬರಲು ಸಿದ್ಧರಾದರು. ಅಂತೆಯೆ, ನಮ್ಮಿಬ್ಬರ ಮನೆಯವರೂ ನಮ್ಮನ್ನು ಮರಳಿ ಮನೆಗೆ ಕರೆತರಲು ಅವರನ್ನೇ ಕಳಿಸಿದರು.

ಶ್ರೀ ಏರಿಯವರು ನಿಮ್ಮಿಬ್ಬರನ್ನೂ ಹತ್ತಿರದ ಉಪವನವೊಂದಕ್ಕೆ ಕರೆದೊಯ್ದು ಧಾರವಾಡಕ್ಕೆ ಬರುವಂತೆ ನಮ್ಮ ಮನ ಒಲಿಸಲು ಪ್ರಯತ್ನಿಸಿದರು. ಮೊದಮೊದಲು ನಾವಿಬ್ಬರೂ ಸೋಲಲಿಲ್ಲವಾದರೂ ಕೊನೆಗೆ, ಜೋಶಿ ಮನಸ್ಸು ಬದಲಾಯಿಸಿದ. ಅಂತೆಯೆ. ಸ್ವಾಮಿಜಿ ಹೋಗಲು ಅವನಿಗೆ ಅನುಮತಿ ಇತ್ತರು.

ನಾನು ಮರಳಿ ಬಾರದ್ದನ್ನು ಕಂಡು ನಮ್ಮ ಮನೆಯವರಿಗೆ. ವಿಶೇಷತಃ ನನ್ನ ವೃದ್ಧ ತಾಯಿಗೆ ತುಂಬ ದುಃಖವಾಗಿರುವುದು ಸಹಜ.

ಹತ್ತು ಹನ್ನೆರಡು ದಿನ ನಾವಿಬ್ಬರೂ ಕೂಡಿಯೇ ಇದ್ದೆವಾದ್ದರಿಂದ ಜೋಶಿ-ಹೊರಟು ಹೋದನಂತರ ಏಕಾಕಿತನ ನನ್ನನ್ನೇ ಅಣುಕಿಸುತ್ತಿದೆಯೇನೋ ಎಂದು ಭಾಸವಾಗ ತೊಡಗಿತು. ಎಂಟು–ಹತ್ತು ದಿನ ಮನಸ್ಸಿಗೆ ಹಳಹಳಿಯೆನಿಸತಲ್ಲದೆ ಕೆಲ ಸಲ ರಾತ್ರಿ ಭಯವೂ ಆಗುತ್ತಿತ್ತು. ಉಳಿದ ದಿನಗಳು ಕೆಲಸದಲ್ಲಿ ಹೇಗೋ ಕಳೆದು ಹೋಗುತ್ತಿದ್ದವಾದರೆ ರವಿವಾರ ಮಾತ್ರ ತೀರ ಬೇಸರ ಬಂದುಬಿಡುತ್ತಿತ್ತು. ಅಂದು ಬೆಳಿಗ್ಗೆ ಪತ್ರಿಕೆಗಳನ್ನು

ಮಾರಿ ಬಂದನಂತರ ಇಡೀ ಮುದ್ರಣಾಲಯದಲ್ಲಿ ನಾನೊಬ್ಬನೇ ಆಗಿಬಿಡುತ್ತಿದ್ದೆ. ಎಲ್ಲಿಗೂ ಹೋಗುತ್ತಿರಲಿಲ್ಲ. ಯಾರ ಗುರುತೂ ಇರಲಿಲ್ಲ. ಸಾಯಂಕಾಲ ಆಶ್ರಮಕ್ಕೆ ಹೋಗಿ ಬರುತ್ತಿದ್ದೆ. ತಲೆಯಲ್ಲಿ ನೂರೆಂಟು ವಿಚಾರಗಳು ಬಂದು ಹುಚ್ಚೆಬ್ಬಿಸಿಬಿಡುತ್ತಿದ್ದವು. ನನ್ನ ತಾಯಿಯ ನೆನಪು ಮೇಲಿಂದ ಮೇಲಾಗುತ್ತಿತ್ತು.

**ಮತ್ತೆ ಶಾಲೆ :**

ಜೋಶಿ ಅಹಮದಾಬಾದಿನಿಂದ ಹೋದ ನಂತರ ನಾಲ್ಕು ದಿನಗಳಲ್ಲಿಯೆ ಸ್ವಾಮೀಜಿ ಪ್ರೊಪ್ರಾಯಿಟರಿ ಹೈಸ್ಕೂಲಿನಲ್ಲಿ ನನ್ನ ಹೆಸರು ಹಚ್ಚಿದರು. ಅದು ಬಹು ದೊಡ್ಡ ಹೈಸ್ಕೂಲು; ಅಸಹಕಾರ ಆಂದೋಲನದಲ್ಲಿ ರಾಷ್ಟ್ರೀಯ ಶಾಲೆಯಾಗಿ ಮಾರ್ಪಟ್ಟಿತ್ತು. ಅಲ್ಲದೆ ನಮ್ಮ ಮುದ್ರಣಾಲಯದಿಂದಲೂ ಅದು ದೂರವಿರಲಿಲ್ಲ. ಗುಜರಾತಿಯೊಂದನ್ನುಳಿದು ಎಲ್ಲ ವಿಷಯಗಳನ್ನೂ ಇಂಗ್ಲೀಷಿನಲ್ಲೇ ಕಲಿಸುತ್ತಿದ್ದುದರಿಂದ ನನಗೆ ವಿಶೇಷ ತೊಂದರೆ ಯೆನಿಸಲಿಲ್ಲ. ನನ್ನನ್ನು ಏಳನೆಯ ವರ್ಗಕ್ಕೆ ಸೇರಿಸಲಾಗಿತ್ತು.

ಸಾಯಂಕಾಲ ಆರು ಗಂಟೆಗೆ ಶಾಲೆ ಬಿಟ್ಟನಂತರ ಮುದ್ರಣಾಲಯಕ್ಕೆ ಬಂದು ರಾತ್ರಿ ಹತ್ತು ಗಂಟೆಯವರೆಗೆ "ಯಂಗ್ ಇಂಡಿಯಾ"ದ ಇಂಗ್ಲೀಷ್ ಕಂಪೋಜಿಂಗ್ ಮಾಡುತ್ತಿದ್ದೆ. ಎರಡು ಮೂರು ತಿಂಗಳಲ್ಲಿಯೇ ಅದರಲ್ಲಿ ಸಾಕಷ್ಟು ಪರಿಣತಿಯೂ ಬಂತು; ನನ್ನ ಕೆಲಸದ ವೇಗವೂ ಬೆಳೆದು ಒಂದೊಂದು ದಿನ ೩-೪ ಕಾಲಮ್ಮಿನವರೆಗೂ ಕಂಪೋಜ್ ಮಾಡುತ್ತಿದ್ದೆ. ಈ ಕಾರಣಕ್ಕಾಗಿ ನಮ್ಮ ಫೋರ್‌ಮನ್ ಹಾಗೂ ಸ್ವಾಮೀಜಿ ಇಬ್ಬರೂ ನನ್ನನ್ನು ತುಂಬ ಪ್ರೀತಿಸುತ್ತಿದ್ದರು.

**ಊಟ ಸಿಕ್ಕಿತು:**

ನವಜೀವನ ಮುದ್ರಣಾಲಯದಲ್ಲಿ ಕೆಲಸವಾರಂಭವಾದಂದಿನಿಂದ ೧೫-೨೦ ದಿನಗಳ ವರೆಗೆ ದಿನಾಲು ಊಟಕ್ಕಾಗಿ ಎಂಟಾಣೆ ದೊರೆಯುತ್ತಿತ್ತು. ಅಷ್ಟೇ ಹಣದಲ್ಲಿ ಎರಡು ಹೊತ್ತು ಹೇಗೆ ಊಟ ಮಾಡಬೇಕೆಂಬುದು ತಿಳಿಯದೆಯೆ ನಾನು ಬೀದಿಯಲ್ಲಿ ಸಿಕ್ಕುವ ಚುರುಮರಿ ಸೇಂಗಾ ಮುಂತಾದನ್ನೇ ತಿಂದು ಮುಗಿಸುತ್ತಿದ್ದೆ. ಅದರ ಪರಿಣಾಮ ಆರೋಗ್ಯದ ಮೇಲಾಗಿ ಅಮಾಂಶ ಪ್ರಾರಂಭವಾಯಿತು. ಇದರಿಂದ ನನಗೆ ವಿಪರೀತ ಕಷ್ಟವಾಗತೊಡಗಿತಾದರೂ ಯಾರಿಗೆ, ಹೇಗೆ ಹೇಳಬೇಕೆಂಬುದು ತಿಳಿಯದಂತಾಗಿತ್ತು. ಕೊನೆಗೆ ಹೇಗೋ ಈ ವಿಷಯ ಸ್ವಾಮೀಜಿಯವರ ಕಿವಿಯನ್ನೂ ತಲುಪಿದಾಗ ಅವರು ನನ್ನನು ಕರೆದು, ನಾನು ಊಟ ಮಾಡುತ್ತಿದ್ದುದ್ದೇನೆಂದು ವಿಚಾರಿಸಿದರು. ನನ್ನಿಂದ ನಿಜ ಸಂಗತಿ ತಿಳಿಸಿದಾಗ, "ನಾಲ್ಕಾಣೆಗೆ ರೊಟ್ಟಿ ಪಲ್ಯೆ ಬರುತ್ತಿತ್ತು. ಅದನ್ನೇಕೆ ತೆಗೆದು ಕೊಳ್ಳಲಿಲ್ಲ?" ಎಂದು ನಕ್ಕು ನುಡಿದರು. ನನಗೆ ಅದು ಗೊತ್ತಿಲ್ಲವೆಂದಾಗ ಫೋರ್‌ಮನ್‌ನನ್ನು ಕರೆದು ನನಗೆ ಊಟಕ್ಕಾಗಿ ಖಾನಾವಳಿಯೊಂದನ್ನು ಗೊತ್ತು ಮಾಡಿಕೊಡಲು ಹೇಳಿದರು.

ಮುಂದೆ ಅಮಾಂಶದ ಬಗ್ಗೆ ಔಷಧೋಪಚಾರ ಆದುದರಿಂದ ಅದು ನಿಂತಿತು.

ಸ್ವಾಮಿಜಿ ಒಳ್ಳೆಯ ಲೆಕ್ಕಾಚಾರದ ವ್ಯಕ್ತಿ. ನನ್ನ ಗಳಿಕೆಯ ಹಾಗೂ ನನಗಾಗಿ ಮಾಡಿದ

ವೆಚ್ಚದ ಲೆಕ್ಕವನ್ನೆಲ್ಲ ನಾನಲ್ಲಿಗೆ ಬಂದಂದಿನಿಂದಲೂ ಇಟ್ಟಿದ್ದರೆಂಬುದು ನನಗೇ ಗೊತ್ತಿರಲಿಲ್ಲ. ನನಗೆ ಕಂಪೋಜಿಂಗ್ ಚೆನ್ನಾಗಿ ಬರತೊಡಗಿದಾಗ ನನ್ನನ್ನು ಕರೆದು ಈ ಲೆಕ್ಕದ ವಿವರಗಳನ್ನೆಲ್ಲ ನನಗೆ ಹೇಳಿದರಲ್ಲದೆ ಅಂದಿನಿಂದ ಕಂಪೋಜಿಂಗಿಗಾಗಿ ನನ್ನ ಸಂಬಳವನ್ನು ತಿಂಗಳಿಗೆ ೩೦ ರೂಪಾಯಿಗಳೆಂದು ಗೊತ್ತುಪಡಿಸಿರುವುದಾಗಿ ತಿಳಿಸಿದರು. ಅಷ್ಟರಲ್ಲಿಯೇ ನನ್ನ ವೆಚ್ಚಗಳನ್ನೆಲ್ಲ ನಾನು ತೂಗಿಸಿಕೊಳ್ಳುತ್ತಿದ್ದೆ. ಊಟಕ್ಕೆ ೧೫ ರೂಪಾಯಿಗಳಾದರೆ ಇತರ ವೆಚ್ಚ ೫ ರೂಪಾಯಿಗಳಷ್ಟಾಗುತ್ತಿತ್ತು... ಉಳಿದ ೧೦ ರೂಪಾಯಿಗಳನ್ನು ಬ್ಯಾಂಕಿನಲ್ಲಿಡುತ್ತಿದ್ದೆ.

ಕರ್ನಾಟಕದಿಂದ ಇಷ್ಟು ದೂರ ಬಂದುದಕ್ಕಾಗಿ ಪ್ರೊಪ್ರಾಯಿಟರಿ ಹೈಸ್ಕೂಲಿನಲ್ಲಿಯ ವಿದ್ಯಾರ್ಥಿಗಳಿಗೆ ನನ್ನ ವಿಷಯಕ್ಕೆ ತುಂಬ ಕೌತುಕ ಉಂಟಾಯಿತು. ಶ್ರೀಮಂತ ಮನೆತನದ ವಿದ್ಯಾರ್ಥಿಗಳನೇಕರು ನನ್ನನ್ನು ತಮ್ಮ ಮನೆಗಾಮಂತ್ರಿಸಿ ತಮ್ಮ ಹಿರಿಯರಿಗೆ ಪರಿಚಯ ಮಾಡಿಸಿಕೊಡುತ್ತಿದ್ದರು. ಅಮೃತಲಾಲ ಶಹಾ ಎಂಬುವನು ನನ್ನ ತೀರ ಸಲಿಗೆಯ ಮಿತ್ರನಾಗಿದ್ದನು. ಜೈನ ಬೋರ್ಡಿಂಗಿನಲ್ಲಿರುತ್ತಿದ್ದ. ಅವನು ಅದೆಷ್ಟೋ ಸಲ ತನ್ನಲ್ಲಿಗೆ ನನ್ನನ್ನು ಊಟಕ್ಕೆ ಕರೆದೊಯ್ಯುತ್ತಿದ್ದ. ಸೇಠ ಅಂಬಾಲಾಲ ಸಾರಭಾಯಿಯವರ ಮಗಳು ಮೃದುಲಾಲ ಬೇನ ನಮ್ಮ ತರಗತಿಯಲ್ಲೇ ಓದುತ್ತಿದ್ದರು.

ಪ್ರತಿ ರವಿವಾರವೂ ನಾನು ನಾಲ್ಕು ಗಂಟೆಗೆ ಆಶ್ರಮಕ್ಕೆ ಹೋಗಿ ಗಾಂಧೀಜಿಯನ್ನು ಕಂಡುಬರುವ ಪರಿಪಾಠವಿರಿಸಿಕೊಂಡಿದ್ದೆ. ಅವರು ನನ್ನನ್ನು ನೋಡಿ ನಗುತ್ತ 'ಕಹೋ. ಕೈಸೆ ಹೋ ರಾಮಚಂದ್ರ, ತುಮಾರಾ ಕಾಮ್ ಕೈಸೆ ಚಲಾಹೈ?' ಎಂದು ಕೇಳುತ್ತಿದ್ದರು. ಒಮ್ಮೊಮ್ಮೆ, ಇಂಗ್ಲೀಷಿನಲ್ಲಿಯೂ ಕೇಳುತ್ತಿದ್ದರು.

ಸ್ವಾಮೀಜಿ, ನನ್ನ ಬಗ್ಗೆ ಗಾಂಧೀಜಿಗೆ ಮೇಲಿಂದಮೇಲೆ ಹೇಳುತ್ತಿದ್ದರು. ನಾನು ಕಂಪೋಜಿಂಗ್ ಕಲಿತುದನ್ನೂ, ಶಾಲೆಗೆ ಹೋಗುತ್ತಿರುವುದನ್ನೂ ಅವರು ಹೇಳಿದ್ದರು. ಅಂತೆಯೆ, ಗಾಂಧೀಜಿ ನನ್ನ ವಿಷಯದಲ್ಲಿ ಹಾಗೂ ಅಭ್ಯಾಸದ ಬಗೆಗೆ ಆಸ್ಥೆಯಿಂದ ನನ್ನನ್ನು ಕೇಳುತ್ತಿದ್ದರು. ನಾನಾಗ ಅವರು ತಿರುಗಾಡಲು ಹೊರಟಾಗ ಅವರ ಹಿಂದಿನಿಂದಲೇ ಹೋಗುತ್ತಿದ್ದೆ. ಸಾಯಂಕಾಲ ಪ್ರಾರ್ಥನೆಯನ್ನು ಮುಗಿಸಿಕೊಂಡು ಮುದ್ರಣಾಲಯಕ್ಕೆ ಮರಳುತ್ತಿದ್ದೆ.

**ಉಪದೇಶದ ಅರ್ಥ ಹೊಳೆಯಿತು:**

ಅಹಮದಾಬಾದಿನಲ್ಲಿ ನಾನು ಕಲಿಯುತ್ತಿದ್ದ ಶಾಲೆಯಲ್ಲಿ ಅದೆಷ್ಟೋ ಜನ ಶ್ರೀಮಂತ ವಿದ್ಯಾರ್ಥಿಗಳಿದ್ದರು. ಅವರಲ್ಲನೇಕರು ನನ್ನನ್ನು ತಮ್ಮ ಮನೆಗೆ ಕರೆದೊಯ್ಯುತ್ತಿದ್ದರು. ತಿಂಡಿತಿನಿಸುಗಳೂ ಧಾರಾಳವಾಗಿರುತ್ತಿದ್ದವು. ಒಮ್ಮೆ ನನ್ನ ಮಿತ್ರ ಅಮೃತಲಾಲ ನನ್ನನ್ನು ಜೇಠಾಲಾಲ ಎಂಬ ಇನ್ನೊಬ್ಬ ಶ್ರೀಮಂತ ಮಿತ್ರನಲ್ಲಿಗೆ ಕರೆದೊಯ್ದನು. ನನ್ನ ಮೈಮೇಲಿನ ಬಟ್ಟೆಗಳು ತುಸು ಹರಿದುದನ್ನು ಕಂಡ ಜೇಠಾಲಾಲ ತನ್ನ ತಂದೆಗೆ ಹೇಳಿ ಒಂದು ಉತ್ತಮ ಧೋತರ ಜೋಡಿ. ಒಂದು ತಯಾರಿ ಶರ್ಟು ಮತ್ತು ಟೊಪ್ಪಿಗೆ ತಂದು

ನನ್ನೆದುರಿಗೆ ಇಟ್ಟ. ಅವು ನನಗೆ ಬೇಡವೆಂದು ನಾನು ಹೇಳಿದೆ. ಗೆಳೆಯರಿಬ್ಬರೂ ತೀರ ಆಗ್ರಹಪಡಿಸತೊಡಗಿದಾಗ, ಯಾರಿಂದಲೂ ಉಚಿತವಾಗಿ ಏನನ್ನೂ ಸ್ವೀಕರಿಸಕೂಡದೆಂದು ಕಾಕಾ ಸಾಹೇಬರು ನನಗೆ ಹೇಳಿರುವುದಾಗಿಯೂ ಅವರ ಆಜ್ಞೆಯನ್ನು ನಾನು ಮೀರಲಾರನೆಂದೂ ನಾನು ಹೇಳಿದಾಗ ಕಾಕಾಸಾಹೇಬರನ್ನೇ ವಿಚಾರಿಸಲು ಅವರು ಮುಂದಾದರು.

ಒಡನೆಯೆ, ಎಲ್ಲರೂ ಗುಜರಾತ ವಿದ್ಯಾಪೀಠಕ್ಕೆ ಹೋಗಿ ಕಾಕಾ ಅವರನ್ನು ಕಂಡೆವು. ನಾನು ನಡೆದುದನ್ನೆಲ್ಲ ಸಾದ್ಯಂತ ಹೇಳಿ ಮಿತ್ರರಿಬ್ಬರ ಪರಿಚಯ ಮಾಡಿಕೊಟ್ಟೆ. ಅವರ ಸಂಭಾಷಣೆ ಗುಜರಾತಿಯಲ್ಲಿಯೇ ನಡೆಯಿತು.

"ಯಾರಾದರೂ ತಾವಾಗಿಯೇ ಏನು ಕೊಟ್ಟರೂ ಸ್ವೀಕರಿಸಬೇಡವೆಂದು ರಾಮಚಂದ್ರನಿಗೇಕೆ ಹೇಳುವಿರಿ? ನಾವೇನು ಕೊಡಹೋದರೂ ಅದನ್ನು ಮುಟ್ಟದೆಯೆ ಅವನು ನಿಮ್ಮ ಹೆಸರು ಹೇಳುತ್ತಾನೆ" ಹೀಗೆ ಅವರಿಬ್ಬರೂ ದೂರಿದರು.

ಕಾಕಾ ನಕ್ಕು "ರಾಮಚಂದ್ರ ಸಾರೂ ಕರೇಛೆ" (ರಾಮಚಂದ್ರ ಸರಿಯಾದುದನ್ನೇ ಮಾಡಿದ್ದಾನೆ) ಎಂದರು.

"ಅದು ಹೇಗೆ? ಅವನ ಬಟ್ಟೆ ಹರಿದಿವೆಯೆಂದರೆ ನಾವು ಕೊಟ್ಟುದನ್ನು ಅವನೇಕೆ ಸ್ವೀಕರಿಸಬಾರದು? ನಮ್ಮಲ್ಲಿ ಹೆಚ್ಚಾಗಿದೆಯೆಂದು ನಾವು ಕೊಡುತ್ತಿದ್ದೆವಷ್ಟೇ?"

ಕಾಕಾ ತುಸು ಗಾಂಭೀರ್ಯದಿಂದಲೇ ಹೇಳಿದರು. "ಈ ಹುಡುಗ ದೇಶಸೇವಾ ಪ್ರೇರಿತನಾಗಿ ಶಾಲೆ ಬಿಟ್ಟು ಕರ್ನಾಟಕದಿಂದ ನಿಮ್ಮ ಗುಜರಾತಕ್ಕೆ ಬಂದಿದ್ದಾನೆ. ನೀವವನನ್ನು ಭಿಕಾರಿಯನ್ನಾಗಿಸಬೇಕೆನ್ನುವಿರೋ ಅಥವಾ ದೇಶಭಕ್ತನನ್ನೋ?"

"ಭಿಕಾರಿಯಲ್ಲ. ಅವನು ಉಜ್ವಲ ದೇಶಭಕ್ತನಾಗಲಂದೇ ನಮ್ಮ ಇಚ್ಛೆ. ಆದರೆ ರಾಮಚಂದ್ರ. ತಾವಾಗಿಯೇ ಯಾರನ್ನೂ ಬೇಡುವುದಿಲ್ಲವಲ್ಲ. ನಾವಾಗಿ ಕೊಟ್ಟುದನ್ನು ಸ್ವೀಕರಿಸಿದರೆ ಅವನು ಭಿಕಾರಿಯಂತಾಗುವನೇ?"

"ತನ್ನ ಸ್ವಂತಕ್ಕಾಗಿ ದಾನ ಪಡೆಯುವುದು, ಪುಕ್ಕಟೆ ಏನನ್ನಾದರೂ ಸ್ವೀಕರಿಸುವುದು ಎಲ್ಲವೂ ಭಿಕ್ಷುಕವೃತ್ತಿಯ ಭಾಗವೇ ಆಗಿದೆ. ಆದರೆ ಹೀಗೆ ಪಡೆಯುವದರಲ್ಲಿ. ಯಾವ ಪುರುಷಾರ್ಥವೂ ಇಲ್ಲ. ಈಗ ಅವನಿಗೆ ತುಸು ಕಷ್ಟವಾಗುತ್ತಿರಬಹುದಾದರೂ ಅದರಲ್ಲೇ ಅವನ ಪುರುಷಾರ್ಥವಿದೆ. ಈಗ ನಿಮ್ಮಿಂದ ಬಟ್ಟೆಯನ್ನೋ ಮತ್ತೇನನ್ನೋ ಪಡೆದು ಸುಖವಾಗಿರಬಹುದು. ಆದರೆ ಅದರಿಂದೇನು ಸಾಧಿಸಿದಂತಾಗುವುದು? ಅಂತೆಯೇ. ಈ ರೀತಿ ನೀವು ಯಾರಿಗೂ ಏನನ್ನೂ ಪುಕ್ಕಟ್ಟೆಯಾಗಿ ಕೊಡುತ್ತ ಹೋಗಬೇಡಿರಿ."

ಕಾಕಾಸಾಹೇಬರ ಈ ಶಬ್ದಗಳು ಅವರನ್ನು ನಿರುತ್ತರರಾಗಿಸಿದವು ಮಾತ್ರವಲ್ಲ, ಅವರ ಮನಸ್ಸಿನ ಮೇಲೆ ಗಂಭೀರ ಪರಿಣಾಮವನ್ನೂ ಉಂಟುಮಾಡಿದವು. ನನಗೇನಾದರೂ ಕೊಡಬೇಕೆಂಬ ಯೋಚನೆಯನ್ನೇ ಅವರು ತೊಡೆದುಹಾಕಿಬಿಟ್ಟರು.

೧೯೨೧ರ ಮಾರ್ಚ ತಿಂಗಳಲ್ಲಿ ಮ್ಯಾಟ್ರಿಕ್ ಪರೀಕ್ಷೆಗೆ ಕಟ್ಟಿ ಅದೇ ಸಲ ಪಾಸಾದೆನು ಕೂಡ. ಜೂನ್‌ನಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಗುಜರಾತ ವಿದ್ಯಾಪೀಠವನ್ನು ಸೇರಿದೆ. ನವೆಂಬರವರೆಗೆ ಜೀವನ ಸರಾಗವಾಗಿ ಸಾಗಿತು.

ಆ ವರುಷ ಡಿಸೆಂಬರಿನಲ್ಲಿ ಅಹಮದಾಬಾದಿನಲ್ಲಿ ಕಾಂಗ್ರೆಸ್ ಅಧಿವೇಶನ ಸೇರಲಿತ್ತು. ಆಗ ಸ್ವಯಂ ಸೇವಕನೆಂದು ಕೆಲಸ ಮಾಡುವ ಮನಸ್ಸು ನನಗಾಯಿತು. ಸುಬ್ರಾಯ ಎಂಬ ನನ್ನ ಇನ್ನೊಬ್ಬ ಮಿತ್ರನೂ ಇದನ್ನೇ ಬಯಸಿದನು. ಒಂದು ದಿನ ಈ ವಿಚಾರವನ್ನು ನಾವು ಸ್ವಾಮೀಜಿಯವರೆದುರು ಪ್ರಸ್ತಾಪಿಸಿದೆವು. ಸುಬ್ರಾಯ ಎಂಬ ನನ್ನ ಇನ್ನೊಬ್ಬ ಮಿತ್ರನೂ ಇದನ್ನೇ ಬಯಸಿದನು. ಒಂದು ದಿನ ಈ ವಿಚಾರವನ್ನು ನಾವು ಸ್ವಾಮೀಜಿಯವರೆದುರು ಪ್ರಸ್ತಾಪಿಸಿದೆವು. ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಗಾಂಧೀಜಿಯವರ "ಯಂಗ್ ಇಂಡಿಯಾ"ದ ಕೆಲಸ ಹೆಚ್ಚಾಗಬಹುದಾದ್ದರಿಂದ ಆಗಲೇ ಒಳ್ಳೆಯ ಕಂಪೋಜಿಟರರೆನಿಸಿದ್ದ ನಾವು ಬೇರೆ ಕೆಲಸದಲ್ಲಿ ತೊಡಗುವುದು ಸರಿಯಲ್ಲವೆಂದು ಹೇಳಿ ನಮಗೆ ಸ್ವಯಂ ಸೇವಕರಾಗಲು ಅವರು ಅನುಮತಿ ನೀಡಲಿಲ್ಲ. "ಗಾಂಧೀಜಿಯವರ ಲೇಖನಗಳನ್ನು ಕಂಪೋಜು ಮಾಡುವುದು ಮತ್ತು ಅಚ್ಚುಹಾಕುವುದು ಸಹ ದೇಶ ಭಕ್ತಿಯ ಕೆಲಸಗಳೇ. ಅಲ್ಲದೆ ನಾನೇ ನಿಮ್ಮನ್ನು ಕರೆದೊಯ್ದು ಎಲ್ಲ ಮುಖಂಡರ ಭೆಟ್ಟಿ ಮಾಡಿಸುತ್ತೇನೆ. ಬೇಕಾದರೆ ವರ್ಕಿಂಗ್ ಕಮಿಟಿಯ ಸಭೆಗೂ ಕರೆದುಕೊಂಡು ಹೋಗುತ್ತೇನೆ" ಎಂದೆಲ್ಲ ಅವರು ಹೇಳಿದರು. ಆದರೆ ನಮಗೆ ಅವರ ಮಾತು ಅಷ್ಟಾಗಿ ಹಿಡಿಸಲಿಲ್ಲ. ಮೊಳೆ ಜೋಡಿಸುವುದಕ್ಕಿಂತ ಸ್ವಯಂ ಸೇವಕರ ಬ್ಯಾಡ್ಜ ಹಚ್ಚಿಕೊಂಡು ಅಲೆಯುವುದರಲ್ಲೇ ಹೆಚ್ಚಿನ ದೇಶಭಕ್ತಿಯಿದೆಯೆಂದು ನಮ್ಮ ತಿಳುವಳಿಕೆ.

ಅಧಿವೇಶನ ಕಾಲಕ್ಕೆ ನನ್ನನ್ನು ಕರ್ನಾಟಕ ಶಿಬಿರಕ್ಕೆ ನೇಮಿಸಲಾಯಿತು. ಆದರೆ ಅಧಿವೇಶನ ಪ್ರಾರಂಭವಾಗಿ ಮುಕ್ತಾಯದ ಸಮಯ ಸಮೀಪಿಸತೊಡಗಿದಂತೆ ನನ್ನ ಉತ್ಸಾಹ ಕುಗ್ಗತೊಡಗಿತು. ಕಾಂಗ್ರೆಸ್ಸಿನ ಬಹಿರಂಗ ಅಧಿವೇಶನ ನಡೆದಾಗ ಮಾತ್ರ ಒಂದು ತಾಸಿನ ಮಟ್ಟಿಗೆ ನನಗೆ ಹೋಗಲು ಅವಕಾಶ ದೊರೆಯಿತು. ಉಳಿದ ಸಮಯವನ್ನೆಲ್ಲ, ಸ್ವಯಂ ಸೇವಕನ ಶಿಸ್ತಿಗೊಳಪಟ್ಟು ನಾನು ಕರ್ನಾಟಕ ಶಿಬಿರದಲ್ಲಿಯೇ ಕಳೆಯಬೇಕಾಯಿತು. ಕರ್ನಾಟಕದ ಧುರೀಣರನ್ನುಳಿದು ಬೇರಾರನ್ನೂ ಕಾಣುವುದು ನನಗೆ ಸಾಧ್ಯವಾಗಲಿಲ್ಲ.

ಕಾಂಗ್ರೆಸ್ ಅಧಿವೇಶನ ನಡೆದಾಗಲೇ ಒಂದು ದಿನ ಶ್ರೀ ದಿವಾಕರ ರಂಗರಾಯರೊಂದಿಗೆ ನವಜೀವನ ಮುದ್ರಣಾಲಯಕ್ಕೆ ಹೋಗಬೇಕಾಯಿತು. ಆಗ ಸ್ವಾಮೀಜಿ ನನ್ನೊಂದಿಗೆ ಒಂದು ಶಬ್ದವನ್ನೂ ಮಾತಾಡಲಿಲ್ಲ. ಸ್ವಾಮೀಜಿ ಅವರೊಂದಿಗೆ ದಿವಾಕರರ ಮಾತು ಮುಗಿದ ನಂತರ ಶಿಬಿರಕ್ಕೆ ಹೊರಟುಬಂದೆವು.

ಕಾಂಗ್ರೆಸ್ ಅಧಿವೇಶನ ಮುಗಿದ ನಂತರ ಒಂದು ವಾರದಲ್ಲಿ ಸ್ವಯಂ ಸೇವಕರ ಶಿಬಿರವನ್ನೂ ಮುಕ್ತಾಯಗೊಳಿಸಲಾಯಿತು. ಎಲ್ಲರೂ ತಮ್ಮ ತಮ್ಮ ಮನೆಗಳಿಗೆ

ಮರಳಿದರಾದರೂ ನಮ್ಮೆದುರು ಕಠೋರ ಸತ್ಯ ನಗ್ನವಾಗಿ ಕುಣಿಯತೊಡಗಿತು. ನಾವು ಹೋಗುವುದೆಲ್ಲಿ? ಸ್ವಾಮೀಜಿಯ ದೃಷ್ಟಿಯಲ್ಲಿ ಅಪರಾಧಿಗಳೆನಿಸಿದ್ದ ನಮಗೆ ಅಲ್ಲಿಗೆ ಹೋಗಲು ಧೈರ್ಯ ಸಾಲದಾಯಿತು. ನವಜೀನವ ಮುದ್ರಣಾಲಯದಲ್ಲಿ ನಮಗೆ ಕೆಲಸ ವಿಲ್ಲದಿದ್ದರೆ ನವಜೀವನ ಕ್ಲಬ್ಬಿನಲ್ಲೂ ನಮಗೆ ಸ್ಥಾನವಿರಲಿಲ್ಲ. ಇದೇ ಕಾರಣಕ್ಕಾಗಿಯೇ ಗಾಂಧೀಜಿಯವರೆಡೆಗೆ ಅಥವಾ ಕಾಕಾ ಸಾಹೇಬ ಕಾಲೇಲಕರರೆಡೆಗೆ ಹೋಗಲು ಧೈರ್ಯ ವಾಗಲಿಲ್ಲ.

ಸುಬ್ರಾವ್ ಮತ್ತು ನಾನು ಒಂದೆಡೆ ಕಲೆತು ಬಹಳ ಹೊತ್ತು ಯೋಚಿಸಿಯಾಯಿತು. ಆದರೂ ದಾರಿ ತೋಚಲಿಲ್ಲ. ಕೊನೆಗೆ ಸ್ವಾಮೀಜಿಯ ಕಡೆಗೆಯೇ ಹೋಗಿ ತಪ್ಪೊಪ್ಪಿಕೊಂಡು ಕ್ಷಮಾಯಾಚನೆ ಮಾಡುವುದೇ ಸರಿಯೆಂದು ನಿರ್ಧರಿಸಿ ಅಂಜುತ್ತಂಜುತ್ತಲೇ ಅವರ ಬಳಿಗೆ ಹೋದೆವು. ಅವರೊಮ್ಮೆ ಕಣ್ಣೆತ್ತಿ ನಮ್ಮೆಡೆ ನೋಡಿ, ಮತ್ತೆ ತಮ್ಮ ಕೆಲಸದಲ್ಲಿ ಮಗ್ನರಾದರು. ಅಲ್ಲಿ ನಾವು ನಿಂತಿದ್ದ ಒಂದೊಂದು ಕ್ಷಣವೂ ಒಂದೊಂದು ಯುಗ ದಂತೆಯೇ ಭಾಸವಾಗತೊಡಗಿತು.

ಕೊನೆಗೊಮ್ಮೆ ಗಟ್ಟಿ ಮನಸ್ಸು ಮಾಡಿ "ಸ್ವಾಮೀಜಿ" ಎಂದೆವು.

"ಏನು?"

"ನಮ್ಮದು ತಪ್ಪಾಯಿತು. ಕ್ಷಮಿಸಿ, ನಮ್ಮನ್ನು ಕರೆದುಕೊಳ್ಳಿ"

"ಇಲ್ಲಿ ಕೆಲಸವಿಲ್ಲ, ಬೇರೆ ಕಡೆ ಕೆಲಸ ನೋಡಿಕೊಳ್ಳಿ" ಎಂದು ಮುಖ ಕೆಳಗೆ ಹಾಕಿದ ಅವರು ಮತ್ತೆ ನಮ್ಮ ಕಡೆ ನೋಡಲೇ ಇಲ್ಲ. ಮತ್ತೆ ತುಸು ಹೊತ್ತು ಅಲ್ಲಿಯೇ ನಿಂತಿದ್ದು ನಂತರ ನಿರುಪಾಯರಾಗಿ ಅಲ್ಲಿಂದ ಹೊರಬಿದ್ದೆವು.

**ಮತ್ತೆ ಶ್ರೀ ಗಣೇಶಾಯ ನಮಃ**

ಇಂತು ನವಜೀನವ ಮುದ್ರಣಾಲಯದಿಂದ ಹೊರಬಿದ್ದಾಗ ನಮಗೆಲ್ಲವೂ ಶೂನ್ಯ ವಾಗಿಯೇ ತೋರತೊಡಗಿತು. ವಾಸವಾಗಿರಲೆಲ್ಲಾದರೂ ನೆಲೆ ದೊರೆತರೆ ಬೇಕಾದಲ್ಲಿ ಕಂಪೋಜಿಟರ್ ಎಂದು ಕೆಲಸ ಮಾಡಿ ಹೊಟ್ಟೆ ಹೊರೆಯಬಹುದೆಂದು ಆತ್ಮವಿಶ್ವಾಸ ನಮಗಿತ್ತು.

ಅಂತೂ ಸಂಜೆಯ ತನಕ ಹುಡುಕಾಡಿದಾಗ ಸಣ್ಣ ಬೀದಿಯೊಂದರಲ್ಲಿ ಹಳೆಯ ಮನೆಯೊಂದರಲ್ಲಿ ಮೂರನೆಯ ಅಂತಸ್ತಿನಲ್ಲಿ ತಿಂಗಳಿಗೆ ಹತ್ತು ರೂಪಾಯಿ ಬಾಡಿಗೆಗೆ ಕೋಣೆ ಸಿಕ್ಕಿತು. ಬೆಳಕು, ನೀರಿನ ಸೌಲಭ್ಯಗಳಾವುವೂ ಅಲ್ಲಿರಲಿಲ್ಲ. ನೀರಿಗಾಗಿ ಕೆಳಗೆ ಬರಬೇಕಿದ್ದರೆ ಬೆಳಕಿಗೆ ಕಂದೀಲೇ ಗತಿ. ಅಲ್ಲದೆ ಅದುವರೆಗೆ ಅಲ್ಲಿ ಯಾರೂ ವಾಸ ವಾದಂತೆಯೇ ತೋರಲಿಲ್ಲ. ಅನೇಕ ಹರಕು ಮುರುಕು ಸಾಮಾನುಗಳನ್ನು ಒಂದು ಮೂಲೆಯಲ್ಲಿ ಒಟ್ಟಿ ನಮಗಾಗಿ ಸ್ಥಳ ಮಾಡಲಾಗಿತ್ತು.

ಮರುದಿನ ಬೆಳಿಗ್ಗೆ ಸ್ನಾನ ಮುಗಿಸಿಕೊಂಡು ಕೆಲಸವನ್ನರಿಸಿ ಹತ್ತಾರು ಮುದ್ರಣಾಲಯಗಳನ್ನು ಸುತ್ತಿದೆವು. ಮೊದಲನೆಯದಾಗಿ ನಮಗೆ ಬರುತ್ತಿದ್ದುದು ಇಂಗ್ಲೀಷ್ ಕಂಪೋಜಿಂಗ್. ಆದರೆ ಹೆಚ್ಚಾಗಿ ಅಲ್ಲಿ ಬೇಡಿಕೆ ಇದ್ದುದು ಗುಜರಾತಿ ಕಂಪೋಜಿಟರು. ಅಲ್ಲದೆ ಕೆಲವರಿಗೆ ನಮಗೆ ನೌಕರಿ ಕೊಡುವ ಮನಸ್ಸಿದ್ದರೂ ನಮ್ಮ ಕಾಲೇಜು ಶಿಕ್ಷಣಕ್ಕೆ ಅನುವಾಗುವಂತೆ ಸಮಯ ಹೊಂದಿಸಿಕೊಡಲು ಸಾಧ್ಯವಿರಲಿಲ್ಲ. ಪ್ರಾರಂಭಕ್ಕೆ ತಿಂಗಳಿಗೆ ಮೂವತ್ತು ರೂಪಾಯಿಗಳಿಂತ ಹೆಚ್ಚು ಕೊಡಲು ಸಹ ಯಾರೂ ಸಿದ್ಧರಿರಲಿಲ್ಲ. ಸ್ವಾಮೀಜಿ ನಮ್ಮ ಶಿಕ್ಷಣಕ್ಕನುಕೂಲವಾಗಲೆಂದೇ ರಾಷ್ಟ್ರೀಯ ಭಾವನೆಯಿಂದ ಪ್ರೇರಿತರಾಗಿ ಬಂದ ನಮಗೆ ನವಜೀನವನದಲ್ಲಿ ಕೆಲಸವಿತ್ತಿದ್ದರು ಎಂಬುದರ ಅರಿವು ನಮಗಾಗ ಮೂಡ ತೊಡಗಿತು. ನಮಗೆ ಕಂಪೋಜಿಂಗ್ ಬರುತ್ತದೆ. ಬೇಕಾದಲ್ಲಿ ನೌಕರಿ ದೊರಕಿಸುವವೆಂಬ ಅಹಂಕಾರ ಬಿಸಿಲಿಗೆ ಬಿದ್ದ ಬೆಣ್ಣೆಯಂತೆ ಕರಗತೊಡಗಿತು.

**ನಾಗದರ್ಶನ, ಫುಟ್‌ಪಾಥ್ ಆಶ್ರಯ**

ಇದೆಲ್ಲ ಗದ್ದಲದಲ್ಲಿ ನನ್ನ ಅಭ್ಯಾಸ ಹಿಂದುಳಿದುಬಿಟ್ಟಿತು. ಅಂತೆಯೇ ಆ ರಾತ್ರಿ ಬಹಳಹೊತ್ತು ದೀಪದ ಮುಂದೆ ಪುಸ್ತಕ ಹಿಡಿದು ಕುಳಿತಿದ್ದೆ. ಆದರೆ ದಿನವಿಡೀ ತಿರುಗಾಡಿದ ಆಯಾಸ ನನ್ನ ನಿರ್ಧಾರದ ಮೇಲೆ ಮುಸುಗೆಳೆಯಲಾರಂಭಿಸಿತು. ತೂಕಡಿಸುತ್ತಿದ್ದ ನನಗೆ ಜಂಪು ಹತ್ತಿರಬೇಕು.

ಒಮ್ಮೆಲೇ ಸುಬ್ರಾವ್ ಚೀರಿಕೊಂಡದ್ದು ಕೇಳಿ ನನಗೆ ಎಚ್ಚರವಾಯಿತು. ನಾನು ಏನೆಂದು ನೋಡಿದಾಗ ಅವನು ಭಯದಿಂದ ನೋಡುತ್ತ ಹಾಸಿಗೆಯಿಂದೆದ್ದು ಹಿಂದೆ ಹಿಂದೆ ಸರಿಯತೊಡಗಿದ್ದ. ನಾನು ಏಳಬೇಕೆಂದು ಪ್ರಯತ್ನಿಸಿದಾಗ ಕೈ ಭಾರವೆನಿಸಿತು. ಏನೆಂದು ನೋಡಿದಾಗ ಭಯಂಕರ ನಾಗರಹಾವೊಂದು ನನ್ನ ಕೈಮೇಲೆ ಹಾಯ್ದು ಸುಬ್ರಾವ್‌ನೆಡೆಗೆ ನಡೆದಿತ್ತು. ಯಮದೂತನಂತಿದ್ದ ಆ ಹಾವನ್ನು ಕಂಡು ನನ್ನ ಮೈಯೆಲ್ಲ ಬೆವತಿತು. ಬಾಯಿಂದ ಶಬ್ದಗಳೇ ಹೊರಡದಾದವು. ಆದರೂ ಅದು ಹೇಗೋ ಹುಚ್ಚು ಧೈರ್ಯ ತಂದುಕೊಂಡು ಮೈಯೊಳಗಿನ ಕಸುವನ್ನೆಲ್ಲ ಕೈಯಲ್ಲೇ ಕೇಂದ್ರೀಕರಿಸಿ ಕೈಕೊಡಹಿ ಮೇಲೆದ್ದೆ. ಹಾವು ತುಸುದೂರ ಹೋಗಿಬಿತ್ತು. ಇಬ್ಬರೂ ಬಾಗಿಲು ಬಡಿಯಹತ್ತಿದೆವು.

ಈ ಸದ್ದು ಕೇಳಿಯೇ ಕೆಳಗಿನವರು ಮೇಲೆ ಧಾವಿಸಿ ಬಂದರು. ಏನೆಂದು ಹೇಳಲು ನಾಲಿಗೆ ಚಲಿಸದಾಯಿತು; ಕೈಸನ್ನೆ ಮಾಡಿ ಹಾವಿನೆಡೆ ತೋರಿಸಿದೆವು. ಅವರೂ ಆ ಹಾವನ್ನು ನೋಡಿದರಾದರೂ ಈ ಗದ್ದಲದಿಂದಾಗಿ ಅದು ಮೂಲೆಯಲ್ಲಿ ಒಟ್ಟಿದ್ದ ಮುರುಕಲು ಸಮಾನುಗಳ ಸಂದಿಯಲ್ಲಿ ನುಸುಳಿಹೋಗಿ ಅಡಗಿಕೊಂಡುದರಿಂದ ಯಾರಿಗೂ ಏನೂ ಮಾಡಲಾಗಲಿಲ್ಲ.

ನಾವಿಬ್ಬರೂ ನಮ್ಮ ಬಟ್ಟೆಬರೆ ಹಾಗೂ ಪುಸ್ತಕಗಳನ್ನು ಗಂಟು ಕಟ್ಟಿಕೊಂಡು ಕೆಳಗಿಳಿದು ಬಂದೆವು. ಅನೇಕ ನಿರ್ಗತಿಕರಿಗೆ ಆಶ್ರಯವಿತ್ತಿದ್ದ ಫುಟ್‌ಪಾಥ್ ಆ ರಾತ್ರಿಯ ಮಟ್ಟಿಗೆ ನಮ್ಮನ್ನು ಸ್ವಾಗತಿಸಿದರು. ಆದರೆ ಹಾವು ನನ್ನ ಕೈಯ ಮೇಲೆಯೇ ಹಾಯ್ದು

ಹೋಗಿದ್ದರಿಂದ ಅದು ಕಚ್ಚಿರಬಹುದೇ ಎಂಬ ಭಯ ನಮ್ಮನ್ನಾವರಿಸಿತು. ಅಪರಿಚಿತರು ಯಾರು ಯಾರು ತಮತಮಗೆ ತಿಳಿದ ಗಿಡಮೂಲಿಕೆಗಳ ಔಷಧ ಲೇಪಿಸಿದರು. ಸ್ಮೃತಿ ತಪ್ಪದೆಯೇ ಆ ರಾತ್ರಿ ಕಳೆದುದರಿಂದ ಹಾವು ಕಚ್ಚಿಲ್ಲವೆಂದು ಧೈರ್ಯವುಂಟಾಯಿತು. ಆದರೂ ಬೆಳಿಗ್ಗೆ ಶಹಾ ಎಂಬ ಡಾಕ್ಟರರಲ್ಲಿ ಹೋದೆವು. ಮೊದಲು ಏನೋ ಔಷಧವಿತ್ತ ನಂತರ ಆ ಡಾಕ್ಟರರು ಸ್ವತಃ ಪದವೀಧರರಾಗಿದ್ದರೂ ನನ್ನನ್ನು ತಮ್ಮ ಮನೆಯೊಳಕ್ಕೆ ಕರೆದೊಯ್ದು ಕೈಗೆ ಮಂತ್ರ ಹಾಕಿದರು.

ಔಷಧೋಪಚಾರ ನಡೆದಾಗಲೇ ಅವರು ಸಹಾನುಭೂತಿಯಿಂದ ನನ್ನ ಬಗ್ಗೆ ಕೇಳಿ ಎಲ್ಲವನ್ನು ತಿಳಿದುಕೊಂಡರು. ಸ್ವತಃ ರಾಷ್ಟ್ರೀಯ ಆಂದೋಲನದಲ್ಲಿ ಸೇರಲು ಸಾಧ್ಯವಾಗದಿದ್ದರೂ ಹಿನ್ನೆಲೆಯಲ್ಲಿದ್ದುಕೊಂಡು ದೇಶಕಾರ್ಯ ಮಾಡುವವರಿಗೆ ನೆರವಾಗುವ ಜನ ಆಗ ಬೇಕಾದಷ್ಟಿದ್ದರು. ಅಂಥವರಲ್ಲಿ ಡಾ॥ ಶಹಾ ಒಬ್ಬರು.

ತಾವಿತ್ತ ಉಪಚಾರಕ್ಕಾಗಿ ಅವರು ನನ್ನಿಂದ ಒಂದು ಬಿಡಿಕಾಸನ್ನೂ ಪಡೆಯಲಿಲ್ಲ, ಮಾತ್ರವಲ್ಲ ನಮಗೆ ವಾಸವಾಗಿರಲು ನೆಲೆಯಿಲ್ಲದ್ದು ತಿಳಿದಾಗ ತಮ್ಮ ಮನೆಯೆದುರಿನ ಕಟ್ಟಡದ ಮಹಡಿಯ ಮೇಲೆ ಸಕಲ ಸೌಕರ್ಯಗಳಿಂದ ಕೂಡಿದ್ದ ಕೋಣೆಯೊಂದನ್ನು ತಿಂಗಳಿಗೆ ೨೫ ರೂಪಾಯಿ ಬಾಡಿಗೆಗೆ ಕೊಡಿಸಿದರು.

ಮೊದ ಮೊದಲು ಖಾನಾವಳಿಯಲ್ಲಿ ಊಟಮಾಡುತ್ತಿದ್ದ ನಾವು, ಕೈಯಲ್ಲಿ ಹಣ ಕರಗತೊಡಗಿದಾಗ ಕೈಯಿಂದಲೇ ಅಡಿಗೆ ಮಾಡಿಕೊಳ್ಳಲಾರಂಭಿಸಿದೆವು. ಬರಬರುತ್ತ ನಮ್ಮ ಅಡಿಗೆಯೆಂದರೆ ಒಂದು ಅನ್ನ ಹಾಗೂ ತುಸು ಉಪ್ಪು ಬೆರೆಸಿದ ಬೇಯಿಸಿದ ಬದನೇಕಾಯಿ ಮಾತ್ರವಾಗಿ ಉಳಿಯಿತು. ಕೆಲಸ ಮಾತ್ರ ಸಿಕ್ಕಿರಲಿಲ್ಲ.

ಹೀಗೆಯೇ ನಾಲ್ಕಾರು ದಿನಗಳು ಕಳೆದ ನಂತರ ಒಂದು ದಿನ ಜ್ವರ ಬಂತು. ಚಳಿಜ್ವರವಿರಬಹುದೆಂದು ನಾನು ಕಡೆಗಣಿಸಿದೆ. ಒಂದು ವಾರ ಕಳೆದರೂ ಜ್ವರ ಇಳಿಮುಖವಾಗಲಿಲ್ಲ. ಆಗ ಡಾಕ್ಟರು "ಇದು ವಿಷಮಜ್ವರ. ತುಸು ಹೆಚ್ಚು ಎಚ್ಚರ ವಹಿಸಬೇಕು" ಎಂದು ಹೇಳಿದರು. ಆಗ ದೇವರ ಮೇಲೆ ಎಲ್ಲ ಭಾರಹಾಕಿ ನಾನು ಹಾಸಿಗೆಯನ್ನಾಶ್ರಯಿಸಿದೆ.

**ಗಾಂಧೀಜಿಯ ಸರ್ವೌಪಮ್ಯದೃಷ್ಟಿ :**

ಕಾಂಗ್ರೆಸ್ ಅಧಿವೇಶನಕ್ಕಿಂತ ಮೊದಲು ನಾನು ಪ್ರತಿ ರವಿವಾರ ಸಾಬರಮತಿ ಆಶ್ರಮಕ್ಕೆ ಹೋಗಿ ಗಾಂಧೀಜಿಯವರನ್ನು ಕಾಣುತ್ತಿದ್ದೆ. ಆದರೆ ನವಜೀವನ ಬಿಟ್ಟು ಕಾಂಗ್ರೆಸ್ ಸ್ವಯಂ ಸೇವಕನಾದಾಗಿನಿಂದಲೂ ಅಲ್ಲಿಗೆ ಹೋಗಿರಲಿಲ್ಲ. ಕಾಂಗ್ರೆಸ್ಸಿನ ಗಡಿಬಿಡಿಯಲ್ಲಿ ಗಾಂಧೀಜಿಯವರು ಯಾರ ಬಗೆಗೂ ವಿಶೇಷ ವಿಚಾರ ಮಾಡಿರಲಿಲ್ಲ. ಪ್ರಾರ್ಥನಾ ಸಭೆಯ ಕಾಲಕ್ಕೆ ಆಶ್ರಮವಾಸಿಗಳಾಗಿದ್ದ ಪ್ರತಿಯೊಬ್ಬರ ಯೋಗಕ್ಷೇಮ ವಿಚಾರಿಸುವುದು ಅವರ ವಾಡಿಕೆ.

ಅದೊಂದು ರವಿವಾರ ಪ್ರಾರ್ಥನಾ ಸಭೆಯ ಕಾಲಕ್ಕೆ ಗಾಂಧೀಜಿಗೆ ನನ್ನ ನೆನಪಾಯಿತು. ಕಳೆದೊಂದು ತಿಂಗಳಿನಿಂದಲೂ ರವಿವಾರದ ಪ್ರಾರ್ಥನೆಗೆ ನಾನು ಬಂದಿರದಿದ್ದುದು ಅವರ ಗಮನಕ್ಕೆ ಬಂದು ಅವರು ಸಹಜವಾಗಿಯೇ, "ಕರ್ನಾಟಕದ ಆ ರಾಮಚಂದ್ರ ಎಲ್ಲಿ? ಅವನನ್ನು ಕಂಡೇ ಇಲ್ಲ" ಎಂದು ಸ್ವಾಮೀಜಿಯವರನ್ನು ವಿಚಾರಿಸಿದರು. ನಾನು ವಿಷಮಜ್ವರದಿಂದ ಬಳಲುತ್ತಿರುವ ವಾರ್ತೆ ಸ್ವಾಮೀಜಿಗೆ ಅಂದೇ ತಿಳಿದಿತ್ತು. ಆ ವಿಷಯ ವನ್ನವರು ಗಾಂಧೀಜಿಗೆ ತಿಳಿಸಿದರು. ಅದನ್ನು ಕೇಳಿ ಗಾಂಧೀಜಿಯ ಮನಸ್ಸಿಗೆ ಬಹಳ ನೋವಾಗಿರಬೇಕು. ಅಂತೆಯೇ ನನ್ನ ಬಗ್ಗೆ ಹೆಚ್ಚು ಹೆಚ್ಚು ಕೇಳಿದರು. ಸ್ವಾಮೀಜಿ ಮೊದಲಿನಿಂದ ಕೊನೆಯವರೆಗೆ ಎಲ್ಲವನ್ನೂ ಹೇಳಿದರು.

"ಅವನನ್ನು ಕೂಡಲೇ ಕರೆದುಕೊಂಡು ಬಂದು ಸರಿಯಾದ ವ್ಯವಸ್ಥೆ ಮಾಡು" ಎಂದು ಗಾಂಧೀಜಿ ತಟ್ಟನೆ ಹೇಳಿದರು.

ಈ ವಿಷಯವನ್ನೆಲ್ಲ ಸ್ವಾಮೀಜಿ ತರುವಾಯ ನನಗೆ ಹೇಳಿದರು. ಗಾಂಧೀಜಿಯ ಮಾತಿನಂತೆ ಸ್ವಾಮೀಜಿ ಮರುದಿನವೇ ಡಾ॥ ಶಹಾರ ಅನುಮತಿ ಪಡೆದು ಕಾರೊಂದರಲ್ಲಿ ನವಜೀವನ ಕ್ಲಬ್ಬಿಗೆ ನನ್ನನ್ನು ಕರೆದೊಯ್ದರು.

ನಾನೊಬ್ಬ ತೀರಾ ಸಾಮಾನ್ಯ ಹುಡುಗ. ರವಿವಾರಕ್ಕೊಮ್ಮೆ ಕಾಣುವದರ ಹೊರತು ಹೆಚ್ಚಿನ ಸಂಪರ್ಕ ಗಾಂಧೀಜಿಯವರೊಂದಿಗೆ ನನಗಾಗ ಇರಲಿಲ್ಲ. ಆದರೂ ನನಗೆ ಅಸ್ವಾಸ್ಥ್ಯವುಂಟಾದುದನ್ನು ಕೇಳಿ ಅವರು ಇಷ್ಟೇಕೆ ನೊಂದುಕೊಳ್ಳಬೇಕು? ನಾನು ಮಾಡಿದ್ದು ತಪ್ಪೋ ಒಪ್ಪೋ ಎಂಬ ಯೋಚನೆಯನ್ನು ಮಾಡದೆಯೇ, ನನ್ನ ಶುಶ್ರೂಷೆಗೆ ಒಡನೆ ವ್ಯವಸ್ಥೆ ಮಾಡುವಂತೆ ಸ್ವಾಮೀಜಿಗೆ ಏಕೆ ಆಜ್ಞಾಪಿಸಬೇಕು? ನನ್ನ ಬಗೆಗೆ ಅವರಿಗದೇಕಷ್ಟೊಂದು ಕಳಕಳಿ? ಈ ಪ್ರಶ್ನೆ ನನ್ನ ತಲೆಯಲ್ಲಿ ಸುತ್ತುತ್ತಿದ್ದಂತೆಯೆ ಎಲ್ಲಕ್ಕೂ ಒಂದೇ ಉತ್ತರವೆಂಬಂತೆ ಭಾಸವಾಗುತ್ತಿತ್ತು ಅದೆಂದರೆ, ಗಾಂಧೀಜಿಯ ಸರ್ವೌಪಮ್ಯದೃಷ್ಟಿ ಅವರೇ ನಿಜವಾದ ಮಹಾತ್ಮ. ಒಂದು ವ್ಯಕ್ತಿ ಅವರ ಸಂಪರ್ಕದಲ್ಲೊಮ್ಮೆ ಬಂದರೆ ಸಾಕು. ಅವನು ಅವರವನಾಗಿಬಿಡುವ. ಒಮ್ಮೆ ಅವರಿಗೆ ಆ ವ್ಯಕ್ತಿ ಆತ್ಮೀಯನೆನಿಸಿದ ಮೇಲೆ ಅವನು ಹಿರಿಯನೋ, ಕಿರಿಯನೋ, ಬಡವನೋ. ಬಲ್ಲಿದನೋ-ಎಂಬೆಲ್ಲ ವಿಷಯಗಳೂ ಗೌಣ...........ಅಂತೆಯೇ ಅವರು ಮಹಾತ್ಮ.

**ಗಾಂಧೀಜಿ ಮತ್ತು ನಾಪಿತ:**

ಗಾಂಧೀಜಿಯವರ ಬಗ್ಗೆ ಬರೆಯಬಹುದಾದ ನೆನಹುಗಳು ಎಷ್ಟೋ ಇದೆ. ಅವೆಲ್ಲವನ್ನು ಇಲ್ಲಿ ಹೇಳುತ್ತ ಕೂಡುವುದು ಯುಕ್ತವಾಗಲಾರದು. ಆದರೆ ಗಾಂಧೀಜಿಯವರು ೧೯೩೭ರಲ್ಲಿ ಹುದಲಿಗೆ ಬಂದಾಗ ಒಂದು ಮೋಜಿನ ಪ್ರಸಂಗ ನಡೆಯಿತು. ಅದನ್ನು ಇಲ್ಲಿ ಉಲ್ಲೇಖಿಸದೆ ಇರಲಾರೆ.

ದೊಡ್ಡವರು ಮನೆಗೆ ಬರುತ್ತಾರೆಂದಾಗ ನಾವು ಅವರಿಗೆ ಏನು ಏನು ಬೇಕಾಗು ತ್ತದೆಂಬುದನ್ನು ಮುಂಚಿತವಾಗಿ ವಿಚಾರ ಮಾಡಿ ಎಲ್ಲ ಸಿದ್ಧತೆ ಮಾಡಿ ಇಡುತ್ತೇವೆ.

ಇಷ್ಟಾದರೂ ಯಾವುದೋ ಒಂದು ಸಣ್ಣ ಮಾತು ಉಳಿದುಹೋಗಿರುತ್ತದೆ. ಅತಿಥಿಗಳು ಬಂದ ಕೂಡಲೇ ನಾವು ಯಾವುದರ ಬಗ್ಗೆ ವಿಚಾರ ಮಾಡಿರುವುದಿಲ್ಲವೋ ಅದನ್ನೇ ಅವರು ಕೇಳಿದರೆ ನಾವು ಮಾಡಿದ ವ್ಯವಸ್ಥೆ ಎಲ್ಲಾ ಬುಡಮೇಲಾದಂತೆ ಅನಿಸುತ್ತಿದೆ. ನಾವು ಗೊಂದಲದಲ್ಲಿ ಬೀಳುತ್ತೇವೆ. ಎಲ್ಲ ಕಡೆಯೂ ಗಡಿಬಿಡಿ ನಡೆಯುತ್ತದೆ. ಹುದಲಿ ಸಮ್ಮೇಲನ ಕಾಲಕ್ಕೂ ಒಮ್ಮೆ ನಮ್ಮ ಸ್ಥಿತಿ ಹೀಗೆಯೇ ಆಯಿತು.

ಗಾಂಧೀಜಿಯವರಿಗೆ ಏನು ಬೇಕಾಗಬಹುದು ಎಂಬುದರ ಬಗ್ಗೆ ಮೊದಲೇ ವಿಚಾರ ಮಾಡಿ ಎಲ್ಲ ಸಿದ್ಧತೆಯನ್ನು ಮಾಡಲಾಗಿತ್ತು. ಪುಂಡಲೀಕಜಿಯವರು ಗಾಂಧೀಜಿಯವರ ಹತ್ತಿರ ಕೆಲವು ದಿವಸ ಇದ್ದುದರಿಂದ ಅವರೇ ಗಾಂಧೀಜಿಯ ಮೇಲ್ವಿಚಾರಣೆ ಕೆಲಸ ಕೈಕೊಂಡಿದ್ದರು. ಸ್ವತಃ ಗಂಗಾಧರರಾಯರು ಗಾಂಧೀಜಿಯವರ ಕುಟೀರಕ್ಕೆ ಬಂದು ಅಲ್ಲಿ ಎಲ್ಲ ಸಿದ್ಧತೆ ಸರಿಯಾಗಿ ಆಗಿದೆ ಎಂಬುದನ್ನು ನೋಡಿಕೊಂಡು ಹೋಗುತ್ತಿದ್ದರು. ಸಿದ್ಧತೆ ಎಲ್ಲ ಸರಿಯಾಗಿ ಆಗಿದೆ ಎಂದು ಮನವರಿಕೆ ಮಾಡಿಕೊಂಡು ನಾವು ನೆಮ್ಮದಿಯಿಂದ ಇದ್ದೆವು.

ಗಾಂಧೀಜಿಯವರು ಬೆಳಿಗ್ಗೆ ೭-೩೦ ಗಂಟೆಯ ಸುಮಾರಿಗೆ ಹುದಲಿಗೆ ಬಂದರು. ಅವರು ಬಂದ ಕೂಡಲೇ ಇಲ್ಲಿ ಒಬ್ಬ ಒಳ್ಳೆಯ ನಾಪಿತ ಇದ್ದಾನೆಯೇ ಎಂದು ಕೇಳಿದರು. ಇದನ್ನು ಕೇಳಿದ ಕೂಡಲೇ ನಾವೆಲ್ಲರೂ ಗೊಂದಲದಲ್ಲಿ ಬಿದ್ದೆವು. ಗಾಂಧೀಜಿ ಕ್ಷೌರ ಮಾಡಿಸಿಕೊಳ್ಳುತ್ತಾರೆ, ಅವರಿಗೆ ನಾಪಿತ ಬೇಕಾಗುತ್ತಾನೆ ಎಂಬ ವಿಚಾರ ನಮ್ಮ ಯಾರ ತಲೆಯಲ್ಲಿಯೂ ಸುಳಿದಿರಲಿಲ್ಲ. ಹುದಲಿ ಆ ಭಾಗದಲ್ಲಿ ದೊಡ್ಡ ಊರಾಗಿದ್ದರೂ ಅಲ್ಲಿ ನಾಪಿತರ ಮನೆ ಒಂದೆರಡು ಮಾತ್ರ ಇವೆ. ಊರ ಜನಸಂಖ್ಯೆ ಪ್ರಮಾಣದಿಂದ ನಾಪಿತರು ತೀರ ಕಡಿಮೆ. ಅಲ್ಲಿಂದ ಒಂದು ಮೈಲು ದೂರವಿರುವ ಸುಲಧಾಳದಿಂದ ಇಬ್ಬರು ಮೂವರು ನಾಪಿತರು ದಿನಾಲು ಹುದಲಿಗೆ ಬರುತ್ತಿದ್ದರು. ಅವರೇ ಉತ್ತಮ ನಾಪಿತರೆಂದು ಹೆಸರಾಗಿದ್ದರು. ಇದಲ್ಲದೆ ಆಗ ಸಹಸ್ರಾರುಜನ ಹುದಲಿಗೆ ಬಂದಿದ್ದರು. ಜನಜಾತ್ರೆ ಈ ಗದ್ದಲದಲ್ಲಿ ನಾಪಿತರನ್ನು ಹುಡುಕಿಕೊಂಡು ಬರುವುದು ಕಷ್ಟದ ಕೆಲಸವೇ ಆಗಿತ್ತು. ನಾಪಿತರನ್ನು ಹುಡುಕಿಕೊಂಡು ಬರಲಿಕ್ಕೆ ಕಾರ್ಯಕರ್ತರನ್ನು ಊರೊಳಗೆ ಎಲ್ಲ ಕಡೆಗೂ ಕಳಿಸಿದೆವು. ಗಾಂಧೀಜಿಗೆ ಕ್ಷೌರಮಾಡಿಸಿಕೊಳ್ಳಬೇಕಾಗಿದೆ, ನಾಪಿತ ಎಲ್ಲಿದ್ದಾನೆ ಎಂದು ಎಲ್ಲ ಕಡೆಗೂ ಸಂಭ್ರಮದ ಗಡಿಬಿಡಿಯೇ ಗಡಿಬಿಡಿ. ಕಡೆಗೆ ಗಂಗಪ್ಪ ಯಮಕನಮರಡಿ ಇವರು ಸುಲಧಾಳದ ಮಲ್ಲಪ್ಪ ಎಂಬ ನಾಪಿತನನ್ನು ಕರೆದುಕೊಂಡು ಬಂದರು. ಆಗ ನಮಗೆ ಧೈರ್ಯ ಬಂದಂತಾಯಿತು. ಆದರೆ ಮತ್ತೊಂದು ಚಿಂತೆ ಉಪಸ್ಥಿತವಾಯಿತು.

ಆ ನಾಪಿತನ ಮೈಮೇಲೆ ಖಾದಿ ಬಟ್ಟೆ ಇದ್ದಿಲ್ಲ. ಪರದೇಶೀ ಬಟ್ಟೆ ತೊಟ್ಟ ನಾಪಿತನಿಂದ ಗಾಂಧೀಜಿ ಕ್ಷೌರ ಮಾಡಿಸಿಕೊಳ್ಳುವರೋ ಇಲ್ಲವೋ ಎಂದು ನನಗೆ ಸಂದೇಹ. ಹೆಚ್ಚು ವಿಚಾರ ಮಾಡಲು ಸಮಯವೂ ಇರಲಿಲ್ಲ. ತಡವಾದರೆ ಗಾಂಧೀಜಿ ಕ್ಷೌರ ಮಾಡಿಸಿ ಕೊಳ್ಳುವುದನ್ನೇ ಬಿಟ್ಟುಬಿಡುವರೆಂಬ ಭಯ. ಆದ್ದರಿಂದ ಪುಂಡಲೀಕಜಿ ಕೂಡಲೇ ತಮ್ಮ

ಮೈಮೇಲಿನ ಅಂಗಿ ಅವನಿಗೆ ತೊಡಿಸಿದರು; ಯಾರದೋ ಖಾದಿ ಧೋತರ ಉಡಿಸಿ ಒಂದು ಖಾದಿ ಟೊಪ್ಪಿಗೆ ನಾಪಿತನಿಗೆ ಹಾಕಲಾಯಿತು. ಅಂತೂ ವರ ಸಿದ್ಧನಾದ.

ಪುಂಡಲೀಕಜಿ ಆಜಾನುಬಾಹು ಆಳು. ಅವರು ತಮ್ಮ ಷರಟನ್ನು ನಾಪಿತನಿಗೆ ತೊಡಿಸಿದ್ದರಿಂದ ತೋಳುಗಳು ಜೋತಾಡತೊಡಗಿದವು. ಅವನ್ನು ಮಡಚಿ ಆತನನ್ನು ಗಾಂಧೀಜಿಯ ಬಳಿಗೆ ಕಳಹಿಸಿದೆವು. ನಮ್ಮ ಈ ವ್ಯವಸ್ಥೆಯು ಗಾಂಧೀಜಿಯ ಸೂಕ್ಷ್ಮ ದೃಷ್ಟಿಯಿಂದ ಪಾರಾಗಲಿಲ್ಲ. ಗಾಂಧೀಜಿ ತಮ್ಮ ಕ್ಷೌರ ಮುಗಿಯುತ್ತಲೇ ನಾಪಿತನನ್ನು- ನೀ ತೊಟ್ಟ ಷರಟು ಯಾರದೆಂದು ಕೇಳಿಯೇಬಿಟ್ಟರು. ನಾಪಿತನು ಸುಮ್ಮನಿದ್ದ. ಗಾಂಧೀಜಿ ಮತ್ತೆ ಅವನನ್ನು ಕೇಳಿದರು, - ನೀನು ಯಾವಾಗಲೂ ಖಾದಿ ಧರಿಸುತ್ತೀಯಾ ಎಂದು. ಆತ ಇಲ್ಲ ಎಂದು ನಿಜಸಂಗತಿ ಹೇಳಿದ. ನಮ್ಮ ಗುಟ್ಟೆಲ್ಲ ರಟ್ಟಾಯಿತು. ಗಾಂಧೀಜಿ ಅವನು ಹಾಕಿದ ಷರಟು ನೋಡಿ ನಗುತ್ತಾ, - ನಾಪಿತನಿಗೆ ಇನ್ನು ಮುಂದೆ ನೀನು ಸದಾ ಖಾದಿಯನ್ನೇ ಧರಿಸುತ್ತಾ ಹೋಗು ಎಂದು ಹೇಳಿದರು. ಗಾಂಧೀಜಿಯವರ ಕ್ಷೌರದ ಕೆಲಸ ಸುಸೂತ್ರ ಆಯಿತಲ್ಲ ಎಂದು ನಮಗೂ ಸಮಾಧಾನವಾಯಿತು. ಅಂದಿನಿಂದ ಆ ನಾಪಿತನು ಖಾದೀಧಾರಿಯೇ ಆದನು.

**ಅಹಿಂಸಾ ಅಚ್ಚೀತರಹ ಸೀಖಾ:**

೧೯೪೨ನೇ ಆಗಸ್ಟ್ ೮ನೇ ತಾರೀಖಿನ ದಿವಸ ಗಾಂಧೀಜಿಯವರು "ಚಲೇ ಜಾವ್" ಘೋಷಣೆಯನ್ನು ಮಾಡಿದರು. ಕೂಡಲೇ ಬ್ರಿಟಿಷ್ ಸರ್ಕಾರವು ಗಾಂಧೀಜಿ, ವರ್ಕಿಂಗ್ ಕಮಿಟಿ ಸದಸ್ಯರು ಮೊದಲಾದ ಎಲ್ಲ ಮುಖಂಡರನ್ನೂ ಬಂಧಿಸಿದರು. ಗಾಂಧೀಜಿಯವರು ಕಾರ್ಯಕರ್ತರಿಗೆ ಮತ್ತು ಜನತೆಗೆ "ಕರೋ ಯಾ ಮರೋ" ಎಂಬ ಸಂದೇಶ ನೀಡಿದರು. ಆಂದೋಲನ ಉಗ್ರಸ್ವರೂಪ ತಾಳುವದೆಂದು ತಿಳಿದು ಕೆಲವು ಮುಖಂಡರು ಭೂಗತ ರಾಗಿದ್ದರು.

ನಾನು ಆಗ ಯಾವುದೋ ಕೆಲಸದ ನಿಮಿತ್ತ ಹುಬ್ಬಳ್ಳಿಗೆ ಬಂದಿದ್ದೆನು. ಶ್ರೀ ಪುಂಡಲೀಕಜಿಯವರು ನನಗೆ ಒಂದು ಕಾಗದ ಬರೆದು ಮುದ್ದಾಂ ಒಬ್ಬರನ್ನು ಹುಬ್ಬಳ್ಳಿಗೆ ಕಳಿಸಿಕೊಟ್ಟರು. ಅದರಲ್ಲಿ ಹೀಗೆ ಬರೆದಿತ್ತು-"ಈ ಸಲದ ಆಂದೋಲನ ಉಗ್ರ ಸ್ವರೂಪ ತಾಳುವದಿದೆ. ಗಂಗಾಧರರಾಯರನ್ನೂ ಇತರ ಮುಖಂಡರನ್ನೂ ಈಗಾಗಲೇ ಬಂಧಿಸಿ ದ್ದಾರೆ. ನನ್ನ ಹಾಗೂ ನಿಮ್ಮ ಮೇಲೆ ವಾರಂಟ ಇದೆ. ನೀವು ಭೂಗತರಾಗಿ ಕೆಲಸ ಮಾಡಬೇಕು. ಆದುದರಿಂದ ಇಲ್ಲಿಗೆ ಬರುವಾಗ ಸ್ವಲ್ಪ ಜಾಗರೂಕತೆಯಿಂದ ಬರ್ರಿ." ನನಗೆ ಯಾವುದೂ ತಿಳಿಯದಾಯಿತು. ಯಾರಾದರನ್ನು ಭೆಟ್ಟಿಯಾಗಿ ವಿಚಾರಿಸಬೇಕೆಂದರೆ ಬಹಳ ಜನ ಮುಖಂಡರು ಬಂಧಿಸಲ್ಪಟ್ಟು ಕಾರಾಗೃಹವಾಸ ಸೇರಿದ್ದರು. ಕೆಲವು ಜನ ಭೂಗತರಾಗಿದ್ದರು. ಅದರಿಂದ ಯಾರ ಸಂಗಡ ವಿಚಾರ ವಿನಿಮಯ ಮಾಡುವಂತಿದ್ದಿಲ್ಲ. ನಾನು ಜಾಗರೂಕನಾಗಿಯೇ ಹುದಲಿಗೆ ಬಂದೆನು. ಅಷ್ಟರಲ್ಲಿ ರಾಷ್ಟ್ರದಾದ್ಯಂತ ವಿಧ್ವಂಸಕ ಚಟುವಟಿಕೆ ನಡೆದಿದ್ದವು. ನನ್ನ ಸಹಕಾರಿಗಳೂ ಕೆಲವರು ಸತ್ಯಾಗ್ರಹ ಮಾಡಿ ಜೈಲಿಗೆ

ಹೋದರು. ಉಳಿದವರು ನಾನಾ ವಿಧ್ವಂಸಕ ಕಾರ್ಯಕ್ರಮ ಮಾಡುವ ಎನ್ನತೊಡಗಿದರು. ಆದರೆ ಆಗಿನ್ನೂ ನನ್ನ ಮನಸ್ಸು ಡೋಲಾಯಮಾನವಾಗಿತ್ತು. ಈ ಪ್ರಕಾರದ ಚಟುವಟಿಕೆ ಅಹಿಂಸೆಯ ಚೌಕಟ್ಟಿನಲ್ಲಿ ಕೂಡುತ್ತವೆಯೇ? ಇದಕ್ಕೆ ಗಾಂಧೀಜಿ ಒಪ್ಪಿಗೆ ಇದೆಯೆ? ಎಂದು. ಅಷ್ಟರಲಿ ಈ ವಿಷಯದ ಮೇಲೆ ಶ್ರೀ ಕಿಶೋರಲಾಲ ಮಶ್ರೂವಾಲಾ ಬರೆದ ಹರಿಜನ ಪತ್ರಿಕೆಯನ್ನು ಯಾರೋ ನನಗೆ ತಂದುಕೊಟ್ಟರು. ಅದರಲ್ಲಿ ಮನುಷ್ಯ ಹಿಂಸೆ, ಖಾಸಗಿ ಆಸ್ತಿಪಾಸ್ತಿ ಹಾನಿ ಇವನ್ನು ಬಿಟ್ಟು ಇತರ ವಿಧ್ವಂಸಕ ಕೃತ್ಯಗಳು ಈ ಸಾರೆಯ ಆಂದೋಲನದಲ್ಲಿ ಬರುತ್ತೇವೆ ಎಂದು ಬರೆದಿತ್ತು. ಶ್ರೀ ದಿವಾಕರ ಮತ್ತು ಕರಮರಕರ ಇವರು ಭೂಗತವಾಗಿ ಈ ಆಂದೋಲನದ ಮುಖಂಡತ್ವ ವಹಿಸಿದ್ದು ತಿಳಿಯಿತು. ಅದರಿಂದ ನನ್ನ ಮನಸ್ಸು ನಿರ್ಧಾರ ಮಾಡಿ ನಾನೂ ನನ್ನ ೨೫-೩೦ ಜನ ಸಹಕಾರಿಗಳೊಂದಿಗೆ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದೆ. ರೈಲ್ವೆಸ್ಟೇಶನ್ ಸುಡುವುದು, ಹಳಿ ಕಿತ್ತುವುದು, ಟಪಾಲು ಹೊಡೆಯುವುದು ಮುಂತಾದ ಕೃತ್ಯಗಳನ್ನು ಮಾಡಿದೆವು. ನನ್ನನ್ನು ಹಿಡಿದುಕೊಟ್ಟವರಿಗೆ ೫೦೦೦ ರೂ. ಬಹುಮಾನ ಕೊಡುವುದಾಗಿ ಸರಕಾರದವರು ಪ್ರಕಟಿಸಿದ್ದರು.

ಬೆಳಗಾವಿ ಜಿಲ್ಲೆಯಲ್ಲಿ ನನ್ನಂತೆಯೇ ವಾಮನರಾವ್ ದೇಸಾಯಿ, ಶ್ರೀರಂಗ ಕಾಮತ, ಬಿ.ವೈ. ದೇಶಪಾಂಡೆ (ಅಣ್ಣು ಗುರೂಜಿ), ಚನ್ನಪ್ಪವಾಲಿ ಮೊದಲಾದವರು ತಮ್ಮ ತಮ್ಮ ಗುಂಪು ಕಟ್ಟಿಕೊಂಡು ಇದೇ ರೀತಿ ಕೆಲಸ ಮಾಡುತ್ತಿದ್ದರು.

೧೯೪೪ರಲ್ಲಿ ಗಾಂಧೀಜಿಯವರು ಹೊರಗೆ ಬಂದ ನಂತರ ಭೂಗತರಾಗಿದ್ದವರೆಲ್ಲ ವಿಧ್ವಂಸಕ ಕೃತ್ಯ ನಿಲ್ಲಿಸಿ ಹೊರಗೆ ಬಂದು ಹಾಜರಾಗಬೇಕೆಂದು ಕರೆಕೊಟ್ಟರು. ಮುಂದೆ ಕೆಲವು ದಿವಸಗಳ ತರುವಾಯ ಆಂದೋಲನ ನಿಂತಿತು. ಎಲ್ಲರೂ ಬಿಡುಗಡೆಯಾದರು.

ನನ್ನ ಬಿಡುಗಡೆಯಾದ ಕೆಲವು ದಿವಸಗಳ ತರುವಾಯ ನಾನು ಯಾವುದೋ ಸಭೆಗಾಗಿ ವಾರ್ಧಾಕ್ಕೆ ಹೋದೆನು. ಈ ಹೊತ್ತಿಗೆ ಈ ಸಾರಿ ನಡೆದ ವಿಧ್ವಂಸಕ ಕೃತ್ಯಗಳನ್ನು ಗಾಂಧೀಜಿಯವರು ತಮ್ಮ ಅಹಿಂಸಾ ತತ್ವಗಳಿಗೆ ಅನುಗುಣವಾಗಿಲ್ಲ ಎಂದು ಹೇಳಿದ್ದರು. ಸರಕಾರಕ್ಕೂ ಅವರಿಗೂ ಈ ಬಗ್ಗೆ ಅನೇಕ ಪತ್ರವ್ಯವಹಾರಗಳು ಆಗಿದ್ದವು. ಗಾಂಧೀಜಿ ಹೇಳಿಕೆಯ ಪ್ರಕಾರ ಶ್ರೀ ಕಿಶೋರಲಾಲ ಮಶ್ರೂವಾಲಾ ಇವರು ಇದರ ಹೊಣೆಯನ್ನೆಲ್ಲ ತಮ್ಮ ಮೇಲೆ ತೆಗೆದುಕೊಂಡು ಸರಕಾರಕ್ಕೆ ಒಂದು ಕ್ಷಮಾಪಣೆ ಪತ್ರ ಬರೆದಿದ್ದರು. ಎಲ್ಲವೂ ಶಾಂತವಾಗಿತ್ತು.

ನನ್ನ ಬಿಡುಗಡೆಯಾದ ಕೆಲವು ದಿನಗಳ ತರುವಾಯ ನಾನು ಯಾವುದೋ ಸಭೆಗಾಗಿ ವಾರ್ಧಾಕ್ಕೆ ಹೋದ ಮೇಲೆ ಕಿಶೋರಲಾಲಜಿಯವರನ್ನು ಭೆಟ್ಟಿಯಾದೆ. ಅವರು ತಮ್ಮ ಕಡೆಗೆ ಬಂದ ಕಾರ್ಯಕರ್ತರನ್ನು ಪ್ರೇಮದಿಂದ ಅವರ ಯೋಗಕ್ಷೇಮ ಕೇಳಿ ಅವರು ಈ ಸಾರೆಯ ಆಂದೋಲನದಲ್ಲಿ ಯಾವ ರೀತಿ ಭಾಗವಹಿಸುತ್ತಿದ್ದರು ಎಂಬುದನ್ನು ಕೇಳುತ್ತಿದ್ದರು. ತಮ್ಮ ಲೇಖನ ಪ್ರಭಾವ ಅವರ ಮೇಲೆ ಆಗಿ ಅವರು ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದರೇ ಎಂಬುದನ್ನು ತಿಳಿದುಕೊಳ್ಳುವುದು ಅವರ ಉದ್ದೇಶವಾಗಿತ್ತು.

ಅವರು ಆ ರೀತಿ, ಈ ಸಾರೆ ಆಂದೋಲನದಲ್ಲಿ ನೀವು ಯಾವ ರೀತಿ ಕೆಲಸ ಮಾಡಿದಿರಿ ಎಂದು ನನ್ನನ್ನು ಕೇಳಿದರು. ನಾನು ಮಾಡಿದ್ದನ್ನೆಲ್ಲ ಹೇಳಿದೆ. ಅವರು ನಗುನಗುತ್ತ ಎಲ್ಲವನ್ನೂ ಕೇಳಿಕೊಂಡರು. ನಾನು ನಿಮ್ಮ ಲೇಖನ ಓದಿಯೇ ಈ ಕಾರ್ಯದಲ್ಲಿ ತೊಡಗಿದೆ ಎಂಬುದನ್ನೂ ಹೇಳಿದೆನು. ನನ್ನ ಮಾತು ಮುಗಿದ ಮೇಲೆ, "ಇವನ್ನೆಲ್ಲ ನೀವು ಬಾಪೂಜಿಗೆ ಹೇಳಿದ್ದೀರಾ?" ಎಂದರು. ನಾನು "ಇಲ್ಲ" ಎಂದೆ. ಅವರ ಮುಂದೆ ಹೇಳುವುದು ಅವಶ್ಯ ಎಂದರು. ಈ ಹೊತ್ತಿಗೆ ಸರಿಯಾಗಿ ಗಾಂಧೀಜಿ ಸಾಯಂಕಾಲ ತಿರುಗಾಡಲಿಕ್ಕೆ ಹೊರಟಿದ್ದರು. ಆಗ ನಾನು ಮತ್ತು ಕಿಶೋರಲಾಲಜಿ ಅವರನ್ನು ಅಲ್ಲೇ ಭೆಟ್ಟಿ ಮಾಡಿದೆವು. ಆಗ ಕಿಶೋರಲಾಲರು ಗಾಂಧೀಜಿಗೆ-ರಾಮಚಂದ್ರಜಿ ನಿಮ್ಮ ಸಂಗಡ ಮಾತನಾಡಬೇಕೆನ್ನುತ್ತಾರೆ. ಅವರಿಗೆ ಏನೋ ಹೇಳುವುದಿದೆಯಂತೆ ಎಂದರು. ಗಾಂಧೀಜಿಯವರು "ಚಲೋ ರಾಮಚಂದ್ರ" ಎಂದು ಮುಂದೆ ನಡೆದರು. ನಾನು ಬೆನ್ನು ಹತ್ತಿ ಹೋದೆನು. ಆಗ ಅವರು ನನ್ನ ಯೋಗಕ್ಷೇಮ ವಿಚಾರಿಸಿ ಈ ಸಾರೆಯ ಆಂದೋಲನದಲ್ಲಿ ನಾನು ಯಾವ ರೀತಿ ಭಾಗವಹಿಸಿದ್ದೆನೆಂಬುದನ್ನು ವಿಚಾರಿಸಿದರು. ನಾನು ಅದನ್ನೇ ಹೇಳಲಿಕ್ಕೆ ಬಂದಿದ್ದೇನೆಂದು ಹೇಳಿ ನಾನು ಮಾಡಿದ್ದೆಲ್ಲವನ್ನೂ ಹೇಳಿದೆ. ಆಗ ಗಾಂಧೀಜಿ ನನ್ನ ಬೆನ್ನ ಮೇಲೆ ಕೈಯಿಟ್ಟು "ನೀನು ಆಶ್ರಮದಲ್ಲಿದ್ದು ಅಹಿಂಸೆಯನ್ನು ಚೆನ್ನಾಗಿ ಕಲಿತೆ" ಎಂದು ನಗುತ್ತಾ ಅಂದರು. ಕಿಶೋರಲಾಲಜಿ ಮತ್ತು ಕಾಕಾ ಕಾಲೇಲಕರ ಅವರು ಹರಿಜನದಲ್ಲಿ ಈ ರೀತಿ ಬರೆದಿದ್ದರಿಂದ ನಾನು ಈ ಕಾರ್ಯದಲ್ಲಿ ತೊಡಗಿದೆ ಎಂದೆನು. ಅದಕ್ಕೆ ಗಾಂಧೀಜಿ - "ಹೌದು, ಅವರ ಆ ಲೇಖನಗಳು ಅನೇಕರನ್ನು ಈ ಮಾರ್ಗಕ್ಕೆ ಎಳೆದಿವೆ" ಎಂದರು. ಈಗಾಗಲೇ ಈ ವಿಷಯದ ಬಗ್ಗೆ ಚರ್ಚೆಯಾಗಿ ಎಲ್ಲವೂ ಮುಗಿದು ಹೋದ್ದರಿಂದ ಈ ವಿಷಯ ಕುರಿತು ಹೆಚ್ಚಿನ ಚರ್ಚೆ ಅನವಶ್ಯಕವಿತ್ತು. ಆದ್ದರಿಂದ ಮಾತು ಅಲ್ಲಿಯೇ ಮುಗಿಯಿತು.

ಅಂದು ಪ್ರಾರ್ಥನೆ ಮುಗಿಸಿಕೊಂಡು ಗಾಂಧೀಜಿಗೆ ನಮಸ್ಕರಿಸಿ ಅವರ ಆಶೀರ್ವಾದ ಪಡೆದು ನಾನು ಊರಿಗೆ ಮರಳಿದೆನು. ನನ್ನ ಮಟ್ಟಿಗೆ ಅದೇ ಗಾಂಧೀಜಿಯ ಕೊನೆಯ ಸ್ಪರ್ಶ, ಅದೇ ಅವರ ಕೊನೆಯ ದರ್ಶನ.

* * *

## ೯. ಶ್ರೀ ಅಂದಾನಪ್ಪ ದೊಡ್ಡಮೇಟಿ ಅವರ ನೆನಹು

ಗಾಂಧೀಜಿ ಅವರೊಡನೆ ನನ್ನ ಸಂಪರ್ಕ ಮೊದಲು ಬಂದದ್ದು ೧೯೩೧-೩೨ರಲ್ಲಿ ಹರಿಜನ ಕಾರ್ಯ ನಿಮಿತ್ತವಾಗಿ ಪತ್ರ ವ್ಯವಹಾರದ ಮೂಲಕ. ಅನಂತರ ಪತ್ರವ್ಯವಹಾರದಿಂದ ತೃಪ್ತನಾಗದ ನಾನು ಬಾಪೂಜಿ ಅವರ ಸಂದರ್ಶನ ಅಪೇಕ್ಷಿಸಿ ಯರವಡಾ ಕೇಂದ್ರ ಸೆರೆಮನೆಯಲ್ಲಿ ಅವರು ಬಂಧಿತರಾಗಿದ್ದಾಗ ೧೯೩೨ರ ಕೊನೆಯಲ್ಲಿ ಅವರ ಸಂದರ್ಶನವನ್ನು ಸೆರೆಮನೆಯಲ್ಲಿ ಪಡೆದುಕೊಂಡೆ. ಹಾಗೆಯೇ ಆ ದಿವ್ಯ ವಿಭೂತಿಯ ದರ್ಶನಕ್ಕೆ ನನ್ನ ಪತ್ನಿಯೂ ಬರಲು ಅಪೇಕ್ಷೆಪಟ್ಟದ್ದರಿಂದ ಅವಳಿಗೂ ಅಪ್ಪಣೆ

ಕೊಡಬೇಕೆಂದು ಕೋರಿದ್ದೆ. ನನ್ನ ಈ ವಿನಂತಿಗೆ ಬಾಪೂಜಿ ದಯೆದೋರಿ ೪೫ ನಿಮಿಷಗಳ ಸಂದರ್ಶನಕ್ಕೆ ಆಶೀರ್ವದಿಸಿ ಪತ್ರ ಬರೆದರು. ಅದರನ್ವಯ ನಾನು ೧೯೩೭ರ ಉತ್ತರಾರ್ಧದ ಒಂದು ದಿನ ಪತ್ನಿ ಹಾಗೂ ನನ್ನ ಒಂದೂವರೆ ವರ್ಷದ ಚಿಕ್ಕ ಮಗಳ ಸಮೇತವಾಗಿ ಒಳ್ಳೇ ಉತ್ಸಾಹದಿಂದ ಹೊರಟೆನು. ಮಧ್ಯಮಾರ್ಗದಲ್ಲಿ ನಮ್ಮ ಸ್ನೇಹಿತರೊಬ್ಬರು ತಾವು ಪತ್ನೀ ಸಮೇತ ಬರುವದಾಗಿ ಹಟ ಹಿಡಿದರು. ಈ ಬಗ್ಗೆ ನಾನು ಗಾಂಧೀಜಿಯ ಅಪ್ಪಣೆ ಪಡೆದಿರಲಿಲ್ಲ. ಆದರೂ ಆ ಸ್ನೇಹಿತರು ನನ್ನನ್ನು ಹಿಂಬಾಲಿಸಿದರು.

ಗಾಂಧೀಜಿಯವರು ಹೇಳಿದ ಸರಿಯಾದ ವೇಳೆ ಮಧ್ಯಾಹ್ನ ೪ ಗಂಟೆಗೆ ಯರವಡಾ ತುರಂಗದ ಹೆಬ್ಬಾಗಿಲ ಎದುರಿಗೆ ಹೋಗಿ ನಾವೆಲ್ಲ ನಿಂತೆವು. ಸೆರೆಮನೆಯ ಅಧಿಕಾರಿಗಳು ಹೆಚ್ಚಿನ ಚರ್ಚೆ ಮಾಡದೇ ನಮ್ಮೆಲ್ಲರನ್ನೂ ಗಾಂಧೀಜಿಯ ಬಳಿಗೆ ಹೋಗುವ ಮಾರ್ಗ ತೋರಿಸಿದರು. ಎಂತಹ ದೊಡ್ಡವರೂ ಕಲಿತುಕೊಳ್ಳಬೇಕಾದ ಅಂಶವೆಂದರೆ, ಮಹಾದೇವ ದೇಸಾಯಿ ಅವರ ಕಾರ್ಯತತ್ಪರತೆ ಬಾಪೂಜಿಯ ಆಪ್ತಕಾರ್ಯದರ್ಶಿ ಶ್ರೀ ಮಹದೇವ ದೇಸಾಯಿ ಅವರು ಎದುರಿಗೆ ಬಂದು ನಮ್ಮನ್ನು ಗಾಂಧೀಜಿಯು ಕುಳಿತ ವಿಶಾಲ ಮಾಮರದ ಅಡಿಗೆ ಕರೆದೊಯ್ದರು. ನಂತರ ನಾವೆಲ್ಲ ಬಾಗಿ ನಮಸ್ಕರಿಸಿ ಕುಳಿತುಕೊಂಡೆವು. ನಾನು "ಹರಿಜನ ಕಾರ್ಯವನ್ನು ಯಾವ ರೀತಿ ಮುಂದುವರಿಸಬೇಕು" ಎಂದು ಮುಂತಾಗಿ ಕೇಳಿದೆ. ಆಗ ನಾನು ಧಾರವಾಡ ಜಿಲ್ಲಾ ಹರಿಜನ ಸೇವಕ ಸಂಘದ ಅಧ್ಯಕ್ಷನಾಗಿದ್ದೆ. ಗಾಂಧೀಜಿಯವರು ಅಸ್ಪೃಶ್ಯತೆಯ ಭಯಾನಕತೆಯನ್ನು, ಅದರ ಉಚ್ಚಾಟನೆಯ ಅವಶ್ಯಕತೆ ಯನ್ನೂ ತಿಳಿಸುತ್ತ, "ಕರ್ನಾಟಕದವರಿಗೆ ಹೊಸದಾಗಿ ಏನೂ ಹೇಳಬೇಕಾಗಿಲ್ಲ. ಎಂಟುನೂರು ವರ್ಷಗಳ ಮುನ್ನ ಶ್ರೀ ಬಸವೇಶ್ವರರು ಏನು ಮಾಡಿದರೋ ಅದನ್ನೇ ನಾನು ಮುಂದುವರಿಸುತ್ತಿದ್ದೇನೆ" ಎಂದು ಮುಂತಾಗಿ ಹೇಳಿ ಮಾತು ಮುಗಿಸಿದರು. ಇಷ್ಟರಲ್ಲಿ ಒಂದು ಚಮತ್ಕಾರ ನಡೆಯಿತು. ನನ್ನ ಮಗು ಚೆನ್ನಮ್ಮನಿಗೆ ನಾಯಿಕೆಮ್ಮು ಇದ್ದದ್ದು ಬಾಪೂಜಿಯ ಸಮ್ಮುಖದಲ್ಲಿಯೇ ಉಲ್ಬಣಿಸಿ ಮಗು ಕಣ್ಣು ಬೆಳ್ಳಗೆ ಮಾಡಹತ್ತಿತ್ತು. ಕೂಡಲೇ ಗಾಂಧೀಜಿ ಸ್ವತಃ ತಾವು ಕುಳಿತ ಆರಾಮ ಕುರ್ಚಿಯಿಂದ ಮೇಲೆದ್ದು, ಮಗುವನ್ನು ಎತ್ತಿಕೊಂಡು ತಾವೇ ತಮ್ಮ ಕುಡಿಯುವ ನೀರಿನ ಹೂಜಿಯಿಂದ ನೀರು ತೆಗೆದು ಕೈಮುಟ್ಟಿ ಕುಡಿಸಿದರು. ಅದು ಮಗುವಿನ ಮೇಲೆ ಮಂತ್ರದ ಕೋಲಿನಂತೆ ಪರಿಣಾಮ ಮಾಡಿ ಮಗುವಿನ ಕೆಮ್ಮು ಕೂಡಲೇ ನಿಂತುಹೋಯಿತು. ಇಷ್ಟೇ ಅಲ್ಲ; ಅದು ಮುಂದೆಯೂ ತಲೆದೋರಲಿಲ್ಲ. ಆಮೇಲೆ ನಾನು ಬಾಪೂಜಿಗೆ ಕರ್ನಾಟಕವನ್ನು ಸಂದರ್ಶಿಸಿದಾಗ್ಗೆ ನನ್ನ ಸ್ವಗ್ರಾಮವಾದ ಜಕ್ಕಲಿಗೆ ಬರಬೇಕೆಂದು ಕೇಳಿಕೊಂಡೆ. ಅವರು 'ಅಸ್ತು' ಅಂದಿದ್ದರು. ಅದರಂತೆ ನಡೆಸಿಯೂ ಕೊಟ್ಟರು. ಆ ಬಗ್ಗೆ ದೇಶಭಕ್ತ ಗಂಗಾಧರರಾವ ದೇಶಪಾಂಡೆ ಅವರಿಗೆ ಜ್ಞಾಪಿಸಿ ಪತ್ರ ಸಹ ಬರೆದಿದ್ದರು. ನಾವು ಸೆರೆಮನೆಯಿಂದ ಅಪ್ಪಣೆ ಪಡೆದುಕೊಂಡು ಹೊರಡುವಾಗ್ಗೆ ನನ್ನ ಜೊತೆಗೆ ಬಂದ ಸ್ನೇಹಿತ ದಂಪತಿಯ ಬಗ್ಗೆ ಕೇಳಿದರು. ಅವರೂ ತಮ್ಮ ದರ್ಶನ ಕಾತರರಾಗಿ ಬಂದಿದ್ದಾರೆ ಎಂದು ನಾನು ಇಷ್ಟೇ ಹೇಳಿದೆ. ನಾನು ಅಪ್ಪಣೆ ಕೊಟ್ಟಿದ್ದು ನಿಮ್ಮಿಬ್ಬರಿಗೆ ಮಾತ್ರ ಅಲ್ಲವೇ ಎಂದು ಗಾಂಧೀಜಿ ಪ್ರಶ್ನಿಸಿದರು. ನಾನು ಸುಮ್ಮನೆ ತಲೆ ಬಾಗಿಸಿದೆ.

ನಾವು ಸೆರೆಮನೆಯಿಂದ ಹೊರಬಿದ್ದು ಅಂದೇ ರಾತ್ರಿ ಗಾಡಿಯಿಂದ ಮುಂಬಯಿಗೆ ಬಂದೆವು. ಮುಂಬಯಿಯಲ್ಲಿ, ಬೆಳಿಗ್ಗೆ ಪತ್ರಿಕೆ ತೆಗೆದುಕೊಂಡು ಓದುತ್ತಿದ್ದಂತೆ, ಗಾಂಧೀಜಿಯ ಒಂದು ಹೇಳಿಕೆ ಪ್ರಸಿದ್ಧವಾಗಿತ್ತು. ಅದರಲ್ಲಿ, ನಮ್ಮ ಜೊತೆಗೆ ಗಾಂಧೀಜಿಯನ್ನು ನೋಡಲು ಬಂದ ಇನ್ನಿಬ್ಬರು ತಮ್ಮ ಅಪ್ಪಣೆ ಪಡೆಯದೆ ಬರಬಾರದಾಗಿತ್ತು ಎಂದು ಗಾಂಧೀಜಿ ಉಲ್ಲೇಖಿಸಿದ್ದರು.

ಇದಾದ ಮೇಲೆ ಗಾಂಧೀಜಿ ೧೯೩೪ರ ಆದಿಭಾಗದಲ್ಲಿ ಹರಿಜನ ಪ್ರವಾಸ ಕಾರ್ಯಕ್ರಮ ಕೈಗೊಂಡರು. ಆ ಸಂದರ್ಭದಲ್ಲಿ, ೨೫೦೦ ಜನಸಂಖ್ಯೆ ಇದ್ದ ಜಕ್ಕಲಿಯಲ್ಲಿ ೨೫೦೦ ಜನ ಸೇರಿದ್ದರು. ಅವರೆಲ್ಲರೂ ಹಳ್ಳಿಯಿಂದ ಬಂದವರೇ. ಗಾಂಧೀಜಿ ಅವರನ್ನು ನೋಡಲು ಕೆಲವೇ ಜನ ಕಾರಿನಲ್ಲಿ ಬಂದಿದ್ದರೆ ೧೨೦೦ ಎತ್ತಿನ ಗಾಡಿಗಳ ಮೂಲಕ ದೂರದೂರಿನ ಹಳ್ಳಿಯ ಜನ ಬಂದಿದ್ದರು. ಗಾಂಧೀಜಿ ಸಭಾರಂಗಕ್ಕೆ ಬಂದೊಡನೆ ನಾನು ಎದುರಿಗೆ ಹೋಗಿ ಪಾದ ಮುಟ್ಟಿ ನಮಿಸಿ ಅವರನ್ನು ಪೀಠಕ್ಕೆ ಕರೆದುಕೊಂಡು ಬಂದೆ ಹಾಗೂ ಒಂದುಸಾವಿರ ರೂಪಾಯಿಗಳ ನಿಧಿಯನ್ನು ಹರಿಜನ ಕಾಣಿಕೆಗೆ ಒಪ್ಪಿಸಿದೆ. ಅನಂತರ ಗಾಂಧೀಜಿ ಸಂತೋಷಚಿತ್ತರಾಗಿ ತಮ್ಮ ಭಾಷಣ ಪ್ರಾರಂಭಿಸಿದರು.

"ಶ್ರೀ ದೊಡ್ಡಮೇಟಿ ಅವರ ಪರಿಚಯ ಮೊದಲು ನನಗೆ ಯರವಡಾ ಸೆರೆಮನೆಯಲ್ಲಿಯೇ ಆಗಿದೆ. ಅವರ ಆಮಂತ್ರಣವನ್ನು ಮನ್ನಿಸಿ ನಾನು ಇಲ್ಲಿಗೆ ಬಂದಿದ್ದೇನೆ" ಎಂದು ಮೊದಲಾಗಿ ಪ್ರಾಸ್ತಾವಿಕವಾಗಿ ಹೇಳಿ ಹರಿಜನೋದ್ಧಾರದ ಅವಶ್ಯಕತೆಯ ವಿಷಯಕ್ಕೆ ೪೫ ನಿಮಿಷಗಳ ಭಾಷಣ ಮಾಡಿದರು. ಆಮೇಲೆ ಗದುಗಿಗೆ ಪ್ರಯಾಣ ಬೆಳೆಸಿದರು. ನಾನು ಸಹ ಬೆಳಗಾವಿಯವರೆಗೆ ಅವರನ್ನು ಹಿಂಬಾಲಿಸಿದೆ. ಮಧ್ಯದ ಯಾವುದೋ ಒಂದು ಕಾರ್ಯಕ್ರಮದಲ್ಲಿ ಒಂದು ವಿಶೇಷ ಘಟನೆ ನಡೆಯಿತು. ಗಾಂಧೀಜಿ ಕರ್ನಾಟಕದ ತಮ್ಮ ಸಂಚಾರದ ಕಾಲಕ್ಕೆ "ಗಾಂಧೀ" ಎಂದು ದೊಡ್ಡದಾಗಿ ಕನ್ನಡದಲ್ಲಿಯೇ ತಮ್ಮ ಅಂಕಿತ ಹಾಕಿ ಹರಿಜನ ಕಾರ್ಯಕ್ಕಾಗಿ ಆ ಮೂಲಕ, ಅವರ ಅಂಕಿತ ಬೇಡಿಬಂದವರಿಂದ ಐದು ರೂಪಾಯಿ ತೆಗೆದುಕೊಳ್ಳುತ್ತಿದ್ದರು. ಈ ಸಮಯದಲ್ಲಿ ಓರ್ವ ಮರಾಠಿ ಶಾಲಾ ಶಿಕ್ಷಕರು ಗಾಂಧೀಜಿಯ ಹೆಸರಿನ ಅಂಕಿತದ ಬಗ್ಗೆ ತಮ್ಮ ಚಿಕ್ಕ ಪುಸ್ತಕ ಮುಂದೆ ಮಾಡಿ ಮರಾಠಿಯಲ್ಲಿ ಸೈ ಇಕ್ಕಲು ಕೇಳಿಕೊಂಡರು. ಅದಕ್ಕೆ ಗಾಂಧೀಜಿಯವರು 'Go to Poona' ಪುಣೆಗೆ ಬಾ ಎಂದು ಹೇಳಿದರು.

ಆಮೇಲೆ ನನಗೆ ಗಾಂಧೀಜಿ ಅವರ ಸಂಪರ್ಕ ಬಂದದ್ದು, ೧೯೪೧ರಲ್ಲಿ. ಆಗ ನಾನು ವೈಯಕ್ತಿಕ ಸತ್ಯಾಗ್ರಹ ಮಾಡಿ ಹಿಂಡಲಗಿ ಸೆರೆಮನೆಯಲ್ಲಿ ಇದ್ದೆ. ಒಂದು ವರ್ಷ ಶಿಕ್ಷೆ ಆಗಿತ್ತು. ನಾನು ಸೆರೆಮನೆ ಸೇರಿದ ೩ ತಿಂಗಳ ನಂತರ ನನ್ನ ತಾಯಿಗೆ ರೋಗ ತಲೆದೋರಿ ದಿನಾಲು ಹೆಚ್ಚುತ್ತಲಿದ್ದು ಉಲ್ಬಣಾವಸ್ಥೆಗೆ ಮುಟ್ಟಿತ್ತು. ನಾನು ಪೆರೋಲ ಮೇಲೆ ಮಾತೆಯ ದರ್ಶನಕ್ಕೆ ಬರಬೇಕೆಂದು ವೈದ್ಯರು ಮತ್ತು ಸ್ನೇಹಿತರು ನನಗೂ ಸರಕಾರಕ್ಕೂ ಒತ್ತಾಯದ ತಂತಿ ಕಳಿಸುತ್ತ ಇದ್ದರು. ಸರಕಾರದವರು ಪೆರೋಲ್ ಮೇಲೆ

ಹೋಗಬಹುದು ಎಂದು ನನಗೆ ತಿಳಿಸಿದರು. ನಾನು ಪೆರೋಲ್ ಕೇಳಲು ತಿರಸ್ಕರಿಸಿದೆ ಇದರಿಂದಾಗಿ ಸರ್ಕಾರವು ನನ್ನನ್ನು ಪೆರೋಲ್ ಮೇಲೆ ಹೋಗಲು ತಾನೇ ಕೇಳಿಕೊಂಡಿತು. ಆದರೂ ನಾನು ಒಪ್ಪಲಿಲ್ಲ. ನನ್ನ ಈ ನಿಶ್ಚಯವನ್ನು ಗಾಂಧೀಜಿ ಅವರಿಗೆ ನಾನು ಸೆರೆಮನೆಯಿಂದ ತಂತಿಯ ಮೂಲಕ ತಿಳಿಸಿದೆ. ಅಲ್ಲದೆ, ನನ್ನ ಮಾತೆಯವರ ಮುಖ ನೋಡುವಂತೆ ಆಶೀರ್ವದಿಸಬೇಕೆಂದೂ ಅವರಿಗೆ ಕೇಳಿಕೊಂಡೆ. ನನ್ನ ತಂತಿಗೆ ಗಾಂಧೀಜಿ ಸೇವಾಗ್ರಾಮದಿಂದ ಒಂದು ಪತ್ರ ಕೆಳಗಿನಂತೆ ಬರೆದರು.

Sevagram
1-4-41

Dear Doddameti,

I had your wire : I am glad about your decision. I have written to your mother. May God bless her.

your
Bapu
(M.K.GANDHI)

ಅದರಂತೆ ನನ್ನ ತಾಯಿಗೂ ಕೆಳಗಿನ ಪತ್ರ ಬರೆದರು.

Dear Sister,

Your son telegraphs to me about your illness. I am glad you are not insisting on his release. May God give you peace and restore you. His will be done not ours.

Yours Sincerely
(M.K.GANDHI)

ಗಾಂಧೀಜಿಯ ಆಶೀರ್ವಾದಪರ ಈ ಪತ್ರ ಬಂದ ತರುವಾಯ ಸುಮಾರು ಎರಡೂವರೆ ತಿಂಗಳ ಮೇಲೆ ನಾನು ಸೆರೆಮನೆಯಿಂದ ಬಿಡುಗಡೆ ಆದೆನು. ಹಿಂಡಲಗಿ ಸೆರೆಮನೆಯ ಬಾಗಿಲಲ್ಲಿ ನನ್ನ ಗ್ರಾಮದವರು ಕಾರನ್ನು ತಂದು ನಿಲ್ಲಿಸಿದ್ದರು. ನನ್ನ ಗ್ರಾಮ ಹಿಂಡಲಗಿಯಿಂದ ೧೧೪ ಮೈಲು ದೂರ (ಒಂದುನೂರ ಹದಿನಾಲ್ಕು) ಸುಮಾರು ಎರಡೂವರೆ ತಾಸಿನಲ್ಲಿ ನಾನು ನೇರ ಪ್ರವಾಸ ಮಾಡಿ ಜಕ್ಕಲಿಯನ್ನು ಸೇರಿದೆ. ನನ್ನ ಮಾತೆಯು ಮರಣಶಯ್ಯೆಯಲ್ಲಿ ಇದ್ದಳು. ನಾನು ನಮಸ್ಕರಿಸಿದೆ. ಪೂರ್ಣ ಪ್ರಜ್ಞೆಯಲ್ಲಿದ್ದ ಅವಳು ಕಣ್ತುಂಬ ನೀರು ತಂದು, ಇನ್ನು ಕಣ್ಣು ಮುಚ್ಚಲಿ ಎಂದು ಅವಳ ಒಬ್ಬನೇ ಮಗನಾದ ನನಗೆ ಹೇಳಿದಳು. ಕೂಡಲೇ ಪ್ರಜ್ಞಾಹೀನ ಸ್ಥಿತಿಯಲ್ಲಿ ಬಂದು ಮುಂದೆ ಒಂದು ವಾರದಲ್ಲಿ ಪರಂಧಾಮ ಹೊಂದಿದಳು. ಗಾಂಧೀಜಿಯ ಆಶೀರ್ವಾದ ಬಲ ದಿಂದಲೇ ನಾನು ನನ್ನ ತಾಯಿಯ ಮುಖ ಕಂಡೆನೆಂದು ನನ್ನ ನಂಬಿಕೆ.

ಗಾಂಧೀಜಿಯ ಕೊನೆಯ ಸಂಪರ್ಕ ನನಗೆ ಬಂದದ್ದು ೧೯೪೭ರಲ್ಲಿ. ಕರ್ನಾಟಕ ರಾಜ್ಯ ನಿರ್ಮಾಣವನ್ನು ಕುರಿತು ಹಿರಿಯರೊಡನೆ ನಾನೂ ಹೋಗಿದ್ದೆ. ಶಿಷ್ಟ ಮಂಡಳದವರು ಗಾಂಧೀಜಿ ಅವರೊಡನೆ ಹಾಗೂ ಅ.ಭಾ.ಕಾಂಗ್ರೆಸ್ ಕಾರ್ಯಕಾರಿ ಸಮಿತಿಯವರೊಡನೆ ಚರ್ಚಿಸಲು ಹೋಗಿದ್ದೆವು. ಮಾತುಕತೆ ನಡೆದಾಗ್ಗೆ ಕರ್ನಾಟಕದ ಓರ್ವರಿಂದ, ತಾನು ಕರ್ನಾಟಕ ರಾಜ್ಯ ರಚನೆಗೆ ವಿರೋಧಿ ಎಂಬ ತಂತಿ ಅಂದಿನ ಕಾಂಗ್ರೆಸ್ ಅಧ್ಯಕ್ಷರಿಗೆ ಬಂದಿತ್ತು. ಅದನ್ನು ಕಾಂಗ್ರೆಸ್ ಅಧ್ಯಕ್ಷರು ಅಲ್ಲಿದ್ದವರೆಲ್ಲರಿಗೂ ತೋರಿಸಿದರು. ಆ ಬಗ್ಗೆ ನಮ್ಮ ಶಿಷ್ಟ ಮಂಡಲದ ಸದಸ್ಯರಲ್ಲಿ ಒಬ್ಬರಾದ ಶ್ರೀಮಾನ್ ಕೆ.ಆರ್.ಕಾರಂತರು. "ನಾವು ಸ್ವರಾಜ್ಯವನ್ನು ಬೇಡುವ ಸಂದರ್ಭದಲ್ಲಿ ನಮಗೆ ಸ್ವರಾಜ್ಯ ಬೇಡ ಎಂದು ತಂತಿ ಬರುತ್ತಿದ್ದವು ಎಂದರು. ಈ ಶಬ್ದವನ್ನು ಕೇಳಿ ಗಾಂಧೀಜಿ ಎಷ್ಟೋ ಹೊತ್ತಿನವರೆಗೆ ಹೊಟ್ಟೆ ತುಂಬ ದೊಡ್ಡದಾಗಿ ನಕ್ಕರು. ಇದು ಗಾಂಧೀಜಿ ನಮಗಿತ್ತ ಆಶೀರ್ವಾದ ಎಂದು ನಾವೆಲ್ಲ ಸಂತೋಷಚಿತ್ತರಾಗಿ ಮರಳಿದೆವು.

**ಅಂದಾನಪ್ಪ ದೊಡ್ಡಮೇಟಿ**

*　　*　　*

## ೧೦ ವೀರಭದ್ರಪ್ಪ ಶಿರೂರ ಅವರ ನೆನಹುಗಳು

**ಕೊಪ್ಪಳ ಜಿಲ್ಲೆಗೆ ಮಹಾತ್ಮರ ಸಂದರ್ಶನ**

೧೯೩೪ನೇ ಇಸ್ವಿ ಮಾರ್ಚ್ ತಿಂಗಳ ೩ನೇ ದಿನಾಂಕ ಮಟಮಟ ಮಧ್ಯಾಹ್ನ ಬೇಸಿಗೆಯ ಉರಿಬಿಸಲು ನೆತ್ತಿಯನ್ನು ಕುಕ್ಕುತ್ತಿತ್ತು. ಇದೇ ಸಮಯದಲ್ಲಿ ಸುಮಾರು ಹದಿನೈದು ಸಾವಿರಕ್ಕಿಂತಲೂ ಹೆಚ್ಚು ಜನಸ್ತೋಮವು ಕೊಪ್ಪಳ ಜಿಲ್ಲೆಯ ಭಾನಾಪುರ ರೈಲ್ವೆ ನಿಲ್ದಾಣದಲ್ಲಿ ಒಂದೆರಡು ತಾಸು ಮೊದಲೇ ಕಾದು ನಿಂತಿದ್ದರು. ರೇಲ್ವೆ ಗಾಡಿ ಕೂಡ ಅಂದು ತಡವಾಗಿಯೇ ೨ ಗಂಟೆ ಸುಮಾರಿಗೆ ಬಂದಿತು. ಆಡೂರ ಗಾಂಧೀ ಸ್ವಾಗತ ಸಮಿತಿಯವರು ಮಂಟಪವನ್ನು ಹಾಕಿಸಿದ್ದರು. ಈ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಶಿರೂರ ವೀರಭದ್ರಪ್ಪ ಇವರು ಗಾಂಧೀಜಿಯವರ ಬರುವಿಕೆಯ ಬಗ್ಗೆ ಒಳ್ಳೇ ಸರಿಯಾಗಿ ವಿಚಾರ ಮಾಡಿದ್ದರಿಂದ ಹೆಚ್ಚು ಜನರು ಕೂಡಿದ್ದರು. ಸುತ್ತ ಈ ಜಿಲ್ಲೆಯ ಮುನಿರಾಬಾದ್, ಗಿಣಿಗೆರೆ, ಕೊಪ್ಪಳ, ಭಾನಾಪುರ, ಬನ್ನಿಕೊಪ್ಪ ಈ ಐದು ಸ್ಟೇಶನ್ನುಗಳಲ್ಲಿ ಜನರು ಗಾಂಧೀಜಿಯವರ ದರ್ಶನಕ್ಕಾಗಿ ಬಂದಿದ್ದರು.

ಮಹಾತ್ಮರು ಮತ್ತು ಅವರ ಸಂಗಡಿಗರು ಪ್ರತಿಯೊಂದು ಸ್ಟೇಶನ್ನದಲ್ಲಿ ಕೂಡಿದ ಜನರನ್ನು ಪೈಸಾ ಪೈಸಾ ಎಂದು ಕೇಳುತ್ತಿದ್ದರು. ಜನರು ತಮಗೆ ಶಕ್ತಿ ಇರುವಷ್ಟು ಹಣವನ್ನು ಹಾಕುತ್ತಿದ್ದರು. ಮಹಾತ್ಮರ ಪರಿವಾರದಲ್ಲಿ ಪ್ಯಾರಿಲಾಲ್, ಮೀರಾಬೆನ್ ಮತ್ತು ಕರ್ನಾಟಕದ ಶ್ರೀ ಗಂಗಾಧರರಾವ್ ದೇಶಪಾಂಡೆ, ಶ್ರೀ ಸರದಾರ ವೀರನಗೌಡ ಪಾಟೀಲ, ಹರಿಜನ ಸೇವಕ ಸಂಘದ ಅಧ್ಯಕ್ಷರು, ಶಿದ್ದಮ್ಮ ಮೈಲಾರ ಮತ್ತು ಹಳ್ಳಿಕೇರಿ ಗುದ್ಲೆಪ್ಪ ಮೊದಲಾದವರಿದ್ದರು. ಅಲ್ಲದೆ ಅನೇಕ ಪತ್ರಿಕೆಗಳ ಸಂಪಾದಕರೂ ಇದ್ದರು.

ಗಾಂಧೀಜಿಯವರನ್ನು ನೋಡಲು ಮುಂಚಿತವಾಗಿಯೇ ಬಿಸಿಲಲ್ಲಿ ಜನರು ಕಾದು ಕೊಂಡಿದ್ದರು. ಗಾಡಿಯು ಬರುತ್ತಲೇ ಜನರು ಮುಕ್ಕರಿದರು. ಕಾರ್ಯಕರ್ತರು, ಸ್ವಯಂ ಸೇವಕರು ದಿಕ್ಕುಗಾಣದಾದರು. ಸರದಾರ ವೀರನಗೌಡರು ದಾರಿ ಬಿಡಿಸುತ್ತ ಮುಂದೆ ನಡೆದರು, ಮತ್ತು ಮಹಾತ್ಮರನ್ನು ತಮ್ಮ ಬೆನ್ನ ಮೇಲೆ ಕೂಡಿಸಿಕೊಂಡು ಸ್ವಯಂ ಸೇವಕರು ಮಂಟಪಕ್ಕೆ ಒಯ್ದು ಎತ್ತರ ವೇದಿಕೆಯ ಮೇಲೆ ಎಲ್ಲರಿಗೂ ಕಾಣಿಸುವಂತೆ ಕೂಡಿಸಿದರು. ಹರಿಜನ ಬಾಲಕಿಯರು ಖಾದಿದಾರದ ನೂಲನ್ನು ಹಾಕಿದರು. ಸ್ವಾಗತಾಧ್ಯಕ್ಷರಾದ ಶ್ರೀ ಪಾಟೀಲ ತಿಮ್ಮನ ಗೌಡರು ಮಾನಪತ್ರವನ್ನು ಓದಿ ಅರ್ಪಿಸಿದರು. ಶ್ರೀ ವೀರಭದ್ರಪ್ಪ ಶಿರೂರ ಕಾರ್ಯದರ್ಶಿ ಇತರರು ಹರಿಜನ ನಿಧಿಗೆಂದು ಸಂಗ್ರಹಿಸಿದ ೧೪೦ ರೂ.ಗಳನ್ನು ಮಹಾತ್ಮರಿಗೆ ಅರ್ಪಿಸಿದರು.

ಓರ್ವ ಕಲಾವಿದನು ಮಹಾತ್ಮರ ಭಾವಚಿತ್ರವನ್ನು ಕೈಯಿಂದ ಬರೆದು ತಂದಿದ್ದನು ಅದನ್ನು ಅರ್ಪಿಸಲಾಯಿತು. ಹಣ್ಣು ಹಂಪಲಗಳನ್ನು ಕೊಡಲಾಯಿತು.

ಇವೆಲ್ಲವುಗಳನ್ನು ಮಹಾತ್ಮರು ಲಿಲಾವು ಮಾಡಿದರು. ಮಾನಪತ್ರವನ್ನು ೧೦ ರೂ.ಗಳಿಗೆ ಶ್ರೀ ಶಿರೂರ ವೀರಭದ್ರಪ್ಪನವರ ಧರ್ಮಪತ್ನಿ ಅನ್ನದಾನಮ್ಮನವರೂ, ಭಾವಚಿತ್ರ ವನ್ನು ಎಚ್.ಕೊಟ್ರಪ್ಪನವರೂ ೧೧೦ ರೂಪಾಯಿಗಳಿಗೆ ತಕ್ಕೊಂಡರು.

ನಂತರ ಮಹಾತ್ಮರು ಎಲ್ಲರಿಗೂ ಶಾಂತವಾಗಿರಲು ಕೇಳಿಕೊಂಡು ನಾಲ್ಕು ಮಾತು ಗಳನ್ನು ಹೇಳಿದರು.

ಕರ್ನಾಟಕದಲ್ಲಿ ಮಹಾತ್ಮಾ ಬಸವೇಶ್ವರರು ಎಂಟುನೂರು ವರ್ಷಗಳ ಹಿಂದೆ ಅಸ್ಪೃಶ್ಯತೆ ಯನ್ನು ಹೋಗಲಾಡಿಸಿದರು. ಅವರ ಅನುಯಾಯಿಗಳಾದ ನೀವು ಆ ಮಹಿಮರ ಪಾಠವನ್ನೇ ಅನುಸರಿಸಿ ನಡೆಯಿರಿ. ದರಿದ್ರರಲ್ಲಿ ಅನಾಥರಲ್ಲಿ ದೇವರಿದ್ದಾನೆ. ಅವರನ್ನು ಸಮಾನರಂತೆ ಕಾಣಬೇಕು ಎಂದು ಹೇಳಿದರು. ರೇಲ್ವೆ ನಿಲ್ದಾಣದಲ್ಲಿ ಗಾಡಿಯು ೨ ನಿಮಿಷಗಳವರೆಗೆ ಪ್ರತಿ ದಿನವೂ ನಿಲ್ಲುತ್ತಿತ್ತು. ಅಂದು ೩೦ ನಿಮಿಷಗಳವರೆಗೆ ನಿಂತಿತು. ಜನರು ಮಹಾತ್ಮರ ಸಂದರ್ಶನ ಪಡೆದು ಪುನೀತರಾದೆವೆಂದು ಹೇಳಿಕೊಳ್ಳುತ್ತಿದ್ದರು.

ಅಲ್ಲಿಂದ ರೈಲು ಗದುಗಿಗೆ ಹೊರಟಿತು.

–ವೀರಭದ್ರಪ್ಪ ಶಿರೂರು

* * *

## ೧೧. ಶ್ರೀ ಎಸ್.ವಾಸುದೇವರಾವ್, ಚಿತ್ರದುರ್ಗ ಇವರ ನೆನಪು

೧೯೨೬ನೇ ಇಸ್ವಿಯಲ್ಲಿ ಬೆಂಗಳೂರು ದೇಶೀಯ ವಿದ್ಯಾ ಶಾಲೆಯ ಕೆಲ ವಿದ್ಯಾರ್ಥಿಗಳು ಸ್ಥಾಪಿಸಿಕೊಂಡಿದ್ದ ಭಾರತ ವಿದ್ಯಾ ಸಂಘದ ಕಾರ್ಯದರ್ಶಿಯಾಗಿದ್ದ (ಎಸ್.ವಾಸು ದೇವರಾವ್) ನಾನು ಬರೆದ ಪತ್ರಕ್ಕೆ ಮಹಾತ್ಮಾ ಗಾಂಧೀಜಿಯವರು ಕೆಳಗೆ ಕಂಡಂತೆ ಉತ್ತರ ಬರೆದರು.

ಭಾಯಿ ವಾಸುದೇವ

ಚರಖಾ ಚಲಾನಾ, ಹಿಂದೀ ಶೀಖನಾ, ಕಸರತ್ ಕರನಾ ವಾಕ್ಪಟುತಾ ಬಢಾನಾ ಯೇ ಉದ್ದೇಶ ಅಚ್ಛೇ ಹೈಂ. ಶುಭ ಹೋ.

ಮೋ.ಕ.ಗಾಂಧೀ

ಈ ಪತ್ರವನ್ನು ದೇಶೀಯ ವಿದ್ಯಾ ಶಾಲೆಯು ತನ್ನ ಮಾಸಪತ್ರಿಕೆಯಲ್ಲಿ ಪ್ರಕಟಿಸಿದ್ದಿದೆ.

ಎಸ್.ವಾಸುದೇವರಾವ್

* * *

## ೧೨. ಶ್ರೀ ರಾ.ವೆಂ.ಕರಗುದರಿ ಅವರ ನೆನಹು

**ಗಾಂಧೀಜಿಯವರ ನಿರಾಡಂಬರತ್ವ**

೧೯೨೪ನೇ ಇಸ್ವಿಯಲ್ಲಿ ಬೆಳಗಾಂವಿಯಲ್ಲಿ ಕಾಂಗ್ರೆಸ್ ಅಧಿವೇಶನವು ಸೇರಿದಾಗ ನಾನು ಅಲ್ಲಿ ಹಿಂದೂಸ್ತಾನೀ ಸೇವಾದಲದ ಸ್ವಯಂ ಸೇವಕರಲ್ಲೊಬ್ಬನಾಗಿದ್ದೆ. ಆ ಸಮಯ ದಲ್ಲಿ ಒಮ್ಮೆ ನನಗೆ ಗಾಂಧೀಜಿಯವರ ವಾಸಸ್ಥಾನದ ಮುಂದೆ ಕಾವಲು ಮಾಡುವ ಕೆಲಸ ಬಂದಿತ್ತು.

ಗಾಂಧೀಜಿಯವರನ್ನು ನೋಡುವುದಕ್ಕಾಗಿ ಜನರು ತಂಡ ತಂಡಗಳಲ್ಲಿ ಅಲ್ಲಿಗೆ ಬರುತ್ತಿದ್ದರು. ಇಂತಹ ಪ್ರೇಕ್ಷಕರು ಬಹು ಸಂಖ್ಯೆಯಲ್ಲಿ ಸೇರಿದಾಗ ಗಾಂಧೀಜಿಯವರನ್ನು ಸಂದರ್ಶನಕ್ಕಾಗಿ ಹೊರಗೆ ತಂದು ನಿಲ್ಲಿಸುವ ವ್ಯವಸ್ಥೆ ಮಾಡಿದ್ದರು.

ಅಲ್ಲಿಗೆ ನಾನಿದ್ದಾಗ ಒಬ್ಬ ವೃದ್ಧ ಹಳ್ಳಿಗೆ ಬಂದ. "ಗಾಂಧೀಜಿಯವರು ಎಲ್ಲಿದ್ದಾರೆ" ಎಂದು ಕೇಳಿದೆ. ಅವರನ್ನು ಹಾಗೆ ನೋಡಲು ಆಗುವುದಿಲ್ಲ. ಬಹಳ ಜನರು ಕೂಡಿದಾಗ ಅವರನ್ನು ಹೊರಗೆ ಕರೆತಂದು ನಿಮಗೆ ದರ್ಶನ ಮಾಡಿಸುತ್ತಾರೆ. ಸ್ವಲ್ಪ ವೇಳೆ ಇಲ್ಲಿಯೇ ಕುಳಿತುಕೋ ಎಂದು ನಾನು ಹೇಳಿದೆ. ಅದಕ್ಕೆ ಅವರು ಸಿಟ್ಟಿನಿಂದ "ಏನಪ್ಪಾ ಮಾರಾಯಾ. ನಿಮ್ಮದೇ ರಾಜ್ಯ ಆತಲ್ಲ ಇಲ್ಲೆ. ನಾ ಹದಿನೈದು ಮೈಲಿ ನಡೆದು ಅವರನ್ನ ನೋಡಬೇಕಂತ ಬಂದೆ. ಲಗೂನ ಕಂಡರ ತಿರುಗಿ ಊರಿಗೆ ಹೋಗತೇನಿ. ಇಲ್ಲದ ಕಾಯದೇ ಹಚ್ಚಿದೆಲ್ಲಾ!" ಎಂದು ಒದರಿದ. ಅವನೊಡನೆ ಏನೇನೋ ಮಾತನಾಡುತ್ತಿರುವಾಗ ಯಾರೋ ದೊಡ್ಡ ಮನುಷ್ಯ ಗಾಂಧೀ ಕಡೆಗೆ ಬಂದರು. ಅವನನ್ನು ಒಳಗೆ ಕರೆದುಕೊಂಡು ಹೋಗುವಾಗ ಆ ನಿವಾಸದ ಬಾಗಿಲು ತೆರೆಯಿತು. ಎದುರಿಗೇ ಕುಳಿತಿದ್ದ ಗಾಂಧೀಜಿಯವರು ಕಾಣಿಸು ತ್ತಿದ್ದರು.

ಆಗ ನಾನು ಆ ಮುದುಕನನ್ನು ಕರೆದು 'ಏ ಮುದುಕಾ. ಬಾ ಇಲ್ಲಿ. ಅನಾಯಾಸ ಗಾಂಧೀ ಕಾಣಸಾಕ ಹತ್ಯಾನ ಬಾ. ನೋಡು' ಎಂದು ತೋರಿಸಿದೆ. ಅದನ್ನು ಕಂಡು ಎಡಬಲಕಿನ ಜನರು ಬಂದು, ಗಾಂಧೀ ದರ್ಶನ ಪಡೆದರು ಮತ್ತು ಭಕ್ತಿಯಿಂದ

ಅಲ್ಲಿಂದಲೇ ನಮಸ್ಕರಿಸಿದರು. ಆ ಮುದಕನೂ ಬಂದು ನೋಡಿದ. ಆದರೆ ಅವನಿಗೆ ಅದರಿಂದ ತೃಪ್ತಿಯಾಗಲಿಲ್ಲ. ಗಾಂಧೀ ಅಂದರೆ ಹೇಗಿರಬಹುದು ಎಂಬ ಬಗ್ಗೆ ಅವನು ಸ್ವತಃ ಒಂದು ಕಲ್ಪನಾ ಚಿತ್ರ ಮಾಡಿಕೊಂಡಿದ್ದ. ಆಜಾನುಬಾಹು, ಭವ್ಯವ್ಯಕ್ತಿ, ಉತ್ತಮ ಪೋಷಾಕು ಹಾಕಿದವ, ದೊಡ್ಡ ಮೀಸೆಯಿದ್ದವ ಮೊದಲಾಗಿ ಅವನು ತಿಳಿದುಕೊಂಡಿದ್ದ. ಅವನಿಗೆ ನಾನು ತೋರಿಸಿದ ವ್ಯಕ್ತಿಯನ್ನು ಕಂಡು "ಏ ಹುಡುಗಾ, ಯಾರಿಗೆ ಟೋಪಿ ಹಾಕಬೇಕೂಂತ ಮಾಡಿದಿ? ಯಾರನರ ತೋರಿಸೀ ಗಾಂಧೀ ಅಂತ ಹೇಳಿ ನನ್ನ ಕಳಿಸಬೇಕೂಂತ ಮಾಡಿಯೇನು?" ಎಂದು ನನ್ನ ಮೇಲೆ ಏರಿ ಬಂದ.

ಅವನಿಗೆ ಅದೇ ವ್ಯಕ್ತಿ ಗಾಂಧೀಜಿ ಎಂಬ ಪೂರ್ತಿ ಮನವರಿಕೆ ಮಾಡಿಕೊಡಲು ನನ್ನಲ್ಲಿ ಬೇರೆ ಉಪಾಯವೇ ಇರಲಿಲ್ಲ. ಆಗ 'ಏ ಮುದುಕಾ, ಗಾಂಧೀಯುವರನ್ನು ನೀ ನೋಡಿಯೇ ಇಲ್ಲ. ಅವರ ಫೋಟೋ ನೋಡಿಯೇನು? ಈ ಜನರನ್ನು ಕೇಳು. ಎಂದು ನಾನು ಅವನಿಗೆ ಕೂಡಿದ ಜನರ ಗಂಟು ಹಾಕಿ ಪಾರಾಗಬೇಕಾಯಿತು.

**ಗಾಂಧೀಜಿಯವರ ಪ್ರಾರ್ಥನಾ ಪ್ರಸಂಗ**

೧೯೩೬ನೇ ಇಸ್ವಿಯಲ್ಲಿ ಲಖನೌ ಪಟ್ಟಣದಲ್ಲಿ ಕಾಂಗ್ರೆಸ್ ಅಧಿವೇಶನವು ನಡೆಯಿತು. ಹಿಂದೂಸ್ತಾನಿ ಸೇವಾದಲ ಸ್ವಯಂ ಸೇವಕರಾದ ನಾವು, ತಿಂಗಳೊಪ್ಪತ್ತು ಮೊದಲೇ, ಅಧಿವೇಶನ ಸ್ಥಳಕ್ಕೆ ಹೋಗುತ್ತಿದ್ದೆವು.

ಆಗ ಪಂ. ಜವಾಹರಲಾಲ ನೆಹರೂರವರ ಆಪ್ತರಾದ ಶ್ರೀ ಕೌಲ ಎಂಬವರ ಸ್ನೇಹವು ನನಗುಂಟಾಯಿತು. ನನ್ನ ಹಾಡುಗಾರಿಕೆಗೆ ಅವರು ಮೆಚ್ಚಿಕೊಂಡಿದ್ದರು. ಅವರಿಗೆ ಗಾಂಧೀಜಿಯವರ ಪರಿವಾರದಲ್ಲಿ ಒಳ್ಳೇ ಸಲುಗೆಯಿತ್ತು. ಒಂದು ದಿನ ಕೌಲರು "ನಾಳೆ ನೀವು ಗಾಂಧೀಜಿಯವರ ಪ್ರಾರ್ಥನಾ ಸಭೆಗೆ ಸ್ವಲ್ಪ ವೇಳೆ ಮುಂಚಿತವಾಗಿಯೇ ಬನ್ನಿರಿ. ಅಲ್ಲಿ ಒಂದು ಪದ ಅನ್ನುವ ಪ್ರಸಂಗವನ್ನು ನಿಮಗೆ ಕಲ್ಪಿಸಿ ಕೊಡುವೆನು" ಎಂದು ಹೇಳಿದರು.

ಅದರಂತೆ ನಾನು ತೀರ ನಸುಕಿನಲ್ಲಿ ಎದ್ದು ಪ್ರಾರ್ಥನಾ ಸ್ಥಳಕ್ಕೆ ಹೋಗಿ ಕೌಲರನ್ನು ಭೆಟ್ಟಿಯಾದೆ. ಅವರು ನನ್ನ ಪದದ ವ್ಯವಸ್ಥೆಯನ್ನು ಆಗಲೇ ಮಾಡಿಟ್ಟಿದ್ದರು. ನನ್ನನ್ನು ಒಯ್ದು ಪ್ರಾರ್ಥನೆ ಹೇಳುವ ತಂಡದ ಹತ್ತಿರ ಕುಳ್ಳಿರಿಸಿದರು. ನನಗೆ ಸೂಚನೆ ಬರುತ್ತಲೇ 'ಮೇರೆ ಗಿರಿಧರ ಗೋಪಾಲ' ಎಂಬ ಮೀರಾಬಾಯಿಯ ಪದವನ್ನು ಅಂದೆನು. ಗಾಂಧೀಜಿಯವರು ಕಣ್ಣು ಮುಚ್ಚಿಕೊಂಡು ತಾದಾತ್ಮ್ಯದಲ್ಲಿ ಕುಳಿತು ಆ ಪದವನ್ನು ಕೇಳಿದರು.

ಆ ಕಾರ್ಯಕ್ರಮವು ಮುಗಿದ ನಂತರ ಶ್ರೀ ಕೌಲರು ಬಂದು ಒಳ್ಳೇ ಆನಂದದಲ್ಲಿ ನಗುತ್ತ ನನ್ನ ಕೈ ಕುಲುಕಿದರು. ಮತ್ತು "ನಿಮ್ಮ ಪದವು ಬಹಳ ಆನಂದದಾಯಕವಾಗಿತ್ತು. ಗಾಂಧೀಜಿಯವರೂ ಸಂತೋಷಪಟ್ಟರು. ನಾಳೆ ಪುನಃ ಇದರಂತೆ ಬನ್ನಿರಿ. ಮತ್ತೆ ನಿಮ್ಮ ಪದ ಆಗಬೇಕು" ಎಂದು ಹೇಳಿದರು.

ನನಗೂ ಅದರಿಂಥ ಪರಮಾನಂದವಾಯಿತು. ಮರುದಿವಸ ಪುನಃ ಹೋದೆ. ಆಗ ಕೌಲ ಅವರು, ಕ್ಷಮಿಸಿರಿ ನಿನ್ನೆ ನಿಮಗೆ ಪದ ಅನ್ನಲು ಕೊಟ್ಟಿದ್ದನ್ನು ಕಂಡು ಬಹಳ ತರುಣ-ತರುಣಿಯರು ಪದ ಅನ್ನಲು ಮುಂದೆ ಬಂದರು. ಆದ್ದರಿಂದ ಹಾಗೆ ಇತರರಿಗೆ ಪದ ಅನ್ನಲು ಕೊಡಬಾರದು ಎಂಬ ನಿರ್ಧಾರಕ್ಕೆ ಪ್ರಾರ್ಥನಾ ವಿಭಾಗದವರು ಬಂದು ಬಿಟ್ಟರು. ಹೀಗಾಗಲು ಕಾರಣವೆಂದರೆ ಹಿಂದಕ್ಕೆ ಆಸ್ಪದ ಸಿಕ್ಕಾಗ, ಒಬ್ಬ ಹುಡುಗ ಒಂದು ಸಿನೇಮಾ ಪದವನ್ನು ಅಂದುಬಿಟ್ಟ' ಎಂದು ವಿಷಾದದಿಂದ ನನಗೆ ಹೇಳಿದರು.

ನಾನು ಕೌಲರಿಗೆ "ಆಗಲಿ ಕೌಲರೇ, ಇದರಲ್ಲೇನು ವಿಷಾದದ ಮಾತಿಲ್ಲ. ಹೀಗಾಗುವುದುಂಟು. ಹಾಗಾಗುವುದರೊಳಗೆ ನಿಮ್ಮ ಕಾರಣದಿಂದ ನನಗೆ, ಗಾಂಧೀಜಿಯವರ ಪ್ರಾರ್ಥನಾ ಕಾಲದಲ್ಲಿ ಪದ ಹಾಡಲು ಒಮ್ಮೆಯಾದರೂ ಸುಸಂಧಿ ದೊರೆಯಿತಲ್ಲ! ಅದಕ್ಕಾಗಿ ನಾನು ನಿಮಗೆ ತುಂಬ ಉಪಕೃತನಾಗಿರುವೆನು. ಮತ್ತು ಆ ಪ್ರಸಂಗವನ್ನು ನನ್ನ ಜೀವನದಲ್ಲಿಯ ಒಂದು ಅಮೂಲ್ಯ ವೇಳೆ ಎಂಬುದಾಗಿ ನೆನಪಿಟ್ಟುಕೊಳ್ಳುವೆನು." ಎಂದು ಹೇಳಿದೆ.

**ಗಾಂಧೀಜಿಯವರ ಸನ್ನಿಧಿಯಲ್ಲಿ**

ಅಂದೇ ಶ್ರೀ ಕೌಲರು, "ನಿಮಗೆ ಗಾಂಧೀಜಿಯವರ ಭೆಟ್ಟಿ ಮಾಡಿಸುತ್ತೇನೆ ಬನ್ನಿರಿ" ಎಂದು (ಲಖನೌದಲ್ಲಿಯೇ) ನನ್ನನ್ನು ಕರೆದುಕೊಂಡು ಹೋಗಿ, ಗಾಂಧೀಜಿಯವರ ಮುಂದೆಯೇ ಕುಳ್ಳಿರಿಸಿಬಿಟ್ಟರು.

ಆ ದಿವಸ ಸೋಮವಾರವಾಗಿತ್ತು. ಗಾಂಧೀಜಿಯವರು ಅಂದು ಮೌನವನ್ನು ಆಚರಿಸುತ್ತಿದ್ದರು. ಆದರೆ ಅವರ ಅವಶ್ಯಕ ವ್ಯವಹಾರವು ಕೈಸನ್ನೆಯಿಂದಲೋ, ಬರೆಹದ ಮೂಲಕವೋ ನಡೆಯುತ್ತಿತ್ತು.

ನಾನು ಅಲ್ಲಿ ಹೋಗಿ ಕುಳಿತಾಗ, ಸರ್ದಾರ್ ವಲ್ಲಭಭಾಯಿಯವರದೂ ಮತ್ತು ಗಾಂಧೀಜಿಯವರದೂ ಏನೋ ಮಾತುಕತೆ ನಡೆದಿತ್ತು. ವಲ್ಲಭಭಾಯಿಯವರು ಒಳ್ಳೇ ದೊಡ್ಡ ಧ್ವನಿಯಲ್ಲಿ ಹಾವಭಾವದೊಡನೆ ಮಾತಾಡುತ್ತಿದ್ದರು. ಗಾಂಧೀಜಿಯವರು ಹಾವಭಾವ, ಕೈಸನ್ನೆ, ಮುಗುಳು ನಗೆಯೊಡನೆ ಅವರಿಗೆ ಉತ್ತರ ಕೊಡುತ್ತಿದ್ದರು.

ಅವರಿಗೆ ನನ್ನ ಕಡೆ ಲಕ್ಷ್ಯವೇ ಇರಲಿಲ್ಲ. ಕೌಲರೊಡನೆ ನಾನು ಪ್ರವೇಶಿಸಿದಾಗ ಅವರು ನನ್ನ ಬಗ್ಗೆ ಕುತೂಹಲವನ್ನು ವ್ಯಕ್ತ ಮಾಡಲಿಲ್ಲ. ಕೌಲರ ಪರಿವಾರದವನೇ ಇರಬೇಕೆಂದು ತಮ್ಮ ಮಾತಿನಲ್ಲಿಯೇ ಸಾಗಿದ್ದರು.

ಅವರದು ನನ್ನ ಕಡೆಗೆ ಲಕ್ಷ್ಯವು ಹೊರಳಿದ್ದರೂ ಕಷ್ಟವೇ ಇತ್ತು. ಏಕೆಂದರೆ ಏನೂ ಕೆಲಸವಿಲ್ಲದೆ ಅವರು ಮೌನದಿಂದಿರುವಾಗ, ಅವರ ಅಮೂಲ್ಯವೇಳೆಯನ್ನು ಹರಣ ಮಾಡಿದ ಪಾಪವು ನನಗೆ ಬರುತ್ತಿತ್ತು.

ಅಷ್ಟೇ ಅಲ್ಲದೆ ಅವರು ಮಾತಾಡಿಸಿದ್ದರೆ ಒಂದು ದೊಡ್ಡ ಪರೀಕ್ಷೆಗೆ ನನ್ನನ್ನು ಗುರಿಪಡಿಸಿದಂತಾಗುತ್ತಿತ್ತು. ಆ ಮಹಾ ವ್ಯಕ್ತಿಯೊಡನೆ ಮಾತನಾಡುವುದಕ್ಕೆ ನನ್ನ ಹತ್ತಿರ ಯಾವ ಸಾಮಗ್ರಿಯಾದರೂ ಇರಲಿಲ್ಲ.

ಆ ಪ್ರಸಂಗವೇ ಬಂದಿದ್ದರೆ ಕೌಲರು ನನ್ನ ಸಹಾಯಕ್ಕೆ ಬರುತ್ತಿದ್ದರು ಎಂಬ ಧೈರ್ಯವು ನನಗಿತ್ತು.

ಗಾಂಧೀಜಿಯವರೊಡನೆ ಮಾತನಾಡಬೇಕೆಂಬ ಬಗ್ಗೆ ನನ್ನಲ್ಲಿ ಅಂತಹ ಮಹಾಹಟ ಇರಲಿಲ್ಲ. ಅದು ಅಲ್ಲದೆ ಎದ್ದು ಬಂದರೆ ಸಾಕು ಎಂಬ ಹವಣಿಕೆಯಲ್ಲಿ ನಾನಿದ್ದೆ.

ವಲ್ಲಭಭಾಯಿಯವರೊಡನೆ ನಡೆದ ಗಾಂಧೀಜಿಯವರ ಮಾತು ಬೇಗನೆ ಮುಗಿಯುವಂತೆಯೂ ಕಾಣಲಿಲ್ಲ. ಆಗ ನಾನು ಕೌಲರ ಕಡೆಗೆ ತಿರುಗಿ "ಹೋಗೋಣ ನಮ್ಮಿಂದ ಅವರಿಗೆ ತೊಂದರೆ ಬೇಡ. ಮತ್ತೆ ನೋಡೋಣ" ಎಂದು ಹೇಳಿ ಅವರೊಡನೆ ಹೊರಗೆ ಬಂದುಬಿಟ್ಟೆ.

ಇಷ್ಟರಿಂದಲೇ ನನಗೆ ಮಹದಾನಂದವಾಯಿತು. ಆ ಮಹಾ ಪುರುಷನನ್ನು ಅಷ್ಟು ಹತ್ತಿರದಿಂದಲೇ ನೋಡಲು ಮತ್ತು ಅವರ ಅಷ್ಟು ಹತ್ತಿರ ಹೋಗಿ ಕುಳಿತಿರಲು ಸಂಧಿ ದೊರೆಯಿತ್ತಲ್ಲ ಎಂದು ಸಂತೋಷಪಟ್ಟೆ.

**ರಾ.ವೆಂ. ಕರಿಗುದರಿ**

* * *

## ೧೩. ಶ್ರೀ ಪರಮಣ್ಣಾ ಹೊಸಮನಿ ಅವರ ನೆನಹು

(ಶ್ರೀ ಪರಮಣ್ಣ ಹೊಸಮನಿ ಮತ್ತು ಅವರ ಪತ್ನಿ ಇಬ್ಬರೂ ವಾರ್ಧಾ-ಸೇವಾಗ್ರಾಮ ಆಶ್ರಮದಲ್ಲಿ ಗಾಂಧೀಜಿಯ ಬಳಿ ಕೆಲವೊಂದು ದಿನ ಇದ್ದರು. ಅವರ ಮೇಲೆ ಮೊಟ್ಟ ಮೊದಲು ಗಾಂಧೀಜಿಯ ಪ್ರಭಾವ ಆದ ವಿಷಯವನ್ನು ಶ್ರೀಯುತರು ಹೀಗೆ ಹೇಳಿದ್ದಾರೆ. ಅವರು ಇನ್ನೂ ಹೆಚ್ಚಾಗಿ ತಮ್ಮ ನೆನಹುಗಳನ್ನು ಬರೆದು ಕಳಿಸಿದ್ದರೆ ಚೆನ್ನಾಗಿರುತ್ತಿತ್ತು).

೧೯೨೦ರಲ್ಲಿ ಮಹಾತ್ಮಾಜಿಯವರು ಧಾರವಾಡಕ್ಕೆ ಬರುವ ಸುದ್ದಿಯನ್ನು ಕೇಳಿ ನಾನು ಅವರ ದರ್ಶನವನ್ನು ಮಾಡಿಕೊಂಡು ಅವರ ಭಾಷಣವನ್ನು ಕೇಳಿಕೋಬೇಕೆಂದು ಅಲ್ಲಿಗೆ ಹೋಗಿದ್ದೆನು. ಮಹಾತ್ಮಾಜಿಯವರು ಧಾರವಾಡಕ್ಕೆ ಶೌಕತ್ ಆಲಿಯವರ ಜೊತೆಗೆ ಬಂದಿದ್ದರು. ಅವರು ಮೊದಲನೆಯ ದಿನ ಉಳವಿ ಬಸಪ್ಪನ ಗುಡ್ಡದಲ್ಲಿ ಸ್ಟೇಶನ್‌ರೋಡಿನ ಮಗ್ಗಲಿಗೆ ಭಾಷಣ ಮಾಡಿದರು. ಮರುದಿವಸ ಕರಗುದರಿ ನಾರಾಯಣರಾಯರ ಮನೆಯ ಹತ್ತಿರ ಇರುವ ಗಾಯಕವಾಡನ ಬಂಗ್ಲೆಯಲ್ಲಿ ಜನರು ಅವರ ಕೂಡ ಪ್ರಶ್ನೋತ್ತರ ಮಾಡುವ ಸಮಯದಲ್ಲಿ ಹೊರಗಿನಿಂದ ಯಾರೋ ಕಿಡಿಗೇಡಿಗಳು ಆ ಬಂಗ್ಲೆಯ ಮೇಲೆ ಕಲ್ಲು ಒಗೆದರು. ಆ ಕಲ್ಲಿನ ಸಪ್ಪಳಕ್ಕೆ ಜನರಲ್ಲಿ ಸ್ವಲ್ಪ ಗಡಿಬಿಡಿಯಾಯಿತು. ಇದನ್ನು ಕಂಡು ಮಹಾತ್ಮಾಜಿಯವರು ಆ ಸುದ್ದಿಯನ್ನು ಕೇಳಿ ಕಲ್ಲು ಬೀಳುವುದು ಇಷ್ಟೇ ಏಕೆ ನಮ್ಮ ಮೇಲೆ ಸ್ವಾತಂತ್ರ್ಯದ ಸಲುವಾಗಿ ಗುಂಡಿನ ಮಳೆ ಬಿದ್ದರೂ ನಾವು ಸಹನ ಮಾಡಿಕೊಳ್ಳಬೇಕು ಎಂದು ಅಂದರು. ಆ ಮಾತು ಅಲ್ಲಿ ಕೂಡಿದ ಜನರ

ಮೇಲೆ ಒಳ್ಳೇ ಪರಿಣಾಮ ಮಾಡಿತು. ಅದರಂತೆ ನನ್ನ ಮನಸ್ಸಿನ ಮೇಲೂ ಪರಿಣಾಮ ವಾಯಿತು. ಆವತ್ತಿನಿಂದ ನಾನು ಸ್ವರಾಜ್ಯದ ಸಲುವಾಗಿ ನಡಾಕಟ್ಟಿ ನಿಂತೆನು.

**ಪರಮಣ್ಣ ಹೊಸಮನಿ**

* * *

## ೧೪. ವಿ.ಡಿ.ಶಾಸ್ತ್ರಿ, ಹಿರೇಬಾಗೇವಾಡಿ ಅವರ ನೆನಹು

**ಮಹಾತ್ಮಾ ಗಾಂಧೀಜಿಯವರ ಆಗಮನ :**

ಮಹಾತ್ಮರು ಹರಿಜನರ ಫಂಡಿಗೂ ಮತ್ತು ಬಿಹಾರ ಭೂಕಂಪ ಸಂತ್ರಸ್ತರ ಫಂಡಿಗೂ ನಮ್ಮ ಕರ್ನಾಟದಲ್ಲಿ ಪ್ರವಾಸ ಕೈಕೊಂಡಾಗ ಧಾರವಾಡ, ಸವದತ್ತಿ, ಬೈಲಹೊಂಗಲ, ಸಂಪಗಾಂವಿಗಳ ಮೇಲಿಂದ ಹಿರೇಬಾಗೇವಾಡಿಗೆ ತಾ.೪-೩-೧೯೩೪ ಇಸ್ವಿ ರವಿವಾರ ಸಾಯಂಕಾಲ ೮-೦೪ ಗಂಟೆಗೆ ಆಗಮಿಸಿದರು. ಇವರೊಡನೆ ಠಕ್ಕರಬಾಪಾ, ಗಂಗಾಧರರಾವ ದೇಶಪಾಂಡೆಯವರಿದ್ದರು. ಇವರ ಹಿಂದಿನ ಕಾರಿನಲ್ಲಿ ಜರ್ಮನಿಯ ಪ್ಲೂಟೋ ಅವರೂ ಬಂದು ಇವರನ್ನು ಕೂಡಿಕೊಂಡರು.

ಮಹಾತ್ಮರು ನಮ್ಮ ಊರಿಗೆ ಬರುವರೆಂಬ ವಾರ್ತೆಯು ನಮಗೆ ಮೊದಲೇ ಗೊತ್ತಾಗಿದ್ದರಿಂದ ಊರ ಬದಿಗಿರುವ ಬೈಲಹೊಂಗಲ ರಸ್ತೆಯ ಮೋಟಾರ ಸ್ಟ್ಯಾಂಡಿನ ಹತ್ತಿರ ಸುಶೋಭೀತವಾದ ಮಂಟಪವನ್ನು ರಚಿಸಲಾಗಿತ್ತು. ಮಹಾತ್ಮರ ದರ್ಶನಾಪೇಕ್ಷೆ ಯಿಂದ ಸುತ್ತಮುತ್ತಲಿನ ಹಳ್ಳಿಗಳಿಂದ ಐದಾರು ಸಾವಿರ ಜನರು ಬಂದಿದ್ದರು. ಅವರಲ್ಲಿ ಸ್ತ್ರೀಯರ ಸಂಖ್ಯೆಯೂ ಚೆನ್ನಾಗಿದ್ದಿತು.

ಮಹಾತ್ಮರು ಇನ್ನೂ ೫ ಮಿನಿಟುಗಳಲ್ಲಿ ಬರುವುರೆಂಬುದನ್ನು ಮುಂಚಿತವಾಗಿ ತಿಳಿಸಲು ಸರದಾರ ವೀರನಗೌಡ ಪಾಟೀಲ (ಹರಿಜನ ಸೇವಾ ಸಂಘದ ಅಧ್ಯಕ್ಷರು) ಮತ್ತು ಬೆಳಗಾಂವ ಕಾಂಗ್ರೆಸ್ಸಿನ ಮುಂದಾಳುಗಳಾದ ಶ್ರೀ ಕೆ.ಎಸ್.ಪಾಟೀಲ ಅವರು ಬಂದು ಸಭೆಯ ಶಿಸ್ತಿನ ಕ್ರಮಗಳನ್ನೆಲ್ಲ ಹೇಳಿಕೊಟ್ಟರು. ಮುಂದೆ ಐದೇ ನಿಮಿಷಗಳಲ್ಲಿ ಮಹಾತ್ಮರು ಆಗಮಿಸಿದರು. ಅವರು ಸ್ಥಾನಾಪನ್ನರಾದ ಕೂಡಲೇ ಹಿರೇಬಾಗೇವಾಡಿಯ ಕಾಂಗ್ರೆಸ್ ಕಾರ್ಯಕರ್ತರಾದ ಶ್ರೀ ವೀರಭದ್ರಪ್ಪ ದುಂಡಪ್ಪ ಶಾಸ್ತ್ರಿ ಅವರು ಮಹಾತ್ಮರಿಗೆ ಪುಷ್ಪಮಾಲೆಯನ್ನರ್ಪಿಸಿ ಹರಿಜನ ಫಂಡಿಗಾಗಿ ಕೂಡಿಸಿದ ೧೫೧ ರೂಪಾಯಿಗಳನ್ನೂ ಬಿಹಾರ ಫಂಡಿಗಾಗಿ ೭೫ ರೂಪಾಯಿಗಳನ್ನೂ ಅರ್ಪಿಸಿದರು. ಆಮೇಲೆ ಮಹಾತ್ಮರು ಹರಿಜನೋದ್ಧಾರ, ಸಂತ್ರಸ್ತರಿಗೆ ಸಹಾಯ ಇವುಗಳ ಬಗೆಗೆ ೫ ನಿಮಿಷಗಳವರೆಗೆ ಮಾತಾಡಿದರು. ಇಂದು ರಾತ್ರಿ ೯ ಗಂಟೆಗೆ ಇವರ ಮೌನವ್ರತವಿದ್ದರಿಂದ ಹೆಚ್ಚು ವೇಳೆ ಕಳೆಯಲು ಅವಕಾಶವಿರಲಿಲ್ಲ. ಮಹಾತ್ಮರು ಹಿರೇಬಾಗೇವಾಡಿಯ ಸಭೆಯ ಶಿಸ್ತು,

ಶಾಂತತೆಗಳನ್ನು ನೋಡಿ ಬಹಳೇ ಹರುಷಿತರಾಗಿ ತಮ್ಮ ಆನಂದೋದ್ಗಾರವನ್ನು ತೆಗೆದು ಮುಂದೆ ಬೆಳಗಾಂವಿಗೆ ಪ್ರಯಾಣ ಬೆಳೆಸಿದರು.

ಎ.ಡಿ.ಶಾಸ್ತ್ರಿ
ಹಿರೇಬಾಗೇವಾಡಿ

* * *

## ೧೫. ಶ್ರೀ ಸಿ.ವಿ.ಹಿರೇಮಠ

### ಸಂಪಾದಕ : "ಕರ್ನಾಟಕ ಬಂಧು" ಗದಗ ಅವರ ನೆನಹು

ಮಹಾತ್ಮಾ ಗಾಂಧೀಜಿ ಯರವಡಾ ಜೇಲಿನಲ್ಲಿ ಇದ್ದಾಗ ನಾನು ಹಾಗೂ ಈಗ ಚಿಕ್ಕ ನೀರಾವರಿ ಶಾಖೆಯ ಸಹ ಮಂತ್ರಿಗಳಾಗಿರುವ ಮಾನ್ಯ ಶ್ರೀ ಅಂದಾನಪ್ಪ ದೊಡ್ಡಮೇಟಿ ಯವರು ಹರಿಜನ ಕಾರ್ಯಕ್ರಮದ ಬಗ್ಗೆ ಮಾರ್ಗದರ್ಶನ ಪಡೆಯುವುದಕ್ಕಾಗಿ ಅವರ ಭೆಟ್ಟಿಗೆ ಹೋಗಿದ್ದೆವು. ಆಗ ನಾವಿಬ್ಬರೂ ನಮ್ಮ ಜೊತೆಗೆ ನಮ್ಮ ನಮ್ಮ ಹೆಣ್ಣು ಮಕ್ಕಳನ್ನು ಕರೆದುಕೊಂಡು ಹೋಗಿದ್ದೆವು. ಗಾಂಧೀಜಿಯವರ ಸಂದರ್ಶನದ ಪರವಾಗಿ ನಮ್ಮಿಬ್ಬರಿಗೆ ಮಾತ್ರ ಇದ್ದಿತು. ಆದರೆ ಜೇಲಿನವರು ನಮ್ಮನ್ನು ನಾಲ್ಕು ಜನರನ್ನೂ ಒಳಗೆ ಬಿಟ್ಟರು. ಅರ್ಧ ತಾಸಿನವರೆಗೆ ಸಂದರ್ಶನ ನಡೆಯಿತು. ನಾವು ತಿರುಗಿ ಬರುವಾಗ ಗಾಂಧೀಜಿ ಯವರು ನಮ್ಮ ಹೆಣ್ಣುಮಕ್ಕಳನ್ನು (ಪರವಾನಗಿ ಇಲ್ಲದೆ) ಕರೆದುಕೊಂಡು ಬರಬಾರದಿತ್ತೆಂದು ನಮಗೆ ತಿಳಿಸಿದರು.

ಮರುದಿವಸ ಪತ್ರಿಕೆಯಲ್ಲಿ ಗಾಂಧೀಜಿಯವರು, "ನನ್ನ ಸಂದರ್ಶನಕ್ಕೆ ಬರುವವರು ತಮ್ಮ ಜೊತೆಗೆ ಪರವಾನಗಿ ಇಲ್ಲದೆ ಬೇರೆ ಜನರನ್ನು ಕರೆದುಕೊಂಡು ಬರುತ್ತಾರೆ. ಇದು ತಪ್ಪು, ಕಾನೂನಿಗೆ ವಿರುದ್ಧವಾದುದು. ಯಾರೂ ಇನ್ನು ಮುಂದೆ ಹೀಗೆ ಮಾಡ ಬಾರದು" ಎಂಬಾಶಯದ ಪ್ರಕಟಣೆ ಕೊಟ್ಟಿದ್ದರು. ಕಾಯ್ದೆ ಕಾನೂನುಗಳನ್ನು ಗಾಂಧೀಜಿ ಯವರು ಎಷ್ಟು ಸೂಕ್ಷ್ಮ ರೀತಿಯಿಂದ ಪಾಲಿಸುತ್ತಿದ್ದರೆಂಬುವಕ್ಕೆ ಇದು ಉತ್ತಮ ನಿದರ್ಶನವಾಗಿದೆ.

ಸಿ.ವಿ.ಹಿರೇಮಠ

* * *

## ೧೬. ಉಮಾಬಾಯಿ ಕುಂದಾಪುರ, ಹುಬ್ಬಳ್ಳಿ ಇವರ ನೆನಹು

### ಸ್ವಯಂ ಸೇವಿಕೆಯರು

೧೯೨೪ನೇ ಇಸವಿಯಲ್ಲಿ ಬೆಳಗಾಂವಿಯಲ್ಲಾದ ಕಾಂಗ್ರೆಸ್ ಅಧಿವೇಶನಕ್ಕೆ ಮಹಾತ್ಮಾ ಗಾಂಧೀಜಿಯವರೇ ಅಧ್ಯಕ್ಷರಾಗಿದ್ದರು.

ಅಧಿವೇಶನಕ್ಕಾಗಿ ಸ್ವಯಂ ಸೇವಕ-ಸೇವಿಕೆಯರ ಉತ್ತಮ ಸೇವೆಯನ್ನು ಒದಗಿಸಿದ ಡಾ. ಹರ್ಡೀಕರ್, ಸೇವಾದಳದ ಮಹತ್ವವನ್ನು ದೇಶಕ್ಕೆ ಮನಗಾಣಿಸಿ ಕೊಟ್ಟರು.

ಅಲ್ಲಿ ಕೆಲಸ ಮಾಡಿದ ಸ್ವಯಂ ಸೇವಿಕೆಯರ ಪಡೆಯ ನಾಯಕತ್ವವನ್ನು ಡಾ. ಹರ್ಡೀಕರರು ನನಗೆ ಒಪ್ಪಿಸಿದ್ದರು. ನಾನು ಒಮ್ಮೆ ಅಧಿವೇಶನದ ಸಮಯದಲ್ಲಿಯೇ ಮಹಾತ್ಮಾಜಿಯವರ ಗುಡಿಸಲಿಗೆ ಹೋಗಿ ಸೇವಿಕೆಯರ ಕಾರ್ಯದ ಬಗ್ಗೆ ಅವರ ಅಭಿಪ್ರಾಯವನ್ನು ತಿಳಿದುಕೊಳ್ಳಲು ಯತ್ನಿಸಿದೆ. ಆಗ ಮಹಾತ್ಮಾಜಿ ಮತ್ತು ನನ್ನ ನಡುವೆ ಹೀಗೆ ಸಂಭಾಷಣೆ ನಡೆಯಿತು.

ಮಹಾತ್ಮಾಜಿ : ಎಷ್ಟು ಸೇವಿಕೆಯರು ಇಲ್ಲಿದ್ದಾರೆ ಮತ್ತು ಅವರು ಎಷ್ಟು ದಿವಸಗಳಿಂದ ಇಲ್ಲಿರುವರು?

ನಾನು : ೧೫೦ ಸೇವಿಕೆಯರು ಇರುವರು. ೧೦ ದಿವಸಗಳಿಂದ ಇಲ್ಲಿಯೇ ವಾಸಿಸುವರು.

ಮಹಾತ್ಮಾಜಿ : "ಇವರು ಚೆನ್ನಾಗಿಯೇ ಕೆಲಸ ಮಾಡುತ್ತಿರುವರೆಂದೂ, ಶಿಸ್ತಿನಿಂದ ಧ್ವಜವಂದನಾ ಕಾರ್ಯಕ್ರಮವನ್ನು ಜರುಗಿಸುವುದು, ಅಚ್ಚುಕಟ್ಟುತನದಿಂದ ಊಟದ ಕಾಲಕ್ಕೆ ಬಡಿಸುವುದು, ಮೊದಲಾದ ಅವರ ಕಾರ್ಯಕ್ರಮಗಳನ್ನು ನೋಡಿ ತಮಗೆ ಆಶ್ಚರ್ಯ ಹಾಗೂ ಮೆಚ್ಚಿಗೆ ಉಂಟಾಗಿದೆಯೆಂದೂ ನನಗೆ ಕೆಲವು ಪ್ರತಿನಿಧಿಗಳು ಹೇಳಿದರು.

"ಈ ಮಹಿಳೆಯರ ಪಾಲಕರು ಇವರಿಗೆ ಇಂತಹ ರಾಜಕೀಯ ಸಂಸ್ಥೆಯಲ್ಲಿ ಈ ತರಹದ ಸಾಮೂಹಿಕ ಕೆಲಸ ಮಾಡಲು ಅಪ್ಪಣೆ ಕೊಟ್ಟಿದ್ದು ಮತ್ತು ಈ ಸೋದರಿಯರು ಹೀಗೆ ಮನಸ್ಸಿನಿಂದ ಕಾರ್ಯ ಮಾಡುತ್ತಿರುವುದು ಇದೇ ಮೊದಲಾದ ಸಂಗತಿಗಳನ್ನು ಗಮನಿಸಿದರೆ ಬ್ರಿಟಿಷ್ ಆಳಿಕೆಯ ಬಗ್ಗೆ ಭಾರತೀಯರಿಗೆ ನಿಜವಾದ ಬೇಸರ ಉಂಟಾಗಿರುವುದೆಂಬ ಮಾತು ಚೆನ್ನಾಗಿ ವ್ಯಕ್ತವಾಗುವುದು.

"ಇವರು ತಿರುಗಿ ಮನೆಗೆ ಹೋದಬಳಿಕ ಸಹ ನೂಲುವುದು, ಖಾದಿ ಧರಿಸುವುದು, ಸಾಧ್ಯವಾದಷ್ಟು ಸ್ವದೇಶಿ ಸಾಮಾನು ಕೊಳ್ಳುವುದು, ಕಾಂಗ್ರೆಸ್ ಸಭಾಸದಸ್ಯರಾಗುವುದು ಮತ್ತು ಇತರರನ್ನು ಸಭಾಸದಸ್ಯರನ್ನಾಗಿ ಮಾಡುವುದು ಇತ್ಯಾದಿ ಕೆಲಸಗಳನ್ನು ಮಾಡಬೇಕೆಂದು ಅವರಿಗೆ ತಿಳಿಸಿ ಹೇಳಬೇಕು"

ನಾನು : "ಈ ಮಾತುಗಳನ್ನು ಹೇಳುತ್ತಾ ಇದ್ದೇನೆ. ಈಗ ತಾವು ಹೇಳಿದ್ದನ್ನು ತಿಳಿಸುತ್ತೇನೆ". ಬಳಿಕ ಅವರ ಅಪ್ಪಣೆ ತೆಗೆದುಕೊಂಡು ತಿರುಗಿ ಬಂದೆ.

**ನಮ್ಮ ನಾಟಕ ನೋಡಿದರು :**

ಬೆಳಗಾಂವಿ ಕಾಂಗ್ರೆಸ್ ಅಧಿವೇಶನದ ಕಾಲದಲ್ಲಿಯೇ ನಾವು ಅಲ್ಲಿಯೇ ಸರೋಜನಿ ನಾಯಡೂ ಅವರ ಅಧ್ಯಕ್ಷತೆಯಲ್ಲಿ ನೆರೆದ ಅಖಿಲ ಭಾರತೀಯ ಮಹಿಳಾ ಸಮ್ಮೇಳನದ

ಕಾಲಕ್ಕೆ ಕರ್ನಾಟಕ ಭಗಿನಿ ಮಂಡಳದ ಹುಬ್ಬಳ್ಳಿ ಶಾಖೆಯ ರಾಷ್ಟ್ರೀಯ ಟಿಳಕ ಕನ್ಯಾಶಾಲೆಯ ಬಾಲಿಕೆಯರಿಂದ 'ಸ್ವದೇಶಿ ವ್ರತ' ಎಂಬ ಮರಾಠಿ ನಾಟಕವನ್ನು ಆಡಿಸಿದೆವು. ಆ ನಾಟಕವನ್ನು ನೋಡಲು ತಾವು ಐದೇ ನಿಮಿಷಗಳ ಮಟ್ಟಿಗಾದರೂ ಬರಬೇಕೆಂದು ನಾನು ಮಹಾತ್ಮಾಜಿಯವರನ್ನು ವಿನಂತಿ ಮಾಡಿಕೊಂಡೆನು. ಅವರು ಆ ಮೇರೆಗೆ ಅಲ್ಲಿಗೆ ಬಂದು ಸ್ವಲ್ಪ ವೇಳೆ ನಾಟಕವನ್ನು ನೋಡಿ ನಗುತ್ತ ಗಾಂಧೀಜಿಯವರ ಪಾತ್ರ ಅಭಿನಯಿಸಿದ ಆ ಹುಡುಗಿಗೆ ಅವಳ ನಟನೆಗಾಗಿ ಹತ್ತಿರ ಕರೆದು ಪ್ರೇಮವನ್ನೂ ವ್ಯಕ್ತಮಾಡಿ ಹೊರಟರು.

**ಚರಖಾ ಕಾಣಿಸುವುದಿಲ್ಲ :**

ಅದೇ ಬೆಳಗಾಂವಿ ಅಧಿವೇಶನದಲ್ಲಿ ಸ್ವಯಂ ಸೇವಿಕೆಯರು ವಾಸಿಸುತ್ತಿದ್ದ ಭಾಗಕ್ಕೆ ಭೆಟ್ಟಿ ಕೊಡಬೇಕೆಂದು ಮಹಾತ್ಮಾಜಿಯವರನ್ನು ವಿನಯದಿಂದ ಬೇಡಿಕೊಂಡೆ. ಆಗ ಅವರು "ನಾನು ಯಾವಾಗ ಬರುತ್ತೇನೆಂಬುದನ್ನು ಈಗಲೇ ಹೇಳಲಾರೆ. ಆದರೆ ಬಾರದೆ ಇರುವುದಿಲ್ಲ" ಎಂದು ಆಶ್ವಾಸನೆ ಕೊಟ್ಟರು.

ಅದರಂತೆ ಅವರು ಒಮ್ಮೆ ಮೊದಲೇ ತಿಳಿಸದೆಯೇ, ಆ ವಿಭಾಗಕ್ಕೆ ಬಂದುಬಿಟ್ಟರು. "ನೀವು ಸ್ವಯಂ ಸೇವಿಕೆಯರಿಗೆ ಒಳ್ಳೇ ಶಿಸ್ತನ್ನು ಕಲಿಸಿದ್ದೀರಿ. ಆದರೆ ಇವರೆಲ್ಲರ ಹಾಸಿಗೆಗಳ ಹತ್ತಿರ ಚರಖಾಗಳು ಕಾಣಿಸುತ್ತಿಲ್ಲ. ಪ್ರತಿ ದಿವಸ ಇವರು ಒಂದು ಗಂಟೆ ಕಾಲವಾದರೂ ನೂಲುವಂತೆ ನೀವು ಮಾಡಬೇಕು" ಎಂದು ಹೇಳಿ ತಮ್ಮ ಸ್ಥಳಕ್ಕೆ ಹೋದರು.

**ಕಾರಾಗೃಹದ ಕಾಯಿದೆಗಳನ್ನು ಪಾಲಿಸಿರಿ:**

೧೯೩೦ನೇ ಇಸವಿಯಲ್ಲಿ ಮಹಾತ್ಮಾಜಿಯವರು ಯರವಡಾ ಕಾರಾಗೃಹದಲ್ಲಿದ್ದರು. ನಾನೂ ಅದೇ ಕಾಲಕ್ಕೆ ಅಲ್ಲಿಯ ಸ್ತ್ರೀಯ ವಿಭಾಗದಲ್ಲಿ ಇದ್ದೆ. ಗಾಂಧೀಜಿಗೆ ಪತ್ರ ಬರೆಯಲು ಜೇಲ ಅಧಿಕಾರಿಗಳಿಂದ ಅಪ್ಪಣೆ ಸಿಕ್ಕ ಮೇಲೆ ನಾನು ಅವರಿಗೆ ಒಂದು ಪತ್ರ ಬರೆದೆ. ಅದರಲ್ಲಿ "ಈ ಕಾರಾಗೃಹ ನನಗೆ ಒಂದು ಪುಟ್ಟ ಭಾರತವಾಗಿಯೇ ತೋರುತ್ತಿದೆ. ಏಕೆಂದರೆ, ಇಲ್ಲಿ ಭಾರತದ ಎಲ್ಲ ಭಾಗಗಳಿಂದ ಬೇರೆ ಬೇರೆ ಭಾಷೆಯ ಸ್ತ್ರೀಯರು ಒಂದೇ ಕಡೆಗೆ ಕಾಣುತ್ತಿದ್ದಾರೆ" ಎಂದು ಪತ್ರದಲ್ಲಿ ಹೇಳಿದ್ದೆ.

ಆ ಪತ್ರಕ್ಕೆ ಗಾಂಧೀಜಿಯವರಿಂದ ಉತ್ತರ ಬಂದಿತು. ಅದರಲ್ಲಿ ಅವರು ನಿಮ್ಮ ಕಲ್ಪನೆಯು ನನಗೆ ಬಹಳ ಸೇರಿತು. ನೀವೆನ್ನುವಂತೆ ನಾವು ಈ ಸ್ಥಳದಲ್ಲಿ ಇಡೀ ಭಾರತವನ್ನೇ ನೋಡುತ್ತೇವೆ. ನೀವೆಲ್ಲರೂ ಆನಂದದಲ್ಲಿ ಇದ್ದೀರಾ? ತೊಂದರೆ ಆಗುತ್ತಿರ ಬಹುದು. ಆದರೆ ಕಾರಾಗೃಹದ ಕಾಯದೆಗಳನ್ನು ಮುರಿಯಲು ಆಲೋಚಿಸ ಬೇಡಿರಿ. ನಾವು ಸರಕಾರಿ ಕಾಯಿದೆಗಳನ್ನು ಮುರಿಯುವುದು ಕಾರಾಗೃಹದ ಹೊರಗೆ ಮಾತ್ರ. ಇಲ್ಲಿ ಇರುವಾಗ ಇಲ್ಲಿಯ ಕಾಯಿದೆಗಳನ್ನು ಸ್ವಲ್ಪವೂ ತಪ್ಪದೆ ಪಾಲಿಸಬೇಕು" ಎಂದು ಬರೆದಿದ್ದರು.

**ಆಡಿನ ಹಾಲಿನ ಫೇಡೆ :**

೧೯೩೪ರಲ್ಲಿ ಬಿಹಾರ ಪ್ರಾಂತದಲ್ಲಾದ ಭೂಕಂಪದ ಕಾಲಕ್ಕೆ ಅಲ್ಲಿಯ ಭೂಕಂಪ ಪೀಡಿತ ಸ್ತ್ರೀಯರ ಸೇವೆ ಮಾಡಲು ಕರ್ನಾಟಕದಿಂದ ಹೋದವರಲ್ಲಿ ನಾನೂ ಒಬ್ಬಳು. ಅಲ್ಲಿ ನಾಲ್ಕು ತಿಂಗಳು ಇದ್ದು ಕೆಲಸ ಮಾಡಿದೆವು.

ಮೋಂಘೀರ ಎಂಬ ಪಟ್ಟಣದಲ್ಲಿ ನಾವು ಇದ್ದಾಗ ಮಹಾತ್ಮಾಜಿ ತಮ್ಮ ಹರಿಜನ ಸೇವೆಯ ಸಂಚಾರದ ಭಾಗವಾಗಿ ಅಲ್ಲಿಗೆ ಬಂದಿದ್ದರು. ನಾವು ಇರುವ ಸ್ಥಳದ ಹತ್ತಿರವೇ ಅವರು ಇಳಿದುಕೊಂಡಿದ್ದರು. ಅವರು ಅಲ್ಲಿದ್ದದ್ದು ಒಂದೇ ದಿನ. ೧೯೨೪ನೇ ಕಾಂಗ್ರೆಸ್ ಅಧಿವೇಶನದ ತರುವಾಯ ಅವರೊಡನೆ ಮಾತನಾಡುವ ಸುಯೋಗವು ನನಗೆ ೧೦ ವರ್ಷದ ನಂತರ ಬಂದಿದ್ದು ನೋಡಿ ತುಂಬಾ ಸಮಾಧಾನವಾಯಿತು.

ಮಹಾತ್ಮಾಜಿಯವರ ಜೊತೆಯಲ್ಲಿ ಆಗ ದಿ॥ ಶೇಟ್ ಜಮನಾಲಾಲ ಬಜಾಜರ ಮಗಳು ಓಂ ಎಂಬ ಹೆಸರಿನ ಹುಡುಗಿ ಇದ್ದಳು.

ಆ ದಿನ ಗಾಂಧೀಜಿ ಆ ಹುಡುಗಿಗೆ "ನಿನಗೆ ಆಡಿನ ಹಾಲಿನ ಫೇಡೆ ಮಾಡಲು ಬರುವುದೇ?" ಎಂದು ಕೇಳಿದರು. ಅದಕ್ಕೆ ಆಕೆಯು "ಬರುತ್ತದೆ" ಎಂದಳು.

ನಾನು ಅಲ್ಲಿಯೇ ಕುಳಿತಿದ್ದೆ. ಮಹಾತ್ಮಾಜಿ ನನ್ನ ಕಡೆಗೆ ತಿರುಗಿ "ನೀವು ಇಲ್ಲಿ ಬಂದು ಎಷ್ಟು ಸಮಯವಾಯಿತು? ನಿಮಗೆ ಯಾವ ಕೆಲಸ ಕೊಟ್ಟಿದ್ದಾರೆ? ಇನ್ನು ಎಷ್ಟು ದಿವಸ ಇಲ್ಲಿರುವಿರಿ?" ಎಂದು ಪ್ರಶ್ನಿಸಿದರು.

ಅದಕ್ಕೆ "ನಾನು ಇಲ್ಲಿಗೆ ಬಂದು ಎರಡು ತಿಂಗಳಾದವು. ಭೂಕಂಪಗ್ರಸ್ತರಿಗೆ ಅರಿವೆ, ಕಾಳು, ಪಾತ್ರೆ ಮೊದಲಾದವುಗಳನ್ನು ಕೊಡುವುದೇ ಮೊದಲಾದ ಕೆಲಸವನ್ನು ನನಗೆ ಕೊಡಲಾಗಿದೆ. ಕಮಿಟಿಯವರಿಗೆ ನನ್ನ ಅವಶ್ಯಕತೆ ಇರುವವರೆಗೆ ನಾನು ಇಲ್ಲಿ ಇರುವೆನು" ಎಂದು ಹೇಳಿದೆ.

ಅಷ್ಟರಲ್ಲಿ ಮತ್ಯಾರೋ ಅವರ ಕಡೆ ಬಂದುದರಿಂದ ನಾನು ಅಲ್ಲಿಂದ ಎದ್ದೆ.

ಆಡಿನ ಹಾಲಿನ ಫೇಡೆ ತಯಾರಿಸಲು ಆ ಚಿಕ್ಕ ಹುಡುಗಿಗೆ ಸರಿಯಾಗಿ ಬರುವುದೋ ಇಲ್ಲವೋ ಎಂಬ ಸಂಶಯದಿಂದ ನಾನೂ ಮೂರು ಸೇರು ಆಡಿನ ಹಾಲನ್ನು ತೆಗೆದುಕೊಂಡು ಫೇಡೆ ಸಿದ್ಧಮಾಡಿ ಮಹಾತ್ಮಾಜಿಯವರ ಹತ್ತಿರ ಹೋಗಿ ಅವರ ಮುಂದೆ ಇಟ್ಟೆ. ಆ ಹುಡುಗಿಯೂ ತಾನು ಮಾಡಿದ ಫೇಡೆ ತಂದು ಇಟ್ಟಳು.

ನಾನು ಮಾಡಿದ ಫೇಡೆಗಳು ಒಂದು ಆಕಾರದವೂ ಮತ್ತು ಒಳ್ಳೆ ಶುಭ್ರವಾದವುಗಳೂ ಆಗಿದ್ದವು. ಆ ಹುಡುಗಿಯ ಫೇಡೆಗಳು ಒಂದೇ ಆಕಾರವಿದ್ದಿಲ್ಲ. ಅವುಗಳಲ್ಲಿ ನಡುನಡುವೆ ಕಪ್ಪು ಚುಕ್ಕೆಗಳಿದ್ದವು.

ಆಗ ಮಹಾತ್ಮಾಜಿ "ಓಂ, ನಿನ್ನ ಫೇಡೆಗಳ ಬಣ್ಣ ಹೀಗೇಕೆ ಆಗಿರುವದು?" ಎಂದರು. ಅದಕ್ಕೆ ಆ ಹುಡುಗಿಯು "ನನಗೆ ತಿಳಿಯದು" ಎಂದಳು.

ಗಾಂಧೀಜಿಯವರ ಆ ಪ್ರಶ್ನೆಗೆ ನಾನು, "ಆಡಿನ ಹಾಲು ಬಹಳ ದಪ್ಪವಿರುತ್ತದೆ. ಅದನ್ನು ಅಟ್ಟಿಸುವಾಗ ಒಂದೇ ಸವನೆ ಕೈಯಾಡುತ್ತಿರಬೇಕು. ಹಾಗೆ ಮಾಡದಿದ್ದರೆ ತಳದಲ್ಲಿ ಹಾಲು ಸುಟ್ಟು ಹೀಗೆ ಕರಿ ಬಣ್ಣವಾಗಲು ಕಾರಣವಾಗುತ್ತದೆ" ಎಂದು ಉತ್ತರ ಕೊಟ್ಟೆ, ಮತ್ತು "ಅಲ್ಯೂಮಿನಿಯಂ ಪಾತ್ರೆಯಲ್ಲಿ ಹಾಲನ್ನು ಕುದಿಸಿದರೆ ಅದಕ್ಕೆ ನೀಲಿ ಬಣ್ಣ ಬರುತ್ತದೆ" ಎಂದು ಹೇಳಿದೆ. "ಅಲ್ಯೂಮಿನಿಯಂ ಪಾತ್ರೆಯಲ್ಲಿ ಹಾಲನ್ನು ಕುದಿಸಿದುದು ಹೌದು" ಎಂದು ಓಂ ಹೇಳಿದಳು. ಇವರಿಂದ ಫೇಡೆ ಹೇಗೆ ಮಾಡಬೇಕೆಂಬುದನ್ನು ಕಲಿತುಕೋ ಎಂದು ಮಹಾತ್ಮಾಜಿಯವರು ಆ ಹುಡುಗಿಗೆ ತಿಳಿಸಿದರು. ಈ ರೀತಿ ಸ್ವಲ್ಪಾದರೂ ಗಾಂಧೀಜಿಯವರ ಸೇವೆ ಮಾಡಲು ನನಗೆ ಸಂಧಿ ದೊರೆತುದಕ್ಕಾಗಿ ತುಂಬಾ ಸಂತೋಷ ವಾಯಿತು.

**ಬಚ್ಚಲ ನೀರನ್ನು ಬಳಿದದ್ದು:**

ಮೋಂಫೀರ ಪಟ್ಟಣಕ್ಕೆ ಮಹಾತ್ಮಾಜಿ ಬರುತ್ತಾರೆಂದು ಗೊತ್ತಾಗುತ್ತಲೇ ಅವರಿಗಾಗಿ ಒಂದು ಗುಡಿಸಲು, ಅದಕ್ಕೆ ಹಿಮ್ಮಗ್ಗಲಿನಲ್ಲಿ ಒಂದು ಬಚ್ಚಲು ಮನೆ ಕಟ್ಟಿಸಿದರು. ಮಹಾತ್ಮಾಜಿ ಆ ಬಚ್ಚಲು ಮನೆಗೆ ಸ್ನಾನಕ್ಕೆ ಬರುತ್ತಲೆ "ಒಂದು ಕಸಬರಿಗೆ ತೆಗೆದುಕೊಂಡು ಬನ್ನಿರಿ" ಎಂದರು. ಏಕೆಂದರೆ ಆ ಬಚ್ಚಲಿನ ನೀರು ಸರಿಯಾಗಿ ಮುಂದಕ್ಕೆ ಹೋಗದೆ ಅಲ್ಲಿಯೇ ನಿಂತಿತ್ತು.

ಆ ಹೊತ್ತಿಗೆ ನಾನೂ ಅಲ್ಲಿದ್ದೆ. ಕೂಡಲೇ ಕಸಬರಿಗೆಯನ್ನು ನಾನೇ ತೆಗೆದುಕೊಂಡು ಆ ನಿಂತ ನೀರನ್ನು ಮುಂದಕ್ಕೆ ತಳ್ಳಿದೆ. "ನೋಡಿದಿರಾ, ನಮ್ಮ ಕೆಲಸಗಾರರ ಕಾರ್ಯದ ರೀತಿಯನ್ನು" ಎನ್ನುತ್ತಾ ಗಾಂಧೀಜಿಯವರು ಕೂಡಿದ ಜನರ ಮುಂದೆ ಚೇಷ್ಟೆಮಾಡಿದರು.

**ಕರ್ನಾಟಕ ಶಾಖೆಯ ಕಸ್ತೂರಬಾ ಟ್ರಸ್ಟ ಪ್ರತಿನಿಧಿ ಸ್ಥಳದ ಹೊಣೆ :**

ಮದ್ರಾಸಿನಲ್ಲಿ ೧೯೪೬ರ ಜನವರಿ ತಿಂಗಳಲ್ಲಿ ದಕ್ಷಿಣ ಭಾರತದ ಹಿಂದೀ ಪ್ರಚಾರ ಸಭೆಯ ರಜತ ಮಹೋತ್ಸವವನ್ನು ಮಹಾತ್ಮಾಜಿಯವರ ಅಧ್ಯಕ್ಷತೆಯಲ್ಲಿ ಆಚರಿಸಲಾಯಿತು. ಕರ್ನಾಟಕ ಪ್ರಾಂತ ಹಿಂದೀ ಪ್ರಚಾರ ಸಭೆಯ ಅಧ್ಯಕ್ಷರಿಗೆ ಅಲ್ಲಿಗೆ ಬರಲಾಗದ್ದರಿಂದ ಅವರ ಭಾಷಣವನ್ನು ಉಪಾಧ್ಯಕ್ಷೆ ಆಗಿದ್ದರಿಂದ ನಾನೇ ಓದಬೇಕಾಯಿತು.

ಸಾಯಂಕಾಲ ಗಾಂಧೀಜಿ ನನ್ನನ್ನು ಕರೆಸಿಕೊಂಡರು. ಕೆಲ ಪ್ರಶ್ನೆಗಳನ್ನು ಕೇಳಿ ಕೊಂಡರು. "ನಿಮ್ಮ ಶಿಕ್ಷಣ ಎಷ್ಟಾಗಿದೆ? ಹಿಂದೀ ಭಾಷೆಯನ್ನು ಎಷ್ಟು ಮಟ್ಟಿಗೆ ಕಲಿತಿದ್ದೀರಿ? ನಿಮಗೆ ಯಾವ ಯಾವ ಭಾಷೆಗಳ ಪರಿಚಯವಿದೆ?" ಮುಂತಾಗಿ ಕೇಳಿದರು.

ನಾನು: ನನ್ನದು ಮೆಟ್ರಿಕ್ ಪರೀಕ್ಷೆಯಾಗಿದೆ. ಹಿಂದೀ ಭಾಷೆಯ "ಪ್ರಚಾರಕ" ಪರೀಕ್ಷೆಯವರೆಗೆ ಪಾಸಾಗಿದ್ದೇನೆ. ಕನ್ನಡ, ಮರಾಠಿ ಹಾಗೂ ಇಂಗ್ಲಿಷ್ ಭಾಷೆಗಳನ್ನು ಬಲ್ಲೆ, – ಕೊಂಕಣಿ ಭಾಷೆ ನನ್ನ ಮಾತೃ ಭಾಷೆ ಎಂದು ಉತ್ತರಕೊಟ್ಟೆ.

"ಇದುವರೆಗೆ ನೀವು ಯಾವ ಯಾವ ಸಂಸ್ಥೆಗಳಲ್ಲಿ ಕೆಲಸ ಮಾಡಿದ್ದೀರಿ?" ಎಂದು

ಮಹಾತ್ಮಾಜಿಯವರು ನನ್ನನ್ನು ಪ್ರಶ್ನಿಸಿದರು. ಅದಕ್ಕೆ ನಾನು "ಹುಬ್ಬಳ್ಳಿ ಭಗಿನಿಮಂಡಲ, ಕರ್ನಾಟಕ ಭಗಿನಿಮಂಡಲ, ಹಿಂದೂಸ್ತಾನಿ ಸೇವಾದಲ, ರಾಷ್ಟ್ರೀಯ ಟಿಳಕ ಕನ್ಯಾಶಾಲೆ ಹುಬ್ಬಳ್ಳಿ, ಹುಬ್ಬಳ್ಳಿ ಪ್ರಸೂತಿಗೃಹ, ಹುಬ್ಬಳ್ಳಿ ಶಿಶುವಿಹಾರ, ಹುಬ್ಬಳ್ಳಿ ಚೈಲ್ಡ್ ವೆಲ್ಫೇರ್ ಸೆಂಟರ್, ಮುಂಬಯಿ ಪ್ರಾಂತಿಕ ಅಡಲ್ಟ್ ಎಜ್ಯುಕೇಷನ್ ಬೋರ್ಡ್ ಮತ್ತು ಕಾಂಗ್ರೆಸ್ ಸಂಸ್ಥೆ ಮುಂತಾದ ಸಂಸ್ಥೆಗಳಲ್ಲಿ ಕೆಲಸ ಮಾಡಿದ್ದೇನೆ" ಎಂದು ಹೇಳಿದೆ. "ಈಗಲೂ ಆ ಎಲ್ಲ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವಿರಾ?" ಎಂದು ಅವರ ಮುಂದಿನ ಪ್ರಶ್ನೆ ಇತ್ತು. "ಈ ಸಂಸ್ಥೆಗಳ ಪೈಕಿ ನಾಲ್ಕು ಸಂಸ್ಥೆಗಳ ಕೆಲಸ ಬಿಟ್ಟಿರುತ್ತೇನೆ" ಎಂದೆ ನಾನು.

"ಹಾಗಾದರೆ ಕಸ್ತೂರಬಾ ಟ್ರಸ್ಟಿನ ಕರ್ನಾಟಕ ಪ್ರಾಂತಿಕ ಶಾಖೆಯ ಪ್ರತಿನಿಧಿತ್ವವನ್ನು ನಿಮಗೆ ಒಪ್ಪಿಸುತ್ತೇನೆ. ಇದರಲ್ಲಿ ನಿಮಗೆ ಕಷ್ಟವಾಗಲಿಕ್ಕಿಲ್ಲ. ಏಕೆಂದರೆ ನಿಮಗೆ ಹತ್ತು ಸಂಸ್ಥೆಗಳಲ್ಲಿ ಕೆಲಸಮಾಡಿದ ಅನುಭವ ಇದೆ" ಎಂದು ಗಾಂಧೀಜಿ ಎಂದರು.

ಈ ಮಾತನ್ನು ಕೇಳಿ ನನಗೆ ಸ್ವಲ್ಪ ಗಾಬರಿಯಾಯಿತು. ಆ ಸ್ಥಾನದ ಹೊಣೆ ಹೊರಲು ನನಗೆ ಆಗಬಹುದೇ ಎಂದು ನನ್ನಲ್ಲಿ ಸಂಶಯವುಂಟಾಯಿತು. ಆ ಸಂಶಯವನ್ನು ಮಹಾತ್ಮಾಜಿಯ ಮುಂದೆ ವ್ಯಕ್ತಪಡಿಸಿದಾಗ ಅವರು "ಇಷ್ಟು ಅನುಭವವಿದ್ದ ನಿಮಗೇ ಈ ಕಾರ್ಯದ ಬಗ್ಗೆ ಅಧೈರ್ಯ ಏಕೆ ಅನಿಸಬೇಕು?" ಎಂದು ಕೇಳಿದರು. ಆಗ ನಾನು "ನನಗೆ ಸ್ವಲ್ಪ ವಿಚಾರ ಮಾಡಲು ಅವಕಾಶ ಕೊಡಬೇಕು" ಎಂದು ಅವರನ್ನು ಕೇಳಿಕೊಂಡೆ. "ಅಡ್ಡಿ ಇಲ್ಲ. ಹಾಗಾದರೆ ನಾಳೆ ತಿಳಿಸಿರಿ" ಎಂದು ಹೇಳಿ ಅವರನ್ನು ಕಳುಹಿಸಿದರು.

ಆ ರಾತ್ರಿಯೆಲ್ಲ ನಿದ್ರೆ ಬರಲಿಲ್ಲ. ವಿಚಾರಮಗ್ನಳಾಗಿದ್ದೆ. ಎಡಬಲದವರ ಸಲಹೆಗಳನ್ನು ಈ ಕೆಲಸದ ಬಗ್ಗೆ ಕೇಳಿದೆ. ಎಲ್ಲರೂ "ಇಷ್ಟು ಭಯವೇಕೆ ಅದರಲ್ಲಿ, ನಿಮ್ಮಲ್ಲಿ ಅದಕ್ಕೆ ಬೇಕಾದ ಯೋಗ್ಯತೆ ಇದೆ, ಈ ಕೆಲಸವನ್ನು ತಕ್ಕೊಳ್ಳುತ್ತೇನೆಂದು ಧೈರ್ಯವಾಗಿ ಹೇಳಿರಿ" ಎಂದು ಸಲಹೆ ಕೊಟ್ಟರು.

ಮರುದಿವಸ ಪುನಃ ನನ್ನನ್ನು ಮಹಾತ್ಮಾಜಿ ಕರೆಸಿದರು. ನಾನು ಅವರ ಸಮ್ಮುಖದಲ್ಲಿ ಹೋಗಿ ಕೂತುಕೊಂಡೆ. "ಏನು ವಿಚಾರವಾಯಿತು" ಎಂದರು ಮಹಾತ್ಮಾಜಿ. "ತಾವು ಇಚ್ಛಿಸಿದರೆ ನಾನು ಈ ಕಾರ್ಯವನ್ನು ಸ್ವೀಕರಿಸಲು ಸಿದ್ಧಳಾಗಿಯೇ ಬಂದಿದ್ದೇನೆ. ಆದರೆ ಕಾರ್ಯದಲ್ಲಿ ತಮ್ಮ ಮಾರ್ಗದರ್ಶನ ನನಗೆ ಮೇಲಿಂದ ಮೇಲೆ ಬೇಕಾಗಬಹುದು" ಎಂದು ಹೇಳಿದೆ. "ಆಗಲಿ. ಇಷ್ಟೇ ಅಲ್ಲವೆ? ಅದು ಇದ್ದೇ ಇದೆ. ಅದರ ಬಗ್ಗೆ ನಿಮಗೆ ಚಿಂತೆ ಬೇಡ" ಎಂದು ಅವರು ಉತ್ತರಿಸಿದರು. ಅದೇ ದಿನವೇ ಅವರಿಂದ ನನಗೆ ಕರ್ನಾಟಕ ಪ್ರಾಂತಿಕ ಶಾಖೆಯ ಪ್ರತಿನಿಧಿತ್ವ ಒಪ್ಪಿಸಿದ ಪತ್ರ ಬಂತು. ಮುಂದೆ ಆ ಕಾರ್ಯವನ್ನು ನಾನು ವಹಿಸಿಕೊಂಡು ೧೭ ವರ್ಷದವರೆಗೆ ಅವ್ಯಾಹತವಾಗಿ ಮಾಡಿ, ತುಂಬಾ ಹೊಸ ಹೊಸ ಅನುಭವ ಪಡೆದುಕೊಂಡೆನು.

ಅದೇ ೧೯೪೬ನೇ ಇಸವಿಯಲ್ಲಿ ಮಾರ್ಚ ತಿಂಗಳಲ್ಲಿ ಮಹಾತ್ಮಾಜಿ ಉರಳಿ ಕಾಂಚನದಲ್ಲಿ ಭಾರತದಲ್ಲಿ ಕಸ್ತೂರಬಾ ಟ್ರಸ್ಟಿನ ಎಲ್ಲಾ ಪ್ರಾಂತೀಯ ಪ್ರತಿನಿಧಿಗಳ ಪರಿಷತ್ತನ್ನು ಕರೆಯಿಸಿ ಟ್ರಸ್ಟಿನ ಕಾರ್ಯಕಲಾಪದ ಬಗ್ಗೆ ಸೂಕ್ಷ್ಮವಾಗಿ ಮಾರ್ಗದರ್ಶನ ಮಾಡಿದರು.

ಆಗ ನಾವೆಲ್ಲರೂ ಕಾರ್ಯದಲ್ಲಿಯ ಅನುಕೂಲತೆ, ಅನಾನುಕೂಲತೆಗಳ ಬಗ್ಗೆ ಅವರೊಡನೆ ಚರ್ಚಿಸಿದೆವು. "ಶಿಕ್ಷಣ ಪಡೆದ ನಗರ ನಿವಾಸಿಗಳಾದ ಸೋದರಿಯರು ಹಳ್ಳಿಗಳಿಗೆ ಹೋಗಲು ಹಿಂಜರಿಯುತ್ತಾರೆ. ಅದಕ್ಕೇನು ಮಾಡಬೇಕು?" ಎಂಬ ಪ್ರಶ್ನೆಯನ್ನು ನಾನು ಗಾಂಧೀಜಿಯವರಿಗೆ ಕೇಳಿದೆ. ಅದಕ್ಕೆ ಅವರು "ಅದು ನಿಜ. ಆ ಬಗ್ಗೆ ಚಿಂತಿಸ ಬೇಕಾಗಿಲ್ಲ. ಶಿಕ್ಷಣ ಪಡೆದವರ ಪೈಕಿ ಸ್ವಲ್ಪ ಮಂದಿ ಸ್ತ್ರೀಯರು ಹಳ್ಳಿಗಳಿಗೆ ಹೋಗದಿದ್ದರೂ ಅಡ್ಡಿಯಿಲ್ಲ. ಅಂಥವರು ಶಿಕ್ಷಣ ಅನುಭವವನ್ನು ಪಟ್ಟಣದಲ್ಲಿಯೇ ಸ್ತ್ರೀಯರಿಗೆ ಕೊಡಲಿ. ಬರಬರುತ್ತ ಅಂಥವರಲ್ಲಿ ಪರಿವರ್ತನೆ ಮಾಡುವುದೇ ನಮ್ಮ ಗುರಿಯಾಗಬೇಕು" ಎಂದು ನನಗೆ ಧೈರ್ಯಕೊಟ್ಟರು.

**ದೇವದಾಸಿ ಹುಡುಗಿಯರ ಬಗ್ಗೆ**

ಮೈಸೂರು ಹತ್ತಿರ ಇರುವ ಬೆಳವಡಿ ಹಳ್ಳಿಯಲ್ಲಿ ೧೯೪೬ರಲ್ಲಿ ಶಿಕ್ಷಣ ಶಿಬಿರಕ್ಕೆ ಮೂವರು ದೇವದಾಸಿ ಹುಡುಗಿಯರು ಬಂದಿದ್ದರು. ಅವರ ಭವಿಷ್ಯದ ಬಗ್ಗೆ ನಮಗೆ ಭರವಸೆ ಇದ್ದಿಲ್ಲ. ಈ ವಿಷಯ ಮಹಾತ್ಮಾಜಿಗೆ ತಿಳಿಸಿ ಅವರ ಮಾರ್ಗದರ್ಶನವನ್ನು ಪ್ರತ್ಯಕ್ಷವಾಗಿ ಪಡೆಯಲು ನಾನು ದಿ. ಶ್ರೀಮತಿ ಕೃಷ್ಣಾಬಾಯಿ ಪಣಜೀಕರರೊಡನೆ ಸೇವಾಗ್ರಾಮಕ್ಕೆ ಹೋದೆನು. ಮಹಾತ್ಮಾಜಿಯವರೊಡನೆ ಅನೇಕ ಸಂಗತಿಗಳ ಬಗ್ಗೆ ಮಾತಾಡಿ ಸಂಶಯ ನಿರಸನ ಮಾಡಿಕೊಂಡೆವು. ಅದೇ ಕಾಲಕ್ಕೆ ಈ ದೇವದಾಸಿ ಹುಡುಗಿಯರ ಬಗ್ಗೆಯೂ ಕೇಳಿದೆವು.

ಅದಕ್ಕೆ ಉತ್ತರವಾಗಿ ಗಾಂಧೀಜಿ ಹೇಳಿದರು. "ಇದು ಬಹು ಮಹತ್ವದ ಪ್ರಶ್ನೆ. ಈ ಬಗ್ಗೆ ನಮ್ಮಲ್ಲಿ ಸ್ಪಷ್ಟ ಕಲ್ಪನೆ ಬೇಕು. ಇಂತಹ ಹುಡುಗಿಯರನ್ನು ಎಳ್ಳಷ್ಟೂ ಅಲಕ್ಷಿಸಬಾರದು. ಅಲಕ್ಷಿಸಿದರೆ ಅವರು ಇನ್ನೂ ಕೆಟ್ಟು ಹೋಗುತ್ತಾರೆ. ಅವರನ್ನು ಆ ಮಟ್ಟದಿಂದ ಮೇಲಕ್ಕೆ ತರಲು ವಿಶ್ವಪ್ರಯತ್ನ ಮಾಡಬೇಕು. ಅದರಲ್ಲಿ ಯಶಸ್ಸು ಬಂದೇ ಬರುತ್ತದೆ. ಒಂದುವೇಳೆ ಅದು ಬರದಿದ್ದರೆ ಅದರಲ್ಲಿ ನಮ್ಮ ತಪ್ಪೇನೂ ಇಲ್ಲ. ನಾನು ಸಾಕಷ್ಟು ಪ್ರಯತ್ನ ಮಾಡಿದ್ದ ಸಮಾಧಾನವಾದರೂ ನಮಗೆ ಇರುವುದು" ಎಂದು ಮೊದಲಾಗಿ.

**ಉಮಾಬಾಯಿ ಕುಂದಾಪೂರ**

* * *

## ೧೭. ಶ್ರೀಮತಿ ಬಿ.ಕಾಮಾಕ್ಷಮ್ಮ ಇವರ ನೆನಹು

ಸುಮಾರು ೬೫ ವರುಷಗಳ ಹಿಂದೆ ಮಹಾತ್ಮಾ ಗಾಂಧೀಜಿಯ ಉಪ್ಪಿನ ಸತ್ಯಾಗ್ರಹದ ಬಗ್ಗೆ ಪತ್ರಿಕೆಗಳಲ್ಲಿ ಓದಿದ್ದೆ. ಅನಂತರ ಪಾವಗಡ ಎಂಬ ಸಣ್ಣ ತಾಲ್ಲೂಕಿನಲ್ಲಿ ಶ್ರೀ ಉಮಾಬಾಯಿ ಕುಂದಾಪುರ ಅವರ ಭಾಷಣದಲ್ಲಿ ಸ್ವದೇಶ, ಸ್ವರಾಜ್ಯ, ಗಾಂಧೀ ಶಬ್ದಗಳಿಗೆ ಸ್ವಲ್ಪಮಟ್ಟಿನ ಅರ್ಥವನ್ನು ತಿಳಿದು "ನಾವೀಗ ಇಂಗ್ಲಿಷರ ಆಳ್ವಿಕೆಯಲ್ಲಿ ಗುಲಾಮಗಿರಿ ಯಲ್ಲಿದ್ದೇವೆ ಎಂಬುದನ್ನು ಅರಿತೆನು. ಸತ್ಯಶೋಧನೆ ಓದಿದ ನಂತರ ಗಾಂಧೀಜಿಯನ್ನು ನೋಡಲೇಬೇಕು ಎಂಬ ಹಂಬಲ ಉಂಟಾಯಿತು."

**ಮಹಾತ್ಮರ ಮೊದಲ ದರ್ಶನ**

ನಮ್ಮ ತಂದೆಯವರು ವಿರಾಮ ಪಡೆದು ಬೆಂಗಳೂರಿಗೆ ಬಂದಿದ್ದರು. ಮಲ್ಲೇಶ್ವರ ವಾಚನಾಲಯದ ಪಕ್ಕದ ಮೈದಾನದಲ್ಲಿ ಮುಂಜಾನೆ ಮಹಾತ್ಮರು ಬಂದಿರುವರೆಂಬ ಸುದ್ದಿ ಕೇಳಿ, ಮನೆಯಿಂದ ಧಾವಿಸಿ ಹೊರಟೆ. ಮಹಾತ್ಮರು ಪೂರ್ವಾಭಿಮುಖವಾಗಿ ವೇದಿಕೆಯ ಮೇಲೆ ಆಗಲೇ ಮಂಡಿಸಿದ್ದರು. ಸೂರ್ಯೋದಯವಾಗುತ್ತಿದ್ದಿತು. ಅವರ ಉಜ್ವಲವಾದ ಕಣ್ಣುಗಳು ಮುಗುಳು ನಗೆ ಎಂದೂ ಮರೆಯಲಾಗದು. ಹಿಂದಿಯಲ್ಲಿ ಭಾಷಣವಾಗಿ ಮುಕ್ತಾಯದ ಘಟ್ಟಕ್ಕೆ ಬಂದಿತ್ತು. ಕೆಲ ಮಹಿಳೆಯರು ತಮ್ಮ ಆಭರಣಗಳನ್ನು ಕೊಡುತ್ತಿದ್ದರು. ಮೀರಾಬೆನ್ ಹುಂಡಿಡಬ್ಬವನ್ನು ಹಿಡಿದು ಚಂದಾ ಎತ್ತುತ್ತಲಿದ್ದಳು. ನಾನು ಹಣ ತರಬೇಕಿತ್ತು. ಎಂದು ಆಗ ನನಗನಿಸಿತು. ಅಂದರೆ ನಾನಾಗ ಅವರಿಗೆ ಕೊಡಲು ಹೋಗಿರಲಿಲ್ಲ. ಅನುಗ್ರಹ ಪಡೆಯಲು ಹೋಗಿದ್ದೆನೇನೋ ಎಂದು ಈಗ ಅನಿಸುತ್ತದೆ. ಭಾಷೆ ತಿಳಿಯದಿದ್ದರೂ ಅವರ ಗಂಭೀರವಾಣಿ ಕೇಳಿ ಶಾಂತ ಮುಖಮುದ್ರೆ ನೋಡಿ ಆನಂದಿಸಿದೆ. ಎಲ್ಲರಂತೆ ಬಹಳ ಸಾಹಸ ಮಾಡಿ ಅವರ ಕಾಲು ಮುಟ್ಟಿ ನಮಸ್ಕರಿಸಿದೆನು. ನನಗರಿವಿಲ್ಲದೆಯೇ ನನ್ನಲ್ಲಿ ಎಷ್ಟೋ ಪರಿವರ್ತನೆಗಳು ಆದುವು. ಹಿಂದಿ ಭಾಷೆಯನ್ನು ಕಲಿಯಲಾರಂಭಿಸಿದೆ. ಗಾಂಧೀ ಸಾಹಿತ್ಯದ ಅಧ್ಯಯನ ಮಾಡುತ್ತ ನನ್ನಲ್ಲಿ ನನಗೆ ನಂಬಿಕೆ ಬಂದಿತು.

**ಎರಡನೆಯ ಬಾರಿ ದರ್ಶನ :**

೧೯೩೬ರಲ್ಲಿ ಬೆಂಗಳೂರಿನ ನಗರಭವನದಲ್ಲಿ ಮಹಾತ್ಮರ ಕೈಯಿಂದ ಹಿಂದೀ ಪರೀಕ್ಷೆಯ ಪ್ರಮಾಣ ಪತ್ರ ಪಡೆದು ಅವರ ಭಾಷಣ ಕೇಳಿ ಧನ್ಯಳಾದೆನೆಂದುಕೊಂಡೆನು. ತಮ್ಮ ಚುರುಕಾದ ದೃಷ್ಟಿಯನ್ನು ನಾಲ್ಕೂ ಕಡೆ ಹರಿಹಾಯಿಸಿ ಅಂದರು, "ಇಲ್ಲಿ ಪ್ರಮಾಣತ್ರ ಪಡೆದಿರುವವರಲ್ಲಿ ಮಹಿಳೆಯರದೇ ಸಂಖ್ಯೆ ಹೆಚ್ಚಾಗಿದೆ. ಯಾವ ಕೆಲಸದಲ್ಲಿ ಅವರು ತೊಡಗಿರುವರೋ ಅದಕ್ಕೆ ಉಜ್ವಲ ಭವಿಷ್ಯ ಉಂಟು. ಸ್ವಾತಂತ್ರ್ಯದ ಸಂಗ್ರಾಮಕ್ಕೆ ಮಹಿಳೆಯರ ನೆರವು ಹೆಚ್ಚಾಗಿ ಬೇಕಾಗಿದೆ." ಈ ಮಾತು ನನ್ನ ಕಿವಿಯಲ್ಲಿ ಈಗಲೂ ಮೊಳಗುತ್ತದೆ. ನಂತರ ಭಾರತ ಮಹಿಳೆಯರಲ್ಲಿ ಜಾಗೃತಿ ಉಂಟಾದ್ದು ಏನಚ್ಚರಿ? ಎಂದೆಂದಿಗೂ ಮಹಿಳಾ ವರ್ಗ ಅವರಿಗೆ ತಮ್ಮ ಕೃತಜ್ಞತೆ ಅರ್ಪಿಸಬೇಕು. ನನ್ನ ವಿಚಾರ ಶಕ್ತಿಗೆ ಚಾಲನೆ ದೊರೆತು ನನ್ನಲ್ಲಿ ಚೈತನ್ಯ ಉಂಟಾಯಿತು. ೧೯೪೨ರ "ಬ್ರಿಟಿಷರೆ ಭಾರತ ಬಿಟ್ಟು ತೊಲಗಿ" ಚಳವಳಿಯಲ್ಲಿ ನಾನು ಸುಮ್ಮನಿರುವಂತಿರಲಿಲ್ಲ. ಹಿಂದೀ ಪ್ರಚಾರ ಕಾರ್ಯದಲ್ಲಿ ತೊಡಗಿದ್ದ ನಾನು ಕಟ್ಟಡ ಕಲ್ಲಚ್ಚಿನಲ್ಲಿ ಗುಟ್ಟಾಗಿ ತಯಾರಿಸಿ ಕೊಡುತ್ತಲಿದ್ದ ಹಸ್ತಪತ್ರಿಕೆಗಳನ್ನು ಮನೆಮನೆಗೂ ನನ್ನ ಶಕ್ತ್ಯಾನುಸಾರ ತಲುಪಿಸುತ್ತಿದ್ದೆ. ಆಗ ನಾನು ಖಾದಿ ಉಡುತ್ತಿರಲಿಲ್ಲವಾದ್ದರಿಂದ, ನನ್ನ ಚೀಲದಲ್ಲಿ ಹಸ್ತಪತ್ರಿಕೆಗಳ ಸಾಕಷ್ಟು ಕಾಗದಗಳಿದ್ದರೂ ಬಸವನಗುಡಿಯಿಂದ ಬಸ್ಸಿನಲ್ಲಿ ಪೊಲೀಸರ ಜೊತೆಗೇ ಬಂದರೂ ಅವರಿಗೆ ಅನುಮಾನ ಬರುತ್ತಿರಲಿಲ್ಲ. ಚಿಕ್ಕಪುಟ್ಟ ಸಭೆಗಳಲ್ಲಿ ರಾಷ್ಟ್ರೀಯ ಧ್ವಜವನ್ನು ಹಾರಿಸುವುದು ನನ್ನ ಕೆಲಸ. ಆದರೆ ಜೈಲಿಗೆ ಹೋಗುವ ಪ್ರಸಂಗ ಬಂದಾಗ ತಪ್ಪಿಸಿ

ಕೊಳ್ಳುತ್ತಿದ್ದೆನು. ಏಕೆಂದರೆ "ಜೈಲಿಗೆ ಹೋದರೆ ಮನೆಗೆ ಪುನಃ ಸೇರಿಸುವುದಿಲ್ಲ" ಎಂದು ತಂದೆಯವರು ಕಟ್ಟಾಜ್ಞೆ ಮಾಡಿದ್ದರು. ಮಲ್ಲೇಶ್ವರಂ ಸರ್ಕಲ ಬಳಿ ಪೊಲೀಸರ ಧಾಳಿ ನಡೆದುದನ್ನು ಅಂದಿನ ಜನ ಇಂದಿಗೂ ಮರೆತಿರಲಾರರು. ಮಿಲಿಟೆರಿಯವರ ಗುಂಡಿಗೆ ಬಾಲಕನೊಬ್ಬ ಬಲಿಯಾದ.

**ಕಸ್ತೂರಬಾ ಗ್ರಾಮಸೇವಾ ಕೇಂದ್ರ :**

"ಮುಂಬಯಿ ಬಳಿ ಬೋರಿವಿಲಿ ಎಂಬಲ್ಲಿ ಮಹಿಳಾ ಶಿಬಿರ ನಡೆಯಲಿದೆ. ಹಿಂದೀ ಮಾಧ್ಯಮ ಭಾಷೆ" ಎಂಬುದನ್ನು ಕೇಳಿ, ಜಾತಿ, ಮತದ ಕವಚವನ್ನು ಹರಿದು, ತಾಯಿಯ ಮಮತೆಯ ಬಂಧನವನ್ನು ಬಿಡಿಸಿಕೊಂಡು, ತಂದೆಯ ಕೋಪಕ್ಕೆ ಪಾತ್ರಳಾಗಿ, ಶಿಬಿರವಾಸಿ ಯಾದೆ. ಗ್ರಾಮದ ಮಕ್ಕಳು, ಹೆಂಗಸರ ಏಳ್ಗೆಗಾಗಿ ನಾನು ಕೆಲಸ ಮಾಡ ಬೇಕಾದೀತು ಎಂದಾಗ ನನಗೆ ಅರಿವಿರಲಿಲ್ಲ. ನನ್ನ ಉದ್ಧಾರಕ್ಕಾಗಿಯೇ ನಾನಲ್ಲಿಗೆ ಹೋದದ್ದು. ಶಿಬಿರದ ನಿಯಮಗಳೋ ಕಬ್ಬಿಣದ ಕಡಲೆ. ಶಿಬಿರದ ಸಂಚಾಲಕಿ ಮೃದುಲಾ ಸಾರಾಬೇಸ್. ಮಹಾತ್ಮರ ಆಗಮನ. ಭಾರತದ ರಾಷ್ಟ್ರಪುರುಷನು ಯಾರ ಕರೆಗೆ ಓಗೊಟ್ಟು ಮೈಕೊಡವಿ ಎದ್ದನೋ ಆತನ ಸ್ವಾಗತಕ್ಕೆ ಇಡೀ ಶಿಬಿರವಾಸಿಗಳು ಸಿದ್ಧರಾಗಿದ್ದರು. ನವಚೈತನ್ಯವು ಹರಿದಾಡುತ್ತಿದ್ದಿತು. ಶೌಚಕೂಪಗಳ ಬಗ್ಗೆ, ಆಶ್ರಮದ ಸ್ವಚ್ಛತೆಯ ಬಗ್ಗೆ ವ್ಯವಸ್ಥಾಪಕರ ಆಸ್ಥೆಯನ್ನು ಕಂಡು ನನಗೆ ಮೋಜೆನಿಸಿತು. ಎಲ್ಲ ಪ್ರಾಂತ್ಯದವರಂತೆ ನಾವೂ ನಮ್ಮ ಬಿದಿರಿನ ತಡಿಕೆಗಳ ಕೋಣೆಯನ್ನು ಸ್ವಚ್ಛವಾಗಿರಿಸಿ ರಂಗವಲ್ಲಿಗಳಿಂದ ಅಲಂಕರಿಸಿದ್ದೆವು. ಮಹಾತ್ಮರನ್ನು ಎದುರುಗೊಳ್ಳಲು ಹೆಬ್ಬಾಗಿಲಿನಿಂದ ನಿವಾಸ ಗೃಹದವರೆಗೆ ನಾವು ಒಂದು ನೂರು ಮಂದಿ ಸಾಲುಗಟ್ಟಿ ನಿಂತೆವು ಮತ್ತು ಗೌರವ ರಕ್ಷಣೆಯನ್ನು ನೀಡಿದೆವು. ನಂತರ ಅದು ಕೆಲವು ಮೈಲಿ ಸುತ್ತಳತೆಯ ಶಿಬಿರವನ್ನು ನೋಡಿ ತಮ್ಮ ಕೋಣೆಗಳತ್ತ ಬಂದರು. ಪ್ರತಿಯೊಂದು ಕೋಣೆಯೊಳಗೂ ಬಂದು ನಮ್ಮೊಡನಿದ್ದ ಆಭಾ ಗಾಂಧಿಯನ್ನು ನೋಡಿ ಗಟ್ಟಿಯಾಗಿ ನಕ್ಕುಬಿಟ್ಟರು. ಶಿಬಿರದ ಉದ್ದೇಶ, ನಮ್ಮ ಕರ್ತವ್ಯ ಇತ್ಯಾದಿ ಮಾತನಾಡಿ ಸಂಚಾಲಕಿಯವರೊಡನೆ ಅಂದರು–ಸ್ತ್ರೀಯರು ಅಲಂಕಾರಪ್ರಿಯರು. ಅದಕ್ಕಾಗಿ ಅವರಿಗೆ ವೇಳೆಯನ್ನೇ ಕೊಡಬೇಡ ಎಂದು ಮುಂತಾಗಿ.

**ನಾ ಕಂಡ ಬೃಹತ್ ಸಭೆ :**

ಶಿಬಿರದಿಂದ ಸ್ವಯಂ ಸೇವಕಿಯರಾದ ನಾವು ಹಲವು ಮೈಲಿ ನಡೆದು ಹೋದೆವು. ಕಾಂಡೀವಿಲಿ ಎಂಬಲ್ಲಿ ಭಾರಿ ಸಾರ್ವಜನಿಕ ಸಭೆ. ಲಕ್ಷಾಂತರ ಜನರು ಕೂಡಿದ್ದ ಗದ್ದಲವನ್ನು ರಾಮಧುನ್ ಹೇಳಿ ಕ್ಷಣಕಾಲದಲ್ಲಿ ಮಹಾತ್ಮರು ಅಡಗಿಸಿದರು. ನಾನು ನನ್ನ ಜೀವಮಾನ ದಲ್ಲಿ ಅಷ್ಟು ಜನರು ಸಭೆ ಸೇರಿದ್ದು ಮೊದಲ ಸಾರಿ ಕಂಡೆನು. ಮಾಂತ್ರಿಕನು ಮಂತ್ರ ಹಾಕಿದನೋ ಎಂಬಂತೆ ಸದ್ದು ಗದ್ದಲವಿಲ್ಲದೆ ಜನ ಭಾಷಣವನ್ನಾಲಿಸಿ ಚಂದಾ ಹಣವನ್ನು ನಾನು ತಾನೆಂದು ಮುಂದಾಗಿ ಬಂದು ಕೊಡುತ್ತಿದ್ದರು. ನಾನು ನನ್ನ ಜೋಳಿಗೆಯಿಂದ ಅದೆಷ್ಟು ಬಾರಿ, ಅದೆಷ್ಟು ಹಣವನ್ನು ಮಹಾತ್ಮರ ಮುಂದೆ ಸುರಿದೆನೋ ನೆನಪಿಲ್ಲ. ಕೀಲು ಕೊಟ್ಟ ಬೊಂಬೆಯಂತಾಗಿ ವೇದಿಕೆಯ ಮೇಲೆ ಮಹಾತ್ಮರ ಮುಂದೆ ಹಣ ಸುರುವಿ ಇಳಿದು ಜನರಲ್ಲಿ ಧಾವಿಸುತ್ತಿದ್ದೆನು.

**ಹಿಂದೀ ಪ್ರಚಾರ ಸಭೆಯ ರಜತ ಜಯಂತಿ :**

ಉತ್ತರ ದಕ್ಷಿಣಕ್ಕೆ ಸೇತುವೆ ನಿರ್ಮಾಣ ಮಾಡಿದಂತೆ ದಕ್ಷಿಣ ಭಾರತ ಹಿಂದೀ ಪ್ರಚಾರಸಭೆ ಮದ್ರಾಸಿನಲ್ಲಿ ದೇವದಾಸ ಗಾಂಧೀಯವರಿಂದ ಸ್ಥಾಪಿತವಾಯಿತು. ಅಲ್ಲಿಯ ರಜತ ಜಯಂತಿ ಸಲುವಾಗಿ ಆಗಮಿಸಿದರು ಮಹಾತ್ಮರು. ಇಡಿಯ ಮದ್ರಾಸ ನಗರ ಗಾಂಧೀಮಯವಾಗಿತ್ತು. ೧೯೪೬ ಜನವರಿ ೨೧ರಿಂದ ಫೆಬ್ರವರಿ ೨ರ ವರೆಗೆ ೧೨ ದಿನಗಳವರೆಗೆ ಬಿಡುವಿಲ್ಲದ ಕಾರ್ಯಕ್ರಮ. ಅದೆಷ್ಟು ಸಭೆಗಳೋ ಅದೆಷ್ಟು ಶಿಲಾನ್ಯಾಸ ಗಳೋ. ಅವರು ಮುಟ್ಟಿದ ವಸ್ತುಗಳಿಗೆ ಜನ ಸಾವಿರಾರು ರೂಪಾಯಿಗಳನ್ನು ಕೊಟ್ಟು ಲಿಲಾವಿನಲ್ಲಿ ಅವನ್ನು ಪಡೆದರು. ಒಬ್ಬ ಸಾಮಾನ್ಯ ರಿಕ್ಷಾ ಎಳೆಯುವವನಿಂದಾ ರಾಜಮನೆತನದವರೆಗೂ, ಸರ್ಕಾರದ ಉಚ್ಚ ಪದಾಧಿಕಾರಿಗಳೂ ಗಾಂಧೀಜಿಯಿಂದಾಗಿ ಆಕರ್ಷಿತರಾಗಿದ್ದರು. ಮದ್ರಾಸಿನ ಪತ್ರಕರ್ತರು ಬಂದವರಿಗೆಲ್ಲರಿಗೂ ಅಭೂತಪೂರ್ವವಾದ ಅತಿಥಿ ಸತ್ಕಾರ ಮಾಡಿದ್ದಲ್ಲದೆ ಗಾಂಧೀಜಿಯವರ ಮುಂದೆ ಚಿನ್ನ, ಬೆಳ್ಳಿ, ವಜ್ರ ವೈಢೂರ್ಯಗಳ ರಾಶಿಯನ್ನು ಹಾಕಿದರು. ಪ್ರತಿ ದಿನ ಸಾಯಂಕಾಲದ ಪ್ರಾರ್ಥನಾ ಸಭೆಯಲ್ಲಿ ಜನತಾ ದರ್ಶನ, ಬೆಳಗಿನ ಜಾವದ ಗಾಂಧಿ ಪರಿವಾರದ ಪ್ರಾರ್ಥನೆ-ಆ ಸನ್ನಿವೇಶ ನಮ್ಮನ್ನು ಪವಿತ್ರ ಸಾನ್ನಿಧ್ಯಕ್ಕೆ ಕೊಂಡೊಯ್ಯುತ್ತಿತ್ತು. ಗಾಂಧೀ ಆಧ್ಯಾತ್ಮಿಕ ವಿಚಾರದಲ್ಲಿ ಹಂತವನ್ನು ಮುಟ್ಟಿದ್ದಾರೆಂಬುದಕ್ಕೆ ನಿದರ್ಶನ ಅನೇಕ.

**ತಾ. ೨೯-೧-೪೬ನೇ ದಿನ**

ಕರ್ನಾಟಕ ಪ್ರಾಂತದ ಕಸ್ತೂರಬಾ ಶಿಬಿರವಾಸಿಗಳಾಗಿದ್ದ ನಮ್ಮ ನ್ನು ಗಾಂಧೀಜಿಯವರು ಭೇಟಿ ಮಾಡಿದರು. ಅಂದು ಅವರ ನಿವಾಸ ಗೃಹದಲ್ಲಿ ಹತ್ತಿರ ಕುಳಿತು ಮಾತನಾಡುವ ಸುಯೋಗ ನಮಗೆ ದೊರಕಿತ್ತು. "ಹಳ್ಳಿಗೆ ಹೋಗಲು ಯಾರು ಸಿದ್ಧರಿರುವಿರಿ?" ಎಂದು ಪ್ರತಿಯೊಬ್ಬರನ್ನು ಕೇಳಿದರು. ನಾನೂ ಸಹ ಹೋಗುವೆನೆಂದನು. ಮಲೆನಾಡಿನ ಮೂಲೆಯೊಂದರಲ್ಲಿ ಮೊಟ್ಟಮೊದಲು ಆರಂಭವಾದ ಗ್ರಾಮಸೇವಾ ಕೇಂದ್ರಕ್ಕೆ ಹೋಗಿ ಶಕ್ತ್ಯಾನುಸಾರ ಕೆಲಸ ಮಾಡಿದೆನು. ಹಳ್ಳಿಗೆ ಹೋಗಿರೆಂದು ಮಹಾತ್ಮರು ಏಕೆ ಒತ್ತಾಯಿಸುವರು ಎಂಬುದರ ಅರಿವಾಯಿತು ಅಲ್ಲಿ.

ಸ್ಪರ್ಶಮಣಿಯಿಂದ ಕಬ್ಬಿಣ ಚಿನ್ನವಾಗುವುದೊ ಇಲ್ಲವೋ ನಾ ಕಾಣೆ. ಆದರೆ ಗಾಂಧೀಜಿಯವರಿಂದ ನಿಷ್ಕ್ರಿಯರಾದವರು ಚೇತನಗೊಳ್ಳುವರು ಎಂಬುದಂತೂ ನನ್ನ ಮಟ್ಟಿಗೆ ನಿಜವಾಯಿತು. ಆತ್ಮ ಶಕ್ತಿ ಮತ್ತು ನನ್ನಲ್ಲಿ ನಂಬುಗೆ ಉಂಟಾಯಿತು. ನಾನು ಈಗ ಅನೇಕ ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಂಪರ್ಕವನ್ನು ಪಡೆದಿರುವೆ. ನನ್ನ ಹಿಂದಿನ ಅನುಭವಗಳನ್ನು ಮಧ್ಯೆ ಮಧ್ಯೆ ವಿವರಿಸುತ್ತೇನೆ. ಆದರಿಂದ ಅವರಿಗೆ ಸ್ವಲ್ಪ ಅಲ್ಪ ಉಪಯೋಗವಾದರೆ ಅದು ಮಹಾತ್ಮರ ಕೃಪೆ.

**ಬಿ. ಕಾಮಾಕ್ಷಮ್ಮ**

*   *   *

## ೧೮. ಶ್ರೀಮತಿ ಪದ್ಮಾಬಾಯಿ ನರಗುಂದ ಇವರ ನೆನಹು

**ಮೋಹನ ದ್ವಾದಶಿ :**

ಆ ವರುಷ ಪೂಜ್ಯ ಮಹಾತ್ಮರ ಎಪ್ಪತ್ತನೆಯ ವರ್ಧಂತಿ. ಈ ಸಲ ವಿಶಿಷ್ಟ ಪ್ರಕಾರದಿಂದ ವರ್ಧಂತ್ಯುತ್ಸವವನ್ನು ಆಚರಿಸಬೇಕೆಂದು ನಮ್ಮ ವಾರ್ಧಾಮಹಿಳಾಶ್ರಮದ ಪರಿವಾರದವರ ಮನೀಷೆ. ಆದುದರಿಂದ ಆಶ್ರಮದ ಪ್ರಮುಖರ ಸಭೆ, ಉತ್ಸವದ ಹದಿನೈದು ದಿವಸ ಮೊದಲು ಕೂಡಿ ಕೆಳಗೆ ಕಂಡಂತೆ ಕಾರ್ಯಕ್ರಮವನ್ನು ಗೊತ್ತುಮಾಡಿದೆವು.

೧. ಪೂಜ್ಯ ಗಾಂಧೀ ದಂಪತಿಗಳಿಗೆ ನಮ್ಮೆಲ್ಲರ ಕೈನೂಲಿನ ಬಟ್ಟೆಗಳನ್ನು ಕಾಣಿಕೆಯಾಗಿ ಕೊಡುವದು.

೨. ನೂಲಲು ಬೇಕಾದ ಹಂಜಿ, ಅದಕ್ಕೆ ಬೇಕಾಗುವ ಹತ್ತಿ, ಅದರ ಸ್ವಚ್ಛತೆ ಮೊದಲಾದ ಎಲ್ಲ ಕೆಲಸಗಳನ್ನೂ ನಾವೆಲ್ಲ ಸ್ವಂತ ಕೈಯಿಂದಲೇ ಮಾಡತಕ್ಕದ್ದು.

ಗೊತ್ತು ಪಡಿಸಿದಂತೆ ನಾವೆಲ್ಲರೂ ಆ ಕಾರ್ಯಕ್ಕೆ ತೊಡಗಿದೆವು.

ಹುಟ್ಟುಹಬ್ಬದ ಮೂರು ದಿವಸ ಮುಂಚಿತವಾಗಿ ಅಖಂಡ ಸೂತ್ರಯಜ್ಞ ಸುರುವಾಯಿತು. ಹತ್ತು ಜನರ ಒಂದು ಗುಂಪು ಒಂದೊಂದು ತಾಸಿನಂತೆ ನೂಲು ತೆಗೆಯುವದು ಎಂದು ತೀರ್ಮಾನಿಸಿದೆವು. ನೂಲಿನ ಬಟ್ಟೆ ನೇಯಲು ನೇಯ್ಗೆಯವರು ಬಂದರು. ನೂಲು ಸಿದ್ಧವಾದಂತೆ ನೇಯುವವರು ಹಾಸು ಹಾಕಿ ಮಗ್ಗಕ್ಕೆ ತೆಗೆದುಕೊಳ್ಳ ತೊಡಗಿದರು. ಈ ರೀತಿಯಾಗಿ ಅಕ್ಟೋಬರ ಒಂದನೇ ತಾರೀಖಿನ ದಿವಸ ಸಂಜೆಗೆ ಬಟ್ಟೆಗಳು ಸಿದ್ಧವಾದವು.

ನಮ್ಮ ಆಶ್ರಮದ ಸಂಚಾಲಕರೂ, ಸರ್ವಾಧಿಕಾರಿಗಳು, ಅದೇ ದಿನ (೧ನೇ ಅಕ್ಟೋಬರ ೧೯೩೯)ರಂದು ಬೆಳಿಗ್ಗೆ ಸೇವಾ ಗ್ರಾಮಕ್ಕೆ ಹೋಗಿ ೨ನೇ ತಾರೀಖಿನ ಕಾರ್ಯಕ್ರಮವನ್ನು ಗೊತ್ತುಪಡಿಸಿಕೊಂಡು ಬಂದಿದ್ದರು. ಬರುವವರು ಕಾಲು ನಡಿಗೆಯಿಂದಲೇ ಬರಬೇಕೆಂದು ಪೂಜ್ಯ ಬಾಪೂರವರ ಆಜ್ಞೆಯೆಂದು ನಮಗೆ ಸರ್ವಾಧಿಕಾರಿಗಳಿಂದ ತಿಳಿಯಿತು. ಮೂರನೇ ದಿವಸ ಬೆಳಗಿನ-ಪ್ರತಿ ದಿನದ ಪ್ರಾರ್ಥನೆ ಮಾಡಿಕೊಂಡು ಬೆಳಗು ಮುಂಜಾನೆ ೫-೩೦ಕ್ಕೆ ಸೇವಾಗ್ರಾಮಕ್ಕೆ ಹೊರಟೆವು. ಮಹಿಳಾ ಆಶ್ರಮದಿಂದ ಸೇವಾಗ್ರಾಮಕ್ಕೆ ಮೂರುವರೆ ಮೈಲು. ಎಲ್ಲರೂ ಉತ್ಸಾಹದಿಂದ ನಡೆಯತೊಡಗಿದೆವು. ಆಶ್ರಮಕ್ಕೆ ತಲುಪಿದಾಗ ಬೆಳಗಾಗಿತ್ತು. ಅಂದಿನ ಬೆಳಗಿನ ನ್ಯಾರಿ ಸೌ. ಕಸ್ತೂರಬಾ ಮತ್ತು ಪೂಜ್ಯ ಗಾಂಧೀಜಿಯವರ ಜೊತೆಗೆ ತೆಗೆದುಕೊಳ್ಳುವದು ಎಂದು ಸರ್ವಾಧಿಕಾರಿಗಳು ಮುನ್ನಾ ದಿನವೇ ಗೊತ್ತು ಮಾಡಿಕೊಂಡು ಬಂದಿದ್ದರು. ಸೇವಾ ಗ್ರಾಮದ ಆಶ್ರಮದಲ್ಲಿ ಮಹಾತ್ಮಾ ಗಾಂಧೀಜಿಯವರಿಗೆ "ಬಾಪೂ" ಎಂತಲೂ ಸೌ. ಕಸ್ತೂರಬಾ ಇವರಿಗೆ "ಬಾ" ಎಂತಲೂ ಕರೆಯುವ ರೂಢಿ. ಇನ್ನು ಮುಂದೆ ನಾನೂ ಹಾಗೆ ಹೇಳುವೆ.

ಆಶ್ರಮ ತಲುಪಿದ ಸ್ವಲ್ಪ ವೇಳೆಯಲ್ಲಿ "ರಾಬ" (ಗೋಧಿ ಹಿಟ್ಟಿನ ಸಿಹಿಗಂಜಿ)

ತೆಗೆದುಕೊಂಡು ಒಂದೆಡೆಗೆ ಕುಳಿತೆವು. ಕೆಲವೇ ನಿಮಿಷದಲ್ಲಿ ಬಾಪೂ ಬಂದರು. ಜತೆಗೆ ಸೌ.ಬಾ ಹಾಗೂ ಶ್ರೀಮತಿ ಸರೋಜಿನಿ ನಾಯಡು ಇದ್ದರು.

ಸಭೆಯು ಸೌ.ಬಾ ಅವರ ಕೋಣೆಯ ಮುಂದೆ ಇದ್ದಿತು. ನಡುವೆ ಎತ್ತರದ ಕಟ್ಟೆಯ ಮೇಲೆ ಪೂ. ಬಾಪೂರವರಿಗೆ ಶುಭ್ರ ಖಾದಿಯ ಆಸನವು ಮಂಡಿಸಲ್ಪಟ್ಟಿತ್ತು ಪೂ. ಬಾಪೂ ಅವರು ಬಂದು ಆಸೀನರಾದರು. ನಾವೆಲ್ಲರೂ ಎದ್ದು ನಿಂತು ವಂದಿಸಿ ಕುಳಿತುಕೊಂಡೆವು. "ರಾಬ" ಚೆನ್ನಾಗಿತ್ತೇ? ಕೇಳಿದರು ಪೂ. ಬಾಪೂ ನಮ್ಮನ್ನು.

ಅವರೇನು ಹೇಳ್ಯಾರು? ವಾರವೆಲ್ಲಾ ಕಷ್ಟಪಟ್ಟು ಕಾಣಿಕೆ ತೆಗೆದುಕೊಂಡು ನಡೆದು ಬಂದ ನಿಮ್ಮೆಡೆಗೆ. ಆದರೆ..........ನೀವು ಅವರಿಗೆ ಕೊಟ್ಟದ್ದೇನು? ಬರೀ ಬೆಲ್ಲದ "ರಾಬು." ಕೋಠಾರದಲಿ ಬೇಕಾದಷ್ಟು ಸಕ್ಕರೆ ಇದೆ. ಅದರ "ರಾಬು" ಕೊಡಲು ನಿಮ್ಮ ಕೈ ಏಳಲಿಲ್ಲಾ. ಎಷ್ಟೆಂದರೂ ಬನಿಯಾ ಅಲ್ಲವೇ? ತಾವು? ಎಂದರು ಸೌ.ಬಾ.

ನಿನ್ನೆಯೇ ಏಕೆ ಹೇಳಲಿಲ್ಲಾ? ಹುಡುಗಿಯರಿಗೆ ಸಕ್ಕರೆಯ "ರಾಬು" ಕೊಡು ಎಂದು. ಮಾಡಿಸು ಎಂದು? ಪೂ.ಬಾಪೂ ಅವರ, ಮರುಸವಾಲು ಹಾಕಿದರು ಬಾರವರಿಗೆ. ಕುಡಿದು ಆಯಿತಲ್ಲಾ ಇನ್ನೇಕೆ ಅದರ ಚರ್ಚೆ? ಎನ್ನುತ್ತಾ ಶ್ರೀಮತಿ ಸರೋಜಿನಿ ನಾಯಿಡು ಅವರು ಮಾತು ಮುಗಿಸಿದರು. ಆ ಮೂವರ ಸಂಭಾಷಣೆ ಕೇಳಿ ಪೂ. ಬಾಪೂ ಅವರ ಮುಂದೆ ಶಾಂತಿಯಿಂದ ಇರಬೇಕು ಎಂಬುದನ್ನು ಮರೆತು ನಾವೆಲ್ಲರು ಗಹಗಹಿಸಿ ನಕ್ಕೆವು.

ಸಭೆಯು ಪ್ರಾರಂಭವಾಯಿತು. ಶ್ರೀಮತಿ ಸರೋಜನಿ ದೇವಿಯವರು ಪೂ. ಬಾಪೂ ಅವರಿಗೆ ಕುಂಕುಮ ಹಚ್ಚಿ ತಮ್ಮ ಕೈನೂಲಿನ ಹಾರ ಹಾಕಿದರು. ಕೈಗಳನ್ನೆತ್ತಿ ಮಲಕಿಗೆ ಮುಷ್ಟಿ ಮುರಿದು ದೃಷ್ಟಿ ನಿವಾರಿಸಿದರು ಬಾಪೂ ಅವರಿಗೆ. ಅವರ ಬಾಯಿಯಿಂದ ಮಾತೇ ಹೊರಡಲಿಲ್ಲ. ನಯನಗಳು ಮಾತ್ರ ಆನಂದಬಾಷ್ಪಗಳನ್ನು ಉದುರಿಸುತ್ತಿದ್ದವು. "ಎಂತಹ ದಿವ್ಯ ಜೀವನ? ಎಂತಹ ದಿವ್ಯ ತ್ಯಾಗ? ನ ಭೂತೋ ನ ಭವಿಷ್ಯತಿ" ಎಂದು ಹೇಳುವವರು ಎಂಬಂತೆ ತೋರಿತು ಶ್ರೀಮತಿ ಸರೋಜಿನೀಯವರ ಮೂಕ ಭಾವನೆ.

ನಮ್ಮ ಸರ್ವಾಧಿಕಾರಿಗಳು ಪೂ. ಬಾಪೂ ಸೌ. ಬಾರವರಿಗೆ ಕುಂಕುಮ ತಿಲಕವಿಟ್ಟು ನಾರೀಕೇಳ ಫಲಕೊಟ್ಟು, ನೂಲಿನ ಹಾರ ಕೊರಳಿಗೆ ಹಾಕಿದರು. ಜತೆಗೆ ನಮ್ಮೆಲ್ಲರ ಕೈ ನೂಲಿನಿಂದ ನೇಯ್ದ ವಸ್ತ್ರ-ಪಂಚೆಯ ಜೋಡು ಸೀರೆರವಿಕೆಯ ಬಟ್ಟೆಗಳನ್ನು ಅವರಿಬ್ಬರಿಗೆ ಅರ್ಪಿಸಿದರು. ಆ ದೇವ ದಂಪತಿಗಳನ್ನು ನೋಡಿ ಕಣ್ಣುಗಳು ತಣಿದವು.

ಭಾಷಣ ಕೇಳಿದೆವು. ಆಶಿಷ ಪಡೆದೆವು. ಅಂದಿನ ಆ ಅಪೂರ್ವ ದೃಶ್ಯವನ್ನು ಕಣ್ಣನ ಗಳಲ್ಲಿ ತುಂಬಿಕೊಂಡು ಆಶ್ರಮಕ್ಕೆ ಮರಳಿದೆವು.

ಅಂದು ತಿಥಿ ದ್ವಾದಶಿ. ಮೋಹನ ದ್ವಾದಶಿ ಬಂದಾಗಲೆಲ್ಲ ಮನವು ಬಹುದೂರ ಹಿಂದೆ ಹೋಗಿ, ಅಂದಿನ ದೃಶ್ಯ ನೆನೆದು ಸೇವಾಗ್ರಾಮದಲ್ಲಿ ನಿಮಿಷೆರಡು ನಿಮಿಷ ಸ್ಥಿರವಾಗುವುದು.

ಯಾವ ಪುಣ್ಯದ ಫಲವೋ? ಯಾರ ಆಶೀರ್ವಾದದ ಬಲವೋ ಈ ಭಾಗ್ಯ ನನಗೆ ದೊರೆತುದು ಎಂದು ಆನಂದ ಸಾಗರದಲ್ಲಿ ಮೀಯುವೆ.

**ಮಹಾತ್ಮರು ಊಟಕ್ಕೆ ಬಡಿಸಿದರು**

"ಮುಂದೆ ಸ್ವಲ್ಪೇ ದಿವಸಗಳಲ್ಲಿ ಮಗನವಾಡಿಯಿಂದ ಸೇವಾಗ್ರಾಮಕ್ಕೆ ಹೋದರು ಪೂ. ಗಾಂಧೀಜಿಯವರು. ಇದೀಗ ಅವರ ಆಶ್ರಮವಾಯಿತು. ಆ ಹಳ್ಳಿಯ ಹೆಸರು 'ಸೇಗಾಂವ' ಎಂದು. ಮಧ್ಯ ಭಾರತದಲ್ಲಿ ಸೇಗಾಂ ಎಂಬ ದೊಡ್ಡ ಶಹರವಿದೆ. ಎರಡು ಊರಿನ ಹೆಸರು ಒಂದೇ ಇರುವದರಿಂದ ಅಂಚೆ ಖಾತೆಗೆ ತೊಂದರೆಯಾಗತೊಡಗಿತು. ಅಲ್ಲದೆ ಹಳ್ಳಿಗರ ಸೇವೆಗಾಗಿ ಪೂ. ಮಹಾತ್ಮರು ಅಲ್ಲಿ ನೆಲೆಸಿದರು. ಆದ್ದರಿಂದ ಆ ಹಳ್ಳಿಗೆ ಸೇವಾಗ್ರಾಮ ಎಂದು ಹೆಸರಿಡಲಾಯಿತು.

ಮಹಿಳಾ ಆಶ್ರಮದಿಂದ ಸೇವಾಗ್ರಾಮ ಮೂರುವರೆ ಮೈಲು. ಮೇಲಿಂದ ಮೇಲೆ ಪೂ. ಗಾಂಧೀಯವರ ಕಡೆಗೆ ಹೋಗಲು ಸಾಧ್ಯವಿರಲಿಲ್ಲ. ಮತ್ತೆ ಅಲ್ಲಿಯ ದಾರಿಯಾದರೂ ಗಾಂಧೀಜಿ ಹೋದ ಹೊಸದರಲ್ಲಿ ಸರಿಯಾಗಿ ಇರಲಿಲ್ಲ.

ಸಂಜೆಯ ಐದು ಗಂಟೆಯ ಸಮಯ. ಆದೇ ತಾನೇ ವಿದ್ಯಾಲಯದಿಂದ ಕೋಣೆಗೆ ಬಂದೆ. ಅಷ್ಟರಲ್ಲಿ ಥಮಣಿ ನನ್ನ ಕೋಣೆಯ ಮುಂದೆ ಹಾಯ್ದು ಹೋಗುವದರಲ್ಲಿತ್ತು. ಸಹಜವಾಗಿ ನೋಡಿದೆ ಯಾರಿರಬಹುದೆಂದು. ಪೂ. ಕಾಕಾಜೀ, ಶ್ರೀ ರಾಜೇಂದ್ರ ಬಾಬು ಇದ್ದರು. ಇಲ್ಲಿ ಇವರೇಕೆ ಎಂಬ ಆಶ್ಚರ್ಯ. ಕಣ್ಣು ಅರಳಿಸಿ ನೋಡಿದೆ. ನಿಜವಾಗಿ ಅವರೇ. ಪೂ. ಕಾಕಾಜೀ ಅವರು ಬರುವಿಯೇನು. ಸೇವಾ ಗ್ರಾಮಕ್ಕೆ ಎಂದರು. ಜೀ ಜೀ – ಛಾತ್ರಾಲಯದ ಮುಖ್ಯ ವ್ಯವಸ್ಥಾಪಕರಿಗೆ ಹೇಳಿಬರುವೆ. ಎಂದು ನಾನೆಂದೆ.

ಜೀಜೀಯವರ ಅಪ್ಪಣೆ ಪಡೆದು ಹೊರಟೆ. ಸೇವಾಗ್ರಾಮ ತಲುಪಿದೆವು. ಪೂ. ಕಾಕಾಜೀ, ಶ್ರೀ ರಾಜೇಂದ್ರಬಾಬು ಅವರ ಪೂ. ಮಹಾತ್ಮರ ಜತೆಗೆ ಮಾತಾಡುತ್ತಾ ಕುಳಿತೆವು. ನಾನು ಆಶ್ರಮದ ಸುತ್ತುವರಿದು ಬಂದೆ. ಹೊರಡುವ ವೇಳೆಯಾದೀತು ಎಲ್ಲಿಗೂ ಹೋಗಬಾರದೆಂದು ಅಲ್ಲಿಯೇ ಕುಳಿತೆ. ಅದೇ ವೇಳೆ ಊಟದ ಗಂಟೆಯಾಯಿತು. ಪೂ. ಕಾಕಾಜಿ. ಶ್ರೀ ಪ್ರಸಾದರು – ಶ್ರೀ ರಾಜೇಂದ್ರ ಬಾಬು ಅವರಿಗೆ ಪ್ರಸಾದಜಿ ಎಂದು ಅಲ್ಲಿ ಒಮ್ಮೊಮ್ಮೆ ಕರೆಯುವರು. ಊಟಕೆ ಎದ್ದರು ಬಹುಶಃ ಮೊದಲೇ ಅವರು ಬರುವೆನೆಂದು ಸೂಚಿಸಿರಬಹುದು. ನನ್ನನ್ನು ಕರೆಯಲಿಲ್ಲ. ಅವರ ಪಂಕ್ತಿಗೆ ಕರೆಯಲಿಲ್ಲ. ಸ್ವತಃ ಪೂ. ಮಹಾತ್ಮರೇ ಬಡಿಸಿದರು ಅವರ ಕೈಯ್ಯ ಅನ್ನ ಉಣ್ಣಬೇಕೆಂದು ನನಗಾದರೋ ಆಶೆ. ಹೇಳುವದು ಹೇಗೆ ಭೋಜನವಾದ ಬಳಿಕ ಪ್ರಸಾದರು ವಾರ್ಧಾಕ್ಕೆ ಮರಳಿ ಬಂದರು. ಅವರ ಜೊತೆಗೆ ತಿರಿಗಿಬಂದೆ.

ಆಶ್ರಮದ ವ್ಯವಸ್ಥಾಪಕರು, ಸಹಪಾಠಿಗಳು "ಉಂಡು ಬಂದೆಯಾ?" ಎಂದರು. "ಇಲ್ಲ" ಎಂದು ತಲೆ ಅಲ್ಲಾಡಿಸಿದೆ.

"ಏಕೆ?" ಜೀಜೀ ಕೇಳಿದರು.

ಯಾರೂ ನನಗೆ ಊಟಕ್ಕೆ ಬಾ ಎನ್ನಲಿಲ್ಲ. ಎಂದೆ ನಾನು. ವಿದ್ಯಾರ್ಥಿಗಳು ಖೊಳ್ಳೆಂದು ನಕ್ಕರು. ನಾನು ಅವರ ಜತೆಗೆ ನಕ್ಕೆ. ಈ ಸಂಗತಿ ಕರ್ಣೋಪಕರ್ಣವಾಗಿ ಪೂ. ಮಹಾತ್ಮರಿಗೆ ತಲುಪಿತು. ಅವರೂ ನಕ್ಕಿರಬಹುದು, ಮುಂದಿನ ವಾರ ನನಗೆ ಆಶ್ರಮದಿಂದ ಆಮಂತ್ರಣ ಬಂದಿತು.

ಅಂದು ಶನಿವಾರ. ಬೆಳಿಗ್ಗೆ ಬೇಗನೇ ದೇವಕಿ ಎಂಬ ಕೇರಳದ ವಿದ್ಯಾರ್ಥಿನಿಯನ್ನು ಜತೆಗೆ ಕರೆದುಕೊಂಡು ಸೇವಾಗ್ರಾಮಕ್ಕೆ ಹೊರಟೆ. ಸರಳದಾರಿ ಇರಲಿಲ್ಲ. ಹೊಲದಲ್ಲಿ ಹಾದಿ ತಪ್ಪಿದೆವು. ಕಲ್ಲು ಮುಳ್ಳು ತುಳಿದು ಹೇಗೋ ದಾರಿಗೆ ಬಂದು ಹತ್ತಿದೆವು. ನಾವು ಆಶ್ರಮದಲ್ಲಿ ಕಾಲಿಡುವುದಕ್ಕೂ ಊಟದ ಗಂಟೆ ಆಗುವುದಕ್ಕೂ ಗಂಟಾಯಿತು. ಗದ್ದೆ ಎಂದುಕೊಂಡೆ.

ಕೈಕಾಲು ತೊಳೆದು ಊಟಕ್ಕೆ ಕುಳಿತೆವು. ಫುಲಕ್ಕೆದುಂಡನ್ನ ಗೋದಿಯ ರೊಟ್ಟಿ, ಕುಂಬಳಕಾಯಿ ಪಲ್ಯೆ, ಹಾಲು ಇಷ್ಟೇ ಇದ್ದವು. ಕುಂಬಳಕಾಯಿಯ ಹೋಳು ಸಿಪ್ಪೆಯನ್ನು ಬೇರೆ ಬೇರೆಯಾಗಿ ಬೇಯಿಸಿದ್ದರು. ಯಾವುದರಲ್ಲಿಯೂ ಉಪ್ಪಿರಲಿಲ್ಲ.

"ಓಂ ಸಹನಾವವತು" ಮಂತ್ರವಾಯಿತು ಮತ್ತು ತುತ್ತು ಎತ್ತಿದೆ. ಗಂಟಲಲ್ಲಿ ಇಳಿಯಲಿಲ್ಲ. ತಾಯಿಯಂತೆ ಮಹಾತ್ಮರು ಉಣಬಡಿಸಿದರು ಎಂಬ ಆನಂದ ಒಂದೆಡೆಗೆ, ಉಪ್ಪಿಲ್ಲದೆ ಹೇಗೆ ಉಣ್ಣಲಿ ಎಂಬುದು ಇನ್ನೊಂದೆಡೆಗೆ, ಹೀಗೆ ಮನ ಉಯ್ಯಾಲೆಯಾಯಿತು.

ಇದನ್ನು ತಿಳಿದರೋ ಏನೋ ಮಹಾತ್ಮರು, "ಮಿಠು ಜೋಯಿಯೆ?" ಉಪ್ಪು ಬೇಕೇ ಎಂದರು. ಬೇಡಲಾರೆ, ಬಿಡಲಾರೆ ಮೋರೆ ಕೆಳಗೆ ಹಾಕಿದ್ದೆ.

ಸೇವಾಗ್ರಾಮ ಆಶ್ರಮದಲ್ಲಿ ಮೌನವಾಗಿ ಉಣ್ಣುವ ಪರಿಪಾಠ. ನನಗೆ ಏನೂ ತಿಳಿಯದು. ಊಟ ಸಾಗದು. ಮಹಾತ್ಮರಿಗೆ ಬೇಡಲು ಮನಸ್ಸು ಒಪ್ಪದು. ಕೊನೆಗೆ ಇನ್ನೊಬ್ಬ ಬಡಿಸುವವರಿಗೆ ಮೆಲ್ಲಗೆ ಉಪ್ಪು ಕೇಳಿದೆ.

"ಹಾಂ" ಎಂದು ನಕ್ಕರು ಮಹಾತ್ಮರು. ನನಗೆ ಉಪ್ಪು ದೊರೆಯಿತು. ಊಟ ಮಾಡಿದೆ. ಮೋರೆ ಮೇಲೆತ್ತದೆ ನಾನು ನಕ್ಕೆ ಮಹಾತ್ಮರ ಜತೆಗೆ.

ಅಂದಿನ ಆ ಮಹಾತ್ಮರ ಚಿತ್ರ ಒಂದು ಕೈಲಿ ಚಮಚೆ ಇನ್ನೊಂದು ಕೈಲಿ ಪಲ್ಲಿಯ ಪಾತ್ರೆ ಹಿಡಿದ ಅವರ ಚಿತ್ರ ಇನ್ನೂ ನೆನಪಾಗುವುದು.

**–ಪದ್ಮಾಬಾಯಿ ನರಗುಂದ**

* * *

## ೧೯. ಶಿದ್ದಪ್ಪ ಶಿಂಧೂರ, ಅಕ್ಕೀ ಆಲೂರ, ಇವರ ನೆನಹು

೧೯೩೪ರಲ್ಲಿ ಗಾಂಧೀಜಿ ಹರಿಜನ ಪ್ರವಾಸ ಕೈಗೊಂಡಾಗ, ಅವರು ಸಿರ್ಸಿಯಿಂದ ಅಕ್ಕೀಆಲೂರಿಗೆ ಮಧ್ಯಾಹ್ನ ಸುಮಾರು ೨ ಗಂಟೆಗೆ ಬಂದರು. ಅವರ ಜೊತೆಗೆ ಶ್ರೀ ಗಂಗಾಧರರಾವ್ ದೇಶಪಾಂಡೆ ಮತ್ತು ಸರದಾರ ವೀರನಗೌಡ ಪಾಟೀಲ ಇವರು ಇದ್ದಂತೆ ಜ್ಞಾಪಕವಿದೆ. ಅಕ್ಕೀಆಲೂರಿನ ಗಂಡುಹುಡುಗರ ಶಾಲೆಯ ಪಟಾಂಗಣದಲ್ಲಿ ಭವ್ಯವಾದ ಹಂದರ ಹಾಕಿಸಿದ್ದೆವು. ದೊಡ್ಡ ಜನಸ್ತೋಮ ಕೂಡಿತ್ತು. ನಾನೇ ಸ್ವಾಗತ ಕಮಿಟಿಯ ಅಧ್ಯಕ್ಷನಾಗಿದ್ದೆ. ಗಾಂಧೀಜಿ ಅಸ್ಪೃಶ್ಯತೆಯ ವಿಚಾರದ ಬಗ್ಗೆ ಕಳಕಳಿಯಿಂದ ಮಾತನಾಡಿದರು. ಸಭೆ ಮುಗಿದ ನಂತರ ಹರಿಜನ ಕೇರಿಗೆ ಸಂದರ್ಶನ ಕೊಟ್ಟು ಊರಿನ ಮುಖ್ಯ ಪೇಟೆಯಲ್ಲಿ ಹಾಯ್ದು ಹಾವೇರಿಗೆ ಹೋದರು.

ಗಾಂಧೀಜಿ ಅವರು ಮಧ್ಯಾಹ್ನದ ಬಿಸಿಲಿನಲ್ಲಿ ಸಹ ವಿಶ್ರಾಂತಿ ಇಲ್ಲದೆ ಕೆಲಸ ಮಾಡು ತ್ತಿದ್ದುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಅವರ ಸಾದಾ ಉಡುಪು, ಕಳಕಳಿಯ ಭಾಷಣ ಇವೆಲ್ಲವೂ ಅವರ ಬಗ್ಗೆ ಇದ್ದ ನನ್ನ ಆದರವನ್ನು ಇಮ್ಮಡಿಸಿತು.

–ಸಿದ್ದಪ್ಪ ಸಿಂಧೂರ ಅಕ್ಕಿ ಆಲೂರ

* * *

## ೨೦. ಶ್ರೀಮತಿ ವೀರಮ್ಮಾ ಕೋಂ ಕರಿಯಪ್ಪ ಎರೆಸೀಮಿ, ಸಂಗೂರ, ಇವರ ನೆನಹುಗಳು

ಸೇವಾಗ್ರಾಮ ಆಶ್ರಮದಲ್ಲಿ ಗಾಂಧೀಜಿಯವರ ಹತ್ತಿರ ೧೯೩೭ರಿಂದ ೧೯೪೧ನೇ ಇಸ್ವಿಯವರೆಗೆ ಅವರ ಮಗಳಂತೆ ಇದ್ದೆನು. ಆಗ್ಗೆ ನನ್ನ ಕೂಡ ಎಷ್ಟು ಪ್ರೇಮದಿಂದ ಇರುತ್ತಿದ್ದರೋ ದೇವರೇ ಬಲ್ಲ. ದಿನಾಲು ನನ್ನನ್ನು ನೋಡದ ವಿನಹ ಅವರಿಗೆ ಸಮಾಧಾನ ವಾಗುತ್ತಿದ್ದಿಲ್ಲ. ಯಾಕೆಂದರೆ ನಾನೊಬ್ಬ ಹರಿಜನ ಹೆಣ್ಣುಮಗಳಾಗಿ ಅವರಲ್ಲಿದ್ದೆನು.

ನನ್ನ ಕೂಡ ದಿನಾಲು ನಿಯಮದಂತೆ ೯ ಹಂಜಿ ಮಾಡಿಸಿಕೊಂಡು ಆ ಹಂಜಿ ಯಿಂದಲೇ ನೂಲುತ್ತಿದ್ದರು. ಆ ನೂಲು ಭಕ್ತಿಯಿಂದ ಬೇರೆ ಇಟ್ಟು ಈ ನೂಲಿನಿಂದ ನನಗೆ ಬೇರೆ ವಸ್ತ್ರ ಮಾಡಿರಿ. ಇದು ಪವಿತ್ರ ಇದೆ, ಎಂದು ಆಭಾರ್ಜೇನ್‌ಳಿಗೆ ತಿಳಿಸಿದ್ದರು. ಅದರಂತೆ ಅವರು ಆ ನೂಲು ಬೇರೆ ಇಟ್ಟು ಅವರಿಗೆ ಅಡ್ಡಪಂಚೆ ಮಾಡಿಸಿಕೊಟ್ಟರೆ, ಆಹಾ, ಈ ಬಟ್ಟೆ ಎಷ್ಟು ಪವಿತ್ರ ಇರುವದು ಎಂದು ಆನಂದ ಪಡುತ್ತಿದ್ದರು.

ನನಗೆ ಹಿಂದೀ ಬರುತ್ತಿದ್ದಿಲ್ಲ. ತಾವೆ ಸ್ವತಃ ರಾತ್ರಿ ೯ ಗಂಟೆಗೆ ಹಿಂದೀ ಹೇಳಿಕೊಡು ತ್ತಿದ್ದರು. ಮತ್ತು ನನ್ನಿಂದ ಅವರು ಕನ್ನಡ ಕಲಿಯುತ್ತಿದ್ದರು. ಹಾಗೆಯೇ ನನ್ನ ಕೂಡ ವಿನೋದವಾಡಿ ನಾವಿಬ್ಬರೂ ನಿದ್ರೆ ಹೋಗುತ್ತಿದ್ದೆವು. ನಡುವೆ ಎಚ್ಚೆತ್ತಾಗ ನನ್ನ ಮೈಮೇಲೆ ಏನೂ ಹೊದಿಕೆ ಇಲ್ಲದಿದ್ದರೆ ಸ್ವತಃ ಎದ್ದು ಹೊಚ್ಚಿ ಮಲಗಿಸುತ್ತಿದ್ದರು. ಹರಿಜನ ಮಕ್ಕಳೆಂದರೆ ನಲಿದಾಡುತ್ತಿದ್ದರು.

ಆಶ್ರಮದಲ್ಲಿ, ೪ ಗಂಟೆಗೆ ಏಳುವ ನಿಯಮ. ಆಗ್ಗೆ ಗಂಟೆ ಹೊಡೆಯುತ್ತಿದ್ದರು. ಆ ಗಂಟೆಯ ಸಪ್ಪಳ ಕೇಳಿ ನಾನೆದ್ದರೆ, ಏಳಬೇಡ, ಮಲಗಿಕೋ. ಅರ್ಧನಿದ್ದೆಯಾಗುವುದು. ಎಂದು ಬೆಚ್ಚಗೆ ಹೊದಿಸಿ ಮಲಗಿಸಿ ಪ್ರಾರ್ಥನೆಗೆ ಹೋಗುತ್ತಿದ್ದರು. ನನ್ನಷ್ಟಕ್ಕೆ ನಾನೇ ಎದ್ದರೆ ಎದ್ದೆಯಾ? ಹೋಗು ಮೋರೆ ತೊಳಕೊ. ಶೌಚಕ್ಕೆ ಹೋಗು. ನಾಸ್ತಾ ಮಾಡು. ನಾಸ್ತದ ಗಂಟೆ ಹೊಡೆಯಿತು ಅನ್ನುತ್ತಿದ್ದರು. ನಾಸ್ತಾ ಮಾಡಿ ಬಂದ ಮೇಲೆ ಪೂಜ್ಯ ಬನಸಾಲಿ ಭಾಯಿಯವರಿಗೆ ತಿಳಿಸಿದ್ದೇನೆ, ಅವರಲ್ಲಿ ಹಿಂದೀ ಕಲಿ ಮತ್ತು ಅಷ್ಟು ಚೆನ್ನಾಗಿ ಹಿಂದೀ ಬರುವಂತೆ ಹಿಂದೀ ಕಲಿ, ನಾನು ಒಂದು ತಾಸು ಕಲಿಸಿದ್ದು ನಿನಗೆ ಅಷ್ಟು ಚೆನ್ನಾಗಿ ತಿಳಿಯುವುದಿಲ್ಲ, ಎಂದು ಅವರ ಹತ್ತಿರ ಕಳಿಸುತ್ತಿದ್ದರು.

ಆಮೇಲೆ ೧೨ಕ್ಕೆ ಊಟದ ಗಂಟೆ ಹೊಡೆಯುತ್ತಿತ್ತು. ಅಷ್ಟರಲ್ಲಿ ಸ್ನಾನ, ಹಿಂದೀ ಕಲಿಯುವುದು, ಪಾಯಖಾನೆ ಕೆಲಸ, ಕಾಯಿಪಲ್ಯೆ ಹೆಚ್ಚುವ ಕೆಲಸ ಇವೆಲ್ಲ ಮುಗಿಸಿ ಊಟಕ್ಕೆ ಕೂಡಬೇಕು. ಅವರೂ ನಮ್ಮ ಕೂಡ ಕೂಡುತ್ತಿದ್ದರು. ನನ್ನನ್ನು ತಮ್ಮ ಹತ್ತಿರ ಕೂಡಿಸಿಕೊಳ್ಳುತ್ತಿದ್ದರು. ಯಾರಾದರೂ ಅತಿಥಿಗಳು ಅವರ ಭೆಟ್ಟಿಗೆ ಬಂದಾಗ್ಗ ಬಾಪೂ, ನಿಮ್ಮ ಕೈಯಿಂದ ನನಗೆ ಪ್ರಸಾದ ಕೊಡಿರಿ ಎಂದು ಕೇಳಿದರೆ ನನ್ನ ಕೈಯಿಂದ ಹಣ್ಣು ಕೊಡಿಸುತ್ತಿದ್ದರು. ನೀವೇ ಸ್ವತಃ ಕೊಡಿರಿ ಎಂದು ಅತಿಥಿಗಳು ಕೇಳಿದರೆ ಈ ಹಣ್ಣೇ? ಪವಿತ್ರ. ಇದರಲ್ಲಿ ದೇವರಿರುವನು. ಈ ಹುಡುಗಿ ಯಾರೆಂದು ಕೇಳುವಿರಾ? ನನ್ನ ಪ್ರೀತಿಯ ಮಗಳು. ಹರಿಜನ ಹುಡುಗಿ ನಿಮಗೆ ಮೆಚ್ಚಿಗೆ ಇರುವದಿಲ್ಲವೋ ಎಂದು ಗಾಂಧೀಜಿ ಹೇಳಿದರೆ ಅತಿಥಿಗಳು ಭಕ್ತಿಭಾವದಿಂದ ಒಪ್ಪಿ ನನ್ನ ಕೈಯಿಂದಲೇ ಹಣ್ಣು ತಕ್ಕೊಳ್ಳುತ್ತಿದ್ದರು.

ಮೇ ತಿಂಗಳು ಅಲ್ಲಿ ಬಿಸಿಲು ಬಹಳ. ಆಶ್ರಮದಲ್ಲಿ ಹೆಣ್ಣುಮಕ್ಕಳು ನಾಮುಂದೆ ನೀ ಮುಂದೆ ಎಂದು ಜಗಳಾಡುತ್ತಾ ಬಾಪೂರವರಿಗೆ ಬೀಸಣಿಕೆ ಬೀಸುತ್ತಿದ್ದರು. ಅವರ ಜಗಳ ನೋಡಿ ಬಾಪೂ ನೀವಾರು ಜಗಳವಾಡಬೇಡಿರಿ. ಆ ಕೆಲಸ ವೀರಮ್ಮನದು. ಆಕೆಗೆ ಒಪ್ಪಿಸಿದ್ದೇನೆ. ಆಕೆಯೇ ಗಾಳಿ ಬೀಸಲಿ ಎಂದು ಅವರು ಅಂದ ಕೂಡಲೇ ಎಲ್ಲಾ ಹೆಣ್ಣುಮಕ್ಕಳು ಏನೂ ಮಾತಾಡದೆ ಸುಮ್ಮನಾಗಿ ನನಗೆ ಬಿಟ್ಟುಕೊಡುತ್ತಿದ್ದರು. ನಾನೇ ೨ ತಾಸು ಗಾಳಿ ಹಾಕುತ್ತಿದ್ದೆ. ಅವರೇನು ಗಾಳಿ ಬೀಸಿರಿ ಅನ್ನುತ್ತಿದ್ದಿಲ್ಲ. ನಮ್ಮ ನಮ್ಮ ಪ್ರೇಮಕ್ಕಾಗಿ ಗಾಳಿ ಹಾಕುತ್ತಿದ್ದೆವು.

ತಿರುಗಾಡಿ ಬಂದ ಮೇಲೆ ನನ್ನ ಕೂಡ ಅರ್ಧ ತಾಸು ಆಟ. ಅಣಗಿಸುವದು ಮತ್ತು ಕಥೆ ಹೇಳುವುದು, ತಾವು ಸಣ್ಣವರಿರುವಾಗ ಅವರ ತಾಯಿ ಅವರಿಗೆ ಹೇಗೆ ಪ್ರೇಮ ಮಾಡುತ್ತಿದ್ದರೋ ಅದೆಲ್ಲಾ ನನಗೆ ಹೇಳುತ್ತಿದ್ದರು. ಒಟ್ಟು ನನ್ನನ್ನು ಬಿಟ್ಟು ಒಂದು ತಾಸೂ ಇರುತ್ತಿರಲಿಲ್ಲ. ಆಗ್ಗೆ ನಾನು ೧೩-೧೪ ವರ್ಷದ ಬಾಲೆ. ಪತಿಯು 'ಮಾಡು ಇಲ್ಲವೆ ಮಡಿ' ಎಂಬ ಮಾತಿನಂತೆ ಸತ್ಯಾಗ್ರಹಕ್ಕೆ ಹೋಗಿದ್ದರು. ಅವರು ಬರುವ ತನಕ ತಮ್ಮ ಮುದ್ದುಮಗಳಂತೆ ನನ್ನನ್ನು ತಮ್ಮ ಹತ್ತಿರ ಗಾಂಧೀಜಿ

ಇಟ್ಟುಕೊಂಡಿದ್ದರು. ಪತಿಯು ಬಂದ ನಂತರ ಅವರಿಗೆ ನನ್ನನ್ನು ಒಪ್ಪಿಸಿದರು. ನೋಡು ಕರಿಯಪ್ಪಾ, ಈ ಮಗಳನ್ನು ದೇವರು ಒಪ್ಪುವಂತೆ ನಿನ್ನ ಧರ್ಮಪತ್ನಿಯನ್ನಾಗಿ ಮಾಡಿಕೊಂಡು ಸರ್ವ ರೀತಿಯಿಂದಲೂ ಯೋಗಕ್ಷೇಮ ತಕ್ಕೊಳ್ಳಬೇಕು. ಯಾವ ರೀತಿಯಿಂದಲೂ ಕಷ್ಟಕ್ಕೆ ಹಾಕದಿರು ಎಂದು ಆಶೀರ್ವದಿಸಿ ನಮ್ಮಿಬ್ಬರನ್ನು ಕಳಿಸಿದರು. ಮತ್ತು ನನಗೆ ಹೇಳಿದರು, ವೀರಮ್ಮಾ, ನಿನಗೆ ಕಷ್ಟವಾದಾಗ್ಗೆ ನನಗೆ ಪತ್ರ ಬರೆಯುತ್ತಿರು ಎಂದು.

–ವೀರಮ್ಮ ಎರೇಸೀಮೆ

* * *

## ೨೧. ಶ್ರೀ ಕರಿಯಪ್ಪ ಎರೇಸೀಮಿ, ಸಂಗೂರ ಇವರ ನೆನಹು

೧೯೩೬ರಲ್ಲಿ ಸೇವಾಗ್ರಾಮದಲ್ಲಿ ಗಾಂಧೀಜಿಯವರು ಇರುವಾಗ ಅವರ ಆಂಗ್ಲ ಶಿಷ್ಯಳಾದ ಮಿಸ್ ಸ್ಲೇಡರ್ (ಶ್ರೀಮತಿ ಮೀರಾಬೆನ್) ಮತ್ತು ಶ್ರೀ ನಾನಾವಟಿ ಸಂಗೀತ ವಿಶಾರದರು ವಿಷಮಜ್ವರದ ಕಾಯಿಲೆಯಿಂದ ಹಾಸಿಗೆ ಹಿಡಿದರು. ಗಾಂಧೀಜಿಯವರು ತಮ್ಮ ಯಾವತ್ತೂ ಕಾರ್ಯಕಲಾಪಗಳನ್ನು ನಿಲ್ಲಿಸಿ ಇವರ ಶುಶ್ರೂಷೆಗಾಗಿಯೇ ನಿಂತುಬಿಟ್ಟರು. ಅವರಿಗೆ ಎನಿಮಾ ಕೊಡುವುದೂ, ಸ್ಪಂಜ್‌ಬಾತ್ ಮಾಡಿಸುವುದೂ, ಬಟ್ಟೆ ಬದಲಿಸಿ ಒಗೆದ ವಸ್ತ್ರಗಳನ್ನು ಸಂಜೆ ಬೆಳಗ್ಗೆ ತೊಡಿಸುವುದೂ, ಹಣ್ಣಿನ ರಸ, ಮಜ್ಜಿಗೆ ಕೊಡುವದೂ, ಜ್ವರದ ಏರಿಕೆಯ ಸಮಯದಲ್ಲಿ ತಣ್ಣೀರಿನಲ್ಲಿ ಅದ್ದಿ ಹಿಂಡಿದ ಹಚ್ಚಡ ಹೊದಿಸುವುದೂ ಮುಂತಾದ ಕಾರ್ಯಗಳನ್ನು ಸ್ವತಃ ಗಾಂಧೀಜಿಯವರೇ ಹಡೆದ ತಾಯಿಯಂತೆ ಮಾಡುತ್ತಲಿದ್ದರು. ಇಷ್ಟೇ ಅಲ್ಲ, ಅವರ ಹಾಸಿಗೆಯ ಬಳಿ ಕುಳಿತು ಗಾಳಿ ಹೊಡೆಯುತ್ತ ಉಚ್ಚ ಮಾನವತೆಯ ಆಧ್ಯಾತ್ಮ ವಿಚಾರಗಳನ್ನು ತಿಳಿಸಿ ಬೇನೆಯ ವೇದನೆಗಳಿಂದ ಮನ ಮುಕ್ತಗೊಳಿಸುತ್ತಿದ್ದರು.

ತಮ್ಮ ಮೇಲಿರುವ ದೇಶದ ಹೊಣೆಗಾರಿಕೆಯ ಮಹತ್ವದ ಕಾರ್ಯಗಳನ್ನು ಬಿಟ್ಟು ಬೇನೆಯವರ ಸೇವೆಯಲ್ಲಿ ಗಾಂಧೀಯವರೇ ನಿಂತುಬಿಟ್ಟಿದ್ದರು. ಇದು ನನಗೆ ಸರಿಬರಲಿಲ್ಲ. ಆಗ ನಾನು ಗ್ರಾಮಸೇವಕ ವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಲಿದ್ದೆನು. "ಬಾಪೂಜಿ, ನಮ್ಮಂಥ ಗ್ರಾಮಸೇವಕರು ನಿಮ್ಮ ಬಳಿಯಿರುವಾಗ ನಮಗೇಕೆ ಈ ಬೇನೆಯವರ ಸೇವೆಯನ್ನು ಒಪ್ಪಿಸುವುದಿಲ್ಲ? ಎಲ್ಲಾ ಸೇವೆಯನ್ನೂ ನೀವೇ ಮಾಡಬೇಕೆಂದು ಗುತ್ತಿಗೆ ಯೇನೂ ಇಲ್ಲ ನಿಮ್ಮ ಮಾರ್ಗದರ್ಶನದಲ್ಲಿ ಈ ಸೇವೆಯನ್ನ ನಾವು ಮಾಡ ಬಹುದಲ್ಲ" ಎಂದು ಅಂಜುತ್ತಂಜುತ್ತ ಸರಳಭಾವನೆಯಿಂದ ನನ್ನ ನಮ್ರ ವಿಚಾರ ತಿಳಿಸಿದೆನು.

ಕೂಡಲೇ ಗಾಂಧೀಜಿಯವರು ನಮ್ಮ ಕಡೆಗೆ ನೋಡಿ ಒಳ್ಳೇ ವಿಚಾರವಿದು. ಯಾರು ಬರುವವರು ಇಬ್ಬರು ಬಂದುಬಿಡಿರಿ ಎಂದು ಕರೆಕೊಟ್ಟರು. ತಕ್ಷಣ ನಾನೂ ಮತ್ತು ಶ್ರೀ ಸಿದ್ಧರಾಮ ಹರಕುಣಿ (ಸಿದ್ದರಾಮ ಗುರೂಜಿ) ನಾವಿಬ್ಬರೂ ವಿದ್ಯಾಲಯಕ್ಕೆ ಶರಣು ಹೊಡೆದು ಗಾಂಧೀಜಿಯವರ ಆಶ್ರಮಕ್ಕೆ ಬಂದು ನಿಂತೆವು.

ನಮ್ಮಿಬ್ಬರಿಗೂ ಗಾಂಧೀಯವರು ಕರೆದು ಬೇನೆಯವರ ಸೇವೆ ಹೇಗೆ ಮಾಡಬೇಕೆಂಬ ಬಗ್ಗೆ ಸರಿಯಾದ ತಿಳುವಳಿಕೆ ಕೊಟ್ಟರು. ವಿಷಮಜ್ವರವು ಬಹಳ ಕೆಟ್ಟ ವಾಯಿಲೆಯು. ಬಹಳ ಕಾಳಜಿಯಿಂದ ರೋಗಿಗಳ ಶುಶ್ರೂಷೆ ಮಾಡಿದರೇನೇ ರೋಗಿ ಗುಣಹೊಂದುವದು. ಇಲ್ಲವಾದರೆ ಈ ಬೇನೆ ಮರುಕಳಿಸಿ ಬೇನೆಯವರನ್ನು ಬಹಳ ಬಳಲಿಸುವುದು, ಎಂದು ತಿಳಿಸಿದರು. ನನಗೆ ಮೀರಾಬೆನ್ನರ ಉಪಚಾರಕ್ಕೆ ನಿಲ್ಲಿಸಿದರು. ಸಿದ್ಧರಾಮಜಿಯವರನ್ನು ಶ್ರೀ ನಾನಾವಟೆಯವರ ಉಪಚಾರಕ್ಕೆ ನಿಲ್ಲಿಸಿದರು.

ಗಾಂಧೀಜಿಯವರು ನಮ್ಮ ಊಟದ ವಿಚಾರ ಕೇಳಿದರು (೧೯೩೬ರಲ್ಲಿ) ವಿದ್ಯಾಲಯ ದಿಂದ ಪ್ರತಿ ತಿಂಗಳು ನಮಗೆ ಆರು ರೂ.ಗಳು ಊಟಕ್ಕೆಂದು ಸಹಾಯ ಕೊಡುತ್ತಿದ್ದರು. ಅದನ್ನೇ ಇಲ್ಲಿ ಕಳುಹಿಸಲು ತಿಳಿಸುತ್ತೇವೆ. ಅದರಲ್ಲಿಯೇ ನಮಗೆ ಕಾಯಿ, ಸೊಪ್ಪು. ರೊಟ್ಟಿ ಕೊಡಿರಿ. ನಮಗೆ ಹೆಚ್ಚಿನದೇನೂ ಅವಶ್ಯವಿಲ್ಲ. ನಾವು ಬೇನೆಯವರ ಉಪಚಾರಕ್ಕೆ ಮಹತ್ವ ಕೊಡುತ್ತೇವೆ. ನಿಮಗೆ ಯಾವ ಭಾರವನ್ನೂ ಹಾಕಲು ಇಚ್ಛಿಸುವುದಿಲ್ಲ, ಎಂದು ನಾವು ತಿಳಿಸಿದೆವು. ಯಾಕೆಂದರೆ ಅಲ್ಲಿಯ ಊಟದ ಖರ್ಚು ದೊಡ್ಡದಿತ್ತು. (ಹಾಲು. ಹಣ್ಣು, ಬೆಣ್ಣೆಯ ಖರ್ಚಿನಿಂದ.)

ಆಗ ಗಾಂಧೀಜಿಯವರು "ಕಸ್ತೂರಬಾರವರಿಗೆ ಕರೆದು ಈ ಕನ್ನಡ ಸಹೋದರರಿಗೂ ನಮ್ಮ ಆಶ್ರಮದ ಊಟವನ್ನೇ ಕೊಡಿರಿ. ಅವರ ಊಟದ ಬಗ್ಗೆ ಆರು ರೂ.ಗಳನ್ನು ಮಾತ್ರ ತಕ್ಕೊಳ್ಳಿರಿ. ಅವರೂ ನಮ್ಮ ಊಟವನ್ನೇ ಉಣ್ಣಲಿ ಎಂದರು.

ಆದಾಗ್ಯೂ ನಾವು ರೊಟ್ಟಿ, ಪಲ್ಯೆಗಳ ಹೊರತು ಏನನ್ನೂ ಬಡಿಯಿಸಿಕೊಳ್ಳುತ್ತಿರಲಿಲ್ಲ. ಗಾಂಧೀಯವರು ನಮಗಾಗಿ ಮಜ್ಜಿಗೆಯನ್ನು ತಾವೇ ತಂದು ತೆಗೆದುಕೊಳ್ಳಲು ಹೇಳು ತ್ತಿದ್ದರು. ಅವರ ತಾಯಿ ಸ್ವಭಾವಕ್ಕೆ ಒಳಗಾಗಿ ಯಥೇಚ್ಛವಾಗಿ ಮಜ್ಜಿಗೆಯನ್ನು ಮಾತ್ರ ತಕ್ಕೊಂಡು ಉಣ್ಣುತ್ತಿದ್ದೆವು.

ನನ್ನನ್ನು ಮೀರಾಬೆನ್ನರ ಸೇವೆಗೆ ನೇಮಿಸಿದರೂ ಸಹ ಅವರು ಆಂಗ್ಲ ಮಹಿಳೆ ಯಾದ್ದರಿಂದ ಉಳಿದವರ ಸಂಗಡ ಸಂಪರ್ಕವೇ ಇರಲಿಲ್ಲ. ಕೇವಲ ಗಾಂಧೀಜಿಯವರನ್ನು ಮಾತ್ರ ತಂದೆ ತಾಯಿತಂತೆ ನಂಬಿ ನನ್ನ ಜೀವನ ಪರಿವರ್ತನೆಮಾಡಿಕೊಂಡು ಬ್ರಹ್ಮಚರ್ಯದ ಬಾಳಿನಲ್ಲಿ ಬೆಳೆದು ಬಂದಿದ್ದಳು. ಅವಳ ಸಂಕೋಚಕ್ಕಾಗಿ ಗಾಂಧೀಜಿ ಯವರೇ ಮೀರಾಬೆನ್ನಳಿಗೆ ಮಲಮೂತ್ರ ಮಾಡಿಸಿ ಮೈತೊಳೆದು ಬಟ್ಟೆ ತೊಡಿಸುತ್ತಿದ್ದರು. ಶುಶ್ರೂಷೆಯ ಇತರ ಕಾರ್ಯಗಳನ್ನು ನಾನು ಮಾಡುತ್ತಿದ್ದೆನು.

ಒಂದು ದಿನ ಪಂ. ಮದನಮೋಹನ ಮಾಲವೀಯಜಿಯವರಿಂದ ಮಹತ್ವದ ತಾರು ಬಂದಿತು. "ಇಂದೇ ಹೊರಟು ಬನಾರಸಕ್ಕೆ ಬನ್ನಿರಿ" ಎಂದು ತಾರಿನಲ್ಲಿತ್ತು. ಅಲ್ಲಿ ಹೋಗುವದೂ ಬಹಳ ಮಹತ್ವವಿತ್ತು. ಈ ಬೇನೆಯವರ ಆರೈಕೆಯು ಅಷ್ಟೇ ಮುಖ್ಯವಿತ್ತು. ಮೀರಾನ ಎಲ್ಲ ಉಪಚಾರದ ಭಾರವನ್ನು ಕರಿಯಪ್ಪನಿಗೆ ಪೂರ್ತಿವಹಿಸಿ ಹೋಗಬೇಕೆಂದು ನಿರ್ಧರಿಸಿದರು. ಮೀರಾಬೆನ್ನರಿಗೆ ಈ ವಿಚಾರ ತಿಳಿಸುತ್ತಲೇ ಸಂಕೋಚದಲ್ಲಿ ಬೇಸರ

ಗೊಂಡಳು. ಕೂಡಲೇ ಗಾಂಧೀಯವರು ಮೀರಾ ನೀನು ನನ್ನಲ್ಲಿ ೧೨ ವರ್ಷಗಳ ಕಾಲ ಇದ್ದು ಬ್ರಹ್ಮಚರ್ಯ ವಿಚಾರವನ್ನು ತಿಳಿದುಕೊಂಡಿರುವಿ. ಅಂದ ಮೇಲೆ ಕರಿಯಪ್ಪ ನಿನ್ನ ಒಡಹುಟ್ಟಿದ ಸಹೋದರನೆಂದು ಇಲ್ಲವೇ ಅವನೂ ನಿನ್ನಂತೆ ಒಂದು ಹೆಣ್ಣೇ ಎಂದು ಭಾವನೆಯನ್ನು ಮಾಡಿಕೊಂಡು ವಿಕಾರದ ಬಲೆಯಿಂದ ಮುಕ್ತಜೀವನದ ಅನುಭವ ಹೊಂದಬೇಕಿತ್ತು ಎಂದು ಗಂಭೀರಭಾವದಲ್ಲಿ ನುಡಿದರು.

ಗಾಂಧಿಯವರ ತಾಯಿತನದ ಭಾವವನ್ನು ಅರಿತು ತಮ್ಮ ಸಂಕುಚಿತ ಭಾವನೆಗಳನ್ನು ಮರೆತು ಅವರ ಇಚ್ಛೆಯಂತೆ ನಡೆದುಕೊಳ್ಳಲು ಆನಂದದಿಂದ ಆಕೆ ಒಪ್ಪಿ ಗಾಂಧೀಜಿಯವರಿಗೆ ಹೋಗಲು ಸಮ್ಮತಿ ಇತ್ತರು.

ಮೀರಾಬೆನ್ನರ ಶುಶ್ರೂಷೆಯ ಅಂಗವಾಗಿ ಅವರಿಗೆ ಮೈ ಒರೆಸುವದು, ಬಟ್ಟೆ ಬದಲಿಸುವುದು, ಎನಿಮಾ ಕೊಡುವುದು, ಮುಂತಾದ ಎಲ್ಲಾ ಕೆಲಸಗಳನ್ನು ನಾನು ಮಾತೃಭಾವದಿಂದ ಮಾಡುತ್ತಿದ್ದೆ. ಅವರಾದರೂ ಯಾವ ಸಂಕೋಚವೂ ಇಲ್ಲದೆ ಭ್ರಾತೃಭಾವದಿಂದ ಈ ಎಲ್ಲಾ ಸೇವೆ ಸ್ವೀಕರಿಸುತ್ತಿದ್ದರು. ನಮ್ಮ ಸೇವೆಯಿಂದ ಇಬ್ಬರೂ ರೋಗಿಗಳು ಗುಣಹೊಂದಿದರು.

ಗಾಂಧೀಯವರು ತಿರುಗಿ ಆಶ್ರಮಕ್ಕೆ ಬಂದರು. ಒಂದು ಪ್ರಾರ್ಥನಾ ಸಭೆಯಲ್ಲಿ ಮೀರಾಬೆನ್ನರ ವಿಷಯ ನೆನಪಿಗೆ ತಂದು "ನನ್ನಲ್ಲಿ ಇಬ್ಬರು ಕರ್ನಾಟಕದ ಮೂಕ ಸೇವಕರು ಇರುವರು. ಅವರ ಸೇವೆಯು ನನಗೂ ಬಲ ಹಾಗೂ ಬೆಳಕು ಕೊಟ್ಟಿದೆ. ಬೇನೆಯವರ ಉತ್ತಮ ಸೇವೆಗೈದರು. ರೋಗಿಗಳು ಆರೋಗ್ಯವಂತರಾದರು. ನನ್ನಲ್ಲಿ ಇಂಥವರನ್ನು ಅವರ ಕೆಲಸ ಮುಗಿಯುತ್ತಲೇ ಅವರನ್ನು "ಭಾಗೋ ಯಹಾಸೆ" ಎಂದು ಕಳಿಸಿಬಿಡುವೆನು. ಆದರೆ ಈ ಇಬ್ಬರೂ ಸೇವಕರು ಕೊನೆಯವರೆಗೂ ನನ್ನಲ್ಲೇ ಇರಲು ಅಡ್ಡಿ ಇಲ್ಲ. ಅವರಿಗೆ ನನ್ನಲ್ಲಿ ಸದಾ ಆಶ್ರಯವಿದೆ" ಎಂದು ಗಂಭೀರ ಚಿತ್ತದಲ್ಲಿ ತಮ್ಮ ಭಾವವನ್ನು ವ್ಯಕ್ತಗೊಳಿಸಿದರು.

ಸರ್ವಶ್ರೀ ಎಂ.ರಮಾನಂದ, ಗೋವಿಂದರೆಡ್ಡಿ, ಶ್ರೀಧರಗೋಪಾಲ ಕಿಣಿ, ಮತ್ತು ಶ್ರೀಮತಿಯವರಾದ ರುದ್ರಮ್ಮ ಕೊಟ್ಟೂರ, ಸುಶೀಲಮ್ಮ ಕೊಟ್ಟೂರ, ಮಹಾದೇವಿತಾಯಿ, ಇವರೇ ಮೊದಲಾದವರು ವಾರ್ಧಾದಲ್ಲಿ ಬೇರೆ ಬೇರೆ ಕಾಲಕ್ಕೆ ಇದ್ದರು.

**–ಕರಿಯಪ್ಪ ಎರೇಶೀಮಿ, ಸಂಗೂರ**

* * *

## ೨೨. ಶ್ರೀ ನೀ.ಗೋ. ಗಣಾಚಾರಿಯವರ ನೆನಹು

೧. ೧೯೪೦ರಲ್ಲಿ ಕರ್ನಾಟಕ ಚರಖಾ ಸಂಘದ ವತಿಯಿಂದ ಖಾದಿ ವಿದ್ಯಾಲಯಕ್ಕೆ ನನ್ನನ್ನು ಸೇವಾಗ್ರಾಮಕ್ಕೆ ಕಳಿಸಿದ್ದರು. ದಿನಾಲು ಸಂಜೆಯ ಪ್ರಾರ್ಥನೆಗೆ ಹೋಗುತ್ತಿದ್ದೆನು.

ಹಾಗೂ ಸಂಜೆಯ ತಿರುಗಾಟದ ಸಮಯಕ್ಕೂ ಗಾಂಧೀಜಿಯವರ ಕೂಡ ಹೋಗುತ್ತಿದ್ದೆನು. ಒಂದು ದಿನ ಸಂಜೆಯ ತಿರುಗಾಟಕ್ಕೆ ಹೋದಾಗ ಅಕಸ್ಮಾತ್ ಉಗುಳುವ ಪ್ರಸಂಗ ಬಂದಿತು. ಆಗ ಗಾಂಧೀಜಿ ರಸ್ತೆದ ಬಾಜುಕ್ಕೆ ಉಗುಳಿ ಕಾಲಿನಿಂದ ಮಣ್ಣು ಹಾಕಿದರು. ಅಂದಿನಿಂದ ಸ್ವಚ್ಛತೆಯ ಪರಿಣಾಮ ನನಗಾಯಿತು. ಸ್ವಚ್ಛತೆಯ ದೃಷ್ಟಿಕೋನವೂ ನನಗುಂಟಾಯಿತು.

೨. ಒಂದು ದಿನ ಇದೇ ರೀತಿ ಸಂಜೆಯ ತಿರುಗಾಟಕ್ಕೆ ಹೋದಾಗ ಒಂದು ಮೈಲು ದೂರದಲ್ಲಿದ್ದಾಗ ಪ್ರಾರ್ಥನಾ ಗಂಟೆ ಕೇಳಿಸಿತು. ಏಕದಂ ಹಿಂತಿರುಗಿ ಅತಿ ವೇಗದಿಂದ ಬಂದು ಆಶ್ರಮ ತಲುಪಿ ಕೈಕಾಲು ತೊಳೆದು ಗಾಂಧೀಜಿ ಪ್ರಾರ್ಥನೆಯಲ್ಲಿ ಭಾಗವಹಿಸಿದರು. ಪ್ರಾರ್ಥನೆ ಮುಗಿದ ಮೇಲೆ ನನ್ನ ಶರೀರದಂತೆ ನನ್ನ ಗಡಿಯಾರವೂ ದುರ್ಬಲವಾಗಿದೆ ಎನ್ನುತ್ತಾ ಪ್ರಾರ್ಥನೆಗೆ ತಡವಾಗಿ ಬಂದದ್ದಕ್ಕೆ ಕ್ಷಮೆ ಕೋರಿದರು. ಇದರಿಂದ ವೇಳೆಗೆ ಸರಿಯಾಗಿ ಕೆಲಸ ಮಾಡುವ ಮಹತ್ವದ ಪರಿಣಾಮ ನನ್ನ ಮೇಲೆ ಆಯಿತು.

೩. ೧೯೪೫ನೇ ಇಸ್ವಿಯಲ್ಲಿ ಚರಖಾ ಸಂಘದಿಂದ ೨ನೇ ಸಾರಿ ಸಮಗ್ರ ಗ್ರಾಮ ಸೇವಾ ಶಿಕ್ಷಣಕ್ಕಾಗಿ ಸೇವಾಗ್ರಾಮಕ್ಕೆ ೨ ವರ್ಷ ಹೋಗುವ ಪ್ರಸಂಗ ಬಂದಿತು. ಒಮ್ಮೆ ಸಂಜೆಯ ಆಶ್ರಮ ಪ್ರಾರ್ಥನೆ ಮುಗಿದ ಮೇಲೆ ೧೫೦ ಗ್ರಾಮಸೇವಕರಾಗುವವರಿಗಾಗಿ ಹೀಗೆ ಹೇಳಿದರು:- ನೀವೆಲ್ಲರೂ ಗ್ರಾಮಸೇವೆಯ ಶಿಕ್ಷಣ ಪಡೆಯಲು ಬಂದಿರುವಿರಿ. ನಿಮಗೆ ನಿಮ್ಮ ಕಲಾಕೌಶಲ್ಯದ ಬಗ್ಗೆ ಸರ್ಟಿಫಿಕೇಟ ಸಿಗಬಹುದು. ಅದರಿಂದ ನೌಕರಿ ಸಿಗಲಿಕ್ಕಿಲ್ಲ, ಹಣ ಸಿಗಲಿಕ್ಕಿಲ್ಲ, ಪದವಿ ಸಿಗಲಿಕ್ಕಿಲ್ಲ. ಆದರೆ ಹಳ್ಳಿಗರ ಸೇವೆ ಮಾಡಿದ ಆನಂದದ ಲಾಭ ಸಿಗಬಹುದು. ಈ ಸರ್ಟಿಫಿಕೇಟಿಗಿಂತಲೂ ಹಳ್ಳಿಗರ ಸೇವೆಗೆ ಪಾತ್ರರಾದಾಗ ಮಾತ್ರ ನಿಜವಾದ ಸರ್ಟಿಫಿಕೇಟ್ ಸಿಕ್ಕಂತಾಗುವುದು. ನಿಮ್ಮಂಥ ಸೇವಾ ಪರಾಯಣರಿಂದಲೇ ನನ್ನ ಗ್ರಾಮ ಸ್ವರಾಜ್ಯ ಸಾಕಾರವಾಗಬಲ್ಲದೆಂದರು.

**ನೀ.ಗೋ.ಗಣಾಚಾರಿ**
ಸುರೇಬಾನ

* * *

## ೨೩. ಶ್ರೀಮತಿ ಸಿದ್ದಮ್ಮ ಮೈಲಾರ ಇವರ ನೆನಹು

**ಗಾಂಧೀಜಿಯ ಸಾಂತ್ವನಪರ ಸಂದೇಶ**

ನಾನು ಹಾಗೂ ನನ್ನ ಪತಿ ದಿವಂಗತ ಮಹದೇವ ಮೈಲಾರ ಇಬ್ಬರೂ ಗಾಂಧೀಜಿಯ ಆಶ್ರಮಕ್ಕೆ ಹೋಗಿ ಕೆಲವು ದಿನ ಅಲ್ಲಿ ಇರುವ ಸೌಭಾಗ್ಯ ಒದಗಿತ್ತು.

ಆಶ್ರಮದಲ್ಲಿ ಅವರ ದಿವ್ಯಬೋಧಾಮೃತದ ಸವಿಯನ್ನುಂಡು ಕರ್ತವ್ಯದ ನಿಷ್ಠೆಯ ಅರಿವನ್ನು ಅರಿತು ಅಹಿಂಸಾ ಸೈನಿಕರೆಂದು. ನಾನೂ ಹಾಗೂ ನನ್ನ ಪತಿ ಮಹದೇವರೂ

ಕರಿನಾಡಿನ (ಕರ್ನಾಟಕ ಮಾತೆಯ) ಸೇವೆಯನ್ನು ಮಾಡಲು ಬಾಪೂಜಿಯವರ ಆಶೀರ್ವಾದ ಪಡೆದು ಹಿಂದಿರುಗಿದೆವು. ಅವರ ಮಾರ್ಗದರ್ಶನ ಹಾಗೂ ಸೂಕ್ತ ಸಲಹೆ ಸೂಚನೆಗಳಂತೆ ಗ್ರಾಮೋದ್ಧಾರ ದೀಕ್ಷೆಯನ್ನು ಹೊಂದಿ ಸೇವೆ ಮಾಡುತ್ತಿರುವಷ್ಟರಲ್ಲಿಯೇ "ಮಾಡು ಇಲ್ಲವೆ ಮಡಿ" ಎಂಬ ಬಾಪೂಜಿಯವರ ಸತ್ಯಾಗ್ರಹ ಚಳವಳಿ ಪ್ರಾರಂಭ ವಾಯಿತು. ಅವರ ಆದೇಶದಂತೆ ನನ್ನ ಪತಿ ಹುತಾತ್ಮ ಮಹದೇವರು ರಾಷ್ಟ್ರ ಸ್ವಾತಂತ್ರ್ಯದ ಮಹಾಯಜ್ಞದಲ್ಲಿ ಕಾರ್ಯ ಮಾಡುತ್ತ ಪ್ರಾಣತೆತ್ತು ಮಾತೃಭೂಮಿಯ ಋಣ ತೀರಿಸಿದರು. ಈ ಸುದ್ದಿ ಬಾಪೂಜಿಯವರಿಗೆ ತಿಳಿದಾಗ ಬಾಪೂಜಿಯವರು ವ್ಯಥೆಪಟ್ಟುಕೊಂಡು ಆಮೇಲೆ ಮನಸ್ಸಿಗೆ ಸಮಾಧಾನ ತಂದುಕೊಂಡು ನನಗೂ ಸಾಂತ್ವನ ಪತ್ರ ಬರೆದರು. ದೇಶವನ್ನು ಬಂಧಮುಕ್ತಮಾಡುವಲ್ಲಿ ಮಹದೇವರಂಥ ಪುತ್ರರತ್ನಗಳನ್ನು ಅದೆಷ್ಟು ಕಳೆದುಕೊಳ್ಳಬೇಕಾಗುವದೋ ಎಂದು ಗಾಂಧೀಜಿ ಉದ್ಗಾರ ತೆಗೆದಿದ್ದಾರೆ. ಹಾಗೂ ನನಗಾದ ದುಃಖದಲ್ಲಿ ತಾವೂ ಪಾಲ್ಗೊಂಡು ಕೇವಲ ದುಃಖದಲ್ಲೇ ಕಾಲಹರಣ ಮಾಡದೇ ದೇಶಸೇವೆಯ ಹಾಗೂ ಜನಸೇವೆಯ ಕಾರ್ಯದಲ್ಲಿ ತನು-ಮನವನ್ನು ದಂಡಿಸಿ ಮಾನವರು ತಮ್ಮ ಪಾಲಿನ ಋಣ ತೀರಿಸಬೇಕೆಂದು ಪುನಃ ನನ್ನನ್ನು ಕರ್ತವ್ಯೋನ್ಮುಖಿಳ ನ್ನಾಗಿ ಮಾಡಿದರು. ಬಾಪೂರವರ ಆಶೀರ್ವಾದದಿಂದ ಪುನಃ ಕರ್ತವ್ಯದತ್ತ ಮನಸ್ಸು ಮಾಡಿ ನಾನು ಕಾರ್ಯ ಮಾಡಹತ್ತಿದೆ.

ಸಿದ್ದಮ್ಮ ಮೈಲಾರ

* * *

## ೨೪. ಶ್ರೀಮತಿ ಲೀಲಾವತಿ ಮಾಗಡಿ ಇವರ ನೆನಹು

(೧) ೧೯೩೪ರಲ್ಲಿ ಗಾಂಧೀಜಿ ಕೈಕೊಂಡ ಹರಿಜನ ಸಂಚಾರದಲ್ಲಿ ಕರ್ನಾಟಕಕ್ಕೆ ೧೩ ದಿನಗಳು ಬಂದಿದ್ದರು. ಪ್ರವಾಸದ ಕೊನೆಯ ಘಟ್ಟವಾದ ಬೆಳಗಾಂವಿಯಲ್ಲಿ ಹರಿಜನ ಸೇವಕ ಸಂಘದ ಅಧ್ಯಕ್ಷರಾದ ನನ್ನ ತಂದೆ ತಾಯಿಯ ಜೊತೆ ನಾನು ಗಾಂಧೀಜಿ ಅವರನ್ನು ಕಂಡೆನು. ಅದೇ ನಾನು ಶಾಂತಿನಿಕೇತನದಿಂದ ಮರಳಿದ್ದೆ. "ಇವಳು ನನ್ನ ಹಿರಿಯ ಮಗಳು ಅಭ್ಯಾಸ ಮಾಡುತ್ತಿದ್ದಾಳೆ" ಶಾಂತಿನಿಕೇತನದಲ್ಲಿ ಎಂದು ನನ್ನ ತಂದೆ ಅವರಿಗೆ ಹೇಳಿದರು.

ಗಾಂಧೀಜಿ : ಏನು ಕಲಿಯುತ್ತೀ

ನಾನು : ಹೈಸ್ಕೂಲು ಓದುತ್ತೇನೆ

ಗಾಂ : ಈಗಲೇ ಮದುವೆಯಾಗಬೇಡ. ೨೫ ವರ್ಷದ ಅನಂತರ ಆಗು.

ನಾ : ನಿಮ್ಮ ಹಸ್ತಾಕ್ಷರ ಬೇಕು. ಆಗ ಅವರಿಗೆ ನನ್ನ ಕೈಯಲ್ಲಿಯ ಬಂಗಾರದ ಬಳೆಗಳು ಗೋಚರವಾದವು.

ಗಾಂ : ಹಾಗಾದರೆ ಬಳೆಗಳನ್ನು ಕೊಡು.

ನಾ : ಇವು ನನ್ನವಲ್ಲ ತಂದೆತಾಯಿಯವರದು. ಆಗ ಅವರು ಹಾಸ್ಯವಾಗಿ,

ಗಾಂ : ಓಹೋ, ನೀನು ಶಾಂತಿನಿಕೇತನದಲ್ಲಿ ಕಲಿಯುತ್ತಿರುವಿಯಲ್ಲವೇ ಎಂದು ನಕ್ಕು ಹಿಂದೀ, ಇಂಗ್ಲಿಷ್‌ಗಳ ಮಧ್ಯೆ ಕನ್ನಡದಲ್ಲಿ "ಗಾಂಧಿ" ಎಂದು ಬರೆದುಕೊಟ್ಟರು.

(೨) ೧೯೪೨ರಲ್ಲಿ ಬಾಪುವಿನ ದ್ವಿತೀಯ ನಿಕಟ ಸಂದರ್ಶನವಾಯಿತು. (ವಿವಾಹದ ನಂತರ). ನನ್ನ ರಜೆಯ ಕಾಲವನ್ನು ಅಲ್ಲೇ ಕಳೆಯಲು ಹೋಗಿದ್ದೆ. ಬಾಪು ಎ.ಐ.ಸಿ.ಸಿ. ಸಭೆಗೆ ಹೊರಡಲುದ್ಯುಕ್ತರಾಗಿದ್ದರು.

ನಾ : ನಾನು ಇಲ್ಲಿಯೇ ಇರಲೋ, ಏನು ಮಾಡಲಿ?

ಗಾಂ : ನಾನು ಮುಂಬೈಯಿಂದ ಬರುವವರೆಗೆ ಇಲ್ಲಿಯೇ ಸೇವಾಗ್ರಾಮದಲ್ಲಿ ಇರು ಎಂದರು. ಆದರೆ ಅವರು ಎಂದೂ ಬರದಂತೆ ಹೋಗುವರೆಂದು ಅರಿತವರಾರು?

* * *

## ೨೫. ಸಂ.ಬ. ಸಾಸನೂರ ಇವರ ನೆನಹು

ಬಿಜಾಪುರ

ತಾ॥ ೮-೩-೧೯೩೪

ಮಹಾತ್ಮರು ಹರಿಜನ ಕಾರ್ಯಕ್ರಮವನ್ನು ಕೈಗೊಂಡೇ ವಿಜಾಪುರಕ್ಕೆ ಆಗಮಿಸಿದ್ದರು. ಆ ಕಾಲಕ್ಕೆ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು ಮದ್ದುರಾವ ಕೆಂಭಾವಿಯವರಿದ್ದರು. ಮಧ್ಯಾಹ್ನದಲ್ಲಿ ಛತ್ರೆ ಥೇಟರಲ್ಲಿ ಸಭೆಯನ್ನು ಏರ್ಪಡಿಸಲಾಗಿತ್ತು. ಜಿಲ್ಲಾ ಹರಿಜನ ಸಂಘದ ಅಧ್ಯಕ್ಷರು ಶ್ರೀ ಶಂಕರಗೌಡ ಪಾಟೀಲರು ಇವರು ಇದ್ದರು. ಮಹಾತ್ಮರು ವೇದಿಕೆಯ ಮೇಲೆ ಮೊಳಕಾಲು ಮಂಡೆಗಳ ಮೇಲೆ ಕುಳಿತರು. ಹರಿಜನಕಾರ್ಯದ ಬಗ್ಗೆ ಕಳಕಳಿಯಿಂದ ಮಾತನಾಡಿದರು. ಕೆಲವರು "ಹರಿಜನ" ಹೆಸರಿನ ಬಗ್ಗೆ ತಕರಾರು ಮಾಡಿದ ಪ್ರಶ್ನೆಯನ್ನು ಎತ್ತಿಕೊಂಡರು. ಹರಿಜನ ಹೆಸರಿನ ಬಗ್ಗೆ ವ್ಯರ್ಥ ಬಡಿದಾಡೋಣ ಬೇಡ. ಹರಿಜನವೆನ್ನಿ, ಶಂಖರಜನವೆನ್ನಿ ಶಿವಜನವೆನ್ನಿ ಯಾವ ಜನವೇ ಎನ್ನಿ ಅವರು ದೇವರ ಮಕ್ಕಳು. ನಮ್ಮ ಸರಿಸಮಾನರು. ಅಣ್ಣತಮ್ಮಂದಿರು. ಅವರನ್ನು ನಾವು ಮಾನವೀಯತೆಯಿಂದ ನಡೆಸಿಕೊಂಡು ಬರಬೇಕೆಂದು ತಮ್ಮ ಹೃದಯವನ್ನೇ ತೆರೆದು ಬಹಳ ಸುಂದರವಾಗಿ ವಿವರಿಸಿದರು. ನಂತರ ಸಂಜೆಯ ಮುಂದೆ ಕಲೆಕ್ಟರ ಬಂಗ್ಲೆಯ ಎದುರಿನ ಮೈದಾನಿನಲ್ಲಿ ಬಹಿರಂಗಸಭೆಯನ್ನು ಏರ್ಪಡಿಸಲಾಗಿತ್ತು. ಆಗಿನ ನಗರಸಭೆಯ ಅಧ್ಯಕ್ಷರು ಜಾನವೇಕರ ವಕೀಲರು ಸ್ವಾಗತಿಸಿ ನಗರಸಭೆಯ ಮಾನಪತ್ರವನ್ನು ಅರ್ಪಿಸಿದರು. ಜಿಲ್ಲಾ ಲೋಕಲ್ ಬೋರ್ಡಿನ ಮಾನಪತ್ರವನ್ನು ನಾನು ಅರ್ಪಿಸಬೇಕಾಯಿತು. ಆ ಕಾಲದ ಬೋರ್ಡಿನ

ಅಧ್ಯಕ್ಷರಾದ ದಿವಾನ ಬಹಾದ್ದೂರ ಸರದಾರ ಆಲಮೇಲ ದೇಶಮುಖರು ಅನಾರೋಗ್ಯ ನಿಮಿತ್ತ ಬರಲಾಗಲಿಲ್ಲ. ಕಾರಣ ಉಪಾಧ್ಯಕ್ಷ ಸ್ಥಾನದಲ್ಲಿದ್ದ ನನ್ನ ಪಾಲಿಗೆ ಆ ಗೌರವವು ಕಾಯ್ದು ಕುಳಿತಿತ್ತು. ಹರಿಜನರ ಬಗ್ಗೆ ಬೋರ್ಡ್ ಮಾಡಿದ ಕಾರ್ಯವನ್ನು ಮಾನಪತ್ರದಲ್ಲಿ ವಿವರಿಸಲಾಗಿತ್ತು. ಕೊನೆಯಲ್ಲಿ ಮಹಾತ್ಮರು ಹರಿಜನರ ಕಾರ್ಯದ ವಿವರಣೆಯನ್ನು ಕೊಟ್ಟರು. ಹೀಗೆ ಸಭೆ ಮುಕ್ತಾಯಗೊಂಡಿತು. ಆ ಕಾಲದಲ್ಲಿ ಮಹಾತ್ಮರು ಶಾಂತಿಸಾಗರ ಮತ್ತು ಸ್ಥಿತಪ್ರಜ್ಞರೆಂದೇ ಕಂಡರು.

–ಸಂ.ಬ.ಸಾಸನೂರ

* * *

## ೨೬. ಶ್ರೀ ಚಿದಂಬರ ಸರಾಫ್ ಇವರ ನೆನಹು

ಹುದ್ಲಿಯಲ್ಲಿ ಗಾಂಧೀ ಸೇವಾ ಸಮ್ಮೇಲನ ಸೇರಿದಾಗ್ಯೆ ಮಳೆಯಾಗಿ ಪೆಂಡಾಲವಗ್ಯೆರೆ ಸೋರಿತು. ಸಮ್ಮೇಲನವು ಶ್ರೀ ಗಂಗಾಧರರಾಯ ಕುಮರಿ ಆಶ್ರಮದಲ್ಲಿ ಸುರುವಾಯಿತು. ಆಗ್ಯೆ ಬಾಬು ಕಾಮತ ಮತ್ತು ನಾನು ಇಬ್ಬರೂ ಸ್ವಯಂ ಸೇವಕರಾಗಿದ್ದೆವು. ಗಾಂಧೀ ಸೇವಾ ಸಂಘದ ಮೆಂಬರರ ಸ್ನಾನ, ಊಟ ಮಾಡಿಸಲು ಅಡ್ಡಾಡಿ ಕೆಲಸ ಮಾಡುತ್ತಿದ್ದೆವು. ಒಂದು ದಿವಸ ಬಾಪೂಜಿ ಮತ್ತು ಅಬ್ದುಲ್ ಗಫಾರ್‌ಖಾನರೂ, ವಲ್ಲಭಭಾಯಿ, ರಾಜೇಂದ್ರ ಪ್ರಸಾದರೂ ಊಟಕ್ಕೆ ಬಂದರು. ಸರಹದ್ದ ಗಾಂಧಿಯವರು ಆಗತಾನೇ ಕಾಸಿದ ತುಪ್ಪ ತಿನ್ನುವುದಾಗಿ ಮೊದಲೇ ತಿಳಿಸಿದ್ದರು. ಆ ಪ್ರಕಾರ ನಾನು ತುಪ್ಪ ತಯಾರಿಸಿಟ್ಟಿದ್ದೆ. ಅದನ್ನು ಅವರಿಗೆ ಹಾಕಲು ತಂದೆನು. ಆಗ್ಯೆ ಅವರಿಗಷ್ಟೇ ಏನು? ನಮಗೂ ಹಾಕು ಅಂತಾ ಗಾಂಧೀಜಿ ಬಹಳ ನಗೆಯಾಡಿದರು. ಪ್ರತಿದಿನ ೩ ಗಂಟೆಯಿಂದ ೧೦ ಮಿನಿಟ ಅವರ ಮೊಮ್ಮಗಳ ಕೂಡ ಬಹಳೇ ನಗೆ ಆಟ ಮಾಡುತ್ತಿದ್ದರು. ಆಗ್ಯೆ ನಾನೂ ಅವರ ಕೂಡ ಆಟವಾಡುತ್ತಿದೆನು. ಬಾಪು ಅವರ ಆಗಿನ ಮಾತಿನಿಂದ ಈಗಲೂ ಸ್ಫೂರ್ತಿ ಬರುತ್ತದೆ.

'ಯರವಡಾ ಜೈಲಿನಲ್ಲಿ (ಎಪಿಕ್ ಘಾಸ್ಟಾ) ಹರಿಜನರ ಬಗ್ಗೆ ಅವರು ಉಪವಾಸ ಮಾಡಿದಾಗ್ಯೆ ೧೯೩೩ರಲ್ಲಿ ೭ ದಿವಸ ನನಗೆ ಅವರ ಕೂಡ ಸ್ವಲ್ಪ ಇರಲಿಕ್ಕೆ ಸಿಗುತ್ತಿತ್ತು. ಈ ಎಲ್ಲಾ ನೆನಪು ಮರೆಯಲಾರೆ.

–ಚಿದಂಬರ ಸರಾಫ

* * *

## ೨೭. ಎಸ್.ಆರ್. ಮಲ್ಲಪ್ಪ ಇವರು ನೆನಹು

(೧೯೪೧ರಲ್ಲಿ ಬಾಪೂಜಿಯವರನ್ನು ವಾರ್ಧಾದಲ್ಲಿ ಆಶ್ರಮದಲ್ಲಿ ಕಂಡು ಅಲ್ಲಿಯೆ ಕೆಲದಿನಗಳಿದ್ದು ಆಶ್ರಮದ ಚಟುವಟಿಕೆಗಳನ್ನು ಜ್ಞಾಪಕವಿದ್ದಷ್ಟು ಬರೆದಿದ್ದೇನೆ)

ಮೈಸೂರು ಕಾಂಗ್ರೆಸ್ ಕಾರ್ಯದರ್ಶಿಗಳಾದ ಶ್ರೀ ಕೆ. ಪಟ್ಟಾಭಿರಾಮನ್ ಅವರು ನನ್ನ ಪರಿಚಯವನ್ನು ವಾರ್ಧಾ ಆಶ್ರಮಕ್ಕೆ ಬರೆದಿದ್ದರು. ನಾನು ಆಶ್ರಮಕ್ಕೆ ಹೋದನಂತರ ಆಶ್ರಮದ ಕಾರ್ಯದರ್ಶಿಗಳಾದ ಶ್ರೀ ಜಮನ್‌ಲಾಲಜಿಯವರು, ಬಾಪೂಜಿಯವರನ್ನು ಸಂದರ್ಶಿಸಲು ನನ್ನನ್ನು ಕರೆದುಕೊಂಡು ಹೋದರು. ಬಾಪೂಜಿಯವರು ಸಂಚಾರಕ್ಕೆ ಹೋಗಲು ಹೊರಗಡೆ ಬಂದಿದ್ದರು. ನನ್ನನ್ನು ಕಂಡಕೂಡಲೇ ಬಾಪೂಜಿಯವರು "ಮಲ್ಲಪ್ಪ ಆಯಿಯೆ" ಎಂದರು. ನನಗೆ ಪರಮಾಶ್ಚರ್ಯವಾಯಿತು. ಈ ದಿನವೇ ಬಂದೆನೆಂಬುದನ್ನು ಕನ್ನಡದಲ್ಲಿಯೇ ತಿಳಿಸಿದೆ. ಮತ್ತು ಅವರ ಜೊತೆಯಲ್ಲಿಯೇ ಸಂಚಾರಕ್ಕೆ ಹೋದೆ. ಆ ದಿನ ಇಡೀ ಸಂಚಾರದ ಕಾಲವನ್ನೆಲ್ಲ ನನ್ನ ಯೋಗಕ್ಷೇಮ, ಮೈಸೂರು ಕಾಂಗ್ರೆಸ್ ವಿಷಯ ಇವುಗಳ ಬಗೆಗೆ ಹಿಂದಿಯಲ್ಲಿ ಚಿಕ್ಕ ಚಿಕ್ಕ ಪ್ರಶ್ನೆಗಳನ್ನು ಹಾಕುತ್ತಿದ್ದರು. ನಾನು ಕನ್ನಡದಲ್ಲಿ ಉತ್ತರಿಸುತ್ತಿದ್ದೆ. ಅವರಿಗೆ ಅರ್ಥವಾಗುತ್ತಿತ್ತು. ಸಂಜೆ ಪ್ರಾರ್ಥನೆಯಲ್ಲಿ ಹೆಣ್ಣುಮಕ್ಕಳ ಹೆರಿಗೆ ವಿಚಾರವಾಗಿ ಒಬ್ಬರು ಸಲಕರಣೆಗಳೊಂದಿಗೆ ವ್ಯಾಖ್ಯಾನ ಉಪನ್ಯಾಸ ಮಾಡುತ್ತಿದ್ದರು. ಒಂದು ದಿನ ಸರೋಜಿನಿ ದೇವಿಯವರು, ಒಂದು ದಿನ ಸರದಾರ ಪಟೇಲರು ಬಾಪೂಜಿ ಸಂದರ್ಶನಕ್ಕೆ ಬಂದಿದ್ದರು. ಆಶ್ರಮದಲ್ಲಿ ಕುಂಬಳಕಾಯಿ, ಬೆಂಡೆಕಾಯಿ, ತೊಂಡೆಕಾಯಿ ವಗೈರೆ ತರಕಾರಿಗಳನ್ನು ಬೇಯಿಸಿ (ಉಪ್ಪು, ಕಾರ, ಹುಳಿ) ಇಲ್ಲದೆ ಹಾಗೆಯೇ ಬಡಿಸುತ್ತಿದ್ದರು. ಚಪಾತಿ, ಸೋಜಿ, ಹಾಲು, ಬಾಳೇಹಣ್ಣು ವಗೈರೆ ಕೊಡುತ್ತಿದ್ದರು. ಒಳ್ಳೆಯ ಸಾತ್ವಿಕಾಹಾರ. ಆಶ್ರಮದ ಹೊರ ಆವರಣದಲ್ಲಿಯೇ, ಬಾಪೂಜಿಯವರ ಪಕ್ಕದಲ್ಲಿಯೇ, ನಾನು ಮಲಗುತ್ತಿದ್ದೆ. ಬಾಪೂಜಿಯವರಿಗೆ ಕಾಗದ ಪತ್ರಗಳನ್ನು ನೋಡುವದು, ಬರೆಯುವುದು, ನೂಲುವುದು, ಮುಖಂಡರ ಭೇಟಿ ವಗೈರೆ ಬಿಡುವಿಲ್ಲದ ಕಾರ್ಯಕ್ರಮುಗಳು. ಆಶ್ರಮದಲ್ಲಿ ತೋಟ ಗೋಶಾಲೆ ಖಾದೀ ತಯಾರಿಸುವುದು. ಇವೇ ಮೊದಲಾದವು ಇದ್ದವು.

**ಎಸ್.ಆರ್.ಮಲ್ಲಪ್ಪ (ಸಿರುಮ)**
ತಿಪಟೂರು

*　　*　　*

## ೨೮. ಶ್ರೀ ಜಿ.ಆರ್.ಕುಲಕರ್ಣಿ ಮುಳುಗುಂದ ಇವರ ನೆನಹು

೧೯೩೮-೪೦ರಲ್ಲಿ ದಿ॥ ಕೌಜಲಗಿ ಹನುಮಂತರಾಯರು ಮತ್ತು ದಿ॥ ವೈಕುಂಠಲಾಲ ಮೆಹತಾ ಅವರು ನನ್ನನ್ನು, ವಾರ್ಧಾದ ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಮಗನವಾಡಿ ಗ್ರಾಮಸೇವಕ ವಿದ್ಯಾಲಯಕ್ಕೆ, ಮುಂಬಯಿ ಸರಕಾರದ ಶಿಷ್ಯವೃತ್ತಿಯನ್ನು ಕೊಟ್ಟು ಕಳಿಸಿದ್ದರು. ಅಲ್ಲಿ ಶಿಕ್ಷಣ ಪಡೆಯುವಾಗ ಪ್ರಾರ್ಥನೆಯ ಕಾಲದಲ್ಲಿ ಕನ್ನಡದ ಪುರಂದರದಾಸರ ಹಾಡುಗಳನ್ನೂ, ಆಶ್ರಮ ಭಜನೆಯ ಕಬೀರದಾಸರ ಹಾಡುಗಳನ್ನೂ, ಸಂಸ್ಕೃತ ಶ್ಲೋಕಗಳೇ ಮೊದಲಾದವನ್ನು ನಾನು ಸುಶ್ರಾವ್ಯವಾಗಿ ಹಾಡುತ್ತಿದ್ದೆ. ಈ ವಿಷಯ ಹೇಗೋ ಗಾಂಧೀಜಿಯ ಕಿವಿಗೆ ಬಿದ್ದಿತು. ಒಮ್ಮೆ ನಾವು, ಅಂದರೆ ಗ್ರಾಮಸೇವಕ

ವಿದ್ಯಾಲಯದ ವಿದ್ಯಾರ್ಥಿಗಳು ಸೇವಾಗ್ರಾಮಕ್ಕೆ ಗಾಂಧೀಜಿಯ ಭೆಟ್ಟಿಗೆ ಹೋಗಿದ್ದೆವು. ಆಗ ಗಾಂಧೀಜಿ-ಮಗನವಾಡಿಯಾ ಗ್ರಾಮ ಸೇವಕ ವಿದ್ಯಾಲಯದಿಂದ ಯಾರಾದರೂ ಬಂದಿದ್ದಾರೆಯೇ ಎಂದು ಕೇಳಿದರು. ಹೌದು ಎಂದು ನಾನು ಉತ್ತರ ಕೊಟ್ಟೆ. ಅದಕ್ಕೆ ಗಾಂಧೀಜಿ, "ವಿದ್ಯಾರ್ಥಿಗಳಲ್ಲಿ ಯಾರಾದರೂ ಹಾಡುವವರು ಇರುವರೇ?" ಎಂದು ಕೇಳಿದರು. ಅದಕ್ಕೆ ಹೌದು, ನಾನು ಪುರಂದರದಾಸರ ಕನ್ನಡ ಹಾಡುಗಳನ್ನು ಹೇಳುತ್ತೇನೆ ಎಂದೆ. ಹಾಡು ಎಂದರು. ನನ್ನ ಹಾಡು ಕೇಳಿ ಗಾಂಧೀಜಿಗೆ ಬಹಳ ಸಂತೋಷವಾಯಿತು.

ನಾನು ಮಗನವಾಡಿಯಲ್ಲಿ ಇದ್ದಾಗ, ಬೆಳಗಾವಿಯ ಬಸವಣ್ಣೆಪ್ಪ ಸಾಣೆಕೊಪ್ಪ ಇವರೂ ಇದ್ದರು.

ಜಿ.ಆರ್.ಕುಲಕರ್ಣಿ
ಮುಳಗುಂದ

* * *

## ೨೯. ಶ್ರೀ ಹ.ರಾ. ಪುರೋಹಿತ ಅವರ ನೆನಹು

ಗಾಂಧೀಜಿ ತಮ್ಮ ಸಂಚಾರದಲ್ಲಿ ಬಾಗಲಕೋಟೆಗೆ ಬಂದರು. ಅವರ ಜೊತೆಗೆ ಮೌ.ಶೌಕತ ಅಲಿ, ಕರ್ನಾಟಕ ಸಿಂಹ ಗಂಗಾಧರರಾವ್ ದೇಶಪಾಂಡೆ ಮೊದಲಾದವರೂ ದಯಮಾಡಿಸಿದ್ದರು. ಸ್ಟೇಶನ್ ರಸ್ತೆಯಲ್ಲಿದ್ದ ಶ್ರೀ ದರಬಾರ ರಾಮದಾಸರ ಬಂಗ್ಲೆಯಲ್ಲಿ ಹಾಕಲಾಗಿದ್ದ ನಮ್ಮ ರಾಷ್ಟ್ರೀಯ ಶಾಲೆಯ ಪಟಾಂಗಣದಲ್ಲಿಯೇ ಗಾಂಧೀಜಿ ಅವರ ಭಾಷಣ ಏರ್ಪಾಡು ಮಾಡಿತ್ತು. ಆ ಪ್ರಚಂಡ ಸಭೆಗೆ ವಿದ್ಯಾರ್ಥಿಗಳಲ್ಲದೆ ನಗರದ ಸುತ್ತಮುತ್ತಲಿನ ಅನೇಕ ಸ್ತ್ರೀ-ಪುರುಷರು ಬಂದಿದ್ದರು. ಹೆಚ್ಚಿನ ಜನ ಗಾಂಧೀಜಿಯ ದರ್ಶನಾಕಾಂಕ್ಷಿಗಳಾಗಿ ಬಂದಿದ್ದರು. ಗಾಂಧೀಜಿಯ ಲಂಡಪಂಜಿ, ಬನಿಯನ್ನು ಖಾದಿ ಟೋಪಿಗೆ ಸಾದಾ ಉಡುಪನ್ನು ನೋಡಿ ನಾನು ಪ್ರಭಾವಿತನಾದೆನು. ಬ್ಯಾರಿಸ್ಟರ ಒಬ್ಬರು ಇಂಥ ಸಾದಾ ಉಡುಪಿನಲ್ಲಿಯೇ ಎಂದು ಕೌತುಕಗೊಂಡೆ. ಅವರ ಸಂಗಡ ಅವರ ಕಿರಿಯ ಮಗ ದೇವದಾಸರೂ ಬಂದಿದ್ದರು. ಅವರು ಬಾವಿಗೆ ಹೋಗಿ ಸ್ವಚ್ಛ ನೀರು ಸೇದಿ ಸ್ನಾನ ಮಾಡಿ, ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಂಡದ್ದನ್ನು ನೋಡಿ ಬಹಳ ಆಶ್ಚರ್ಯವೆನಿಸಿತು. ಅವರ ಈ ನಿರಾಡಂಬರ ಸ್ವಾವಲಂಬಿ ವೃತ್ತಿಯನ್ನು ನೋಡಿ ಅವರ ಬಗ್ಗೆ ಆದರ ಭಾವವೂ ಹೆಚ್ಚಿತು.

ಗಾಂಧೀಜಿ ಅಂದಿನ ಸಭೆಯಲ್ಲಿ ತಮ್ಮ ಅಸಹಕಾರ ತತ್ವಗಳನ್ನು ಪುರಸ್ಕರಿಸಿದರು. ಅವರ ಭಾಷಣ ನಮಗೆ ಪೂರ್ಣವಾಗಿ ಅರ್ಥವಾಗದಿದ್ದರೂ ಅದರ ಮಥಿತಾರ್ಥವು ತಿಳಿಯಿತು. ಅವರು "ಟ್ರಿಪಲ್ ಬೈಕಾಟ್" ಅಂದರೆ ಕೋರ್ಟು ಬಹಿಷ್ಕಾರ, ಶಾಲೆ ಕಾಲೇಜು ಬಹಿಷ್ಕಾರ, ಪರದೇಶಿ ವಸ್ತ್ರ ಬಹಿಷ್ಕಾರ ಹೀಗೆ ತ್ರಿವಿಧ ಬಹಿಷ್ಕಾರಗಳನ್ನು

ವಿವರಿಸಿದರು. ಮದ್ಯಪಾನ ಪ್ರತಿಬಂಧವನ್ನು ಪುರಸ್ಕರಿಸಿದರು. ಅವರೀಭಾಷಣದಿಂದ ಪ್ರಭಾವಿತನಾಗಿ ನಾನು ಅಂದಿನಿಂದಲೇ ಪರದೇಶಿ ಬಟ್ಟೆಗಳ ಬಹಿಷ್ಕಾರ ಸಾರಿದೆ. ಇದ್ದ ವಿದೇಶಿ ವಸ್ತ್ರಗಳನ್ನು ಅಗ್ನಿನಾರಾಯಣನಿಗೆ ಸಮರ್ಪಿಸಿ ಖಾದಿ ಬಟ್ಟೆ ಧರಿಸಿ, ಅಂದಿನಿಂದ ಇಂದಿನವರೆಗೆ ಖಾದಿ ಬಟ್ಟೆಯನ್ನೇ ಧರಿಸುತ್ತಿರುವೆ. ಗಾಂಧೀಜಿಯ ಭಾಷಣದ ಸುಪರಿಣಾಮವಿದು. ಅಂದಿನ ಸಭೆಯಲ್ಲಿ ಮೌಲಾನಾ ಸಾಹೇಬರೂ ಭಾಷಣ ಮಾಡಿದರು. ಕನ್ನಡದಲ್ಲಿ ಭಾಷಣ ಮಾಡಿದ ಗಂಗಾಧರರಾವ ದೇಶಪಾಂಡೆ ಅವರು ಆನುಷಂಗಿಕವಾಗಿ ಮುಂಬಯಿ ಸಭೆಯ ಘಟನೆಯನ್ನು ಸ್ಮರಿಸಿಕೊಂಡು, ಆ ಸಭೆಯಲ್ಲಿ ಕಾಲೇಜು ಬಿಟ್ಟೆನೆಂದು ಸಾರಿದ ಒಬ್ಬನೇ ಒಬ್ಬ ವಿದ್ಯಾರ್ಥಿಯ ಹೆಸರು ಹೇಳಿದರು. ಆ ವಿದ್ಯಾರ್ಥಿಯೆಂದರೆ ಕರ್ನಾಟಕದ, ಅದರಲ್ಲಿಯೂ ಬಾಗಲಕೋಟೆಯ ಶ್ರೀ ಟಿ.ಬಿ. ಪುರೋಹಿತ. ಅವನೀಗ ಇಲ್ಲಿಯ ರಾಷ್ಟ್ರೀಯ ಶಾಲೆಯ ಮುಖ್ಯಾಧ್ಯಾಪಕ ಆದದ್ದು ಸಂತೋಷಪ್ರದವೆಂದೂ, ಆತನು ಕರ್ನಾಟಕಕ್ಕೆ ಕೀರ್ತಿ ತಂದನೆಂದೂ ಗಂಗಾಧರರಾಯರು ಹೇಳಿದರು, ಮತ್ತು ಗಾಂಧೀಜಿಗೆ ಅವರ ಪರಿಚಯ ಮಾಡಿಕೊಟ್ಟರು. ಶ್ರೀ ಟಿ.ಬಿ. ಪುರೋಹಿತರು ನನ್ನ ಅಣ್ಣಂದಿರು.

೧೯೨೪ರ ಬೆಳಗಾಂವಿ ಕಾಂಗ್ರೆಸ್ಸಿನ ಕಾಲಕ್ಕೆ ನಾನು ಮತ್ತೆ ಗಾಂಧೀಜಿಯನ್ನು ಕಂಡೆ. ಆಗ ನಾನು ಸ್ವಯಂ ಸೇವಕನಾದ್ದರಿಂದ ಅವರನ್ನು ಸಮೀಪದಿಂದ ನೋಡುವ ಅವಕಾಶ ನನಗೆ ದೊರಕಿತ್ತು. ಹುದಲಿಯಲ್ಲಿ ಸೇರಿದ್ದ ಗಾಂಧೀ ಸೇವಾ ಸಂಗದ ಪರಿಷತ್ತಿನಲ್ಲಿಯೂ ನಾನು ಗಾಂಧೀಜಿಯನ್ನು ನೋಡಿದೆ. ಪತ್ರಿಕಾ ಪ್ರತಿನಿಧಿ ಎಂದು ಅವರ ಮತ್ತು ಇತರ ಧುರೀಣರ ವಿಚಾರಗಳನ್ನು ವರದಿ ಮಾಡುವ ಅವಕಾಶವೂ ನನಗೆ ದೊರೆಯಿತು. ಇಂಥ ಹಲವಾರು ಪ್ರಸಂಗಗಳಲ್ಲಿ ಗಾಂಧೀಜಿಯನ್ನು ಸಂದರ್ಶಿಸಿದಾಗಲೆಲ್ಲ ಅವರ ಬಗ್ಗೆ ನನ್ನಲ್ಲಿ ಗೌರವ ಭಾವನೆಗಳು ಹೆಚ್ಚುತ್ತಲೇ ಹೋದವು. ಅವರ ದೇಶಪ್ರೇಮ ಜನತಾಜನಾರ್ದನ ಸೇವಾಭಾವನೆ, ಸತ್ಯ ಅಹಿಂಸೆಗಳ ಮೇಲಿರು ನಿಷ್ಠೆ, ಪರಮಾತ್ಮನ ಅಸ್ತಿತ್ವದ ಬಗ್ಗೆ ಪರಮವಿಶ್ವಾಸ, ಅವನ ಸಹಾಯವಿಲ್ಲದೆ ಒಂದು ಕಡ್ಡಿಯೂ ಕೂಡ ಅಲ್ಲಾಡದು, "ತೇನವಿನಾ ತೃಣಮಪಿ ನ ಚಲತಿ" ಎಂಬ ದೃಢವಿಶ್ವಾಸ ಮೊದಲಾದ ಗುಣಗಳು ನನ್ನ ಮೇಲೆ ಹೆಚ್ಚು ಪ್ರಭಾವ ಬೀರಿದವು.

**–ಹ.ರಾ. ಪುರೋಹಿತ**

* * *

## ೩೦. ಶ್ರೀ ರಾಮಲಿಂಗಯ್ಯಾ ಚನ್ನಬಸಯ್ಯಾ ಹಿರೇಮಠ ಬೀಡಿಕರ, ಪೆನ್ಸನರ ಮಾಸ್ತರ ಬೆಳಗಾಂವ ಇವರ ನೆನಹು

ಕರ್ನಾಟಕದ ಗಂಡು ಮೆಟ್ಟಾದ ಬೆಳಗಾಂವಿಯಲಿ ಸನ್ ೧೯೨೪ನೆ ಇಸ್ವಿಯಲ್ಲಿ ಕಾಂಗ್ರೆಸ್ ಅಧಿವೇಶನ ಸೇರಿದ ಕಾಲಕ್ಕೆ ಮಹಾತ್ಮಾ ಗಾಂಧೀಜಿಯವರಿಗೂ ನನಗೂ ಉಂಟಾದ ಸಂದರ್ಶನದಲ್ಲಿ ನಡೆದ ಮಹತ್ವದ ಸಂಗತಿ ಹೀಗಿವೆ:

ಕಾಂಗ್ರೆಸ್ ಅಧಿವೇಶನವನ್ನು ತೀರಿಸಿಕೊಂಡು ಮಹಾತ್ಮರು ಮಿರಜದ ಕಡೆಗೆ ಪ್ರಯಾಣ ಮಾಡುತ್ತಾರೆಂದು ಮೊದಲೇ ಪ್ರಕಟವಾಗಿತ್ತು. ಆ ದಿವಸ ೮-೧೦ ಸಾವಿರ ಜನರು ಬೆಳಗಾಂವಿ ರೈಲ್ವೆ ಸ್ಟೇಶನದಲ್ಲಿ ನೆರೆದು ಖಾನಾಪೂರದ ಕಡೆಯಿಂದ ಬರುವ ಗಾಡಿಯ ಕಡೆಗೆ ನೋಡುತ್ತಿದ್ದರು. ನಾಲ್ಕು ವರುಷದ ನನ್ನ ಮಗ ವೀರೇಶನನ್ನು ಬಗಲಲ್ಲಿ ಎತ್ತಿಕೊಂಡು ಸ್ಟೇಶನದಲ್ಲಿ ನಿಂತುಕೊಂಡಿದ್ದೆನು. ಅಷ್ಟರಲ್ಲಿ ಒಂದು ಗೂಡ್ಸಸೆಡ್ಡಿನಲ್ಲಿ ಒಬ್ಬನು ಬೆನ್ನು ತಟ್ಟಿ, ಮಾಸ್ತರರೇ ಮಹಾತ್ಮರು ಸ್ಟೇಶನದಲ್ಲಿ ಬಂದು ಗೂಡ್ಸಸೆಡ್ಡಿನಲ್ಲಿ ಶ್ರೀಯುತ ಗಂಗಾಧರರಾವ ದೇಶಪಾಂಡೆ ಅವರ ಕೂಡ ಮಾತನಾಡುತ್ತ ಕುಳಿತುಕೊಂಡಿರುವರು. ಮತ್ತು ಗೊತ್ತಾದ ವೇಳೆಗೆ ಹೊರಗೆ ಬರುವರು. ಇದನ್ನು ತಿಳಿದು ಅಷ್ಟರೊಳಗಾಗಿಯೇ ನನ್ನ ಮಗನನ್ನು ಎತ್ತಿಕೊಂಡು ಗೂಡ್ಸಸೆಡ್ಡಿಗೆ ಹೋದೆನು. ಅಲ್ಲಿ ಶ್ರೀಯುತ ಗಂಗಾಧರರಾಯರು ಮತ್ತು ಗಾಂಧೀಜಿಯವರು ಕುಳಿತಿದ್ದರು. ನನ್ನನ್ನು ನೋಡಿ ಉಭಯತರು ನಗಹತ್ತಿದರು. ಶ್ರೀಯುತ ಗಂಗಾಧರರಾಯರು ಅಂದರು, ಮಾಸ್ತರರೇ, ನಾವು ಇಲ್ಲಿ ಇದ್ದ ಸಂಗತಿಯನ್ನು ನಿಮಗೆ ಯಾರು ಹೇಳಿದರು? ಅದಕ್ಕೆ ನಾನು, ನನಗೆ ಕನಸು ಬಿದ್ದಿತು. ಅದಕ್ಕೇ ಬಂದೆನು ಎಂದು ಹೇಳಿ ಮಹಾತ್ಮರ ಎದುರಿಗೆ ನನ್ನ ಮಗನನ್ನು ನಮಸ್ಕಾರ ಮಾಡಲು ಹಚ್ಚಿದೆನು. ಆಗ ಅವರು ಕೈ ಮುಗಿದರು. ಆಗ ಮಹಾತ್ಮರು ನನ್ನ ಸಮೀಪ ಬಂದು ನನ್ನ ಮಗನ ಕೈಗಳನ್ನು ಅಲುಗಾಡಿಸಿ ಅವನ ಹಾಲಗೆನ್ನೆಗಳಿಗೆ ಮುದ್ದಿಸಿದರು. ಮತ್ತು ಮುಂದಿನ ಮೇಜಿನ ಮೇಲಿದ್ದ ಹೂವಿನ ಹಾರವನ್ನು ತಂದು ಅವನ ಕೊರಳಿಗೆ ಹಾಕಿದರು. ಈ ಸುದ್ದಿಯು ಸ್ಟೇಶನದಲ್ಲಿ ನೆರೆ ಜನರಿಗೆ ಗೊತ್ತಾಗಲು ಎಲ್ಲ ಜನರೂ ಬಂದು ನನ್ನ ಮಗನ ಕೊರಳಲ್ಲಿದ್ದ ಹೂವಿನ ಹಾರಕ್ಕೆ ಕೈಹಾಕಲು ತೊಡಗಿದರು. ಗಾಂಧೀಜಿಯವರು ಆ ಮಗುವಿಗೆ ಪ್ರೀತಿಯಿಂದ ಕೊಟ್ಟಿರುವೆನು ಅಂತಾ ಹೇಳಿ ತಮ್ಮ ಮಗನಾದ ದೇವದಾಸ ಗಾಂಧೀಯವರಿಗೆ ಗಾಡಿಯಲ್ಲಿದ್ದ ನೂರಾರು ಹಾರಗಳನ್ನು ತಕ್ಕೊಂಡು ಬಾ ಎಂದು ಹೇಳಿದರು. ನಂತರ ಗಾಂಧೀಜಿಯವರು ಒಂದೊಂದು ಹಾರವನ್ನು ಕೊಡಲಿಕ್ಕೆ ಸುರುವು ಮಾಡಿದರು ಮತ್ತು ನೀವು ಮಾಸ್ತರರಿಗೆ ಹೋಗಲು ದಾರಿ ಬಿಡಿರಿ ಎಂದು ಗಾಂಧೀಜಿಯವರು ಜನರಿಗೆ ಹೇಳಿದರು. ಆಗ ನಾನು ಹೊರಗೆ ಬಂದೆನು. ಈ ಪ್ರಸಂಗವು ಕ್ರಿ.ಶ. ೧೯೨೪ರಲ್ಲಿ ಜರುಗಿತ್ತು. ನನಗೆ ತಾರೀಖು ಹಾಗೂ ತಿಂಗಳು ನೆನಪಿಲ್ಲ.

–ರಾಮಲಿಂಗಯ್ಯಾ ಚನ್ನಬಸಯ್ಯಾ ಹಿರೇಮಠ

* * *

## ೨೧. ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ ಅವರ ನೆನಹು

ಸನ್ ಸಾವಿರದ ಒಂಬೈನೂರ ಇಪ್ಪತ್ತೊಂದನೆಯ ಇಸ್ವಿ, ವಿದ್ಯಾರ್ಥಿಗಳಲ್ಲಿ ಶಾಲೆ ಕಾಲೇಜುಗಳನ್ನು ತೊರೆದು ಅಸಹಕಾರ ಚಳವಳಿಯಲ್ಲಿ ಧುಮುಕಬೇಕೆಂದು ಗಾಂಧೀಜಿ ಕರೆಕೊಟ್ಟರು. ಅವರ ಕರೆಯನ್ನು ಕೇಳಿ ನಾನೂ ಪಾಠಶಾಲೆಯನ್ನು ಬಿಟ್ಟು, ಯಾರನ್ನೂ

ಹೇಳದೆ ಕೇಳದೆ ಸಾಬರಮತಿ ಆಶ್ರಮಕ್ಕೆ ಹೊರಟೆ. ನನ್ನಂತೆ ಕೇಳದೆ ಬಂದ ಇನ್ನಿಬ್ಬರ ಪರಿಚಯ ನನಗಲ್ಲಿ ಆಯಿತು. ಅವರಲ್ಲಿ ಧಾರವಾಡದ ಶ್ರೀ ರಾಮಚಂದ್ರ ವಡಪಿ ಒಬ್ಬರು. ನಾನು ಗಾಂಧೀಜಿಯ ಸನ್ನಿಧಿಯಲ್ಲಿ ಇದ್ದಾಗ ನಡೆದ ಒಂದೆರಡು ಘಟನೆಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ.

**೧. ಸ್ವಿಸ್ ಗಡಿಯಾರ:**

ಒಂದು ದಿನ ಸ್ವಿಸ್ ಗಡಿಯಾರ ಕಂಪನಿಯ ಮಾಲಿಕರು, ಇಬ್ಬರ ಸಹೋದ್ಯೋಗಿಗಳೊಂದಿಗೆ ಗಾಂಧೀಜಿಯ ಸಂದರ್ಶನಕ್ಕೆ ಬಂದರು. ಪ್ರಾರಂಭದ ಔಪಚಾರಿಕ ಸಂಭಾಷಣೆಗಳಾದ ನಂತರ ಅವರು ಮೂರು ಗಡಿಯಾರಗಳನ್ನು ಗಾಂಧೀಜಿಗೆ ತೋರಿಸಿದರು. ಅವು ಗಾಂಧೀಜಿಯ ಸೊಂಟದಲ್ಲಿ ಯಾವಾಗಲೂ ನೇತಾಡುತ್ತಿದ್ದಂಥ ಪಾಕೇಟ್ ವಾಚಿಗಿಂತ ಹೆಚ್ಚು ಸೊಗಸಾಗಿದ್ದವು. ಅವುಗಳ ಮೇಲೆ "ಗಾಂಧೀ ವಾಚ್, ಸ್ವಿಸ್ ಮೇಡ್" ಎಂದು ಬರೆದಿದ್ದಿತು. ಕಂಪನಿಯ ಮಾಲೀಕರು "ನಮ್ಮ ಕಂಪನಿಯಲ್ಲಿ ಈ ಗಡಿಯಾರಗಳನ್ನು ನಿಮ್ಮ ಅಂಕಿತದಲ್ಲಿ ಮಾಡಬೇಕೆಂದು ನಿರ್ಣಯಿಸಿದ್ದೇವೆ. ಇವು ಕಾಲವನ್ನು ಕ್ಲಿಪ್ತವಾಗಿ ಒಂದು ಗಳಿಗೆಯೂ ಹೆಚ್ಚು ಕಡಿಮೆ ಇಲ್ಲದೆ ತೋರಿಸುತ್ತವೆ. ಇದರಲ್ಲಿ ಎರಡು ದೃಷ್ಟಿಯಿಂದ ನಿಮಗೆ ಕಂಪನಿಯು ಗೌರವ ಸಲ್ಲಿಸಬಯಸುತ್ತದೆ. ಮೊದಲನೆಯದು ಸಮಯ ನಿಷ್ಠೆಯನ್ನು ಚಾಚೂ ತಪ್ಪದೆ ಕಾಯುತ್ತಿರುವ ತಮ್ಮ ವ್ಯಕ್ತಿತ್ವಕ್ಕೆ ಅರ್ಹವಾದ ಗಡಿಯಾರ ಇದು. ಎರಡನೆಯದು ಇದು ನಮ್ಮ ದೇಶದಲ್ಲಿ ಗೃಹ ಕೈಗಾರಿಕೆಯಾಗಿ ತಯಾರಾಗುತ್ತದೆ. ನಾವು ನಿಮ್ಮ ಗ್ರಾಮೋದ್ಯೋಗ ಪುನರುಜ್ಜೀವನದ ಮಾದರಿಯನ್ನು ಹಿಂಬಾಲಿಸುತ್ತಿದ್ದೇವೆ. ನಿಮ್ಮ ಹೆಸರನ್ನಿಟ್ಟು ಈ ಗಡಿಯಾರಗಳನ್ನು ತಯಾರಿಸಲು ನನಗೆ ಅನುಮತಿ ನೀಡಬೇಕು" ಎಂದು ಕೇಳಿದರು.

ಗಾಂಧೀಯವರು ಗಡಿಯಾರವನ್ನು ನೋಡಿ ಸಂತೋಷಪಟ್ಟು "ಇದು ನಿಜವಾದ ಕಲಾಕೃತಿಯಾಗಿದೆ" ಎಂದರು. ಒಂದು ಗಳಿಗೆ ಯೋಚಿಸಿ ಕಂಪನಿಯ ಮಾಲೀಕರಿಗೆ ಹೀಗೆ ಹೇಳಿದರು. "ಗಡಿಯಾರಕ್ಕೆ ನನ್ನ ಹೆಸರನ್ನಿಡಲು ನಾನು ನಿಮಗೆ ಅನುಮತಿ ಈಯಲಾರೆ. ಯಾವ ರೀತಿಯಿಂದಲೂ ಸದ್ಯದಲ್ಲಿ ಪರದೇಶಿ ವಸ್ತುಗಳ ಆಮದಿಗೆ ನನ್ನ ಒಪ್ಪಿಗೆಯಿಲ್ಲ. ಈ ದೇಶದ ಜನತೆ ಬಹಳ ಸರಳ ಹೃದಯದವರು. ಗಾಂಧೀ ಗಡಿಯಾರ ಎಂಬುದಾಗಿ ಅದನ್ನು ಕೊಳ್ಳುವ ಹುಚ್ಚು ಎಲ್ಲರಿಗಲ್ಲದಿದ್ದರೂ ಕೆಲವರಿಗಾದರೂ ಉಂಟಾಗಬಹುದು. ನಮ್ಮ ದೇಶದ ಇಂದಿನ ಸ್ಥಿತಿಯಲ್ಲಿ ಯಾರೂ ಪರದೇಶದ ಭೋಗ್ಯವಸ್ತುಗಳನ್ನು ಕೊಳ್ಳುವುದನ್ನು ನಾನು ಸಹಿಸಲಾರೆ. ನಿಮ್ಮ ದೇಶದಲ್ಲಿ ಇದನ್ನು ಗೃಹಕೈಗಾರಿಕೆಯಾಗಿ ನಡೆಸುತ್ತಿರುವುದನ್ನು ಕೇಳಿ ಸಂತೋಷಗೊಂಡೆ. ನಾವೂ ನಿಮ್ಮಿಂದ ಈ ಭಾಗದಲ್ಲಿ ಒಂದು ಪಾಠ ಕಲಿತಂತೆ ಆಯಿತು. ನಿಮ್ಮ ಕೆಲಸಗಾರರಿಗೆಲ್ಲ ನಮ್ಮ ಸಂತೋಷವನ್ನು ವ್ಯಕ್ತಪಡಿಸಿ" ಮಾಲೀಕರು ಗಾಂಧೀಜಿಯವರಿಗೆ ತಾವು ತಂದಿದ್ದ ಒಂದು ಗಡಿಯಾವನ್ನು ಅರ್ಪಿಸಲು ಪ್ರಯತ್ನಿಸಿದರು. ಗಾಂಧೀಜಿ ತಮ್ಮ ಗಡಿಯಾರದ ಕಡೆ ಕೈ ತೋರಿಸುತ್ತ

"ಇದು ಇದೆ, ತನ್ನ ಕೆಲಸವನ್ನು ಪ್ರಾಮಾಣಿಕವಾಗಿ ಮಾಡುತ್ತಿದೆ" ಎಂದು ಹೇಳಿ ವಿನಯದಿಂದಲೇ ನಿರಾಕರಿಸಿದರು.

**ಸನ್ಯಾಸಿಗಳು ಝಾಡಮಾಲಿಗಳಾಗರು:**

ಸ್ವಾಮಿ ಸತ್ಯದೇವರು ಒಮ್ಮೆ ಸಾಬರಮತಿ ಆಶ್ರಮಕ್ಕೆ ಬಂದರು. ಗಾಂಧೀಯವರೊಂದಿಗೆ ಮಾತನಾಡಿ ತಾವೂ ಸಾರ್ವಜನಿಕ ಸೇವಕರಾಗಬೇಕೆಂಬುದು ಅವರ ಇಚ್ಛೆಯಾಗಿತ್ತು. ಅವರನ್ನು ಬೇರೊಂದೆಡೆ (ಆಶ್ರಮದಲ್ಲಲ್ಲ) ಇಳಿಸಿ ಗಾಂಧೀಜಿ ನನ್ನನ್ನು ಅವರ ಸೇವೆಗೆ ನಿಯಮಿಸಿದರು. ಸ್ವಾಮೀಜಿ ಸ್ವಲ್ಪ ದಪ್ಪಗಿನ ಆಳು. ಹಿಂದಿಯಲ್ಲಿ ಬಹಳ ಚೆನ್ನಾಗಿ ಮಾತನಾಡುತ್ತಿದ್ದರು; ಕಾಪಿಬಟ್ಟೆ ಧರಿಸುತ್ತಿದ್ದರು. ಅವರಿಗೆ ಪಾರಿಶುದ್ಧತೆಯ ಕಡೆಗೆ ಅತಿ ಲಕ್ಷ್ಯ. ಕೊಠಡಿ, ಮೂತ್ರಿ, ಊಟದಶಾಲೆ, ಪಾತ್ರೆ, ಪಾಯಖಾನೆಗಳು, ವಸ್ತುಗಳು ಇವುಗಳನ್ನು ಎಷ್ಟು ತೊಳೆದರೂ ಅವರಿಗೆ ತೃಪ್ತಿಯಿಲ್ಲ. ತಮ್ಮ ಕೈಯನ್ನು ಹಾಗೆಯೇ ಉಜ್ಜಿ ಉಜ್ಜಿ ಸ್ವಚ್ಛವಾಗಿಡುತ್ತಿದ್ದರು. ಶುದ್ಧಿ ಮಾಡಿ ಮಾಡಿ ನನಗೆ ಬಹಳ ಆಯಾಸವಾದರೂ ಸತ್ಯದೇವರ ಆ ಪಾರಿಶುದ್ಧತೆ, ನನಗೆ ಪ್ರಿಯವಾಗಿ ತೋರಿತು.

ಅವರ ದೇಹಕ್ಕೆ ತಕ್ಕಂತೆ, ತಲೆ ಹುಲಿಯಂತೆ ದಪ್ಪವಾಗಿತ್ತು. ಅವರನ್ನು ನೋಡಿದರೆ ಇವರು ನಮ್ಮಂತಹ ಅಲ್ಪಪ್ರಾಣರಲ್ಲ. ತೇಜಸ್ವಿ ವ್ಯಕ್ತಿ. ಅವರು ಪೇಟೆಗೆ ಹೋಗಿ, ಒಂದು ಹೊರೆ ಉದ್ದವಾದ ಕಬ್ಬಿನ ಜಲ್ಲೆಗಳನ್ನು ತಂದರು. ಆನೆಯಂತೆ ಅಷ್ಟನ್ನೂ ಹಲ್ಲಿನಿಂದ ಸಿಗಿದು ತಿಂದು ಒಂದು ಮಂಕರಿ ಸಿಪ್ಪೆಯನ್ನು ಉಗಿದರು. ನನ್ನ ಮುಂದೆಯೂ ನಾಲ್ಕು ಉದ್ದವಾದ ಜಲ್ಲೆಗಳನ್ನು ಹಾಕಿದರು. ಅದನ್ನು ಮುಗಿಸಲು ನನ್ನಿಂದ ಆಗಿಲಿಲ್ಲ. ಆ ದಿನವೆಲ್ಲ ಸ್ವಾಮಿ ಸತ್ಯದೇವರು ಮತ್ತೇನನ್ನೂ ತಿನ್ನಲಿಲ್ಲ.

ಮಹಾತ್ಮಾ ಗಾಂಧೀಯವರ ಆಶ್ರಮದಲ್ಲಿಯೇ ಇದ್ದುಕೊಂಡು ಅವರ ಜೊತೆಯಲ್ಲಿಯೇ ತಾನೂ ಜನಸೇವೆ ಮಾಡುತ್ತೇನೆ ಎಂದು ಸತ್ಯದೇವ ಗಾಂಧೀಜಿಯವರಿಗೆ ಸೂಚಿಸಿದರು. ಗಾಂಧೀಜಿ ಮೃದುವಾಗಿ, "ನೀವು ಸನ್ಯಾಸಿಗಳು, ಕಾಪಿಯನ್ನು ತೊಟ್ಟಿದ್ದೀರಿ. ನಮ್ಮ ದೇಶದಲ್ಲಿ ಜನ, ಸನ್ಯಾಸಿಗಳನ್ನು ಬಹಳ ಮರ್ಯಾದೆಯಿಂದ ಕಾಣುತ್ತಾರೆ. ಅವರಿಂದ ಎಂದಿಗೂ ಸೇವೆ ಕೈಗೊಳ್ಳುವುದಿಲ್ಲ. ಸಾರ್ವಜನಿಕ ಸೇವಕನಾಗುವವನು ಝಾಡಮಾಲಿಯಾಗುವುದಕ್ಕೂ ಸಿದ್ಧನಾಗಿರಬೇಕು. ಆದರೆ ನಮ್ಮ ದೇಶದಲ್ಲಿ ಸನ್ಯಾಸಿಗಳಿಂದ ಝಾಡಮಾಲಿ ಕೆಲಸ ಮಾಡಿಸಿಕೊಳ್ಳಲು ನಮ್ಮ ಜನ ಹಿಂದೆಗೆಯುತ್ತಾರೆ. ಆದುದರಿಂದ ನೀವು ನಮ್ಮ ಜೊತೆಯಲ್ಲಿ ನಮ್ಮಂತೆ ಸೇವಕರಾಗಬೇಕಾದರೆ ನಿಮ್ಮ ಕಾಪಿಯನ್ನು ಬಿಟ್ಟು ಎಲ್ಲರಂತೆ ಸಾಮಾನ್ಯ ಉಡುಪು ತೊಡುವುದು ಒಳ್ಳೆಯದು" ಎಂದು ಹೇಳಿದರು. ಗಾಂಧೀಜಿ ಹೊರಗಿನ ವೇಷಕ್ಕೆ ಬಹಳ ಪ್ರಾಮುಖ್ಯತೆ ಕೊಡುತ್ತಾರೆ. ಝಾಡಮಾಲಿಯಾಗುವುದೊಂದೇ ಜನಸೇವೆಯಲ್ಲಿ ಎಂದು ಸ್ವಾಮೀಜಿ ಭಾವಿಸಿ ಕಾವಿಯನ್ನು ಬದಲಾಯಿಸಿ ಖಾದಿ ತೊಟ್ಟು ಆಶ್ರಮವನ್ನು ಸೇರಲಿಲ್ಲ.

**ಬೆಂಗಳೂರು ಕಂಟೋನ್ಮೆಂಟ್ ಖಾದಿ ಅಂಗಡಿ ಉದ್ಘಾಟನೆ**

ಗಾಂಧೀಜಿ ಸಾವಿರದಒಂಬೈನೂರ ಮೂವತ್ತನಾಲ್ಕನೆಯ ಇಸವಿ ಜನವರಿ ಮೊದಲನೆಯ ವಾರ ಮತ್ತೆ ಬೆಂಗಳೂರಿಗೆ ಬಂದರು. ಆಗ ನಾನು ಬೆಂಗಳೂರು ಶಾಖೆಯ ಅಖಿಲ ಭಾರತ ಚರಖಾ ಸಂಘದ ವ್ಯವಸ್ಥಾಪಕನಾಗಿದ್ದೆ. ಆಗ ಬೆಂಗಳೂರು ಕಂಟೋನ್ಮೆಂಟಿನಲ್ಲಿ ಖಾದಿ ಅಂಗಡಿಯ ಶಾಖೆಯೊಂದನ್ನು ತೆರೆಯಬೇಕೆಂದೂ ಅದನ್ನು ಮಹಾತ್ಮಾ ಗಾಂಧೀಜಿಯವರ ಶುಭ ಹಸ್ತದಿಂದ ತೆರೆಯಬೇಕೆಂದೂ ಏರ್ಪಾಡಾಗಿತ್ತು. ಕಷ್ಟಪಟ್ಟು ಗಾಂಧೀಜಿಯವರನ್ನು ಅದಕ್ಕೆ ಒಪ್ಪಿಸಿದೆವು. ಕಂಟೋನ್ಮೆಂಟಿನವರು ಅಲ್ಲಿ ಖಾದಿ ಪ್ರಚಾರಕ್ಕೆ ಒಂದು ನಿಧಿಯನ್ನು ಕೊಡಲು ಒಪ್ಪಿದುದರಿಂದಲೇ ಗಾಂಧೀಯವರು ಬರಲು ಸಮ್ಮತಿಸಿದರು. ಖಾದಿ ಅಂಗಡಿ ತೆರೆಯಬೇಕಾಗಿದ್ದುದು ಕಂಟೋನ್ಮೆಂಟಿನಲ್ಲಿ. ಆಗ ಗಾಂಧೀಜಿ ಮೋಟಾರಿನಲ್ಲಿ ಮುಖ್ಯ ರಸ್ತೆಯಲ್ಲಿ ಬಂದು, ತಿರುವಿನಲ್ಲಿ ಕಮರ್ಷಿಯಲ್ ಸ್ಟ್ರೀಟ್‌ನಲ್ಲಿ "ಖಾದಿ ಅಂಗಡಿಗೆ ಬಂದು ಅಲ್ಲಿ ಅಂಗಡಿಯ ಪ್ರವೇಶವನ್ನು ನೆರವೇರಿಸಬೇಕು: ಅನಂತರ ಒಂದು ಘಳಿಗೆ ಕುಳಿತಿದ್ದು ನಿಧಿಯನ್ನು ಸ್ವೀಕರಿಸಿ ಜನರಿಗೆ ನಾಲ್ಕು ಮಾತು ಹೇಳಿ ಮುಂದೆ ಹೊರಡಬೇಕು. ಎಲ್ಲ ಕಾರ್ಯಕ್ರಮವೂ ಐದು-ಆರು ನಿಮಿಷಗಳಲ್ಲಿ ಮುಗಿಯಬೇಕೆಂದು ತೀರ್ಮಾನವಾಗಿತ್ತು. ನಾವು ಹಾಗೆಯೇ ಅಚ್ಚು ಹಾಕಿ, ಜನತೆ ಶಾಂತಿಯಿಂದ ಕಾರ್ಯಕ್ರಮವನ್ನು ನಡೆಸಿಕೊಡಬೇಕೆಂದು ಪ್ರಾರ್ಥಿಸಿಕೊಂಡಿದ್ದೆವು. ಪ್ರಾರಂಭೋತ್ಸವ ಬೆಳಗಿನ ಹತ್ತು ಗಂಟೆಗೆ ಎಂದು ಪ್ರಕಟವಾಗಿದ್ದರೂ ಬೆಳಗಿನ ಏಳೂವರೆ ಗಂಟೆಯಿಂದಲೇ ಜನ ಖಾದಿ ಅಂಗಡಿಯಿಂದ ಕಮರ್ಷಿಯಲ್ ಸ್ಟ್ರೀಟ್ ಪೂರ್ತಾ ಗಾಂಧೀಯವರ ಕಾರು ಹೋಗಬೇಕಾಗಿದ್ದ ಮುಖ್ಯ ರಸ್ತೆಯವರೆಗೆ ಮತ್ತೂ ಸುತ್ತಮುತ್ತೆಲ್ಲ ತುಂಬಿಬಿಟ್ಟರು. ಹತ್ತು ಗಂಟೆಗೆ ಒಂದೆರಡು ನಿಮುಷಗಳೊಳಗೆ ಗಾಂಧೀಜಿಯ ಕಾರು ಬಂದಿತು. "ಮಹಾತ್ಮಾ ಗಾಂಧೀಜಿ ಕೀ ಜೈ" ಎಂಬ ಧ್ವನಿ ನಭೋಮಂಡಲವನ್ನು ಭೇದಿಸಿತು. ಕಾರನ್ನು ಕಮರ್ಷಿಯಲ್ ಸ್ಟ್ರೀಟ್ ಕಡೆ ತಿರುಗಿಸಲೂ ಸಾಧ್ಯವಾಗಲೇ ಇಲ್ಲ. ಎಲ್ಲಿಂದ ಎಲ್ಲಿಯವರೆಗೆ ನೋಡಿದರೂ ಜನಸಮುದ್ರವೇ. ಹೀಗಾದರೂ ಆಗಬಹುದೆಂದು ಊಹಿಸಿ ನಾನೂ ಸ್ವಾಗತ ಸಮಿತಿಯ ಅಧ್ಯಕ್ಷರೂ ಗುಂಪಿನ ಮೂಲಕ ನುಗ್ಗುತ್ತ ಗಾಂಧೀಜಿಯವರ ಕಾರಿನ ಬಳಿಗೆ ಮುಂದುವರಿಯುತ್ತಿದ್ದೆವು. ಆಗ ಗಾಂಧೀಜಿಯವರ ಹಿಂದಿನ ಕಾರಿನಲ್ಲಿದ್ದ ಕರ್ನಾಟಕ ಚರಖಾ ಸಂಘದ ಕಾರ್ಯದರ್ಶಿ ಶ್ರೀ ಸಾವುಕಾರ್ ಅವರೂ, ಬ್ರಹ್ಮಚಾರಿ ರಾಮಚಂದ್ರನ್ ಅವರೂ. ತಲೆಯ ಮೇಲಿನ ತಟ್ಟೆಯಲ್ಲಿ ಹಣದ ಚೀಲವನ್ನು ಹೊತ್ತು ಬರುತ್ತಿದ್ದ ನಮ್ಮ ಸ್ವಾಗತ ಸಮಿತಿ ಅಧ್ಯಕ್ಷರನ್ನೂ ಕೈಯಲ್ಲಿ ಖಾದಿಯ ಮೇಲೆ ಬರೆದಿದ್ದ ಬಿನ್ನವತ್ತಳೆ ಹಿಡಿದಿದ್ದ ನನ್ನನ್ನೂ ಗುರುತಿಸಿದರು. ಗುಂಪನ್ನು ನುಗ್ಗಿಕೊಂಡು ಹೋಗುವದೇ ನಮಗೆ ಕಷ್ಟವಾಗಿ ಅಂತೂ ಗಾಂಧೀಜಿಯವರ ಮುಂಧೆ ಹೋಗಿ ನಿಂತು ನಿಧಿಯನ್ನೂ ಬಿನ್ನವತ್ತಳೆಯನ್ನೂ ಕೊಟ್ಟೆವು. ಅಂಗಡಿಯ ಬೀಗದ ಕೈಯನ್ನೂ ನಾನು ಗಾಂಧೀಜಿಯವರಿಗೆ ಕೊಟ್ಟೆ. ಅವರು ನಗುತ್ತಾ ಜನ ಸಮೂಹವನ್ನು ನೋಡಿ "Yes, the Shop is opened" ಎಂದು ಅವನ್ನು ನನಗೇ ಹಿಂದಕ್ಕೆ ಕೊಟ್ಟರು.

ಅಷ್ಟರೊಳಗೆ ಜನಸಮೂಹ ಗಾಂಧೀ ದರ್ಶನಕ್ಕಾಗಿ ಕಾರಿನ ಮೇಲೆ ಬೀಳುವಂತೆಯೇ ಮುಂದೆ ನುಗ್ಗಲಾರಂಭಿಸಿದರು. ಸಾರಥಿ ಕಾರನ್ನು ಮುಂದೆ ಬಿಟ್ಟ.

**ಗಾಂಧೀಜಿಯವರ ಪಾದರಕ್ಷೆ ತರಲು ಮೇಲಾಟ:**

ಇದೇ ಸಂದರ್ಭದಲ್ಲಿ ಗಾಂಧೀಜಿ ಅಪಿನ್ಸ್ಯೂರಸ್ತೆಯ ಒಂದು ಛತ್ರದಲ್ಲಿ ವಿದಾಯಕ ಕಾರ್ಯಕರ್ತರನ್ನು ಕುರಿತು, ಹರಿಜನರ ಏಳಿಗೆಯ ಮೇಲೆ ವಿಚಾರ ವಿನಿಮಯ ಮಾಡಿದರು. ಗಾಂಧೀಜಿ ಸಭೆ ನಡೆಯುವುದಕ್ಕೆ ಅರ್ಧಗಂಟೆ ಮುಂಚೆಯೇ ಬಂದು ಆ ಛತ್ರದ ಮಹಡಿಯ ಮೇಲೆ ಕುಳಿತು ಸಾಮಾಜಿಕ ಕಾರ್ಯಕರ್ತರೊಂದಿಗೆ ಅನೌಪಚಾರಿಕ ವಿಚಾರ ವಿನಿಮಯವನ್ನು ನಡೆಸಿದರು. ಆ ಸಭೆಗೆ ಪಾಮಡಿ ಸುಬ್ಬರಾಮಶೆಟ್ಟಿ ಅವರೂ, ಸರ್ ಮಿರ್ಜಾರವರೂ ಅವರ ಕಾರ್ಯದರ್ಶಿಗಳೂ ಮತ್ತು ಅವರ ಮಗನೂ ಬಂದಿದ್ದರು. ಮಹಡಿಯ ಮೇಲಿನ ಸಭೆಯಾದ ಮೇಲೆ ಗಾಂಧೀಜಿ ಬಹಿರಂಗ ಸಭೆಗಾಗಿ ಕೆಳಕ್ಕೆ ಬಂದು ಕುಳಿತರು. ಅವರ ಮಗ್ಗುಲಲ್ಲಿಯೇ ಸುಬ್ಬರಾಮಶೆಟ್ಟರೂ ಮತ್ತೊಂದು ಕಡೆ ಸರ್ ಮಿರ್ಜಾರವರೂ, ಸಭಾಂಗಣದ ಪೂರ್ತಾ ಕೆಲಸಗಾರರೂ ಸಾರ್ವಜನಿಕರೂ ಕೂಡಿದ್ದರು. ಕೆಳಗೆ ಬಂದು ಕುಳಿತ ಮೇಲೆ ತಮ್ಮ ಪಾದರಕ್ಷೆಯನ್ನು ತಾವು ಮೇಲೆಯೇ ಬಿಟ್ಟು ಬಂದಿರುವುದು ಗಾಂಧೀಜಿಯವರಿಗೆ ಗೊತ್ತಾಯಿತು. ಅದನ್ನು ತರಬೇಕೆಂದು ಗಾಂಧೀಯವರೇ ಹೊರಡಲು, ಸ್ವಯಂ ಸೇವಕರು ನಾನು ಮುಂದು ತಾನು ಮುಂದು ಎಂದು ಹೊರಡಲು, ತವಕಿಸಿದರು. ಆಗ ಸರ್ ಮಿರ್ಜಾ ಎಲ್ಲರನ್ನೂ ಕೂಡಿಸಿ ತಮ್ಮ ಮಗನನ್ನು ಮೇಲಕ್ಕೆ ಕಳುಹಿಸಿದರು. ಅವನು ಹೋಗಿ ಗಾಂಧೀಯವರ ಚಪ್ಪಲಿಯನ್ನು ತಂದು ಅವರ ಮುಂದೆ ಇಟ್ಟನು. ಗಾಂಧೀಜಿ ಆದರದಿಂದ ಅವನ ಬೆನ್ನನ್ನು ಸವರಿ ಮುಗುಳು ನಗೆ ನಕ್ಕು ವಿನೋದ ಮಾಡಿದರು.

**ಗಾಂಧೀಜಿಯಿಂದ ಛತ್ರಿ ಪಡೆದ ಧನಿಕ:**

ಗಾಂಧೀಜಿ ಹಾಸನಕ್ಕೆ ಬಂದಾಗ ಒಂದು ಜೈಗಿನ ಹೊತ್ತು. ನಾನೂ ನನ್ನ ಜತೆ ಮತ್ತೊಬ್ಬ ಸ್ವಲ್ಪ ವಯಸ್ಸಾದ ಧನಿಕರೂ ಗಾಂಧೀಯವರನ್ನು ನೋಡಲು ಮುಸಾಫಿರಖಾನೆಗೆ ಹೋದೆವು. ಗಾಂಧಿಯವರ ಸುತ್ತಾ ಯಾರು ಯಾರೋ ಕುಳಿತಿದ್ದರು. ಗಾಂಧೀ ನೂಲುತ್ತಿದ್ದರು. ನಾನೂ ನನ್ನ ಜತೆ ಬಂದಿದ್ದವರೂ ಹರಿಜನ ನಿಧಿಗೆಂದು ಐದು ಐದು ರೂಪಾಯಿ ನೋಟುಗಳನ್ನು ಗಾಂಧಿಯವರ ಮುಂದೆ ಇಟ್ಟು ನಮಸ್ಕರಿಸಿ ಕುಳಿತು ಕೊಂಡೆವು. ನನ್ನ ಜೊತೆಯಲ್ಲಿದ್ದವರು ಧನಿಕರೆಂಬುದನ್ನು ಅವರ ಮುಖವನ್ನೂ ದೊಡ್ಡ ಜರಿಯ ರುಮಾಲನ್ನೂ ನೋಡಿದ ಕೂಡಲೇ, ಗಾಂಧೀಯವರು ಅರಿತರು. ಹರಿಜನ ನಿಧಿಗೆ ಐದು ರೂಪಾಯಿ ಸಾಕೇ? ಎಂದು ಅವರನ್ನು ಕೇಳಿದರು. ಕೂಡಲೇ ಧನಿಕರ ಕೈ ತಮ್ಮ ಕೋಟಿನ ಒಳ ಜೇಬಿಗೆ ಹೋಯಿತು. ಅವರು ಜೇಬಿನಿಂದ ನೋಟು ತುಂಬಿದ ಒಂದು ಲಕ್ಕೋಟೆಯನ್ನು ಹೊರಕ್ಕೆ ತೆಗೆದು ಅದರಿಂದ ಕೆಲವು ನೋಟುಗಳನ್ನು ಎಣಿಸಿ ಗಾಂಧೀಯವರಿಗೆ ಕೊಡ ಹೋದರು. ಅಷ್ಟರಲ್ಲಿಯೇ ಏನು ತೋರಿತೋ? ಏನೋ ಲಕ್ಕೋಟೆಯೊಂದಿಗೆ ಅದರಲ್ಲಿದ್ದುದ್ದನ್ನೆಲ್ಲ ಗಾಂಧಿಯವರ ಮುಂದಿಟ್ಟರು. ಅದರ ಜೊತೆ

ತಮ್ಮ ಕೈಯಲ್ಲಿದ್ದ ಛತ್ರಿಯನ್ನು ಇಟ್ಟರು. ಗಾಂಧೀಯವರು ಮುಗುಳು ನಗೆ ನಗುತ್ತ ಬಿಸಿಲು ಜೋರಾಗಿದೆ ನೀವು ನನ್ನಂತೆ ಮುದುಕರು. ಛತ್ರಿ ಹಿಂದಕ್ಕೆ ತೆಗೆದುಕೊಳ್ಳಿ ಎಂದು ಹೇಳಿ ಛತ್ರಿಯನ್ನು ತಾವೇ ಕೈಯಲ್ಲಿ ಎತ್ತಿ ಧನಿಕರಿಗೆ ಕೊಟ್ಟರು. ಇದು ನಡೆದು ಸುಮಾರು ಮೂವತ್ತೈದು ವರ್ಷಗಳ ಮೇಲಾಯಿತು. ಧನಿಕರು ತಾವು ಎಲ್ಲಿಯಾದರೂ ಅದನ್ನು ಮರೆತುಬಿಡಬಹುದೆಂಬ ಭಯದಿಂದ ಅನಂತರ ಆ ಛತ್ರಿಯನ್ನು ಎಲ್ಲಿಗೂ ತೆಗೆದುಕೊಂಡು ಹೋಗುತ್ತಿರಲಿಲ್ಲ. ಮಹಾತ್ಮಾ ಗಾಂಧೀಯವರು ಕೈ ಎತ್ತಿ ಕೊಟ್ಟ ಛತ್ರಿಯಿಂದ ಎಂದು ಎಲ್ಲರಿಗೂ ತೋರಿಸುತ್ತಿದ್ದರು.

**ಗಾಂಧಿ ಫಂಡಿಗೆ ಕಾಣಿಕೆ ತೆಗೆದಿಟ್ಟ ವೃದ್ಧ:**

ಮರುದಿನ ಪ್ರಾತಃಕಾಲ ಗಾಂಧಿ ಮೋಟಾರಿನಲ್ಲಿ ಕುಳಿತು ಹೊಳೆನರಸಿಪುರಕ್ಕೇ (ಹಾಸನದಿಂದ ೨೦ ಮೈಲಿ) ಹೋದರು. ಹೊಳೇನರಸೀಪುರದಲ್ಲಿ ಸಹ ಕಾರೋನೇಷನ್ ಕಟ್ಟಡದ (ಈಗಿನ ವಾಚನಾಲಯ) ಎದುರಿನ ಮೈದಾನದಲ್ಲಿ ಭಾರಿ ಚಪ್ಪರ, ವೇದಿಕೆ ನಿರ್ಮಿಸಿ ಸಭೆಗೆ ಏರ್ಪಾಡು ಮಾಡಿದ್ದರು. ತಮ್ಮ ಪುಟ್ಟ ಭಾಷಣದ ನಂತರ ಗಾಂಧೀ ಸ್ವಯಂ ಸೇವಕರಿಗೆ ಸಭೆಯಲ್ಲಿಯೇ ಹರಿಜನ ನಿಧಿಗಾಗಿ ಹಣ ವಸೂಲು ಮಾಡಲು ಸೂಚಿಸಿದರು. ಸ್ವಯಂ ಸೇವಕರು ಡಬ್ಬಿಗಳನ್ನು ಹಿಡಿದುಕೊಂಡು ಜನಗಳ ನಡುವೆ ಓಡಾಡುತ್ತ ಹಣ ವಸೂಲು ಮಾಡುತ್ತಿದ್ದರು. ದೇವದಾಸ ಗಾಂಧಿ ಸಹ ಒಂದು ಡಬ್ಬಿ ಹಿಡಿದುಕೊಂಡು ಜನಗಳ ನಡುವೆ ಓಡಾಡುತ್ತಿದ್ದರು. ಗಾಂಧಿಯವರು ಸೇರಿದ ಅಗಾಧ ಸಮೂಹವನ್ನು ಕರುಣಾ ದೃಷ್ಟಿಯಿಂದ ವೀಕ್ಷಿಸುತ್ತಿದ್ದರು. ದೂರದಲ್ಲಿ ಒಬ್ಬ ರೈತ, ಹಣ್ಣು ಹಣ್ಣು ಮುದುಕ, ಕೈಯಲ್ಲಿ ದುಡ್ಡು ಹಿಡಿದುಕೊಂಡು ದೇವದಾಸರ ಎದುರಿಗೆ ಚರ್ಚಿಸುತ್ತಾ ಇದ್ದ. ದೇವದಾಸ್ 'ಹಣ ಹಾಕು' ಎಂದು ಅವನ ಕಡೆಗೆ ಡಬ್ಬಿಯನ್ನು ಹಿಡಿಯುತ್ತಿದ್ದರು. ಆತ ಹಣ ಹಾಕದೇ ಚರ್ಚಿಸುತ್ತ ಪದೇ ಪದೇ ವೇದಿಕೆಯ ಮೇಲಿದ್ದ ಗಾಂಧೀಯವರ ಕಡೆ ಕೈ ತೋರಿಸುತ್ತ ಚರ್ಚಿಸುತ್ತಿದ್ದ. ಗಾಂಧಿಯವರ ದೃಷ್ಟಿ ಆ ಕಡೆ ಹೋಯಿತು. ಅವರು ಕೂಡಲೇ ದೇವದಾಸರನ್ನು ಹತ್ತಿರಕ್ಕೆ ಕರೆದು ವಿಷಯವೇನೆಂದು ಕೇಳಿದರು. ದೇವದಾಸರು 'ಮೂರು ರೂಪಾಯಿ ಕಾಣಿಕೆ ತಂದಿದ್ದಾನೆ. ನಿಮ್ಮ ಕೈಗೆ ಕೊಡಬೇಕೆಂದು ಹೇಳುತ್ತಿದ್ದಾನೆ' ಎಂದರು. ಗಾಂಧಿ ಮುದುಕನನ್ನು ಹತ್ತಿರಕ್ಕೆ ಕರೆದರು. ಆತ ಬೀಳುವವನ್ನೂ ಕಾಣದೆ ನುಗ್ಗಿ ಬಂದು ಗಾಂಧಿಯವರ ಮುಂದೆ ಮೂರು ರೂಪಾಯಿ ಇಟ್ಟು ಉದ್ದಕ್ಕೂ ಅಡ್ಡಬಿದ್ದ. ಕನ್ನಡದಲ್ಲಿಯೇ ಏನೋ ಹೇಳಿದ. ಗಾಂಧಿಯವರು ಸಮೀಪದಲ್ಲಿದ್ದವರನ್ನು 'ಅವನು ಏನು ಹೇಳುತ್ತಿದ್ದಾನೆ' ಎಂದು ಕೇಳಿದರು. ಅವರು ಮುದುಕನನ್ನು ಕೇಳಿ 'ಇವನ ಮಗನ ಮದುವೆಯಲ್ಲಿ ಈ ಮೂರು ರೂಪಾಯಿ ಗಾಂಧಿ ಫಂಡಿಗಾಗಿ ತೆಗೆದು ಇಟ್ಟಿದ್ದನಂತೆ. ಈಗ ಆರು ವರುಷದ ಕೆಳಗೆ. ನಿಮ್ಮನ್ನು ನೋಡಿ ನಿಮ್ಮ ಕೈಗೇ ಕೊಡಬೇಕೆಂಬುದು ಅವನ ಆಶೆಯಾಗಿದ್ದಿತಂತೆ. ಇಂದು ಆಸೆ ಕೈಕೂಡಿತು' ಎನ್ನುತ್ತಾನೆ ಎಂದು ಹೇಳಿದರು.

ಗಾಂಧಿ ಸಹ ಮುಗುಳು ನಗೆ ನಗುತ್ತ ಆತನನ್ನು ನೋಡಿ 'ದೇವರು ನಿನಗೆ

ಒಳ್ಳೆಯದು ಮಾಡಲಿ' ಎಂದು ಕೈಮುಗಿದರು. ಮುದುಕ ಮಾತಿಗೆ ಅಳವಡದ ಅನಿರ್ವಚನೀಯ ಆನಂದದಿಂದ ಮಹಾತ್ಮರಿಗೆ ಪದೇ ಪದೇ ಕೈ ಮುಗಿಯುತ್ತ ಬೀಳ್ಕೊಂಡನು.

* * *

## ೩೨. ಶ್ರೀ ಶೋ.ಗೇ. ಕುಲಕರ್ಣಿ ಧಾರವಾಡ ಅವರ ನೆನಹು

**ಅಪೂರ್ವ ಯೋಗಾಯೋಗ:**

ಗಾಂಧೀಜಿ ಅವರನ್ನು ನಾನು ಕಂಡದ್ದು ಕೇವಲ ಎರಡು ಸಲ. ಅದೊಂದು ಅಪೂರ್ವ ಯೋಗಾಯೋಗ. ಆಗಾಗ ಅದನ್ನು ನೆನೆಸಿಕೊಂಡು ಮೆಲುಕಾಡಿಸಿ ಆನಂದ ಪಡುತ್ತೇನೆ.

ಮೊದಲ ಸಲ ಬೆಳಗಾಂವಿ ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಕಂಡೆ. ಇದರಲ್ಲಿ ನನ್ನದೇನು ವಿಶೇಷ ಎಂದು ಕೆಲವರು ಕೇಳಬಹುದು. ಇತರರಿಗೆ ದೊರೆಯುವ ಅವಕಾಶ ನನಗೆ ಅಲ್ಲಿ ದೊರೆಯಿತು. ನಾನದಕ್ಕೆ ನನ್ನ ಜೀವನದಲ್ಲಿ ವಿಶೇಷ ಮಹತ್ವ ಕೊಟ್ಟಿದ್ದೇನೆ. ಆ ಮಾತಿಗೀಗ ಅನೇಕ ವರ್ಷಗಳು ಗತಿಸಿ ಹೋಗಿದ್ದರೂ ಅವರ ನೆನಪು ಮಾತ್ರ ನನಗೆ ಸಾಕಷ್ಟು ಚೆನ್ನಾಗಿ ಇದೆ. ನಿನ್ನೆ ಮೊನ್ನೆ ನಡೆದ ಪ್ರಸಂಗ, ಅದೇಕೆ ಈ ಕ್ಷಣಕ್ಕೆ ಈಗ ನಡೆಯುತ್ತಿರುವ ಘಟನೆ ಎಂದೂ ನಾನು ಭಾವಿಸುತ್ತೇನೆ. ನನ್ನ ಮನಸ್ಸಿನ ಮುಂದೆ ಅದನ್ನೆಲ್ಲ ಚಿತ್ರಿಸಿಕೊಂಡು ಒಳಗಣ್ಣಿನಿಂದ ನೋಡಿ ಸಂತೋಷ ಪಡುತ್ತೇನೆ.

ಬೆಳಗಾಂವಿಯ ಕಾಂಗ್ರೆಸ್ ಅಧಿವೇಶನವು, ಉಳಿದ ಅಧಿವೇಶನಗಳಂತೆ ಮೂರು ದಿನ ನಡೆಯಲಿಲ್ಲ; ಎರಡೇ ದಿನಗಳಲ್ಲಿ ಮುಕ್ತಾಯಗೊಂಡಿತು. ಅವಶ್ಯಕವಾಗಿ ಸಮಯವನ್ನು-ಜೀವನವನ್ನು ಹಾಳುಮಾಡಬಾರದೆಂದು ಮಹಾತ್ಮಾಜಿ ಹೇಳುತ್ತಿದ್ದಂತೆ ತಮ್ಮ ಹೇಳಿಕೆಯನ್ನು ಕೂಡಲೇ ಕಾರ್ಯರೂಪಕ್ಕೆ ತರುತ್ತಿದ್ದರು ಎನ್ನುವುದಕ್ಕೆ ಇದೊಂದು ಮಹತ್ವದ ಉದಾಹರಣೆ. ಉಳಿದ ಕಾಂಗ್ರೆಸ್ ಅಧಿವೇಶನಗಳಂತೆ ಬೆಳಗಾವಿಯ ಅಧಿವೇಶನವೂ ಕೂಡ ಮೂರು ದಿನಗಳವರೆಗೆ ನಡೆಯುವುದೆಂದು ಜನರೆಲ್ಲ ತಿಳಿದಿದ್ದರು. ಎಲ್ಲ ಸಿದ್ಧತೆಯೂ ಭರದಿಂದ ನಡೆದಿದ್ದವು. ಅಧಿವೇಶನಕ್ಕೆ ಆಗಮಿಸಿದ್ದ ಅಖಿಲ ಭಾರತ ಮಟ್ಟದ ಕಾಂಗ್ರೆಸ್ ಧುರೀಣರೆಲ್ಲ ಮೂರು ದಿನದ ಅಧಿವೇಶನಕ್ಕಂದೇ ಬಂದಿದ್ದರು. ಹೀಗೆಂದು ತಿಳಿದಾಗಲೇ, ಕಾಂಗ್ರೆಸ್ ಪರಂಪರೆಗೆ ಕಟ್ಟುಬಿದ್ದಾಗಲೀ, ಮಹಾತ್ಮಾಜೀಯವರು ಅಧಿವೇಶನವನ್ನು ಮುಂದುವರಿಸಲಿಲ್ಲ. ಕೆಲಸ ಮುಗಿಯಿತು: ಅದರೊಂದಿಗೆ ಕಾಂಗ್ರೆಸ್ ಅಧಿವೇಶನವೂ ಮುಕ್ತಾಯಗೊಂಡಿತು. ಅಧ್ಯಕ್ಷರ ಅಪ್ಪಣೆ, ಬೆಳಗಾವಿಯ ಕಾಂಗ್ರೆಸ್ ಅಧಿವೇಶನಕ್ಕೆ ಅಧ್ಯಕ್ಷರಾಗಿದ್ದ ಗಾಂಧೀಜಿ ಅವರ ನಿರ್ಣಯ ಎಲ್ಲರಿಗೂ ಪ್ರಿಯವಾಯಿತು. ಆಗಲೇ ಅವರೂ ಅಷ್ಟೊಂದು ಜನಪ್ರಿಯರಾಗಿದ್ದರು.

ಬೆಳಗಾವಿಯ ಕಾಂಗ್ರೆಸ್ ಅಧಿವೇಶನ, ಅಖಿಲ ಭಾರತ ಸ್ವಯಂ ಸೇವಾದಳಕ್ಕೆ ಜನ್ಮವಿತ್ತಿತು. ಇದಕ್ಕೆ ಕಾರಣರಾದವರು ನಮ್ಮ ದಂಡನಾಯಕರಾದ ಡಾ॥ ನಾ.ಸು.ಹರ್ಡೀಕರ ಅವರು ಒಂದುಸಾವಿರಕ್ಕೂ ಹೆಚ್ಚು ಸ್ವಯಂ ಸೇವಕರಿಗೆ ಅವರು ಈ ಮೊದಲು ತರಬೇತಿ ಯನ್ನೂ ಕೊಟ್ಟಿದ್ದರು. ಇದಕ್ಕಾಗಿ ಕರ್ನಾಟಕದ ಆಗಿನ ಕಾಂಗ್ರೆಸ್ ಮುಖಂಡರ ವಿರೋಧ ವನ್ನೂ ಧೈರ್ಯದಿಂದ ಎದುರಿಸಿದ್ದರು. ಉಳಿದ ಯಾವ ಕಾಂಗ್ರೆಸ್ ಅಧಿವೇಶನಗಳಲ್ಲಿ ಕಂಡುಬಾರದ ಅಚ್ಚುಕಟ್ಟುತನ, ಸ್ವಚ್ಛತೆ, ಭದ್ರತೆಗಳು ಬೆಳಗಾಂವಿಯ ಅಧಿವೇಶನದಲ್ಲಿ ಕಂಡುಬಂದಿತೆಂದು ಎಲ್ಲರು ಮುಕ್ತಕಂಠದಿಂದ ಹೊಗಳಿದರು. ಇದರಿಂದ ಬೆಳಗಾಂವಿಯ ಹಾಗೂ ಕರ್ನಾಟಕದ ಕೀರ್ತಿ ಭಾರತದ ಮನೆಮಾತಾಯಿತು. ಭಾರತದ ರಾಷ್ಟ್ರೀಯ ಪ್ರಥಮ ಸೇನಾಪತಿಗಳೆಂದು ಡಾ॥ ಹರ್ಡೀಕರ ಅವರಿಗೆ ಹೆಸರೂ ಬಂತು.

ಸ್ವಯಂ ಸೇವಕರ ಶಿಬಿರಕ್ಕೆ ಗಾಂಧೀಜಿ ಅವರನ್ನು ಕರೆದುಕೊಂಡು ಬರಬೇಕೆಂಬ ತವಕ ಡಾ॥ ಹರ್ಡೀಕರ ಅವರಿಗೆ ಅತಿಯಾಗಿತ್ತು. ಅನೇಕ ಸಲ ಗಾಂಧೀಜಿಗೆ ಅವರು ವಿನಂತಿಯನ್ನೂ ಮಾಡಿಕೊಂಡಿದ್ದರು. ಆದರೆ ಸಮಯದ ಅಭಾವದಿಂದ ಗಾಂಧೀಜಿ ಅವರಿಗೆ ತಮ್ಮ ಮನಸ್ಸಿನಲ್ಲಿದ್ದರೂ ಒಪ್ಪಿಕೊಳ್ಳುವುದಕ್ಕೆ ಆಗಿರಲಿಲ್ಲ. ಕಾಂಗ್ರೆಸ್ ಅಧಿವೇಶನದ ಒಂದು ದಿನ ಮೊದಲೇ ಮುಕ್ತಾಯಗೊಂಡ ಸದವಕಾಶದ ಪ್ರಯೋಜನವನ್ನು ಪಡೆಯಲು ಡಾ॥ ಹರ್ಡೀಕರ ಅವರು ಹಾತೊರೆದರು. ಗಾಂಧೀಜಿಯವರನ್ನು ಕೂಡಲೇ ಕಂಡು ಸ್ವಯಂ ಸೇವಕರ ಶಿಬಿರಕ್ಕೆ ಸಂದರ್ಶನವೀಯಬೇಕೆಂದು ಕೇಳಿಕೊಂಡರು. ಗಾಂಧೀಜಿ ಸಂತೋಷದಿಂದ ಒಪ್ಪಿಕೊಂಡರು. ಮರುದಿನ ಬೆಳಿಗ್ಗೆ ೮ ಗಂಟೆಗೆ ಗಾಂಧೀಜಿ ಅವರಿಂದ ಧ್ವಜವಂದನೆ ಅದೇ ಸಮಯಕ್ಕೆ ಒಂದುಸಾವಿರ ಸ್ವಯಂ ಸೇವಕರ ಹಾಗೂ ೨೦೦(ಸ್ಕೌಟ್) ವ್ರತಧಾರಿಗಳ ಕೂಚು ನಡೆಯುವುದೆಂಬ ಸುದ್ದಿಯನ್ನು ಕೇಳಿ ನಮಗಾದ ಆನಂದ ಅಷ್ಟಿಷ್ಟಲ್ಲ. ಶಿಬಿರದಲ್ಲಿ ಸಿದ್ಧತೆಗಳು ಭರದಿಂದ ನಡೆದವು.

ಎರಡುನೂರು ಸ್ಕೌಟ್ ಬಾಲಕರ ಹಿರಿಯ ಸ್ಕೌಟ್ ನಾನು. ಅಲ್ಲದೆ ಡಾ॥ ಹರ್ಡೀಕರ ಮೆಚ್ಚುಗೆಗೆ ಪಾತ್ರರಾಗಿ ಸ್ವಯಂ ಸೇವಕ ತರಬೇತಿ ಪಡೆದ ಕೆಲವೇ ಸ್ವಯಂ ಸೇವಕರಲ್ಲಿ ನಾನೂ ಒಬ್ಬ. ಜೊತೆಗೆ ಸ್ಕೌಟ ಮಾಸ್ತರರ ತರಬೇತಿಗೆಂದು ಮೈಸೂರು ಸಂಸ್ಥಾನದ ಶಿಬಿರ ಒಂದಕ್ಕೆ ಡಾ॥ ಹರ್ಡೀಕರ ಅವರು ಕಳುಹಿಸಿಕೊಟ್ಟಿದ್ದ ಏಳು ಜನರಲ್ಲಿ ನಾನೂ ಒಬ್ಬ ಆಯ್ಕೆಗೊಂಡಿದ್ದೆ. ಇವುಗಳಿಂದಾಗಿ ನನಗಾಗ ಒಂದು ಬಗೆಯ ಹೆಮ್ಮೆ ಬಂದಿತ್ತು. ರಾತ್ರಿ ಎಂಟು ಗಂಟೆಗೆ ನಮ್ಮ ದಂಡನಾಯಕರು ನನ್ನನ್ನು ಕರೆಸಿದರು. ಬೆಳಿಗ್ಗೆ ಗಾಂಧೀಜಿ ಅವರ ನೇತೃತ್ವದಲ್ಲಿ ನಡೆಯಲಿರುವ ಧ್ವಜವಂದನೆಯ ಸಿದ್ಧತೆ ಮಾಡಲು ಆಜ್ಞೆ ವಿಧಿಸಿದರು. ಇಷ್ಟೇ ಅಲ್ಲ ಇನ್ನೂ ಒಂದು ವಿಶೇಷ ಸೌಲಭ್ಯ ನನಗಾಗಿ ಕಾಯ್ದಿತ್ತು. ಮೈಸೂರಿನಿಂದ ತರಬೇತಿ ಪಡೆದು ಬಂದಿದ್ದ ನನಗೆ ಗಾಂಧೀಜಿ ಅವರ ಹಸ್ತದಿಂದ ಸೇವಾದೀಕ್ಷೆ ಕೊಡಿಸಲಾಗುವುದೆಂದೂ ಡಾ॥ ಹರ್ಡೀಕರು ಹೇಳಿ ನನ್ನ ಬೆನ್ನು ತಟ್ಟಿ ಕಳಿಸಿಕೊಟ್ಟರು.

ಮರುದಿನ ಬೆಳಿಗ್ಗೆ ಧ್ವಜಸ್ತಂಭದ ಸುತ್ತು ನೆರೆದಿದ್ದೆವು. ನನ್ನ ಎದುರಿಗೆ ಗಾಂಧೀಜಿ

ಕೇವಲ ೧೦-೧೨ ಅಡಿ ದೂರದಲ್ಲಿ. ಶುಭ್ರವಾದ ಖಾದಿ ಧೋತರ, ಮೇಲೊಂದು ಚಾದರ ಬಳಿಯಲ್ಲಿ ನಮ್ಮ ದಂಡನಾಯಕ ಡಾ॥ ಹರ್ಡೀಕರ ಸ್ಥಾನ ಮಾನಕ್ಕೆ ಒಪ್ಪುವ ಬಟ್ಟೆ ಧರಿಸಿದ್ದರು. ಕಾಲಿಗೆ ಹತ್ತಿಕೊಂಡಿದ್ದ ಶುಭ್ರ ಬಿಳಿ ಖಾದಿ ಶೇರವಾನಿ. ಅದಕ್ಕೆ ಶೋಭಿಸುವ ದೊಡ್ಡ ಅಂಗಿ. ತಲೆಯ ಮೇಲೆ ಬಿಳಿ ಖಾದಿ ಟೊಪ್ಪಿಗೆ. ಆಗತಾನೆ ಮೂಡಿ ಮೇಲಕ್ಕೆ ಬಂದಿದ್ದ ಹೊಂಬಣ್ಣದ ಸೂರ್ಯನ ಹೊನ್ನಿನ ಕಿರಣದ ಹಿನ್ನೆಲೆಯಲ್ಲಿ ನಾನು ನೋಡುತ್ತಿದ್ದ ಆ ನೋಟ ಭೂಲೋಕದ ನೋಟವೆಂದು ನನಗಾಗ ಅನ್ನಿಸಲೇ ಇಲ್ಲ.

ಮೆಲ್ಲನೆ ಅಡಿಯಿಡುತ್ತ ಗಾಂಧೀಜಿ ನಾವು ನಿಂತ ಎಡೆಗೆ ಬಂದರು. ಅವರ ಕೈಗೆ ಡಾ॥ ಹರ್ಡೀಕರ ಒಂದೊಂದಾಗಿ ಕೊಡುತ್ತಿದ್ದ ಪದಕಗಳನ್ನು ಗಾಂಧೀಜಿ ಅವರು ಹಿರಿಯ ಸ್ಕೌಟ್ ಅಧಿಕಾರಿಗಳಿಗೆ ಅಂಗಿಗೆ ಚುಚ್ಚಿ ಹಚ್ಚುತ್ತಿದ್ದರು. ನನ್ನ ಸರತಿಯೂ ಬಂತು. ನನ್ನೆದುರಿಗೆ ಬಂದು ನಿಂತರು. ನಾನು ಅವರಿಗೆ ನನ್ನ ಬಲಗೈ ಎತ್ತಿ ಮೂರು ಬೆರಳಿನ ಸ್ಕೌಟ್ ವಂದನೆ ಸಲ್ಲಿಸಿದೆ. ಎಡಗೈಯಿಂದ ಅವರ ಎಡಗೈ ಹಿಡಿದು ಹಸ್ತಾಂದೋಲನ ಮಾಡಿದೆ. ಎಲ್ಲ ಸ್ಕೌಟ್ ಶಿಷ್ಟಾಚಾರಗಳನ್ನೂ ಬದಿಗೆ ಎಸೆದು ಅವರ ಕಾಲನ್ನು ಗಟ್ಟಿಯಾಗಿ ಹಿಡಿದುಕೊಳ್ಳಬೇಕೆಂದೆನಿಸಿತು. ಗಾಂಧೀಜಿ ಮುಗುಳುನಗೆ ನಗುತ್ತಾ ಪದಕವನ್ನು ನನ್ನ ಅಂಗಿಗೆ ಚುಚ್ಚಿಹಚ್ಚಿದರು.

ಇನ್ನೊಂದು ಪ್ರಸಂಗ ಮುಂದೆ ಗೌಹಾತಿ ಕಾಂಗ್ರೆಸ್ ಅಧಿವೇಶನದ ಮೊದಲು ಲಭಿಸಿತು. ಆಗ ನಾನು ನನ್ನ ಮಿತ್ರರೊಂದಿಗೆ ಶಾಂತಿನಿಕೇತನದಲ್ಲಿದ್ದೆ. ಶಾಂತಿನಿಕೇತನದಲ್ಲಿ ಓದುತ್ತಿದ್ದ ಬನರ್ಜೀರ ನಮ್ಮ ಹೊಸ ಸ್ನೇಹಿತ. ನಮ್ಮನ್ನು ಆ ಕಲಕತ್ತೆಯ ತಮ್ಮ ಮನೆಗೆ ಬರಬೇಕೆಂದು ಆಗಾಗ ಕರೆಯುತ್ತಿದ್ದನು. ಅದಕ್ಕೆ ಈಗ ಅವಕಾಶ ದೊರೆಯಿತು. ಅವನೂ ನಾವೂ ಕೂಡಿ ಶಾಂತಿನಿಕೇತನದಿಂದ ಕಲಕತ್ತೆಗೆ ಅಂದು ರಾತ್ರಿ ಬಂದೆವು. ವಿಶಾಲವಾಗಿ, ಭವ್ಯವಾಗಿ ಅಕ್ಕಪಕ್ಕದಲ್ಲಿ ಎರಡು ಮನೆಗಳಿದ್ದವು. ಎರಡೂ ಮನೆಗಳಿಗೆ ಒಂದೇ ಸುತ್ತು ಗೋಡೆ. ಒಂದು ಮನೆಯ ಎರಡನೇ ಅಂತಸ್ತಿನ ವಿಶಾಲವಾದ ಒಂದು ಕೋಣೆಯಲ್ಲಿ ನಾವು ಬಿಡಾರ ಬಿಟ್ಟೆವು. ರಾತ್ರಿ ಹೆಚ್ಚಾಗಿತ್ತು. ಬೇಗ ಮಲಗಿಕೊಂಡೆವು.

ಬೆಳಿಗ್ಗೆ ನಾವು ಬೇಗ ಎದ್ದೆವು. ಮುಖ ತೊಳೆದುಕೊಂಡೆವು. ಉಪಹಾರವನ್ನು ಮುಗಿಸಿ ಹೊರಗೆ ಹೊರಡಲು ಸಿದ್ಧರಾದೆವು. ಅಷ್ಟರಲ್ಲಿ ನಾನು ಒಂದು ಕಿಡಕಿಯಲ್ಲಿ ಇಣಕಿ ನೋಡಿದೆ. ಅದೆಂತಹ ದೃಶ್ಯ! ಇನ್ನೊಂದು ಮನೆಯ ಅದೇ ಮಾಳಿಗೆಯ ಅಂತಹದೇ ಇನ್ನೊಂದು ಭವ್ಯವಾದ ಕೋಣೆಯಲ್ಲಿ ಗಾಂಧೀಜಿ ಉಪಹಾರ ತೆಗೆದು ಕೊಳ್ಳುತ್ತಿದ್ದರು. ಉಳಿದಿಬ್ಬರು ಮಿತ್ರರನ್ನೂ ಕರೆದು ತೋರಿಸಿದೆ. ಪ್ರತ್ಯಕ್ಷ ನೋಡುತ್ತಿದ್ದರೂ ನಮಗೆ ನಂಬಿಕೆ ಆಗಲಿಲ್ಲ. ಅನುಮಾನವಾಯಿತು. ಮತ್ತೆ ಚೆನ್ನಾಗಿ ನೋಡಿ ಮನವರಿಕೆ ಮಾಡಿಕೊಂಡೆವು. ಧಾವಿಸಿ ಓಡಿಹೋಗಿ ಗಾಂಧೀಜಿ ಅವರ ಚರಣಗಳಿಗೆ ವಂದನೆಗಳನ್ನು ಸಮರ್ಪಿಸಿದೆವು.

ಗೌಹಾತಿ ಕಾಂಗ್ರೆಸ್ ಅಧಿವೇಶನಕ್ಕೆಂದು ಹೊರಟಿದ್ದ ಗಾಂಧೀಜಿ ಒಂದು ದಿನ ಅಲ್ಲಿ ತಂಗಿದ್ದರೆಂದು ಆಗ ನಮಗೆ ತಿಳಿದುಬಂದಿತು. ನಮ್ಮಂತೆ ಬನಬಿರನೂ ಹುಡುಗ. ಶಾಂತಿನಿಕೇತನದಲ್ಲಿದ್ದವ. ಅವನಿಗೂ ಕೂಡ ಇದು ಗೊತ್ತಾದದ್ದು ಆಗತಾನೆ.

ಗಾಂಧೀಜಿ ಆಪ್ತಕಾರ್ಯದರ್ಶಿ ಮಹದೇವ ದೇಸಾಯಿ ಬಂದಿರಲಿಲ್ಲ. ಬೇರೊಬ್ಬ ತಮಿಳು ಆಪ್ತಕಾರ್ಯದರ್ಶಿ ಇದ್ದರು. ಗುರುದೇವ ರವೀಂದ್ರರ ಶಾಂತಿನಿಕೇತನದಿಂದ ಬಂದಿದ್ದ ವಿಶ್ವಭಾರತಿ ವಿದ್ಯಾರ್ಥಿಗಳೆಂದು ನಮಗೆ ವಿಶೇಷ ಮಹತ್ವ. ಆಪ್ತಕಾರ್ಯದರ್ಶಿ ನಮ್ಮನ್ನು ಕರೆದುಕೊಂಡು ಹೋಗಿ ಗಾಂಧೀಜಿ ಅವರಿಗೆ ನಮ್ಮ ಪರಿಚಯ ಮಾಡಿಕೊಟ್ಟರು. ನೂಲುವದು ಎಲ್ಲರಿಗೂ ಕಡ್ಡಾಯವಾಗಿರಬೇಕೆಂದು ಗಾಂಧೀಜಿ ಹೇಳುತ್ತಿದ್ದ ಕಾಲವದು. ಇದನ್ನು ಗುರುದೇವ ವಿರೋಧಿಸಿದ್ದರು. ಆ ಬಿಸಿ ಇನ್ನೂ ಆರಿರಲಿಲ್ಲ. ಖಾದಿ ಬಟ್ಟೆಯನ್ನೇ ತೊಟ್ಟಿದ್ದ ನನ್ನನ್ನು–ನಮ್ಮನ್ನು ಗಾಂಧೀಜಿ ನೋಡಿ "ನೀವೆಂತಹ ವಿಶ್ವಭಾರತಿ ವಿದ್ಯಾರ್ಥಿಗಳೆಂದು" ನಗೆಯಾಡಿದರು. ನಾವದಕ್ಕೆ "ವಿಶ್ವಭಾರತಿಗೆ ಬರುವ ಮೊದಲೇ ನಿಮ್ಮ ಕರೆಗೆ ಓಗೆಟ್ಟು, ಆಂಗ್ಲ ಆಳರಸರ ಇಂಗ್ಲೀಷ್ ಶಾಲೆಯನ್ನು ಬಿಟ್ಟು, ಅಸಹಕಾರ ಚಳವಳಿಯಲ್ಲಿ ಭಾಗವಹಿಸಿದವರೆಂದೂ ಅಂದಿನಿಂದ ಖಾದಿ ಬಟ್ಟೆಯನ್ನೇ ಹಾಕಿಕೊಳ್ಳುತ್ತೇವೆಂದೂ" ಹೇಳಿದೆವು.

ಗಾಂಧೀಜಿ ಅಲ್ಲಿ ಇರುವಾಗ ಅವರನ್ನು ಕಾಣಲು ನಮಗೆ ಸಾಕಷ್ಟು ಅವಕಾಶ ದೊರೆಯಿತು. ಅವರೊಂದಿಗೆ ನಾನು ಒಂದೇ ಮನೆಯಲ್ಲಿ ಕೂಡಿ ಇರುವೆನೆಂಬ ಭಾವನೆ. ಇದರಿಂದ ನನಗೆ ಅಪಾರ ಆನಂದವಾಯಿತು.

–ಶೇ.ಗೋ.ಕುಲಕರ್ಣಿ

* * *

## ೩೩. ಶ್ರೀ ಪುಂಡಲೀಕಜೀ ಕಾತಗಡೆ ಅವರ ನೆನಹುಗಳು

**೧. ನಮ್ಮ ಅಧಿಕಪ್ರಸಂಗತನ:**

ಸನ್ ೧೯೩೭ನೆಯ ಸಾವಲಿಯ "ಗಾಂಧೀ ಸೇವಾ ಸಂಘ"ದ ಸಮ್ಮೇಲನವಲ್ಲಿ ಮುಂದಿನ ಸಮ್ಮೇಲನದ ನಿಮಂತ್ರಣ ಕೊಡುವ ಗೊತ್ತುವಳಿಯನ್ನು ನಾನೇ ಹುದಲಿಯ ಪರವಾಗಿ ಮಂಡಿಸಿದ್ದೆನು; ಮತ್ತು ನನ್ನ ಮಿತ್ರರಾದ ಶ್ರೀ ರಾಮಚಂದ್ರ ವಡವಿಯವರು ಅದಕ್ಕೆ ಬೆಂಬಲ ಕೊಟ್ಟಿದ್ದರು. ಸಮ್ಮೇಲನವನ್ನು ಕೂಡಿಸುವ ಕುರಿತು ಯಾವ ಕರಾರು ಹಾಕಲ್ಪಟ್ಟಿದ್ದವೋ ಆ ಎಲ್ಲಾ ಕರಾರುಗಳಿಗೆ ನಾವು ಮಾನ್ಯ ಮಾಡಿದ್ದೆವು. ಆದ್ದರಿಂದ ಅನ್ಯ ಪ್ರಾಂತದವರು ತಮ್ಮ ನಿಮಂತ್ರಣಗಳನ್ನು ತೆಗೆದುಕೊಂಡರು ಮತ್ತು ನಮ್ಮ ನಿಮಂತ್ರಣವು ಸರ್ವಾನುಮತದಿಂದ ಒಪ್ಪಿತವಾಯಿತು. ಆ ನಿಮಂತ್ರಣದ ಒಪ್ಪಿಗೆಯನ್ನು ನಾವು ಗಂಗಾಧರರಾವ ದೇಶಪಾಂಡೆಯವರಿಂದ ತಕ್ಕೊಂಡಿದಿಲ್ಲ. ಸಾವಲ್ಲಿಯಲ್ಲಿಯೇ ನಮಗೆ ಆ ವಿಚಾರ ಬಂದಿತ್ತು. ಆದರೆ ಗಂಗಾಧರರಾಯರು ನಮ್ಮ ಆ ಅಧಿಕಪ್ರಸಂಗವನ್ನು

ಎತ್ತಿ ಹಿಡಿದರು, ಹಾಗೂ ಆ ಪ್ರಕಾರ ಗಾಂಧೀಜಿಯವರಿಗೆ ಬರೆದರು ಮತ್ತು ನಮಗೆ ಪ್ರೋತ್ಸಾಹ ಕೊಟ್ಟರು. ಅಲ್ಲದೆ ನಮ್ಮ ಕೂಡ ತಾವು ಕೆಲಸಕ್ಕೆ ಹತ್ತಿದರು.

ಊರಲ್ಲಿಯ ಒಂದು ದೊಡ್ಡ ತಗ್ಗನ್ನು ಮುಚ್ಚುವುದು. ಇಡೀ ಊರಲ್ಲಿ ಪರಸಿ ಹಾಕುವ ಕೆಲಸವನ್ನು ಪೂರ್ಣ ಮಾಡುವುದು, ಹಾಗೂ ಊರಲ್ಲಿ ಒಂದು ಬಾವಿ ತೋಡುವುದು ಈ ಮೂರು ಕೆಲಸಗಳು ಸಮ್ಮೇಲನದ ಅಧಿವೇಶನದ ಬಗೆಗೆ ನಿಶ್ಚಿತ ಮಾಡಲ್ಪಟ್ಟಿದ್ದವು. ಈ ಮೂರು ಕಾರ್ಯಗಳನ್ನು ಊರೊಳಗಿನ ಜನರು ಹಾಗೂ ಸ್ಥಾನಿಕ ಕಾರ್ಯಕರ್ತರೂ ಪೂರ್ಣ ಮಾಡಿದರು.

ಈ ಸಮ್ಮೇಳನಕ್ಕಾಗಿ ಜವಾಹರಲಾಲರ ಒಬ್ಬರ ಹೊರತು ಭಾರತದಲ್ಲಿಯ ಎಲ್ಲಾ ಮುಂದಾಳುಗಳು ಉಪಸ್ಥಿತರಾಗಿದ್ದರು. ಹುದಲಿಗೆ ಬರುತ್ತಲೇ ಗಾಂಧೀಜಿಯವರು ಎಲ್ಲ ವ್ಯವಸ್ಥೆಯನ್ನು ಸ್ವತಃ ಲಕ್ಷ್ಯಪೂರ್ವಕ ನೋಡಿಕೊಂಡರು. ಮತ್ತು ಅನೇಕ ಸೂಚನೆಗಳನ್ನು ಕೊಟ್ಟರು.

**೨. ನನ್ನ ಅಜ್ಞಾನ:**

ಆ ದಿವಸ ಸಾಯಂಕಾಲ ತಿರುಗಾಡಲು ಹೊರಟಾಗ ಗಾಂಧೀಜಿ ನನಗೆ ಹೀಗೆ ಕೇಳಿದರು – ಈ ಬದಿಯ ಗುಡ್ಡದ ಮೇಲೆ ಯಾವ ದೇವರ ಗುಡಿ ಇದೆ? (ಗಾಂಧೀಜಿಯ ವಿಷಯ ನಮಗೆಲ್ಲಾ ಗೊತ್ತು ಎಂದು ಅವರ ಎಲ್ಲಾ ವ್ಯವಸ್ಥೆಯನ್ನು ನನಗೇ ಒಪ್ಪಿಸಲಾಗಿತ್ತು.) ಗುಡ್ಡದ ಮೇಲಿನ ಗುಡಿ ಯಾವುದೆಂಬುದು ನನಗೆ ಗೊತ್ತಿರಲಿಲ್ಲ. ಇದ್ದ ಸಂಗತಿ ಸ್ಪಷ್ಟವಾಗಿ ಹೇಳಿಬಿಡಬೇಕೆಂದು ನಾನು "ನನಗೆ ಗೊತ್ತಿಲ್ಲ" ಎಂದು ಹೇಳಿದೆ. ನನ್ನ ಉತ್ತರ ಕೇಳುತ್ತಲೇ ಗಾಂಧೀಜಿ ನನಗೆ ಕೇಳಿದರು. "ನೀವು ಇಲ್ಲಿ ಎಷ್ಟು ದಿವಸಗಳಿಂದ ಕೆಲಸ ಮಾಡುತ್ತಿದ್ದೀರಿ" ನಾನು "ಸುಮಾರು ೧೫ ವರ್ಷಗಳಾದುವು" ಎಂದು ಉತ್ತರ ಕೊಟ್ಟೆನು.

ನನ್ನ ಈ ಉತ್ತರವನ್ನು ಕೇಳಿ ಗಾಂಧೀಜಿಯವರು ಕೈಮುಗಿದು ಹಾಸ್ಯ ವದನದಿಂದ ನನ್ನ ಕಡೆಗೇ ನೋಡುತ್ತ ನಿಂತುಕೊಂಡಿದ್ದರು. ನಾನು ಕುತ್ತಿಗೆ ಎತ್ತಿ ನೋಡಿವಾಕ್ಷಣ ನನಗೆ ಈ ದೃಶ್ಯ ಕಾಣಿಸಿತು.

**೩. ಗಾಂಧೀಜಿ ಬೆಳತನಕ ಎದ್ದೇ ನಿಂತಿದ್ದರು:**

ಸಂಘದ ಕಾರ್ಯಕಲಾಪ ಅಲ್ಲಿ ಎರಡು ದಿವಸ ಸರಿಯಾಗಿ ನಡೆಯಿತು. ಸಂಘದ ಸದಸ್ಯರ ಚರ್ಚೆಯು ಉದ್ಬೋಧಕವಾಯಿತು. ಸಂಘದ ಅಧ್ಯಕ್ಷರಾದ ಶ್ರೀ ಕಿಶೋರಲಾಲಜಿ ಮಶ್ರುವಾಲಾ ಅವರು, ಸಂಘದ ಸದಸ್ಯರು "ಕೌನ್ಸಿಲ್" ಪ್ರವೇಶಿಸುವುದರ ವಿರುದ್ಧವಿದ್ದರು. ಮತ್ತು ಅವರು ತಮ್ಮ ಹೇಳಿಕೆಯನ್ನು ಸಿದ್ಧಪಡಿಸಿ, ಬರೆದು ಸಾದರಪಡಿಸಿದ್ದರು. ಮತ್ತು ಸಂಘದ ಸಮ್ಮೇಲನದ ನಿರ್ಣಯವು ಇದಕ್ಕೆ ವಿರುದ್ಧವಾದಲ್ಲಿ ತಮ್ಮ 'ತ್ಯಾಗಪತ್ರವನ್ನು' ಸ್ವೀಕರಿಸಬೇಕು ಹೀಗೆ ಪ್ರಾರ್ಥಿಸಿಕೊಂಡಿದ್ದರು. ಆದ್ದರಿಂದ ಇದಕ್ಕೆ ವಿಶೇಷ ಮಹತ್ವ ಬಂದಿತ್ತು. ಎರಡನೇ ದಿವಸವೂ ಚರ್ಚೆಯು ಅಪೂರ್ಣವಾಗಿಯೇ ಉಳಿದು ಬಿಟ್ಟಿತ್ತು.

ಆದರೆ ಎರಡನೆಯ ದಿವಸ ಸಾಯಂಕಾಲಕ್ಕೆ ಒಮ್ಮಿಂದೊಮ್ಮೆ ಭಯಂಕರ ಮಳೆ ಪ್ರಾರಂಭವಾಯಿತು. ಮಳೆ ಹಾಗೂ ಗಾಳಿಯಿಂದ ಕಣಿಕೆಯ ಆ ಗುಡಿಸಲುಗಳೆಲ್ಲ ಚೆಲ್ಲಾಪಿಲ್ಲಿಯಾದುವು. ಸರ್ವ ಸದಸ್ಯರ ಸಾಮಾನು, ಪುಸ್ತಕಗಳು ಮತ್ತು ಸಮ್ಮೇಲನದ ಕಚೇರಿ ಮತ್ತು ಕಾಗದ ಪತ್ರಗಳು, ನೀರಿನಲ್ಲಿ ತೇಲಾಡುವ ಪ್ರಸಂಗ ಬಂದಿತು.

ಗಾಂಧೀಜಿಯವರ ಗುಡಿಸಲಿನಲ್ಲಿ ನೀರಿನ ಪ್ರವಾಹ ಸೇರಲು ಒಂದೆರಡು ಗಂಟೆ ತಡವಾಗಿರಬಹುದು ಇಷ್ಟೆ. ಇಡೀ ರಾತ್ರಿ ಮಳೆಯಲ್ಲಿ ಗಾಂಧೀಜಿ ಎದ್ದೇ ನಿಂತಿದ್ದರು. ಯಾರದೇ ಮನೆಗೆ ಹೋಗುವುದನ್ನು ಅವರು ಖಂಡಿತವಾಗಿ ನಿರಾಕರಿಸಿದರು. ನನ್ನನ್ನು ಅವರ ಗುಡಿಸಲಿಗಾಗಿಯೇ ನಿಯಮಿಸಿದ್ದರಿಂದ ನಾನೊಬ್ಬನೇ ಅವರ ಸಂಗಡ ಗುಡಿಸಿಲಲ್ಲಿ ಅವರೊಡನೆ ಎದ್ದು ನಿಂತಿದ್ದೆನು. ಅವರ ಕಾರ್ಯದರ್ಶಿ ಮಹಾದೇವ ಭಾಯಿ, ಕಾಕಾಸಾಹೇಬ ಕಾಲೇಲ್ಕರ ಮುಂತಾದ ನಾಲ್ಕೈದು ಜನ ಪ್ರಭೃತಿಗಳು ಗಾಂಧೀಜಿಯವರ ಸಂಗಡ ಅವರ ಗುಡಿಸಿಲಲ್ಲಿ ಒಂದೆರಡು ತಾಸು ಎದ್ದು ನಿಂತಿದ್ದರು. ಗಾಂಧೀಜಿಯವರು ಅವರಿಗೆ ಯಾರ ಮನೆಗಾದರೂ ಆಶ್ರಯಕ್ಕಾಗಿ ಹೋಗಲು ಹೇಳಿದರು.

ಪ್ರತಿ ಅರ್ಧ ಗಂಟೆಯನಂತರ ನಾನು 'ಗಾಂಧೀ ಗ್ರಾಮದಲ್ಲಿ' ಅಡ್ಡಾಡಿ ಎಲ್ಲಾ ಪರಿಸ್ಥಿತಿಯ ಮಾಹಿತಿಯನ್ನು ಗಾಂಧೀಜಿಯವರಿಗೆ ಹೇಳುತ್ತಿದ್ದೆನು.

"ಹಳೆಯ ಕಾಲದ ಮನೆಗೆ ಆಶ್ರಯಕ್ಕಾಗಿ ಯಾರನ್ನೂ ಕಳಿಸಬೇಡ" ಹೀಗೆ ಸೂಚನೆಯನ್ನು ಗಂಗಾಧರರಾಯ ಇವರು ನನಗೆ ಕೊಟ್ಟಿದ್ದರು. ಯಾಕೆಂದರೆ ಈ ಹಳೆಯ ಮನೆಗಳು ಮಳೆಯಿಂದ ಬೀಳುವ ಸಂಭವವಿರುತ್ತದೆ. ಈ ಸೂಚನೆಯು ಗಾಂಧೀಜಿಯವರ ಕಿವಿಗೆ ಮುಟ್ಟಲು ಅವರಿಗೆ ಅತ್ಯಂತ ಆನಂದವಾಯಿತು. ಗಾಂಧೀಜಿಯವರು ಮತ್ತೆ ಮತ್ತೆ ನನಗೆ ಹೇಳಿದರು "ಈ ಸಮ್ಮೇಲನದ ಸಲುವಾಗಿ ಇರುವ ಎಲ್ಲ ಫಲಾಹಾರದ ಅಂಗಡಿಗಳು ಹಾಗೂ ಹಣ್ಣು-ಹಂಪಲುಗಳ ಅಂಗಡಿಗಳು ಈ ಗುಡಿಸಲುಗಳಲ್ಲಿಯೇ ಇರುತ್ತವೆ. ಆ ಎಲ್ಲ ಪದಾರ್ಥಗಳನ್ನೂ ಹಾಗೂ ಫಲಗಳನ್ನು ಒಂದು ತಗ್ಗಿನಲ್ಲಿ ಹಾಕಿ ಮೇಲೆ ಮಣ್ಣು ಮುಚ್ಚಲು ಗಂಗಾಧರರಾಯರಿಗೆ ಹೇಳಿ ಬಾ" ನಾನು ಅವರಿಗೆ ಹೀಗೆ ಹೇಳಿದೆನು – "ಗಂಗಾಧರರಾಯರು ಇದೇ ಕೆಲಸವನ್ನು ರಾತ್ರಿ ೧೨ ಗಂಟೆಯಿಂದ ಸ್ವತಃ ನಿಂತು ಮಾಡಿಸುತ್ತಿದ್ದಾರೆ. ಯಾಕೆಂದರೆ ಬೇರೆ ಯಾರಿಗೂ ಹಾಗೆ ಮಾಡಲು ಅಂಗಡಿಕಾರರು ಒಪ್ಪುತ್ತಿರಲಿಲ್ಲ. ಗಾಂಧೀಜಿಯವರಿಗೆ ಸಂತೋಷವಾಯಿತು. ಮತ್ತು ಹೀಗೆ ಅಂದರು, "ಒಳ್ಳೆಯದೇ ಆಯಿತು ಇಂತಹ ಸಂಗತಿಗಳು ಗಂಗಾಧರರಾಯರ ಲಕ್ಷ್ಯದಲ್ಲಿ ಸಕಾಲಕ್ಕೆ ತಕ್ಷಣ ಬರುತ್ತಿರುತ್ತವೆ."

ಮಳೆಯು ಪ್ರಾರಂಭವಾದ ಕೂಡಲೇ ಗಂಗಾಧರರಾಯರು ನನಗೆ ಹೀಗೆ ಹೇಳಿದರು "ಗಾಂಧೀಜಿಯವರ ಪ್ರತಿಯೊಂದು ವಸ್ತು, ಸರ್ವ ಸಾಮಾನು, ಪುಸ್ತಕ, ಸಬಕಾರ, ಬಟ್ಟೆ, ಕಾಗದ ಪತ್ರ ಇವುಗಳನ್ನೆಲ್ಲಾ ವ್ಯವಸ್ಥಿತವಾಗಿ, ಗಟ್ಟಿಮುಟ್ಟಾಗಿ ಸುತ್ತಿ, ಮಳೆಯಲ್ಲಿ ಎಷ್ಟು ಕಾಲ ಇದ್ದರೂ ಸ್ವಲ್ಪವೂ ತೊಯ್ಯದಂತೆ ಗಂಟು ಕಟ್ಟಿ ಕುಮರೀ ಆಶ್ರಮಕ್ಕೆ

ಕಳಿಸಿಕೊಡು. ಮತ್ತು ನೀನು ಸ್ವತಃ ಅಲ್ಲಿಗೆ ಹೋಗಿ ಎಲ್ಲವನ್ನೂ ಸರಿಯಾಗಿ ಮಂಡಿಸಿಟ್ಟು, ಮತ್ತೆ ತಿರುಗಿ ಇಲ್ಲಿಗೆ ಬಾ. ಬೆಳಿಗ್ಗೆ ಎಲ್ಲರನ್ನೂ ಕುಮರೀ ಆಶ್ರಮಕ್ಕೆ ಒಯ್ಯತಕ್ಕದ್ದಿದೆ. ಸಂಘ ಸದಸ್ಯರ ಹೊರತು ಉಳಿದ ಹೊರಗಿನ ಎಲ್ಲ ಜನರೂ ಹುದಲಿ ಬಿಟ್ಟು ಹೋಗಬೇಕೆಂದು ನಾನು ಅವರೆಲ್ಲರಿಗೆ ಹೇಳತಕ್ಕವನಿದ್ದೇನೆ. ಆ ಧಾರಾಕಾರವಾಗಿ ಸುರಿಯು ತ್ತಿರುವ ಮಳೆಯಲ್ಲಿ ತೊಯ್ದು ಬಟ್ಟೆಯಿಂದಲೇ ಗಂಗಾಧರರಾಯರು ಕುದುರೆ ಹತ್ತಿ ರಾತ್ರಿಯೆಲ್ಲ ತಿರುಗುತ್ತಿದ್ದರು.

**೪. ಗಂಗಾಧರರಾಯರ ಚಾಣಾಕ್ಷ ಉತ್ತರ:**

ಈ ನಿರ್ಣಯವನ್ನು ನಾನು ರಾತ್ರಿಯ ಮೂರು ಗಂಟೆಗೆ ಗಾಂಧೀಜಿಯವರಿಗೆ ತಿಳಿಸಿದೆನು. ಆಗ ಗಾಂಧೀಜಿಯವರು ನನಗೆ ಹೀಗೆ ಕೇಳಿದರು, "ಆಶ್ರಮದಲಿ ನಾಲ್ಕು ನೂರು ಜನರಿಗೆ ಇರಲು ಶಕ್ಯವಾಗುವಷ್ಟು ಅನುಕೂಲ ಸ್ಥಳ ಇರುವುದೇನು? ಕಟ್ಟಡಗಳು ಎಷ್ಟು ಇವೆ? ಗಟ್ಟಿಮುಟ್ಟಾಗಿ ಕಟ್ಟಿದ ಪಕ್ಕಾ ಕಟ್ಟಡಗಳು ಇರುತ್ತವೆಯೇನು?"

"ಆಶ್ರಮದಲ್ಲಿ ನಾಲ್ಕು ಕಟ್ಟಡಗಳು ಇರುತ್ತವೆ. ಅವುಗಳಲ್ಲಿ ಒಂದು ಕಟ್ಟಡವಂತೂ ಬಹಳೇ ದೊಡ್ಡದು ಇರುತ್ತದೆ. ಅದರಲ್ಲಿ ನಾಲ್ಕು ದೊಡ್ಡ ಪಡಸಾಲೆಗಳು ಇರುತ್ತವೆ. ನನಗೆ ಹೀಗೆ ಅನಿಸುತ್ತದೆ. ಅದರಲ್ಲಿಯ ಎರಡೇ ಪಡಸಾಲೆಗಳಲ್ಲಿ ಸಮ್ಮೇಲನದ ಸದಸ್ಯರ ಮಟ್ಟಿಗೆ ಸಭೆಯೂ ಸಹ ನಡೆಯಬಹುದು. ಎಲ್ಲ ಕಟ್ಟಡಗಳೂ ಪಕ್ಕಾ ಇರುತ್ತವೆ" ನಾನು ಉತ್ತರ ಕೊಟ್ಟೆನು.

ಗಾಂಧೀಜಿಯವರು ಮತ್ತೆ ಕೇಳಿದರು "ಆ ನಾಲ್ಕು ಪಡಸಾಲೆಗಳಲ್ಲಿ ಪ್ರತಿಯೊಂದರ ಉದ್ದ ಅಗಲ ಎಷ್ಟೆಷ್ಟು ಇರುತ್ತದೆ?"

ನಾನು : "ನನಗೆ ಗೊತ್ತಿಲ್ಲ. ನನ್ನ ಕಾಯಾಸವೂ ತಪ್ಪುವ ಸಂಭವವಿದೆ. ಆದರೆ ಪಡಸಾಲೆಗಳು ಬಹಳೇ ದೊಡ್ಡವು ಇವೆ."

ಗಾಂಧೀಜಿ : "ಈ ಆಶ್ರಮದಲ್ಲಿ ವ್ಯವಸ್ಥಾಪಕರಾಗಿ ಎಷ್ಟು ದಿವಸಗಳಿಂದ ನೀವು ಕೆಲಸ ಮಾಡುತ್ತಿದ್ದೀರಿ?"

ನಾನು : "ಸುಮಾರು ಹನ್ನೊಂದು-ಹನ್ನೆರಡು ವರ್ಷಗಳಾದವು. ಈ ಆಶ್ರಮದಲ್ಲಿ ಕೆಲಸ ಮಾಡುತ್ತಿದ್ದೇನೆ" ನನ್ನ ಈ ಉತ್ತರವನ್ನು ಕೇಳಿ, ಗಾಂಧೀಜಿಯವರು ಕೈಮುಗಿದು ಮನದಣಿ ನಕ್ಕರು.

ಇಷ್ಟರಲ್ಲಿಯೇ ರಾತ್ರಿ ತಿರುಗಾಡುತ್ತಿದ್ದ ಕುದುರೆಯ ಮೇಲಿಂದ ಗಂಗಾಧರರಾಯರು ಅಲ್ಲಿಗೆ ಬಂದರು. ಅವರಿಗೂ ಗಾಂಧೀಜಿಯವರು ಅದೇ ಪ್ರಶ್ನೆ ಕೇಳಿದರು. ಗಂಗಾಧರರಾಯರು ಚಟ್ಟನೆ ಉತ್ತರ ಕೊಟ್ಟರು. "ಒಂದೊಂದು ಪಡಸಾಲೆ ೬೦ ಫೂಟು ಉದ್ದ ೩೦ ಫೂಟು ಅಗಲ ಇದೆ". ಹೀಗೆ ಹೇಳಿ ಅವರು ಕುದುರೆಯನ್ನು ಹೊರಳಿಸಿದರು. ಮತ್ತು ಮುಂದೆ ಸಾಗಹತ್ತಿದರು. ನಾನು ಕುದುರೆಯ ಸಂಗಡ ಸ್ವಲ್ಪ ದೂರ ನಡೆದುಹೋಗಿ,

ಗಂಗಾಧರರಾಯರಿಗೆ ಕೇಳಿದೆನು; ತಾವು ಗಾಂಧೀಜಿಯವರಿಗೆ ಯಾವ ಉತ್ತರಕೊಟ್ಟಿರಿ? ಆ ಅಳತೆಯ ಪಡಸಾಲೆಗಳು ಅಲ್ಲಿ ಎಲ್ಲಿ ಇವೆ? ಇದಕ್ಕೆ ಗಂಗಾಧರರಾಯರು ನನಗೆ ಕೊಟ್ಟ ಉತ್ತರವು ಒಂದು ನಮೂನೆಯದಾಗಿತ್ತು.

ನಾನು ತಿರುಗಿ ಗಾಂಧೀಜಿಯವರಲ್ಲಿಗೆ ಅವರ ಗುಡಿಸಲಿಗೆ ಬಂದೆ. ಆಗ ಗಾಂಧೀಜಿಯವರು ನನ್ನನ್ನು ಕುರಿತು ಹೇಳಿದರು – "ಪಡಸಾಲೆಯ ಉದ್ದ-ಅಗಲ ಎಷ್ಟು ಇದೆ. ಇದು ಗೊತ್ತಿಲ್ಲದಿದ್ದರೂ ಹೇಳುವಂತಹ ಈ ಪ್ರಕಾರ ನಿನಗೆ ಏನೂ ತೋಚಲಿಲ್ಲ."

**೫. ಮಳೆ ಡಾಕ್ಟರರನ್ನು ಸೋಲಿಸಿತು :**

ಆ ಮಳೆಗಾಲದ ರಾತ್ರಿಯ ಎರಡು ಸಂಗತಿಗಳು ಒಳ್ಳೇ ಮನೋರಂಜಕ ಹಾಗೂ ಉಲ್ಲೇಖನೀಯವಾಗಿವೆ. (೧) ಕಲಕತ್ತೆಯ ಒಬ್ಬ ಡಾಕ್ಟರರು ಸಂಘದ ಸದಸ್ಯರಾಗಿ ಬಂದಿದ್ದರು. ಅವರಿಗೆ ನಿದ್ದೆ ತಡೆಯುವುದು ಆಗುತ್ತಿದ್ದಿಲ್ಲ. ಅವರು ಹೀಗೆ ಹೇಳಿದರು, "ತಮ್ಮ ಎಲ್ಲ ಸಾಮಾನು, ಹಾಸಿಗೆ, ಗುಡಿಸಲದಲ್ಲಿಯ ಗುಡಾರ ಇವನ್ನೆಲ್ಲ ಹೊರಸಿನ ಮೇಲೆ ಇಟ್ಟು ಅದರ ಮೇಲೆ ಹುಲ್ಲಿನ ಒಂದು ಹೊದಿಕೆಯನ್ನು ಹಾಕಿ, ಆ ಹೊರಸಿನ ಕೆಳಗೆ ಕೇವಲ ಒಂದು ತಟ್ಟಿನ ಮೇಲೆ ಮಲಗಿಕೊಂಡರೆ, ಇವೆಲ್ಲವೂ ತೊಯ್ದು ನನ್ನ ಮೈಮೇಲೆ ನೀರು ಬೀಳಲು ಕಡಿಮೆಯೆಂದರೂ ಮೂರು ತಾಸು ಬೇಕು. ಇಷ್ಟು ಅವಧಿಯಲ್ಲಿ ನನ್ನ ನಿದ್ದೆ ಪೂರ್ಣವಾಗುತ್ತದೆ." ಇಷ್ಟೆಲ್ಲ ವ್ಯವಸ್ಥೆ ಮಾಡಿ ಆ ಡಾಕ್ಟರರು ಆ ಹೊರಸಿನ ಕೆಳಗೆ ಸೇರಿ ಮಲಗಿಕೊಂಡರು. ಮಳೆಯಿಂದ ಅವರ ಎಲ್ಲ ಸಾಮಾನು ತೊಯ್ದು ಮುದ್ದೆಯಾದವು. ಮತ್ತು ಅವರ ಗುಡಿಸಲು ಇಳುಕಲಿಗೆ ಇದ್ದುದರಿಂದ ನೀರಿನ ಪ್ರವಾಹವು ಡಾಕ್ಟರರ ಮೈ ಮೇಲೆಯೇ ನುಗ್ಗಿ ಬಂದುದರಿಂದ ಅವರು ಗಹಗಹಿಸಿ ನಗುತ್ತ ಎದ್ದು ಬಿಟ್ಟರು; ಮತ್ತು ಮಳೆಯಲ್ಲಿ ನಿರ್ಭಯರಾಗಿ ತಿರುಗಾಡಹತ್ತಿದರು. ಈ ಸಂಗತಿಯನ್ನು ನಾನು ಗಾಂಧೀಜಿಯವರಿಗೆ ಹೇಳಿದ ಬಳಿಕ ಅವರು ಆ ಡಾಕ್ಟರರನ್ನು ಕರೆಯಿಸಿಕೊಂಡು, ಇಬ್ಬರೂ ಕೂಡಿ ಮನದಣಿಯ ಬಹಳೇ ನಕ್ಕರು.

**೬. ಫೋಟೋ ಸಂಭ್ರಮ:**

ಮರುದಿನ ಬೆಳಿಗ್ಗೆ ಮಹಾತ್ಮಾಜಿಯವರನ್ನು ಕರೆದುಕೊಂಡು ನಾನು ಕುಮರಿ ಆಶ್ರಮಕ್ಕೆ ಹೊರಟೆನು. ದಾರಿಯಲ್ಲಿ ಮೊಳಕಾಲುಮಟ್ಟ ನೀರು ಹರಿಯುತ್ತಿತ್ತು. ತಲೆಯ ಮೇಲೆ ಮಳೆ ಸುರಿಯುತ್ತಲೇ ಇತ್ತು. ನನ್ನ ಒಂದು ಕೈಯಲ್ಲಿದ್ದ ಗಾಂಧೀಜಿಯವರ ಆಡಿನ ಹಾಲಿನ ಒಂದು ದೊಡ್ಡ ಡಬ್ಬಿ ಇತ್ತು. ಎರಡನೆ ಕೈಯಿಂದ ಗಾಂಧೀಜಿಯವರ ತಲೆಯ ಮೇಲೆ ಚತ್ತರಿಗೆ ಹಿಡಿದಿದ್ದೆನು. ಗಾಂಧೀಜಿಯವರು ನನ್ನ ಹೆಗಲ ಮೇಲೆ ಒಂದು ಕೈಯನ್ನು ಇಟ್ಟಿದ್ದರು; ನೀರಿನಲ್ಲಿ ನಡೆಯುವಾಗ ಚಪ್ಪಲದ ಕಾಲುಗಳು ಒಂದೇ ಸಮನೆ ಜಾರುತ್ತಿದ್ದವು. ಈ ರೀತಿಯ ಸಡಗರದಲ್ಲಿ ನಾವು ಕುಮರಿ ಆಶ್ರಮದತ್ತ ಹೊರಟಿದ್ದೆವು. ಇಂತಹ ಪ್ರಸಂಗದಲ್ಲಿಯೂ-ಒಬ್ಬ ಅಮೇರಿಕನ್ ಸುದ್ದಿಗಾರನು ಫೋಟೋ ತೆಗೆದುಕೊಳ್ಳುವ ಹವ್ಯಾಸದಲ್ಲಿ ತನ್ಮಯವಾಗಿದ್ದನು. ಇದನ್ನು ನೋಡಿ ಗಾಂಧೀಜಿ, ನಾವು ಮಳೆಯಲ್ಲಿ ಸಾಯುತ್ತಿದ್ದೇವೆ. ಈತನಿಗೆ ಫೋಟೋದ ಸಂಭ್ರಮ ಎಂದು ನಕ್ಕರು.

**೭. ಕಾರ್ಯಕರ್ತರ ತತ್ಪರತೆ:**

ಸಾಯಂಕಾಲ ಪ್ರಾರಂಭವಾದ ಮಳೆ ಬೆಳಗಿನವರೆಗೂ ಬಿಟ್ಟಿರಲಿಲ್ಲ. ಬೆಳಿಗ್ಗೆ ಕುಮರಿ ಆಶ್ರಮಕ್ಕೆ ಗಾಂಧೀಜಿ ಮತ್ತು ಎಲ್ಲ ಸದಸ್ಯರೂ ಹೋಗಬೇಕೆಂದು ಗೊತ್ತಾದ್ದರಿಂದ ಅಲ್ಲಿಯ ವ್ಯವಸ್ಥೆಯನ್ನು ಬೆಳಗಾಗುವ ಮೊದಲೇ ಮಾಡಿಡಬೇಕಾಗಿತ್ತು. ಆ ರೀತಿ ಕಾರ್ಯಕರ್ತರು ರಾತ್ರಿಯೇ ಹೋಗಿ ಗಾಂಧೀಜಿಯ ಸ್ನಾನ ಮತ್ತು ವಾಸದ ಎಲ್ಲ ವ್ಯವಸ್ಥೆಯನ್ನೂ ಇಟ್ಟಿದ್ದರು. ಗಾಂಧೀಜಿ ಮಳೆಯಲ್ಲಿ ನೆನೆದು ಹೋಗಿದ್ದರಿಂದ ಅವರಿಗೆ ಹೋದಕೂಡಲೇ ಸ್ನಾನಕ್ಕೆ ಬಿಸಿ ನೀರು ಬೇಕಾಗಿತ್ತು. ಅವರು ಈ ಬಗ್ಗೆ ನನ್ನನ್ನು ಕೇಳಿದಾಗ ನಾನು ವಿನೋದಕ್ಕಾಗಿ ಒಂದು ಸಂದಿಗ್ಧ ಉತ್ತರ ಕೊಟ್ಟಿದ್ದೆ. ಆಶ್ರಮ ತಲುಪುತ್ತಲೇ ನಾನು ಅವರನ್ನು ಬಚ್ಚಲು ಮನೆಗೆ ಕರೆದೊಯ್ದೆ.

"ಚಂಬಿನಲ್ಲಿ ನೀರು ಸಳಸಳ ಕುದಿಯುತ್ತಿದೆ. ಬಾದಲಿಯಲ್ಲಿ ಸುಡುಸುಡುವ ಸ್ನಾನದ ನೀರನ್ನು ತೋಡಿ ಇಡಲಾಗಿದೆ. ಬೆರಕೆಗಾಗಿ ಬೇಕಾಗುವಷ್ಟು ತಣ್ಣೀರನ್ನು ಅಲ್ಲಿಯೇ ಇರಿಸಿದೆ. ಒಂದು ಖುರ್ಚಿಯ ಮೇಲೆ ಅವರ ಪಂಚೆ, ಟಾವೆಲ್, ಅವರು ಹಲ್ಲಿನ ಡಬ್ಬಿ, ಹಲ್ಲು ತಿಕ್ಕುವ ಎರಡು ಜಾಲಿಯ ಕಡ್ಡಿ, ಎಣ್ಣೆಯ ಬಾಟಲಿ ಹಾಗೂ ಅವರ ಖಡಾವಿಗೆ ಇವುಗಳನ್ನೆಲ್ಲ ನೋಡಿದ ಕೂಡಲೇ ನನ್ನ ಆ ವಿನೋದದ ಅರ್ಥ ಅವರಿಗೆ ತಿಳಿಯಿತು. ಹಾಗೂ ದೂರ ಹೋಗಿ ನಿಂತಂಥ ನನ್ನನ್ನು ಅವರು ಕರೆದರು. ಮತ್ತು ಪ್ರೇಮದಿಂದ ನನ್ನ ತಲೆಗೆ ಏಟು ಕೊಟ್ಟರು. ಆಮೇಲೆ, ಕಳೆದುಹೋದ ಕೀಲಿಕೈಗಳು ದೊರೆತವೋ ಇಲ್ಲವೋ ಇದರ ವಿಚಾರವನ್ನಾದರೂ ಮಾಡಬಾರದೇ ಎಂದರು.

ಸ್ನಾನ ಮುಗಿದ ಮೇಲೆ ಕೂಡುವ ಸ್ಥಳಕ್ಕೆ ನಾನು ಅವರನ್ನು ಕರೆದುಕೊಂಡು ಹೋದೆ. ವಾರ್ಧಾ ಆಶ್ರಮದಲ್ಲಿಯ ಅವರ ಕೋಣೆಯಲ್ಲಿಯೇ ಅವರು ಕುಳಿತಿರುವಂತೆ ಭಾಸವಾಗುವ ಹಾಗೆ ತದ್ರೂಪ ಮಂಡನೆ ಮಾಡಲಾಗಿತ್ತು. ಇದನ್ನೆಲ್ಲ ನೋಡಿ ಗಾಂಧೀಜಿ ಕಾರ್ಯಕರ್ತರ ತತ್ಪರತೆಯ ಬಗ್ಗೆ ಆನಂದ ವ್ಯಕ್ತಪಡಿಸಿದರು.

ಹುದಲಿ ಊರಲ್ಲಿಯ ಎಲ್ಲ ದಾರಿಗಳಿಗೆ ಕಲ್ಲು ಹಾಸಿಗೆ ಹಾಕಿದ ಕೆಲಸವು ಗಾಂಧೀಜಿಯವರಿಗೆ ಅಷ್ಟೇನೂ ಒಳ್ಳೆಯದು ಎನಿಸಲಿಲ್ಲ. ಒಮ್ಮೆ ಎಲ್ಲ ದಾರಿಗಳಿಗೆ ಪರಸಿ ಹಾಕಿತೆಂದರೆ, ತಮ್ಮ ಊರಲ್ಲಿಯ ಮಾರ್ಗಗಳನ್ನು ತಮ್ಮ ಪರಿಶ್ರಮದಿಂದ ಪ್ರತಿ ವರ್ಷ ದುರಸ್ತಿ ಮಾಡಿಸುವ ಗ್ರಾಮಸೇವೆಯ ವಿಷಯಕ್ಕೆ ಎಲ್ಲರನ್ನೂ ವಂಚಿಸಿದಂತಾಗುತ್ತದೆಂದು ಅವರಿಗೆ ಅನ್ನಿಸುತ್ತಿತ್ತು.

ಬಾವಿಯ ತೋಡುವಿಕೆಯು ಗಾಂಧೀಜಿಯವರ ಹಸ್ತದಿಂದ ಪ್ರಾರಂಭವಾಯಿತು. ಗಾಂಧೀಜಿಯವರು ಆರು ಅಂಗಲ ಬಾವಿ ತೋಡಿದರು. ಬಾವಿಯನ್ನು ತೋಡಲು ಆರಿಸಲ್ಪಟ್ಟ ಆ ಜಾಗದ ಸಮೀಪದಲ್ಲಿಯೇ ಒಂದು ಹುಣಿಸೆಯ ಮರವಿತ್ತು. ಆ ಗಿಡವು ಬಾವಿಗೆ ಹತ್ತಿಯೇ ಇದ್ದುದರಿಂದ ಅದರ ಎಲೆಗಳು ಬಾವಿಯಲ್ಲಿ ಬಿದ್ದು, ಬಾವಿಯ ನೀರು ಕೆಟ್ಟು ಹೋಗಬಹುದು; ಅದ್ದರಿಂದ ಹಾಗೆ ಆಗಬಾರದೆಂದು, ಆ

ಗಿಡವನ್ನು ಕಡಿದುಬಿಡಬೇಕೆಂಬ ಕಲ್ಪನೆಯೊಂದು ಬಂದಿತು. ನಾವೆಲ್ಲ ಆ ಗಿಡವನ್ನೇ ಕಡಿಯುತ್ತಿರುವುದನ್ನು ಕಂಡು, ಗಾಂಧೀಜಿಯುವರು ನಕ್ಕರು ಹಾಗೂ ಹೀಗೆ ಅಂದರು –"ಬಾವಿಯನ್ನು ಪೂರ್ಣವಾಗಿ ಮೊದಲು ಕಡಿಯಿರಿ. ಅದರಲ್ಲಿ ನೀರು ಜೀಳಲಿ. ಆಮೇಲೆ ಬಾವಿಯನ್ನು ಕಲ್ಲಿನಿಂದ ಕಟ್ಟಿಕೊಳ್ಳಿರಿ. ಆಮೇಲೆ ಗಿಡದ ಎಲೆಗಳಿಂದ ಆ ನೀರು ಕೆಡಹತ್ತಿದ್ದರೆ ಮಾತ್ರ ಆ ಗಿಡವನ್ನು ಕಡಿಯಬಹುದಲ್ಲವೆ?" ಅವರು ಹೀಗೆಂದ ಬಳಿಕ ಆ ಗಿಡ ಕಡಿಯುವ ಕಾರ್ಯಕ್ರಮ ನಿಲ್ಲಿಸಲಾಯಿತು.

ಗಾಂಧೀ ಸೇವಾ ಸಂಘದ ಸಮ್ಮೇಲನ ಕಾಲಕ್ಕೆ ಅರ್ಧಕ್ಕೆ ನಿಂತ ಕೆಲಸಗಳನ್ನು ಮುಂದೆ ಸ್ಥಾನಿಕ ಕಾರ್ಯಕರ್ತರು ಅವುಗಳನ್ನು ಪೂರ್ಣ ಮಾಡಬೇಕು. ಹೀಗೆ ಸಂಘದ ರೂಢಿಯೂ ನಿಯಮವೂ ಬಂದಿತ್ತು. ಆ ನಿಯಮದಂತೆ ನಾವು ಬಾವಿಯನ್ನು ತೋಡುವ ಕಾರ್ಯಕ್ರಮವನ್ನು ಮುಂದೆ ಸಾಗಿಸಿದೆವು. ಆದರೆ ೮-೧೦ ಫೂಟು ಅಂತರದಲ್ಲಿಯೇ ಒಂದು ಅಖಂಡವಾದ ಕರೇಕಲ್ಲು ಹತ್ತಿತ್ತು. ಅದನ್ನು ಸುರಂಗದಿಂದ ಒಡೆದು ತೆಗೆಯುವಾಗ ಸಮೀಪದ ಇಮಾರತಿಗಳಿಗೆ ಧಕ್ಕೆಯಾಗ ಹತ್ತಿತ್ತು. ಅಲ್ಲದೆ ಬಾವಿಯಲ್ಲಿ ನೀರು ಹತ್ತುವ ಚಿಹ್ನವೂ ಕಾಣದಾಯಿತು. ಆದ್ದರಿಂದ ನಾನು ಗಾಂಧೀಜಿಯವರಿಗೆ ವಸ್ತುಸ್ಥಿತಿಯನ್ನು ಹೇಳಿ ಮಾರ್ಗದರ್ಶನದ ಯೋಚನೆ ಮಾಡಿಕೊಂಡಿದ್ದೆನು. ಅವರಿಂದ ಉತ್ತರ ಹೀಗೆ ಬಂದಿತು –"ಬಾವಿಯನ್ನು ಅಗಿಯುತ್ತ ಅಮೇರಿಕೆಯವರೆಗೆ ಹೋಗುವ ಪ್ರಸಂಗ ಬಂದರೂ ಪ್ರಯತ್ನ ಬಿಡಬಾರದು. ಸ್ವಲ್ಪೇ ಅಂತರದಲ್ಲಿ ನೀರು ಬರಬಹುದು." ಅದೇ ಮಾತಿನಂತೆ ಬಾವಿಗೆ ೨೨ ಫೂಟಿನ ಮೇಲೆ ನೀರು ಹತ್ತಿತು. ಬಾವಿಯ ನೀರು ಎಂದೂ ಕಡಿಮೆಯಾಗಿಲ್ಲ.

ಕುಮರಿಯ ಆಶ್ರಮದಲ್ಲಿ ಮುಂದೆ ನಾಲ್ಕು ದಿವಸಗಳವರೆಗೆ ಸಮ್ಮೇಲನ ನಡೆದಿತ್ತು. ಎಲ್ಲ ಸಭಾಸದರ ಎರಡೂ ವೇಳೆಯ ಊಟದ ವ್ಯವಸ್ಥೆಯು ಹುದಲಿಯಲ್ಲಿಯೇ ಆಗುತ್ತಿತ್ತು. ಹೆಗಲ ಕೋಲಿನಿಂದ ಎರಡೂ ವೇಳೆಯ ಊಟವನ್ನು ಎರಡೂವರೆ ಮೈಲು ಅಂತರದಲ್ಲಿ ಮೇಲಿಂದ ತರಲಾಗುತ್ತಿತ್ತು. ಈ ಕಷ್ಟದ ಸಂಗತಿಯು ಗಾಂಧೀಜಿಯವರಿಗೆ ತಿಳಿಯಲು ಅವರಿಗೆ ಆಶ್ಚರ್ಯವಾಯಿತು. ಕಾರ್ಯಕರ್ತರಿಗಾಗುವ ಈ ಕಷ್ಟವನ್ನು ಕಂಡು ಅವರು ಕೌತುಕಪಟ್ಟರು. ಇದರ ಉಲ್ಲೇಖವನ್ನು ಅವರು ತಮ್ಮ "ಹರಿಜನ" ಪತ್ರಿಕೆಯಲ್ಲಿ ಮುಕ್ತ ಕಂಠದಿಂದ ಮಾಡಿದ್ದಾರೆ.

ಸಮ್ಮೇಲನದ ಚರ್ಚೆಯ ಸಮಾರೋಪವನ್ನು ಗಾಂಧೀಜಿಯವರು ಮಾಡಿದರು. ಮತ್ತು ಸಂಘದ ಸದಸ್ಯರು "ಧಾರಾ ಸಭೆಗೆ (ಕೌನ್ಸಿಲಗೆ) ಹೋಗಲು" ಯಾವ ಅಡ್ಡಿಯೂ ಇಲ್ಲವೆಂಬ ಗೊತ್ತುವಳಿಯನ್ನು ಸರ್ವಾನುಮತದಿಂದ ಮಂಡಿಸಿದರು. ಅಲ್ಲದೆ ಈ ಮೊದಲು ಸಾವಲಿಯ ನಿರ್ಣಯದಂತೆ ಸಂಘದ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟಂಥ ಸದಸ್ಯರನ್ನು ಮತ್ತೆ ಸಂಘದಲ್ಲಿ ಸೇರಿಸಿಕೊಳ್ಳಲಾಯಿತು.

ಕೊನೆಯ ದಿವಸ ಹುದಲಿ ಗ್ರಾಮವನ್ನು ಬಿಡುವ ಮುಂದೆ ಊರಲ್ಲಿ ಒಂದು

ಸಾರ್ವಜನಿಕ ಸಭೆಯನ್ನು ಇಡಲಾಗಿತ್ತು. ಆ ಸಭೆಗೆ ಗಾಂಧೀಜಿಯವರು ಕುಮರಿ ಆಶ್ರಮದಿಂದ ನಡೆಯುತ್ತಲೇ ಬಂದರು. ದಾರಿಯಲ್ಲಿ ಒಂದು ಮೋಜಿನ ಸಂಗತಿ ಸಂಭವಿಸಿತು. ಅದು ಹೀಗೆ:-

ಅಂಕಲಗಿಯ ಒಬ್ಬ ಕಾಂಗ್ರೆಸ್ ಸೇವಕರು ಹಾಗೂ ಅನುಭವಿಕ ಹಿರಿಯ ಕಾರ್ಯಕರ್ತ ರಾದ ಶ್ರೀ ಶೈಲಪ್ಪ ಕಾಕತಿ ಇವರು ಹುದಲಿಯಿಂದ ಕುಮರಿ ಆಶ್ರಮದ ಕಡೆಗೆ ಹೊರಟಿದ್ದರು. ಆದರೆ ಗಾಂಧೀಜಿಯವರೂ ಅವರ ಸಂಗಡಿಗರೂ ಹುದಲಿಯ ಕಡೆಗೆ ಬರುತ್ತಿರುವುದನ್ನು ಕಂಡು ಅವರು ದಾರಿಯಲ್ಲಿಯೇ ನಿಂತುಕೊಂಡರು. ಗಾಂಧೀಜಿಯವರು ಅವರನ್ನು ದೂರದಿಂದಲೇ ನೋಡಿದರು. ಮತ್ತು ನನ್ನ ಕಡೆಗೆ ಹೊರಳಿ ಹೀಗೆ ಅಂದರು- "ಮುಂದೆ ಅಗೋ ದೂರದಲ್ಲಿ ನಮಗಾಗಿ ಕಾಯುತ್ತಾ ನಿಂತ ಗೃಹಸ್ಥರು ನನ್ನ ಪಾದಗಳ ಮೇಲೆ ಶಿರವಿಟ್ಟು ನಮಸ್ಕಾರ ಮಾಡುವ ಯೋಚನೆಯಲ್ಲಿ ಸಿದ್ಧರಾಗಿ ನಿಂತಿದ್ದಾರೆ. ಅವರ ಬಳಿಗೆ ಹೋಗಿ ಹಾಗೆ ಮಾಡಬಾರದಾಗಿ ನೀನು ಅವರಿಗೆ ತಿಳಿಸು."

ನಾನು ಗಾಂಧೀಜಿಯವರಿಗೆ ಹೀಗೆ ಹೇಳಿದೆನು. "ಆ ಗೃಹಸ್ಥರು ನನ್ನ ಸಂಪೂರ್ಣ ಪರಿಚಯದವರಾಗಿದ್ದಾರೆ. ಅವರು ಕಾಂಗ್ರೆಸ್ಸಿನ ಹಳೆಯ ನಿಷ್ಠಾವಂತ ಕಾರ್ಯಕರ್ತ ರಾಗಿದ್ದಾರೆ. ಕಾಲುಗಳ ಮೇಲೆ ತಲೆಯಿಡುವುದು ತಮಗೆ ಸೇರುವುದಿಲ್ಲ ಎಂಬುದು ಅವರಿಗೆ ಗೊತ್ತಿದೆ. ಆದ್ದರಿಂದ ಅವರಿಗೆ ಹಾಗೆ ಹೇಳುವುದೇನೂ ಕಾರಣವಿಲ್ಲ."

ಇಷ್ಟೆಲ್ಲ ನಾನು ಭರವಸೆಯಿಂದ ಹೇಳಿದೆನು. ಆದ್ದರಿಂದ ಗಾಂಧೀಜಿಯವರು ಹೀಗೆ ಅಂದರು. "ಹಾಗಿದ್ದರೆ ಒಳ್ಳೆಯದಾಯಿತು ನಡೆ."

ಆದರೆ ನಾವೆಲ್ಲ ದಾರಿಗುಂಟ ಮಾತನಾಡುತ್ತ ಅವರ ಬಳಿಗೆ ಬರುತ್ತಲೆ ಶ್ರೀ ಶ್ರೀಶೈಲಪ್ಪನವರು ಒಮ್ಮೆಲೇ ಮುಂದು ಬಂದರು; ಮತ್ತು ಗಾಂಧೀಜಿಯವರ ತರ್ಕದಂತೆ ಅವರ ಪಾದಗಳ ಮೇಲೆ ತಮ್ಮ ತಲೆಯನ್ನಿಟ್ಟು ಮನದಣಿಯುವಂತೆ ಸಮಾಧಾನ ವಾಗುವಷ್ಟು ನಮಸ್ಕಾರ ಮಾಡಿಯೇಬಿಟ್ಟರು. ನಮಸ್ಕಾರ ಮಾಡಿ ಬದಿಗೆ ಸರಿಯುತ್ತಲೇ ಗಾಂಧೀಜಿಯವರು ನನ್ನನ್ನೇ ನೋಡುತ್ತ ಎದುರಿಗೆ ನಿಂತುಕೊಂಡರು. ಆದರೆ ಸಂಭವಿಸಿದ ಸಂಗತಿಯ ವಿಷಯಕ್ಕೆ ಯಾವ ಉಪಾಯವೂ ಇರಲಿಲ್ಲ. ಗಾಂಧೀಜಿಯವರ ಪಾದಗಳ ಮೇಲೆ ತಲೆಯಿಡುವ ಆ ಸ್ಫೂರ್ತಿಯನ್ನು ಅವರಿಂದ ತಡೆಯಲು ಆಗಲೇ ಇಲ್ಲ.

**೨. ಗಾಂಧೀಜಿ ಕಾರ್ಯಕರ್ತರನ್ನು ತಮ್ಮ ಆಶ್ರಮದಲ್ಲಿ ಸಿದ್ಧಗೊಳಿಸುತ್ತಿದ್ದ ಬಗೆ :**

ನಾನು ಸಾಬರಮತಿ ಆಶ್ರಮದಲ್ಲಿ ಸುಮಾರು ಒಂದು ವರ್ಷ ಇದ್ದೆ. ಇದಲ್ಲದೆ, ಪ್ರತಿ ವರ್ಷ ಒಂದೆರಡು ತಿಂಗಳು ಸಾಬರಮತಿ ಆಶ್ರಮಕ್ಕೆ ಹೋಗಿ ಇರುತ್ತಿದ್ದೆ. ಗಾಂಧೀಜಿಯ ವಿವಿಧ ಪ್ರವಾಸಗಳಲ್ಲಿ ಅವರೊಡನೆ ಹೋಗುವ ಸುಯೋಗವು ನನಗೆ ಸಿಗುತ್ತಿತ್ತು. ಅವರೊಂದಿಗೆ ಸಾಧ್ಯವಿದ್ದಷ್ಟು ಕಾಲ ಇರಬೇಕೆಂಬುದೇ ನನ್ನ ಉದ್ದೇಶ. ಆಶ್ರಮದ ನಿತ್ಯ ನಿಯಮಾವಳಿಗಳು ಬಹಳ ಕಟ್ಟುನಿಟ್ಟಿನವು ಆಶ್ರಮವಾಸಿಗೆ ಅಲ್ಲಿದ್ದಾಗ ಸೆರೆಮನೆಗೆ ಹೋಗುವ ಅವಕಾಶ ಒದಗಿದರೆ ಆಶ್ರಮ ಜೀವನಕ್ಕಿಂತ ಸೆರೆಮನೆಯ

ಜೀವನ ಸುಖಕರ ಎನಿಸುತ್ತಿತ್ತು. ಕರ್ನಾಟಕ ಸಿಂಹ ಎಂದೆನಿಸಿಕೊಂಡ ಶ್ರೀ ಗಂಗಾಧರರಾವ ದೇಶಪಾಂಡೆಯವರ ವತಿಯಿಂದ ನಾನು ಗಾಂಧೀಜಿಯ ಬಳಿಗೆ ಹೋಗಿದ್ದೆ. ಆದ್ದರಿಂದ, ಆಶ್ರಮದ ಅತ್ಯುತ್ತಮ ಮತ್ತು ಅತಿ ಮಹತ್ವದ ಕಾರ್ಯವನ್ನೇ ನನಗೆ ವಹಿಸಿಕೊಡಲಾಗಿತ್ತು. ಆದ್ದರಿಂದ, ಅಲ್ಲಿದ್ದ ಎಂಟು ಸಂಡಾಸುಗಳನ್ನು ಸ್ವಚ್ಛ ಮಾಡುವುದು. ಈ ಕೆಲಸವು ಕೆಲವು ದಿನ ಮಾಡಿದ ಮೇಲೆ ನಾನು ಗಾಂಧಿಜೀಗೆ ಕೇಳಿದೆ. ಈ ಕಾರ್ಯ ನಾನು ಎಷ್ಟು ದಿನ ಮಾಡಬೇಕು ಎಂದು. ಆಗ ಗಾಂಧೀಜಿ ನಗುತ್ತ ನುಡಿದರು. "ಬಹಳ ದಿವಸವೂ ಅಲ್ಲ, ಅನಿಶ್ಚಿತ ಕಾಲದವರೆಗೂ ಅಲ್ಲ; ಈ ಕಾರ್ಯ ನೀನು ಕೇವಲ ಒಂದು ಜೀವಾವಧಿ ಮಾಡಿದರೆ ಸಾಕು." ನಾನು ಬೆರಗಾಗಿ ಅವರನ್ನೇ ನಿಟ್ಟಿಸ ನೋಡತೊಡಗಿದೆ. ಹದಿನೈದು ದಿನಗಳ ತರುವಾಯ ಆಶ್ರಮದ ಪಾಕಶಾಲೆಗೂ, ಆಶ್ರಮವಾಸೀ ಕುಟುಂಬ ಗಳಿಗೂ ಬಾವಿಯಿಂದ ನೀರು ಪೂರೈಸುವ ಕೆಲಸ ಕೊಡಲಾಯ್ತು.

ಕೆಲವು ದಿನಗಳಾದ ಮೇಲೆ ಈ ಕೆಲಸವನ್ನು ಬದಲಿಸಿ ಸಮಗ್ರ ಆಶ್ರಮದ ಆವರಣ ವನ್ನೂ ಗುಡಿಸಿ ಸ್ವಚ್ಛ ಮಾಡುವ ಕೆಲಸ ಒಪ್ಪಿಸಲ್ಪಟ್ಟಿತು. ಈ ಕೆಲಸ ಮಾಡಿ ಮುಗಿಸಲು ನನಗೆ ದಿನಾಲು ಎಂಟು ತಾಸು ಬೇಕಾಗುತ್ತಿತ್ತು. ಈ ಕೆಲಸ ನನ್ನ ತಲೆ ತಿನ್ನ ತೊಡಗಿತು. ಏಕೆಂದರೆ, ಎಲ್ಲಿಯಾದರೂ ಹರಿದ ಕಾಗದದ ತುಂಡುಗಳು ಕಣ್ಣಿಗೆ ಬಿದ್ದರೆ ಎಲ್ಲರೂ ನನ್ನ ಕಡೆಗೇ ಒಂದು ಬಗೆಯಾಗಿ ನೋಡುತ್ತಿದ್ದರು. ಕಸ ತೆಗೆಯುವುದು ನನ್ನ ಕೆಲಸ ವಾಗಿತ್ತಲ್ಲವೇ? ಯಾರಿಗೆ ಯಾವುದೇ ಬಗೆಯ ಸ್ವಚ್ಛತೆಯ ವಿಷಯಕ್ಕೆ ಅಷ್ಟೊಂದು ನಿಷ್ಠೆ ಇಲ್ಲವೋ, ಯಾರು ಸ್ವತಃ ಅಲ್ಲಲ್ಲಿ ಹೊಲಸು ಕಸ ಕಾಗದ ಚೆಲ್ಲುತ್ತಿದ್ದರೋ ಅವರು ಕೂಡ. ಆಶ್ರಮದ ಹೊಲಸಿಗೆ ನಾನೇ ಹೊಣೆ ಎಂದು ತಿಳಿಯುತ್ತಿದ್ದರು. ಇದರಿಂದ ನಾನು ತುಂಬ ಸಿಡಿಮಿಡಿಗೊಳ್ಳುತ್ತಿದ್ದೆ. ಒಂದು ದಿನ ಕಸಗುಡಿಸುವ ಮುನಸಿಪಾಲಿಟಿಯ ಸೇವಕಿಯು ಒಂದು ಬೀದಿಯನ್ನು ಗುಡಿಸುತ್ತ ಬಹಳ ದೂರ ಹೋಗಿದ್ದಳು. ಆಕೆ ತನ್ನ ಮಗನನ್ನು ಒಂದು ಮರಕ್ಕೆ ತಗುಲಿಸಿದ ತೂಗು ತೊಟ್ಟಿಲಲ್ಲಿ ಮಲಗಿಸಿ ಹೋಗಿದ್ದಳು. ಕೂಸು ಅಳತೊಡಗಿತು. ನಾನು ಹೋಗಿ ಆ ಮಗುವನ್ನು ರಮಿಸಲು ಯತ್ನಿಸಿದೆ. ಮಗು ನಗತೊಡಗಿತು. ನಾನು ಮಗುವನ್ನೆತ್ತಿ, ಅದರ ತಾಯಿ ಬರುವವರೆಗೆ ಆಡಿಸಿದೆ. ಇದನ್ನೆಲ್ಲ ಗಾಂಧೀಜಿ ತಮ್ಮ ಕೋಣೆಯಿಂದ ನೋಡಿದ್ದರು. ಆಶ್ರಮದ ಪ್ರಾರ್ಥನೆಯಾದ ನಂತರ ಅಂದಿನ ಸಭೆಯಲ್ಲಿ, ಗಾಂಧೀಜಿ ಈ ವಿಷಯವನ್ನು ಪ್ರಸ್ತಾಪಿಸಿ ನನ್ನನ್ನು ತುಂಬ ಹೊಗಳಿದರು. ನನ್ನ ಈ ನಡತೆ ಗಾಂಧೀಜಿಯ ಮೆಚ್ಚಿಗೆಗೆ ಪಾತ್ರವಾಯಿತು.

ಆಮೇಲೆ ಈ ಕೆಲಸವನ್ನು ಬದಲಿಸಿ, ನನ್ನನ್ನು ನೇಯ್ಗೆ ಕೆಲಸ ಕಲಿಯಲು ನೇಯ್ಗೆಯ ವರ್ಗಕ್ಕೆ ಕಳಿಸಲಾಯಿತು. ನಾನು ನಾಲ್ಕು ತಿಂಗಳವರೆಗೆ ಈ ವರ್ಗಕ್ಕೆ ಹೋದೆ. ಆದರೆ ನನಗೇನೂ ಕಲಿಯಲಾಗಲಿಲ್ಲ. ಮಗ್ಗದ ಮುಂದೆ ಕುಳಿತು ಉಪನಿಷತ್‌ಗಳನ್ನು ಕಂಠಪಾಠ ಮಾಡುತ್ತಿದ್ದೆ. ನೇಯ್ಗೆಯ ವ್ಯವಸ್ಥಾಪಕರು ಈ ಬಗ್ಗೆ ನನ್ನ ವಿರುದ್ಧ ಗಾಂಧೀಜಿಯ ಬಳಿ ದೂರು ಹೇಳಿದರು. ಗಾಂಧೀಜಿ ಅವರು ನನ್ನನ್ನು ಕರೆಸಿ ವಿಷಯ ಏನೆಂದು ಕೇಳಿದರು. ಗಾಂಧೀಜಿಗೆ ನಾನು ಗೌರವ ವಿನಯಗಳಿಂದ, "ನಾವೆಲ್ಲ ಕಾರ್ಯಕರ್ತರೂ ಈ ಬಗೆಯ

ಶರೀರ ಶ್ರಮದಲ್ಲಿಯೇ ಆಯುಷ್ಯವನ್ನೆಲ್ಲ ಕಳೆಯಬೇಕೇ? ನಮಗೆ ಓದಲು ಬೇಡವೆ?" ಎಂದು ಕೇಳಿದೆ. ಗಾಂಧೀಜಿಯ ಉತ್ತರ ವೈಶಿಷ್ಟ್ಯಪೂರ್ಣವಾಗಿತ್ತು. ಆಶ್ರಮದ ನಿತ್ಯ ಕಾರ್ಯಕ್ರಮಗಳ ಮಧ್ಯಂತರದಲ್ಲಿ ದಿನವೂ ಸ್ವಾಧ್ಯಾಯಕ್ಕೆ ಮೂರು ಗಂಟೆಯಷ್ಟು ಕಾಲ ಬಳಸಿಕೊಳ್ಳಬಹುದೆಂಬುದನ್ನು ಗಾಂಧೀಜಿ ತೋರಿಸಿಕೊಟ್ಟರು. ಆಗೊಮ್ಮೆ ಈಗೊಮ್ಮೆ ಸಿಕ್ಕುವ ಅಲ್ಪಾವಕಾಶಗಳಲ್ಲಿ ಮನಸ್ಸನ್ನು ಏಕಾಗ್ರಗೊಳಿಸಲು ಹೇಗೆ ಸಾಧ್ಯ ಎಂದು ಗಾಂಧೀಜಿಗೆ ನಾನು ಕೇಳಿದೆ. ಗಾಂಧೀಜಿ ಹೇಳಿದರು, ನಾವಿದನ್ನೇ ಕಲಿಯಬೇಕಾಗಿದೆ. ಮತ್ತು ಇದಕ್ಕೆ ಯೋಗ ಎನ್ನುತ್ತಾರೆ ಎಂದು. ನೇಯ್ಗೆಯ ವಿಷಯದಲ್ಲಿ ನನಗೆ ಪಾಠ ಕಲಿಸಬೇಕೆಂದು ಗಾಂಧೀಜಿ, ನಾನು ಮದ್ರಾಸಕ್ಕೆ ನೇಯ್ಗೆಯ ಶಿಕ್ಷಕನಾಗಿ ಹೋಗಬೇಕೆಂದು ಹೇಳಿದರು. ನಾನು ಬೆರಗಾಗಿ ಹೇಳಿದೆ, ನನಗೆ ನೇಯ್ಗೆಯ ಕೆಲಸ ಬರುವುದಿಲ್ಲ. ಇನ್ನು ಮೇಲೆ ಚೆನ್ನಾಗಿ ಕಲಿತು ಆಮೇಲೆ ಎಲ್ಲಿಗೆ ಬೇಕಾದರೂ ನೇಯ್ಗೆಯ ಶಿಕ್ಷಕನಾಗಿ ಹೋಗುವೆ ಎಂದು. ಆದರೆ ಗಾಂಧೀಜಿ ಅದಕ್ಕೆ ಒಪ್ಪಲಿಲ್ಲ. ಅವರು ತಮ್ಮದೇ ಆದ ರೀತಿಯಲ್ಲಿ ಹೇಳಿದರು–ನೀನು ಮದರಾಸಕ್ಕೆ ನೇಯ್ಗೆಯ ಶಿಕ್ಷಕನಾಗಿ ಹೋಗಬೇಕು; ಅಲ್ಲಿ ನಿನ್ನ ಸ್ವಾಗತಕ್ಕಾಗಿ ಒಂದು ಸಭೆ ಸೇರುವುದು. ಆ ಸಭೆಯಲ್ಲಿ ಜನರಿಗೆ ಆಶ್ರಮದಲ್ಲಿ ನೀನು ನೇಯ್ಗೆಯ ವರ್ಗದಲ್ಲಿ ಹೇಗೆ ನಡೆದುಕೊಂಡೆ ಹೇಗೆ ಕೆಲಸ ತಪ್ಪಿಸಿದೆ ಎಂಬುದನ್ನು ಪ್ರಕಟಪಡಿಸಬೇಕು. ಆಮೇಲೆ ಪುನಃ ಆಶ್ರಮಕ್ಕೆ ಬಂದು ಚೆನ್ನಾಗಿ ನೇಯ್ಗೆ ಕಲಿತುಕೊಳ್ಳಬೇಕು ಆದರೆ ಕೊನೆಯ ಗಳಿಗೆಯಲ್ಲಿ ಗಾಂಧೀಜಿ ನನ್ನನ್ನು ಮದ್ರಾಸಕ್ಕೆ ನೇಯ್ಗೆಯ ಶಿಕ್ಷಕನೆಂದು ಕಳಿಸದೆ, ಆಶ್ರಮದಲ್ಲಿಯೇ ಇದ್ದು ಮತ್ತೆ ನೇಯ್ಗೆಯ ವರ್ಗಕ್ಕೆ ಹೋಗಿ ನೇಯ್ಗೆಯ ಕೆಲಸ ಕಲಿಯಲು ನನಗೆ ಅವಕಾಶ ಮಾಡಿಕೊಟ್ಟರು. ನಾನಾದರೂ ನೇಯ್ಗೆಯ ಕಲೆ ಕಲಿತುಕೊಂಡೆ. ವ್ಯವಸ್ಥಾಪಕರಾದ ಶ್ರೀ ಮಗನಭಾಯಿಯವರು "ನಿನ್ನೆ ನೀನು ಒಂದು ಗಜ ಬಟ್ಟೆ ನೇಯ್ದಿದ್ದರೆ ಇಂದು ನೀನು ಊಟ ಮಾಡಲು ಅಡ್ಡಿಯಿಲ್ಲ" ಎಂದು ಹೇಳಲು ಮರೆಯುತ್ತಿರಲಿಲ್ಲ.

ಗಾಂಧೀಜಿ ಒಮ್ಮೆ ಬೆಳಿಗ್ಗೆ ಎಂದಿನಂತೆ ಆಶ್ರಮವನ್ನೆಲ್ಲ ಸುತ್ತಾಡಿ ನೋಡುತ್ತಿದ್ದರು. ಅಂದು ನಾನು ಒಂದು ಪುಸ್ತಕ ಓದುತ್ತಿದ್ದೆ. ಗಾಂಧೀಜಿ ಸಹಜವಾಗಿ ಕೇಳಿದರು, ನಾನು ಓದುವ ಪುಸ್ತಕ ಯಾವುದು ಎಂದು. ನಾನು ಹೇಳಿದೆ ಸರ್ಕಾರದಿಂದ ನಿರ್ಬಂಧಿಸಲ್ಪಟ್ಟ, ಸಾವರಕರರು ಬರೆದ Revolution of ೧೮೫೭ ಎಂದು. ಶ್ರೀ ಸಾವರಕರರ ನಿರ್ಬಂಧಿತ ಪುಸ್ತಕವನ್ನು ಆಶ್ರಮದಲ್ಲಿಯೂ ನೀನು ಓದಬಹುದೆ? ಆದರೆ ನೀನು ಆ ಪುಸ್ತಕ ತರಿಸಿಕೊಂಡು ಓದುತ್ತಿದ್ದೇನೆ ಎಂದು ಸರ್ಕಾರಕ್ಕೆ ಬರೆದು ತಿಳಿಸು, ಮತ್ತು ಅದರ ಪರಿಣಾಮವನ್ನು ಎದುರಿಸಲು ಸಿದ್ಧನಾಗು. ಸಾವರಕರ ಪುಸ್ತಕ ಓದುವವರಲ್ಲಿ ಇಷ್ಟಾದರೂ ಧೈರ್ಯ ಇರಬೇಕು ಎಂದು ಮುಂತಾಗಿ ಗಾಂಧೀಜಿ ಹೇಳಿದರು. ಅಂತೂ ನಾನು ಅಂದೇ ಆ ಪುಸ್ತಕ ಓದಿ ಮುಗಿಸಿದೆ.

ಒಮ್ಮೆ ಗಾಂಧೀಜಿಯವರ ಹುಟ್ಟಿದ ಹಬ್ಬವನ್ನು ಆಶ್ರಮದಲ್ಲಿ ಆಚರಿಸಲಾಯಿತು. ಅದರ ಮುನ್ನ ದಿನ ರಾತ್ರಿ ಹೊಣೆಗಾರ ಕಾರ್ಯಕರ್ತರಲ್ಲಿ ಶ್ರೀ ಕಾಕಾಸಾಹೇಬ ಕಾಲೇಲ್ಕರರ ಕೋಣೆಯಲ್ಲಿ ಕುಳಿತು ಗಾಂಧೀಜಿಯ ಹುಟ್ಟು ಹಬ್ಬ ಹೇಗೆ ಆಚರಿಸಬೇಕೆಂಬುದರ ಸಮಾಲೋಚನೆ ನಡೆಸಿದರು. ಆ ಕಾರ್ಯಕರ್ತರಲ್ಲಿ ವಿನೋಬಾಜಿ, ಮಗನಲಾಲಜಿ,

ನೆಹರುಭಾಯಿ ಪರೀಖ, ಕಾಕಾಸಾಹೇಬ ಕಾಲೇಲ್ಕರ ಇವರೆ ಮೊದಲಾದವರಿದ್ದರು. ಆ ವಿಚಾರ ವಿನಿಮಯದ ಕಾಲಕ್ಕೆ, ಆಶ್ರಮದ ಎಲ್ಲಾ ಕೆಲಸಕ್ಕೂ ಅಂದು ವಿರಾಮ ಕೊಡಬೇಕು. ಎಂದು ನಿರ್ಧರಿಸಲಾಯಿತು. ಆದರೆ ಕಾಕಾಸಾಹೇಬ ಅಂದರು. ನೀವು ಕೈಕಾಲುಗಳಿಗೆ ವಿರಾಮ ಕೊಡುವುದಾದರೆ ನಮ್ಮ ಹೊಟ್ಟೆಗೂ ವಿರಾಮ ಕೊಡಬೇಕು. ಅಂದರೆ ಅಂದು ನಾವಾರೂ ಆಹಾರವನ್ನು ತೆಗೆದುಕೊಳ್ಳಬಾರದು. ಆ ಪ್ರಕಾರ, ಗಾಂಧೀಜಿಯ ಹುಟ್ಟು ಹಬ್ಬದ ದಿನ, ಪ್ರತಿಯೊಬ್ಬ ಆಶ್ರಮವಾಸಿಗೂ ಎರಡು ಬಾಳೆಹಣ್ಣು ಮತ್ತು ಒಂದು ಕಪ್ಪು ಹಾಲು ಮಾತ್ರ ಕೊಡಲಾಯಿತು. ಒಂದು ಕೊಠಡಿ ಸಿಂಗರಿಸಿ ಗಾಂಧೀಜಿ ಕೂಡುವ ಸಲುವಾಗಿ ಒಂದು ಸುಂದರ ಪೀಠವನ್ನು ಸಿದ್ಧಪಡಿಸಲಾಗಿತ್ತು. ಗಾಂಧೀಜಿ ಒಳಗೆ ಬಂದವರೇ ಇದನ್ನೆಲ್ಲ ನೋಡಿ ಯಾರು ಇಷ್ಟೆಲ್ಲ ಮಾಡಿದವರು ಎಂದು ಕೇಳಿದರು. ಆ ಪೀಠದ ಮೇಲೆ ಕುಳಿತುಕೊಳ್ಳುವಷ್ಟು ಮೂರ್ಖನೇ ನಾನು ಎಂದರು. ಗಿರಿಧಾರಿ, ಕಾಕಾಸಾಹೇಬ ಮತ್ತು ನನ್ನ ಹೆಸರುಗಳನ್ನು ಗಾಂಧೀಜಿಗೆ ಹೇಳಲಾಯ್ತು. ಆಗ ಗಾಂಧೀಜಿ ಆಡಿದ ಮಾತುಗಳ ಅಭಿಪ್ರಾಯ ಹೀಗೆ–

ಹುಟ್ಟಿದ ದಿನ ಎಂದರೇನು? ಹುಟ್ಟಿದ ದಿನದಂದು ಒಂದು ವರ್ಷದಷ್ಟು ಸಾವಿನ ಸಮೀಪಕ್ಕೆ ಹೋದಂತೆಯೇ ಸರಿ. ಇದೇ ಹುಟ್ಟಿದ ಹಬ್ಬದ ನಿಜವಾದ ಅರ್ಥವಾದ ಪಕ್ಷದಲ್ಲಿ ಮತ್ತು ಒಂದು ವರ್ಷ ನಾನು ಸಾವನ್ನು ಸಮೀಪಿಸಿದ್ದಕ್ಕಾಗಿ ನೀವು ಸಂಭ್ರಮದ ಉತ್ಸವ ಮಾಡುವ ಪಕ್ಷದಲ್ಲಿ, ನೀವು ನನ್ನ ಸಾವಿನ ದಿನವನ್ನು ಸಹ ಆಚರಿಸಲು ನಿಮ್ಮ ಮನಸ್ಸನ್ನು ಸಿದ್ಧಗೊಳಿಸಿರಬೇಕು. ಇದಕ್ಕೆ ಸಿದ್ಧರಿದ್ದದ್ದಾದ ನೀವು ಇಂದಿನಂತೆ ನನ್ನ ಜನ್ಮದಿನ ಆಚರಿಸಬಹುದು– ಇತ್ಯಾದಿ.

## YOU ARE SLAVE OF THE MACHINE

ಗಾಂಧೀಜಿಯವರು ೧೯೨೭ನೇ ಇಸ್ವಿಯಲ್ಲಿ ತಮ್ಮ ಕರ್ನಾಟಕ ಪ್ರವಾಸದ ಕಾಲಕ್ಕೆ ನಿಪ್ಪಾಣಿಗೆ ಬಂದಿದ್ದರು. ಅಲ್ಲಿಯೇ ಅವರು ಕಾಯಿಲೆ ಬಿದ್ದರು. ಎಲ್ಲರೂ ಚಿಂತೆಗೊಳಗಾದರು. ಶ್ರೀ ಗಂಗಾಧರರಾವ್ ದೇಶಪಾಂಡೆಯವರು ಸ್ವತಃ ಮಿರಜಿಗೆ ಹೋಗಿ ಕೂಡಲೇ ಜರ್ಮನ್ ಡಾಕ್ಟರ ವಾನಲಿಸ್‌ರನ್ನು ಕರೆದುಕೊಂಡು ಬಂದರು. ಅಮೇರಿಕಕ್ಕೆ ಹೋಗಿ ಕಲಿತು ಬಂದ ಮೂರು ನಾಲ್ಕು ಜನ ಡಾಕ್ಟರರೂ ಅಲ್ಲಿಗೆ ಬಂದರು. ಡಾ॥ ಅಂಕಲೇಕರ ವಿಜಾಪೂರ, ಡಾ. ಕೋಕಟನೂರು ಇವರು ಬ್ಲಡ್ ಪ್ರಶರ್ ನೋಡುವ ತಮ್ಮ ತಮ್ಮ ಯಂತ್ರಗಳನ್ನು ತೆಗೆದುಕೊಂಡು ಸಿದ್ಧರಾಗಿ ನಿಂತಿದ್ದರು. ಗಾಂಧೀಜಿಯವರಿಗೆ ಬ್ಲಡ್ ಪ್ರಶರ್ ಆಗಿವೆ ಎಂದು ತಿಳಿದದ್ದರಿಂದ ಡಾ.ವಾನಲಿಸ್‌ರು ಬ್ಲಡ್ ಪ್ರಶರ್ ನೋಡುವ ಹೊಸ ಯಂತ್ರವನ್ನೇ ತೆಗೆದುಕೊಂಡು ಬಂದಿದ್ದರು. ಅವರು ತಮ್ಮ ಯಂತ್ರದಿಂದಲೇ ಗಾಂಧೀಜಿಯವರ ಬ್ಲಡ್ ಪ್ರಶರ್ ನೋಡಿದರು. ಬ್ಲಡ್ ಪ್ರಶರ್ ಬಹಳೇ ಇತ್ತು. ಗಾಂಧೀಜಿಯವರು ದಿನಾಲು ಅರ್ಧ ತಾಸು ನೂಲದೆ ಎಂದೂ ಇರುತ್ತಿರಲಿಲ್ಲ. ಅದು ಅವರ ಸಂಕಲ್ಪವೇ ಆಗಿತ್ತು. ನೂಲುವ ಸಮಯವಾದ ಕೂಡಲೇ ಗಾಂಧೀಜಿ ಚರಖಾ ತರ ಹೇಳಿದರು. ಅದನ್ನು ನೋಡಿ ಡಾ.ವಾಲಿನಸ್ ಹೇಳಿದರು – "ಇಂಥ ಪರಿಸ್ಥಿತಿಯಲ್ಲಿ ನೀವು ಅರ್ಧತಾಸು ನೂತರೆ ನಿಮಗೆ ನಿಶ್ಚಿತವಾಗಿ

ಅರ್ಧಾಂಗವಾಯು ಆಗುವುದು" ಎಂದರು. ಅದಕ್ಕೆ ಗಾಂಧೀಜಿ ಅಂದರು – "ನೂಲುತ್ತ ನೂಲುತ್ತ ನನಗೆ ಮರಣ ಬಂದರೆ ಅದಕ್ಕಿಂತ ಹೆಚ್ಚಿನ ಪುಣ್ಯ ಇದೆಯೆ?" ಎಂದು. ಗಾಂಧೀಜಿಯವರನ್ನು ನೂಲುವದರಿಂದ ಪರಾವೃತ್ತ ಮಾಡುವ ಶಕ್ತಿ ಅಲ್ಲಿ ಯಾರಲ್ಲಿಯೂ ಇರಲಿಲ್ಲ. ಮಹಾದೇವಭಾಯಿ ದೇಸಾಯಿಯವರು ಅಶ್ರುಪೂರ್ಣ ನೇತ್ರಗಳಿಂದ ಸುಮ್ಮನೆ ನೋಡುತ್ತ ನಿಂತಿದ್ದರು. ಗಾಂಧೀಜಿಯವರು ಎಲ್ಲರೂ ನೋಡುತ್ತಿದ್ದಂತೆ ನೂಲುವದನ್ನು ಪ್ರಾರಂಭ ಮಾಡಿದರು. ಮತ್ತೆ ಹೀಗೆ ಹೇಳಿದರು–"ನನ್ನ ಪ್ರಕೃತಿ ನನಗೆ ಚೆನ್ನಾಗಿ ಗೊತ್ತಿದೆ, ಮತ್ತು ತಿಳಿಯುತ್ತದೆ. ನಿಮ್ಮ ಬ್ಲಡ್ ಪ್ರಶರ್ ಯಂತ್ರ ತೋರಿಸುತ್ತಿರುವಷ್ಟು ಹೆಚ್ಚು ಬ್ಲಡ್ ಪ್ರಶರ್ ಈಗ ನನಗೆ ಇದೆಯೆಂದು ಅನಿಸುವುದಿಲ್ಲ" ಎಂದು. ಡಾ. ಅಂಕಲೇಕರರು ತಮ್ಮ ಬ್ಲಡ್ ಪ್ರಶರ್ ಯಂತ್ರದಿಂದ ಗಾಂಧೀಜಿಯವರನ್ನು ಮತ್ತೆ ಪರೀಕ್ಷಿಸಿದರು. ಆಗ ಬ್ಲಡ್ ಪ್ರಶರ್ ಏನೂ ಇರಲಿಲ್ಲ. ಇದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಆಗ ಗಾಂಧೀಜಿಯವರು ಸಹ ನಗು ನಗುತ್ತ ಡಾ. ವಾನಲಿಸ್‌ರಿಗೆ ಹೇಳಿದರು "Your are the slave of the machine. You are no doctor. "ನೀವು ಡಾಕ್ಟರ ಅಲ್ಲ ಯಂತ್ರದ ಗುಲಾಮರು" ಎಂದರು. ಗಾಂಧೀಜಿ ಅರ್ಧ ತಾಸು ನೂತರು. ಅವರಿಗೆ ಏನೂ ಆಗಲಿಲ್ಲ.

* * *

## ೩೪. ಸ್ವಾಮಿ ವಿಶ್ವಾನಂದರ ನೆನಹು

**ಗಾಂಧೀಜಿ ಮೈದಡವಿದರು:**

೧೯೨೭ರಲ್ಲಿ ಗಾಂಧೀಜಿ ನಂದಿಬೆಟ್ಟದಲ್ಲಿದ್ದಾಗ, ಅಲ್ಲಿಯ ನಿವಾಸವಾಗಿದ್ದ ಓಕ್ಲೆಂಡ್ ಬಂಗಲೆಯವರೆಗೆ ಸುಮಾರು ೪೫ ಮೈಲಿ ಬೆಂಗಳೂರಿನಿಂದ ನಾನು ಮತ್ತು ಇನ್ನಿಬ್ಬರು ಗೆಳೆಯರು ಕಾಲುನಡಿಗೆಯಿಂದ ಹೋಗಿ ಗಾಂಧೀಜಿಯ ದರ್ಶನ ಮಾಡಿದೆವು.

ಅಂದು ಗಾಂಧೀಜಿಯ ಮೌನ ದಿನ. ಸಂಜೆ ಐದರವರೆಗೂ ಕಾದು, ಅವರು ವಾಯು ವಿಹಾರಕ್ಕಾಗಿ ಈಚೆಗೆ ಬಂದಾಗ, ಮೂವರೂ ತಲೆಬಾಗಿ ನಮಸ್ಕರಿಸಿದೆವು. ಮೂವರಲ್ಲಿ ಕಿರಿಯವನಾದ ನನ್ನ ಮೇಲೆ ಬಾಪೂ ವಿಶೇಷ ಪ್ರೇಮ ತೋರಿಸಿದರು. ಮಾತನಾಡದಿದ್ದರೂ ಬೆನ್ನ ಮೇಲೆ ಕೈಯಾಡಿಸಿದರು. ಗುಂಗುರು ಕೂದಲನ್ನು ನೇವರಿಸಿದರು. ನಗುಮುಖದಿಂದ, ಬಂದ ಕೆಲಸವಾಯಿತು, ಹೊರಡಿ ಎಂಬಂತೆ ಸೂಚಿಸಿದರು. ಅವರ ಅಭಯಹಸ್ತ, ನಗುಮುಖ. ನನ್ನ ಜೀವನದ ಅಮೂಲ್ಯ ನೆನಪು. ಅಂದಿನಿಂದ ಇಂದಿನವರೆಗೂ ಅದು ನನ್ನನು ಕಾಪಾಡಿ ಕೊಂಡು ಬಂದಿದೆ.

**ಗಾಂಧೀಜಿಯ ನಿರ್ದೇಶ:**

ಹಿರಿಯರಿಗೆ ತಿಳಿಯದಂತೆ ಕೆಲವು ತಿಂಗಳ ನಂತರ ಸಾಬರಮತಿ ಆಶ್ರಮಕ್ಕೆ ಗಾಂಧೀಜಿ ಹೆಸರಿನಲ್ಲಿ ಒಂದು ಕಾರ್ಡು ಬರೆದೆ. 'ನನಗೆ ಕಾಲೇಜ್ ವಿದ್ಯಾಭ್ಯಾಸ ಇಷ್ಟವಿಲ್ಲ. ದಯವಿಟ್ಟು ನನ್ನನ್ನು ಆಶ್ರಮಕ್ಕೆ ಸೇರಿಸಿಕೊಂಡು ದೇಶಸೇವಕನನ್ನಾಗಿ ಮಾಡಿ" ಎಂಬುದೇ ಅದರ ಒಕ್ಕಣೆಕೆ.

ಅಲ್ಲಿಂದ ಖಾದಿ ಸೇವೆ ಮುಖ್ಯ. ಆದ್ದರಿಂದ ಕರ್ನಾಟಕ ಚರಖಾ ಸಂಘದ ಕಾರ್ಯದರ್ಶಿಗಳನ್ನು ಕಾಣು" ಎಂದು ಗಾಂಧೀಜಿ ಕಡೆಯಿಂದ ಕಾಗದ ಬಂತು. ಆದರೆ ಕಾಗದ ಮೊದಲು ನನಗೆ ಸಿಗದೆ ತಂದೆಯವರ ಕೈಗೆ ಸಿಕ್ಕಿತು. ಮೈನರ್ ಹುಡುಗ-ಇಷ್ಟು ಸ್ವತಂತ್ರಿಸಿದನೇ ಎಂದು ಪಿತೃಗಳು ಕೋಪಿಸಿಕೊಂಡು "ಕಾಲೇಜ್ ವಿದ್ಯಾಭ್ಯಾಸ ಆದಮೇಲೆ ಇದೆಲ್ಲಾ ಮಾಡು" ಎಂದು ಬೈದುಬಿಟ್ಟರು. ಅವರಿಗೆ ಎದುರು ಹೇಳಲು ಧೈರ್ಯವಿಲ್ಲ ಆದರೆ ಮನಸ್ಸು ಮಾತ್ರ ತೀರ್ಮಾನಕ್ಕೆ ಬಂದಿತ್ತು. ಇದಾದ ಕೆಲವು ತಿಂಗಳ ನಂತರ ಪಿತೃಗಳು ತೀರಿಕೊಂಡಾಗ್ಗೆ ಹಿರಿಯ ಅಣ್ಣಂದಿರು ನನ್ನ ಇಚ್ಛೆ ವಿರೋಧಿಸದೆ, ಆಗ ತಾನೇ ಆರಂಭವಾಗಿದ್ದ (ಜುಲೈ ೧೯೨೯) ಕೆಂಗೇರಿ ಗುರುಕುಲಾಶ್ರಮಕ್ಕೆ ಹೋಗಲು ಅನುಮತಿ ಕೊಟ್ಟರು.

ಆ ಕಾಲದಲ್ಲಿ ಗಾಂಧೀಜಿಯ ಮುಖ್ಯ ಕಾರ್ಯಕ್ರಮಗಳಾಗಿದ್ದ ಖಾದಿ, ಮದ್ಯಪಾನ ನಿಷೇಧ, ಗ್ರಾಮಸೇವೆ-ಇವುಗಳಲ್ಲಿ ಪೂರ್ಣಕಾಲವನ್ನು ಕಳೆಯುತ್ತಿದ್ದೆವು. ಹುಚ್ಚು ಹಿಡಿದ ಜನಗಳಂತೆ, ಗಾಂಧೀಜಿಯವರ ಜೈಕಾರ ಹಾಕುತ್ತ, ಗ್ರಾಮಗಳಲ್ಲೆಲ್ಲಾ ಸುತ್ತಾಡಿ, ಜನಜಾಗೃತಿ ಉಂಟುಮಾಡುತ್ತಿದ್ದ ಕಾಲವದು. ಎಳೆ ವಯಸ್ಸಿನ ಪ್ರಿಯವ್ರತ, ಸುಧಾಕರ, ಆಗಿನ ಕಾರ್ಯಕರ್ತರಲ್ಲಿ ಕಷ್ಟಕ್ಕೆ ಜಗ್ಗದೆ ಹಾವು ಚೇಳುಗಳ ಕಡಿತಗಳನ್ನು ಸಹಿಸಿ, ಪೆಟ್ರೋಮ್ಯಾಕ್ಸ್ ದೀಪಗಳನ್ನು ಹೊತ್ತು ಮಧ್ಯರಾತ್ರಿಯವರೆಗೂ ದುಡಿಯುತ್ತಿದ್ದ ಕಾಲವದು.

**ಕೆಂಗೇರಿ ಆಶ್ರಮಕ್ಕೆ ಬಾಪೂಜಿ ಭೇಟಿ:**

ದೇಶದಲ್ಲೆಲ್ಲಾ ಮೊದಲು ಹಾಹಾಕಾರ. ಅನಂತರ ನೂತನ ಉತ್ಸಾಹದಿಂದ ಹರಿಜನೋದ್ಧಾರ ಕಾರ್ಯಕ್ರಮಗಳು ಆರಂಭವಾದವು. ಅನೇಕ ದೇವಾಲಯಗಳು ಹರಿಜನರಿಗೆ ತೆರೆಯಲ್ಪಟ್ಟವು. ಇಂಥ ಕಾರ್ಯಗಳಿಗೆ ಪ್ರೋತ್ಸಾಹ ಕೊಡಲು ೧೯೩೪ರಲ್ಲಿ ಗಾಂಧೀಜಿ ತಮ್ಮ ಅಖಿಲ ಭಾರತ ಹರಿಜನ ಸೇವಾ ಪ್ರವಾಸ ಕಾರ್ಯಕ್ರಮದಲ್ಲಿ ಬೆಂಗಳೂರಿಗೆ ಭೇಟಿ ಇತ್ತರು.

ಬಾಪೂ, ಕೆಂಗೇರಿ ಗ್ರಾಮದಿಂದ ಸುಮಾರು ಒಂದೂಕಾಲು ಮೈಲಿ ದೂರ ಆಶ್ರಮಕ್ಕೆ ನಡದೇ ಬಂದರು. ಆಶ್ರಮದಲ್ಲಿ ನಿಂತರೆ ದೂರದ ಗ್ರಾಮದ ಕಡೆಯಿಂದ ಬರುವ ರಸ್ತೆ ಚೆನ್ನಾಗಿ ಕಾಣುತ್ತೆ. ಗ್ರಾಮಕ್ಕೂ ಆಶ್ರಮಕ್ಕೂ ಮಧ್ಯದಲ್ಲಿ ಅಂದರೆ ಕೆಂಗೇರಿ ಗ್ರಾಮದ ಪಕ್ಕದಲ್ಲಿ - ಹರಿಜನಕೇರಿ, ಆ ಹರಿಜನ ಕೇರಿಯಿಂದ ಆಶ್ರಮದ ವರೆಗೂ ಪ್ರವಾಹದೋಪಾದಿಯಲ್ಲಿ ಜನ ಗಾಂಧೀಜಿಯ ಬೆನ್ನು ಹತ್ತಿ ಬರುತ್ತಿತ್ತು. ಕೆಂಗೇರಿಯಿಂದ ಸ್ವಲ್ಪ ದೂರ ಬಂದ ಮೇಲೆ ವೃಷಭಾವತಿ ನದಿಯನ್ನು ಕಾಲಿನಿಂದಲೇ ದಾಟಬೇಕು. ಬಾಪು ನೀರಿಗಿಳಿದಾಗ, ನಾವುಗಳೆಲ್ಲಾ ಅವರ ಪಕ್ಕದಲ್ಲಿ ಸಾಗಿ ಬಂದೆವು. ನಮ್ಮ ಜೊತೆಗಿದ್ದ ಹರಿಜನ ಬಂಧು ಒಬ್ಬ ಗಾಂಧೀಜಿಯ ದೇಹಕಾಂತಿಯನ್ನು ಕಂಡು, "ಅಹಾ! ಅದೇನು ಹೊಂಬಣ್ಣದಂತಿದೆ" ಎಂದನು. ನಿಜವಾದ ಮಾತು. ೨೧ ದಿನಗಳ ತಪಸ್ಸಿನಿಂದ, ಅವರ ದೇಹ ಪವಿತ್ರ ತೇಜಸ್ಸಿನಿಂದ ಕೂಡಿತ್ತು. ಒಳಗೆ ಗಗನಚುಂಬಿತ ಸರ್ವೆ ತೋಪಿನಲ್ಲಿ ತಯಾರಾಗಿದ್ದ ಆಸನದ ಮೇಲೆ ಮಂಡಿಸಿದರು. ಗಾಂಧೀಜಿ ಸುತ್ತಲೂ ಜನ ಕುಳಿತರು. ಆರ್ಯ ವೈಶ್ಯ ಸಂಘದ ಸ್ವಯಂ ಸೇವಕರು ಗುಂಪಿನ ಹತೋಟಿ

ನೋಡಿಕೊಳ್ಳುತ್ತಿದ್ದರು. ಬಿನ್ನವತ್ತಳೆಯ ಅರ್ಪಣೆಯಾದ ಮೇಲೆ, ವಿಶೇಷ ಪರಿಶ್ರಮ ಮಾಡಿದ್ದ ಹರಿಜನ ವಿದ್ಯಾರ್ಥಿಗಳಿಗೆ ಬೆಳ್ಳಿಯ ಪಾರಿತೋಷಕಗಳನ್ನು ಅವರ ಹಸ್ತದಿಂದ ಕೊಡಿಸಿದರು. ಅವುಗಳನ್ನು ಬಾಲಕರು ಪುನಃ ಗಾಂಧೀಜಿಗೆ ಅರ್ಪಿಸಿದರು. ಗಾಂಧೀಜಿ ಅದನ್ನು ಹರಾಜು ಹಾಕಿ ಹಣ ಸಂಪಾದಿಸಿದರು. ಆಶ್ರಮದ ಇನ್ನು ಕೆಲವು ಬಾಲಕರು 'ಹಸ್ತಾಕ್ಷರ'ಕ್ಕಾಗಿ ಪುಸ್ತಕ ಚಾಚಿದರು. ಗಾಂಧೀಜಿ-ಹರಿಜನ ಫಂಡಿಗೆ ಐದು ರೂಪಾಯಿ ಕೊಟ್ಟರೆ ಹಸ್ತಾಕ್ಷರ ಸಿಗುವುದೆಂದರು. ಒಬ್ಬ ಹುಡುಗ – "ನಾನೆಲ್ಲಿ ದುಡ್ಡು ತರಲಿ, ನನ್ನ ಜೀವನ ನಿಮಗರ್ಪಿಸುತ್ತೇನೆ" ಎಂದು ಹೇಳಿದ. ಆಟೋಗ್ರಾಫ್ ಸಿಗಲಿಲ್ಲ. ಆ ಹುಡುಗನೂ ಬಹುಕಾಲ ಸೇವಾ ಕಾರ್ಯದಲ್ಲಿ ನಿಲ್ಲಲಿಲ್ಲ.

**ಗಾಂಧೀಜಿ ತಮ್ಮ ವಿಗ್ರಹ ಹರಾಜು ಮಾಡಿದರು:**

ಅಲ್ಲಿಂದ ಮುಂದೆ, ಕೆಂಗೇರಿ ಗ್ರಾಮದಲ್ಲಿ ಆಶ್ರಮದಿಂದ ಕಟ್ಟಲ್ಪಟ್ಟ ಗ್ರಾಮ ಸೇವಾ ಕೇಂದ್ರದ ಉದ್ಘಾಟನೆ. ಅನಂತರ – ಅಲ್ಲೇ ಹರಿಜನರಿಗೆ ನೀರಿಗಾಗಿ ತೋಡಿದ್ದ ಡಿಸ್ಟ್ರಿಕ್ಟ್ ಬೋರ್ಡ್ ಬಾವಿಯ ಉದ್ಘಾಟನೆ. ಪ್ರಾರಂಭದಲ್ಲಿ, ಬಾಪೂ ಬಾವಿಯಿಂದ ಬೆಳ್ಳಿಯ ಪಾತ್ರೆಯೊಂದರಲ್ಲಿ ನೀರನ್ನು ಸೇದಿ, ನೆರೆದಿದ್ದ ಹರಿಜನರಿಗೂ, ಇತರರಿಗೂ ತೀರ್ಥ ಕೊಟ್ಟರು. ಅಲ್ಲಿಂದ ಕಟ್ಟಡದ ಮುಂಭಾಗಕ್ಕೆ ಬಂದು, ಅಲ್ಲಿ ಜನಸಮೂಹ ಉದ್ದೇಶಿಸಿ, ಹರಿಜನರು ಹೇಗಿರಬೇಕು, ಸವರ್ಣೀಯರ ಕರ್ತವ್ಯವೇನು-ಎಂದು ಫಂಡಿಗೆ ಹಣ ಕೇಳಿದರು. ನೀರು ಸೇದಿದ್ದ ಬೆಳ್ಳಿಯ ತಂಬಿಗೆ ಒಂದು ಗಾಂಧೀಜಿಯ ವಿಗ್ರಹ ಜೊತೆಗೆ ಆಶ್ರಮದ ಬಾಲಕರಿಂದ ಕೊಡಲ್ಪಟ್ಟ ಬೆಳ್ಳಿಯ ಮೆಡಲ್ ಇವೆಲ್ಲ ಎದುರಿಗಿಟ್ಟುಕೊಂಡು, ಹರಾಜು ಆರಂಭಿಸಿದರು. ತಮ್ಮ ಮೂರ್ತಿಯನ್ನು ಕೈಯಲ್ಲಿ ಹಿಡಿದು "ಇದು ನನ್ನ ವಿಗ್ರಹದಂತೆ, ನನ್ನನ್ನು ಯಾರು ಕೊಳ್ಳುವಿರಿ" ಎಂದು ಸವಾಲು ಹಾಕಿದರು. ಅಲ್ಲಿಯೇ ಇದ್ದ ಐರೋಪ್ಯರೊಬ್ಬರು ಆ ವಿಗ್ರಹವನ್ನು ಕೊಂಡು, ಸಂತೋಷದಿಂದ ಕುಣಿದಾಡಿದರು.

**ಬಾಪೂಜಿ ತೀಕ್ಷ್ಣ ದೃಷ್ಟಿ :**

ಬಾಪೂ 'ರೇಸ್‌ವ್ಯೂ'ಗೆ ಬಂದಾಗ್ಗೆ ಅವರಿಗಾಗಿ ಹಾಲಿನಲ್ಲಿ ಕಿಟಕಿಯ ಪಕ್ಕದಲ್ಲಿ ಕುಳಿತುಕೊಳ್ಳಲು ಏರ್ಪಾಟಾಗಿತ್ತು. ಅವರಿಗೆ ಬೇಕಾದ ಜಮಖಾನ, ಹಾಸಿಗೆ, ದಿಂಬು- ಎಲ್ಲವೂ ಪೂರ್ಣ ಖಾದಿಯೇ ಆಗಿರಬೇಕು. ಯಾರ ಅಚಾತುರ್ಯದಿಂದಲೋ ಏನೋ ಅಲ್ಲಿ ಖಾದಿಯಲ್ಲದ ಇತರ ಮಗ್ಗುಲಹಾಸಿಗೆಯೊಂದು ಸೇರಿತ್ತು. ಬಾಪೂರವರ ತೀಕ್ಷ್ಣ ದೃಷ್ಟಿ ಹಾಲನ್ನು ಪ್ರವೇಶಿಸುತ್ತಲೇ ಅದರ ಮೇಲೆ ಬಿತ್ತು. ತಕ್ಷಣ ಅದನ್ನು ಬದಲಾಯಿಸಲಾಯಿತು.

**ಪ್ರತಿ ಕಾರ್ಯದಲ್ಲಿ ಚೊಕ್ಕ ಲೆಕ್ಕಾಚಾರ :**

ಆಶ್ರಮವು ಬೆಂಗಳೂರು-ಮೈಸೂರು ಹೈರೋಡಿನಲ್ಲಿ ಕೆಂಗೇರಿ ಗ್ರಾಮ ತಲುಪಿದ ಮೇಲೆ ಎಡಗಡೆ ತಿರುಗಿ ಕಾಲು ದಾರಿಯಲ್ಲಿ ಹೊರಟು, ವೃಷಭಾವತಿ ನದಿಯನ್ನು ದಾಟಿ ಸ್ವಲ್ಪ ದೂರ ನಡೆದರೆ ಸಿಗುತ್ತಿತ್ತು. ಆಗಿನ ಸಂದರ್ಭದಲ್ಲಿ ಕಾರು ಸೀದಾ ಆಶ್ರಮಕ್ಕೆ ಹೋಗುವಂತಿರಲಿಲ್ಲ. ಕೆಂಗೇರಿ ಗ್ರಾಮದಲ್ಲಿ ಕಾರು ನಿಲ್ಲಿಸಿ, ಅಲ್ಲಿಂದಾಚೆ ಗಾಂಧೀಜಿ ನಡೆದೇ ದಾರಿಹಾದು,

ನೀರು ದಾಟಿ, ಆಶ್ರಮಕ್ಕೆ ಬರುತ್ತಿದ್ದರು. ಬೆಂಗಳೂರಿನಿಂದ ನಿತ್ಯವೂ ಕಾರಿನಲ್ಲಿ ಬಂದ ಅವರನ್ನು ಕೆಂಗೇರಿಯಲ್ಲಿ ಸಂಧಿಸಿ ಆಶ್ರಮಕ್ಕೆ ಕರೆದೊಯ್ಯುವ ಸದಾವಕಾಶ ನನ್ನದಾಗಿತ್ತು. ಮೊದಲ ದಿನ ನೇರವಾದ ದಾರಿಯಲ್ಲಿ ಅವರನ್ನು ನದೀ ದಾಟಿಸಿ. ಕರೆದುಕೊಂಡು ಹೋಗುತ್ತಿದ್ದೆ. ಹೋಗ ಹೋಗುತ್ತ ಗಾಂಧೀಜಿ – "ಇಲ್ಲಿಂದ ಆಶ್ರಮಕ್ಕೆ ಹೋಗಲು ಎಷ್ಟು ಕಾಲ ಬೇಕು" ಎಂದು ಕೇಳಿದರು. ನಾನು ಸುಮಾರು ಇಪ್ಪತ್ತು ನಿಮಿಷ ಎಂದೆ. ಎರಡನೆಯ ದಿನ ಹೀಗೆ ಕರೆದೊಯ್ಯುತ್ತಿರುವಾಗ, ಶಿವಮೊಗ್ಗೆಯಿಂದ ಬಂದ ಜನಗಳ ಪರಿಚಯ ಮಾಡಿಸಿದಾಗ, "ಶಿವಮೊಗ್ಗೆ ಇಲ್ಲಿಗೆ ಎಷ್ಟು ದೂರ" ಎಂದರು. ನಾನು "ಸುಮಾರು ೨೦೦ ಮೈಲಿ" ಎಂದೆ. ಗಾಂಧೀಜಿ "ಎಲ್ಲದಕ್ಕೂ 'ಸುಮಾರು' ಎಂದು ಏಕೆ ಹೇಳುತ್ತೀಯೆ, ಸರಿಯಾಗಿ ಇಷ್ಟು ಎಂದು ಹೇಳಲಾಗದೆ?" ಎಂದರು. ಅದರರ್ಥ ಇಷ್ಟು ಯತಾರ್ಥ ಜ್ಞಾನ, ಸತ್ಯ ತಿಳಿಯದೇ–ಎಂದು ನನಗನಿಸಿತು. ಮೂರನೇ ದಿನ ಹರಿಜನರ ಕೋರಿಕೆಯಂತೆ ಗಾಂಧೀಜಿ ಯವರನ್ನು ಅವರ 'ಕೇರಿಯ ಮೂಲಕ ಹೋಗೋಣ, ಎಂದೆ. ಗಾಂಧೀಜಿ "ಎರಡುಗಂಟೆಗೆ ಮೀಟಿಂಗಿಗೆ ಕರೆದುಕೊಂಡು ಹೋದರೆ ಸರಿ, ನೀನು ಹೋದಲ್ಲೇ ಬರುತ್ತೇನೆ" ಎಂದರು. ಹೀಗೆ ಹೋಗುವುದರಿಂದ ಎರಡು–ಮೂರು ನಿಮಿಷಗಳ ವ್ಯತ್ಯಾಸವಾಗಬಹುದಷ್ಟೆ ಎನ್ನಲು–ಸುಮ್ಮನೆ ಜೊತೆಯಲ್ಲಿ ಕೇರಿಯ ಮೂಲಕ ಬಂದರು. ಮೀಟಿಂಗಿನ ಮಂಟಪಕ್ಕೆ ಬಂದವರೇ ವೇದಿಕೆಯೇರುವಾಗ, ಸೊಂಟದಲ್ಲಿದ್ದ ಗಡಿಯಾರವನ್ನು ನೋಡಿ, ಅನಂತರ ನನ್ನ ಕಡೆ ನೋಡಿ ನಕ್ಕರು. ಸದ್ಯ ಸರಿಯಾಗಿ ಎರಡಕ್ಕೆ ತಲುಪಿದೆವು. ಅದುವರೆಗೂ ಗಡಿಯಾರವನ್ನು ಕಟ್ಟದ ನಾನು ಮರುದಿನವೇ ಬೆಂಗಳೂರಿಗೆ ಬಂದು ಒಂದು ಗಡಿಯಾರವನ್ನು ಕೊಂಡುಕೊಂಡೆ. ಅಲ್ಲಿಂದಾಚೆ–ಸಮಯನಿಷ್ಠೆಯ ಕಾತರ ನನಗೂ ಹತ್ತಿತು. ಅವರಿಂದ ಕಲಿತ ಪಾಠ ಈವರೆಗೂ ನನಗಂಟಿಕೊಂಡಿದೆ.

**ಜಾತಿ ಅಳಿಯದೆ ಅಸ್ಪೃಶ್ಯತೆ ಅಳಿಯದು:**

೧೯೪೬ರಲ್ಲಿ ಸೇವಾಗ್ರಾಮದಲ್ಲಿ ನಡೆದ ಸಭೆಗೆ ನಾನೂ ಹೋಗಿದ್ದೆ. ಪ್ರಶ್ನೋತ್ತರಕಾಲಕ್ಕೆ ಗಾಂಧೀಜಿ ಬಂದರು. ಪ್ರಶ್ನೆಗಳ ಸುರಿಮಳೆಯಾಯಿತು. ಹರಿಜನ ಸೇವೆಗೆ ಸಂಬಂಧಿಸಿ ಪ್ರೊ. ಯಾರ್ದೆಯೊಂದು ಪ್ರಶ್ನೆ–"ಇಷ್ಟುಕಾಲ ನಾವು ಪ್ರಯತ್ನಪಟ್ಟರೂ ಅಸ್ಪೃಶ್ಯತಾ ನಿವಾರಣೆ ಯಾಗಲಿಲ್ಲವಲ್ಲ, ಏನು ಕಾರಣ" ಎಂಬುದಾಗಿ, ನನ್ನದು "ಜಾತೀಯತೆ ಅಳಿಯದೇ. ಅಸ್ಪೃಶ್ಯತೆ ನಿವಾರಣೆಯಾಗದಲ್ಲವೇ?" ಎಂದು. ಎರಡು ಕಾಗದಗಳನ್ನೂ ಬಾಪು ಕೈಯಲ್ಲಿ ಹಿಡಿದು ಮಾತನಾಡಲಾರಂಭಿಸಿದರು. ಪ್ರೊ. ಯಾರ್ದೆಯವರ ಕಡೆಗೆ ತಿರುಗಿ "ಇಷ್ಟುಕಾಲ ನಾವು ಪ್ರಯತ್ನಮಾಡಿರುವೆವೆಂದರಲ್ಲವೇ" ಏನು ಪ್ರಯತ್ನ ಮಾಡಿದಿರಿ? ಹರಿಜನ ಬಾಲಕಿಯರನ್ನು ನಿಮ್ಮ ಸೊಸೆಯಾಗಿ–ಇಲ್ಲವೆ ಹರಿಜನಬಾಲಕನನ್ನು ನಿಮ್ಮ ಅಳಿಯನಾಗಿ ಸ್ವೀಕರಿಸಬಲ್ಲಿರಾ?" ಎಂದು ನನ್ನ ಕಡೆ ತಿರುಗಿ "ಮೃತ್ಯು ನನ್ನೆದುರಿಗೆ ತಾಂಡವಾಡುತ್ತಿದೆ. ಹಿಂದೂಜಾತಿ ನನ್ನನ್ನು ಅರ್ಥಮಾಡಿಕೊಂಡಿದೆ ಎಂದು ನಂಬಿದ್ದೆ. ಮಾಡಿಕೊಂಡಿದ್ದಂತೆ ನನಗೆ ತೋರಲಿಲ್ಲ. ಜಾತಿ ಅಳಿಯದಿದ್ದಲ್ಲಿ. ಅಸ್ಪೃಶ್ಯತೆ ಅಳಿಯುವುದಿಲ್ಲ. ಅಸ್ಪೃಶ್ಯತೆ ಅಳಿಯದಿದ್ದಲ್ಲಿ ಹಿಂದೂಧರ್ಮ ಉಳಿಯುವುದಿಲ್ಲ" ಎಂದು ಸ್ಪಷ್ಟವಾಗಿ ಹೇಳಿದರು.

**ಕರ್ತವ್ಯ ಪಾಲನೆ :**

೧೯೪೭ರಲ್ಲಿ ಪುನಃ ದೆಹಲಿಯಲ್ಲಿ ರಚನಾತ್ಮಕ ಕಾರ್ಯಕರ್ತರ ಸಭೆ ಸೇರಿತು. ಹರಿಜನ ಕಾರ್ಯಕರ್ತರು, ನಯೀತಾಲೀಂ, ಕಾರ್ಯಕರ್ತರು, ಗ್ರಾಮೋದ್ಯೋಗ ಸಂಘದ ಕಾರ್ಯಕರ್ತರು ಎಲ್ಲರೂ ಬಾಪೂವಿನ ಸುತ್ತ ನೆರೆದಿದ್ದರು. ಬಾಪೂ ನಿತ್ಯವೂ ಬಿರ್ಲಾ ಭವನದಿಂದ ಹರಿಜನ ಕಾಲನಿಗೆ ಬರುತ್ತಿದ್ದರು. ಸಮ್ಮೇಳನದ ಎರಡನೆ ದಿನ ನಾವುಗಳೆಲ್ಲ ಸಭೆಯಲ್ಲಿ ಕುಳಿತಿರುವಾಗ್ಗೆ, ಬಾಪೂಜಿಗೆ ಜಖಂ ಆಗಿದೆ ಎಂದು ಸಮಾಚಾರ ಬಂತು. ಅಧ್ಯಕ್ಷತೆ ವಹಿಸಿದ್ದ ಶ್ರೀಮತಿ ರಾಮೇಶ್ವರಿ ನೆಹ್ರೂರವರು ಬಹು ಕಾತುರದಿಂದ "ನಾನು ಹೋಗಬೇಕು, ಅವರನ್ನು ಕಾಣಬೇಕು" ಎಂದು ಅವಸರ ಅವಸರವಾಗಿ ಸಭೆ ಮುಕ್ತಾಯಗೊಳಿಸಿ ಹೊರಟರು. ಅವರ ಹಿಂದೆ ಬಾಪಾ, ನಾವು ಎಲ್ಲರೂ ಹೊರಟೆವು. ಅವರಿಳಿದುಕೊಂಡಿದ್ದ ಕೋಣೆಯ ಹೊರಗಿನ ಬಾಗಿಲು ಹಾಕಲ್ಪಟ್ಟಿತ್ತು. ನಾವುಗಳು ಯಾರೂ ದಿಢೀರನೆ ನುಗ್ಗಬಾರದೆಂದು ಹೊರಗಡೆ ಠಕ್ಕರ ಬಾಪಾ, ಕುಮಾರಪ್ಪಾಜಿ, ನಾಯಕಂಜಿ ಜೊತೆಗೆ ನಿಂತಿದ್ದೆವು. ಶ್ರೀಮತಿ ರಾಮೇಶ್ವರಿ ನೆಹರು, ಅವರು ಮಾತ್ರ ಒಳಗೆ ಹೋದರು. ಸಮಯವೂ ನಾಲ್ಕಕ್ಕೆ ಬಂದಿತ್ತು. ಬಾಪೂ ನಮಗೆ ನಿಯಮಿಸಿದ್ದ ಕಾಲವೂ ಅದೇ. ಬಾಪಾರವರೊಡನೆ ಒಳಗೆ ಹೋಗಿ ನಮಸ್ಕರಿಸಿ ನಿಂತೆವು. ಗಾಂಧೀಜಿ ಎಲ್ಲರಿಗೂ ಕುಳಿತುಕೊಳ್ಳಲು ಹೇಳಿದರು. ಬಾಪಾ. "ತಮಗೆ ತೊಂದರೆ ಯಾಗಿದೆ ಈ ದಿನ ನಿಮ್ಮನ್ನೇನೂ ನಾವು ಪ್ರಶ್ನಿಸುವುದಿಲ್ಲ. ಸುಮ್ಮನೆ ನಮಸ್ಕಾರ ಮಾಡಿ ಹೋಗುವೆವು" ಎಂದರು. ಆದರೆ ಬಾಪೂ, ಕಾರಿನ ಕದಕ್ಕೆ ಸಿಕ್ಕಿ ಜಜ್ಜಿ ಹೋಗಿದ್ದ, ಒದ್ದೆ ಬಟ್ಟೆ ಸುತ್ತಿದ್ದ ಬೆರಳಿನ ನೋವನ್ನು ಲೆಕ್ಕಿಸದೆ, "ಇದು ನಿಜವಾಗಿ ನಿಮಗೆ ಕೊಟ್ಟಿದ್ದ ಕಾಲ. ನನಗಾಗಿರುವ ನೋವೇನು ಮಹಾ. ನಿಮ್ಮ ಕಾಲ ನೀವು ಉಪಯೋಗಿಸಿಕೊಳ್ಳಬಹುದು"–ಎಂದು ಎಲ್ಲರನ್ನೂ ಕೂಡಿಸಿದರು. ತಲೆಯ ಮೇಲೂ ಒದ್ದೆಯ ಬಟ್ಟೆಯನ್ನು ಹಾಕಿಕೊಂಡು. ಗದ್ದಿಗೆಯ ಮೇಲೆ ಪವಡಿಸಿದ್ದ ೭೮ ವರ್ಷ ವಯಸ್ಸಿನ ಬಾಪೂ ನೋವನ್ನು ಲೆಕ್ಕಿಸದೆ ಕರ್ತವ್ಯನಿಷ್ಠರಾಗಿ ನಮಗೆಲ್ಲಾ ಪಾಠ ಕಲಿಸಿದರು. ಅವರಿಗೆ ಹೆಚ್ಚು ಶ್ರಮ ಕೊಡುವ ಇಚ್ಛೆ ಇಲ್ಲದೆ, ಸ್ವಲ್ಪ ಕಾಲ ಮಾತ್ರ ಅವರೊಡನೆ ಇದ್ದು, ನಾವೆಲ್ಲಾ ಹೊರಬಿದ್ದೆವು.

ಸ್ವಾಮಿ ವಿಶ್ವಾನಂದ

* * *

## ೩೫. ಶ್ರೀ ರಂಗನಾಥ ದಿವಾಕರ ಇವರ ನೆನಹುಗಳು

ಇಲ್ಲಿ ಒಂದೇ ಒಂದು ಮಹತ್ವದ ನೆನಪನ್ನು ಬರೆಯಬೇಕೆಂದಿದ್ದೇನೆ. ಅದು ಗಾಂಧೀಜಿಯವರ ತತ್ವಪ್ರಣಾಲಿ ಹಾಗೂ ಕಾರ್ಯ ಮಾಡುವ ರೀತಿಯನ್ನು ಸಂಬಂಧಿಸಿದೆ.

ಗಾಂಧೀಜಿ ೧೯೪೨ರ ಆಗಸ್ಟ್ ೮ನೇ ತಾರೀಖಿನ ರಾತ್ರಿ ಭಾರತ ಸ್ವಾತಂತ್ರ್ಯಕ್ಕಾಗಿ "ಚಲೇಜಾವ" ಚಳವಳಿಯ ಜ್ವಲಂತ ಘೋಷಣೆ ಮಾಡಿದರು. ಅದಕ್ಕಾಗಿ ಮರುದಿನ ಬೆಳಗಿನ ಜಾವದಲ್ಲಿ ಅವರನ್ನು ಹಾಗೂ ಕಾಂಗ್ರೆಸ್ ಕಾರ್ಯಕಾರಿ ಮಂಡಲದ ಎಲ್ಲ ಸದಸ್ಯರನ್ನು ಬ್ರಿಟಿಷ್ ಸರಕಾರದವರು ಸೆರೆಹಿಡಿದು ಕಾರಾಗೃಹವಾಸಕ್ಕೆ ಕಳಿಸಿದರು.

ಗಾಂಧೀಜಿ ೧೯೪೩ ಫೆಬ್ರವರಿ ತಿಂಗಳಲ್ಲಿ ಪುಣೆಯ ಆಗಾಖಾನ ಅರಮನೆಯಲ್ಲಿ ಸೆರೆಯಲ್ಲಿರುವಾಗ ೨೧ ದಿನಗಳ ಕಠಿಣತರವಾದ ಉಪವಾಸವನ್ನು ಕೈಗೊಂಡರು. ಆಗ ಅವರನ್ನು ಅಲ್ಲಿ ಭೇಟಿಯಾಗಲು ಅನೇಕರಿಗೆ ಅವಕಾಶ ಕೊಡಲಾಯಿತು. ಅವರ ಕಿರಿಯ ಮಗನಾದ ದೇವದಾಸ ಗಾಂಧಿಯವರೂ ಅವರಲ್ಲಿ ಒಬ್ಬರು.

ಆಗಸ್ಟ್ ೯, ೧೯೪೨ರಿಂದ ಎರಡು ವರ್ಷ ನಾನು ಭೂಗತನಾಗಿದ್ದೆನು. ನನ್ನನ್ನು ಹಿಡಿದು ಕೊಟ್ಟವರಿಗೆ ೫೦೦೦ ರೂಪಾಯಿ ಇನಾಮು ಸಾರಲಾಗಿತ್ತು. ಕರ್ನಾಟಕದಲ್ಲಿ ನಡೆದ ಕ್ರಾಂತಿಕಾರಕ ಆಂದೋಲನದ ಸೂತ್ರಧಾರರಲ್ಲಿ ನಾನೊಬ್ಬ. ತಂತೀ ಕಡಿಯುವುದು, ರೇಲ್ವೆ ಸ್ಟೇಶನ್ನುಗಳನ್ನು ಸುಡುವುದು, ರೈಲುಗಾಡಿಗಳನ್ನು ನಿಲ್ಲಿಸಿಬಿಡುವುದು, ಇತ್ಯಾದಿ ಚಟುವಟಿಕೆಗಳು ಕರ್ನಾಟಕದಲ್ಲಿ ದೊಡ್ಡ ಪ್ರಮಾಣದ ಮೇಲೆ ಅಲ್ಲಲ್ಲಿ ನಡೆದಿದ್ದವು. ೧೩-೧೪ ಸುಸಂಘಟಿತ ಗುಂಪುಗಳು ಒಳ್ಳೆ ದಿಟ್ಟತನದಿಂದ ಹಾಗೂ ವ್ಯವಸ್ಥಾ ರೀತಿಯಿಂದ ಈ ಕೃತ್ಯಗಳನ್ನು ನಡೆಸಿದ್ದವು.

ಗಾಂಧೀಜಿಯವರಿಗೆ ಕರ್ನಾಟಕದಲ್ಲಿ ನಡೆದ ಈ ಮೇಲಿನ ಆಂದೋಲನದ ಕತೆಯನ್ನು ತಿಳಿಸಿ ಅವರಿಂದ ಮಾರ್ಗದರ್ಶನ ಪಡೆಯಬೇಕೆಂದು ನಾನು ಬಗೆದೆನು. ಅದಕ್ಕಾಗಿ ಆಂದೋಲನದ ಕತೆಯನ್ನು ಟಾಯಿಪು ಮಾಡಿಸಿಕೊಂಡು ಪುಣೆಕ್ಕೆ ಹೋದೆನು. ದೇವದಾಸರನ್ನು ಭೆಟ್ಟಿಯಾಗಿ ನನ್ನ ಉದ್ದೇಶವನ್ನು ತಿಳಿಸಿದೆನು. ಆಗ ಅವರು ನಮ್ಮ ಕಾರ್ಯದ ವರದಿಯನ್ನು ಒಯ್ದು ಗಾಂಧೀಜಿಗೆ ಒಪ್ಪಿಸಲು ಸಿದ್ಧರಾದರು. ಸಂಧಿ ಸಾಧಿಸಿ ಅದನ್ನೆಲ್ಲ ಗಾಂಧೀಜಿಗೆ ಓದಿ ತೋರಿಸಿದರು.

ಆಗಿನ ಹಲವು ಮುಖಂಡರ ಹಾಗೂ ಅನೇಕ ಕಾರ್ಯಕರ್ತರ ತಿಳುವಳಿಕೆಯ ಪ್ರಕಾರ, ಸರಕಾರೀ ಆಸ್ತಿಪಾಸ್ತಿಗಳನ್ನು ಧ್ವಂಸ ಮಾಡುವುದು ಹಿಂಸೆ ಅಲ್ಲ; ಮಾನವರಿಗೆ ಹಿಂಸೆ ಕೊಟ್ಟರೆ, ಹೊಡೆದರೆ ಬಡಿದರೆ, ವೈಯಕ್ತಿಕ, ನಾಗರಿಕ ಆಸ್ತಿ ಕಳವು ಮಾಡಿ ಅವರಿಗೆ ದುಃಖ ಕೊಟ್ಟರೆ, ಅದು ಮಾತ್ರ ಹಿಂಸೆ ಎಂದು ನಾವು ತಿಳಿದಿದ್ದೆವು. ಆ ದೃಷ್ಟಿಯಿಂದ ಕರ್ನಾಟಕ ಕಾರ್ಯಕರ್ತರಾದ ನಾವು ಬಹಳೇ ಸಂಯಮದಿಂದ ನಡೆಯುತ್ತಿದ್ದೆವು. ಭೂಗತ ಆಂದೋಲನ ನಡೆಸಲು ಬೇಕಾದ ಹಣವನ್ನು ಕೂಡ ನಾವು ಜನರಿಂದ ಬೇಡಿ ತೆಗೆದುಕೊಳ್ಳುತ್ತಿದ್ದೆವು. ಕಳವು-ಲೂಟಿ ಮುಂತಾದವುಗಳನ್ನು ಮಾಡುತ್ತಿರಲಿಲ್ಲ.

ದೇವದಾಸರು ಓದಿ ತೋರಿಸಿದ ಕರ್ನಾಟಕದ ಆಗಿನ ಆಂದೋಲನದ ವರದಿಯನ್ನೆಲ್ಲ ಗಾಂಧೀಜಿ ಕೇಳಿದರು. ಅವರು ನಮ್ಮ ಕ್ರಾಂತಿಕಾರೀ ಕಾರ್ಯಕ್ರಮದ ಬಗ್ಗೆ ಮಾಡಿದ ಟೀಕೆ ಟಿಪ್ಪಣಿ ಈ ರೀತಿ ಇದೆ :

ವರದಿ ಕೇಳಿದ್ದಾಯಿತು. ಮಾನವರಿಗೆ ಹಿಂಸೆ ಕೊಡದೆ ಇರುವ ನಿಮ್ಮ ಸಂಯಮ. ಪಥ್ಯ ಯೋಗ್ಯವೇ ಇದೆ. ಆದರೆ ಆಸ್ತಿಪಾಸ್ತಿಗೆ ಮಾಡಿದ ಹಿಂಸೆ ಕೂಡ ಈಹೊತ್ತಲ್ಲ ನಾಳೆ ಮಾನವ ಹಿಂಸೆಗೆ ದಾರಿ ಮಾಡಿಕೊಡುವದು. ನೀವು ಹಿಂಸೆ ಮಾಡದದಿದ್ದರೂ ಆಸ್ತಿಪಾಸ್ತಿಯ ಮಾಲೀಕರಾದ ಸರಕಾರದವರು, ಅವರ ನೌಕರರು ಹಿಂಸೆಗೆ ಎಳಸುವದು ನಿಶ್ಚಿತ. ಆಗ,

ನಿಮ್ಮ ಕಾರ್ಯಕರ್ತರಿಂದ ಪ್ರತಿಹಿಂಸೆ ಆಗದೆ ಇರುವುದು ಅಸಾಧ್ಯ. ಸ್ವ ಸಂರಕ್ಷಣಕ್ಕಾದರೂ ಸರ್ಕಾರದ ವಶವಾಗ ಕೂಡದು ಎಂಬ ಬುದ್ಧಿಯಿಂದಾದರು ನಿಮ್ಮಿಂದ ಹಿಂಸೆಯಾಗೆ ತೀರುವ ಸಂಭವ ಹೆಚ್ಚು. ಆದುದರಿಂದ ಈ ಮಾರ್ಗ ಸಲ್ಲದು.

ಗಾಂಧೀಜಿಯವರ ಈ ಸ್ಪಷ್ಟವಾದ ಅಭಿಪ್ರಾಯ ಬಂದುದನ್ನು ಕಾರ್ಯಕರ್ತರಿಗೆಲ್ಲ ಹೇಳಿದೆನು. ಆ ಮುಂದೆ ಸತ್ಯಾಗ್ರಹ ಕೌನ್ಸಿಲ್ ಎಂಬ ಪ್ರತ್ಯೇಕ ಭಾರತೀಯ ಮಂಡಲವನ್ನು ರಚಿಸಿಕೊಂಡೆವು. ಅದರಲ್ಲಿ ಅನ್ನದಾ ಚೌಧರಿ (ಬಂಗಾಲ), ಸುಚೇತಾ ಕೃಪಲಾನಿ, ಜೀ. ರಾಮಚಂದ್ರನ್ ಮುಂತಾದವರಿದ್ದರು. ಶುದ್ಧ ಅಹಿಂಸಾತ್ಮಕ ಕಾಯದೇ ಭಂಗದ ಚಳವಳಿಯನ್ನು ಕರ್ನಾಟಕದಲ್ಲಿ ಹೂಡಿದೆವು. ಆ ಮೂಲಕ ಸುಮಾರು ೮೦೦ ಕರ್ನಾಟಕದ ಕಾರ್ಯಕರ್ತರು ಗಾಂಧೀಜಿ ಬಿಡುಗಡೆ ಆಗುವವರೆಗೆ (ಮೇ ೧೯೪೪) ಸೆರೆ ಸೇರಿದರು.

**–ರಂಗನಾಥ ದಿವಾಕರ**

* * *

## ೩೬. ತಿಮ್ಮಪ್ಪ ನಾಯಕರ ನೆನಹುಗಳು

ನಾನು ೧೯೨೪ ನವೆಂಬರದಿಂದ ೧೯೨೬ ಫೆಬ್ರವರಿ ತನಕ ಸಾಬರಮತಿ ಸತ್ಯಾಗ್ರಹಾಶ್ರಮದಲ್ಲಿದ್ದೆ. ಆ ಸಮಯದಲ್ಲಿ ಗಾಂಧೀಜಿಯವರು ಖಾದಿ ಕಾರ್ಯದ ಸಂಘಟನೆಗಾಗಿ ಭಾರತ ತುಂಬ ಸಂಚಾರಕ್ಕೆ ಕೈಕೊಂಡಿದ್ದರು. ನಡುನಡುವೆ. ತಿಂಗಳಿಗೆ ಎರಡು ತಿಂಗಳಿಗೊಮ್ಮೆ ಆಶ್ರಮಕ್ಕೆ ಬರುತ್ತಿದ್ದರು. ನಾಲ್ಕು ಹತ್ತು ದಿನ ಇದ್ದು ಪುನಃ ಸಂಚಾರಕ್ಕೆ ಹೋಗುತ್ತಿದ್ದರು. ಗಾಂಧೀಜಿಯವರು ಬರುತ್ತಾರೆಂದು ತಿಳಿದಕೂಡಲೇ ಇಡೀ ಆಶ್ರಮದಲ್ಲಿ ಒಂದು ವಿದ್ಯುತ್ ಸಂಚಾರವೇ ಆಗುತ್ತಿತ್ತು. ವಿಶೇಷತಃ ಮಕ್ಕಳಿಗೆ ತುಂಬ ಉಲ್ಲಾಸ. ತುಂಬ ಸಂತೋಷ. ಒಂದು ದಿನ ಸಾಯಂಕಾಲ ಪ್ರಾರ್ಥನೆಯ ಸಮಯದಲ್ಲಿ ನಡೆದ ಘಟನೆ. ಗಾಂಧೀಜಿಯವರು ಪ್ರಾರ್ಥನೆಗೆ ಹೊರಟೊಡನೆ ಮಕ್ಕಳೂ ಅವರನ್ನು ಸುತ್ತುವರಿದು ಅವರೊಡನೆ ಬಾಲಚೇಷ್ಟೆ ಮಾಡುತ್ತ ಬರುತ್ತಿದ್ದರು. ಬಾಪೂಜಿಯವರೂ ಅವರೊಡನೆ ಹಾಸ್ಯ-ವಿನೋದ ಮಾಡುತ್ತಿದ್ದರು. ಬಾಪೂಜಿಯವರು ಪ್ರಾರ್ಥನಾ ಸ್ಥಳಕ್ಕೆ ಬಂದು ಆಸನಸ್ಥರಾದ ಮೇಲೆ ಸಹ, ಮಕ್ಕಳು ಬಾಪೂಜಿಯವರೊಡನೆ ತಮ್ಮ ವಿನೋದ ನಡೆಸುತ್ತಿದ್ದರು. ಆದರೆ ಪ್ರಾರ್ಥನೆಯ ಸೂಚನೆಯಾದೊಡನೆ ಮಕ್ಕಳಿಗೆ "ಹವೇ ತೋ ಮೌನ ರಾಖವಾನು ಛೆ" ಈಗ ಮೌನ ಪಾಲಿಸತಕ್ಕದ್ದಿದೆ ಎಂದು ಹೇಳಿದ ಕೂಡಲೇ ಎಲ್ಲ ಮಕ್ಕಳೂ ಬಾಪೂಜಿಯವರಂತೆ, ಒಮ್ಮೆಲೇ ಧ್ಯಾನಸ್ಥರಾಗಿ ಕುಳಿತುಬಿಡುತ್ತಿದ್ದರು. ಹೀಗಿತ್ತು ಬಾಪೂಜಿಯವರ ಪ್ರೇಮ ಸಾಮ್ರಾಜ್ಯ. ಆ ದಿವಸ ಪ್ರಾರ್ಥನೆಯ ಕೊನೆಗೆ ಶ್ರೀ ಬಾಳಕೋಬಾ ಭಾವೆಯವರು (ವಿನೋಬಾಜಿಯವರ ತಮ್ಮನವರು) ಕೇನೋಪನಿಷತ್ತಿನ ಕೊನೆಯ ಶ್ಲೋಕವನ್ನು ತಮ್ಮ ಇಂಪಾದ ಸ್ವರದಲ್ಲಿ ಹಾಡಿ ವಿವರಿಸಿ ಹೇಳುತ್ತಿದ್ದರು.

"ತಸ್ಯೈ ತಪೋ ಧರ್ಮಃ ಕರ್ಮೇತಿ ಪ್ರತಿಷ್ಠಾ......"
೫೪

**ಅಪೂರ್ವ ಶಿಕ್ಷಕ**

ಬಾಲಕೋಬಾಜಿಯವರ ಪ್ರವಚನ ಮುಗಿದೊಡನೆ, ಬಾಪೂಜಿಯವರು ಆ ದಿನ ತನ್ನೊಡನೆ ಹಾಸ್ಯ-ವಿನೋದ ಮಾಡುತ್ತ ಬಂದಿದ್ದ ಓರ್ವ ಹುಡುಗಿಗೆ ಪ್ರಶ್ನೆ ಮಾಡಿದರು – ಆ ಹುಡಿಗಿಯ ವಯಸ್ಸು ಅಜಮಾಸು ಒಂಬತ್ತು.

"ಬಾಳಕೋಬಾಜಿಯವರು ಹೇಳಿದ್ದನ್ನು ಲಕ್ಷ್ಯಗೊಟ್ಟು ಕೇಳಿದಿಯಾ? ಅವರು ಏನು ಹೇಳಿದರು?"

"ದೇವರನ್ನು ಕಾಣುವ ದಾರಿಯನ್ನು ಅವರು ಹೇಳಿದರು" ಎಂದು ಆ ಬಾಲಿಕೆ ಕೊಂಚವೂ ಹಿಂದೆಗೆಯದೆ ಉತ್ತರ ಕೊಟ್ಟಳು.

"ಆ ದಾರಿ ಯಾವುದು?"

"ಅದಕ್ಕಾಗಿ ತಪಸ್ಸನ್ನಾಚರಿಸಬೇಕು" ಎಂದು ಆಕೆ ಅಷ್ಟೇ ತತ್ಪರತೆಯಿಂದ ಉತ್ತರ ಕೊಟ್ಟಳು.

"ತಪಸ್ಸನ್ನಾಚರಿಸಬೇಕೆಂದರೆ ಏನು ಮಾಡಬೇಕು?"

"ಬ್ರಹ್ಮಚರ್ಯದಿಂದಿರಬೇಕು" ಎಂದು ಉತ್ತರ ಬಂದಿತು.

"ಹಾಗೆಂದರೇನು?"

"ನ ಥೀ ಪರಣವಂ" (ಮದುವೆ ಮಾಡಿಕೊಳ್ಳತಕ್ಕದ್ದಲ್ಲ) ಎಂದು ಆ ಹುಡುಗಿ ದಿಟ್ಟತನದಿಂದ ನುಡಿದಳು.

ಬಾಪೂಜಿಯವರು ಆಕೆಯ ಬೆನ್ನು ಚಪ್ಪರಿಸಿದರು.

ನಾವೆಲ್ಲರೂ ಆ ಬಾಲಕಿಯ ಸಮರ್ಪಕ ಉತ್ತರಗಳನ್ನು ಕೇಳಿ ಚಕಿತರಾದೆವು.

ಹೀಗಿತ್ತು ಬಾಪೂಜಿಯವರ ಶಿಕ್ಷಣ ಕಲೆ. ಚಿಕ್ಕ ಮಕ್ಕಳಿಗೂ ಆಧ್ಯಾತ್ಮ ಜ್ಞಾನವನ್ನು ಕೊಡುವುದು, ಸುಲಭವಿದೆಯೆಂದು ಅವರು ಯಾವಾಗಲೂ ಪ್ರತಿಪಾದಿಸುತ್ತಿದ್ದರು. ಚಾರಿತ್ರ್ಯದ ತೇಜದಿಂದಲೇ ಜ್ಞಾನದ ಕಿರಣಗಳು ಹೊರಹೊಮ್ಮುವವು. ಎಲ್ಲರನ್ನೂ ಪಾವನಗೊಳಿಸುವವು.

ಗಾಂಧೀಜಿಯವರ ನಡೆಯಲ್ಲಿ, ನುಡಿಯಲ್ಲಿ, ಹಾಸ್ಯದಲ್ಲಿಯೂ, ನಿದ್ರೆಯಲ್ಲಿಯೂ ಸಹ ಸ್ಥಿತಪ್ರಜ್ಞೆ ಯೋಗವು, ಆಧ್ಯಾತ್ಮ ಯೋಗವೂ ಸಹಜವಾಗಿ ಮಿನುಗುತ್ತಿತ್ತು. ಆದುದರಿಂದ ಸರಳ ಅಂತಃಕರಣದ ಬಾಲಕ-ಬಾಲಿಕೆಯರು ಸಹ ಆ ಮಹಾತ್ಮರೊಡನೆ ಆಟವಾಡುತ್ತ, ವಿನೋದ ಮಾಡುತ್ತ, ಆಧ್ಯಾತ್ಮ ಅಮೃತವನ್ನು ಸವಿಯುತ್ತಿದ್ದರು.

**ನಿರಾಡಂಬರ:**

ಅದೇ ಸಮಯದಲ್ಲಿ ನಡೆದ ಇನ್ನೊಂದು ಘಟನೆ. ಗಾಂಧೀಜಿಯವರ ಮೊಮ್ಮಗಳ-ಅವರ ಹಿರಿಯ ಹುಡುಗ ಶ್ರೀ ಹಿರಲಾಲಾ ಗಾಂಧೀ ಅವರ ಹಿರೇಮಗಳ ವಿವಾಹ ಸಮಾರಂಭಕ್ಕೆ ಸಂಬಂಧಿಸಿದ್ದು. ಹಿರಾಲಾಲ ಗಾಂಧೀಜಿಯವರು ಕಲಕತ್ತಾ ಕಡೆ ಇರುತ್ತಿದ್ದರು. ಅವರು

ಅಡ್ಡ ಹಾದಿ ಹಿಡಿದಿದ್ದರು. ಆದುದರಿಂದ ಗಾಂಧೀಜಿಯವರು ಅವರ ಇಬ್ಬರು ಹೆಣ್ಣುಮಕ್ಕಳನ್ನು ಹಾಗೂ ಇಬ್ಬರು ಗಂಡುಮಕ್ಕಳನ್ನು ತಮ್ಮ ಆಶ್ರಮದಲ್ಲಿಯೇ ತಂದಿರಿಸಿಕೊಂಡಿದ್ದರು. ಗುಜರಾಥಿ ಪದ್ಧತಿಯಂತೆ ಹಿರೇ ಹುಡುಗಿಯ ವಿವಾಹದ ಕುರಿತು ವಾಂಗ್ನಿಶ್ಚಯ ಎಷ್ಟೋ ವರುಷಗಳ ಹಿಂದೆಯೇ ಆಗಿರಬೇಕು. ಪ್ರತ್ಯಕ್ಷ ವಿವಾಹವು ಜರುಗುವದಿತ್ತು. ಒಂದು ದಿನ ಸಾಯಂಕಾಲ ಪ್ರಾರ್ಥನೆ ಮುಗಿದೊಡನೆ ಗಾಂಧೀಜಿಯವರು ಎಲ್ಲರನ್ನುದ್ದೇಶಿಸಿ ಹೇಳಿದರು – "ನಾಳೆ ಪ್ರಾತಃಕಾಲದ ಪ್ರಾರ್ಥನೆಯಾದನಂತರ ಕೆಲ ಮಹತ್ವದ ಮಾತುಗಳನ್ನು ಹೇಳುವವನಿದ್ದೇನೆ. ಆದುದರಿಂದ ನಾಳೆಯ ಪ್ರಾತಃಪ್ರಾರ್ಥನೆಯ ಸಮಯದಲ್ಲಿ ಎಲ್ಲರೂ ಉಪಸ್ಥಿತರಿರಬೇಕು. ಯಾರು ಕೆಲವರು ಪ್ರಾತಃಕಾಲದ ಪ್ರಾರ್ಥನೆಗೆ ಸಾಮಾನ್ಯವಾಗಿ ಹಾಜರಿರುವುದಿಲ್ಲವೋ ಅವರಿಗೂ ಸಹ ತಪ್ಪದೆ ಬರಲು ತಿಳಿಸಬೇಕು" ಎಂದು ಹೇಳಿದರು.

ಮರುದಿನ ಪ್ರಾತಃಕಾಲದ ಪ್ರಾರ್ಥನೆಯು, ಅಂದಿನ ಹವೆಯ ಅನನುಕೂಲತೆಯಿಂದ, ಅವರ ವಸತಿಯ ಪಡಸಾಲೆಯಲ್ಲಿಯೇ ಜರುಗಿತು. ಆಶ್ರಮ ನಿವಾಸಿ ಸ್ತ್ರೀ ಪುರುಷರೆಲ್ಲರೂ ಉಪಸ್ಥಿತರಿದ್ದರು. ಪ್ರಾರ್ಥನೆ ಮುಗಿಯಿತು. ನಾವೆಲ್ಲರೂ ಇಂದು ಗಾಂಧೀಜಿಯವರು ಯಾವ ಮಹತ್ವದ ವಿಷಯ ಕುರಿತು ಮಾತನಾಡುವರೆಂದು ಕುತೂಹಲದಿಂದ ಇದ್ದೆವು.

ಗಾಂಧೀಜಿಯವರು ಸಾವಕಾಶವಾಗಿ ಗಂಭೀರ ದನಿಯಲ್ಲಿ ಮಾತು ಪ್ರಾರಂಭಿಸಿದರು.

"ಈ ವಾರದಲ್ಲಿ ರಾಮೀಬಹನಳ ವಿವಾಹವು ಇಲ್ಲಿ ಜರುಗಲಿದೆ. ನಾವು ಆಶ್ರಮವಾಸಿಗಳು ದರಿದ್ರ ನಾರಾಯಣನ ಸೇವಕರು. ನಮ್ಮ ಜೀವನವು ಅದಕ್ಕನುರೂಪವಾಗಿ ನಡೆದರೇ ನಾವು ಆ ದರಿದ್ರ ನಾರಾಯಣನ ಸೇವಕರೆನಿಸಿಕೊಳ್ಳಲು ಪಾತ್ರತೆ ತಂದುಕೊಳ್ಳಬಹುದು. ಈ ದೃಷ್ಟಿಯಿಂದ ಇಲ್ಲಿ ನಡೆಯುವ ವಿವಾಹವಾದರೋ ತೀರ ಸಾದಾತನದಲ್ಲಿ ನಡೆಯಬೇಕು. ಬರುವ ಬೀಗರಿಗೆ ಕೊಡುವ ಊಟ ಸಹ ನಿತ್ಯದ ರೊಟ್ಟಿ ಬೇಳೆ, ಪಲ್ಯೆ ಹೀಗೆ ಸಾದಾ ಊಟ ಇರುವುದು; ಉಡುಗೊರೆ ಬಗ್ಗೆ ಶ್ರೀ ಬಜಾಜರಂಥವರು ಬೇಕಾದ ವಸ್ತು ತಂದುಕೊಡುವೆ ಎಂದೂ 'ಬಾ'ಳಿಗೆ (ಕಸ್ತೂರಬಾ ಅವರಿಗೆ) ಹೇಳಬಹುದು. ಅಂಥ ಯಾವದನ್ನೂ ಸ್ವೀಕರಿಸತಕ್ಕದ್ದಲ್ಲ. ಸಾದಾತನದಲ್ಲಿ ಸತ್ಯವಿದೆ, ಗಾಂಭೀರ್ಯವಿದೆ" ಎಂದು ಹೇಳಿದರು. ಹೆಜ್ಜೆಹೆಜ್ಜೆಗೆ ಅವರು ಸತ್ಯದ ದಾರಿಯಿಂದ ಸ್ವಲ್ಪವೂ ವಿಚಲಿತರಾಗದಂತೆ ಜಾಗ್ರತೆ ವಹಿಸುತ್ತ, ಪರಮಾತ್ಮನೊಡನೆ ತನ್ನ ಅನುಸಂಧಾನವನ್ನು ಹೇಗೆ ಸ್ಥಿರವಾಗಿರಿಸಿಕೊಳ್ಳುತ್ತಿದ್ದರೆಂಬುದು ನಮಗೆಲ್ಲರಿಗೂ ಸ್ಪಷ್ಟವಾಯಿತು.

**ಸಂಪೂರ್ಣ ಪಾರದರ್ಶಕ:**

ಸತ್ಯದ ಅನನ್ಯ ಉಪಾಸಕರಾಗಿದ್ದ ಗಾಂಧೀಜಿಯವರು ತಮ್ಮ ಸ್ವಭಾವದಲ್ಲಿ ಪಾರದರ್ಶಕತೆಯನ್ನು (Transparency) ಸಂಪೂರ್ಣ ಅಳವಡಿಸಿಕೊಂಡಿದ್ದರು. ತನ್ನ ದೋಷಗಳನ್ನು ಇಷ್ಟೇ ಅಲ್ಲ, ತನ್ನ ಸಂಸ್ಥೆಯಲ್ಲಿರಬಹುದಾದ ನ್ಯೂನತೆಗಳನ್ನು ಅವರು ಸಾರ್ವಜನಿಕರಲ್ಲಿ ಪ್ರಕಟಗೊಳಿಸಿ ಸ್ವಲ್ಪವೂ ಹಿಂಜರಿಯುತ್ತಿದ್ದಿಲ್ಲ. ಸಾಬರಮತಿ ಆಶ್ರಮದಲ್ಲಿ ಎರಡು ವಿಭಾಗಗಳಿದ್ದವು. ಒಂದು ಆಶ್ರಮ, ಮತ್ತೊಂದು ರಾಷ್ಟ್ರೀಯ ಶಾಲೆ, ಈ ಎರಡೂ ವಿಭಾಗಗಳ ಸಂಚಾಲಕರಲ್ಲಿ

ವಿಚಾರ-ಭೇದ ದೃಷ್ಟಿ ಭೇದದ ಮೂಲಕ, ಮತಭೇದಗಳುಂಟಾಗುತ್ತಿದ್ದರು. ಒಮ್ಮೆ ಇವಕ್ಕೆ ಕೆಲಮಟ್ಟಿಗೆ ತೀವ್ರ ಸ್ವರೂಪ ಬಂದಿತು. ಗಾಂಧೀಜಿಯವರು ಇದರ ನಿವಾರಣೆಗಾಗಿ, ಎರಡೂ ವಿಭಾಗಗಳಲ್ಲಿ ಕೆಲಸ ಮಾಡುವವರು ಹಾಗೂ ಸಂಚಾಲಕರ ಸಮ್ಮಿಲಿತ ಸಭೆಯಲ್ಲಿ ಕರೆದರು. ಆ ಕಾಲಕ್ಕೆ ಆಶ್ರಮದಲ್ಲಿ ದೇಶದ ಬೇರೆ ಬೇರೆ ಭಾಗಗಳಿಂದ, ವಿವಿಧ ವಿಧಾಯಕ ಕಾರ್ಯಗಳಲ್ಲಿ ತರಬೇತಿ ಪಡೆಯಲು ಬಂದ ಅನೇಕ ಜನರಿದ್ದರು. ಗಾಂಧೀಜಿ ಹೇಳಿದರು.

"ಇಂಥವರಲ್ಲಿ ಸಹ ಯಾರಿಗೆ ಆಸ್ಥೆಯಿದೆಯೋ ಅವರು ಸಹ ಈ ಸಭೆಗೆ ಬರಲು ಯಾವುದೇ ಆತಂಕವಿಲ್ಲ" ಎಂದು. ನಿಜವಾಗಿ ನೋಡಿದರೆ, ಇದು ಆಶ್ರಮದ ಒಳ ಆಡಳಿತಕ್ಕೆ, ಆಶ್ರಮದ ಅಂತರ್ಗತ ವ್ಯವಸ್ಥೆಗೆ ಸಂಬಂಧಪಟ್ಟ ವಿಷಯ. ಆಶ್ರಮದಲ್ಲಿ ಉಂಟಾದ ಮತ ಭೇದಗಳ ಚರ್ಚೆ ಸಕಲರ ಮುಂದೆ ಮಾಡುವ ಅವಶ್ಯಕತೆಯಾದರೂ ಏನು? ಔಚಿತ್ಯವೇನು? ಹೀಗೆಂದು ನಮ್ಮ ಪ್ರಾಕೃತ ಮನಸ್ಸಿಗೆ ಅನಿಸೀತು. ಆದರೆ ಗಾಂಧೀಜಿಯವರ ದೃಷ್ಟಿಯಲ್ಲಿ, ಅಂತರಂಗ, ಬಹಿರಂಗವೆಂಬ ಭೇದವೇ ಇಲ್ಲ. ತನ್ನ ಆಶ್ರಮದ ನಿಜವಾದ ಚಿತ್ರ ಜನರ ಮುಂದೆ ಇರಬೇಕು. ಯಥಾರ್ಥ ದರ್ಶನ ಅವರಿಗಾಗಬೇಕು. ಇದರಲ್ಲಿಯೇ ಆಶ್ರಮದ ಧ್ಯೇಯದ ರಕ್ಷಣೆಯಿದೆ. ಹೀಗಿತ್ತು ಅವರ ವಿಚಾರ ಮಾಡುವ ರೀತಿ. ಆ ಸಭೆಯಲ್ಲಿ ನಾನು ಉಪಸ್ಥಿತನಿದ್ದೆ. ಸಭೆ ನಡೆಯುವಾಗಲೂ, ಒಂದು ಸಂದರ್ಭದಲ್ಲಿ ಅವರು ನಿಷ್ಕಾರಣವಾಗಿ, ಪರಸ್ಪರ ತಪ್ಪು ತಿಳುವಳಿಕೆಗಳು ಹೇಗೆ ಉಂಟಾಗುತ್ತವೆಂಬುದನ್ನು ವಿವರಿಸಲೋಸುಗ, ತನ್ನ ಮತ್ತು ಕಸ್ತೂರಬಾ ಅವರ ನಡುವೆ ಒಮ್ಮೆ ಉಂಟಾದ ಗಂಭೀರ ತಪ್ಪು ತಿಳುವಳಿಕೆಯ ಪ್ರಸಂಗವನ್ನು ಸಹ ಸಹಜ ಶೈಲಿಯಲ್ಲಿ ಉದಹರಿಸಿದರು. (ಆ ಸಭೆಯಲ್ಲಿ ಕೂಡ ಕಸ್ತೂರಬಾ ಸಹ ಉಪಸ್ಥಿತರಿದ್ದರು.) ಹೀಗಿತ್ತು ಅವರ ಲೋಕೋತ್ತರ ಪಾರದರ್ಶಕತೆ. ಗುಪ್ತವೆಂಬುದು ಅವರ ಸ್ವಭಾವದಲ್ಲಿಯೇ ಇರಲಿಲ್ಲ. ಹೀಗಿರುವುದರಿಂದಲೇ ಅವರ ಮುಂದೆ ಅಸತ್ಯವನ್ನು ನುಡಿಯುವುದು ಅಶಕ್ಯವೇ ಆಗುತ್ತಿತ್ತು. ಆ ಉಜ್ವಲ ಸತ್ಯದ ಪ್ರಭೆಯ ಮುಂದೆ ಅಸತ್ಯವು ನಿಲ್ಲುವುದೇ ಶಕ್ಯವಿದ್ದಿಲ್ಲ.

"ಯೋಗಃ ಕರ್ಮಸು ಕೌಶಲಮ್" ಚಿತ್ತ ಸಮತೆಯನ್ನು ಸಾಧಿಸಿದ ಗಾಂಧೀಜಿಯವರಿಗೆ ಸಕಲ ಕರ್ಮಗಳಲ್ಲಿ ಕೌಶಲ್ಯವು ಸಹಜ ಸಿದ್ಧ ವಸ್ತುವಾಗಿತ್ತು. ಕೆಲ ಸಾರೆ. ಈ ಸಭೆಯಲ್ಲಿ ತಪ್ತ ವಾತಾವರಣವೂ ಉದ್ಭೂತವಾಗದಿರಲಿಲ್ಲ. ಕೆಲ ಸಮಯದಲ್ಲಿ ಗಾಂಧೀಜಿಯವರು ತಮ್ಮದೇ ಆದ, ವಿನೋದ-ಚಾತುರ್ಯದಿಂದ, ಒಮ್ಮೆಲೆ ಸಭಿಕರನ್ನು ನಗೆಗಡಲಿನಲ್ಲಿ ತೇಲಿಸಿಬಿಡುತ್ತಿದ್ದರು. ಪುನಃ ಶಾಂತ ಮನಃಸ್ಥಿತಿಯಲ್ಲಿ ಚರ್ಚೆ ಮುಂದೆ ಸಾಗಿತು.

ಇಂಥ ಅನೇಕ ಪಾವನ ಪ್ರಸಂಗಗಳನ್ನು ಸ್ಮರಿಸಿ ಚಿತ್ತವು ಒಂದು ಉಚ್ಚ ಪವಿತ್ರ ಭೂಮಿಕೆಯಲ್ಲಿ ಕೆಲ ನಿಮಿಷಗಳ ಮಟ್ಟಿಗಾದರೂ ವಿಹರಿಸಿ ದಿವ್ಯ ಪ್ರಸನ್ನತೆಯನ್ನನುಭವಿಸುವುದು.

"ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ಹೃಷ್ಯಾಮಿ ಚ ಮುಹುರ್ಮುಹುಃ"

**–ತಿಮ್ಮಪ್ಪ ನಾಯಕ**

* * *

## ೩೭. ಶ್ರೀ ಶಂಕರ ಕುರ್ತಕೋಟಿ ಇವರ ನೆನಪುಗಳು

ಎರಡನೇ ಜಾಗತಿಕ ಯುದ್ಧ ಪ್ರಾರಂಭವಾದ ಒಂದೇ ವರ್ಷದಲ್ಲಿ ಗಾಂಧೀಜಿ ಭಾರತದಲ್ಲಿ ವೈಯಕ್ತಿಕ ಸತ್ಯಾಗ್ರಹ ಪ್ರಾರಂಭಿಸಿದರು. ಈ ಚಳವಳಿಯು ೧೯೪೦ ನವೆಂಬರ ತಿಂಗಳಲ್ಲಿ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ನನಗೆ ಬಾಪೂಜಿಯವರನ್ನು ಭೇಟಿಯಾಗುವ ಒಂದು ಸುಸಂಧಿ ಒದಗಿತು. ಆ ಕಾಲಕ್ಕೆ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಕಛೇರಿಯು ಧಾರವಾಡದಲ್ಲಿ ಇತ್ತು. ದಿ॥ ಶ್ರೀಮತಿ ಕೃಷ್ಣಾಬಾಯಿ ಪಣಜೀಕರರು ಅಧ್ಯಕ್ಷರಾಗಿದ್ದರು. ನಾನು ಆ ಕಾಲಕ್ಕೆ ಎ.ಐ.ಸಿ.ಸಿ. ಸದಸ್ಯನಾಗಿದ್ದೆ. ಗಾಂಧೀಜಿಯವರು ಈ ಸತ್ಯಾಗ್ರಹವನ್ನು ತುಂಬಾ ಶಿಸ್ತಿನಿಂದ ಸಂಘಟಿಸಿ ಕೆಲವೇ ನಿಷ್ಠಾವಂತ ಕಾಂಗ್ರೆಸ್ಸಿಗರಿಗೆ ಮಾತ್ರ ಸತ್ಯಾಗ್ರಹ ಮಾಡಲು ಅನುಮತಿ ಕೊಡುತ್ತಿದ್ದರು. ನಮ್ಮ ಪ್ರಾಂತದಿಂದ ಸುಮಾರು ೫೦೦ ಕಾಂಗ್ರೆಸ್ಸಿಗರ ಯಾದಿಯನ್ನು ತಯಾರಿಸಿ ಗಾಂಧೀಜಿಯವರ ಅನುಮತಿ ಪಡೆಯಲು ಶ್ರೀಮತಿ ಪಣಜೀಕರರು ವಾರ್ಧಾಕ್ಕೆ ಹೊರಡಬೇಕಾಗಿತ್ತು. ಏನೋ ಮನೆತನದ ಅಡಚಣೆಯ ಮೂಲಕ ಅವರಿಗೆ ಹೊರಡಲು ಸಾಧ್ಯವಾಗದೇ ನನ್ನನ್ನು ಕಳಿಸುವ ನಿರ್ಧಾರಕ್ಕೆ ಬಂದರು. ಆದರೆ ನಾನು ಆಗ್ಗೆ ಕಾಂಗ್ರೆಸ್ ಸೋಷಿಯಾಲಿಸ್ಟ್ ಪಾರ್ಟಿಯ ಕಾರ್ಯದರ್ಶಿಯಾಗಿದ್ದುದರಿಂದ ಗಾಂಧೀಜಿಯವರ ಸಂಗಡ ಮಾತಾಡುವಾಗ ಅಸಂಬದ್ಧವಾಗಿ ವರ್ತಿಸುವೆನೋ ಏನೋ ಎಂಬ ಭಯ ಅವರಿಗಿತ್ತು. ಆದರೆ ನಾನು ಒಳ್ಳೆಯವನಾಗಿ ನಡೆಯುವೆನೆಂದು ವಚನಕೊಟ್ಟು ವಾರ್ಧಾಕ್ಕೆ ಹೊರಟೆ. ಅದೇ ಪ್ರಥಮ ಸಲ ಗಾಂಧೀಜಿಯ ಭೆಟ್ಟಿಗೆ ಹೊರಟಿದ್ದ ನಾನು ಸಕುತೂಹಲನಾಗಿದ್ದೆ.

ಸೇವಾಗ್ರಾಮದಲ್ಲಿ ಮೊದಲು ಮಹಾದೇವ ಭಾಯಿಯವರನ್ನು ಕಂಡು ನಾನು ಬಂದ ಕೆಲಸವನ್ನು ತಿಳಿಸಿ ಶ್ರೀಮತಿ ಪಣಜೀಕರರು ಕೊಟ್ಟ ಪತ್ರವನ್ನು ಮುಟ್ಟಿಸಿದೆ. ಅವರು ನನಗೆ ಮರುದಿನ ಮಧ್ಯಾಹ್ನ ೧೨ ಗಂಟೆಗೆ ಬರಲು ತಿಳಿಸಿದರು.

ಮರುದಿನ ಸರಿಯಾಗಿ ೧೨ ಗಂಟೆಗೆ ಸೇವಾಗ್ರಾಮಕ್ಕೆ ಹೋಗಿ ಮಹಾದೇವ ಭಾಯಿಯವರನ್ನು ಕಂಡು ನಾನು ಒಯ್ದ ಸತ್ಯಾಗ್ರಹಿಗಳ ಯಾದಿಯನ್ನು ಮತ್ತು ಶ್ರೀಮತಿ ಪಣಜೀಕರರು ಕೊಟ್ಟ ಕೆಲವು ಪ್ರಶ್ನೆಗಳನ್ನು ಅವರಿಗೆ ಮುಟ್ಟಿಸಿದೆ. ಕೆಲಸ ಪ್ರಾರಂಭವಾಯಿತು. ಅವರು ನನಗೆ ಅಲ್ಲಿಯೇ ಕೂಡಲು ಹೇಳಿ ಗಾಂಧೀಜಿಯವರ ಕಡೆಗೆ ಹೋದರು.

ಎರಡು ಗಂಟೆಗಳಲ್ಲಿ ನನಗೆ ಬೇಕಾದ ಎಲ್ಲ ವಿಷಯಗಳಲ್ಲಿ ಗಾಂಧೀಜಿಯವರ ಸಲಹೆ ಪಡೆದು ಉತ್ತರಗಳನ್ನು ತಯಾರಿಸಿ, ಟೈಪ್ ಮಾಡಿ, ಶ್ರೀಮತಿ ಪಣಜೀಕರರಿಗೆ ಪತ್ರ ಬರೆದು ಮಹಾದೇವ ಭಾಯಿಯವರು ನನ್ನನ್ನು ಕರೆದರು. "ಇದನ್ನು ನಿಮ್ಮ ಅಧ್ಯಕ್ಷರಿಗೆ ಕೊಡಿ. ಸತ್ಯಾಗ್ರಹಿಗಳ ಪಟ್ಟಿಯನ್ನು ಪರಿಶೀಲಿಸಿ ಆಮೇಲೆ ಕಳಿಸುವೆವು. ಹೇಗೂ ಕ್ರಿಸ್ಮಸ್ ವಾರದಲ್ಲಿ ಸತ್ಯಾಗ್ರಹ ನಡೆಯುವುದಿಲ್ಲ. ಇನ್ನು ನೀವು ಹೋಗಬಹುದು" ಎಂದರು.

ಆಯಿತು, ನಮಸ್ಕಾರ ಮಾಡಿದೆ. ಇಷ್ಟು ದೂರ ಬಂದು ಮಹಾತ್ಮರೊಡನೆ ಸಂಭಾಷಿಸದೆ ಹೋಗಬೇಕಾಯಿತು. ಆದರೆ ಮಹಾದೇವ ಭಾಯಿಯವರಿಗೆ ನನಗಾದ ನಿರಾಶೆ ತಿಳಿಯಿತೋ ಏನೋ. ಅವರು ನನಗೆ "ನೀವು ಬಾಪೂಜಿಯನ್ನು ಕಾಣಲು ಆಶಿಸುತ್ತೀರಾ?" ಅಂದರು.

"ಹೌದು ಸಾಧ್ಯವಿದ್ದರೆ" ಎಂದು ಉತ್ತರಕೊಟ್ಟೆ. ಅವರು "ಸ್ವಲ್ಪ ತಾಳಿ" ಎಂದು ಒಳಗೆ ಹೋಗಿ ಕೆಲವೇ ನಿಮಿಷಗಳಲ್ಲಿ ಮರಳೀ ಬಂದು ನನ್ನನ್ನು ಬಾಪೂಜಿಯವರ ಕುಟೀರಕ್ಕೆ ಕರೆದುಕೊಂಡು ಹೋದರು.

ಬಾಪೂಜಿ ಶುಭ್ರ ಬಿಳಿ ಖಾದಿ ಆವರಣ ಹಾಕಿದ ದಿಂಬಿನ ಮೇಲೆ ಒರಗಿದ್ದರು. ಶ್ರೀಮತಿ ಅಮೃತಕೌರ ಮತ್ತು ಒಬ್ಬ ಬಂಗಾಲಿ ಡಾಕ್ಟರರು ಅವರ ಎದುರಿನಲ್ಲಿ ಕುಳಿತು ಮಾತನಾಡುತ್ತಿದ್ದರು. ಮಹಾದೇವ ಭಾಯಿಯವರ ಗುಜರಾತಿ ಭಾಷೆಯಲ್ಲಿ "ಕರ್ನಾಟಕದಿಂದ ಬಂದ ಕುರ್ತಕೋಟಿಯವರು ಇವರೇ" ಎಂದು ತಿಳಿಸಿ ನಮಗೆ ಕೂಡಲು ಹೇಳಿದರು.

ನನ್ನ ಜೀವನದಲ್ಲಿ ಒಂದು ಅಪೂರ್ವ ಪ್ರಸಂಗವೇ ಇದು. ಮಹಾತ್ಮಾ ಗಾಂಧೀಜಿಯಂಥ ಜಗತ್ಪ್ರಸಿದ್ಧ ಮಹಾವ್ಯಕ್ತಿಯ ಹತ್ತಿರ ಕುಳಿತು ಮಾತನಾಡುವ ಧೈರ್ಯ ನನಗೆ ಬಂದಿತೆ? ಅವರು ಕೇಳುವ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡಬಲ್ಲೆನೇ? ಸಿಕ್ಕಿಬಿದ್ದರೆ ಹೇಗೆ? ಎಂಬ ಭಯ ಕೊರೆಯುತ್ತಿತ್ತು. ಅಷ್ಟರಲ್ಲಿ ಗಾಂಧೀಜಿಯವರು "ಹಿಂದೀ ಬರುವುದೇ?" ಎಂದು ಕೇಳಿದರು.

"ಸರಿಯಾಗಿ ಬರುವುದಿಲ್ಲ" ಎಂದು ನಾನು ಉತ್ತರಿಸಿದೆ.

ಇಂಗ್ಲೀಷಿನಲ್ಲಿ ಅವರು ಕೇಳಿದರು : "ನೀನು ಯಾವ ಉದ್ಯೋಗ ಮಾಡುತ್ತಿರುವಿರಿ?"

"ನಾನು ಕಾಂಗ್ರೆಸ್ ಕಮಿಟಿಯ ಸೆಕ್ರೆಟರಿ ಇದ್ದೇನೆ".

ಗಾಂಧೀಜಿ, "ಕಾಂಗ್ರೆಸ್ ಕೆಲಸ ಉದ್ಯೋಗವಲ್ಲ ನಿನ್ನ ಹೊಟ್ಟೆಗೆ ಉದ್ಯೋಗವೇನು? ಕಾಂಗ್ರೆಸ್ ಕಮಿಟಿಯಿಂದ ಸಂಬಳ ಪಡೆಯುತ್ತೀಯೇ?"

ನಾನು : "ಇಲ್ಲ. ನನ್ನ ವೇಳೆಯೆಲ್ಲ ಕಾಂಗ್ರೆಸ್ ಕೆಲಸದಲ್ಲಿ ಕಳೆಯುತ್ತದೆ. ಒಬ್ಬನೇ ಇದ್ದೇನೆ. ನನ್ನ ಅಣ್ಣ ಹೊಟ್ಟೆ ಬಟ್ಟೆ ನೋಡುತ್ತಾನೆ" ಎಂದೆ.

ಆಗ ಅಡ್ಡಾಗಿದ್ದ ಬಾಪೂಜಿಯವರು ಎದ್ದು ಕುಳಿತು ನಗುತ್ತಾ "ಇದು ಶುದ್ಧ ತಪ್ಪು. ಪ್ರತಿಯೊಬ್ಬ ನಾಗರಿಕನೂ ಹೊಟ್ಟೆಗಾಗಿ ಒಂದು ಉದ್ಯೋಗವನ್ನು ಕಲಿಯಬೇಕು. ನೀನು ಹೀಗೆ ಉಡಾಳನಂತೆ ಬರೇ ಕಾಂಗ್ರೆಸ್ ಕೆಲಸ ಅನ್ನಬೇಡ. ನೇಯ್ಗೆ, ನೂಲುವುದು. ಬಡಿಗತನ. ಚರ್ಮಗಾರಿಕೆ ಇಂಥ ಯಾವದಾದರೂ ಉದ್ಯೋಗ ಮಾಡಿ ನೀನು ಹೊಟ್ಟೆಗಾಗಿ ಗಳಿಸಬೇಕು" ಎಂದರು. ಮುಂದೆ ಅವರು" ೧೯೩೦-೩೨ ಚಳವಳಿಯಲ್ಲಿ ಜೈಲಿಗೆ ಹೋಗಿದ್ದೀಯೋ?" ಎಂದು ಕೇಳಿದರು.

ನಾನು : "ಹೌದು, ನಾನು ಯರವಾಡಾ ಕ್ಯಾಂಪ್ ಜೈಲಿನಲ್ಲಿ ಇದ್ದೆ. ಒಂದು ವರ್ಷ ಶಿಕ್ಷೆಯಾಗಿತ್ತು."

ಅವರು : "ಕ್ಯಾಂಪಿನ ರಾಜಕೀಯ ಕೈದಿಗಳು ಹೊರಗಿನಿಂದ ಕದ್ದು ದ್ರಾಕ್ಷಿ, ಗೋಡಂಬಿ, ಬೀಡಿ, ಸಿಗರೇಟ್, ತಂಬಾಕು ಮುಂತಾದವುಗಳನ್ನು ತರುತ್ತಿದ್ದರೆಂದು ಜೈಲ್ ಅಧಿಕಾರಿಗಳು ನನಗೆ ಹೇಳಿದರು. ಇದು ನಿಜ ಏನು?"

ನಾನು ಗೊಂದಲದಲ್ಲಿ ಬಿದ್ದೆ. ಆದರೂ ಆ ಸತ್ಯಪೂಜಕ ಮಹಾಪುರುಷನ ಮುಂದೆ ಸುಳ್ಳು ಹೇಳುವದು ಹೇಗೆ? "ಕ್ಯಾಂಪಿನ ರಾಜಕೀಯ ಕೈದಿಗಳ ಕಳವಿನಿಂದ ಹೊರಗಿನ ಸಾಮಾನು ತರಿಸಿ ತಿನ್ನುತ್ತಿದ್ದರು. ಬೀಡಿ ಸಿಗರೇಟುಗಳೂ ಬೇಕಾದಷ್ಟು ಬರುತ್ತಿದ್ದವು" ಎಂದೆ.

ಮತ್ತೆ ಗಾಂಧೀಜಿಯವರು. "ಈ ಕೆಲಸಕ್ಕೆ ನೀವು ಜೈಲ್ ಪೋಲೀಸರನ್ನೇ ಉಪಯೋಗಿಸಿ ಅವರಿಗೆ ಅವರ ಪಾಲು ಮುಟ್ಟಿಸುತ್ತಿದ್ದಿರಲ್ಲವೆ?" ಎಂದು ಕೇಳಿದರು.

ನಾನು : 'ಹೌದು, ಇದು ನಿಜ'

ಗಾಂಧೀಜಿ : ನೀನು ಬೀಡಿ ಸಿಗರೇಟು ಸೇದುತ್ತಿಯ?

ನಾನು : "ಹೌದು, ಬೀಡಿಯಲ್ಲ, ಸಿಗರೇಟು ಸೇದುತ್ತೇನೆ."

ಬಾಪೂಜಿಯವರು ಗಟ್ಟಿಯಾಗಿ ನಕ್ಕರು. ಮತ್ತು ಅಂದರು – "ನಾಳೆ ನೀನು ಸತ್ಯಾಗ್ರಹಿಯಾಗಿ ಜೈಲಿಗೆ ಹೋದ ಮೇಲೆ ಅಲ್ಲಿ ಸಿಗರೇಟು ಸೇದಲು ಏನು ಮಾಡುವಿ? ಹೊರಗಿನಿಂದ ಕದ್ದು ತರಿಸಿ ಸೇದುವಿಯಾ? ಹೇಳು."

ನಾನು "ನನ್ನ ಮಟ್ಟಿಗೆ ಸೇದುವುದಿಲ್ಲ' ಎಂದು ವಚನ ಕೊಟ್ಟೆ. ಆಮೇಲೆ ಬಾಪೂಜಿಯವರು ವೈಯಕ್ತಿಕ ಸತ್ಯಾಗ್ರಹದ ಮಹತ್ವವನ್ನು ಈ ರೀತಿ ಹೇಳಿದರು."

"ಇಲ್ಲಿ ನೋಡು, ನಿಮ್ಮ ಅಧ್ಯಕ್ಷೆ ಶ್ರೀಮತಿ ಪಣಜೀಕರರಿಗೆ ನನ್ನ ಆದೇಶ ಮುಟ್ಟಿಸು. ನನಗೆ ಜೈಲು ತುಂಬುವದು ಬೇಕಾಗಿಲ್ಲ. ಕಳ್ಳರು, ತುಡುಗರು, ದರೋಡೆಗಾರರು, ಇವರಿಂದ ಈಗಾಗಲೇ ಜೇಲುಗಳು ತುಂಬಿವೆ. ಈ ಸಾರೆ ನಿಜವಾದ ಸತ್ಯಾಗ್ರಹಿಗಳು ಜೇಲಿನಲ್ಲಿ ಇರಬೇಕು. ಪ್ರತಿಯೊಂದು ಊರಲ್ಲಿ, ಹಳ್ಳಿಯಲ್ಲಿ, ಓಣಿಯಲ್ಲಿ ಇರುವ ಸದಾಚಾರಿ ಚಾರಿತ್ರ್ಯವಂತ, ಜನರ ಆದರಕ್ಕೆ ಪಾತ್ರನಾದ ವ್ಯಕ್ತಿ ಸರಕಾರದ ಧೋರಣೆಯನ್ನು ಪ್ರತಿಭಟಿಸಿ, ಜೇಲಿಗೆ ಹೋಗಬೇಕು. ಆ ಓಣಿಯ ಅಥವಾ ಹಳ್ಳಿಯ ಜನರಲ್ಲಿ ಅವನಿಗಾಗಿ ಹೃದಯ ಮಿಡುಕಬೇಕು. ಮನಸ್ಸು ಮರುಗಬೇಕು. ಅದೇ ಒಂದು ಅದ್ಭುತ ಶಕ್ತಿ. ಇಲ್ಲವಾದರೆ ಸತ್ಯಾಗ್ರಹದ ನೆವಮಾಡಿ ಹೆಸರು ಗಳಿಸಲು, ಮುಂದೆ ಮುಖಂಡರಾಗಲು ಸಮಾಜ ವಿಘಾತುಕ ವ್ಯಕ್ತಿಗಳು ಜೇಲಿಗೆ ಹೋದರೆ, ಆ ಪ್ರದೇಶದ ಜನರು ಒಳ್ಳೆಯದೇ ಆಯಿತು, ಒಂದು ಪೀಡೆ ತೊಲಗಿತು, ಎಂದು ಸಂತೋಷ ಪಡಬಹುದು. ಸರಕಾರದ ಮೇಲೆ ಯಾವ ಪ್ರಭಾವವೂ ಬೀಳಲಿಕ್ಕಿಲ್ಲ. ಚಿಕ್ಕ ಮಕ್ಕಳನ್ನು ಮತ್ತು ವಯೋವೃದ್ಧರನ್ನು, ಜಡ್ಡಿನಿಂದ ಬಳಲುವ ನಿರುದ್ಯೋಗಿ ವ್ಯಕ್ತಿಗಳನ್ನು ಕಳಿಸತಕ್ಕದ್ದಲ್ಲ. ಅವರು ಸತ್ಯಾಗ್ರಹಿಗಳಾಗಲಾರರು. ನಿಮ್ಮ ಅಧ್ಯಕ್ಷರಿಗೆ ಎಚ್ಚರದಿಂದ ಜನರನ್ನು ಆರಿಸಲು ಹೇಳು. ಈ ಸತ್ಯಾಗ್ರಹಕ್ಕೂ ಸ್ತ್ರೀಯರ ಸಹಾಯ ನಮಗೆ ಹೆಚ್ಚು ಬೇಕು. ಅವರಲ್ಲಿ ನಿಜ ಸತ್ಯಾಗ್ರಹಿಗಳಾಗುವ ಗುಣಗಳು ಹೆಚ್ಚಿವೆ. ಕರ್ನಾಟಕದಲ್ಲಿ ಈ ಚಳವಳಿಯ ಮುಖಂಡತ್ವ ಒಬ್ಬ ಮಹಿಳೆಯ ಕೈಯಲ್ಲಿದೆ. ಅದಕ್ಕೆ ಪೂರ್ಣ ಯಶ ಸಿಗಲಿ. ಜೇಲ್ ಅಧಿಕಾರಿಗಳಿಂದ ನನಗೆ ಯಾವುದೇ ತಕರಾರು ಬರಬಾರದು. ಅದರಂತೆ ನೀವೆಲ್ಲರೂ ವರ್ತಿಸಬೇಕು.

**–ಶ್ರೀ ಶಂಕರ ಕುರ್ತಕೋಟಿ**

* * *

## ೩೮. ಶ್ರೀ ಅನಂತರಾವ್ ಚಿಕ್ಕೋಡಿ ಅವರ ನೆನಹು

ನೆಹರೂ ಕುಟುಂಬದ ವಿಷಯವಾಗಿ, ಅದರಲ್ಲಿಯೂ ಪಂಡಿತ ಜವಾಹರಲಾಲರ ವಿಷಯವಾಗಿ ಗಾಂಧಿಯವರ ಅಂತಃಕರಣದಲ್ಲಿ ಅದೆಷ್ಟು ಆತ್ಮೀಯತೆಯು ಮನೆ ಮಾಡಿಕೊಂಡಿತ್ತೆಂಬುದು ೧೯೨೪ರ ಬೆಳಗಾಂವಿ ಕಾಂಗ್ರೆಸ್ ಅಧಿವೇಶನದಲ್ಲಿ ಕಾಲಕಾಲಕ್ಕೆ ಕಂಡುಬಂದಿತು. ಇದೇ ಅಧಿವೇಶನದಲ್ಲಿ ಮಹಾತ್ಮರು ಜವಾಹರಲಾಲರನ್ನು ಬಲವಂತಪಡಿಸಿ ಜನರಲ್ ಸೆಕ್ರೆಟರಿ ಅಥವಾ ಪ್ರಧಾನ ಕಾರ್ಯದರ್ಶಿ ಪದವನ್ನು ಸ್ವೀಕರಿಸಹಚ್ಚಿದರು. ಜವಾಹರಲಾಲರನ್ನು ತಾವು ಹೊಟ್ಟೆಯ ಮಗನಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿರುವುದು, ಬರೀ ಅವರನ್ನು ದುಡಿಸಿಕೊಳ್ಳಬೇಕೆಂಬ ದುರದ್ದೇಶದಿಂದಲ್ಲವೆಂಬುದನ್ನು ಹೇಳುತ್ತ. ಹೇಳುತ್ತ ಗಾಂಧೀ ಮಹಾತ್ಮರು ಹೀಗೆಂದು ಭವಿಷ್ಯವಾಣಿಯನ್ನೂ ನುಡಿದರು : "ಜವಾಹರಲಾಲಕೀ ಪೂಜಾ ಮೈ ಕ್ಯಾ ಕರನೇವಾಲಾ ಹೂಂ? ಉಸಕೀ ಪೂಜಾ ತೋ ಜಗತ್ ಕರೇಗಾ, ಉಸ್‌ಪರ್ ಪುಷ್ಪವೃಷ್ಟಿ ಕರೇಗಾ;" 'ಜವಾಹರಲಾಲರ ಪೂಜೆಯನ್ನು ನಾನೇನು ಮಾಡಬಲ್ಲೆ? ಜಗತ್ತೇ ಅವರ ಪೂಜೆ ಮಾಡುವದು, ಅವರ ಮೇಲೆ ಹೂವಿನ ಮಳೆ ಸುರಿಸುವದು.' ವಿಶಾಲ ವಿಶ್ವದಲ್ಲಿ ಎಲ್ಲಿ ಹೋದಲ್ಲಿ ಜವಾಹರಲಾಲರ ಮೇಲೆ ಪುಷ್ಪ ವೃಷ್ಟಿಯಾದುದನ್ನು ಕಣ್ಣಾರೆ ಕಂಡಬಳಿಕ ಬೆಳಗಾವಿಯ ಕಾಂಗ್ರೆಸ್ಸಿನಲ್ಲಿ ಅಂದು ಮಹಾತ್ಮರು ನುಡಿದ ಭವಿಷ್ಯವಾಣಿಯು ದೇವವಾಣಿಯೆಂದೇ ಮನವರಿಕೆಯಾಗುವುದಿಲ್ಲವೆ? ಗಾಂಧೀಯವರು ವ್ಯಾಸಪೀಠದ ಮೇಲೆ ಕುಳಿತು ಜವಾಹರಲಾಲರ ಬಗ್ಗೆ ಹೀಗೆ ನುಡಿಯುತ್ತಿರುವಾಗ ಅಲ್ಲಿ ಸಭಾಪೀಠದಲ್ಲಿ ಮಂಡಿಸಿದ್ದ ಪಂಡಿತ ಮೋತೀಲಾಲರ ಕಣ್ಣುಗಳೊಳಗಿಂದ ಗಂಗೆ-ಯಮುನೆಯರು ಹೊರಸೂಸಿ ಹರಿಯ ತೊಡಗಿದರು. ಕೃತಜ್ಞತೆಯ ಕಣ್ಣೀರು.

ಪ್ರತಿನಿಧಿಗಳೆಲ್ಲ ಪರವಾಗಿ ಅಧ್ಯಕ್ಷರಿಗೆ ವಂದನೆಗಳನ್ನರ್ಪಿಸುವ ಗೊತ್ತುವಳಿಯನ್ನು ಮಂಡಿಸುತ್ತ ಮೋತೀಲಾಲರು, ಗಾಂಧೀಜಿಯವರ ಸಮ್ಮುಖದಲ್ಲಿ ಸ್ವೀಕರಿಸಿರುವ ಗೊತ್ತುವಳಿಗಳನ್ನು ಆಚರಣೆಗೆ ತಂದರೆ ಮಾತ್ರ ಅವರಿಗೆ ನಿಜವಾದ ವಂದನೆಗಳನ್ನರ್ಪಿಸಿ ದಂತಾಗುವುದೆಂದು ಹೇಳಿದರು. ರಾಷ್ಟ್ರಗೀತೆಯಾದ ಬಳಿಕ ಮಹಾತ್ಮ ಗಾಂಧೀಯವರ ಹಾಗೂ ಭಾರತಮಾತೆ ಕರ್ನಾಟಕ ಮಾತೆಯರ ಜಯ ಜಯಕಾರದೊಂದಿಗೆ ಬೆಳಗಾಂವಿ ಕಾಂಗ್ರೆಸ್ಸಿನ ಈ ಐತಿಹಾಸಿಕ ಅಧಿವೇಶನವು ೨೭ನೆಯ ದಿನಾಂಕ ಶನಿವಾರದಂದು ಸಾಯಂಕಾಲ ೫-೪೫ಕ್ಕೆ ಮುಕ್ತಾಯಗೊಂಡಿತು.

**ಸ್ವಯಂ ಸೇವಕರ ಸಂಚಲನ ವೀಕ್ಷಣೆ:**

ಮರುದಿನ ಮುಂಜಾವಿನಲ್ಲಿ ನಮ್ಮ ಸ್ವಯಂ ಸೇವಕ ದಲದ ಸಂಚಲನವನ್ನು (March past) ಏರ್ಪಡಿಸಲಾಗಿತ್ತು. ಈ ಸಂಚಲನವನ್ನು ವೀಕ್ಷಿಸುವುದಕ್ಕಾಗಿ ಮಹಾತ್ಮರೊಂದಿಗೆ ಹಲವುಜನ ಧುರೀಣರು ಆಗಮಿಸಿದ್ದರು. ಗಾಂಧೀಯವರು ಮತ್ತು ಪಂಡಿತ ಮೋತೀಲಾಲರು ಇವರಿಬ್ಬರ ಸಲುವಾಗಿ ಮಾತ್ರ ಆ ಬಯಲಿನಲ್ಲಿ ಖುರ್ಚಿಗಳನ್ನಿಡಲಾಗಿತ್ತು. ಉಳಿದೆಲ್ಲ ಮುಖಂಡರು ಹಿಂಬದಿಯಲ್ಲಿ ನಿಂತುಕೊಂಡಿದ್ದರು. ಜವಾಹರಲಾಲರು. ಅವರ ಪತ್ನಿ

ಸೌ॥ ಕಮಲಾ ನೆಹರು, ಮಹಮ್ಮದ ಆಲಿ, ಡಾ॥ ಕಿಚಲು ಇವರೇ ಮೊದಲಾಗಿ ಎಲ್ಲರೂ ನಿಂತುಕೊಂಡಿದ್ದರು. ಅಂಥ ಚಳವಳಿಯ ಹೊತ್ತಿನಲ್ಲಿಯೂ ಸಾವಿರಾರು ಜನರು ಸಂಚಲವನ್ನು ನಿರೀಕ್ಷಿಸಲು ನೆರೆದಿದ್ದರು. ಮಹಾತ್ಮರ ಮತ್ತು ಮೋತೀಲಾಲರ ಎದುರಿನಲ್ಲಿ ಒಂದು ದೊಡ್ಡ ಮೇಜನ್ನಿಡಲಾಗಿತ್ತು. ಆ ಮೇಜಿನ ಮೇಲೆ ಆರೇಳು ವರ್ಷದ ಚುರುಕಾದ ಹುಡುಗಿಯೊಬ್ಬಳು ಕುಳಿತುಕೊಂಡಿದ್ದಳು. ಇವಳಾರೋ ಪಾರ್ಸಿ ಗೃಹಸ್ಥರ ಮಗಳಿರಬೇಕೆಂದು ಅಲ್ಲಿ ನೆರೆದಿದ್ದ ಜನಸಾಮಾನ್ಯರು ತಮ್ಮೊಳಗೇ ಮಾತಾಡಿಕೊಳ್ಳುತ್ತಲಿದ್ದರು. ಆ ಕನ್ಯೆಯ ವೇಷ-ಭೂಷಣ ಮತ್ತು ಕೇಶಭೂಷೆ ಇವೆಲ್ಲವೂ ಬೆಳಗಾಂವಿಯೊಳಗಿನ ಪಾರ್ಸೀ ಹುಡುಗಿಯರಂತೆ ಕಾಣುತ್ತಿದುದರಿಂದ ಅವರು ಹಾಗೆ ಭಾವಿಸಿರಬೇಕು. ಮಹಾತ್ಮರು ತಮ್ಮ ಮುಖವನ್ನು ಮುಂದೆ ಚಾಚಿ ಆ ಹುಡುಗಿಗೆ ಒಂದೆ ಸವನೆ ಮುತ್ತು ಕೊಡುತ್ತಲಿದ್ದರು. ಗಾಂಧೀಯವರು ಮುದ್ದು ಕೊಟ್ಟಕೂಡಲೇ ಆ ಹುಡುಗಿ ಗಟ್ಟಿಯಾಗಿ ನಗುತ್ತಲಿದ್ದಳು. ಆವಳು ನಕ್ಕ ನಕ್ಕಂತೆ ಮಹಾತ್ಮರು ಹೆಚ್ಚು ಹೆಚ್ಚಾಗಿ ಮುದ್ದುಕೊಡುತ್ತಿದ್ದರು. ನಮ್ಮ ಸಂಚಲನವೇನೋ ನಡೆದಿತ್ತು. ಆದರೆ ಜನರ ಲಕ್ಷ್ಯವೆಲ್ಲ ಗಾಂಧೀಯವರ ಆ ಚಿನ್ನಾಟದ ಕಡೆಗಿತ್ತು. ಮಹಾತ್ಮರು ಮತ್ತು ಆ ಹುಡುಗಿಯು ನಗುತ್ತಿರುವಾಗ ಪಂಡಿತ ಮೋತೀಲಾಲರೂ ಗಟ್ಟಿಯಾಗಿ ನಗುತ್ತಲಿದ್ದರು. ಹಿಂದೆ ನಿಂತಿದ್ದ ಜವಾಹರಲಾಲರು ಮತ್ತು ಕಮಲಾ ನೆಹರು ಅವರೂ ನಗುತ್ತಲಿದ್ದರು. ಹೀಗೆ ಎಲ್ಲರನ್ನೂ ನಗಿಸುತ್ತಲಿದ್ದ ಆ ಹುಡುಗಿ ಯಾರು? ಮುಂದೆ ಕಾಂಗ್ರೆಸ್ಸಿನ ಅಧ್ಯಕ್ಷೆಯಾಗಿ ಇಂದು ಭಾರತ ರಾಷ್ಟ್ರದ ಪ್ರಧಾನಿಯಾಗಿರುವ ಶ್ರೀಮತಿ ಇಂದಿರಾ ಗಾಂಧೀಯವರೇ ಅಂದಿನ ಆ ಹಸುಳೆ.

ಬೆಳಗಾಂವಿ ಕಾಂಗ್ರೆಸ್ ಅಧಿವೇಶನದ ಕಾರ್ಯಕಲಾಪವನ್ನು ಮುಗಿಸಿ ಮಹಾತ್ಮರು ಮರಳಿ ಹೊರಟಾಗಲೂ ಅವರಿಗೆ ಮಾನವಂದನೆಯನ್ನರ್ಪಿಸುವದಕ್ಕಾಗಿ ನಮ್ಮ ಕವಾಯಿತು ಇಡಲಾಗಿತ್ತು. ಗಂಗಾಧರರಾಯರ ಸಮೇತರಾಗಿ ಮಹಾತ್ಮರು ಕೂತು ಹೊರಟಿದ್ದ ಕಾರು ನನ್ನ ಬಳಿಯಿಂದ ಹಾದು ಹೋಗುವಾಗ ಸೈನಿಕ ಪದ್ಧತಿಯಂತೆ ನಾನಾವರೂ ಅವರಿಗೆ ಸಲಾಮು ಹೊಡೆದಿದ್ದೆ.

**–ಶ್ರೀ ಅನಂತರಾವ್ ಚಿಕ್ಕೋಡಿ**

* * *

## ೨೯. ಶ್ರೀ ಆರ್.ಎಸ್. ಹುಕ್ಕೇರಿಕರರ ನೆನಹು

ಉತ್ತರ ಕರ್ನಾಟಕದ ಪ್ರಸಿದ್ಧ ವಿಧಾಯಕ ಕಾರ್ಯಕರ್ತರೂ ಶಿಕ್ಷಣ ಕ್ಷೇತ್ರದಲ್ಲಿ ತ್ರಿಕರಣ ಪೂರ್ವಕ ದುಡಿದವರೂ ಆದ ದಿ॥ ಆರ್.ಎಸ್. ಹುಕ್ಕೇರಿಕರ ಅವರ ಸಂದರ್ಶನವೊಂದನ್ನು ಧಾರವಾಡ ಆಕಾಶವಾಣಿ ಕೇಂದ್ರದವರು ದಿ॥ ೩೦-೧-೧೯೬೪ರಂದು ಚಿತ್ರಿಸಿದ್ದನ್ನು, ಅವರ ಕೃಪೆಯಿಂದ ಪಡೆದುಕೊಂಡು ಇಲ್ಲಿ ಪ್ರಸಿದ್ಧೀಕರಿಸಲಾಗಿದೆ.

ಪ್ರಶ್ನೆ : ಉತ್ತರ ಕರ್ನಾಟಕಕ್ಕೆ ಗಾಂಧೀಜಿಯವರು ಭೇಟಿಕೊಟ್ಟ ಸಂದರ್ಭಗಳು ತಮಗೆ ನೆನಪಿನಲ್ಲಿರಬೇಕು?

ಉತ್ತರ: ಹೌದು ಅಂಥಾ ಅನೇಕ ಸಂದರ್ಭಗಳು ನನಗೆ ಗೊತ್ತುಂಟು.

ಪ್ರಶ್ನೆ : ಗಾಂಧೀಜಿಯವರು ಬೆಳಗಾವಿಗೆ ಯಾವ ಸಂದರ್ಭದಲ್ಲಿ ಬಂದಿದ್ದರು?

ಉತ್ತರ: ಬೆಳಗಾವಿಯಲ್ಲಿ ೧೯೧೬ರಲ್ಲಿ ಮುಂಬಯಿ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ವಾರ್ಷಿಕ ಸಮ್ಮೇಳನ ಕೂಡುವದಿತ್ತು. ಆ ಸಂದರ್ಭಕ್ಕಾಗಿ ಮಹಾತ್ಮಾ ಗಾಂಧೀಯವರು ಬರಬೇಕೆಂದು ದಿ॥ ದೇಶಪಾಂಡೆ ಗಂಗಾಧರರಾಯರು ಬಹಳ ಮುಂಚಿತವಾಗಿ ಅವರಿಗೆ ಆಮಂತ್ರಣ ಕೊಟ್ಟಿದ್ದರು.

ಪ್ರಶ್ನೆ : ಆ ಸಂದರ್ಭದಲ್ಲಿ ನೀವೂ ಇದ್ದಿರೇನು?

ಉತ್ತರ: ಹೌದು ನಾ ಅಲ್ಲೇ ಇದ್ದೆ ಆದರೆ ಮಂದಗಾಮಿ ಮತ್ತು ಪುರೋಗಾಮಿ(ಮಾಡ್ರೇಟ ಆ್ಯಂಡ ಎಸ್ಟ್ರೆಮಿಸ್ಟ್) ಹೀಗೆ ಎರಡು ಗುಂಪುಗಳು ಕಾಂಗ್ರೆಸ್ಸಿನಲ್ಲಿ ಇದ್ದು. ಆ ಮಂದಗಾಮಿ ಗುಂಪಿನವರು ಈ ಸಭೆಗೆ ಬರಬಾರದೆಂದು ತಮ್ಮೊಳಗೆ ಮಾತಾಡಿಕೊಂಡಿದ್ದರು. ಮಂದಗಾಮಿ ಪಕ್ಷದ ಮುಖಂಡರಾದ ನಾಮದಾರ ಗೋಖಲೆಯವರು, ಗಾಂಧೀಜಿ ಯವರ ಗುರುಗಳೆಂದು ಹೇಳಲ್ಪಡುತ್ತದೆ. ಅದಕ್ಕಾಗಿ ಮಂದಗಾಮಿ ಪಕ್ಷದವರೂ ಬರೂದಿಲ್ಲ, ಅವರ ಗುರುಗಳು ಬರೂದಿಲ್ಲ ಅಂದಮೇಲೆ ಗಾಂಧೀಯವರೂ ಬರುತ್ತಾರೋ ಇಲ್ಲವೋ ಅಂತ ಗಂಗಾಧರರಾಯರಿಗೆ ಸಂಶಯ ಬಂತು. ಅದಕ್ಕಾಗಿ ಗಂಗಾಧರರಾಯರು ಮತ್ತೊಂದು ಪತ್ರ ಬರೆದರು. ನೀವು ಖಂಡಿತವಾಗಿ ಬರುತ್ತೀರಾ? ಎಂದು. ಒಂದು ಕಾರ್ಡಿನಮೇಲೆ ಒಂದೇ ವಾಕ್ಯದಲ್ಲಿ ಉತ್ತರಿಸಿದರು. ಅದೇನು ಅಂದರೆ – "Nothing but death can prevent me from going to Belgaum and attending the conference" ಈ ಸಮ್ಮೇಳನಕ್ಕೆ ಬಾರದಿರಲಿಕ್ಕೆ ನನ್ನ ಮರಣ ಒಂದೇ ನನಗೆ ತಡೆಗಟ್ಟಬಹುದು. ಇದೇ ಆ ಸಂದರ್ಭ.

ಪ್ರಶ್ನೆ : ಮತ್ತೆ ವಿಜಾಪುರಕ್ಕೆ ಏನಾದರೂ ಗಾಂಧೀಜಿಯವರು ಭೆಟ್ಟಿ ಕೊಟ್ಟಿದ್ದರೆ?

ಉತ್ತರ: ಹೌದು ೧೯೧೯ರಲ್ಲಿ ಮುಂಬಯಿ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ವಾರ್ಷಿಕ ಅಧಿವೇಶನವು ವಿಜಾಪುರದಲ್ಲಿ ಸೇರಿತ್ತು. ದಿ॥ ವಿಠಲಬಾಯಿ ಪಟೇಲರು ಆ ಅಧಿವೇಶನದ ಅಧ್ಯಕ್ಷರಾಗಿದ್ದರು. ಮಹಾತ್ಮಾ ಗಾಂಧಿಯವರು ಆ ಸಭೆಗೆ ಆಮಂತ್ರಿಸಲ್ಪಟ್ಟರು. ಕೊನೆಯ ದಿನ, ಸ್ವಾಗತ ಸಮಿತಿಯ ಸದಸ್ಯರು ಹರಿಜನರಿಗೆ ಪ್ರತ್ಯೇಕ ಒಂದು ಭಾಷಣ ಮಾಡಬೇಕೆಂದು ಗಾಂಧೀಜಿಯವರಿಗೆ ಬಿನ್ನವಿಸಿಕೊಂಡರು. ಅದಕ್ಕೆ ಗಾಂಧೀಯವರು ಒಪ್ಪಿಕೊಂಡರು. ಸಾಯಂಕಾಲ ಸರಿಯಾಗಿ ಗಾಂಧೀಜಿ ಅವರು ಸಭೆಗೆ ಬಂದರು. ಇದರಲ್ಲಿ ಯಾರಾದರೂ ಹರಿಜನರಿರುವರೋ ಎಂದು ಮೂರುಬಾರಿ ಕೂಗಿದರು. ಅಲ್ಲಿ ಯಾರೂ ಹರಿಜನರಿರಲಿಲ್ಲ. ಯಾರೂ ಕೈ ಎತ್ತಲಿಲ್ಲ. ಅದನ್ನು ನೋಡಿ ಅವರಿಗೆ ಬಹಳ ವ್ಯಸನವಾಯಿತು. ನಾನು ಹರಿಜನರಿಗಾದರೆ ಮಾತನಾಡತಕ್ಕವನು; ಅವರೇ ಇಲ್ಲದ ಬಳಿಕ ನಾ ಇಲ್ಲಿ ಯಾಕೆ ಮಾತಾಡಬೇಕೆಂದು ಸೀದಾ ಹೊರಟು ಅವರು ಸ್ಟೇಶನ್ನಿಗೆ ಹೋದರು.

ಪ್ರಶ್ನೆ : ಮತ್ತೆ ಹುದ್ಲಿಯಲ್ಲಿ ರಚನಾತ್ಮಕ ಕಾರ್ಯಕರ್ತರ ಸಮ್ಮೇಲನ ನಡೀತು. ಅಲ್ಲಿಯೂ ಗಾಂಧೀಯವರು ಬಂದಿದ್ದರೋ ಹೇಗೆ? ಅಲ್ಲಿ ಅವರ ಜೀವನ ಬಗ್ಗೆ ನೀವೂ ಏನಾದರೂ ಕಂಡಿದ್ದರೆ ಅದನ್ನು ನೀವು ವಿವರಿಸಿ ಹೇಳಬೇಕು?

ಉತ್ತರ: ಹೌದು ೧೯೩೭ರಲ್ಲಿ ಬೆಳಗಾವಿ ತಾಲೂಕಿನೊಳಗೆ ಗಂಗಾಧರರಾಯರ ಊರಾದ ಹುದ್ಲಿ ಎಂಬೋ ಹಳ್ಳಿಯಲ್ಲಿ ಗಾಂಧೀ ಸೇವಾ ಸಂಘದ ವಾರ್ಷಿಕ ಸಮ್ಮೇಳನ ಕೂಡಿತ್ತು. ಆ ಸಮ್ಮೇಲನಕ್ಕೆ ಮಶ್ರುವಾಲಾ ಅವರು ಅಧ್ಯಕ್ಷರಾಗಿದ್ದರು. ಅರ್ಥಾತ್ ಗಾಂಧೀಜಿಯವರೂ ಅದಕ್ಕೆ ಬಂದಿದ್ದರು. ಸಮ್ಮೇಳನಕ್ಕೆಂದು ೩-೪ ಸಾವಿರ ಜನ ಕೂಡಿದ್ದರು. ಅಂದ ಮೇಲೆ ಅಷ್ಟು ದೊಡ್ಡ ಪ್ರಮಾಣದ ಜನರ ವ್ಯವಸ್ಥೆಯನ್ನು ಮಾಡಬೇಕಾಗಿತ್ತು. ಮೊದಲನೇ ದಿನ ಸ್ವಾಗತಾಧ್ಯಕ್ಷರ ಮತ್ತು ಅಧ್ಯಕ್ಷರ ಭಾಷಣಗಳಾದವು. ಎರಡನೇ ದಿನ ಗಾಂಧಿಯವರು ಮಾತನಾಡಬೇಕೆಂದು ಎಲ್ಲರೂ ಕೇಳಿಕೊಂಡರು. ಗಾಂಧೀ ಸೇವಾ ಸಂಘದವರು ಕಾಯ್ದೆ ಕೌನ್ಸಿಲನಲ್ಲಿಯ ಸದಸ್ಯ ಸ್ಥಳಕ್ಕಾಗಿ ಸ್ಪರ್ಧಿಸುವ ವಿಷಯವನ್ನು ಅಂದಿನ ಸಭೆಯಲ್ಲಿ ಚರ್ಚಿಸಬೇಕಾಗಿತ್ತು. ವಿಷಯ ಸಾಕಷ್ಟು ಮಹತ್ವದ್ದೇ ಆಗಿತ್ತು. ಆದರೆ ಎಷ್ಟೇ ಮಹತ್ವದ್ದಿದ್ದರೂ ನಮ್ಮಂಥವರಿಗೆ ಸಾಮಾನ್ಯವಾಗಿಯೇ ಕಾಣುವ ಒಂದೆರಡು ವಿಷಯಗಳನ್ನು ಗಾಂಧೀಯವರು ಮೊದಲು ತಮ್ಮ ಭಾಷಣದಲ್ಲಿ ಹೇಳಿದರು. ಮೊದಲ ದಿನ ಊಟಕ್ಕೆ ಬಡಿಸುವಾಗ ಎಲ್ಲ ತೆಳ್ಳನ್ನ ಪದಾರ್ಥಗಳನ್ನು ಕೈಯಿಂದಲೇ ಬಡಿಸಿದ್ದು ಅವರು ನೋಡಿದರು. ಇದು ತಪ್ಪು. ಆರೋಗ್ಯ ದೃಷ್ಟಿ ಯಿಂದಲೂ ಸರಿ ಅಲ್ಲಾ. ನೋಡಲಿಕ್ಕೂ ಚೆನ್ನಾಗಿ ಕಾಣುವುದಿಲ್ಲ. ಈ ರೂಢಿ ನಮ್ಮಲ್ಲಿಂದ ಹೋಗಬೇಕು ಎಂದು ಗಾಂಧೀಯವರು ಮೊದಲಿನ ಮಾತು ಹೇಳಿದರು. ನಮ್ಮ ಎಲ್ಲ ಕೆಲಸಗಾರರೂ ಜನಸಾಮಾನ್ಯರಿಗೆ ಆದರ್ಶವಾಗುವಂತೆ ನಡೆಯಬೇಕೆಂದು ಅವರು ಇದರ ಬಗ್ಗೆ ಹೇಳಿದರು. ಮತ್ತೊಂದು ಮಾತೆಂದರೆ ಪಾಯಖಾನೆಯಿಂದ ತಿರುಗಿ ಬರುವಾಗ ಮಣ್ಣು ಹಾಕುವದು; ಆದರೆ ಹುದಲಿಯಲ್ಲಿ ಇದಕ್ಕಾಗಿ ತಂದ ಮಣ್ಣಿನಲ್ಲಿ ಹೆಚ್ಚಾಗಿ ಉಸುಕಿನ ಅಂಶವೇ ಇತ್ತು. ಮಣ್ಣಿನಲ್ಲಿ ಅಲ್ಕಲಿ ಅಂದರೆ ಆಮ್ಲ ಪದಾರ್ಥ ಇರುವುದರಿಂದ ದುರ್ಗಂಧವನ್ನು ನಾಶಪಡಿಸಲು ಉಪಯೋಗವಾಗುತ್ತದೆ. ಆದರೆ ಉಸುಕು ಈ ಕೆಲಸಕ್ಕೆ ನಿರುಪಯೋಗವಾದುದೆಂಬುದನ್ನು ಇಲ್ಲಿಯ ಕೆಲಸಗಾರರು ತಿಳಿದುಕೊಳ್ಳದೇ ಬಳಸುತ್ತಿದ್ದರು. ಸುಮ್ಮನೆ ಎಲ್ಲ ವಿಷಯಗಳಲ್ಲಿ ಅಂಧಾನುಕರಣೆ ಮಾಡಬಾರದು. ಪ್ರತಿಯೊಂದು ಸಣ್ಣ ಕೆಲಸಗಳ ಮಹತ್ವವನ್ನು ಅರಿತುಕೊಂಡು ಮಾಡಬೇಕು. ನಮ್ಮ ಕೆಲಸಗಾರರು ಇದನ್ನು ತಿಳಿದಿರಬೇಕು. ಅವರು ಅಂದದ್ದು "ಸತ್ಯಕೇ ಪೂಜಾರಿಯೋ ಕೋ ಛೋಟಿ ಛೋಟಿ ಬಾತೋಂಕಿ ಪರ್ ಭೀ ಧ್ಯಾನ ದೇನಾ ಚಾಹಿಯೇ. ಅಗರ ನಹೀ ದೇತೋ ಆಲಸ್ಯ ಹೈ. ಔರ ಆಲಸ್ಯ ಏಕ ಪ್ರಕಾರಕೀ ಹಿಂಸಾ ಹೈ." ಸತ್ಯದ ಆರಾಧಕರು ಸಣ್ಣಪುಟ್ಟ ಮಾತಿನ ಕಡೆಗೆ ಲಕ್ಷ್ಯ ಕೊಡಬೇಕು. ಇಲ್ಲದಿದ್ದರೆ ಅವರು ಆಲಸಿಗಳು. ಆಲಸ್ಯವು ಒಂದು ಪ್ರಕಾರದ ಹಿಂಸೆ ಆಗಿದೆ. ಹೀಗೆ ನಮ್ಮಂಥವರ ಮಧ್ಯದಲ್ಲಿಯೇ ಇದ್ದರೂ ಜನಸಾಮಾನ್ಯರಿಂದ ಎದ್ದು

ಕಾಣುವ ಜೀವನ ಮಹಾತ್ಮಾ ಗಾಂಧೀಯವರದಾಗಿತ್ತು. ನಮ್ಮ ಮಧ್ಯದಲ್ಲಿಯೇ ಎಲ್ಲ ಸ್ಥೂಲ ಮತ್ತು ಸೂಕ್ಷ್ಮ ಕೆಲಸಗಳಲ್ಲಿಯೇ ತಮ್ಮ ಒಳ್ಳೆಯ ನಡತೆ ಮತ್ತು ಮಾತುಗಳಿಂದಲೇ ಜನಜೀವನವನ್ನು ತಿದ್ದುವದು ಮಹಾತ್ಮರಾದ ಅವರ ಲಕ್ಷಣ ಈ ಮಾತು ನಾನು ಈ ಹುಬ್ಬಳ್ಳಿ ಸಮ್ಮೇಳನದಲ್ಲಿ ನೋಡಿದೆ.

–ಶ್ರೀ ಆರ್.ಎಸ್.ಹುಕ್ಕೇರಿಕರ

* * *

## ೪೦. ಶ್ರೀ ಹುಯಿಲಗೋಳ ನಾರಾಯಣರಾಯರ ನೆನಹು

**ಗಾಂಧೀಜಿ ಪ್ರಭಾವ ಸಾಕಷ್ಟಾಗಿದೆ:**

"ಲಖನೌ ಕಾಂಗ್ರೆಸ್ಸಿನಲ್ಲಿ (೧೯೧೬) ನಾನು ಮಹಾತ್ಮರನ್ನು ಮೊದಲಬಾರಿ ನೋಡಿದೆ. ಕೆಲವು ಗೆಳೆಯರು ನಾವು ಕೂಡಿಕೊಂಡು ಲಖನೌ ಕಾಂಗ್ರೆಸ್ಸಿಗೆ ಗದಗಿನಿಂದ ಹೋಗಿದ್ದೆವು. ಆ ಅಧಿವೇಶನವು ಮುಂಡಾಸ ಸುತ್ತಿ ಮಾರವಾಡಿ ವೇಷದಲ್ಲಿ ಗಾಂಧೀಜಿ ಭಾಷಣ ಮಾಡಲೆಂದು ವೇದಿಕೆಯ ಮೇಲೆ ಬಂದು ನಿಂತು "ಭಾಯಿಯೊ" ಎಂದು ಪ್ರಾರಂಭಿಸಿದೊಡನೆ ಜನ "ಇಂಗ್ಲೀಷ್, ಇಂಗ್ಲೀಷ್" ಎಂದು ಕೂಗತೊಡಗಿದರು. ಅವರು ಒಂದೆರಡು ನಿಮಿಷ ಸುಮ್ಮನಿದ್ದು ಮತ್ತೆ ಹಿಂದಿಯಲ್ಲಿಯೆ ಸುರು ಮಾಡಿದರು. ಮತ್ತೆ ಗದ್ದಲ. ಗಾಂಧೀಜಿ ಭಾಷಣ ನಿಲ್ಲಿಸಿದರು. ವೇದಿಕೆಯಿಂದ ಇಳಿಯತೊಡಗಿದರು. ಆಗ ಲೋಕಮಾನ್ಯರು ಎದ್ದು ನಿಂತು ಗಂಭೀರವಾಗಿ ಪ್ರೇಕ್ಷಕರನ್ನುದ್ದೇಶಿಸಿ ಗಾಂಧೀಜಿಯವರ ಭಾಷಣ ನೀವು ಕೇಳಿಕೊಳ್ಳಬೇಕು ಎಂದು ಗುಡುಗಿದರು. ಸಭೆ ಶಾಂತವಾಯಿತು. ಗಾಂಧೀಜಿ ಹಿಂದಿಯಲ್ಲಿಯೇ ತಮ್ಮ ಭಾಷಣ ಪೂರೈಸಿದರು. ಅಂದಿನಿಂದಲೂ ಅವರು ಹಿಂದಿಯಲ್ಲಿಯೇ ಭಾಷಣ ಮಾಡುತ್ತಾ ಬಂದರು.

"ಮರು ವರ್ಷ ಕಲಕತ್ತೆಯಲ್ಲಿ ಸೇರಿದ್ದ ಕಾಂಗ್ರೆಸ್ಸಿಗೆ ಆ್ಯನಿಬೆಜೆಂಟಮ್ಮನವರು ಅಧ್ಯಕ್ಷರಾಗಿದ್ದರು. ಕಲಕತ್ತೆಗೆ ನಾವು ಖಾದೀಧಾರಿಗಳಾಗಿಯೆ ಹೋದೆವು. ಅಂದಿನಿಂದ ಇಂದಿನವರೆಗೂ ನಾನು ಖಾದಿಯನ್ನೇ ಧರಿಸುತ್ತ ಬಂದಿದ್ದೇನೆ."

*ಸಂಯುಕ್ತ ಕರ್ನಾಟಕ ಹುಬ್ಬಳ್ಳಿ. ಇವರ ಕೃಪೆಯಿಂದ*

* * *

## ೪೧. ಶ್ರೀ ಎಂ.ಆರ್ಯಮೂರ್ತಿ ಅವರ ನೆನಹು

ಬಹಳ ವರ್ಷಗಳಿಂದಲೂ ನಾವು ಮನೆಯವರೆಲ್ಲ ಹರಿಜನ ಸೇವೆಯನ್ನು ಕೈಕೊಂಡವರು. ಚನ್ನಪಟ್ಟಣದ ನಮ್ಮ ಅರ್ಧ ಎಕರೆ ಒಂದು ತೋಟದ ಮಧ್ಯದಲ್ಲಿ ಎರಡು ಗುಡಿಸಲುಗಳನ್ನು ಹಾಕಿ ಅದಕ್ಕೆ "ಅಭಯ ಕುಟೀರ" ಎಂದು ಹೆಸರಿಟ್ಟು ಅಲ್ಲಿಯೇ ನಮ್ಮ ಹರಿಜನ ಸೇವಾಕಾರ್ಯ ನಡೆಸುತ್ತಿದ್ದೆವು. ಅಲ್ಲಿಗೆ ಗಾಂಧೀಜಿ ತಮ್ಮ ಪರಿವಾರದೊಡನೆ ೬–೧–೧೯೩೪ರಲ್ಲಿ ಬಂದು ತಂಗಿದ್ದರು. ಅಲ್ಲಿ ಹೊಸದಾಗಿ ಕಟ್ಟಿಸಿದ್ದ ಕುಡಿಯುವ ನೀರಿನ ಬಾವಿಯನ್ನು ಉದ್ಘಾಟಿಸುತ್ತ

ಮಹಾತ್ಮಾಜಿ ತಾವೇ ನೀರು ಸೇದಿ ಕುಡಿದು ಇತರರಿಗೂ ಕುಡಿಯಲು ಹೇಳಿದರು. ಈ ನೀರು ಹರಿಜನರಷ್ಟೇ ಅಲ್ಲ, ಇತರರೂ ಅವರೊಂದಿಗೆ ಬಳಸಬೇಕು ನೀರಿನಂತೆಯೇ ಎಲ್ಲರೂ ಸ್ವಚ್ಛವಾಗಬೇಕು ಎಂದು ಉಪದೇಶ ಮಾಡಿದರು. ನನ್ನ ಪತ್ನಿ ಸರಸ್ವತಮ್ಮ ನನ್ನ ಜೊತೆ ಹರಿಜನ ಸೇವೆ ಅಲ್ಲದೆ ಪ್ರಾಣಿ ದಯಾ ಕಾರ್ಯದಲ್ಲಿಯೂ ನೆರವಾಗುತ್ತಿದ್ದ ವಿಷಯ ತಿಳಿದು ಗಾಂಧೀಜಿ ಸಂತೋಷಿಸಿದರು. ನನ್ನ ಸತಿ ಸರಸ್ವತಮ್ಮನು ಕೊಂಕುಳಲ್ಲಿ ಹನ್ನೆರಡು ದಿನದ ಮಗುವನ್ನು ಎತ್ತಿಕೊಂಡಿದ್ದಳು. ಮಹಾತ್ಮರು ಮಗುವಿನ ಹೆಸರೇನು ಎಂದು ಕೇಳಿದರು. ಇನ್ನೂ ಹೆಸರು ಇಟ್ಟಿಲ್ಲ ಎಂದಳು ಸರಸ್ವತಮ್ಮ. ಆಗ ಗಾಂಧೀಜಿ ಹಿಂದಿಯಲ್ಲಿ "ಅಭಯ ಕುಟೀರದಲ್ಲಿ ಹುಟ್ಟಿದ ಹುಡುಗ. ಅವನಿಗೆ ಅಭಯ ಕುಮಾರ ಎಂದು ಹೆಸರಿಡಿ" ಎಂದು ಹೇಳಿದರು. ಮತ್ತು ಮಗುವನ್ನು ಮುಟ್ಟಿ ಆಶೀರ್ವದಿಸಿದರು. ಆ ಹುಡುಗ ಈಗ ಇದೇ ಹೆಸರಿನಿಂದ ಬೆಳೆದು ದೊಡ್ಡವನಾಗಿದ್ದಾನೆ.

ಆಗ ಇನ್ನೂ ಅನೇಕ ಘಟನೆ ನಡೆದವು. ಅವುಗಳಲ್ಲಿ ಒಂದು ಮಾತ್ರ ಉಲ್ಲೇಖಿಸ ಬಯಸುತ್ತೇನೆ. ಹೋಗುವಾಗ ಗಾಂಧೀಜಿ ಹೀಗೆ ಹೇಳಿದರು.-ಅಭಯ ಕುಟೀರದ ಶಾಂತ ವಾತಾವರಣ ಹಿತವಾಗಿತ್ತು. ಎಲ್ಲ ಕಡೆ ದೊಡ್ಡ ದೊಡ್ಡ ಭವನ ನಮಗಾಗಿ ಇರುತ್ತಿದ್ದವು. ಇಲ್ಲಿ ಕುಟೀರವಾಸ ದೊರಕಿದ್ದು ಸಂತೋಷವಾಯಿತು. ಇತ್ಯಾದಿ. ಸುತ್ತಲಿನ ಜನರೆಲ್ಲ ಗಾಂಧೀಜಿ ಉಳಿದುಕೊಂಡು ಸ್ಥಳ, ಸ್ನಾನಸ್ಥಳ, ಅವರು ಬಳಸಿದ ಪಾತ್ರೆ, ಊಟ ಮಾಡಿದಗ ಜಾಗ ಎಲ್ಲ ನೋಡಿಕೊಂಡು ಹೋಗುತ್ತಿದ್ದರು.

ಮಹಾತ್ಮಾ ಗಾಂಧೀಜಿ ಹೊರಡಲು ಕಾರಿನಲ್ಲಿ ಕುಳಿತಾಗ, ನನ್ನ ನಾದಿನಿ ಚಿ॥ ಧರ್ಮಾ ತನ್ನ ಕೊರಳಿನಲ್ಲಿದ್ದ ಬಂಗಾರದ ಕಾಸು ತೆಗೆದುಕೊಟ್ಟಳು. ಮತ್ತೆ ನನ್ನ ಹತ್ತು ವರ್ಷದ ಮಗಳು ಚಿ॥ ತೇಜೋವತಿ ಎಂಬುವಳು, ನಾವಾರೂ ಹೇಳದಿದ್ದರೂ ತಾನೇ ಸ್ವಯಂ ಸ್ಫೂರ್ತಿಯಿಂದ ತನ್ನ ಕಿವಿಯಲ್ಲಿದ್ದ ಕಲ್ಲಿನ ವಾಲೆಗಳನ್ನು ತೆಗೆದುಕೊಟ್ಟು ಅವರ ಕಾಲಿಗೆ ನಮಸ್ಕಾರ ಮಾಡಿದಳು. ಮಹಾತ್ಮರು ಸಂತೋಷ ಪಟ್ಟು, ಇವನ್ನು ಸಭೆಯಲ್ಲಿ ಏಕೆ ಕೊಡಲಿಲ್ಲ? ಆಗ ಕೊಟ್ಟಿದ್ದರೆ ಇವುಗಳಿಂದ ಹರಿಜನ ನಿಧಿ ಕೂಡಿಸುತ್ತಿದ್ದೆ. ಈ ಹರಳು ಕಲ್ಲುಗಳಲ್ಲಿ ಹರಿಜನರಿಗಾಗಿ ನಿಮ್ಮ ಸಹಾನುಭೂತಿ ಸದ್ಭಾವ ಉಂಟು ಎಂದು ಮುಂತಾಗಿ ಹೇಳಿ ಆ ಮಕ್ಕಳನ್ನು ಹೃತ್ಪೂರ್ವಕ ಆಶೀರ್ವದಿಸಿದರು.

–ಎಂ. ಆರ್ಯಮೂರ್ತಿ

* * *

## ೪೨. ಶ್ರೀ ನಾರಾಯಣ ಸಂಗಮ್ ಅವರ ನೆನಹು

ಗಾಂಧೀಜಿ ೧೯೨೪ರ ಬೆಳಗಾಂವಿಯ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಷ್ಟೆ? ಅವರ ನಿವಾಸಕ್ಕಾಗಿ ಅಚ್ಚ ಬಿಳಿಯ ಖಾದಿಯಿಂದ ಪರಿವೇಷ್ಟಿತವಾದ ಕುಟೀರ ನಿರ್ಮಿಸಿ, ಅದಕ್ಕೆ "ವಿದ್ಯಾರಣ್ಯ ಆಶ್ರಮ" ಎಂದು ಹೆಸರಿಡಲಾಗಿತ್ತು. ಆಗ ನಾನು

ಚಿಕ್ಕವನಾಗಿದ್ದರೂ ಸ್ವಯಂ ಸೇವಕರ ಒಂದು ದಲಕ್ಕೆ ನಾಯಕನಾಗಿದ್ದೆನು. ನನಗೂ ನನ್ನ ದಲಕ್ಕೂ ಎರಡು ಒಳ್ಳೆಯ ಸ್ವಾರಸ್ಯವಾದ ಕೆಲಸಗಳನ್ನು ಒಪ್ಪಿಸಲಾಗಿತ್ತು. ಒಂದು. ದಿನಾಲು ಮುಂಜಾನೆ ಧ್ವಜವಂದನಾನಂತರ, ಸ್ವಯಂ ಸೇವಕರಿಗೆಲ್ಲ ಉಂಡೆಗಳನ್ನು ಹಂಚುವದು. ಇನ್ನೊಂದು ಗಾಂಧೀಜಿಯ ಕುಟೀರಕ್ಕೆ ಕಾವಲಾಗಿರುವದು. ಗಾಂಧೀಜಿಯನ್ನು ಕಾಣಲು ಬರಹೋಗುವ ನೇತಾರರಿಗೆ ತೆರಪೇ ಇರಲಿಲ್ಲ ಎಂದು ಬೇರೆ ಹೇಳಬೇಕೆ? ಬಂದವರನ್ನು ಬಾಗಿಲಲ್ಲಿ ತರುಬಿ, ಅವರ ಪಿವರ ಕ್ಷಣಕ್ಷಣಕ್ಕೂ ಅರುಹಿ, ನಾನು ಒಳಗೆ ಬಿಟ್ಟಾಗಲೇ ಆ ಅತಿರಥಿ ಮಹಾರಥಿಗಳಿಗೆ ಗಾಂಧೀಜಿಯ ದರ್ಶನವಾಗಬೇಕು. ಹುಡುಗುತನದ ನನ್ನ ಹೆಮ್ಮೆ ಹುಮ್ಮಸ್ಸಿನಿಂದ ಬೆರೆತ ನನ್ನ ಕಾರ್ಯದಕ್ಷತೆಗೆ, ನಾನು ತಾನೆನ್ನುವ ಆ ದೇಶಭಕ್ತರು ಬೇಸರಪಟ್ಟುಕೊಂಡಿರಬೇಕು. ಅವರ ಕಣ್ಣಲ್ಲಿ ಆಗ ನಾನು, ವೈಕುಂಠದ ಬಾಗಿಲಲ್ಲಿ ನಿಂತ ಕುಂಟ ದಾಸಯ್ಯನಾಗಿ ಕಂಡಿದ್ದರೆ ಏನಾಶ್ಚರ್ಯ? ಮೊಟ್ಟಮೊದಲು ಒಮ್ಮೆ ಸ್ವಯಂ ಗಾಂಧೀಜಿಯನ್ನೇ ಅವರ ಕುಟೀರದ ಬಾಗಿಲಲ್ಲಿ ತಡೆದು ನಿಲ್ಲಿಸಿದೆ. ನನ್ನ ಈ ಧಾರ್ಷ್ಟ್ಯಕ್ಕೆ ಬೆರಗಾಗಿ ಗಾಂಧೀಜಿ ಇದೇನು ಎಂದು ಕೇಳಿದರು. ಅದಕ್ಕೆ ನಾನೆಂದೆ, ನಾನು ಈ ಸ್ವಯಂ ಸೇವಕ ದಲದ ನಾಯಕ. ನಾವು ನಿಮ್ಮ ಕುಟೀರಕ್ಕೆ ಕಾವಲಾಗಿದ್ದೇವೆ. ನನ್ನ ದಲದ ಸ್ವಯಂ ಸೇವಕರೆಲ್ಲ ನಿಮ್ಮನ್ನು ಪ್ರತ್ಯೇಕವಾಗಿ, ವಿಧಿವತ್ತಾಗಿ ವಂದಿಸಲು ಬಯಸಿದ್ದರಿಂದ ನಿಮ್ಮ ಕುಟೀರದ ಪ್ರವೇಶ ದ್ವಾರಕ್ಕೆ ಅಡ್ಡವಾಗಿ ನಿಲ್ಲಿಸಿದ್ದು, ಎಂದವನೇ ದಲಕ್ಕೆ 'ನಮಸ್ತೇ'ದ ಆಜ್ಞೆ ಕೊಟ್ಟೆ. ಗಾಂಧೀಜಿ ವಂದನೆ ಸ್ವೀಕರಿಸಿ ನಗುತ್ತ ನುಡಿದರು–ನನ್ನ ಕುಟೀರಕ್ಕೆ ಮುತ್ತಿಗೆ ಹಾಕುವವರು ಬಹಳ ಮಂದಿ. ನೀನು ತೀರಾ ಚಿಕ್ಕವನಾಗಿ ತೋರುವಿ. ನಿನ್ನ ಸಾಹಸಕ್ಕೆ ಮೆಚ್ಚಿದೆ ಎನ್ನುತ್ತ ನನ್ನ ಹೆಮ್ಮೆಯನ್ನು ಕೆಣಕಿ ತಲೆ ತಟ್ಟಿದರು. ಆಗ ನನಗೆ ಟಗರಿನ ತಲೆ ತಟ್ಟಿದಂತಾಗಿ ನಾನು ನನ್ನ ಕುಂಟುವ ಇಂಗ್ಲೀಷಿನಲ್ಲಿ "ನಾನು ಸಣ್ಣವನಾಗಿದ್ದರೂ ನನ್ನ ದಲದ ಅನೇಕ ಸ್ವಯಂ ಸೇವಕರಿಗೆ ಮೀಸೆಗಳಿವೆ" ಎಂದೆ. ಅದಕ್ಕೆ ಗಾಂಧೀಜಿ ನಗುತ್ತ, "ಇಲಿ ಬಂದವರ ಮೇಲೆ ಏರಿಹೋಗಿ, ನಿನ್ನ ಸ್ವಯಂ ಸೇವಕರು ತಮ್ಮ ಕೊಕ್ಕು ಮೀಸೆಗಳಿಂದ ಕುಕ್ಕಿಬಿಡುವರೊ? ಆದರೆ ಇವರ ಮೀಸೆ ನನ್ನ ಮುಖಕ್ಕೆ ಮಾತ್ರ ಗುರಿ ಇಡದಿರಲಿ" ಎಂದವರೇ ಮತ್ತಷ್ಟು ಗಹಗಹಿಸಿ ನಕ್ಕು, ನಮ್ಮನ್ನೂ ನಗಿಸಿ. ನಾವು ದಾರಿ ಬಿಡಲು ಗಾಂಧೀಜಿ ತಮ್ಮ ಗುಡಿಸಲದ ಒಳಹೊಕ್ಕರು. ಆ ಮುಂದೆ ನಮ್ಮನ್ನು ನೋಡಿದಾಗೆಲ್ಲ ಗಾಂಧೀಜಿ ತಮ್ಮ ಮೀಸೆ ಸವರಿಕೊಳ್ಳುತ್ತ ದೂರಿಂದೇ ಕಿರುನಗೆ ಬೀರಿ ಹೋಗುತ್ತಿದ್ದರು.

ಆಗಿನದೇ ಇನ್ನೊಂದು ಸಂದರ್ಭ. ಸ್ವಯಂ ಸೇವಕರಿಗೆ ಉಂಡೆ ಹಂಚುವ ಕೆಲಸವೂ ನನ್ನ ದಲಕ್ಕೇ ಒಪ್ಪಿಸಲಾಗಿತ್ತು ಎಂದು ಹಿಂದೆ ಹೇಳಿದೆಯಷ್ಟೆ? ಆಗ ನನ್ನ ಸ್ವಾಧೀನದಲ್ಲಿ ನೂರಾರು ಚೀಲ ಉಂಡೆಗಳು! ಉಂಡೆಗಳು ಎನ್ನುತ್ತಲೇ ಸಾಮಾನ್ಯವಾಗಿ ಹವಣಾದ-ಒಂದು ಪೇರಲ ಹಣ್ಣಿನ ಗಾತ್ರ ಕಣ್ಣೆದುರಿಗೆ ಬರುವದು ಸಹಜ. ಆದರೆ, ಬೆಳಗಾಂವಿ ಕಾಂಗ್ರೆಸ್ಸಿನ ಆ ಉಂಡೆಗಳೆಂದರೆ ಸಣ್ಣ ತೆಂಗಿನಕಾಯಿ ಗಾತ್ರ! ಇಷ್ಟು ದೊಡ್ಡ ಉಂಡೆಗಳನ್ನು ಯಾವ ತಾಯಿಯೂ ತನ್ನ ಮಕ್ಕಳಿಗೆ ಹಂಚಿರಲಾರಳು. ಇಂಥ ರಾಶಿ ಉಂಡೆಗಳಿದ್ದಲ್ಲಿ ನೊಣ ಮುತ್ತದಿದ್ದಾವೆಯೇ? ಅರೆಗಳಿಗೆ ಕೂಡ ತೆರಪಿಲ್ಲದೆ ಮೈಮುರಿದು ದುಡಿಯುತ್ತಿದ್ದ ಸ್ವಯಂ ಸೇವಕರಿಗೆ ಈ ಉಂಡೆಗಳು

ಸಹ ಬಲು ಸಣ್ಣವಾಗಿ ತೋರುತ್ತಿದ್ದವು. ಆದ್ದರಿಂದ, ಹಸಿದು ಹೆಚ್ಚಿನ ಉಂಡೆಗಾಗಿ ನನ್ನ ಮನ ಮೆಚ್ಚಿಸಲು ಬರುವವರ ಕೈಯಿಂದ ಪಾರಾಗುವದೇ ನನಗೆ ಒಂದು ದೊಡ್ಡ ಕೆಲಸವಾಗಿಬಿಡುತ್ತಿತ್ತು. ಹೀಗಿರಲು, ತದ್ವಿಪರೀತವಾಗಿ ನಾನೇ ಒಬ್ಬರ ಮನಮೆಚ್ಚಿಸಿ ಒಮ್ಮೆ ಅವರಿಗೆ ಉಂಡೆ ಕೊಡಬೇಕೆಂದು ತವಕಿಸುತ್ತಿದ್ದೆ. ಆ ವ್ಯಕ್ತಿ ಮತ್ತಾರೂ ಅಲ್ಲ. ಸ್ವಯಂ ಮಹಾತ್ಮಾ ಗಾಂಧೀ ಅವರೇ ಆಗಿದ್ದರು. ಇದು ಹೇಗೆ ಸಾಧ್ಯ? ಲೆಕ್ಕಾಚಾರವಾಗಿ ದಿನದ ಎರಡು ಊಟಗಳನ್ನೂ ಮಾಡಲೊಲ್ಲದ ಅನ್ನಾರಿ ಮಹಾತ್ಮಾಜಿ, ನನ್ನ ಗುಂಡು ಕಲ್ಲಿನಂತಹ ಉಂಡೆಗಳನ್ನು ತಿಂದಾರೆ? ಈ ಶಂಕೆ ನನ್ನ ಸಾಹಸಕ್ಕೆ ಅಡ್ಡವಾಗಿ ನಿಲ್ಲುತ್ತಿತ್ತು. ಆದರೂ ಒಮ್ಮೆ ಧೈರ್ಯ ತಂದುಕೊಂಡು, ಹೊಂಚುಹಾಕಿ, ಗಾಂಧೀಜಿ ಅವರನ್ನು, 'ಉಂಡೆ ಕೊಟ್ಟರೆ ತಿನ್ನುವಿರಾ' ಎಂದು ಕೇಳಿಯೇ ಬಿಟ್ಟೆ.. ಗಾಂಧೀಜಿ ತಟ್ಟನೆ ಪ್ರತಿಯಾಗಿ, "ಉಂಡೆ ಕೊಟ್ಟರೆ ಯಾರು ಬಿಟ್ಟಾರು" ಎಲ್ಲಿ, ಕೊಡು" ಎಂದು ಕೈಚಾಚಿದರು. ನಾನು ನಿಷ್ಪ್ರಭನಾಗಿ ತಡವರಿಸುತ್ತ, ಈಗ ತಂದಿಲ್ಲ, ತರುತ್ತೇನೆ' ಎಂದು ತಲೆ ತಗ್ಗಿಸಿದೆ. ಅವರು ನಗುತ್ತ, "ಎಲ್ಲಾ ಪಟಿಂಗ! ನನಗೆ ಆಶೆ ತೋರಿಸಿ ಮೋಸ-ಮಾಡಿದೆಯಾ" ಎನ್ನುತ್ತ ಮೆತ್ತಗೆ ನನ್ನ ಕಿವಿ ಕಿವುಚಿದರು. ನೋವಿನಲ್ಲಿಯೂ ಸುಖ ಇರಬಲ್ಲುದು ಎಂದು ಅಂದು ನನ್ನ ಅನುಭವಕ್ಕೆ ಬಂದಿತು. ಇರಲಿ; ಇಷ್ಟು ಎಳೆ ಸಿಕ್ಕ ಮೇಲೆ ಬಿಡುವೆನೇ? ಮರುದಿನ ಒಳ್ಳೆಯ ಐದು ಉಂಡೆಗಳನ್ನು ಆಯ್ದುಕೊಂಡು ಗಾಂಧೀಜಿಗೆ ಕೊಡಲು ಮತ್ತೆ ಹೊಂಚು ಹಾಕಿ ಕುಳಿತೆ. ಈ ಮೊದಲು ಹೇಳಿದಂತೆ, ನಾನು ಅವರ ಕುಟೀರದ ಕಾವಲುಗಾರನಾದ ಕಾರಣ ಅವರ ಮೇಲೆ ಮುಗಿಬೀಳಲು ನನಗೆ ಬೇಕಾದಷ್ಟು ಆಸ್ಪದವಿತ್ತು. ಆ ಒಂದು ಶುಭ ಕ್ಷಣವೂ ಒದಗಿತು. ಗಾಂಧೀಜಿಯ ಹತ್ತಿರ ಹೋಗಿ, "ಉಂಡೆಗಳನ್ನು ತಂದಿದ್ದೇನೆ" ಎಂದೆ. ಆ ಉಂಡೆಗಳ ಗಾತ್ರ ನೋಡಿ, ಕಣ್ಣರಳಿಸಿ, ಮುಖ ಕೊಂಕಿಸಿ, ಒಂದು ಕ್ಷಣ ಸುಮ್ಮನೆ ನಿಂತು, ಆಮೇಲೆ "ಇವನ್ನು ನಾನೆಷ್ಟು ದಿನ ತಿಂದರೂ, ಸವೆವಂತೆ ಕಾಣುವುದಿಲ್ಲ. ಆದರೂ ನೀನು ತಂದಿದ್ದೀಯಾ, ತಾ" ಎನ್ನುತ್ತ ಒಂದನ್ನು ಎತ್ತಿ ತೂರಿ ಹಿಡಿದು, ಮುರಿದು ಬಾಯಲ್ಲಿ ಹಾಕಬೇಕೆಂದಿದ್ದರೋ ಏನೋ, ಆದರೆ ಆ ಮೊಂಡ ಉಂಡೆ ಎಳ್ಳಷ್ಟೂ ಮುರಿಯಲೇ ಇಲ್ಲ. ಆಗ ಗಾಂಧೀಜಿ, "ಈ ಉಂಡೆ ಮುರಿಯಲು ಸ್ವಯಂ ಸೇವಕರ ಬಾಹುಬಲವೇ ಬೇಕೆಂದು ತೋರುತ್ತದೆ. ನೀವೇ ನನಗಾಗಿ ಈ ಉಂಡೆಗಳನ್ನು ನುಂಗಿಬಿಡಿರಿ. ನನಗೆ ಸಂತೋಷವಾಗುತ್ತದೆ. ಆದರೆ, ಒಂದು ಮಾತು. ಹಂಚುವಾಗ ಹೆಚ್ಚು ಕಡಿಮೆ ಎಂದು ನಿನ್ನ ಸ್ವಯಂ ಸೇವಕರು ಜಗಳವಾಡಿದರೆ, ನೀನು ನಾಯಕನೆಂದು ನ್ಯಾಯ ತೀರಿಸ ಹೋಗಿ ತಕ್ಕಡಿ ಮಾತ್ರ ಹಿಡಿದು ಕೂಡಬೇಡ. ಹಾಗೆ ಆದಲ್ಲಿ ಕೊನೆಗೆ ಎಲ್ಲರ ಕೈಯಲ್ಲಿ ಉಂಡೆಯ ಬದಲು ಬರೀ ತಕ್ಕಡಿಯ ಪರಡೆಗಳೇ ಉಳಿದಾವು. ನ್ಯಾಯ ತೀರಿಸುವ ಬದಲು ಉಂಡೆಯನ್ನೇ ತೀರಿಸಿಬಿಟ್ಟೀಯಾ?" ಎಂದು ಹೇಳಿ ನಕ್ಕು ಹೊರಟು ಹೋದರು. ನಾವೂ ತುಂಬ ನಕ್ಕೆವು.

—ನಾರಾಯಣ ಸಂಗಮ

* * *

## ೪೩. ಶ್ರೀಮತಿ ಮಹಾದೇವಿತಾಯಿ ಅವರ ನೆನಹು
(ಪೂ. ವಿನೋಬಾಜಿಯವರ ಆಪ್ತಕಾರ್ಯದರ್ಶಿ)

ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಿ ನಾನು ಅವರ ಆಂದೋಲನದಲ್ಲಿ ಪಿಕೆಟಿಂಗ್ ಮಾಡಿ, ಪ್ರಚಾರ ಮಾಡಿ, ಕರನಿರಾಕರಣೆಯಲ್ಲಿ ಭಾಗವಹಿಸಿ. ೧೯೩೦ರ ಹೊತ್ತಿಗೆ ಎರಡು ಮೂರು ಸಲ ಸೆರೆ ಮನೆಗೆ ಹೋಗಿ ಬಂದಿದ್ದೆ. ನನ್ನೊಡನೆ ಬೇರೆ ಮಹಿಳಾ ಚಳವಳಿಗಾರರೂ ಇದ್ದರು. ಸೆರೆಮನೆಯಲ್ಲಿ ಸ್ತ್ರೀಯರಿಗೆ ಆಗುವ ಅನ್ಯಾಯಗಳನ್ನು ಪ್ರತಿಭಟಿಸಿ ಅಲ್ಲಿ ನಾನು ೧೮ ದಿನಗಳ ಉಪವಾಸ ಸತ್ಯಾಗ್ರಹ ಮಾಡಿದ್ದೆ. ಗಾಂಧೀಜಿ ಹರಿಜನ ಪ್ರವಾಸ ಕೈಕೊಂಡಾಗ ಅವರು ನಮ್ಮಲ್ಲಿ ಬಂದಿದ್ದರು. ಆಗ ನನ್ನ ಬಗೆಗೆ ಇದನ್ನೆಲ್ಲ ಅರಿತ ಗಾಂಧೀಜಿ ನನಗೆ ವರ್ಧಾಕ್ಕೆ ಬರಲು ಹೇಳಿದರು. ಅಲ್ಲದೆ ನೀನೊಬ್ಬ ಕರ್ತೃತ್ವಶಾಲಿ ಕಾರ್ಯಕರ್ತೆ ಆಗಬಲ್ಲೆ ಯಾದ್ದರಿಂದ ಹಿಂದಿ ಕಲಿಯಬೇಕೆಂದೂ ಹೇಳಿದರು. ಆ ಪ್ರಕಾರ ನಾನು ವರ್ಧಾಕ್ಕೆ ಹೋದೆನು. ಗಾಂಧೀಜಿ ನನ್ನನ್ನು ವರ್ಧಾ ಮಹಿಳಾಶ್ರಮದಲ್ಲಿ ಇಟ್ಟರು. ಅಗ್ಗ ಅನೇಕ ಸಮಯ ಸಂದರ್ಭಗಳಲ್ಲಿ ಗಾಂಧೀಜಿಯ ಸಂದರ್ಶನ ಆಗುತ್ತಿತ್ತು. ನನ್ನ ಅನೇಕ ನೆನಹುಗಳಲ್ಲಿ ಇಲ್ಲಿ ಒಂದನ್ನು ಮಾತ್ರ ಉಲ್ಲೇಖಿಸುವೆನು.

ಗಾಂಧೀಜಿಗೆ ಹರಿಜನರನ್ನು ಎತ್ತಿ ಹಿಡಿಯುವದು ಮುಖ್ಯ ಕಾರ್ಯಗಳಲ್ಲಿ ಒಂದಾಗಿತ್ತು ಎಂಬುದನ್ನು ತಿಳಿದ ನಾನು ಒಮ್ಮೆ ಡೆಹರಾಡೂನಿನಿಂದ ಒಬ್ಬ ಹರಿಜನ ಬಾಲಿಕೆಯನ್ನು ನನ್ನ ಜೊತೆಗೆ ಇಟ್ಟುಕೊಳ್ಳಲು ಕರೆತಂದೆ. ಆ ಹರಿಜನ ಬಾಲಿಕೆ ವರ್ಧಾದಲ್ಲಿ ನನ್ನ ಬಳಿ ಇರತೊಡಗಿದಳು. ನಾನಾದರೋ ಒಂದು ಸನಾತನ ಕರ್ಮಠ ಬ್ರಾಹ್ಮಣ ಮನೆತನದ ಸ್ತ್ರೀ ಇಂಥವಳು ಒಬ್ಬ ಹರಿಜನ ಹುಡುಗಿಯನ್ನು ಜೋಕೆ ಮಾಡಲು ಸಿದ್ಧಳಾಗಿದ್ದು ತಿಳಿದು ಗಾಂಧೀಜಿಗೆ ಬಹಳ ಆನಂದವೂ ಆಶ್ಚರ್ಯವೂ ಆಯಿತು. ಈ ಅವಧಿಯಲ್ಲಿ ನಾನು ಎಂಟು ವರ್ಷಗಳವರೆಗೆ ಕರ್ನಾಟಕಕ್ಕೆ ಬರಲಿಲ್ಲ. ನನ್ನ ಊರು ಸಿದ್ದಾಪುರಕ್ಕೂ ಹೋಗಿರಲಿಲ್ಲ. ಏಕೆಂದರೆ ನನ್ನ ತಂದೆಯವರು ಹರಿಜನ ಕನ್ಯೆಯ ಸಂಗಡ ಮನೆಗೆ ಬರಲು ಒಪ್ಪುತ್ತಿರಲಿಲ್ಲ. ಗಾಂಧೀ ಬಾಪು ಅವರು ನಿನ್ನಲ್ಲಿ ಮತ್ತು ಹರಿಜನ ಹುಡುಗಿಯಲ್ಲಿ ನಿನ್ನ ತಂದೆ ಯಾವ ಭೇದವನ್ನೂ ಮಾಡದೇ ಕರೆದರೆ ಮಾತ್ರ ಊರಿಗೆ ಹೋಗು ಎಂದು ನನಗೆ ಹೇಳಿದ್ದರು. ಆಮೇಲೆ, ಅಂದರೆ ೮ ವರ್ಷಗಳ ತರುವಾಯ ನನ್ನ ತಂದೆಯವರು, ನಾನು ಸಾಕಿದ ಹರಿಜನ ಕನ್ಯೆಯೊಡನೆ ಬರಲು ಅನುಮತಿ ಕೊಟ್ಟರು. ಆಗ ನಾನು ನಮ್ಮ ಊರಿಗೆ ಮತ್ತು ಮನೆಗೆ ಹೋದೆನು. ಆ ಸಂದರ್ಭದಲ್ಲಿ ನನ್ನ ತಂದೆಯಷ್ಟೇ ಅಲ್ಲ, ನಮ್ಮ ಮನೆಯ ಜನರಾರೂ ನನ್ನಲ್ಲಿ ಮತ್ತು ಆ ಹರಿಜನ ಕನ್ಯೆಯಲ್ಲಿ ಭೇದ ಎಣಿಸಲಿಲ್ಲ ಎಂಬುದು ಮುಖ್ಯ ವಿಷಯ. ಈ ಬಗೆಗೆ ಗಾಂಧೀಜಿ ನನಗೆ ಒಮ್ಮೆ ವಿನೋದವಲ್ಲಿ. ಅಂತೂ ಕೊನೆಗೆ ನಿನಗೇ ಗೆಲುವಾಯಿತು ಎಂದು ಹೇಳಿದರು.

ಗಾಂಧೀಜಿಯವರ ಕಾರ್ಯನಿಷ್ಠೆ, ಕಾರ್ಯ ತತ್ಪರತೆ, ಅನಾಡಂಬರವಾದ ಸರಳ ಜೀವನ, ದೇವರಲ್ಲಿ ವಿಶ್ವಾಸ ಭಕ್ತಿ ಇವು ನನ್ನ ಮೇಲೆ ಬಹಳ ಪ್ರಭಾವ ಬೀರಿವೆ. ಆ ನಂತರ ನಾನು

ವಿನೋಬಾಜಿ ಆಶ್ರಮಕ್ಕೆ ಬಂದೆ. ಅಂದಿನಿಂದ ಇಂದಿನವರೆಗೆ ವಿನೋಬಾಜಿಯ ಆಪ್ತ ಕಾರ್ಯದರ್ಶಿ ಆಗಿ ಕೆಲಸ ಮಾಡುತ್ತಿದ್ದೇನೆ.

**-ಮಹಾದೇವಿತಾಯಿ**

## ೪೪. ದಿ॥ ಹರ್ಡೇಕರ ಮಂಜಪ್ಪನವರ ನೆನಪುಗಳು

("ರಾಷ್ಟ್ರಧರ್ಮದ್ರಷ್ಟಾರ ಹರ್ಡೇಕರ ಮಂಜಪ್ಪ" ಗ್ರಂಥದಿಂದ)

೧. ಶ್ರೀ ದೇಶಪಾಂಡೆ ಗಂಗಾಧರರಾಯರಿಂದ ಒಂದು ಪತ್ರವನ್ನು ತೆಗೆದುಕೊಂಡು ಸಾಬರಮತಿಗೆ (೧೯೨೪) ಹೋದೆನು. ಶ್ರೀ ಕಾಕಾ ಕಾಲೇಲಕರರನ್ನು ಮೊದಲು ಕಂಡು ಒಂದು ಪ್ರತ್ಯೇಕವಾದ ಕೋಣೆಯಲ್ಲಿ ಉಳಿದೆನು. "ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿ" ಕೂಡುವುದು ಇನ್ನೂ ೧೫ ದಿನ ತಡವಿತ್ತು. ಗಾಂಧೀಜಿಯವರಲ್ಲಿ ಪ್ರಸ್ತಾಪಿಸಲು ಮುಂಚೆ ಹೋದರೇನೇ ಬಿಡುವು ದೊರೆಯಬಹುದೆಂದು ಹೋಗಿದ್ದೆ. ಆಗಲೂ ಕೂಡಾ ಅವರ ಸಂಗಡ ಮಾತನಾಡಲು ಸಮಯ ದೊರೆಯುವುದೇ ದುರ್ಬಲವಾಗಿತ್ತು. ಹಿಂದೂಸ್ಥಾನದಲ್ಲಿ ನಾನಾ ಭಾಗಗಳಿಂದ ಪ್ರಮುಖರು ಅವರಲ್ಲಿ ಪ್ರಸ್ತಾಪಿಸಲು ಬಂದೇ ಬರುತ್ತಿದ್ದರು.

ನಾನು ಪ್ರತಿನಿತ್ಯ ಎರಡೂ ಹೊತ್ತು ಗಾಂಧೀಜಿಯವರಲ್ಲಿ ಪ್ರಾರ್ಥನೆಗೆ ಹೋಗುವದು. ಪ್ರಾತಃಕಾಲ ಅವರು ತಿರುಗಾಡಲು ಹೋಗುವಾಗ ಅವರ ಸಂಗಡ ಹೋಗುವದು. ಮಧ್ಯಾಹ್ನ ಅವರು ಕೆಲಸ ನಡೆಸಿರುವಾಗ ದೂರದಲ್ಲಿ ಸುಮ್ಮನೆ ಕುಳಿತುಕೊಳ್ಳುವುದು. ಇವು ನನ್ನ ನಿತ್ಯ ಕ್ರಮ. ಶ್ರೀ ಮಜಲಿ ವಕೀಲರಿಗೆ ಆಗ ಸ್ವಲ್ಪ ಬುದ್ಧಿಮಾಂದ್ಯವಿತ್ತು. ಗಾಂಧೀಜಿಯವರನ್ನು ನೋಡುತ್ತಾ ಕುಳಿತಿದ್ದರೆ ಅವರಿಗೆ ಸಮಾಧಾನ. ಅದಕ್ಕಾಗಿ ಮಧ್ಯಾಹ್ನ ಅವರನ್ನು ಸಂಗಡ ಕರೆದುಕೊಂಡು ಹೋಗಿ ಅಲ್ಲಿ ಕುಳಿತುಕೊಳ್ಳಬೇಕಾಗಿತ್ತು. ನನ್ನ ಇಲ್ಲಿಯ ಕಾರ್ಯಕ್ರಮಗಳಂತೆಯೇ ಅಲ್ಲಿಯೂ ನಡೆಯಲು ತುಂಬ ಅನುಕೂಲ. ನನಗೆ ಅದೊಂದು ಬೇರೆ ಆಶ್ರಮವಾಗಿ ತೋರಲಿಲ್ಲ. ಅಲ್ಲಿ ನನಗೆ ಅಷ್ಟು ಸ್ವಾತಂತ್ರ್ಯವಿತ್ತು. ನಾನೂ ಒಬ್ಬ ಆಶ್ರಮವಾಸಿಯಾಗಿಯೇ ಪರಿಣಮಿಸಿದೆನು.

ಒಂದು ಮುಂಜಾನೆ ತಿರುಗಾಡಲು ಹೋಗುವಾಗ ನನ್ನ ಸಂಭಾಷಣೆ ಜರುಗತಕ್ಕದ್ದೆಂದು ಗೊತ್ತಾಗಿತ್ತು. ಆ ಪ್ರಕಾರ ಪ್ರಾತಃಕಾಲ ಭಜನೆ ಮುಗಿದ ನಂತರ ನಾನು ಗಾಂಧೀಜಿಯವರ ಕಡೆ ಹೋದೆನು. ಆಗ ಬೇರೆ ಕೆಲವು ಪ್ರಮುಖರು ಬಂದು ಮಾತನಾಡಲು ಪ್ರಕ್ರಮಿಸಿದರು. ನಾನು ನಾಳೆ ಮಾತನಾಡಿದರಾಯಿತೆಂದು ತಿರುಗಿ ಕೋಣೆಗೆ ಬಂದೆನು. ಕೂಡಲೇ ಗಾಂಧೀಜಿಯವರು ಕರೆಯಿಸಿದರು. ನಾನು ಹೋದೊಡನೆ "ನಿಮಗಾಗಿ ಈ ಕಾಲ ಕಾದಿಟ್ಟಿದ್ದೇನೆ ಏನು ನಿಮ್ಮ ವಿಚಾರ ತಿಳಿಸಿರಿ" ಎಂದರು. ಹಾಗೆ ಮಾತನಾಡುತ್ತಾ ತಿರುಗಾಡಲು ಹೊರಟರು. ನಾನು ಹಿಂದೂಸ್ಥಾನಿ ಭಾಷೆಯಿಂದ ಮಾತನಾಡಿದೆನು. ಅದು ಎತ್ತಲಾಗಿಯೋ ಇರುತ್ತಿತು. ಅಂತು ಅವರಿಗೆ ನನ್ನ ಉದ್ದೇಶ ತಿಳಿಯುತ್ತಿತ್ತು. ಅವರು ಹೇಳುವುದು ನನಗೆ ಚೆನ್ನಾಗಿಯೇ ತಿಳಿಯುತ್ತಿತ್ತು. ಬಹುದಿನಗಳಿಂದ ನನ್ನ ಮನಸ್ಸಿನಲ್ಲಿ ಕಟೆಯುತ್ತಿದ್ದ "ಪುನರ್ಜನ್ಮ"ದ ವಿಷಯವನ್ನೇ ಮೊದಲು ಕೇಳಿದೆನು. ಅವರು ಹೀಗೆ ಹೇಳಿದರು.

"ಈ ಸಾಬರಮತಿ ನದಿ ಹರಿಯುತ್ತಿರುವುದು ನನಗೆ ಎಷ್ಟು ನಿಶ್ಚಯವೆಂದು ತೋರುತ್ತದೆಯೋ ಅಷ್ಟೇ ಪುನರ್ಜನ್ಮವಿದೆಯೆಂದೂ ನನಗೆ ನಿಶ್ಚಯವಾದ ನಂಬಿಕೆ." ನನಗೂ ಇಂಥ ನಂಬಿಕೆ ಹುಟ್ಟುವಂತೆ ತಾವು ತಿಳಿಸಬೇಕೆಂದು ಕೇಳಿದೆನು. ಟಿಳಕರಂತೆ ಇವರು ಏನಾದರೂ ಸಮಾಧಾನಕರವಾಗಲು ಕೆಲವು ಸಂಗತಿಗಳನ್ನು ತಿಳಿಸಬಹುದೆಂದೇ ನನ್ನ ಕಲ್ಪನೆ. ಅವರು ಒಂದೇ ವಾಕ್ಯದಲ್ಲಿ ಮುಗಿಸಿಬಿಟ್ಟರು. "ಬುದ್ಧಿವಾದದಿಂದ ನಾನು ಇದನ್ನು ಸಿದ್ಧಮಾಡಿಕೊಡಲಾರೆನು." ಆದುದರಿಂದ ಆ ವಿಷಯವನ್ನೇ ಬಿಟ್ಟು ಬಿಟ್ಟು ಸತ್ಯಾಗ್ರಹದ ೯ ತತ್ವಗಳಲ್ಲಿ "ಅಸ್ತೇಯ" ಸಂಬಂಧವಾಗಿ ನನಗಿದ್ದ ಸಂಶಯವನ್ನು ಕೇಳಿದೆನು. ಅನ್ಯರಿಗೆ ನಿರುಪಯೋಗವಾಗಿದ್ದರೂ ಅದಕ್ಕೆ ಪ್ರತಿಫಲ ಕೊಡದೆ ನಾವು ಉಪಯೋಗಿಸಿದರೆ ಕಳ್ಳತನವೇ ಸರಿಯೆಂದೂ ಅಸ್ವಾದ ವ್ರತಕ್ಕೆ ಉಪ್ಪು ಬಿಡಬೇಕಾದ ಕಾರಣವೇನೂ ಇಲ್ಲವೆಂದೂ ಇನ್ನೂ ಕೆಲವು ಸಂಗತಿಗಳನ್ನು ತಿಳಿಸಿದರು. ನನಗೆ ಬೇಕಾಗಿದ್ದುದು ಪುನರ್ಜನ್ಮದ ವಿಷಯ. ಅದು ಬುದ್ಧಿವಾದದಿಂದ ತಿಳಿಸಲಿಕ್ಕೆ ಬರುವುದಿಲ್ಲವೆಂದ ಮೇಲೆ ನಂಬಿಕೆಗೆ ಸಂಬಂಧವಾದುದೇ ಸರಿಯೆಂದಂತಾಯಿತು. ಅಂದಿನಿಂದ ನಾನು ಆ ವಿಷಯವಾಗಿ ಯಾರಲ್ಲಿಯೂ ಪ್ರಸ್ತಾಪಿಸಲೇ ಇಲ್ಲ. ಬುದ್ಧಿಗ್ರಾಹ್ಯವಾದ ವಿಷಯವೆಂದ ಮೇಲೆ ವಾದವಿವಾದದಿಂದ ದೃಢಪಡತಕ್ಕದ್ದಲ್ಲವೆಂದೇ ನಿಶ್ಚಯಿಸಿ ನಾನು ಆ ಮುಂಚೆ ಒಂದು ತೀರ್ಮಾನಕ್ಕೆ ಬಂದದ್ದೇ ನಿಜವೆಂದು ತಿಳಿದೆನು.

**೨. ಗಾಂಧೀಜಿಯವರ ಸಲಹೆ:**

ಆಗ ದೇಶದಲ್ಲಿ ಖಾದಿಯ ಚಟುವಟಿಕೆಯು (೧೯೨೭) ವಿಶೇಷವಾಗಿದ್ದಿತು. ಮಹಾತ್ಮಾ ಗಾಂಧೀಯವರು ಖಾದಿ ಕಾರ್ಯಕ್ಕಾಗಿ ಅಖಿಲ ಭಾರತ ಪ್ರವಾಸವನ್ನು ಪ್ರಾರಂಭಿಸಿದರು. ಫೆಬ್ರವರಿ ತಿಂಗಳಲ್ಲಿ ಸೊಲ್ಲಾಪುರ, ವಳಸಂಗ, ಅಂಕಲ ಕೋಟೆ ಮೊದಲಾದ ಸ್ಥಳಗಳಿಗೆ ಖಾದಿ ಪ್ರಸಾರದ ಕಾರ್ಯಕ್ಕಾಗಿ ಹೋದೆನು. ಗುಲ್ಬರ್ಗಾಕ್ಕೆ ಗಾಂಧೀಜಿಯವರನ್ನು ಕರೆದುಕೊಂಡು ಹೋಗಬೇಕೆಂದು ಗುಲ್ಬರ್ಗಾದ ಪ್ರಮುಖರು ಯೋಚಿಸಿ ಸೊಲ್ಲಾಪುರಕ್ಕೆ ಕರೆಯಲು ಬಂದಿದ್ದರು. ಗಾಂಧೀಜಿಯವರನ್ನು ಅಲ್ಲಿ ಕಂಡು ಕಾರ್ಯಕ್ರಮವನ್ನು ಗೊತ್ತುಮಾಡಿ ಗುಲ್ಬರ್ಗಾಕ್ಕೆ ಹೋದೆನು. ಆಗ ಗಾಂಧೀಜಿಯವರ ವ್ಯಾಖ್ಯಾನವು ಅತಿ ಮಹತ್ವದ್ದಾಗಿಯೇ ಪರಿಣಮಿಸಿತು.

ಮುಸಲ್ಮಾನರ ದೊಂಬಿಯಿಂದ ಶ್ರೀ ಶರಣ ಬಸವೇಶ್ವರ ಗುಡಿಯಲ್ಲಾದ ಅನರ್ಥವನ್ನು ಗಾಂಧೀಜಿಯವರು ಮೊದಲು ನೋಡಿಯೇ ಆಮೇಲೆ ವ್ಯಾಖ್ಯಾನಕ್ಕೆ ಹೋಗುವುದು ಅನುಕೂಲವೆಂದು ಯೋಚಿಸಿ ಆ ಪ್ರಕಾರ ಕಾರ್ಯಕ್ರಮವನ್ನು ಗೊತ್ತುಮಾಡಿಸಿದೆನು. ಅದು ಫಲಕಾರಿಯಾಗಿಯೂ ಪರಿಣಮಿಸಿತು. ಗಾಂಧೀಜಿಯವರು ಅಲ್ಲಾದ ಅತ್ಯಾಚಾರವನ್ನು ನೋಡಿ ಆ ಪ್ರಸಂಗವನ್ನು ತಮ್ಮ ಭಾಷಣದಲ್ಲಿ ತಂದೇಬಿಟ್ಟರು. ಶರಣ ಬಸವೇಶ್ವರನ ದರ್ಶನಕ್ಕೆ ಗಾಂಧೀಜಿಯವರು ಹೋದಾಗ ಮಂಗಳಾರತಿಯನ್ನು ಮಾಡಿದ ಪೂಜಾರಿಗೆ ನೀವು ದೊಂಬಿಯಾದಾಗ ಎಲ್ಲಿದ್ದರೆಂದು ಕೇಳಿದರು. ಅವರು ನಾವು ಓಡಿಹೋಗಿದ್ದೆವೆಂದು ಹೇಳಿದರು. ಆಗ ಗಾಂಧೀಜಿಯವರು "ನೀವು ಇಲ್ಲೇ ಮಲಗಿ ಪ್ರಾಣ ಕೊಡಬೇಕಾಗಿತ್ತು" ಎಂದು ಗಂಭೀರಮುದ್ರೆಯಿಂದ ಹೇಳಿದರು.

## ಭಾರತೀಯರಿಗೆ ಪೂಜ್ಯ ಬಾಪೂಜಿಯ ಸಂದೇಶ

कातो, समझबूझकर कातो;
कातने वाले खद्दर पहनें, पहननेवाले
जरूर कातें.

(१) 'समझबूझकर' के मानी है
कि चरखा यानि कताई अहिंसा
का प्रतीक है. और कातें यज्ञके लिए
इ०।।.

(२) कातने के मानी है: कपास
खेत से चुनना, बिनौले से बेलना
निकालना, रुई धुनना, पूनी
बनाना, सूत महीन और एकसा
निकालना और दुबटा कर
परेतना.

२८-३-४७ मो. क. गांधी
[illegible]

"ನೂಲಿರಿ, ಅರಿತುಕೊಂಡು ನೂಲಿರಿ; ನೂತವರು ಖಾದಿ ಧರಿಸಿರಿ, ಖಾದೀ ಧಾರಿಗಳು ಅವಶ್ಯ ನೂಲಿರಿ."

**೧. ಅರಿತುಕೊಳ್ಳುವುದರ ಅರ್ಥ**

ಚರಖಾ ಅಂದರೆ ನೂಲುವದು ಅಹಿಂಸೆಯ ಪ್ರತೀಕವು. ಲಕ್ಷ್ಯಕೊಟ್ಟು ವಿಚಾರಮಾಡಿರಿ, ಪ್ರತ್ಯಕ್ಷವಾಗುವದು.

**೨. ನೂಲುವದರ ಅರ್ಥ :**

ಹೊಲದಿಂದ ಹತ್ತಿ ಆರಿಸಿ ಬಿಡಿಸುವದು, ಹತ್ತಿ ಅರೆದು ಬೀಜ ತೆಗೆಯುವದು, ಚುನಾಯಿ ಮಾಡಿ ಹಂಜೀ ಮಾಡುವದು. ನೂಲುವುದು, ಅಂಕ ಕಂಡುಹಿಡಿಯುವದು. ಜೋಡೆಳೆ ಮಾಡಿ ಲಡಿ ಸುತ್ತುವುದು.

ತಾ॥ ೨೮-೨-೧೯೪೫ — **ಮೋ.ಕ. ಗಾಂಧೀ**

ಸೇವಾಗ್ರಾಮ

(ಸೇವಾಗ್ರಾಮದಲ್ಲಿ ತಾ॥ ೨೪, ೨೫ ಮಾರ್ಚ ೧೯೪೫ಕ್ಕೆ ನಡೆದ ಚರಖಾ ಸಂಘದ ಸಭೆಗೆ ವಿಕೇಂದ್ರೀಕರಣದಿಂದ ಯೋಜನೆಯ ಬಗ್ಗೆ ಪೂಜ್ಯ ಮಹಾತ್ಮಾ ಗಾಂಧೀಜಿಯವರು ಮೇಲಿನ ಸೂತ್ರರೂಪಿ ಸಂದೇಶವನ್ನು ಕೊಟ್ಟರು.)

# ಅಧ್ಯಾಯ ೯



## ಕರ್ನಾಟಕದವರಿಗೆ ಗಾಂಧೀಜಿಯ ಪತ್ರಗಳು

೯-೩-೧೯೨೪

**ಶ್ರೀ ಗಂಗಾಧರರಾವ್ ದೇಶಪಾಂಡೆ,** ಬೆಳಗಾವಿ ಇವರಿಗೆ

(ಗಾಂಧೀಜಿ ಕರುಳು ಪುಚ್ಛವ್ಯಾಧಿಗೆ ಶಸ್ತ್ರಚಿಕಿತ್ಸೆ ಹೊಂದಿವರು ಪೂನಾದ ಸಾಸೂನ್ ಆಸ್ಪತ್ರೆಯಲ್ಲಿ. ಆ ಸಮಯದಲ್ಲಿ ಮಾರ್ಚ್ ೯ರಂದು ಶ್ರೀ ಗಂಗಾಧರರಾವ ದೇಶಪಾಂಡೆಯವರಿಗೆ ಬರೆದ ಪತ್ರ ಒಂದರ ತಾಜಾ ಕಲಮು ಇದು.)

ನಿಮಗೆ ಕಾಗದವನ್ನು ಹೇಳಿ ಬರಿಸಿದ ಮೇಲೆ, ಮಜಲೀ ವಿಷಯವಾಗಿ ಸಾಕಷ್ಟು ಪೂರ್ಣ ವರದಿ ನನಗೆ ತಲುಪಿತು. ಎಂಥ ದುರ್ಘಟನೆ. ಆದರೆ ಇದೂ ನಮ್ಮ ಧ್ಯೇಯಕ್ಕಾಗಿ ನಾವು ಮಾಡಬೇಕಾದ ತ್ಯಾಗದ ಅಂಶವೆಂದು ನಾನು ಭಾವಿಸುತ್ತೇನೆ. ನಮಗೆ ಕರುಳುಪುಚ್ಛ ರೋಗವೇ ಬರಲಿ. ಇನ್ನೂ ಕೆಟ್ಟದ್ದೆಂದರೆ ಹುಚ್ಚೆ ಹಿಡಿಯಲಿ, ನಾವು ಸೆರೆಮನೆಗೆ ಹೋಗಲು ಅಂಜಬಾರದು. ನಮ್ಮಲ್ಲಿ ಕೆಲವರು ಸೆರೆಮನೆಗೆ ಹೋಗದಿದ್ದರೂ ಹುಚ್ಚರಾಗುತ್ತೇವೆ. ಎಷ್ಟೋ ಮಂದಿ ಕರುಳುಪುಚ್ಛ ರೋಗವನ್ನೂ ಹೊಂದುತ್ತೇವೆ.

ಈಗ ದುರ್ಘಟನೆಯ ವಸ್ತು ಸ್ಥಿತಿಯನ್ನು ಕುರಿತು ಯೋಚಿಸೋಣ. ಮಜಲಿ ಪ್ರಯಾಣ ಮಾಡುವ ಸ್ಥಿತಿಯಲ್ಲಿದ್ದರೆ, ನೀವಾಗಲೀ, ಸೋಮಣ್ಣನಾಗಲೀ ಅವನನ್ನು ನಾನು ಹೋಗುವ ಕಡೆಗೆ ಕರೆದುಕೊಂಡು ಬರಬೇಕು. ಆದರೆ ಸಮುದ್ರ ತೀರದ ಸ್ಥಳಕ್ಕೆ ನಾನು ಅಡಿಗೆಯವನನ್ನು ಕರೆದುಕೊಂಡು ಹೋಗುವುದಿಲ್ಲವಾದ್ದರಿಂದ ಅವನೊಂದಿಗೆ ಒಬ್ಬ ಅಡಿಗೆಯವನನ್ನು ನೀವೇ ಕರೆದುಕೊಂಡು ಬನ್ನಿ. ಇಲ್ಲವಾದರೆ ಕಳುಹಿಸಿಕೊಡಿ. ನಾನು ಅತಿಥಿಗಳನ್ನು ಸ್ವಾಗತಿಸಲು ಬಯಸುವುದಿಲ್ಲ. ಆದರೆ ನನ್ನಂಥ ರೋಗಿಷ್ಠರನ್ನು ಸ್ವಾಗತಿಸುತ್ತೇನೆ. ನಿಜವಾಗಿಯೂ ಅವರು ನನ್ನೊಡನಿದ್ದರೆ ನನಗೆ ಹೆಚ್ಚು ಹರ್ಷವಾಗುತ್ತದೆ. ಸಮುದ್ರದ ತಡಿಗೆ ನಾನು ಹೋಗಲು ಸಂಕೋಚವೇ ಆಗುತ್ತಿದೆ. ನಾನು ಹೊಂದಿರುವಂಥ ಸೌಕರ್ಯಗಳು ಎಲ್ಲ ರೋಗಿಷ್ಠರಿಗೂ ದೊರಕಲಾರವು. ಆದುದರಿಂದ ನನ್ನ ಸಹಕಾರ್ಯಕರ್ತರಾಗಿದ್ದು, ನನ್ನಂತೆಯೇ ರೋಗಿಷ್ಠ

ರಾದವರು ನನ್ನೊಂದಿಗೆ ಇದ್ದರೆ ನನ್ನ ಸಂಕೋಚ ಕಡಿಮೆಯಾಗುತ್ತದೆ. ಮಜಲೀ ಸಮುದ್ರದ ತಡಿಯಲ್ಲಿ ನನ್ನೊಡನೆ ಇದ್ದುದರ ಪರಿಣಾಮವಾಗಿ ಅವನ ಬುದ್ಧಿ ನೆಟ್ಟಗಾದರೆ ನನಗೆ ಅದೆಂಥ ಹರ್ಷ. ಆದುದರಿಂದ ಅವನು ನನಗೆ ತೊಂದರೆಯೆಂದು ಒಂದು ಕ್ಷಣವೂ ನೀವು ಯೋಚಿಸಬಾರದು. ಅವನು ಸುರಕ್ಷಿತವಾಗಿ ಪ್ರಯಾಣಮಾಡಬಲ್ಲನೋ ಎಂಬುದನ್ನು ಮಾತ್ರ ನೀವು ಯೋಚಿಸಬೇಕು.

**–ಮೋ.ಕ. ಗಾಂಧೀ**

* * *

ಗಂಗಾಧರರಾವ್ ದೇಶಪಾಂಡೆಯವರಿಗೆ ಬರೆದ ಪತ್ರ

ಸಾಬರಮತಿ ಜುಲೈ ೨೧, ೧೯೨೪

**ನನ್ನ ಪ್ರಿಯ ಗಂಗಾಧರರಾಯರೇ**

ಲೇಖನವೊಂದನ್ನು ಬರೆಯಲು ಆರಂಭಿಸಿದ ಈ ಪತ್ರವನ್ನು "ಪ್ರೇಮ ಪತ್ರ" ವನ್ನಾಗಿ ಪರಿವರ್ತಿಸಿದ್ದೇನೆ. ಇಂದಿನ ಮರಾಠೀ ಪತ್ರಿಕೆಗಳಲ್ಲಿ ನಿಮ್ಮ ಬಗೆಗೆ ಪ್ರಕಟವಾಗಿರುವ ಕೆಲವು ಆಕ್ಷೇಪಗಳಿಗೆ "ಯಂಗ್ ಇಂಡಿಯಾ"ದಲ್ಲಿ ಉತ್ತರ ಕೊಡಬೇಕೆಂದು ಯೋಚಿಸಿದೆ. ಆದರೆ ಆರಂಭ ಮಾಡಿದ ಮೇಲೆ–ಹೊಡೆದು ಹಾಕಿರುವ ಪಂಕ್ತಿಗಳನ್ನು ನೀವೇ ನೋಡುತ್ತೀರಿ ನನ್ನ ಲೇಖನ ಇನ್ನೂ ಹೆಚ್ಚು ಧೂಳನ್ನು ಎಬ್ಬಿಸಬಹುದೆಂಬ ಭಾವನೆ ಬಂದಿತು. ಆದುದರಿಂದ ನೀವು "ಒದೆದ ಕಾಲಿಗೆ ಮುತ್ತು ಕೊಡು" ಎಂಬ ತತ್ವವನ್ನು ಅಕ್ಷರಶಃ ಪಾಲಿಸಿರಿ, ನಿಮ್ಮನ್ನು ಅವಹೇಳನಕ್ಕೆ ಗುರಿ ಮಾಡಿರುವವರ ಬಗೆಗೆ ಕೆಡುಕನ್ನು ಚಿಂತಿಸಲೂ ಬೇಡಿ, ಭಾವಿಸಲೂ ಬೇಡಿ ಎಂದು ತಿಳಿಸುವುದಕ್ಕೆ ಇದನ್ನು ಬರೆಯುತ್ತಿದ್ದೇನೆ. ನಮ್ಮ ವಿರೋಧಿಗಳೇ ನಮಗೆ ತಾಳ್ಮೆಯನ್ನೂ, ಸಹನೆಯನ್ನೂ ಕಲಿಸುವವರು. ನಮ್ಮ ಹೃದಯಾಂತರಾಳದಲ್ಲಿರುವ ಪ್ರೇಮವನ್ನು ಎಚ್ಚರಗೊಳಿಸುವ ಸಹಾಯವೆಸಗುವವರು ಅವರೇ. ಪ್ರೀತಿಸುವವರನ್ನು ಎಲ್ಲರೂ ಪ್ರೀತಿಸುತ್ತಾರೆ. ಆದರೆ ಯಾರು ನಮ್ಮನ್ನು ದ್ವೇಷಿಸುವರೋ ಅವರನ್ನು ಪ್ರೀತಿಸುವುದೇ ನಿಜವಾದ ಪ್ರೀತಿಯ ಪರೀಕ್ಷೆ. ನಿಮ್ಮ ಬಗೆಗೆ ಯಾವ ಆಪಾದನೆಗಳು ಮಾಡಲ್ಪಟ್ಟಿರುವುವೋ ಅವುಗಳನ್ನು ನೀವು ತೀವ್ರವಾಗಿ ತೆಗೆದುಕೊಳ್ಳುವುದಿಲ್ಲವೆಂದು ನಾನು ಬಲ್ಲೆ. ಆದರೆ ನೀವು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯಾರು ನಿಮ್ಮನ್ನು ಆಣೆಯಿಟ್ಟು ಬೈಯ್ಯುವರೋ ಅವರನ್ನು ಕ್ರಿಯಾತ್ಮಕವಾಗಿ ಪ್ರೀತಿಸಬೇಕೆಂದು ಸಲಹೆ ಮಾಡುತ್ತೇನೆ. ಆ ರೀತಿ ಮಾಡಲು ಈ ಪತ್ರ ನಿಮಗೆ ನೆರವನ್ನು ನೀಡಲಿ.

ನಿಮ್ಮ ಆ ಮೊಕದ್ದಮೆಯ ವಿಷಯವಾಗಿ ಏನನ್ನು ಮಾಡಿದಿರೆಂಬುದನ್ನು ತಿಳಿಸಿ.

ಕಾಂಗ್ರೆಸ್ ಅಧ್ಯಕ್ಷಸ್ಥಾನದ ಬಗೆಗೆ ನನ್ನ ನಿರ್ಧಾರವನ್ನು ನೀವು ಒಪ್ಪದಿರಬಹುದು. ದೀರ್ಘವಾಗಿ ಪರ್ಯಾಲೋಚನೆ ಮಾಡಿದ ತರುವಾಯ ನಾನು ಪೂರ್ಣವಾಗಿ ಸ್ವತಂತ್ರ ಕ್ರಿಯೆಯುಳ್ಳವನಾಗಿರಬೇಕೆಂದು ಭಾವಿಸಿದೆ. ಕಾಲಸನ್ನಿಹಿತವಾಗಿದೆಯೆಂದು ನನಗೆ ಭಾಸವಾದ

ಕೂಡಲೇ ಕ್ರಿಯಾಕ್ಷೇತ್ರದಿಂದ ವಿರಮಿಸುವ ಕಾಂಗ್ರೆಸ್ಸಿಗೆ ಅಹಿತವನ್ನು ಎಸಗದೆ ಅದನ್ನು ತ್ಯಜಿಸಲು ಸಾಧ್ಯವಿಲ್ಲ. ಹೇಗಿದ್ದರೂ ದೇಶ ನಿಜವಾಗಿಯೂ ನಮ್ಮ ಹಿಂದೆ ಇದ್ದರೆ, ನಾನು ಕಾಂಗ್ರೆಸ್ಸಿನ ಅಧ್ಯಕ್ಷನಾಗಿರಲಿ, ಇಲ್ಲದಿರಲಿ ಅದರ ಧೋರಣೆಯನ್ನು ನಿರ್ವಹಿಸಲು ಸಾಧ್ಯವೇ ಸರಿ.

ಮಜಲೀ ಹೇಗಿದ್ದಾನೆ?

ನಿಮ್ಮ ವಿಶ್ವಾಸಿ,
**ಮೋ.ಕ.ಗಾಂಧೀ**

* * *

ಸಾಬರಮತಿ ಆಶ್ರಮ ೨೭-೭-೨೬

**ನನ್ನ ಆತ್ಮೀಯ ಗಂಗಾಧರರಾಯರಿಗೆ**

ನಿಮ್ಮ ಚಟುವಟಿಕೆಗಳ ಬಗೆಗಿನ ನಿಮ್ಮ ಸುದೀರ್ಘಪತ್ರ ತಲುಪಿತು. ಆಶೆ ನಿರಾಶೆಗಳೆರಡೂ ಅದರಲ್ಲಿ ನನಗೆ ಕಂಡುಬಂದವು. ನಮ್ಮ ಪ್ರಯೋಗಗಳು ಮೂಲಭೂತ ತತ್ವಗಳಿಗೆ ಅನುಗುಣವಾಗಿದ್ದರೆ ನಿರಾಶೆಗೆ ಎಳ್ಳಷ್ಟೂ ಕಾರಣವಿಲ್ಲ.

ಬಡವರು ಜೀವನದಲ್ಲಿಯ ಆಸಕ್ತಿಯನ್ನೇ ಕಳೆದುಕೊಂಡಿರುವುದರಿಂದ ಸೋಮಾರಿತನ ಅವರಲ್ಲಿ ಬೇರುಬಿಟ್ಟಿದೆ. ನಾವು ಅವರ ಮಧ್ಯದಲ್ಲಿ ಸಾಕಷ್ಟು ದೀರ್ಘಕಾಲ ಕೆಲಸ ಮಾಡಿದ ನಂತರ ಅವರು ಜೀವನದಲ್ಲಿ ಆಸ್ಥೆಯನ್ನು ತೋರಬಹುದು. ಜನತೆಯ ಸಮಸ್ಯೆಯನ್ನು ಬಿಡಿಸಲು ನಮ್ಮದೆ ಸರಿಯಾದ ಏಕಮೇವ ಮಾರ್ಗ ಎಂದು ಮನವರಿಕೆಯಾದರೆ ಅದರ ಸಂಪೂರ್ಣ ಪರಿಣಾಮ ಕಂಡುಬರುವದಕ್ಕಾಗಿ ನಾವು ಯುಗಯುಗಾಂತರಗಳವರೆಗೆ ದಾರಿ ಕಾಯಲು ಸಿದ್ಧ. ನಮ್ಮಲ್ಲಿರುವ ಅಶ್ರದ್ಧೆ ಅಸಹಿಷ್ಣುತೆಯ ಪರಿಣಾಮವಾಗಿಯೆ ನಾವು ನಮ್ಮ ಉಪಾಯಗಳನ್ನು ಬದಲಿಸುತ್ತ ಹೋಗುತ್ತೇವೆ. ಯಾವದಕ್ಕೂ ಬೇರು ಬಿಡಲು ಆಸ್ಪದ ನೀಡುವುದಿಲ್ಲ. ಹೀಗಾಗಿ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತ ಹೋಗುತ್ತದೆ.

ಕೈಯಿಂದ ನೂತ ನೂಲನ್ನು ನೇಕಾರರು ನೇಯಲು ನಿರಾಕರಿಸುವದಕ್ಕೆ ಎರಡು ಕಾರಣಗಳಿವೆ. ನಮ್ಮ ನೂಲು ಗಿರಣಿ ನೂಲಿನಷ್ಟು ಗಟ್ಟಿಯಾಗಿರುವುದಿಲ್ಲ. ಮತ್ತು ಈ ಕೈನೂಲಿನಿಂದ ನೇದ ಬಟ್ಟೆಯ ಅಸ್ತಿತ್ವದ ಬಗ್ಗೆ ಅವರಿಗಿನ್ನೂ ಮನವರಿಕೆಯಾಗಿಲ್ಲ. ಕ್ರಮೇಣ ಅವರಲ್ಲಿ ಅವಶ್ಯಕ ಶ್ರದ್ಧೆ ಮೂಡಿಬರುತ್ತದೆ. ನೂಲಿನ ಗುಣವನ್ನು ಉತ್ತಮಗೊಳಿಸಲು ನಾವು ಪ್ರಯತ್ನಿಸಬೇಕು. ಉತ್ತಮ ನೂಲನ್ನು ಒದಗಿಸುವಂತೆ ನಾವು ನೂಲುವವರಿಗೆ ದಿನಾಲು ಬೆನ್ನುಹತ್ತಬೇಕು. ಅವರ ರಾಟೆಗಳನ್ನು ಪರೀಕ್ಷಿಸಬೇಕು. ಅವರ ದೋಷಗಳನ್ನು ತಿದ್ದಬೇಕು. ಉತ್ತಮ ನೂಲನ್ನು ಹೆಚ್ಚು ವೇಗದಿಂದ ನೂಲಲು ಅವಕಾಶ ಮಾಡಿಕೊಡಬೇಕು. ನಮ್ಮ ರಾಟೆಗಳ ಸುಧಾರಣೆ ಮಾಡುವದು ಶಕ್ಯವಿದೆ.

ಆಶ್ರಮ ವಾಸಿಗಳಾದ ನಾವು ಇಲ್ಲಿ ನೂಲಿನ ಗುಣವನ್ನು ಹೆಚ್ಚಿಸಲು ಪ್ರಯೋಗ ನಡೆಸಿದ್ದೇವೆ.

ಎರಡು ವಾರಕ್ಕೊಮ್ಮೆ ಪರೀಕ್ಷಿಸುತ್ತಿದ್ದೇವೆ; ಸುಧಾರಣೆ ಆಶ್ಚರ್ಯಕರವಾಗಿದೆ. ಆ ಬಗ್ಗೆ ಅಂಕಿ ಸಂಖ್ಯೆ ಪ್ರಸಿದ್ಧಿಸಬೇಕೆಂದಿದ್ದೇನೆ.

'ಯಂಗ್ ಇಂಡಿಯಾ' ಪುಟಗಳಲ್ಲಿ ನೀವು ಒದಗಿಸಿದ ಮಾಹಿತಿಯನ್ನು ಸಾಧ್ಯವಿದ್ದಷ್ಟು ಉಪಯೋಗಿಸಿಕೊಳ್ಳುತ್ತೇನೆ. ಈ ವಾರ ಪ್ರಕಟಿಸುವಾಗ ಕೋಷ್ಟಕವನ್ನು ನೋಡಿರಿ. ಆ ಕೋಷ್ಟಕದಲ್ಲಿ ಕೇಳಿದ ಮಾಹಿತಿ ಒದಗಿಸಬೇಕು ಎಂದು ಅಪೇಕ್ಷಿಸುತ್ತೇನೆ. ಪ್ರತಿಯೊಂದು ಖಾದಿ ಉತ್ಪಾದನೆ ಸಂಸ್ಥೆಯ ಸಕಲ ವಿವರಗಳನ್ನೂ ಒಳಗೊಳ್ಳುವಂತೆ ಆ ಕೋಷ್ಟಕವನ್ನು ವ್ಯಾಪಕವಾಗಿಸಬೇಕೆಂದಿದ್ದೇನೆ.

ನಿಮ್ಮ ಆತ್ಮೀಯ
**ಮೋ.ಕ. ಗಾಂಧೀ**

* * *

ಸತ್ಯಾಗ್ರಹಾಶ್ರಮ ಸಾಬರಮತಿ ೧೪-೨-೨೯,

**ನನ್ನ ಪ್ರಿಯ ಗಂಗಾಧರರಾವ,**

ನಿಮ್ಮ ಪತ್ರ ಮುಟ್ಟಿದ ಕೂಡಲೇ ನಿಮಗೆ ತಂತಿ ಸಂದೇಶ ಕಳಿಸಿದ್ದೇನೆ. ಫೆಬ್ರವರಿಯಲ್ಲಿ ನಾನು ಕರ್ನಾಟಕ ಸಂಚಾರ ಕೈಕೊಳ್ಳುವದು ಅಸಾಧ್ಯ ಎಂದು ನನಗೀಗ ಅನಿಸುತ್ತದೆ. ಜೂನಕ್ಕೆ ಮೊದಲೇ ಈ ಸಂಚಾರ ಸಾಧ್ಯವಾಗಲಿಕ್ಕಿಲ್ಲ. ನಾನು ಮೊದಲು ಬ್ರಹ್ಮದೇಶ, ಆಂಧ್ರಗಳ ಸಂಚಾರವನ್ನು, ಕಾರ್ಯಕ್ರಮವಿನ್ನೂ ನಿಶ್ಚಿತವಾಗಿಲ್ಲವಾದರೂ, ಮುಗಿಸಬೇಕು.

ಆದರೆ ನಾನು ಕರ್ನಾಟಕದಲ್ಲಿ ಸಂಚರಿಸುವಾಗ ಅಲ್ಲಿ ಸಂಗ್ರಹವಾಗುವ ಹಣವನ್ನು ಕಾಂಗ್ರೆಸ ಸಮಿತಿಗಳು ಹಾಗೂ ಅ.ಭಾ. ನೂಲುವವರ ಸಂಘಗಳಲ್ಲಿ ಹಂಚಿಕೊಡಲು ಸಾಧ್ಯವಾಗುವುದಿಲ್ಲ. ಕೇವಲ ಖಾದಿಯ ಹಿತದ ಸಲುವಾಗಿ ಮತ್ತು ಹಿಂದೆ ನಿಲ್ಲಿಸಿದ ಸಂಚಾರವನ್ನು ಪೂರ್ತಿಗೊಳಿಸುವುದಕ್ಕಾಗಿಯೇ ಆ ಸಂಚಾರ ಆಗುವುದು. ಕಾಂಗ್ರೆಸ ಸಮಿತಿಗಳು ತಮ್ಮ ಹೆಸರಿಗೆ ಯೋಗ್ಯವೆನಿಸಿಕೊಳ್ಳಬೇಕಾದರೆ, ಅಖಿಲ ಭಾರತೀಯ ನಾಯಕರ ಸಹಾಯವಿಲ್ಲದೆ ತಮಗೆ ಬೇಕಾಗುವ ಜನಧನ ಶಕ್ತಿಯನ್ನು ಸಂಪಾದಿಸಿಕೊಳ್ಳಬೇಕು ಎಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ.

ನಿಮ್ಮ ಆತ್ಮೀಯ
**ಮೋ.ಕ. ಗಾಂಧೀ**

* * *

## ಗಾಂಧೀಜಿ ಶ್ರೀ ಸದಾಶಿವರಾಯರಿಗೆ ಬರೆದ ಪತ್ರ

ಸಾಬರಮತಿ ಆಶ್ರಮ, ೨೪-೪-೧೯೨೮

**ನನ್ನ ಪ್ರಿಯ ಸದಾಶಿವರಾವ,**

ನಿಮ್ಮ ಪತ್ರ ಕಂಡು ಸಂತೋಷವಾಯಿತು. ನಿಮ್ಮ ಪುತ್ರಿಯರು ನನ್ನನ್ನು ಕಾಣಲು ಅಡ್ಡಿಯಿಲ್ಲ. ಘೋಷಾದ ಹೆಣ್ಣುಮಕ್ಕಳಿಗಿಂತಲೂ ಕೀಳಾಗದೆ ಅವರು ಧೀರೆಯರಾಗಬೇಕು. ನನ್ನ ಅಭಿಪ್ರಾಯದಲ್ಲಿ ಇಂದಿನ ಬಣ್ಣದ ಜೀಸಣಿಕೆಗಳು ಘೋಷಾ ಸ್ತ್ರೀಯರಿಗಿಂತಲೂ ಕಡೆ. ಮತ್ತು ದೇಶದ ನಿಜವಾದ ಸೇವಕರಾಗ ಬಯಸುವವರು ಬಡತನವನ್ನು, ಪರಿಸ್ಥಿತಿ ಮೂಲಕ ವೆಂದಲ್ಲ-ಆದರೆ ಸ್ವೇಚ್ಛೆಯಿಂದ ಒಪ್ಪಿಕೊಳ್ಳಬೇಕು.

ನಿಮ್ಮ ಆತ್ಮೀಯ
**ಮೋ.ಕ.ಗಾಂಧೀ**

* * *

ಸತ್ಯಾಗ್ರಹಾಶ್ರಮ
ಸಾಬರಮತಿ, ೭-೯-೧೯೨೮

**ನನ್ನ ಪ್ರಿಯ ಸದಾಶಿವರಾವ,**

ನಿಮ್ಮ ಪತ್ರ ಕೈ ಸೇರಿತು. ನಾವು ನಮ್ಮ ಬಗೆಗೆ ವಿಚಾರ ಮಾಡದೆ ದೇಶ ಸೇವೆಯಲ್ಲಿ ತೊಡಗಿದರೆ, ಜಗತ್ತು ನಮಗೆ ಕಲ್ಲೆಸೆದರೂ ನಮ್ಮನ್ನು ಕೆಟ್ಟ ರೀತಿಯಿಂದ ನಡೆಸಿಕೊಂಡರೂ ನಮಗೆ ಸಂತೋಷವೇ ಆಗುವದು. ನೀವು ಆಘಾತವನ್ನು ಔದಾರ್ಯದಿಂದ ಸಹಿಸಿಕೊಂಡು ಬೆನ್ನ ಮೇಲಿನ ಹೊರೆ ಕಳೆದುಹೋಯಿತು ಎಂದು ಭಾವಿಸಿದರೆ ನಿಮಗೆ ಖಂಡಿತ ಹಾಯೆನಿಸುವದು ಎಂದು ನನಗೆ ಭರವಸೆಯಿದೆ.

ನಿಮ್ಮ ಆತ್ಮೀಯ
**ಮೋ.ಕ. ಗಾಂಧೀ**

* * *

ಯರವಾಡ ಸೆಂಟ್ರೆಲ್ ಪ್ರಿಜನ್
೧೦-೧೨-೧೯೩೨

**ನನ್ನ ಪ್ರಿಯ ಸದಾಶಿವರಾವ,**

ನಿಮ್ಮ ಪತ್ರ ತಲುಪಿತು. ನಿಮ್ಮ ಅಲ್ಲಿಯ ಚಟುವಟಿಕೆಗಳನ್ನು ವಿವರವಾಗಿ ತಿಳಿಸಿದ್ದಕ್ಕೆ ನನಗೆ ಸಂತೋಷವಾಗಿದೆ. ಗುಪ್ತ ಪ್ರಚಾರವನ್ನು ನೀವು ಕಡೆಗಣಿಸಿಬಿಡಬೇಕು ಎಂದು ಮಾತ್ರ ನಾನು ಹೇಳಬಲ್ಲೆ. ಮತ್ತು ನೀವು ಸಂಪೂರ್ಣವಾಗಿ ನ್ಯಾಯದಿಂದ ಪ್ರಾಮಾಣಿಕತನದಿಂದ ಇರಲು ಪ್ರಯತ್ನಿಸಬೇಕು. ಮತ ಗಣನೆ ನಮಗೆ ವಿರುದ್ಧವಾದರೂ ಚಿಂತೆಯಿಲ್ಲ; ನಮ್ಮ

ಕಾರ್ಯಕರ್ತರಾರೂ ಅವಾಸ್ತವ ಒತ್ತಾಯವನ್ನು ಉಪಯೋಗಿಸಬಾರದು. ಎದುರಾಳಿಗಳು ಏನೇ ಆಡಿದರೂ ಮಾಡಿದರೂ ಅವರನ್ನು ಸೌಜನ್ಯದಿಂದ ಕಾಣಬೇಕು. ನೀವು ನಿಯತ್ತಿನಿಂದಿದ್ದರೆ ವಿಷಯವೂ ನಿರ್ವಿರ್ಯವಾಗುವುದು.

ನಿಮ್ಮ ಆತ್ಮೀಯ
**ಮೋ.ಕ.ಗಾಂಧೀ**

*  *  *

ಯರವಾಡ ಸೆಂಟ್ರಲ್ ಪ್ರಿಜನ್
೧೩-೧೨-೧೯೩೨

**ನನ್ನ ಪ್ರಿಯ ಸದಾಶಿವರಾವ,**

ನೀವು ನಿಮ್ಮ ಚಟುವಟಿಕೆಗಳನ್ನು ನನಗೆ ತಿಳಿಸುತ್ತ ಇರುವುದು ಸಂತೋಷ. ಬಾ ಅವರ ಬಗೆಗೆ ಕೂಡ ತಿರಸ್ಕಾರ ಉಂಟಾಗುವುದು ಸಹಜ. ಇಂಥವನ್ನೆಲ್ಲ ನಾವು ಸ್ವಾಭಾವಿಕವಾಗಿ ನಗುಮೊಗದಿಂದ ಎದುರಿಸಬೇಕು. ಹಾಗೆ ಮಾಡಿದರೆ ಅಂದರೆ ಸನಾತನಿಗಳ ತಿರಸ್ಕಾರವನ್ನು ಪ್ರತಿಭಟಿಸದೆ ಇದ್ದರೆ, ನಾವೇ ಅವರ ಸ್ಥಳದಲ್ಲಿದ್ದೇವೆಂದು ಭಾವಿಸಿ ಅವರಂತೆಯೇ ವರ್ತಿಸ ಬಹುದಾಗಿತ್ತು ಎಂದುಕೊಂಡರೆ, ಆ ತಿರಸ್ಕಾರವು ತಾನೇ ಕ್ರಮೇಣ ನಶಿಸಿ ಹೋಗುವದು. ಕ್ರೋಧವನ್ನು ಅಕ್ರೋಧದಿಂದಲೇ ಗೆಲ್ಲಬಹುದು ಎಂಬುದನ್ನು ದೈನಂದಿನ ಜೀವನದಲ್ಲಿ ವೈಜ್ಞಾನಿಕವಾಗಿಯೂ ಸಿದ್ಧಪಡಿಸಿ ತೋರಿಸಬಹುದು. ಆದರೆ ಆ ಮಾತೇ ಬೇರೆ ಎಂಬುದನ್ನು ನಾನು ಅರಿತಿದ್ದೇನೆ. ಸುಲಭವೋ-ಕಠಿಣವೋ ಶುದ್ಧ ಧರ್ಮದ ವಿಷಯದಲ್ಲಿ ನಾವು ಆತ್ಮ ಸಂಯಮ ಕಳೆದುಕೊಂಡು ಯಾವದೇ ರೀತಿಯಲ್ಲಿ ಪ್ರತಿಭಟಿಸಲಾರೆವು.

ನಿಮ್ಮ ಆತ್ಮೀಯ
**ಮೋ.ಕ.ಗಾಂಧೀ**

*  *  *

ಯರವಾಡ ಸೆಂಟ್ರಲ್ ಪ್ರಿಜನ್ ೨೧-೧-೧೯೩೩

**ನನ್ನ ಪ್ರಿಯ ಸದಾಶಿವರಾವ,**

ನಿಮ್ಮ ೧೩ನೇ ತಾರೀಖಿನ ಪತ್ರ ನನ್ನ ಕೈಸೇರಿದೆ. ಅಸತ್ಯ ಪ್ರಚಾರ-ನಿಂದೆ ಎಲ್ಲ ಸುಧಾರಕರ ಪಾಲಿಗೆ ಬಿಟ್ಟಿದ್ದಲ್ಲ. ಸಾಮಾನ್ಯ ನಿಯಮಕ್ಕೆ ಅಪವಾದವಾದರೂ ಏಕೆ ಬೇಕು? ಇಂಥ ನಿಂದೆ ತಾಳಿಕೊಳ್ಳಬಲ್ಲವರು, ಒಂದು ಸುಳ್ಳಿಗೆ ಎರಡನ್ನು ಹೇಳಿ ಪ್ರತಿಭಟಿಸುವವರು ಏತಕ್ಕೂ ಹೆದರಬೇಕಾಗಿಲ್ಲ; ಅಷ್ಟೇಕೆ ಇಂಥ ತತ್ವಹೀನ ವಿರೋಧದಿಂದ ನಿಜವಾಗಿಯೂ ಅಧಿಕ ಬಲವನ್ನೇ ಸಂಪಾದಿಸುವರು. ಆದುದರಿಂದ ಚಳವಳಿ ಸರಿಯಾಗಿದೆಯೆಂಬ ಬಗ್ಗೆ ಮತ್ತು ಅದನ್ನು ನಡೆಸಿಕೊಂಡು ಹೋಗುವ ವಿಧಾನಗಳ ಪರಿಶುದ್ಧತೆಯ ಬಗ್ಗೆ ತಿಳಿವಳಿಕೆ ಉಳಿದುಕೊಂಡಿರುವವರೆಗೆ ಇಂಥ ವಿರೋಧದ ಬಗ್ಗೆ ನಾವು ಯಾವ ರೀತಿಯಿಂದಲೂ

ಪ್ರಕ್ಷುಬ್ಧರಾಗಬೇಕಾಗಿಲ್ಲ. ಅದರಿಂದಲೇ ನಾವು ಬೆಳೆಯುವೆವೆಂಬ ನಂಬಿಕೆ ಇರಬೇಕು. ನಮ್ಮಲ್ಲಿಯ ಸತ್ಯದ ಬಗ್ಗೆ ಮತ್ತು ಅದರಿಂದ ನಾವು ಪಡೆಯುವ ಶಕ್ತಿಯ ಬಗ್ಗೆ ನಮ್ಮಲ್ಲಿ ದೃಢ ನಂಬಿಕೆಯಿರುವಾಗ ನಾವು ದುರ್ಬಲರೆಂಬ ಆಪಾದನೆಗೀಡಾಗಬಹುದಾದ ಹೆದರಿಕೆಯೇ ಬೇಡ. ತಾನು ದುರ್ಬಲನೆನಿಸಬಹುದು ಎಂಬ ಹೆದರಿಕೆಯಿಂದ ಯಾರು ಸತ್ಯಾಗ್ರಹವನ್ನು ಮಾಡಲು ಹಿಂಜರಿಯುತ್ತಾರೋ ಅವರು ಕೂಡಲೇ ಅಸತ್ಯಕಾರಿಗಳಾಗುತ್ತಾರೆ. ಆದುದರಿಂದ ಆತನಲ್ಲಿ ಸತ್ಯದ ಬಗೆಗೆ ಜಾಗೃತಿಯೇ ಇದ್ದಿಲ್ಲವೆಂದು ಹೇಳಬಹುದು.

ನೀವು ಬಿಟ್ಟುಹೋದ ಪ್ರಶ್ನೆಗಳನ್ನು ನೋಡಿದೆ. ನಾನು ಈಗಾಗಲೇ ಕೊಟ್ಟ ಹೇಳಿಕೆಗಳಿಂದ ಅವೆಲ್ಲಕ್ಕೆ ಉತ್ತರ ಕೊಟ್ಟಂತಾಗಿರುವದರಿಂದ ಅವನ್ನಿಲ್ಲಿ ಎತ್ತಿಕೊಂಡಿಲ್ಲ. "ಜಸ್ಟಿಸ್" ಪತ್ರಿಕೆಯ ಸಂಪಾದಕನಿಗೆ ನಾನು ಬರೆದ ಪತ್ರ ಅದರ ಕೊನೆಯ ಸಂಚಿಕೆಯಲ್ಲಿ ಪ್ರಸಿದ್ಧವಾದುದನ್ನು ನೀವು ನೋಡಬಹುದು.

ಇನ್ನು ಉಳಿದದ್ದೆಂದರೆ ಅಸ್ಪೃಶ್ಯರ ಸಮಾಜ ಸೇವಕರ ಪ್ರಾಂತಿಕ ಹಾಗೂ ಜಿಲ್ಲಾ ಶಾಖೆಗಳ ಬಗ್ಗೆ ಕಾಂಗ್ರೆಸ್ಸಿನ ವರ್ತನೆ ಎಂತಿರಬೇಕು ಎಂಬ ನಿಮ್ಮ ಪ್ರಶ್ನೆ. ಅವರ ಸೇವೆ ಅಗತ್ಯವಿರುವಷ್ಟರ ಮಟ್ಟಿಗೆ ಅವರು ಈ ಸಂಸ್ಥೆಗಳೊಡನೆ ಸಹಕರಿಸಬೇಕು, ಅವುಗಳ ಕೆಲಸ ಕಳೆಗುಂದುತ್ತಿರುವದೆಂದು ಅವರಿಗೆ ಅನಿಸಿದರೂ ಚಿಂತೆಯಿಲ್ಲ. ನಿಷ್ಠಾವಂತರಾದ ಎಷ್ಟೇ ಕಾರ್ಯಕರ್ತರ ಸೇವೆಗೆ ಅವಕಾಶವಿದ್ದರೂ ಯಾವದೊಂದು ಸಂಸ್ಥೆಯ ಮುಖಾಂತರವೇ ಸೇವೆ ಸಲ್ಲಿಸಬೇಕೆಂದೇನಿಲ್ಲ. ಹರಿಜನರಿಗೆ ಪ್ರೀತಿಯಿಂದ ಒಂದು ತಂಬಿಗೆ ನೀರು ಕೊಟ್ಟರೂ ಅಸ್ವಸ್ಥ ಹರಿಜನನಿಗೆ ಚಿಕಿತ್ಸೆ ನೀಡಿದರೂ ಸರಿ ಒದಗಿಸಿದರೂ ಸರಿ, ಆಸರೆಯಿಲ್ಲದ ಹರಿಜನರಿಗೆ ಅದನ್ನೊದಗಿಸಿದರೂ ಸರಿ, ಇಂಥ ಅನೇಕ ವೈಯಕ್ತಿಕ ಕೃತಿಗಳೂ ಅಸ್ಪೃಶ್ಯತಾ ನಿವಾರಣೆಗೆ ಸಾಕಷ್ಟು ನೆರವಾಗಬಲ್ಲುದು. ಆದ್ದರಿಂದ ನೀವು ಹೇಳುವಂಥ ತಾಪದಾಯಕ ಪರಿಸ್ಥಿತಿ ಉಂಟಾಗಬೇಕಾಗಿಲ್ಲ.

ನಿಮ್ಮ ಆತ್ಮೀಯ
**ಮೋ.ಕ.ಗಾಂಧೀ**

* * *

## ಗಾಂಧೀಜಿಯವರು ಡಾ॥ ಹರ್ಡೀಕರರಿಗೆ ಬರೆದ ಪತ್ರ

1

Sevagram
Wardha
11 4 40

Dear Dr Hardiker,

I have your letter. The chord that is once broken is not easily joined. There was a time when I had thought our hearts had met. Neither the blend nor the breach is a mechanical act. My desire & effort must be to gain as many

2

coworkers as I can get to stay whom I can swear. How that confidence can come I don't know. I hope you realise that the barrier does not make the slightest difference in my regarding you as an esteemed coworker. The difficulty, there, for me, is more moral than practical.

Yours sincerely
M K Gandhi

ಸೇವಾಗ್ರಾಮ, ವರ್ಧಾ ೧೧-೪-೧೯೪೦

**ಪ್ರಿಯ ಡಾ॥ ಹರ್ಡೀಕರ**

ನಿಮ್ಮ ಪತ್ರ ತಲುಪಿದೆ. ಒಮ್ಮೆ ಹರಿದುಹೋದ ಎಳೆಯನ್ನು ಪುನಃ ಸುಲಭದಲ್ಲಿ ಕೂಡಿಸಲಾಗುವುದಿಲ್ಲ. ನಮ್ಮ ಹೃದಯ ಮಿಲನವಾಗಿದೆ, ಎಂದು ನಾನು ಭಾವಿಸಿದ್ದ ಕಾಲ ಒಂದಿತ್ತು. ಹೀಗೆ ಹೃದಯಗಳು ಕೂಡುವುದಾಗಲಿ ಬಿಡುವುದಾಗಲಿ ಯಾಂತ್ರಿಕವಲ್ಲ. ಸಂಪೂರ್ಣ ನಂಬಿಗಸ್ಥರಾದ ಸಹಕಾರಿಗಳನ್ನು ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಪಡೆಯುವದೇ ನನ್ನ ಅಭಿಲಾಷೆ ಮತ್ತು ಪ್ರಯತ್ನ. ಅಂಥ ನಂಬಿಕೆ ಹೇಗೆ ಹುಟ್ಟುವದೋ ನನಗೆ ತಿಳಿಯದು. ನಾನು ನಿಮ್ಮನ್ನು ನನ್ನ ಗೌರವಾರ್ಹ ಸಹಕಾರಿ ಎಂದು ಭಾವಿಸುವಲ್ಲಿ ಈ ಆತಂಕದಿಂದ ಕಿಂಚಿತ್ತೂ ತೊಂದರೆಯಾಗದೆಂದು ನೀವು ಅರಿತಿದ್ದೀರೆಂದು ನಾನು ನಂಬಿದ್ದೇನೆ. ಆತಂಕವೇನಾದರೂ ಇದ್ದಿದ್ದರೆ ಅದು ನೈತಿಕವೇ ಹೊರತು ವ್ಯಾವಹಾರಿಕವಾದದ್ದಲ್ಲ.

ನಿಮ್ಮ ಆತ್ಮೀಯ
**ಎಂ.ಕೆ. ಗಾಂಧೀ**

* * *

## ಗಾಂಧೀಜಿಯವರೊಂದಿಗೆ ಡಾ॥ ನಾ.ಸು.ಹರ್ಡೀಕರರ ಪತ್ರವ್ಯವಹಾರ

ನಾನೂ ಕೂಡ ಇಪ್ಪತ್ತರ ಹರೆಯದಲ್ಲಿದ್ದಾಗ ಹಿಂಸೆಯಲ್ಲಿಯೇ ನಂಬುಗೆಯುಳ್ಳವನಾಗಿದ್ದೆ ಎಂಬುದನ್ನು ಇಲ್ಲಿ ಸ್ಪಷ್ಟಗೊಳಿಸಬೇಕು. ನಾನು ಅಮೇರಿಕೆಯಲ್ಲಿ ಲಾಲಾ ಲಜಪತರಾಯರ ಸಂಗಡ ಇದ್ದಾಗ ಮತ್ತು ನಂತರ ಭಾರತಕ್ಕೆ ಬಂದು ಅಸಹಕಾರ ಚಳವಳಿಯಲ್ಲಿ ಧುಮುಕಿದಾಗ ನನಗೆ ಅಹಿಂಸೆಯ ಮಹತ್ವದ ಅರಿವು ಉಂಟಾಗತೊಡಗಿತು. ಅದರ ಸಾರ ಸರ್ವಸ್ವವನ್ನೂ ಹೀರಲು ಪ್ರಯತ್ನಿಸಿದೆ. ನಾನು ಮಾನವನೇ ಆಗಿರುವುದರಿಂದ ಆಗೀಗ ಅಹಿಂಸಾ ಪಥದಿಂದ ವಿಚಲಿತನಾಗಿ ಕೆಲವು ಹಿಂಸಾಕೃತಿಗಳನ್ನು ಮಾಡಿರಬಹುದು. ಅಂಥ ಸಂದರ್ಭಗಳಲ್ಲಿ ಗಾಂಧೀಜಿ ನನಗೆ ಎಚ್ಚರಿಕೆಯನ್ನಿತ್ತು ದಂಡಿಸಿದ್ದೂ ಉಂಟು. ನಮ್ಮೆಲ್ಲರ ಗುರಿಯನ್ನು ಸಾಧಿಸುವ ಮಹತ್ಕಾರ್ಯಕ್ಕಾಗಿ ಅವರು ನನ್ನ ಹೃದಯವನ್ನು ಗೆದ್ದು ಅಹಿಂಸಾ ಮಾರ್ಗದತ್ತ ಸೆಳೆಯಲು ಪ್ರಯತ್ನಿಸಿದರು. ನನ್ನಂಥವರನ್ನು ಆಕರ್ಷಿಸುವದು ಅವರಿಗೆ ಸುಲಭವಾಗಿದ್ದಿತು. ಆದರೆ ನನ್ನನ್ನು ಗೆಲ್ಲುವುದು ಮಾತ್ರ ಅಷ್ಟೊಂದು ಸುಲಭವಿರಲಿಲ್ಲ. ನನ್ನ (ಈಗ ಕಳೆದುಹೋದ) ಪತ್ರವೊಂದಕ್ಕೆ ಅವರು ೧೧-೪-೪೦ರಂದು ಉತ್ತರಿಸಿದ ಪತ್ರದಿಂದ ಆ ಕಾಲಕ್ಕೆ-ಅವರ ಸಂಬಂಧವೆಂತಿತ್ತು ಎಂಬುದು ಸ್ಪಷ್ಟವಾಗುತ್ತದೆ.

**ಪ್ರಿಯ ಡಾ॥ ಹರ್ಡೀಕರ**

ನಾನು ಕೆಲಸದಲ್ಲಿ ಮುಳುಗಿ ಹೋಗಿದ್ದುದರಿಂದ ಮತ್ತು ನಿಮ್ಮ ಪತ್ರ ನನ್ನ ಕೈ ಸೇರಿದಾಗ “ಯಂಗ್ ಇಂಡಿಯಾ”ದ ಪ್ರತಿ ನನ್ನೆದುರಿಗೆ ಇರದ್ದರಿಂದ ನಿಮ್ಮ ಪತ್ರಕ್ಕೆ ಈ ಮೊದಲೇ ಉತ್ತರಿಸಲಿಕ್ಕಾಗಲಿಲ್ಲ.

ನನ್ನನ್ನು ಕರ್ನಾಟಕಕ್ಕೆ ಆಕರ್ಷಿಸಬೇಕಾದರೆ ನೀವು ಒಂದು ಲಕ್ಷ ರೂ. ಗಳ ಖಾದಿಯನ್ನು ಮಾರಾಟ ಮಾಡಲು ಮತ್ತು ಖಾದಿ ಕಾರ್ಯಕ್ಕಾಗಿ ಒಂದು ಲಕ್ಷ ರೂ. ಗಳ ಹಣ ಶೇಖರಿಸಲು ಸಮರ್ಥರಾಬೇಕು. ಕರ್ನಾಟಕದ ರಾಜಕೀಯ ಜೀವನವನ್ನು ಪುನಾರೂಪಿಸುವುದಕ್ಕಾಗಿ ನೀವು ನನ್ನನ್ನು ಆಕರ್ಷಿಸಬಹುದೆಂದು ಹೇಳಿದ್ದೀರಿ. ರಾಜಕೀಯ ಜೀವನವನ್ನು ಪುನಾರೂಪಿಸುವ ಶಕ್ತಿಯು ಖಾದಿಯಲ್ಲಿದೆ ಎಂದು ನೀವು ನಂಬುವಿರಾ? ಖಾದಿಗಾಗಿಯೆ ನಾನು ಸರ್ವಸ್ವವನ್ನೂ ಪಣಕ್ಕೆ ಹಚ್ಚಿದ್ದೇನೆಂಬುದನ್ನು ನೀವು ಅರಿತಿದ್ದೀರಾ? ನೀವು ಖಾದಿಯ ಪ್ರಗತಿಯನ್ನು ಸಾಧಿಸಿದಷ್ಟೇ ಪ್ರಮಾಣದಲ್ಲಿ ದೇಶದ ರಾಜಕೀಯ ಜೀವನದಲ್ಲಿ ಪ್ರಗತಿ ಸಾಧಿಸಬಲ್ಲಿರಿ. ಹೆಚ್ಚಿಗೆ ಸಾಧ್ಯವಿಲ್ಲ ಎಂದು ಸೂಚಿಸುತ್ತೇನೆ. ಈ ಸತ್ಯವನ್ನು ನಿಮಗೆ ಮನಗಾಣಿಸಿಕೊಟ್ಟ ಪ್ರಗತಿ ಪ್ರಾರಂಭವಾಗುತ್ತದೆ.

ನಿಮ್ಮ ಆತ್ಮೀಯ
**ಮೋ.ಕ.ಗಾಂಧೀ**

* * *

**ನನ್ನನ್ನು ತಿದ್ದಲು ಅವರು ನಡೆಸಿದ ಪ್ರಯತ್ನ**

೧೯೩೪ರ ಪ್ರಥಮಾರ್ಧದಲ್ಲಿ ಪಾಟಣಾದಲ್ಲಿ ಡಾ॥ ರಾಜೇಂದ್ರಪ್ರಸಾದರ ನೇತೃತ್ವದಲ್ಲಿದ್ದ ಬಿಹಾರ ಕೇಂದ್ರ ಪರಿಹಾರ ಸಮಿತಿಯಲ್ಲಿ ಸೇವಾದಲದ ಕೆಲ ನಿಷ್ಠಾವಂತ ಕಾರ್ಯಕರ್ತರೊಂದಿಗೆ ನಾನು ಕೆಲಸ ಮಾಡುತ್ತಿದ್ದೆ. ಆ ವರ್ಷ ಏಪ್ರಿಲದಲ್ಲಿ ಮಹಾತ್ಮ ಗಾಂಧಿ ಪಾಟಣಾಕ್ಕೆ ಬಂದಿದ್ದರು. ಸೇವಾದಲದ ಕಾರ್ಯಕರ್ತರು ನನ್ನ ಆದೇಶದಂತೆ ಗಾಂಧೀಜಿಯವರ ನಿವಾಸವನ್ನು ಕಾಯುತ್ತಿದ್ದರು. ಅವರ ಪರಿವಾರದವರಿಗಾಗಿ ದುಡಿಯುತ್ತಿದ್ದರು.

ಗಾಂಧೀಜಿಯವರನ್ನು ಕಂಡು, ಅಸ್ಪೃಶ್ಯತಾ ನಿವಾರಣಾ ಕಾರ್ಯದಿಂದ ಅವರನ್ನು ವಿಮುಖಗೊಳಿಸಲೆಂದು ಸನಾತನಿಗಳು ಪಾಟಣಾಕ್ಕೆ ಬಂದಿದ್ದರು. ಶಿಬಿರದ ಶಾಂತಿಯನ್ನು ಅವರು ಕದಡಿದರು. ಗಾಂಧೀಜಿಯವರು ತಮ್ಮ ಸಂಚಾರವನ್ನು ಮುಂದುವರಿಸದಂತೆ ಅಲ್ಲಿಯೇ ಅವರನ್ನು ತಡೆದಿಡಬೇಕು ಎಂದು ಅವರು ನಿರ್ಧರಿಸಿಕೊಂಡಿದ್ದರು. ಗಾಂಧೀಜಿಯವರು ಸುರಕ್ಷಿತವಾಗಿ ಶಿಬಿರದಿಂದ ಹೊರಗೆ ಹೋಗುವಂತೆ ನೋಡಿಕೊಳ್ಳುವ ಹೊಣೆಗಾರಿಕೆಯನ್ನು ನನಗೆ ಒಪ್ಪಿಸಲಾಯಿತು. ಅವರು ಗಂಗಾ ನದಿಯನ್ನು ದಾಟಿ ಆಚೆಯ ದಡದಲ್ಲಿರುವ ನಗರವನ್ನು ಸೇರಬೇಕಾಗಿತ್ತು. ಅವರು ಸುರಕ್ಷಿತವಾಗಿ ಶಿಬಿರದಿಂದ ಹೊರಟು ಗಂಗಾದಡವನ್ನು ಸೇರಿದರು. ಈ ಸಂದರ್ಭವನ್ನು ನಾನು ಬಣ್ಣಿಸುತ್ತಿದ್ದೇನೆ. ಯಾವ ಉದ್ದೇಶದಿಂದ, ಅಹಿಂಸಾ ಮಾರ್ಗದಿಂದ ಸ್ವಾತಂತ್ರ್ಯವನ್ನು ಹೇಗೆ ಪಡೆಯಬಹುದೆಂಬುದನ್ನು ಕಲಿಸುವುದಕ್ಕೆ ಮತ್ತು ಭಾರತದ ಉದ್ಧಾರಕ್ಕಾಗಿ ತಮ್ಮ ಉಪದೇಶಾಮೃತವನ್ನು ನಮ್ಮಲ್ಲಿ ತುಂಬಲಿಕ್ಕೆ ಮಹಾತ್ಮಾ ಅದೆಷ್ಟು ಕಳಕಳಿಯಿಂದ ಪ್ರಯತ್ನಿಸುತ್ತಿದ್ದರೋ ಎಂಬುದನ್ನು ಜನಕ್ಕೆ ಎತ್ತಿ ತೋರಿಸುವದೇ ನನ್ನ ಇಚ್ಛೆಯಾಗಿದೆ.

ಗಾಂಧೀಜಿಯವರು ಶಿಬಿರದಿಂದ ಹೋಗುವ ಪೂರ್ವದಲ್ಲಿ ಮತ್ತು ನಂತರ ನಾನು ಹಿಂಸಾ ಪ್ರಯೋಗದಿಂದ ಸನಾತನಿಗಳನ್ನು ಹತ್ತಿಕ್ಕಿದೆ ಎಂಬ ದೂರುಗಳು ಗಾಂಧೀಜಿಯವರಿಗೆ ತಲುಪಿದವು. ನಿಜಸಂಗತಿ ತಿಳಿಸಲು ಅವರು ನನಗೆ ಪತ್ರಮುಖೇನ ಕೇಳಿದರು. ಆಗ ನಾನು ಬರೆದ ಪತ್ರ ಇದು.

**ಬಿಹಾರ ಕೇಂದ್ರ ಪರಿಹಾರ ಸಮಿತಿ**

**ಪ್ರದರ್ಶನಮಾರ್ಗ ಪಾಟಣಾ**
೨೪-೪-೧೯೩೪

**ಪೂಜ್ಯ ಗಾಂಧೀಜಿ –**

ಸನಾತನಿಗಳು ಇಪ್ಪತ್ತೈದು (೨೫) ಜನರಿದ್ದಿರಬೇಕೆಂದು ಅನಿಸುತ್ತದೆ. ಅವರನ್ನು ನಿಯಂತ್ರಿಸುವ ಕ್ರಮಗಳನ್ನು ಕೈಗೊಳ್ಳುವ ಪೂರ್ವದಲ್ಲಿ ನಾನು ಅವರ ಧುರೀಣನನ್ನು ಬೇರ್ಪಡಿಸಿದೆ. ನನ್ನ ಸ್ನೇಹಿತರಾದ ಪುಂಡಲೀಕ ಮತ್ತು ಶರ್ಮ ಆ ಧುರೀಣನನ್ನು ಡೇರೆಯೊಂದರಲ್ಲಿ ಹಿಡಿದಿಟ್ಟುಕೊಂಡಿದ್ದರು. ಆತ ಹೊರಗೆ ಹೋಗಲು ಹಾತೊರೆಯುತ್ತಿದ್ದ. ತಮಗೆ ಸಿಕ್ಕಾಬಟ್ಟೆ ಮಾತನಾಡಿದ ಎಂದು ನನ್ನ ಮಿತ್ರರು ಹೇಳಿದರು. ಆದರೂ ನೀವು ನದೀಘಟ್ಟಕ್ಕೆ ಹೋದಿರೆಂದು ಅವರಿಗೆ ತಿಳಿಸುವವರೆಗೆ ಅವರು ಆತನನ್ನು ಹೊರಗೆ ಬಿಡಲಿಲ್ಲ.

ಇತ್ತ, ಉಳಿದವರನ್ನು ಹಿಂದಕ್ಕೆ ಸರಿಸುವ ಕೆಲಸ ಪ್ರಾರಂಭವಾಯಿತು. ನಮ್ಮ ಸ್ವಯಂ ಸೇವಕರು ಅವರಿಗಿಂತ ಅಧಿಕ ಸಂಖ್ಯೆಯಲ್ಲಿದ್ದದ್ದರಿಂದ ಅವರನ್ನು ಸಾವಧಾನದಿಂದ ಹಿಂದೂಡಿ ಪ್ರವೇಶದ್ವಾರವನ್ನು ನಿರಾತಂಕವಾಗಿರಿಸಲಾಯಿತು. ಸನಾತನಿಗಳಿಗೆ ಅನುಕೂಲರಿದ್ದವರ ಮೇಲೆ ಕಣ್ಣಿಡುವುದಾಗಿ ಜಂಗುಳಿಯಲ್ಲಿಯೂ ನಮ್ಮ ಜನರನ್ನಿಡಲಾಗಿತ್ತು. ಅಲ್ಲಿ ನೆರೆದ ಜನರನ್ನು ಹೇಗೆ ನಿಯಂತ್ರಿಸಲಾಯಿತು ಎಂಬುದನ್ನು ನೀವೇ ನೋಡಿದ್ದೀರಿ. ನನ್ನ ಜನರಮಟ್ಟಿಗೆ ಹೇಳಬೇಕೆಂದರೆ ಅವರಲ್ಲಿ ಯಾರೂ ಹಿಂಸೆಯನ್ನು, ಅದೇಕೆ ಬಿರುಸು ಮಾತನ್ನೂ ಉಪಯೋಗಿಸಿಲ್ಲ ಎಂದು ಭರವಸೆ ಕೊಡುತ್ತೇನೆ. ಆದರೆ ತದ್ವಿರುದ್ಧವಾಗಿ ನಮ್ಮ ಜನರಿಗೆ ಚಿಕ್ಕಪುಟ್ಟ ಗಾಯಗಳಾಗಿವೆ.

ನಾವು ಶಿಬಿರದ ಆವಾರವನ್ನು ಬಿಟ್ಟನಂತರ ನಿಮ್ಮೊಡನೆ ಕಾರಿನಲ್ಲಿ ನದೀಘಟ್ಟದವರೆಗೆ ಬರಬೇಕೆಂದು ಮಾಡಿದ್ದೆ. ಕಾರಿನ ಹಿಂದೆ ನಾನು ಧಾವಿಸುತ್ತಿದ್ದುದೂ ನಿಮಗೆ ನೆನಪಾಗಬಹುದು. ಆದರೆ ಕಾರು ವೇಗದಿಂದ ಹೊರಟುಹೋದ್ದರಿಂದ ನನಗೆ ಪ್ರವೇಶ ಸಿಗಲಿಲ್ಲ. ನಾನು ಹಿಂದಿರುಗಿ ಅತಿಥಿಗೃಹದ ಆವಾರವಲ್ಲಿ ಮುಖ್ಯ ಕಟ್ಟಡದ ಹತ್ತಿರ ಬಂದಾಗ ಸನಾತನಿಗಳ ಧುರೀಣನ ಭೆಟ್ಟಿಯಾಯಿತು. ಅವನು ಸಿಟ್ಟಿನಿಂದ ಕೂಗಾಡಿದ. ನಾನು ಶಾಂತನಾಗಿಯೇ ಆತನ ಬೆನ್ನು ಚಪ್ಪರಿಸಿದೆ. ಮಾತು ಮರೆಸಲು ಪ್ರಯತ್ನಿಸಿದೆ. ಆತ ಕೇಳಲಿಲ್ಲ. "ಗಾಂಧೀ ಗಂಗಾ ನದಿಯಲ್ಲಿ ಮುಳುಗಿ ಸತ್ತು ಹೋಗುವಂತೆ ಮಾಡುತ್ತೇನೆ" ಎಂದು ಹೇಳಿದ. ನನಗೆ ತಡೆಯದಂತಾಯಿತು. ಆದರೆ ನಾನು ಕಾಂಗ್ರೆಸ್ ತತ್ವವನ್ನು ಅಂಗೀಕರಿಸಿದ್ದ ಹಾಗೂ ಹಿಂಸೆಯನ್ನು ಉಪಯೋಗಿಸುವುದಿಲ್ಲವೆಂದು ನಿಮಗೆ ವಚನಕೊಟ್ಟ ಅರಿವಿದ್ದದ್ದರಿಂದ ನಾನು ನನ್ನ ಸಿಟ್ಟನ್ನು

ತಡೆದೆ. ಆದರೂ ಇಂಥದನ್ನೆಲ್ಲ ನಾವು ತಾಳಿಕೊಳ್ಳುತ್ತೇವೆಂಬ ಭಾವನೆಯಿಂದ ಹಿಂತಿರುಗಬಾರದು ಎಂದು ಆತನಿಗೆ ಬುದ್ಧಿ ಕಲಿಸಲು ನಿರ್ಧರಿಸಿದೆ. ಆಗ ನಾನು ಕೂಗಾಡಿ ನಾನೂ ಸಿಟ್ಟಿಗೆದ್ದಿದ್ದೇನೆಂದು ತೋರಿಸುವುದೊಂದೇ ಮಾರ್ಗವಿತ್ತು. ನಾನು ಆತನ ಕತ್ತಿಗೆ ಕೈಕೊಟ್ಟು ಒಳಗೆ ದಬ್ಬಿಕೊಂಡು ಸಿಮೆಂಟ ಕಟ್ಟೆಯಮೇಲೆ ಕುಳ್ಳಿರಿಸಿದೆ. ವಾಡಿಕೆಯಂತೆ ನನ್ನ ಕೈಯಲ್ಲಿ ಬೆತ್ತ ಇತ್ತು ಎಂಬುದನ್ನು ನೀವು ಮರೆಯಬಾರದು. ನಾನು ಮೈಮರೆತಿದ್ದರೆ ಬೆತ್ತದಿಂದ ಥಳಿಸಬಹುದಾಗಿತ್ತು. ಕೆನ್ನೆಗೆ ನಾಲ್ಕು ಏಟು ಬಿಗಿಯಲೂ ಬಹುದಿತ್ತು. ಆದರೆ ಅಂಥ ಹೇಸಿಕೆಲಸ ನಾನು ಮಾಡಲಿಲ್ಲ. ಮೀರಾಬಹೆನ್ ಬಂದು ಆತನನ್ನು ಸಂತೈಸಬಯಸಿದರು. ಇದರಿಂದೇನೂ ಪ್ರಯೋಜನವಾಗಲಾರದು ಎಂದು ಅರಿತ ನಾನು ಆತನ ಅಂಗೀ ಹಿಡಿದು ಹೊರಗೆ ಕರೆದೊಯ್ದು ತೊಲಗಿಸಿದೆ.

ಇದನ್ನು ನೋಡಿದವರು ಅನೇಕರಿದ್ದಾರೆ. ಬೆತ್ತವನ್ನಾಗಲೀ ಕೈಯನ್ನಾಗಲಿ ಉಪಯೋಗಿಸಲಿಲ್ಲ. ಆದರೆ ಆತನನ್ನು ಹೆದರಿಸುವುದಕ್ಕೆ ಮಾತ್ರ ನನ್ನ ನಾಲಿಗೆ ಕೆಲಸ ಮಾಡುತ್ತಲೇ ಇತ್ತು. ಸಂಪೂರ್ಣ ಜಾಗರೂಕತೆಯಿಂದಲೇ ಇದೆಲ್ಲ ನಡೆಯಿತು.

ಈ ತಂಡದವರು ಹರ್ಡೀಕರ ನೆ ಕ್ಯಾ ಕಿಯಾ? ಸ್ವಾಮೀಜಿ ಪರ ಅತ್ಯಾಚಾರಕಿಯಾ. ಗಾಂಧೀಜಿನೆ ಕ್ಯಾ ಕಿಯಾ? ಸ್ವಾಮೀಜಿಕೊ ಪುಸಾದಿಯಾ ಎಂದು ಕೂಗುತ್ತ ತೊಲಗಿದರು ಎಂದು ಸಂಜೆಗೆ ನನಗೆ ವರದಿ ಬಂದಿತು.

ನಡೆದ ಸಂಗತಿ ಇಷ್ಟು ಕಾಯಾ ವಾಚಾ ಮನಸಾ ನಾನು ಹಿಂಸೆಗೈದಿಲ್ಲ ಎಂಬುದು ಸ್ಪಷ್ಟವಿದೆ. ಕ್ರೋಧ ಪ್ರದರ್ಶನ ಹಿಂಸೆ ಎಂದಾದರೆ ನಾನು ಹಿಂಸೆ ಮಾಡಿದ್ದೇನೆ. ಅದಕ್ಕಾಗಿ ನೀವು ನನ್ನನ್ನು ದಂಡಿಸಲು ಸಮರ್ಥರೇ ಇದ್ದೀರಿ.

ನಿಮ್ಮ ಕಾರ್ಯದರ್ಶಿಗಳಲ್ಲೊಬ್ಬರಾದ ಶ್ರೀ ವಾಲಜಿ ಜಿ. ದೇಸಾಯಿಯವರು ಹೇಳಿದ್ದರಿಂದ ಈ ಘಟನೆಗಳನ್ನು ನಿಷೇಧಿಸಿದ್ದೇನೆ.

ತಮ್ಮ ಗೌರವ ಪೂರ್ವಕ

**ಎನ್.ಎಸ್.ಹರ್ಡೀಕರ**

* * *

ನನ್ನ ಈ ಪತ್ರಕ್ಕೆ ಕೆಲ ದಿನಗಳ ನಂತರ ಗಾಂಧೀಜಿಯವರಿಂದ ಬಂದ ಉತ್ತರ ಹೀಗಿದೆ–

**ಪ್ರಿಯ ಡಾ. ಹರ್ಡೀಕರ,**

ನಿಮ್ಮ ವಿಚಿತ್ರ ಪತ್ರವನ್ನು ನನಗೆ ಎರಡುಸಲ ಕಳಿಸಿಕೊಡಲಾಗಿದೆ. ಮೊದಲನೆಯದರಲ್ಲಿ 'ಸೂಕ್ತಿ' ಇಲ್ಲ. ನನಗೆ ಪ್ರಿಯವಾದ 'ಸೂಕ್ತಿ'ಯನ್ನೇ ನೀವು ಬಳಸಿಕೊಂಡಿದ್ದೀರಿ. ಆ ಭಾವನೆ ವ್ಯಕ್ತಪಡಿಸುವಲ್ಲಿ ಸಿಟ್ಟೇನಿರಲಿಲ್ಲ. ನಾನೂ ಸಿಟ್ಟು ಇಲ್ಲದ ಮನುಷ್ಯನಲ್ಲ ಎಂದು ಒಪ್ಪಿಕೊಂಡರೆ ನಿಮಗೆ ಸಾಕು ಎಂದೆನಿಸುತ್ತದೆ. ಆದುದರಿಂದ ಟೀಕಾಕಾರರು ಅದನ್ನೇ ನನ್ನ ಮುಖಕ್ಕೆ

ಎಸೆಯುವದು ಉಚಿತ. ಸ್ನೇಹಿತರು ನನ್ನ ಲೋಪದೋಷಗಳನ್ನು ಸಹಿಸುತ್ತಾರೆ. ಅದನ್ನು (ಸಿಟ್ಟನ್ನು) ತ್ಯಜಿಸಲು ನಾನು ವಿಶ್ವಪ್ರಯತ್ನ ಮಾಡುತ್ತಿದ್ದರೂ ಅವರ ಲೋಪದೋಷಗಳನ್ನು ನಾನು ಅವರಿಗೆ ತೋರಿಸಿಕೊಡುತ್ತೇನೆ. ಯಾಕೆಂದರೆ ಈ ವಿಷಯದಲ್ಲಿ ನಮ್ಮಲ್ಲಿ ನಾನೇ ಹೆಚ್ಚು ಅನುಭವಿಕ ಎಂಬುದರಿಂದ ಎರಡು ತಪ್ಪುಗಳು ಸೇರಿ ಒಂದು ಸರಿಯಾಗಲಾರದು ಎಂಬುದನ್ನು ಮರೆಯಬಾರದು.

ನಾನು ಸಿಟ್ಟಿಗೆದ್ದಂತೆ ಕಂಡರೆ ನನಗೆ ಅರಿಯದೇ ಆಗಿರಬೇಕು. ನಾನೇನು ನಾಟಕ ಮಾಡುತ್ತಿದ್ದಿಲ್ಲ. ಮನುಷ್ಯ ಅರಿವಿಲ್ಲದಂತೆ ಸಿಟ್ಟಿಗೇಳಬಹುದೇ ಎಂಬುದೇ ಪ್ರಶ್ನೆ. ಆತ ವಿನಾಕಾರಣ ಸಿಟ್ಟಿಗೇಳಬಹದು.

ಮಾನವ ದೌರ್ಬಲ್ಯದ ಮೂಲಕ ಸಿಟ್ಟು ಅನಿವಾರ್ಯವೆನಿಸಿದರೂ ಅದಕ್ಕೆ ಅವಕಾಶವಿರಬಾರದು. ನಿಮ್ಮ ಪ್ರಶ್ನೆಗಳಿಗೆ ಉತ್ತರ ದೊರೆಯಿತೆ? ನೀವು ಚೆನ್ನಾಗಿದ್ದೀರೆಂದು ನಂಬಿದ್ದೇನೆ.

ನಿಮ್ಮ ಆತ್ಮೀಯ
**ಎಂ.ಕೆ.ಗಾಂಧಿ**

ಆಗಿನ ಕಾಲಕ್ಕೆ ನಾವು, ಅವರ ಕಾರ್ಯಕರ್ತರು, ಶಿಷ್ಯರು ಏನು ಮಾಡಿದೆವು ಮತ್ತು ಅವರು ನಮಗೆ ಹೇಗೆ ತರಬೇತಿ ಕೊಟ್ಟರು ಮತ್ತು ನಮ್ಮೊಡನೆ ಹೇಗೆ ನಡೆದುಕೊಳ್ಳುತ್ತಿದ್ದರು ಎಂಬುದನ್ನು ಈ ಪತ್ರವ್ಯವಹಾರವು ತೋರಿಸಿಕೊಡುತ್ತದೆ. ನಾವು ಅವರನ್ನು ಪ್ರೀತಿಪೂರ್ವಕ ಗೌರವಿಸಿದೆವು; ಅನುಸರಿಸಿದೆವು. ಸಕಲ ಸಂದರ್ಭಗಳಲ್ಲಿಯೂ ನಾವು ಅವರಿಗೆ ನಿಷ್ಠೆಯಿಂದಿದ್ದೆವು. ಅವರೊಂದಿಗೆ ಮುಚ್ಚುಮರೆ ಇರಲಿಲ್ಲ. ನಾವು ನಮ್ಮ ತಪ್ಪುಗಳನ್ನು ಒಪ್ಪಿಕೊಂಡು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಿದ್ದೆವು. ಅವರು ನಮ್ಮನ್ನು ಪ್ರೀತಿಸಿ ಸಮೀಪ ಕರೆದುಕೊಳ್ಳುತ್ತಿದ್ದರು. ಅವರು ನ್ಯಾಯ ನಿಷ್ಠುರರಾಗಿದ್ದರೂ ನಮಗೆಲ್ಲ ದಯಾಪೂರ್ಣರಾಗಿದ್ದರು.

**ಡಾ॥ ನಾ.ಸು.ಹರ್ಡೀಕರ**

* * *

(ಮುಳಬಾಗಲದ ಹಿಂದೀ ಪಂಡಿತರಾದ ಶ್ರೀ ಎಂ.ಎಸ್.ವೆಂಟಕರಮಣಯ್ಯನವರು ಅಸ್ಪೃಶ್ಯತಾ ನಿವಾರಣೆ ಚಳವಳಿಯ ಸಂದರ್ಭದಲ್ಲಿ ಶ್ರೀ ದ್ವಾರಕಾ ಪೀಠದ ಜಗದ್ಗುರು ಶ್ರೀ ಶಂಕರಾಚಾರ್ಯರಿಂದ ತಮಗೆ ಬಂದ ಪತ್ರವನ್ನು ಮಹಾತ್ಮರಿಗೆ ಕಳಿಸಿಕೊಟ್ಟಾಗ ಗಾಂಧೀಜಿಯವರಿಂದ ಬಂದ ಉತ್ತರ)

**ಯರವಡಾ ಸೆಂಟ್ರಲ್ ಪ್ರಿಜನ್**
೧೧-೧೧-೧೯೩೨

ಪ್ರಿಯ ಸ್ನೇಹಿತರೆ,

ನಿಮ್ಮ ಪತ್ರ ಕೈಸೇರಿತು. ಮಠಾಧಿಕಾರಿಯ ಆದೇಶಕ್ಕೆ ನೀವು ಬೆದರಬಾರದು. ಬ್ರಾಹ್ಮಣರು ಧಾರ್ಮಿಕ ಕಾರ್ಯಗಳಿಗೆ ಬಾರದಂತೆ ನಿಮ್ಮನ್ನು ಬಹಿಷ್ಕರಿಸಿದ್ದರೆ ಆ ಧಾರ್ಮಿಕ ಕಾರ್ಯಗಳನ್ನು ಅವರ ನೆರವಿಲ್ಲದೆ ನೀವೇ ಸಾಗಿಸಿಕೊಂಡು ಹೋಗಬೇಕು. ಯೋಗ್ಯ ಭಾವನೆಯಿಂದ ದೇವರ ಹೆಸರಿನಲ್ಲಿ ನಡೆಸುದುದೆಲ್ಲವೂ ಆತನಿಗೆ ಗ್ರಾಹ್ಯವಾಗುತ್ತದೆ. ಯಾವ ಭಾಷೆಯಲ್ಲಿಯೇ ಆಗಲಿ ಯಾರಿಂದಲೇ ಆಗಲಿ ಆ ಸೇವೆ ನಡೆದರೂ ಅಷ್ಟೇ.

ನಿಮ್ಮ ಆತ್ಮೀಯ
**ಮೋ.ಕ.ಗಾಂಧೀ**

* * *

**ಪುಣೆ**
೧೮-೧೧-೧೯೪೫

**ಬಂಧು ವೆಂಕಟರಮಣಯ್ಯ,**

ನೀವು ಹಿಂದಿಯಲ್ಲಿ ಬರೆದ ನಿಮ್ಮ ಹೆಸರು ಇಂಗ್ರೇಜಿಯಲ್ಲಿಯೂ ಹಾಗೇ ಇಲ್ಲ. ಸರಿಯಾದ ಹೆಸರು ಯಾವುದು ನೋಡಿಕೊಳ್ಳಿ.

ಎರಡೂ ಲಿಪಿಗಳಲ್ಲಿ ಹಿಂದೂಸ್ತಾನಿಯನ್ನು ಬರೆಯುತ್ತೀರಿ ಎಂಬುದನ್ನು ತಿಳಿದು ಸಂತೋಷವಾಯಿತು. ನಿಮ್ಮ ನಾಗರಿ ಅಕ್ಷರಗಳು ಅಂದವಾಗಿಲ್ಲ ಎಂದು ಹೇಳುವುದಿಲ್ಲ. ಆದರೆ ದಕ್ಷಿಣ ಪ್ರಾಂತದವರ ಬರವಣಿಗೆ ನೋಡಿದರೆ ನಿಮ್ಮ ಹಸ್ತಾಕ್ಷರ ಚೆನ್ನಾಗಿದೆ. ಆದರೂ ಸಾಕಷ್ಟು ಸುಧಾರಣೆ ಆಗಬಲ್ಲದು. ಈ ಪತ್ರದ ಅಕ್ಷರಗಳು ಅಂದವಾಗಿವೆ ಎಂದು ಭಾವಿಸಿ ಇವನ್ನು ಅನುಕರಿಸಿದರೆ ನಿಮ್ಮ ಅಕ್ಷರಗಳೂ ಸುಶೋಭಿತವಾಗಬಲ್ಲವು ಎಂದು ನಂಬುತ್ತೇನೆ.

ನೀವು ನೂಲು ನೂತದ್ದಕ್ಕಾಗಿ ನಿಮಗೆ ಧನ್ಯವಾದಗಳನ್ನರ್ಪಿಸುತ್ತೇನೆ. ಆದರೆ ಆ ನೂಲನ್ನು ನನಗೆ ಕಳಿಸಿಕೊಟ್ಟರೆ ಹರಿಜನನಿಂದ ಅದನ್ನು ನೇಯಿಸಿಕೊಳ್ಳುತ್ತೇನೆ. ನನ್ನ ಕಡೆಗೆ ಸೇವಾ ಗ್ರಾಮದಲ್ಲಿ ಮತ್ತು ಸುತ್ತಮುತ್ತಲಿನಲ್ಲಿ ಸಾಕಷ್ಟು ಹರಿಜನ ನೇಕಾರರಿದ್ದಾರೆ. ಅಲ್ಲಿಯೇ ನೇಯಿಸಬೇಕೆಂದಿದ್ದರೆ ಹಾಗೆ ಮಾಡಿರಿ. ಸ್ವಲ್ಪದರಲ್ಲಿಯೇ ನಿಮಗೆ ಹೇಗೆ ಸಂತೋಷ ವೆನಿಸುತ್ತದೆಯೋ ಹಾಗೆ ಮಾಡಿರಿ.

ಬಾಪುಕಾ ಆಶೀರ್ವಾದ

(ಮುಳಬಾಗಲದ ಶ್ರೀ ಎಂ.ಎಸ್. ವೆಂಕಟರಮಣಯ್ಯನವರು ಹಿಂದಿ ಭಾಷೆ ಹಾಗೂ ಸೂತ್ರಯಜ್ಞದ ವಿಚಾರದಲ್ಲಿ ಬರೆದುಕೊಂಡ ಪತ್ರಕ್ಕೆ ಬಂದ ಉತ್ತರ)

* * *

## ಶ್ರೀ ರಂಗನಾಥ ರಾಮಚಂದ್ರ ದಿವಾಕರರಿಗೆ ಬರೆದ ಪತ್ರ

ಸೇವಾಗ್ರಾಮ ಆಶ್ರಮ, ವರ್ಧಾ
(ಮಧ್ಯಪ್ರಾಂತ) ಸೆಪ್ಟೆಂಬರ್ ೯, ೧೯೩೯

**ನನ್ನ ಪ್ರಿಯ ದಿವಾಕರ,**

ಅಹಿಂಸೆಯನ್ನು ವ್ಯವಸ್ಥೆಗೊಳಿಸಲು ಸಾಧ್ಯ. ಆದರೆ ಅದರ ಮಾರ್ಗ ಹಿಂಸೆಯನ್ನು ವ್ಯವಸ್ಥೆ ಮಾಡುವ ಮಾರ್ಗಕ್ಕಿಂತ ಪೂರ್ಣವಾಗಿ ಪ್ರತ್ಯೇಕಸ್ವರೂಪ ಉಳ್ಳದ್ದು. ಈ ಕಾರ್ಯದಲ್ಲಿ ನಾನು ಭಗ್ನ ಪ್ರಯತ್ನನಾಗಿದ್ದರೆ ಅದು ನನ್ನ ಅನರ್ಹತೆಯನ್ನು ತೋರಿಸುತ್ತದಲ್ಲದೆ ಬೇರೆ ಏನನ್ನೂ ಅಲ್ಲ. ನನ್ನ ಸಾಧನೆಯೂ ಅಪೂರ್ಣ. ಇದರಿಂದ ನಾನು ಹತಾಶನಾಗುವುದಿಲ್ಲ. ನಾನು ಅಪಾರ ತಾಳ್ಮೆಯುಳ್ಳವನಾಗಬೇಕು; ಅಂಥ ತಾಳ್ಮೆಯನ್ನೂ ಹೊಂದಿದ್ದೇನೆ. ತಾಳ್ಮೆಯಿಲ್ಲದ ನಂಬಿಕೆ ಶೂನ್ಯವೆನಿಸುತ್ತದೆ.

ಅಹಿಂಸೆಗೆ ಅನುಗುಣವಾಗಿ ಯಾವ ಪಥವನ್ನು ನಾವು ಅನುಸರಿಸಬೇಕೆಂಬುದನ್ನು ಹರಿಜನ ಪತ್ರಿಕೆಯಲ್ಲಿ ಬೆಳೆಸೋಣ.

ನಿಮ್ಮ
**ಬಾಪೂ**

(ಗಾಂಧೀ ಗ್ರಂಥಮಾಲೆ-ಪತ್ರಗುಚ್ಛದಿಂದ)

* ದ್ವಿತೀಯ ಪ್ರಪಂಚ ಯುದ್ಧ ಆರಂಭವಾದ ಕಾಲದಲ್ಲಿ ಅಹಿಂಸೆಯ ವಿಧಾನ ಕುರಿತು ಎತ್ತಿದ ಪ್ರಶ್ನೆಗೆ ಇದು ಉತ್ತರವಿರಬೇಕು.

# ೧೯೪೨ "ಚಲೇಜಾವ್" ಚಳವಳಿಯ ಕಾಲಕ್ಕೆ ಗಾಂಧೀಜಿ ಕರ್ನಾಟಕಕ್ಕೆ ಕೊಟ್ಟ ಸಂದೇಶ

गांधीजीका संदेश

मैं चाहता हूं कि इस
यज्ञ में सब कर्नाटकी
पूरा हिस्सा दें।

मो. क. गांधी

८-८-४२

ಗಾಂಧೀಜಿಯವರ ಸಂದೇಶ

ಈ ಯಜ್ಞದಲ್ಲಿ ಎಲ್ಲ ಕರ್ನಾಟಕದವರು
ಪೂರ್ಣ ಭಾಗವಹಿಸುವರೆಂದು ನನ್ನ
ಭರವಸೆ ಇದೆ

ಮೋ. ಕ. ಗಾಂಧಿ

೮. ೮. ೪೨

करेंगे या मरेंगे – ಮಾಡು ಇಲ್ಲವೆ ಸಾಯು

– ಗಾಂಧೀಜಿ

(ಶ್ರೀ ದಿವಾಕರ ರಂಗರಾಯರು ತಾವು ಭೂಗತರಾಗಿದ್ದು ನಡೆಸಿದ ಕಾರ್ಯವನ್ನು ಸಮರ್ಥಿಸಿಕೊಂಡು ವೈಯಕ್ತಿಕ ಸತ್ಯಾಗ್ರಹಕ್ಕೆ ಅನುಮತಿ ಕೋರಿ ಮುಂಬಯಿಯಲ್ಲಿದ್ದ ಗಾಂಧೀಜಿಯವರಿಗೆ ೧೭-೫-೧೯೪೪ರಂದು ಬರೆದ ಪತ್ರಕ್ಕೆ ಉತ್ತರ)

ನನ್ನ ಪ್ರಿಯ ದಿವಾಕರ,

ನಿಮ್ಮ ಪತ್ರ ಬಹಳ ಸೊಗಸಾಗಿದೆ. ನಮ್ಮ ನಮ್ಮ ಮಾರ್ಗಕ್ಕನುಗುಣವಾಗಿ ನೀವೂ ಸರಿ, ನಾನೂ ಸರಿ, ಆದುದರಿಂದ ಯಾವುದು ನಿಮ್ಮ ವಿಚಾರಕ್ಕೂ ಭಾವಕ್ಕೂ ಸರಿ ಎನಿಸುತ್ತದೆಯೋ ಆ ರೀತಿ ಮಾಡಬೇಕು. ಈಗ ನಾನು ಯಾರನ್ನೂ ಅಪೇಕ್ಷಿಸಬಾರದೆಂದು ಪಾಠ ಕಲಿತಿದ್ದೇನೆ; ಆದರೆ ಅದು ನಿಮ್ಮ ಮತ್ತು ಇತರ ಅನೇಕ ಸಹಕಾರ್ಯಕರ್ತರ ಹೃದಯಾಂತರಾಳದಿಂದ ಪ್ರೇರಿತವಾದ ಕಾರ್ಯದಂತೆ ಮಾತ್ರ ಇರಬೇಕು. ನಿಮಗೆ ನನ್ನ ಅಭಿಪ್ರಾಯ ತಿಳಿದೇ ಇದೆ. ಅದನ್ನು ತೂಗಿ ನೋಡಿ; ನಿಮ್ಮ ಅಂತರ್ಬೋಧೆಯಂತೆ ಕ್ರಿಯಾಶಾಲಿಯಾಗಿ, ಇದು ನಿಮಗೆ ಸಮಾಧಾನ ತಂದೀತು. ನನ್ನಿಂದ ಆಜ್ಞೆಯನ್ನು ನಿರೀಕ್ಷಿಸಬೇಡಿ........

ನಾನು ರುಜೆಯಿಂದ ಹಾಸಿಗೆ ಹಿಡಿದಿದ್ದೇನೆ.

೧೮-೬-೧೯೪೪

ನಿಮ್ಮ

**ಬಾಪೂ**

(ಗಾಂಧೀ ಗ್ರಂಥಮಾಲೆ – ಪತ್ರಗುಚ್ಛದಿಂದ)

*   *   *

[ಮುಂದೆ ೧೯೪೪ ಜುಲೈದಲ್ಲಿ ಶ್ರೀ ದಿವಾಕರ ರಂಗರಾಯರು, ತಾವು ಬಹಿರಂಗವಾಗಿ ಸತ್ಯಾಗ್ರಹ ನಡೆಸುವಾಗ ಪಂಚಗಣಿಯಲ್ಲಿದ್ದ ಗಾಂಧೀಜಿಗೆ ತಿಳಿಸಲಾಗಿ ಅವರಿಂದ ಉತ್ತರರೂಪವಾಗಿ ಬಂದ ಎರಡು ಸಂದೇಶಗಳು]

ಪಂಚಗಣಿ

೧೯-೭-೧೯೪೪

ಬಂಧು ದಿವಾಕರ,

ನನಗೆ ಅದನ್ನು (ಕರ್ನಾಟಕದಲ್ಲಿ ೧೯೪೨-೪೪ರಲ್ಲಿ ನಡೆದ ಚಳವಳಿ ವರದಿ) ಸಂಪೂರ್ಣವಾಗಿ ಓದಲಿಕ್ಕಾಗಲಿಲ್ಲ. ನನ್ನ ಅಭಿಪ್ರಾಯವನ್ನು ನೀವು ಈಗಾಗಲೇ ಅರಿತಿದ್ದೀರಿ.

ಕರ್ನಾಟಕದಲ್ಲಿಯ ನೀವೆಲ್ಲರೂ (ಕರ್ನಾಟಕದಲ್ಲಿ ಸುಮಾರು ಐವತ್ತು ಜನರಿದ್ದೆವು) ಆಗಸ್ಟ್ ೯ರಂದು ಅಥವಾ ಆ ಒಳಗಾಗಿ ಕಾರ್ಯನಿರತರಾಗಿದ್ದಾಗ ಬಂಧಿಸಲ್ಪಟ್ಟರೆ, ನನಗೆ ಸಂತೋಷವೇ. ಆದರೆ ನಿಮ್ಮ ಕಾರ್ಯ ಸತ್ಯಾಗ್ರಹವಾಗಿರದೆ ಕಾಂಗ್ರೆಸ್ಸಿನ ವಾಡಿಕೆಯ ಕಾರ್ಯವಾಗಿರಬೇಕಷ್ಟೆ. ನನ್ನ ಹೇಳಿಕೆಯಲ್ಲಿಯ ಅಂತರ ನಿಮಗೆ ತಿಳಿಯಿತಲ್ಲವೆ?

**ಬಾಪೂಕಾ ಆಶೀರ್ವಾದ**

*   *   *

ಪಂಚಗಣಿ
೨೦-೭-೧೯೪೪

ಬಂಧು ದಿವಾಕರ,

ನಾನು ನಿನ್ನೆ ನಿಮಗೊಂದು ಪತ್ರ ಬರೆದೆ. ಪುಂಡಲೀಕಜಿ ಇಲ್ಲಿಯೇ ಇದ್ದಾರೆ. ಆದ್ದರಿಂದ ನಿಮಗೆ ಇನ್ನೊಂದು ಪತ್ರ ಬರೆಯುತ್ತಿದ್ದೇನೆ. ಈ ವಿಷಯಗಳ ಬಗ್ಗೆ ನಾನೆಷ್ಟು ಕಷ್ಟದಿಂದ ವಿಚಾರ ಮಾಡುತ್ತಿದ್ದೇನೆಂಬುದನ್ನು ಇದು ತೋರಿಸುತ್ತದೆ.

ಭೂಗತವಾಗಿರುವವರು ಮೊದಲು ಪ್ರಕಟರಾಗಬೇಕು; ನಂತರವೇ ತಮಗೆ ಬೇಕಾದ ಚಟುವಟಿಕೆಯಲ್ಲಿ ತೊಡಗಬೇಕು ಎಂದು ನನಗೆ ಅನಿಸುತ್ತದೆ.

ನಾನು ಹೊರಗೆ ಇರುವವರೆಗೆ ಪ್ರತಿಭಟನಾತ್ಮಕ ಕ್ರಮ ಕೈಗೊಳ್ಳದಿರುವವನ್ನೇ ನಾನು ಮೆಚ್ಚುತ್ತೇನೆ.

**ಬಾಪೂರಾ ಆಶೀರ್ವಾದ**

*          *          *

ಶ್ರೀ ದಿವಾಕರರಿಗೆ ಗಾಂಧೀಜಿಯವರು ಸ್ವಹಸ್ತದಿಂದ ಬರೆದ ಕೊನೆಯ ಪತ್ರ

भाई दिवाकर, ४-१-४८ न. दि.

तुम लिखते हो उस बारेमें
मैं क्या लिखुं? पर काम तो बन
सकता और कार्यकर्ता काम कर
सकता है

बापुके आशीर्वाद

## ಶ್ರೀ ಹನುಮಂತರಾವ ಕೌಜಲಗಿ ಅವರ ನಿಧನದ ಬಗೆಗೆ ಶ್ರೀ ಕಾಕಾ ಕಾರಖಾನಿಸರಿಗೆ ಗಾಂಧೀಜಿ ಬರೆದ ಪತ್ರ

૧૧-૬-૪૫ પંચગની

ભાઈ કાકા કારખાનીસ,

[illegible]

બાપુના
આશીર્વાદ

### ಮಹಾತ್ಮರ ದುಃಖಾಶ್ರು

ಪಂಚಗಣಿ ೧೧-೯-೧೯೪೫

ಭಾಯಿ ಕಾಕಾ ಕಾರಖಾನಿಸ,

ಶ್ರೀ ಹನುಮಂತರಾಯರು ಈ ಪೃಥ್ವಿಯ ಮೇಲೆ ಸಲ್ಲಿಸಬೇಕಾದ ಋಣವನ್ನು ತೀರಿಸಿದ್ದಾರೆ. ಅವರ ಮರಣದಿಂದ ಅವರ ಕುಟುಂಬದವರಿಗಾದ ದುಃಖದಲ್ಲಿ ನನ್ನ ಸಹಾನುಭೂತಿ ತಿಳಿಸಿರಿ. ಅವರ ಹಿಂದೆ ಇನ್ನು ಯಾರಿರುವರು? ಈಗ ಅವರ ಕಾರ್ಯವನ್ನು ಯಾರು ಸಾಗಿಸಬಲ್ಲರು.

ಮೇ.೧೯೪೫ —ಬಾಪೂ ಆಶೀರ್ವಾದ

## ಶ್ರೀ ಅಂದಾನಪ್ಪ ದೊಡ್ಡಮೇಟಿಯವರಿಗೆ ಗಾಂಧೀಜಿ ಬರೆದ ಪತ್ರ

ಸೇವಾಗ್ರಾಮ ೧-೧೦-೧೯೪೧

ಪ್ರಿಯ ದೊಡ್ಡಮೇಟಿ;

ನಿಮ್ಮ ತಂತಿ ಕೈ ಸೇರಿದೆ. ನಿಮ್ಮ ನಿಶ್ಚಯದ ವಿಷಯ ಕೇಳಿ ಸಂತೋಷವಾಯಿತು. ನಿಮ್ಮ ತಾಯಿಗೆ ಬರೆದಿದ್ದೇನೆ. ಪರಮಾತ್ಮನು ನಿಮ್ಮನ್ನು ಕರುಣಿಸಲಿ.

ನಿಮ್ಮ ಬಾಪೂ

ಮೋ.ಕ. ಗಾಂಧೀ

## ಗಾಂಧೀಜಿ ದೊಡ್ಡಮೇಟಿ ಅವರ ತಾಯಿಗೆ ಬರೆದ ಪತ್ರ

ಪ್ರಿಯ ಸಹೋದರಿ, ಸೇವಾಗ್ರಾಮ ೧-೧೦-೧೯೪೧

ನಿಮ್ಮ ಕಾಯಿಲೆಯ ವಿಷಯವಾಗಿ ಚಿರಂಜೀವಿಯ ತಂತಿ ಬಂದಿದೆ. ಅವನು ಬಿಡುಗಡೆ ಬಯಸುವುದಿಲ್ಲವೆಂದು ಕೇಳಿ ಹಿಗ್ಗಿದೆ. ಪರಮಾತ್ಮ ನಿಮಗೆ ಶಾಂತಿ, ಉತ್ಸಾಹಗಳನ್ನು ದಯಪಾಲಿಸಲಿ. ಅವನ ಬಯಕೆ ಕೈಗೂಡುವದು ನಮ್ಮ ಕೈನಲ್ಲಿಲ್ಲ.

ನಿಮ್ಮ ವಿಶ್ವಾಸದ

**ಮೋ.ಕ.ಗಾಂಧೀ**

## ಶ್ರೀ ಎಸ್.ಎನ್.ಕೇಶವಾಯನ್ನರಿಗೆ ಮಹಾತ್ಮಾಜಿಯ ಅಭಿನಂದನೆ

ಬೆಳಗಾವಿಯ ಒಬ್ಬ ಸುದ್ದಿಗಾರನು ಬರೆಯುತ್ತಾನೆ:

ಸಾಮಾನ್ಯವಾಗಿ ಸಿರಸಿಯಲ್ಲಿ ನಡೆಯುವ ಮಾರಿಕಾಂಬಾ ಜಾತ್ರೆಯು ಬೊಂಬಾಯಿ ಪ್ರಾಂತದಲ್ಲಿ ನಡೆಯುವ ಎಲ್ಲಾ ಜಾತ್ರೆಗಳಿಗಿಂತಲೂ ದೊಡ್ಡದು. ಸಿರಸಿ ದೇವಸ್ಥಾನವು ಈ ಭಾಗದಲ್ಲಿ ತುಂಬಾ ಪ್ರಸಿದ್ಧವಿದ್ದು ಅದಕ್ಕೆ ಬಹುದೊಡ್ಡ ಆದಾಯವೂ ಇದೆ. ಅದನ್ನು ಹೈಸ್ಕೂಲ್, ಹೆರಿಗೆ ಆಸ್ಪತ್ರೆ ಇತ್ಯಾದಿ ವಿವಿಧ ಉದ್ದೇಶಗಳಿಗಾಗಿ ಉಪಯೋಗಿಸಲಾಗುತ್ತದೆ. ನೀವು ಹರಿಜನರಿಗೋಸ್ಕರ ಯಾತ್ರೆಯನ್ನು ಆರಂಭಿಸಿದಾಗ ಹರಿಜನ ಪ್ರವೇಶಕ್ಕೋಸ್ಕರ ಬಾಗಿಲ ತೆಗೆದ ಪ್ರಥಮ ದೇವಸ್ಥಾನವೂ ಇದೇ ಆಗಿದೆ. ನೀವು ಜನರಿಗೆ ಧರ್ಮದ ಹೆಸರಿನಿಂದ ಕೋಣಗಳನ್ನೂ, ಕುರಿಗಳನ್ನೂ ಮತ್ತು ಕೋಳಿಗಳನ್ನೂ ಕೊಲ್ಲಬೇಡಿರಿ ಮತ್ತು ಇಂಥ ದೇವಸ್ಥಾನಕ್ಕೆ ಸಹಾಯ ಕೊಡುವುದು ಉಚಿತವಲ್ಲ, ಎಂದು ಹೇಳಿದಿರಿ. ಜನತೆಯ ಮೇಲೆ ನಿಮ್ಮ ಭಾಷಣದ ಪರಿಣಾಮ ಆಯಿತು. ಕೆನರಾ ಡಿಸ್ಟ್ರಿಕ್ಟ ಹರಿಜನ ಸೇವಕ ಸಂಘದ ಅಧ್ಯಕ್ಷರಾದ ಮತ್ತು ಈ ದೇವಸ್ಥಾನದ ಟ್ರಸ್ಟಿಗಳಲ್ಲಿ ಒಬ್ಬರಾದ ಶ್ರೀ ಎಸ್.ಎನ್.ಕೇಶವಾಯನ್, ಎಂ.ಎಲ್.ಎ. ಇವರು ಕೆಲವು ವರ್ಷಗಳ ಹಿಂದೆ ಕೋಣಗಳ ವಧೆಯನ್ನು ನಿಲ್ಲಿಸಿದ್ದರು. ಈ ವರ್ಷ ಅವರು ಮಾರೀ ಜಾತ್ರೆಯಲ್ಲಿ ಕುರಿಗಳನ್ನೂ ಮತ್ತು ಕೋಳಿಗಳನ್ನೂ ಕೊಲ್ಲುವುದನ್ನು ನಿಲ್ಲಿಸಿದರು. ಇದರಿಂದ ಹತ್ತು ಸಾವಿರ ಕುರಿಗಳ ಮತ್ತು ಹದಿನೈದು ಸಾವಿರ ಕೋಳಿಗಳ ಪ್ರಾಣ ಉಳಿಯಿತು. ಕೆಲವರ ವಿರೋಧವನ್ನು ಲೆಕ್ಕಿಸದೆ ಸರಿಯಾದ ಸಮಯದಲ್ಲಿ ಹೀಗೆ ಧೈರ್ಯದಿಂದ ಮುಂದೆ ಬಂದು ಈ ಮಹತ್ಕಾರ್ಯವನ್ನು ಮಾಡಿದ್ದಕ್ಕಾಗಿ ಇಡೀ ಜಿಲ್ಲೆಯೇ ಅವರಿಗೆ ಕೃತಜ್ಞವಾಗಿದೆ.

**ಇದರ ಬಗೆಗೆ ಮಹಾತ್ಮರ ಪ್ರತಿಕ್ರಿಯೆ :**

ನಿಜವಾಗಿಯೂ ಇದು ಶುಭ ಸಮಾಚಾರ. ಇಂಥ ಮಾನವೀಯ ದಯಾಭಾವಕ್ಕೆ ಶ್ರೀ ಕೇಶವಾಯನ್ ಅಭಿನಂದನೆಗೆ ಪಾತ್ರರು. ಯಾರಿಗೆ ಯಾವ ಪ್ರಕಾರದ ಮಾಂಸ ಬೇಕೋ ಅದನ್ನು ಅವರು ತಿನ್ನಬಹುದು. ಆದರೆ ದೇವಸ್ಥಾನಗಳಲ್ಲಿ ಪಶುಬಲಿಯನ್ನು ಕೊಡುವುದು ದೇವರನ್ನು ನಿಂದಿಸಿದಂತೆ. ದೇವರು ಏನಾದರೂ ಬಯಸುತ್ತಾನೆಂದು ಹೇಳಬಹುದಾದರೆ ಆತನಿಗೆ ಬೇಕಾದ್ದು ಪಶ್ಚಾತ್ತಾಪಪೂರ್ವಕವಾದ ನಮ್ಮ ತ್ಯಾಗ.

ದೆಹಲಿ ಮಾರ್ಗದಲ್ಲಿ ೨೬-೩-೧೯೪೭

(೫-೪-೧೯೪೭ ಹರಿಜನ ಪುಟ ೧೦೫ರಿಂದ ಉದ್ಧೃತ)

## ಶ್ರೀ ಸರ್ ಎಂ.ವಿಶ್ವೇಶ್ವರಯ್ಯನವರಿಗೆ ಮಹಾತ್ಮಾ ಗಾಂಧೀಜಿ ಬರೆದ ಪತ್ರ

WARDHA,
15th November 1934.

Dear Friend,

The All-India Village Industries Association which is being formed under the auspices of the Indian National Congress will need the assistance of expert advisers in the various matters that will engage its attention. It is not intended to trouble them to meet together or even the members of the Association, but merely to advise the Association whenever reference is made to them in matters in which they possess special knowledge, e.g., in chemical analysis, food values, sanitation, distribution of village manufactures, improved methods of developing village industries, co-operation, disposal of village waste as manure, methods of village transport, education (adult and other), care of infants, and many other things too numerous to mention here.

Will you please allow your name to appear among such advisers of the All-India Village Industries Association ? Naturally I approach you in the belief that the object of the Association and the method of approach to its task have your approval.

Yours sincerely,

ವಾರ್ಧಾ ೧೫ ನವೆಂಬರ್ ೧೯೩೪

ಪ್ರಿಯ ಮಿತ್ರ,

ಅಖಿಲ ಭಾರತ ರಾಷ್ಟ್ರೀಯ ಸಭೆಯ ಆಶ್ರಯದಲ್ಲಿ ರಚಿಸಲಾಗುತ್ತಿರುವ ಅಖಿಲ ಭಾರತ ಗ್ರಾಮೋದ್ಯೋಗ ಸಂಘಕ್ಕೆ ಅದಕ್ಕೆ ಸಂಬಂಧಿಸಿದ ವಿವಿಧ ವಿಷಯಗಳಲ್ಲಿ ತಜ್ಞ ಸಲಹಾಕಾರರ ಸಹಾಯವು ಬೇಕಾಗುವುದು. ಇದರ ಉದ್ದೇಶ ಸಲಹಾಕಾರರು ಒಟ್ಟಾಗಿ. ಒಂದುಕಡೆ ಕೂಡಬೇಕು ಅಥವಾ ಸಂಘದ ಸದಸ್ಯರಿಗೆ ಭೇಟಿಯಾಗಬೇಕು ಎಂದಲ್ಲ. ಆದರೆ ಸಲಹಾಕಾರರು ಯಾವ ವಿಷಯಗಳಲ್ಲಿ ವಿಶೇಷ ಜ್ಞಾನವನ್ನು ಪಡೆದಿರುವರೋ ಆ ವಿಷಯವನ್ನು ಕುರಿತು ಉದಾಹರಣಾರ್ಥ, -ರಾಸಾಯನಿಕ ವಿಶ್ಲೇಷಣ, ಆಹಾರ ಮೂಲ್ಯಗಳ ಸ್ವಚ್ಛತೆ, ಗ್ರಾಮೋತ್ಪಾದಿತ ವಸ್ತುಗಳ ವಿತರಣೆ, ಗ್ರಾಮೋದ್ಯೋಗಿಗಳ ಅಭಿವೃದ್ಧಿಗೆ ಅವಶ್ಯಕವಾದ ಸುಧಾರಿಸಿದ ಪದ್ಧತಿಗಳು, ಸಹಕಾರ, ಗ್ರಾಮದ ಕಸವನ್ನು ಗೊಬ್ಬರದ ರೂಪದಲ್ಲಿ ವಿನಿಯೋಗಿಸುವುದು, ಗ್ರಾಮೀಣ ಸಾಗಾಣಿಕೆಯ ಪದ್ಧತಿ, ಶಿಕ್ಷಣ (ಪ್ರೌಢರ ಮತ್ತು ಇತರರ) ಶಿಶುಸಂಗೋಪನೆ ಇತ್ಯಾದಿ ಅನೇಕ ವಿಷಯಗಳ ಸಂಬಂಧದಲ್ಲಿ ಅವರನ್ನು ಕೇಳಿದಾಗ ಮಾತ್ರ ಅವರು ಸಂಘಕ್ಕೆ ತಮ್ಮ ಸಲಹೆಯನ್ನ ಕೊಡಬೇಕು. ಇಷ್ಟೇ ಉದ್ದೇಶ.

ಅಖಿಲ ಭಾರತ ಗ್ರಾಮೋದ್ಯೋಗ ಸಂಘದ ಸಲಹಾಕಾರರಲ್ಲಿ ನಿಮ್ಮ ಹೆಸರನ್ನು ಸೇರಿಸಲು ನೀವು ದಯವಿಟ್ಟು ನಿಮ್ಮ ಅನುಮತಿಯನ್ನು ಕೊಡುವಿರಾ? ಈ ಸಂಘದ ಉದ್ದೇಶ ಮತ್ತು ಕಾರ್ಯನಿರ್ವಾಹ ಪದ್ಧತಿ ಇವುಗಳ ಬಗೆಗೆ ನಿಮ್ಮ ಸಮ್ಮತಿ ಉಂಟು ಎಂಬ ವಿಶ್ವಾಸದಿಂದ ಈ ಪತ್ರ ನಾನು ನಿಮಗೆ ಬರೆಯುತ್ತಿದ್ದೇನೆ.

ನಿಮ್ಮ ವಿಶ್ವಾಸಪಾತ್ರ
ಮೋ.ಕ.ಗಾಂಧೀ

ವಿಶ್ವೇಶ್ವರಯ್ಯ ಬೆಂಗಳೂರು.

* * *

Wardha,
23rd November 193[illegible].

Dear Friand,

I thank you for your prompt reply. I see that we hold perhaps diametrically opposite views. My conviction based upon extensive experience of village life is that in India at any rate for generations to come we shall not be able to make much use of mechanical power for solving the problem of the ever-growing poverty of the masses. We are too many and we have so many idle hours at our disposal that it would be suicidal to make use of mechanical power and allow human power to run to waste. The question of leisure after toil comes into being when people learn the art of making effective use of their waste hours. Such being my view the extract that you have sent me from Stalin has no appeal for me at all. The more expressive extract from Lenin makes matters worse for me. It is like much cry and little wool. I could be no party to engaging the villagers in producing army machinery and army stores. If India hasno desire to take part in the goary exploitation of unmechanised regions of the earth, she is has no need to fear aggression from foreign countries. My dream will remain wholly unrealised and India may become a willing or unwilling partner in the sin of exploitation. I want to put the whole of my force that God may vouchsafe to me in stemming the onrush of the violent current. I should take delight in perishing in the attempt.

Inspite of the strength of my conviction

-2-

I entertain great regard for your fine abilities and love of the country, and that shall be unabated whether I have the good fortune to secure your co-operation or face your honest opposition.

Yours sincerely,

Sir M. Visvesvaraya, K.C.I.E.,
46 F, Warden Road,
BOMBAY.

ವರ್ಧಾ, ೨೩ ನವೆಂಬರ್ ೧೯೩೪

ಪ್ರಿಯ ಮಿತ್ರ ,

ಕೂಡಲೇ ಬರೆದ ನಿಮ್ಮ ಪತ್ರಕ್ಕಾಗಿ ನಿಮಗೆ ಧನ್ಯವಾದಗಳು. ನನ್ನ ಮತ್ತು ನಿಮ್ಮ ಅಭಿಪ್ರಾಯಗಳು ಬಹುಶಃ ಸಂಪೂರ್ಣ ಪರಸ್ಪರ ವಿರುದ್ಧ ಎಂದು ಕಂಡುಬರುತ್ತದೆ. ಗ್ರಾಮೀಣ ಜೀವನದ ವ್ಯಾಪಕವಾದ ನನ್ನ ಅನುಭವದ ಪ್ರಕಾರ ನನ್ನ ದೃಢವಿಶ್ವಾಸ ಇದು : ಭಾರತದ ಜನಸಾಮಾನ್ಯರಲ್ಲಿ ಹೆಚ್ಚುತ್ತಿರುವ ಬಡತನದ ಸಮಸ್ಯೆಯನ್ನು ಬಗೆಹರಿಸಲು ಯಂತ್ರಶಕ್ತಿಯ ಉಪಯೋಗವು ಇನ್ನೂ ಅನೇಕ ತಲೆಮಾರಿನವರೆಗೆ ವಿಶೇಷ ಆಗಲಾರದು. ನಮ್ಮ ಜನರ ಸಂಖ್ಯೆ ಬಹು ದೊಡ್ಡದು, ವ್ಯರ್ಥ ಕಳೆಯುವ ವೇಳೆಯೂ ನಮ್ಮ ಜನರಿಗೆ ಬೇಕಾದಷ್ಟಿದೆ. ಆದ್ದರಿಂದ ಯಂತ್ರಶಕ್ತಿಯನ್ನು ಉಪಯೋಗಿಸಿ ಮನುಷ್ಯಶಕ್ತಿಯನ್ನು ವ್ಯರ್ಥ ಹೋಗಗೊಡುವುದು ಆತ್ಮಘಾತಕ. ತಮ್ಮ ವ್ಯರ್ಥ ಸಮಯವನ್ನು ಸಂಪೂರ್ಣ ಉಪಯೋಗಿಸುವ ಕಲೆಯನ್ನು ನಮ್ಮ ಜನ ಕಲಿತ ಮೇಲೆ ಕಾರ್ಯದ ನಂತರ ವಿಶ್ರಾಂತಿ ಎಂಬ ಪ್ರಶ್ನೆ ಬರುತ್ತದೆ. ನನ್ನ ಅಭಿಪ್ರಾಯ ಹೀಗಿರುವುದರಿಂದ ನೀವು ಎತ್ತಿ ತೋರಿಸಿದ ಸ್ಟಾಲಿನ್ನನ ಮಾತುಗಳು ನನ್ನ ಮನಸ್ಸಿಗೆ ಏನೂ ಹಿಡಿಸಲಿಲ್ಲ. ನೀವು ಕಳಿಸಿದ ಲೆನಿನ್ನನ ಸ್ಪಷ್ಟೀಕರಣ ವಾಕ್ಯಗಳಂತೂ ನನ್ನ ದೃಷ್ಟಿಯಿಂದ ವಿಷಯವನ್ನು ಇನ್ನೂ ಹದಗೆಡಿಸುತ್ತವೆ. ಇದೆಲ್ಲ ಗುಡ್ಡ ಕಡಿದು ಇಲಿ ಹೊರಗೆ ತೆಗೆದಂತೆ. ಸೈನ್ಯಕ್ಕೆ ಬೇಕಾಗುವ ಯಂತ್ರೋಪಕರಣಗಳನ್ನೂ ಇತರ ಸಾಮಗ್ರಿಗಳನ್ನೂ ಸಿದ್ಧಗೊಳಿಸುವ ಉದ್ಯೋಗದಲ್ಲಿ ಗ್ರಾಮಸ್ಥರನ್ನು ತೊಡಗಿಸುವ ಕಾರ್ಯದಲ್ಲಿ ನಾನು

ಸಹಭಾಗಿಯಾಗಲಾರೆ. ಯಾಂತ್ರಿಕ ಉದ್ಯೋಗಗಳು ಇಲ್ಲದ ಭೂಭಾಗಗಳ ರಕ್ತ ಶೋಷಣೆಯಲ್ಲಿ ಭಾಗವಹಿಸಲು ಭಾರತವು ಇಷ್ಟಪಡದಿದ್ದ ಪಕ್ಷದಲ್ಲಿ ; ಅದಕ್ಕೆ ವಿದೇಶೀ ಆಕ್ರಮಣದ ಹೆದರಿಕೆ ಇಲ್ಲ. ನನ್ನ ಕನಸು ನನಸಾಗದೆ ಉಳಿಯಬಹುದು, ಮತ್ತು ಭಾರತವು ಇಷ್ಟವಿದ್ದೋ ಅಥವಾ ಇಲ್ಲದೆಯೋ ಶೋಷಣೆಯ ಪಾಪದಲ್ಲಿ ಪಾಲುಗಾರ ಆಗಲೂಬಹುದು. ಆದಾಗ್ಯೂ ದೇವರು ನನಗೆ ದಯಪಾಲಿಸಿರುವ ನನ್ನ ಸಂಪೂರ್ಣ ಶಕ್ತಿಯನ್ನು ಹಿಂಸಾಪ್ರವಾಹದ ವೇಗವನ್ನು ತಡೆಯಲು ಉಪಯೋಗಿಸಬಯಸುತ್ತೇನೆ. ಆ ಪ್ರಯತ್ನದಲ್ಲಿ ಸತ್ತರೂ ನನಗೆ ಸಂತೋಷ.

ನನ್ನ ದೃಢನಂಬಿಕೆ ಹೀಗೆ ಇದ್ದಾಗ್ಯೂ, ನಿಮ್ಮ ಯೋಗ್ಯತೆ ಮತ್ತು ದೇಶ ಪ್ರೇಮಕ್ಕೋಸ್ಕರ ನನ್ನ ಮನಸ್ಸಿನಲ್ಲಿ ನಿಮ್ಮ ವಿಷಯದಲ್ಲಿ ತುಂಬಾ ಆದರವಿದೆ. ನಿಮ್ಮ ಸಹಕಾರವನ್ನು ಸಂಪಾದಿಸುವ ಭಾಗ್ಯ ದೊರೆತರೂ ಸರಿ, ಅಥವಾ ನಿಮ್ಮ ಪ್ರಾಮಾಣಿಕ ವಿರೋಧವನ್ನು ಎದುರಿಸುವ ಪ್ರಸಂಗ ಬಂದರೂ ಸರಿ, ಆ ಆದರ ಎಂದೂ ಕಡಿಮೆಯಾಗಲಾರದು.

ನಿಮ್ಮ ವಿಶ್ವಾಸಪಾತ್ರ,
**ಮೋ.ಕ.ಗಾಂಧೀ**

**ಸರ್.ಎಂ.ವಿಶ್ವೇಶ್ವರಯ್ಯಾ,** ಕೆ.ಸಿ.ಐ.ಈ.
೪೬, ಎಫ್. ವಾರ್ಡನ್ ರೋಡ್,
ಮುಂಬೈ.

* * *

[redacted] Sir Vishweswarayya,

You know [illegible] havoc [illegible] by the [illegible] crisis. I have advised the chief minister Shri Vishwanath Das to approach [illegible] for advice & guidance. I have no doubt that you would give [illegible] such assistance as

It may be in your power to give.

I am
Yrs sincerely
MKGandhi

ಪ್ರಿಯ ಸರ್. ವಿಶ್ವೇಶ್ವರಯ್ಯಾ,

ಒರಿಸ್ಸಾದಲ್ಲಿ ಮಹಾಪೂರಗಳಿಂದ ಉಂಟಾದ ಹಾವಳಿಯು ನಿಮಗೆ ಗೊತ್ತಿದೆ. ಅಲ್ಲಿಯ ಮುಖ್ಯಮಂತ್ರಿ ಶ್ರೀ ವಿಶ್ವನಾಥದಾಸರಿಗೆ ನಿಮ್ಮ ಸಲಹೆ ಮತ್ತು ಮಾರ್ಗದರ್ಶನಕ್ಕಾಗಿ ನಿಮಗೆ ಬರೆಯಲು ತಿಳಿಸಿರುತ್ತೇನೆ. ನಿಮಗೆ ಸಾಧ್ಯವಿದ್ದ ಸಹಾಯವನ್ನು ನೀವು ಅವರಿಗೆ ಕೊಡುವಿರೆಂಬುದರಲ್ಲಿ ನನಗೆ ಸಂಶಯವಿಲ್ಲ.

ನಿಮ್ಮ ವಿಶ್ವಾಸಪಾತ್ರ
**ಮೋ.ಕ.ಗಾಂಧೀ**

Segaon,
5. 12. 37
Wardha.

Dear Sir M. Visvesvaraya —

I thank you for your book. I am keeping it in front of me, & I shall read it at the first opportunity. Nothing would give me greater pleasure than to be able to agree with you.

I thank you for tackling the Orissa floods problem

Of course you will take
your time

yours sincerely.
M.K.Gandhi

ಸೇಗಾಂವ, ವರ್ಧಾ, ೧೫-೧೦-೧೯೩೭

**ಪ್ರಿಯ ಸರ್.ಎಂ.ವಿಶ್ವೇಶ್ವರಯ್ಯಾ,**

ನಿಮ್ಮ ಪುಸ್ತಕಕ್ಕೋಸ್ಕರ ನಿಮಗೆ ಧನ್ಯವಾದಗಳು. ಅದನ್ನು ನನ್ನ ಎಮರಿಗೆ ಇಟ್ಟುಕೊಂಡಿದ್ದೇನೆ. ಅವಕಾಶವು ದೊರೆತಾಕ್ಷಣ ಅದನ್ನು ಓದುವೆನು. ನಿಮ್ಮೊಂದಿಗೆ ಒಮ್ಮತನಾಗಲು ನನಗೆ ಸಾಧ್ಯವಾದರೆ ಅದಕ್ಕಿಂತ ಹೆಚ್ಚಿನ ಸಂತೋಷ ಬೇರೆ ಇನ್ನಾವುದೂ ಇರಲಾರದು. ಒರಿಸ್ಸಾದ ಮಹಾಪೂರ ಸಮಸ್ಯೆಯನ್ನು ಬಿಡಿಸುವ ಕಾರ್ಯದಲ್ಲಿ ತೊಡಗಿದ್ದಕ್ಕೆ ನಿಮಗೆ ಧನ್ಯವಾದಗಳು. ಅರ್ಥಾತ್ ಇದಕ್ಕೆ ನಿಮಗೆ ಸಮಯ ಹಿಡಿಯಬಹುದು.

ನಿಮ್ಮ ವಿಶ್ವಾಸಪಾತ್ರ,
**ಮೋ.ಕ.ಗಾಂಧೀ**

Rajkot

17 4 39

Dear Sir Visvesvaraya,

Perhaps you will like to read the enclosed. It was so good of you to respond to the call of poor Orissa.

Yours sincerely,

M. K. Gandhi

ಸೇಗಾಂವ, ವರ್ಧಾ ೧೭-೪-೧೯೩೯

ಪ್ರಿಯ ಸರ್.ಎಂ.ವಿಶ್ವೇಶ್ವರಯ್ಯಾ

ಇದರೊಂದಿಗೆ ಇಟ್ಟ ಪತ್ರವನ್ನು ಓದಲು ಬಹುಶಃ ನೀವು ಇಷ್ಟಪಡಬಹುದು. ಬಡ ಒರಿಸ್ಸಾದ ಕಡೆಗೆ ನೀವು ಓಕೊಟ್ಟುದು ತುಂಬಾ ಯೋಗ್ಯ.

ನಿಮ್ಮ ವಿಶ್ವಾಸಪಾತ್ರ

ಮೋ.ಕ.ಗಾಂಧೀ

## ಶ್ರೀ ತಿಮ್ಮಪ್ಪನವರಿಗೆ ಗಾಂಧೀಜಿ ಬರೆದ ಪತ್ರ

My Dear Timmappa,

I can see no moral objection to your doing agricultural work. But it is a difficult thing to do in practice when you are more or less unsettled. You must use your own judgment. There may be factors which may affect our judgment. I cannot give you a decisive answer.

[illegible] nothing [illegible] jail

made things especially
when they are made
by us.

Yours sincerely
16-5-34 M.K.Gandhi

ಪ್ರಿಯ ತಿಮ್ಮಪ್ಪ,

ನೀವು ಕೃಷಿ ಕೆಲಸವನ್ನು ಕೈಗೊಳ್ಳುವುದರಲ್ಲಿ ನನಗೇನೂ ನೈತಿಕ ಆಕ್ಷೇಪಣೆಯು ಕಾಣಿಸುವುದಿಲ್ಲ. ನೀವು ಒಂದುಕಡೆ ಸ್ಥಿರವಾಗಿ ನೆಲೆಸದೆ ಇರುವ ಸ್ಥಿತಿಯಲ್ಲಿ ಇರುವಾಗ ಅದನ್ನು ಕಾರ್ಯಗತ ಮಾಡುವುದು ಕಠಿಣ. ನೀವು ಈ ಬಗ್ಗೆ ನಿಮ್ಮ ವಿವೇಕವನ್ನೇ ಉಪಯೋಗಿಸಬೇಕು. ನಮ್ಮ ತೀರ್ಮಾನಕ್ಕೆ ಬಾಧಕ ಪರಿಣಾಮ ಬೀರುವ ಸಂಗತಿಗಳೂ ಇರುವ ಸಂಭವವಿದೆ. ಆದ್ದರಿಂದ ನಾನು ನಿಮಗೆ ನಿಶ್ಚಿತ ಉತ್ತರವನ್ನು ಕೊಡಲಾರೆ.

ಜೇಲಿನಲ್ಲಿ ಸಿದ್ಧವಾದ ವಸ್ತುಗಳನ್ನು ಅದರಲ್ಲೂ ಅವನ್ನು ನಾವೇ ಮಾಡಿರುವಾಗ ಕೊಂಡುಕೊಳ್ಳುವುದರಲ್ಲಿ ಏನೂ ತಪ್ಪಿಲ್ಲ.

೧೬-೫-೧೯೩೪

ನಿಮ್ಮ ವಿಶ್ವಾಸಪಾತ್ರ
ಮೋ.ಕ.ಗಾಂಧಿ

* * *

SEVAGRAM
via WARDHA (C. P.)

31-8-44

Dear Timmappa,

Your letter to Kribhai of 17th July should have been answered long ago. But I have no time & therefore such answers are often delayed.

When the real invasion takes place there will not only be no C. D. but those who are in prison will

SEVAGRAM
[illegible]DHA [illegible] 3 [illegible]

offer non-violent resistance. If we are few or if we can offer no non-violent resistance we shall act still. This is all I may. This is all speculative. When the real time comes we shall find the remedy ready at hand. In Satyagraha

be discharged or those
who don't fight directly
or indirectly will be
imprisoned. In the
latter case the im-
prisonment will
be a humorous contri-
bution for those who
have no faith in
violence & will never
take part in it.
Assuming that
[illegible] out and
[illegible]
[illegible]

there can be no deep-laid plans.

If the answers do not satisfy you, you will write again.

Yours

Bapu

ಕಿಶೋರಭಾಯಿಗೆ ಬರೆದ ನಿಮ್ಮ ಜುಲೈ ೧೭ರ ಪತ್ರಕ್ಕೆ ಎಂದೋ. ಉತ್ತರವನ್ನು ಕೊಡಬೇಕಾಗಿತ್ತು. ಆದರೆ ನನಗೆ ಸಮಯವಿಲ್ಲ. ಆದ್ದರಿಂದ ಇಂಥ ಉತ್ತರಗಳನ್ನು ಕೊಡಲು ಮೇಲಿಂದ ಮೇಲೆ ತಡವಾಗುತ್ತದೆ.

ನಿಜವಾದ ದಾಳಿಯಾದಾಗ ಸವಿನಯ ಕಾಯಿದೆ ಭಂಗವು ಇರುವುದಿಲ್ಲ. ಇಷ್ಟೇ ಅಲ್ಲ. ಯಾರು ಜೇಲಿನಲ್ಲಿರುವರೋ ಅವರೆಲ್ಲರೂ ಬಿಡುಗಡೆ ಹೊಂದುವರು. ಮತ್ತು ಯಾರು ಪ್ರತ್ಯಕ್ಷ ಅಪ್ರತ್ಯಕ್ಷ ರೀತಿಯಿಂದ ಯುದ್ಧ ಮಾಡುವುದಿಲ್ಲವೋ ಅವರನ್ನು ಜೇಲಿಗೆ ಕಳುಹಿಸಲಾಗುವುದು. ಯುದ್ಧದಲ್ಲಿ ಭಾಗ ತೆಗೆದು ಕೊಳ್ಳದವರನ್ನು ಜೇಲಿಗೆ ಹಾಕಿದ ಪಕ್ಷದಲ್ಲಿ ಅದೊಂದು ಅಹಿಂಸೆಯ ಕೊಡುಗೆ. ಯಾಕೆಂದರೆ ಯಾರಿಗೆ ಹಿಂಸೆಯಲ್ಲಿ ವಿಶ್ವಾಸವಿಲ್ಲವೋ ಅವರು ಯುದ್ಧದಲ್ಲಿ ಎಂದೂ ಭಾಗವಹಿಸಲಾರರು.

ನಾವೆಲ್ಲರೂ ಹೊರಗೆ ಬರುವೆವು. ಮತ್ತು ನಮ್ಮ ಸಂಖ್ಯೆಯು ಸಾಕಷ್ಟು ದೊಡ್ಡದಿದೆ ಎಂದು ತಿಳಿಯೋಣ. ನಾವು ಅಹಿಂಸಾತ್ಮಕ ಪ್ರತಿರೋಧವನ್ನು ಮಾಡುವುದಾಗದಿದ್ದರೆ ನಾವು ಸುಮ್ಮನೆ ಕುಳಿತು ಪ್ರಾರ್ಥಿಸೋಣ. ಇದೆಲ್ಲವೂ ಒಂದು ಊಹೆ. ನಿಜವಾದ ಸಮಯವು ಬಂದಾಗ ಉಪಾಯವು ತಾನಾಗಿ ಹೊಳೆಯುವದು. ಸತ್ಯಾಗ್ರಹದಲ್ಲಿ ಆಳವಾಗಿ ವಿಚಾರಮಾಡಿದ ಯೋಚನೆಗಳೇನೂ ಇರುವುದಿಲ್ಲ.

ಈ ಉತ್ತರಗಳಿಂದ ನಿಮಗೆ ಸಮಾಧಾನವಾಗದಿದ್ದರೆ ಪುನಃ ಬರೆಯಿರಿ.

ನಿಮ್ಮ ವಿಶ್ವಾಸಪಾತ್ರ

ಮೋ. ಕ. ಗಾಂಧೀ

## ಶ್ರೀ ಎಂ.ಆರ್ಯಮೂರ್ತಿ ಅವರಿಗೆ ಗಾಂಧೀಜಿಯ ಪತ್ರ

Belgaum
5th Feb '34

Dear friend,

Thank you for your letter. The baby's name may be Abhaya Kumar. Bless you.

Yours sincerely
M.K.Gandhi

ಗಾಂಧೀಜಿ ಬೆಳಗಾವಿಯಿಂದ ಶ್ರೀ ಆರ್ಯಮೂರ್ತಿ ಅವರಿಗೆ (ಅಭಯ ಕುಟೀರದ ವಿಳಾಸಕ್ಕೆ) ೫-೨-೧೯೩೪ ರಲ್ಲಿ ಒಂದು ಪತ್ರ ಬರೆದಿದ್ದರು. ಆದರೆ ಆ ಪತ್ರಕ್ಕೆ ಗಾಂಧೀಜಿಯ ಅಂಕಿತವೇ ಇರಲಿಲ್ಲ. ಮುಂದೆ ಗಾಂಧೀಜಿ ೧೯೩೬ರಲ್ಲಿ ಹರಿಜನ ಪ್ರವಾಸ ಕೈಕೊಂಡು ತಮ್ಮಲ್ಲಿಗೆ ಬಂದಾಗ ಶ್ರೀಯುತರು ಗಾಂಧೀಜಿಗೆ ಆ ಅಂಕಿತಹೀನ ಪತ್ರ ತೋರಿಸಿದರು. ಗಾಂಧೀಜಿ ಬೆರಗಾಗಿ ನಕ್ಕು ಆ ಪತ್ರಕ್ಕೆ ಎರಡು ವರ್ಷಗಳ ತರುವಾಯ ತಮ್ಮ ಅಂಕಿತ ಹಾಕಿಕೊಟ್ಟರು. ಆ ಪತ್ರ ಇದು –

ಬೆಳಗಾಂವಿ, ೫-೨-೧೯೩೪

ಪ್ರಿಯ ಮಿತ್ರ,

ನಿಮ್ಮ ಪತ್ರದ ಸಲುವಾಗಿ ಧನ್ಯವಾದಗಳು, ಮಗುವಿನ ಹೆಸರು ಅಭಯಕುಮಾರ ಎಂದಿರಬಹುದು. ನಿಮಗೆ ಆಶೀರ್ವಾದಗಳು.

ನಿಮ್ಮ ವಿಶ್ವಾಸಿಕ
ಎಂ.ಕೆ.ಗಾಂಧೀ

ಪ್ರಿಯ ರಾಮಸ್ವಾಮಿ ವರ್ಧಾ ೧೪-೫-೧೯೩೫

ನಿಮ್ಮ ಉದ್ದೇಶ ಸಫಲವಾಗಲೆಂದು ಹಾರೈಸುತ್ತೇನೆ. ನೀವು ಪ್ರಾರಂಭಿಸಿದ್ದನ್ನು ಕೈಬಿಡದಂತೆ ಎಚ್ಚರಿಕೆ ವಹಿಸಿರಿ.

ನಿಮ್ಮ
ಎಂ.ಕೆ.ಗಾಂಧೀ

ಪ್ರಿಯ ಮಿತ್ರ,

ಸೇವಾಗ್ರಾಮ, ವರ್ಧಾ ೩೧-೫-೧೯೪೦

ನೀವು ಒಪ್ಪಿಕೊಳ್ಳುವದರಲ್ಲಿ ನನಗೆ ಆಕ್ಷೇಪಣೆ ಏನೂ ಕಾಣುವುದಿಲ್ಲ.

ನಿಮ್ಮ ವಿಶ್ವಾಸಿಕ
ಎಂ.ಕೆ.ಗಾಂಧೀ

ಶ್ರೀ ಜಯದೇವ ಕುಲಕರ್ಣಿ (ಬೆಳಗಾಂವಿ) ಅವರಿಗೆ
ಗಾಂಧೀಜಿಯ ಪತ್ರ

ಸೇವಾಗ್ರಾಮ ೨೮-೮-೧೯೪೪

ಬಂಧು ಕುಲಕರ್ಣಿ,

ನಿಮ್ಮ ಪತ್ರ ತಲುಪಿತು. ಇದೇ ಪ್ರಶ್ನೆಯನ್ನು ಇತರರೂ ಕೇಳಿದ್ದಾರೆ. ನಾನು ಉತ್ತರ ಕೊಟ್ಟಿದ್ದೇನೆ. ಎಲ್ಲ ಪರಿಸ್ಥಿತಿಗಳ ಪರಿಚಯ ಇರುವದು ನನಗೆ ಅಸಂಭವ. ಆದ್ದರಿಂದ ವ್ಯಕ್ತಿಗಳ ಪ್ರಶ್ನೆಗಳಿಗೆ ಉತ್ತರ ಕೊಡುವದು ನನಗೆ ಅವಶ್ಯವೇ ಸರಿ. ನಾನು ಸಾಮಾನ್ಯ ನಿಯಮಗಳನ್ನು ಮಾತ್ರ ನಿರ್ದೇಶಿಸಿದ್ದೇನೆ.

ತಮ್ಮ
ಮೋ.ಕ.ಗಾಂಧೀ

# ಪರಿಶಿಷ್ಟ

*ಕರ್ಮವೀರ ೪-೩-೧೯೨೭*

## ಕರ್ನಾಟಕಕ್ಕೆ ರಾಜಗೋಪಾಲಾಚಾರ್ಯರ ಸಂದೇಶ

ಮಾರ್ಚ್ ೨೬ನೇ ತಾರೀಖಿನಿಂದ ನಾಲ್ಕನೇ ಏಪ್ರಿಲ್ ವರೆಗೆ ಮಹಾತ್ಮರು ಕರ್ನಾಟಕದಲ್ಲಿ ಸಂಚಾರ ಮಾಡುವರು. ಕಳೆದ ಡಿಸೆಂಬರ್ ತಿಂಗಳಲ್ಲಿ ಸಾಬರಮತಿ ಬಿಟ್ಟನಂತರ ಇವರು ಒಂದೇ ಸಮನೆ ಸಂಚಾರ ಮಾಡುತ್ತಲಿರುವರು. ಮತ್ತು ಈ ವರ್ಷ ಪೂರಾ ಸಂಚರಿಸುವರು. ಪ್ರತಿಯೊಂದು ಊರಿಗೆ ಅವರಿಗೆ ಹೋಗಲಿಕ್ಕಾಗದಿದ್ದರೆ ಎಲ್ಲ ಕಡೆಗೆ ಹೋಗಲಿಕ್ಕೆ ಅವರಿಗೆ ವೇಳೆ ಸಿಗದ್ದಕ್ಕಾಗಿಯೇ ಹೊರ್ತು ಬೇರೆ ಯಾವ ಉದ್ದೇಶದಿಂದಲ್ಲ. ಸಾಧ್ಯವಿರುವಷ್ಟು ಊರುಗಳನ್ನೇ ಮಹಾತ್ಮರು ಸಂಚರಿಸಿದರೂ ಅಷ್ಟು ಸಂಚಾರವು ಸಫಲವಾಗುವಂತೆ ಕನ್ನಡಿಗರೆಲ್ಲರೂ ಗಂಗಾಧರರಾಯರಿಗೆ ನೆರವಾಗಬೇಕು. ಅಖಿಲ ಭಾರತೀಯ ನೂಲುವ ಸಂಘಕ್ಕಾಗಿ ಹಣ ಕೂಡಿಸಲಿಕ್ಕೆ ಮಹಾತ್ಮರೀಗ ಅಡ್ಡಾಡುತ್ತಿರುವರು. ಒಕ್ಕಲಿಗರಿಗೆ ಬಿಡುವಿದ್ದ ವೇಳೆಯಲ್ಲಿ ಅವರಿಗೇನಾದರೊಂದು ಬೇರೆ ವ್ಯವಸಾಯವನ್ನು ಕಲ್ಪಿಸಿಕೊಡಲಿಕ್ಕೆ ಮನೆಮಾರಿಗೆಯ ಕೈಗಾರಿಕೆಯಾದ ನೂಲುವಿಕೆಯನ್ನು ಬೆಳೆಸಬೇಕೆಂಬುದೇ ನೂಲುವ ಸಂಘದ ಮುಖ್ಯ ಉದ್ದೇಶವು. ಈ ಹೊತ್ತಿನಲ್ಲಿ ಕೆಲಸವಿಲ್ಲದ ಹಳ್ಳಿಯ ಜನರ ಹೊಟ್ಟೆಗೆ ಸಾಕಷ್ಟು ಕೆಲಸಕೊಟ್ಟು ಅವರ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸುವುದು ಕಾಂಗ್ರೆಸದವರದಷ್ಟೇ ಕೆಲಸವಾಗಿರದೆ ಅದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ಕರ್ನಾಟಕದೊಳಗಿನ ಕೆಲವು ಜಿಲ್ಲೆಗಳು, ದಕ್ಷಿಣ ಹಿಂದೂಸ್ತಾನದೊಳಗಿನ ಹಳ್ಳಿಗಳಂತೆ ಬರಗಾಲದ ಬಾಯಲ್ಲಿ ಸಿಕ್ಕಿವೆ. ಇಂಥ ವೇಳೆಯಲ್ಲಿ ಬಡವರಿಗೆ ಸಹಾಯ ಮಾಡುವದೇ ಪ್ರತಿಯೊಬ್ಬನ ಒಂದು ಮುಖ್ಯ ಕರ್ತವ್ಯವು. ಅಖಿಲ ಭಾರತೀಯ ನೂಲುವ ಸಂಘವು ರಾಜಕಾರ್ಯಕ್ಕೆ ಸಂಬಂಧಪಟ್ಟದ್ದಲ್ಲವೆಂದೂ ಅನೇಕ ಸಾರೆ ಹೇಳಿರುವರು. ಈ ಸಂಘಕ್ಕೆ ಬೇಕಾದ ಪಕ್ಷದವನೂ ಬೇಕಾದ ಪಂಗಡದವನೂ, ಜಾತಿಯವನೂ, ಸರಕಾರಿ ಸೇವಕನೂ ತನಗೆ ತಿಳಿದಷ್ಟು ದುಡ್ಡುಕೊಟ್ಟು ನೆರವಾಗಬಹುದು. ಹಾಗೆಂತಲೇ ಗಾಂಧೀಯವರಿಗೆ ಅರ್ಪಿಸುವ ನಿಧಿಗೆ ಮದ್ರಾಸ್ ಮಂತ್ರಿಗಳೂ, ಪಾನಗಲ್ ರಾಜರೂ ಪೆಟ್ರೋ ಅವರೂ, ಜಸ್ಟೀಸ್ ಪತ್ರಿಕೆಯ ಸಂಪಾದಕರಾದ ರಾಮಸ್ವಾಮಯ್ಯ ಹಾಗೂ

ಮೊದಲಿಯಾರರೂ, ಟಿ. ರಂಗಾಚಾರ್ಯ ಅವರಂಥವರೂ ಸಹಾಯ ಮಾಡಿದರು. ಮಹಾತ್ಮರಿಗೆ ತಕ್ಕ ಮರ್ಯಾದೆ ಮಾಡಬೇಕೆಂದು ಮೈಸೂರವರೂ ಎತ್ತುಗಡೆ ನಡೆಸಿದ್ದಾರೆ. ಮೈಸೂರಿನ ಶ್ರೀಮನ್ ಮಹಾರಾಜರವರೂ ಕೂಡ ಮಹಾತ್ಮರನ್ನು ದರ್ಶನಕ್ಕಾಗಿ ಬರಮಾಡಿ ಕೊಳ್ಳುವವರಿದ್ದಾರೆ. ಅಂದಮೇಲೆ ಮೈಸೂರಿನ ಒಕ್ಕಲಿಗರ ಸ್ಥಿತಿಯನ್ನು ಸುಧಾರಿಸಲಿಕ್ಕೆ ಅವರ ಕೈಯಲ್ಲಿ ರಾಟಿ ಕೊಡಬೇಕೆಂಬುದು ಮಹಾರಾಜರಿಗೆ ಇಷ್ಟವೆಂಬುವಲ್ಲಿ ಸಂಶಯವಿಲ್ಲ. ಈ ಸಂಧಿಯಲ್ಲಿ ಉತ್ತರ ಕನ್ನಡಿಗರು ಹಿಂದುಳಿಯರೆಂದು ನನ್ನ ಆಶೆ. ಮಹಾತ್ಮರು ಬರುವ ಸಂಧಿಯನ್ನು ಸಾಧಿಸಿ, ಬಡಬಗ್ಗರನ್ನು ಬರಗಾಲದಿಂದ ಬಿಡಿಸಲು ಮೈಸೂರವರೂ ಪ್ರಯತ್ನಿಸುವಂತೆ, ಉತ್ತರ ಕನ್ನಡಿಗರೂ ತಮ್ಮ ಕೈಲಾದ ಮಟ್ಟಿಗೆ ದುಡ್ಡು ಕೂಡಿಸಿ ನೆರವಾಗಬೇಕು. ಹಣ ಕೂಡಿಸುವ ಕಾರ್ಯವು ಮಹಾತ್ಮರು ಬರುವ ಒಳಗಾಗಿ ತೀರಿರಲಿಕ್ಕೆ ಬೇಕು. ಮಹಾತ್ಮರನ್ನು ಕರೆಕಳಿಸುವವರು, ಈ ಕೆಳಗಿನ ಅವರ ಪತ್ರವನ್ನು ಓದಿಕೊಂಡು ಅದರಂತೆ ಅವರ ಸ್ವಾಗತಕ್ಕಾಗಿ ಏರ್ಪಾಟು ನಡೆಸಬೇಕಾಗಿ ವಿನಂತಿ.

**ಮಹಾತ್ಮರ ಕೆಲವು ಸೂಚನೆಗಳು:**

ಸಭೆ ನಡೆದಕಾಲಕ್ಕೆ ಎಷ್ಟೋ ಸ್ವಯಂ ಸೇವಕರು ಮಾನಪತ್ರದ ಕಾಗದಗಳನ್ನಾಗಲೀ, ಬೇರೆ ಕಾಗದಗಳನ್ನಾಗಲೀ ಹಂಚುವದುಂಟು. ಹೀಗೆ ಮಾಡಿದರೆ ಗೊಂದಲವಾಗುತ್ತದೆ. ಆದ್ದರಿಂದ ಮಾನಪತ್ರ ಮುಂತಾದ ಪತ್ರಗಳನ್ನು ಮೊದಲೆ ಹಂಚತಕ್ಕದ್ದು. ನಿಜವಾಗಿ ಇಂಥ ಕಾಗದಗಳನ್ನು ಸಾವಿರಾರು ಜನರಿಗೆ ಹಂಚುವುದು ಹೆಚ್ಚು ಖರ್ಚಿನ ಕೆಲಸವಿರುತ್ತದೆ. ಈ ರೀತಿಯಾಗಿ ಸುಮ್ಮನೆ ಮುದ್ರಣಕ್ಕೂ ಕಾಗದಕ್ಕೂ ದುಡ್ಡು ವೆಚ್ಚ ಮಾಡುವುದಕ್ಕಿಂತ ಸ್ಥಾನಿಕ ವೃತ್ತಪತ್ರಿಕೆಗಳಲ್ಲಿ ಮುದ್ರಿಸಿದ ಕಾಗದಗಳನ್ನು ಜನರು ಕೊಳ್ಳಲಿ.

**ಖಾದಿಯ ಸಭೆಯವರಿಗೆ:**

ನಾವು ಜಗತ್ತಿನಲ್ಲಿರುವ ಬಡ ಜನಾಂಗಗಳಲ್ಲಿ ತೀರಾ ಬಡವರೆಂಬುದನ್ನು ಮರೆಯಲಾಗದು. ನಮ್ಮಲ್ಲಿ ಅರ್ಧಕ್ಕರ್ಧ ಜನರು ಅರೆಹೊಟ್ಟೆಯಿಂದಿರುವರು. ಆದ್ದರಿಂದ ನಮ್ಮಲ್ಲಿಯ ಹಣವನ್ನು-ಸಾರ್ವಜನಿಕ ಹಣವನ್ನು-ಅಗತ್ಯವಿಲ್ಲದೆ, ವಿಚಾರವಿಲ್ಲದೆ ಖರ್ಚು ಮಾಡಕೂಡದು. ಖರ್ಚು ಮಾಡುವುದರಲ್ಲಿ ನಾವು ಜೀನರಾಗಬೇಕು. ಜನರಿಂದ ಖಾದಿಗಾಗಿ ಕೂಡಿಸಿದ ಒಂದು ಕಾಸು, ಪೈಯೂ ಸಹ ಉಪವಾಸವಿರುವ ಲಕ್ಷಾವಧಿ ಜನರಿಗಾಗಿ ಇರುತ್ತದೆ. ಅಲಂಕಾರ ಮುಂತಾದವುಗಳನ್ನು ಮಾಡಬೇಕೆಂದರೆ ಶಿಲ್ಕು ಉಳಿದಿರುವ ಹಳೇ ಖಾದಿಯಿಂದ ನಿಶಾನಿ ಮುಂತಾದವುಗಳನ್ನು ಮಾಡಬಹುದು. ಮತ್ಯಾತಕ್ಕೂ ವೆಚ್ಚ ಮಾಡಲಾಗದು.

**ಮರ್ಯಾದೆಯ ಕ್ರಮ:**

ಹೂವಿನ ಮಾಲೆಗಳ ಬದಲಾಗಿ ಸೂಲಿನ ಮಾಲೆಗಳು ಲೇಸು. ಅದಕ್ಕೆ ಗಂಟುಹಾಕಿ ಕೆಡಿಸಬಾರದು. ಅಂದರೆ ಇದೊಂದು ನೇಕಾರರಿಗೆ ಉಪಯೋಗವಾಗುವುದು. ಮಾನಪತ್ರ ಮುದ್ರಿಸಲಿಕ್ಕೆ ದುಡ್ಡು ಖರ್ಚು ಮಾಡಬಾರದು. ಮಾನಪತ್ರವನ್ನು ಕೈಯಿಂದ ಮಾಡಿದ ಕಾಗದದ ಮೇಲೆ ಬರೆದು ಅದನ್ನು ಖಾದಿಗೆ ಹಚ್ಚಿ ಹೊಲಿಯಬಹುದು. ಬೆಳ್ಳಿಯ ಕರಡಿಗೆಗಳಲ್ಲಿ ಹಾಕಿ ಮಾನಪತ್ರಗಳನ್ನರ್ಪಿಸುವದು ಬೇಡ. ಅದನ್ನು ನಾನೆಲ್ಲಿಡಲಿ? ಇತ್ತಿತ್ತ ಅವುಗಳನ್ನೆಲ್ಲ

ಲಿಲಾವು ಮಾಡಿ ಬಂದ ಹಣವನ್ನು ನಾನು ಅಖಿಲ ಭಾರತೀಯ ದೇಶಬಂಧು ನಿಧಿಗೆ ಕೊಡುತ್ತೇನೆ.

**ಸಂತೋಷದ ಸಂಚಾರವಲ್ಲ:**

ನಾನೀಗ ಸಂಚರಿಸುತ್ತಿರುವುದು ಸಂತೋಷಕ್ಕಾಗಿ ಅಲ್ಲ ಎಂದು ಗಂಗಾಧರರಾಯರು ಹೇಳಿದ್ದು ನಿಜ. ದರಿದ್ರ ನಾರಾಯಣರಿಗಾಗಿ ಏನಾದರೂ ಮಾಡಬೇಕೆಂಬ ವ್ಯವಸಾಯಕ್ಕಾಗಿ ನನ್ನ ಸಂಚಾರ. ನನಗೋಸ್ಕರ ಮೋಟಾರು ಬಾಡಿಗೆ ಮಾಡಿ ಉಳಿದವರು ಹೆಚ್ಚು ಮಂದಿ ನನ್ನೊಡನೆ ಅಡ್ಡಾಡುವದುಂಟು. ಇದರಿಂದ ಸುಮ್ಮನೆ ಬಾಡಿಗೆಗೆ ಹೆಚ್ಚು ಹಣ ವೆಚ್ಚವಾಗುತ್ತದೆ. ಶಕ್ಯವಿದ್ದಲ್ಲಿ ಕೆಟ್‌ಸನ್ ದೀಪಗಳನ್ನು ಹಚ್ಚಬಾರದು. ಊಟಕ್ಕಾಗಿ ದುಂದು ವೆಚ್ಚ ಮಾಡಬಾರದು.

**ನನ್ನ ಬಗ್ಗೆ:**

"ಇಡೀ ವರ್ಷವೆಲ್ಲ ನಾನು ಸಂಚಾರ ಮಾಡಬೇಕಾಗಿರುವದು. ನನ್ನ ಶಕ್ತಿ ಸಾಮರ್ಥ್ಯಗಳಿಗೆ ಮಿತಿಯುಂಟು. ಆದ್ದರಿಂದ ನನಗೆ ದಿನಾಲು ೪೫ ನಿಮಿಷ ಸ್ನಾನಕ್ಕೆ, ೪೫ ನಿಮಿಷ ಊಟಕ್ಕೆ, ೪೫ ನಿಮಿಷ ಮುಂಜಾನೆ ಸಂಜೆ ಅಡ್ಡಾಡಲು ವೇಳೆ ಬೇಕು. ೯ ಗಂಟೆಗೆ ನಾನು ಮಲಗಲಿಕ್ಕೆ ಬೇಕು. ದಿನಾಲು ಮೂರು ತಾಸು ನನ್ನ ಕಡೆಗೆ ಬರುವ ಪತ್ರ ವ್ಯವಹಾರಗಳನ್ನು ನೋಡಲಿಕ್ಕೂ ನನ್ನ ಪತ್ರಿಕೆಯ ಕೆಲಸಕ್ಕೂ ವೇಳೆ ಬೇಕು. ಹಗಲು ನಾನು ಅರ್ಧಗಂಟೆ ಮಲಗಲಿಕ್ಕೆ ಬೇಕು. ಇಷ್ಟೆಲ್ಲ ನನಗೆ ಅನುಕೂಲ ಮಾಡಿಕೊಟ್ಟರೆ ನನಗಾಗುವ ಪ್ರವಾಸದ ತ್ರಾಸನ್ನೂ ನಾನು ತಾಳುವೆನಲ್ಲದೆ, ಪ್ರವಾಸದಿಂದ ನನ್ನ ಪ್ರಕೃತಿ ಸುಧಾರಿಸುವುದು."

ಮೇಲಿನ ಮಹಾತ್ಮರ ಸೂಚನೆಗಳಿಂದ ಮಹಾತ್ಮರನ್ನು ಕರೆಯಿಸುವವರ ಮೇಲೆ ಯಾವ ತರದ ಹೊಣೆ ಇರುವದೆಂಬುದು ವ್ಯಕ್ತವಾಗುತ್ತದೆ. ಮಹಾತ್ಮರ ವೇಳೆ ನೋಡಿವರ ೯ರಿಂದ ೧೦ರ ವರೆಗೆ ಮುಂಜಾನೆ ಬೇಕಾದವರು ಅವರನ್ನು ಕಾಣಬೇಕು. ಮಿಕ್ಕ ವೇಳೆಯಲ್ಲಿ ಅವರಿಗೆ ತೊಂದರೆ ಕೊಡಬಾರದು.

* * *

ಕರ್ಮವೀರ-೨೫-೩-೧೯೨೭

## ಮಹಾತ್ಮರ ಭಾಷಣ

**ಬ್ರಾಹ್ಮಣೇತರರಿಗೆ ಉಪದೇಶ:**

"ಬ್ರಾಹ್ಮಣೇತರ ಬಾಂಧವರಿಗೂ ಕೆಲ ಮಾತುಗಳನ್ನು ಹೇಳತಕ್ಕದ್ದುಂಟು. ನಾನು ವರ್ಣಾಶ್ರಮ ಧರ್ಮವನ್ನು ಮನ್ನಿಸುವಂಥವನಿದ್ದೇನೆ. ಆದರೆ ಸದ್ಯದ ಸ್ಥಿತಿಯಲ್ಲಿ ಅದನ್ನು ಮನ್ನಿಸಲಿಚ್ಛಿಸುವದಿಲ್ಲ. ವರ್ಣಾಶ್ರಮ ಧರ್ಮದೊಳಗಿನ ತತ್ವಗಳು ನನಗೆ ಪೂರ್ಣ ಮಾನ್ಯವಾಗಿವೆ.

ಈಗಿನ ಜಾತಿಗಳು ನನಗೆ ಒಪ್ಪಿಗೆಯಿಲ್ಲ. ನಾಲ್ಕು ವರ್ಣಗಳ ಹೊರ್ತು ಐದನೆಯ ವರ್ಣವು ವರ್ಣಾಶ್ರಮ ಧರ್ಮವನ್ನು ನಾಶಮಾಡುವದಾಗುತ್ತದೆ. ಸದ್ಯ ಸ್ಥಿತಿಯಲ್ಲಿ ಬ್ರಾಹ್ಮಣೇತರರು ಬ್ರಾಹ್ಮಣರು ದ್ವೇಷಮಾಡತಕ್ಕ ಕಾರಣವಿಲ್ಲ. ಬ್ರಾಹ್ಮಣರು ಹಿಂದೂ ಧರ್ಮದ ರಕ್ಷಣೆ ಮಾಡಿದ್ದಾರೆ. ಸ್ವಂತದ ಉದ್ಧಾರ ಮಾಡಿಕೊಳ್ಳುವಾಗ ಅನ್ಯರ ದ್ವೇಷ ಮಾಡಿಕೊಳ್ಳುವ ಕಾರಣವಿಲ್ಲ. ಇದೊಂದು ಸಂಗತಿಯನ್ನು ಲಕ್ಷದಲ್ಲಿಟ್ಟುಕೊಂಡು ನಿಮ್ಮ ಉದ್ಧಾರಮಾಡಿಕೊಳ್ಳಿರಿ.

ನನ್ನ ಜನ್ಮವು ವೈಶ್ಯವೃತ್ತಿಯಲ್ಲಾಗಿರುತ್ತದಾದ್ದರಿಂದ ನನ್ನಲ್ಲಿ ವೈಶ್ಯವೃತ್ತಿಯು ಇಷ್ಟು ಉತ್ಕೃಷ್ಟವಾಗಿ ಪ್ರಕಟವಾಗಿರುತ್ತದೆ. ನಾನು ಪ್ರಚಂಡ ವ್ಯಾಪಾರವನ್ನು ಪ್ರಾರಂಭಿಸಿದ್ದೇನೆ. ವ್ಯಾಪಾರದ ಕೂಡ ಗೋರಕ್ಷಣವನ್ನು ಪ್ರಾರಂಭಿಸಿದ್ದೇನೆ. ನಾನು ವೈಶ್ಯನಾದ ಮೂಲಕ ನನ್ನ ವ್ಯವಸಾಯವು ಒಕ್ಕಲುತನದ್ದಾಗಿರಬೇಕೆಂದು ನೀವು ಮರೆಯುವುದು ಶಕ್ಯವಾದದ್ದು. ನಾನು ಇಂದು ನಿಮ್ಮೆದುರಿಗೆ ಒಕ್ಕಲಿಗರ ಪ್ರತಿನಿಧಿಯಾಗಿ ನಿಂತಿಲ್ಲ. ಏಕೆಂದರೆ ದೇಶದಲ್ಲಿ ಒಕ್ಕಲುತನವು ತುಸುವಾದರೂ ಜೀವಂತವಿರುತ್ತದೆ. ವಾಣಿಜ್ಯತನವು ನೂರಕ್ಕೆ ೯೯ರಷ್ಟು ನಷ್ಟವಾಗಿರುತ್ತದೆ. ಅದೇ ಪ್ರಕಾರ ವಿವೇಕಪೂರ್ಣ ಮತ್ತು ಶಾಸ್ತ್ರ ಶುದ್ಧ ಗೋರಕ್ಷಣವೂ ನಷ್ಟವಾಗಿರುತ್ತದೆ. ನಾನು ವಿವೇಕಪೂರ್ಣ ವೈಶ್ಯನಾಗಿರುವದರಿಂದ ಈ ಎರಡು ವ್ಯವಸಾಯಗಳ ಪುರಸ್ಕರ್ತನೆಂದು ನಿಮ್ಮೆದುರಿಗೆ ನಿಂತಿದ್ದೇನೆ. ನನ್ನಲ್ಲಿ ಅಲ್ಪವಾಗಿ ಬ್ರಾಹ್ಮಣತ್ವವೂ ಕ್ಷತ್ರಿಯತ್ವವೂ ಉಂಟು. ಆದರೆ ಈ ವರ್ಷ ನಿಮ್ಮಲ್ಲಿಗೆ ಒಬ್ಬ ಕೃಪಣ ವೈಶ್ಯನಾಗಿ ಬಂದಿದ್ದೇನೆ.

ಇಂಗ್ಲೀಷರು ಬಣಜಿಗರಾಗಿದ್ದಾರೆ. ಅವರಿಗೆ ಸಾಮ್ರಾಜ್ಯ ಬೇಕಾದದ್ದು ಬಣಜಿಗತನಕ್ಕಾಗಿಯೇ; ಶುದ್ಧ ವಾಣಿಜ್ಯ ವೃತ್ತಿಯು ಅಧರ್ಮವಲ್ಲ. ತನ್ನ ವ್ಯಾಪಾರವು ಅನಿಯಂತ್ರಿತವಾಗಿ ನಡೆಯಬೇಕಂತಲೇ ಇಂಗ್ಲೆಂಡವು ಪ್ರಚಂಡ ಹಡಗ ಪಡೆ ಇಟ್ಟಿರುತ್ತದೆ. ಜಗತ್ತಿನೊಳಗಿನ ಎಲ್ಲಾ ಅಡ್ಡ ದಾರಿಗಳೂ ತಮ್ಮ ವಶದಲ್ಲಿದ್ದು ಅವುಗಳ ಸಹಾಯದಿಂದ ಎಲ್ಲಾ ವ್ಯಾಪಾರವೂ ತಮ್ಮ ಕೈವಶವಾಗಿರಬೇಕೆಂದು ಇಂಗ್ಲೆಂಡದ ಮಹತ್ವಾಕಾಂಕ್ಷೆಯಾಗಿರುತ್ತದೆ. ಇಂಗ್ಲೀಷರು ಬಣಜಿಗರಾಗಿಯೇ ಮೊದಲು ಈ ದೇಶಕ್ಕೆ ಬಂದರು. ಮುಂದೆ ಅವರು ಕ್ಷತ್ರಿಯರಷ್ಟೇ ಅಲ್ಲ, ಬ್ರಾಹ್ಮಣರು ಸಹ ಆದರು. ವೈಶ್ಯರು ಬುದ್ಧಿವಂತರಾದ ಬ್ರಾಹ್ಮಣರೂ, ಕ್ಷತ್ರಿಯರೂ ಆಗಬಾರದೆಂದು ವರ್ಣಾಶ್ರಮ ಧರ್ಮವು ಎಂದೂ ಹೇಳಿಲ್ಲ. ಬ್ರಾಹ್ಮಣರಲ್ಲಿಯೂ ವಾಣಿಜ್ಯ ಬುದ್ಧಿ ಇರುತ್ತದೆ. ಆದರೆ ಅವರು ಅದನ್ನು ಹೊಟ್ಟೆಯ ದಶೆಯಿಂದ ಉಪಯೋಗ ಮಾಡುವದಿಲ್ಲ. ಅವರು ಭಿಕ್ಷೆಯಿಂದ ಜೀವಿಸಿ, ನಮಗೆ ಬ್ರಹ್ಮದರ್ಶನ ಮಾಡಿಕೊಡುತ್ತಾರೆ. ಮೊದಲಿನ ವೈಶ್ಯರಿಗೆ ತುಸುವಾದರೂ ವರ್ಣಾಶ್ರಮ ಧರ್ಮ ಗೊತ್ತಿದ್ದರಿಂದಲೇ ಅವರು ತಮ್ಮ ಬುದ್ಧಿಯನ್ನು ತೇಜಸ್ವಿಮಾಡಿ, ಕ್ಷತ್ರಿಯರಾದರು. ವೈಶ್ಯರು ಈ ವರ್ಣಾಶ್ರಮವನ್ನು ಬಿಟ್ಟ ದಿವಸವೇ ಹಿಂದೂಸ್ತಾನ ಮುಗಿಯಿತು. ಮತ್ತು ಸ್ವರಾಜ್ಯ ನಷ್ಟವಾಯಿತು. ಇಂಗ್ಲೀಷ ಜನರು ಇಂದು ಬ್ರಾಹ್ಮಣರಿಗೂ ಹೆದರುವುದಿಲ್ಲ.

ನೀವು ನಿಜವಾದ ವೈಶ್ಯರಾದರೆ ನನ್ನ ಕೆಲಸ ಮುಗಿಯಿತೆಂದು ತಿಳಿಯುತ್ತೇನೆ. ನೀವು

ವ್ಯಾಪಾರವನ್ನು ಕೈಯಲ್ಲಿ ತಕ್ಕೊಳ್ಳಬೇಕು. ಪರಕೀಯರ ಬಟ್ಟೆ ಪರದೇಶಿಯ ಬಟ್ಟೆಯನ್ನು ಮೊದಲು ಬಿಟ್ಟುಕೊಡಿರೆಂದು ನಾನು ನಿಮಗೆ ಹೇಳುತ್ತೇನೆ.

* * *

*ಸಂಯುಕ್ತ ಕರ್ನಾಟಕ ೯-೧-೧೯೩೪ (ಪುಟ-೫)*

## ಮಹಾತ್ಮರೂ, ಬಾಲಕಾಶ್ರಮಗಳೂ

### "ಕರ್ನಾಟಕದಲ್ಲಿಯ ಸ್ತುತ್ಯಕಾರ್ಯ"

(ನಮ್ಮ ಸ್ವಂತ ಸುದ್ದಿಗಾರರಿಂದ)

ಬೆಂಗಳೂರು ತಾ.೮-೧-೩೪

ಶ್ರೀರಾದ ಡಾ. ಹರಡೀಕರರು, ಕೌಜಲಗಿ ಹನುಮಂತರಾಯರು. ಕರಮರಕರ ದತ್ತರಾಯರು, ಡಿ.ಆರ್.ಮಾನಪ್ಪನವರು, ಮಾಲೂರು ಅವರು ಮತ್ತು ಶಿವಮೊಗ್ಗೆಯ ಸುಬ್ಬರಾಯರು, ನಿನ್ನೆ ಮಧ್ಯಾಹ್ನ ೧೨ ಗಂಟೆಯ ಸುಮಾರಿಗೆ ಮಹಾತ್ಮರನ್ನು ಕಂಡುಕೊಂಡು ಅವರಿಗೆ ಕ್ಯಾನರಾದಲ್ಲಿಯ ಹಿಂದುಳಿದ ಜಾತಿಯ ಜನರ ಬಾಲಕರಿಗಾಗಿ ಎಂದು ಸ್ಥಾಪಿಸಲಾಗಿರುವ ಬಾಲಕಾಶ್ರಮಗಳ ರೂಪುರೇಷೆ ಕಾರ್ಯಕ್ರಮಗಳನ್ನು ವಿಶದೀಕರಿಸಿದರು. ಅಲ್ಲದೆ ಈ ಆಶ್ರಮಗಳನ್ನು ಕುರಿತಾಗಿರುವ ವರದಿಗಳೂ, ಹಣದ ವಿಷಯಕ್ಕಿರುವ ತೊಂದರೆಯೂ ಅವರ ಕಿವಿಯ ಮೇಲೆ ಹಾಕಲಾದವು. ಒಟ್ಟಿಗೆ ಈ ವಿಷಯವಾಗಿ ಸುಮಾರು ಅರ್ಧಗಂಟೆಯ ವರೆಗೂ ಮಾತು ಕತೆಗಳು ನಡೆದವು. ಮಹಾತ್ಮರು ತಮ್ಮ ಮಾತಿನ ಓಟದಲ್ಲಿ, "ಕರ್ನಾಟಕದಲ್ಲಿ ಈ ಬಗೆಯ ಆಶ್ರಮಗಳನ್ನು ಪರಿಪೋಷಣೆ ಮಾಡುವ ಕಾರ್ಯ ನಿಜವಾಗಿಯೂ ಸ್ತುತ್ಯ" ಎಂಬುದಾಗಿ ನುಡಿದರು. ಕೊನೆಯಲ್ಲಿ ಅವರು ಈ ಬಗೆಯ ಆಶ್ರಮಗಳಿಗೂ ಅವುಗಳ ಪ್ರಚಾರ ಕಾರ್ಯಕರ್ತರಿಗೂ ಶುಭಾಶೀರ್ವಾದಗಳನ್ನು ಮಾಡಿದರು.

* * *

*ಸಂಯುಕ್ತ ಕರ್ನಾಟಕ ೧೦-೧-೧೯೩೪ (ಪುಟ-೨)*

## ಮಹಾತ್ಮರಿಗೆ ವಿದ್ಯಾರ್ಥಿಗಳ ಕಾಣಿಕೆ

**ಹರಿಜನ ನಿಧಿಗೆ ೩೯೨೪ ರೂಪಾಯಿ**

ಹರಿಜನ ಪ್ರಚಾರವನ್ನು ಕೈಗೊಂಡ ಮಹಾತ್ಮಾ ಗಾಂಧಿಯವರು ಮೈಸೂರಿಗೆ ಹೋದಾಗ ರಾಜಧಾನಿಯ ವಿದ್ಯಾರ್ಥಿಗಳು ತಾ. ೬-೧-೧೯೩೪ರ ದಿನ ೩೯೨೪ ರೂ.ಗಳ ನಿಧಿಯನ್ನು ಅವರಿಗೆ ಅರ್ಪಿಸಿದರು. ತಾ. ೭-೧-೧೯೩೪ರ ದಿನ ಮುನಿಸಿಪಾಲಟಿಯ ಮಾನಪತ್ರದ ಕಾರ್ಯಕ್ರಮವಾದನಂತರ ಮಹಾತ್ಮಾ ಗಾಂಧಿಯವರು ಕಲಾಮಂದಿರದಲ್ಲಿ ಖಾದಿ ವಸ್ತ್ರಾಲಯದವರು ಏರ್ಪಡಿಸಿದ ಖಾದಿ ಪ್ರದರ್ಶನಕ್ಕೆ ಹೋಗುವವರಿದ್ದರು.

* * *

*ಸಂಯುಕ್ತ ಕರ್ನಾಟಕ ದಿನಪತ್ರಿಕೆ (೧೩-೫-೧೯೩೮)*

## ಗಾಂಧೀ ಸೇವಾಸಂಘದ ಸಮ್ಮೇಲನ, ಡೇಲಾಂಗ್ – ೧೯೩೮

ರಾಷ್ಟ್ರಧ್ವಜ ಸಮಸ್ಯೆಯಲ್ಲಿಯೇ ಶಕ್ತಿಸರ್ವವನ್ನು ಸೂರೆ ಮಾಡಬೇಡಿರಿ
ಹೊಣೆಗಾರ ರಾಜ್ಯವನ್ನು ಪಡೆಯುವುದೇ ಮುಖ್ಯ ಗುರಿಯಾಗಿರಲಿ

## ಮೈಸೂರು ಪ್ರಜೆಗಳಿಗೆ ಮಹಾತ್ಮರ ಉಪದೇಶ

### ಡೆಲಾಂಗದಲ್ಲಿ ಮೈಸೂರು ಪ್ರತಿನಿಧಿಗಳ ಕೂಡ ಮಹಾತ್ಮರ ಸಂಭಾಷಣೆ

(ಅಸೋಸಿಯೇಟೆಡ್ ಪ್ರೆಸ್)

ಬೆಂಗಳೂರು, ತಾ॥ ೧೭-೫-೧೯೩೮

ಮೈಸೂರು ಸಂಸ್ಥಾನ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಾದ ಟಿ.ಸಿದ್ಧಲಿಂಗಯ್ಯನವರು ಮತ್ತು ಎ.ಐ.ಸಿ.ಸಿ. ಸದಸ್ಯರಾದ ಭೂಪಾಲಂ ಚಂದ್ರಶೇಖರ ಶೆಟ್ಟಿಯವರು ಮಾರ್ಚ ೨೬ನೇ ತಾರೀಖಿನ ದಿವಸ ಡೆಲಾಂಗದಲ್ಲಿ ಮಹಾತ್ಮಾ ಗಾಂಧಿಯವರನ್ನು ಭೆಟ್ಟಿಯಾಗಿ ಮೈಸೂರಿನ ಸಮಸ್ಯೆಯ ಬಗ್ಗೆ ವಿಚಾರ ವಿನಿಮಯ ಮಾಡಿದರಷ್ಟೇ. ಆ ಸಂಭಾಷಣೆಯಲ್ಲಿ ಏನೇನು ನಡೆಯಿತೆಂಬುದರ ಸಾರವನ್ನು ಇದೀಗ ಅಸೋಸಿಯೇಟೆಡ್ ಪ್ರೆಸ್ಸಿನವರು ಪ್ರಸಿದ್ಧಿಸುತ್ತಾರೆ. ಈ ಸಂಭಾಷಣೆಯನ್ನು ಪ್ರಸಿದ್ಧಿಸಲು ಮಹಾತ್ಮಾ ಗಾಂಧೀ ಹಾಗೂ ವಲ್ಲಭಭಾಯಿ ಪಟೇಲರ ಅನುಮತಿ ದೊರೆತಿದೆ.

ಮೈಸೂರಿನ ರಾಜಕೀಯ ಪರಿಸ್ಥಿತಿಯನ್ನೆಲ್ಲ ವಿಶೇಷತಃ ಮೈಸೂರು ಸಂಸ್ಥಾನದಲ್ಲಿ ಪ್ರಜೆಗಳಿಗೆ ಹೊಸ ಸುಧಾರಣೆಯನ್ನು ಕೊಡುವದರ ಸಂಬಂಧವಾಗಿ ಸರಕಾರದವರು ನೇಮಿಸಿದ ಸುಧಾರಣಾ ಕಮಿಟಿ ಮುಂತಾದ್ದರ ಬಗ್ಗೆ ಸಿದ್ಧಲಿಂಗಯ್ಯನವರು ಮಹಾತ್ಮಾ ಗಾಂಧಿಯವರಿಗೆ ನಿವೇದಿಸಿ ಈ ಸಂದರ್ಭದಲ್ಲಿ ತಮಗೆ ಸಲಹೆ ಕೊಡಲು ಕೇಳಿಕೊಂಡರು. ಮೈಸೂರು ಸಂಸ್ಥಾನಕ್ಕೆ ಹೊಣೆಗಾರ ರಾಜ್ಯಪದ್ಧತಿಯನ್ನು ಕೊಡುವದರ ಸಂಬಂಧವಾಗಿ ಚರ್ಚೆ ಮಾಡಲು ಕಮಿಟಿಯವರಿಗೆ ಅಡ್ಡಿಯಿಲ್ಲವೆಂಬದಾಗಿ ಲಿಖಿತ ಮೂಲಕ ಹೇಳಬೇಕೆಂದು ಮಹಾತ್ಮಾ ಗಾಂಧೀಜಿಯವರು ಹೀಗೆ ಹೇಳಿದರು: "ಇಂಥ ಸಂದರ್ಭಗಳಲ್ಲಿ ವೈಯಕ್ತಿಕ ಆಶ್ವಾಸನೆಗಳು ಸಾಕಾಗುವುದಿಲ್ಲವೆಂದು ದಿವಾನರಿಗೆ ನೀವು ಸ್ಪಷ್ಟವಾಗಿ ಹೇಳಬೇಕು. ಅವರು ಗವರ್ನರರಂಥ ಉಚ್ಚಪದವಿಗೇರಬಹುದು. ಮುಂದೆ ಅವರ ಸ್ಥಳಕ್ಕೆ ಬರುವವನು ಬಾಯಿಂದ ಹೇಳಿದ ಆಶ್ವಾಸನಗಳನ್ನು ಪಾಲಿಸಲು ಬದ್ಧನಾಗಲಿಕ್ಕಿಲ್ಲ"

ಸರಕಾರದವರು ಮೈಸೂರು ಕಾಂಗ್ರೆಸ್ಸಿಗೆ ಮನ್ನಣೆ ಕೊಡಬಲ್ಲರು ಮತ್ತು ಪರಸ್ಪರ ವಿನಿಮಯದಿಂದ ಸುಧಾರಣಾ ಸಮಿತಿಗೆ ಕಾಂಗ್ರೆಸ್ ಪ್ರತಿನಿಧಿಗಳನ್ನಾರಿಸಬಹುದೆಂಬ ಮಹಾತ್ಮರ ಅಭಿಪ್ರಾಯ. ಆದರೆ ಮೈಸೂರು ಕಾಂಗ್ರೆಸ್ಸಿನವರು ಒಮ್ಮೆಲೇ ಹೋರಾಟವನ್ನೇ ಹೂಡದೆ ಜನತೆಯನ್ನು ಸುಶಿಕ್ಷಿತ ಮಾಡಬೇಕು. ಚುನಾವಣೆಯಲ್ಲಿ ವಿಜಯ ಸಂಪಾದಿಸಿದ ಮಾತ್ರಕ್ಕೆ ಜನತೆಯ ಬೆಂಬಲವಿದೆಯೆಂದು ಹೇಳಲಿಕ್ಕೆ ಬರಲಾರದು. ಹರಿಪುರ ಕಾಂಗ್ರೆಸ್ಸಿನಲ್ಲಿ ಸೇರಿದ

ಲಕ್ಷಾವಧಿ ಜನಸಮೂಹವು ಗುಂಡಿನ ಬಾಯಿಗೆ ಧೈರ್ಯವಾಗಿ ನಿಲ್ಲಲಾರದು. ಸುಧಾರಣಾ ಸಮಿತಿಯಲ್ಲಿ ಯೋಗ್ಯ ಜನರಿದ್ದರೆ ಅವರ ಕೂಡ ಸಹಕಾರ ಮಾಡಬಹುದು. ಆದರೆ ಆ ಸಮಿತಿಗೆ ಬಹಿಷ್ಕಾರ ಹಾಕದೆ ಸರಕಾರದ ಕೂಡ ಒಂದು ಬಗೆಯ ಸಂಧಾನಕ್ಕೆ ಬರಬೇಕು.

ಸುಧಾರಣಾ ಸಮಿತಿಯಲ್ಲಿ ಕಾರ್ಯಮಾಡಲು ನಾಲ್ವರು ಕಾಂಗ್ರೆಸ್ಸದ ಸದಸ್ಯರಿಗೆ ಸರಕಾರವನ್ನು ಜಿನ್ನಪಿಸಿದ್ದು ನಾವು ಕಮಿಟಿಯ ಕೆಲಸ ಮಾಡಬಹುದೋ ಹೇಗೆಂಬದಾಗಿ ಭೂಪಾಲಂನವರು ಮಹಾತ್ಮರಿಗೆ ಕೇಳಿದರು. ಆಯಾ ಸದಸ್ಯರು ವೈಯಕ್ತಿಕ ರೀತಿಯಿಂದ ಕಮಿಟಿಯ ಕೆಲಸ ಮಾಡಬಾರದು; ಆದರೆ ಸಂಸ್ಥೆಯ ಪ್ರತಿನಿಧಿಗಳೆಂದು ಆ ಸಂಸ್ಥೆಯ ಒಪ್ಪಿಗೆಯಿಂದಲೇ ಸಮಿತಿಯ ಕೂಡ ಸಹಕರಿಸಬೇಕೆಂದು ಮಹಾತ್ಮರು ಹೇಳಿದರು.

ಮೈಸೂರು ಕಾಂಗ್ರೆಸ್ ಎಂದು ಹೆಸರಿಟ್ಟುಕೊಳ್ಳಲಿಕೆ ನನ್ನದೇನೂ ಆಕ್ಷೇಪವಿಲ್ಲೆಂದು ಮಹಾತ್ಮಾ ಗಾಂಧಿಯವರು ಹೇಳಿದರು. ಆದರೆ ರಾಷ್ಟ್ರೀಯ ಮಹಾಸಭೆಯ ಸದಸ್ಯರಿದ್ದವರು ಮಾತ್ರ ಮೈಸೂರು ಕಾಂಗ್ರೆಸ್ಸದ ಸದಸ್ಯರಾಗಬಲ್ಲರೆಂಬ ನಿಯಮಕ್ಕೆ ಅವರು ಆಕ್ಷೇಪ ತೆಗೆದುಕೊಂಡರು. ಏಕೆಂದರೆ ಹೀಗೆ ಮಾಡುವದರಿಂದ ಕಾಂಗ್ರೆಸ್ ಸಂಸ್ಥಾನದ ರಾಜಕಾರಣದಲ್ಲಿ ಭಾಗವಹಿಸಬೇಕಾಗುವದು. ಇದು ನನಗೆ ಬೇಕಿಲ್ಲೆಂದು ಮಹಾತ್ಮರು ಅಭಿಪ್ರಾಯಪಟ್ಟರು.

* * *

*ಸಂಯುಕ್ತ ಕರ್ನಾಟಕ ದಿನಪತ್ರಿಕೆ ೧೭-೫-೧೯೩೮*

## ರಾಷ್ಟ್ರಧ್ವಜ ಸಮಸ್ಯೆ

ಅನಂತರ ಸಿದ್ಧಲಿಂಗಯ್ಯನವರು ರಾಷ್ಟ್ರಧ್ವಜ ಸಮಸ್ಯೆಯ ಬಗ್ಗೆ ಮಹಾತ್ಮರ ಅಭಿಪ್ರಾಯ ಕೇಳಲು ಅವರು ಹೀಗೆ ಹೇಳಿದರು. "ಹಿಂದೀ ರಾಷ್ಟ್ರೀಯ ಮಹಾಸಭೆಯ ಸಹಾಯ ಸಹಾನುಭೂತಿಗಳಿಲ್ಲದೆ ರಾಷ್ಟ್ರಧ್ವಜದ ಮಾನವನ್ನು ರೂಪಿಸುವುದು ನಿಮಗೆ ಶಕ್ಯವಿಲ್ಲದ್ದರಿಂದ ನೀವು ರಾಷ್ಟ್ರಧ್ವಜವನ್ನು ಉಪಯೋಗಿಸಬಾರದೆಂದು ನನ್ನ ವೈಯಕ್ತಿಕ ಮತ. ಹೆಚ್ಚು ಮಹತ್ವದ ಸಮಸ್ಯೆಗಳ ಬಗ್ಗೆ ಎಲ್ಲಾ ಶಕ್ತಿಯನ್ನು ಕೇಂದ್ರೀಕರಿಸುವದು ಅವಶ್ಯವಿದ್ದಾಗ ರಾಷ್ಟ್ರಧ್ವಜ ಪ್ರಶ್ನೆಯಲ್ಲಿಯೇ ಮೈಸೂರಿನವರು ತಮ್ಮ ಉತ್ಸಾಹ ಶಕ್ತಿಯನ್ನು ವ್ಯಯ ಮಾಡುವದು ನನಗೆ ಸರಿದೋರುವುದಿಲ್ಲ. ಮೈಸೂರಿನಲ್ಲಿ ರಾಷ್ಟ್ರಧ್ವಜದ ಮರ್ಯಾದೆಯನ್ನು ರಕ್ಷಿಸುವ ಹೊಣೆಯನ್ನು ನಾನು ಹೊರುವೆವೆಂದು ಟಿ.ಸಿದ್ಧಲಿಂಗಯ್ಯನವರು ಹೇಳಿದ್ದಕ್ಕೆ ಇದನ್ನು ಅಖಿಲ ಭಾರತದ ಸಮಸ್ಯೆ ಮಾಡಬೇಡಿರೆಂದು ಎಚ್ಚರಿಸಿದರು.

ಸಂಯುಕ್ತ ರಾಜ್ಯಘಟನೆ ಮುಂತಾದ ವಿಷಯಗಳ ಬಗ್ಗೆ ವಿಚಾರಮಾಡಲು ನಿಯಮಿಸಿದ ಸಮಿತಿಯಲ್ಲಿ ಕಾಂಗ್ರೆಸ್ಸಿನವರು ಭಾಗವಹಿಸಬಹುದೇ ಎಂಬುದಾಗಿ ಕೇಳಿದ್ದಕ್ಕೆ ಮಹಾತ್ಮರು "ನಾಗರಿಕ ಹಕ್ಕು ಬಾಧ್ಯತೆ ಮತ್ತು ಹೊಣೆಗಾರ ರಾಜ್ಯಪದ್ಧತಿಯನ್ನು ಕೊಡುವವರೆಗೆ ಸಂಯುಕ್ತ

ರಾಜ್ಯ ಘಟನೆಗೆ ನಾವು ಸಂಪೂರ್ಣವಾಗಿ ವಿರುದ್ಧ ಇರುವೆವೆಂಬುದಾಗಿ ಸರಕಾರಕ್ಕೆ ಸ್ಪಷ್ಟವಾಗಿ ಹೇಳಬೇಕೆಂದು" ಅಭಿಪ್ರಾಯಪಟ್ಟರು.

ಮಹಾತ್ಮರು ಹಾಗೇ ತಮ್ಮ ಭಾಷಣವನ್ನು ಮುಂದುರಿಸುತ್ತಾ ಹೀಗೆ ಹೇಳಿದರು. "ನಾನು ಕಾಲಿಡಕೂಡದೆಂದು ಹೇಳುವ ಹಲವು ಸಂಸ್ಥಾನಗಳು ಹಿಂದೂಸ್ತಾನದಲ್ಲಿರುವುವು. ಮಹಾರಾಜರು ಮತ್ತು ದಿವಾನರು ದಯವಿಟ್ಟು ವಿಚಾರ ವಿನಿಮಯ ಮಾಡುವ ಸ್ವಾತಂತ್ರ್ಯವನ್ನು ನನಗೆ ಕೊಟ್ಟಿದ್ದರು. ಅನೇಕ ಸಂಸ್ಥಾನಗಳಲ್ಲಿ "ಕಾಂಗ್ರೆಸ್" ಎಂಬ ಶಬ್ದಕ್ಕೆ ಪ್ರತಿಬಂಧವಿದೆ. ಆದುದರಿಂದ ಮೈಸೂರಿನಲ್ಲಿ ನೀವು ಒಳ್ಳೇ ಜಾಣತನದಿಂದ ಕಾರ್ಯಮಾಡಬೇಕು."

"ಈ ಸಂಭಾಷಣೆಗಳಲ್ಲಿ ಉದ್ಧೃತವಾದ ಹಲವು ವಿಷಯಗಳ ಬಗ್ಗೆ ದಿವಾನರಾದ ಸರ್.ಮಿರ್ಜಾ ಇಸ್ಮಾಯಿಲರ ಕೂಡ ಪತ್ರ ವ್ಯವಹಾರ ಮಾಡಲು ನಿಮ್ಮದೇನೂ ಅಡ್ಡಿಯಿಲ್ಲವಷ್ಟೇ" ಎಂದು ಮಹಾತ್ಮರು ಭೂಪಾಲಂನವರಿಗೆ ಹಾಗೂ ಸಿದ್ಧಲಿಂಗಯ್ಯನವರಿಗೆ ಕೇಳಿದರು. ಅದಕ್ಕವರು ನಮ್ಮದೇನೂ ಆಕ್ಷೇಪವಿಲ್ಲವೆಂದು ತಿಳಿಸಿದರು.

* * *

*ಸಂಯುಕ್ತ ಕರ್ನಾಟಕ (೧೪-೭-೧೯೪೦)*

## "ಮೈಸೂರು ವಕೀಲರಿಗೆ ಮಹಾತ್ಮರ ಸಲಹೆ"
## ಹೈಕೋರ್ಟ್ ತೀರ್ಪಿನ ಬಗ್ಗೆ ಅಭಿಪ್ರಾಯ
## "ನ್ಯಾಯಾಧೀಶರು ಮೈಮರೆತು ತೀರ್ಪು ಕೊಟ್ಟಿದ್ದಾರೆ"

*ವರ್ಧಾ ೧೩-೭-೧೯೪೦*

ಇಂದಿನ "ಹರಿಜನ" ಪತ್ರಿಕೆಯಲ್ಲಿ ಮ.ಗಾಂಧಿಯವರು "ಮೈಸೂರು ವಕೀಲರು" ಎಂಬ ಹೆಸರಿನ ಕೆಳಗೆ ಈ ರೀತಿ ಬರೆದಿದ್ದಾರೆ:

"ಮೈಸೂರು ಸತ್ಯಾಗ್ರಹ ಚಳವಳಿಯಲ್ಲಿ ಭಾಗ ತೆಗೆದುಕೊಂಡಿದ್ದ ಹಲವು ವಕೀಲರ ಸನದುಗಳನ್ನು ಮೈಸೂರು ಚೀಫ್ ಕೋರ್ಟಿನವರು ರದ್ದುಮಾಡಿ ಅವರನ್ನು ವಕೀಲಿ ವೃತ್ತಿಯಿಂದ ಹೊರಗೆ ಹಾಕಿರುತ್ತಾರೆ. ಹೀಗೆ ಹೊರಗೆ ಹಾಕಲ್ಪಟ್ಟವರಲ್ಲಿ ಎಚ್.ಸಿ.ದಾಸಪ್ಪನವರು ಕೊನೆಯವರು. ಮೈಸೂರಿನ ಜನರ ಆದರ ವಿಶ್ವಾಸಗಳಿಗೆ ಪಾತ್ರರಾದ ಮತ್ತು ಸುಮಾರು ೨೦ ವರ್ಷಗಳಿಂದ ವಕೀಲಿ ವೃತ್ತಿಯಲ್ಲಿದ್ದ ಇವರನ್ನು ಹೊರಗೆ ಹಾಕಿದ್ದು ಪ್ರಕ್ಷುಬ್ಧಕಾರಕವಾಗಿದೆಯೆಂಬುದು ನಿಜ. ಸಾಕಷ್ಟು ಆಧಾರಗಳಿಲ್ಲದೆ ಅಥವಾ ರಾಜಕೀಯ ಕಾರಣಗಳಿಂದ ಎಷ್ಟೋ ಜನ ವಕೀಲರನ್ನು ಹೊರಗೆ ಹಾಕಿದ್ದು ನನಗೆ ಗೊತ್ತಿದೆ. ಆದರೆ ದಾಸಪ್ಪನವರ ಮೇಲಿನ ಖಟ್ಲೆಯನ್ನು ಕುರಿತು ಮುಖ್ಯ ನ್ಯಾಯಾಧೀಶರು ಕೊಟ್ಟ ತೀರ್ಪನ್ನು (ಹಿಂದೂ ಪತ್ರಿಕೆಯಲ್ಲಿ ವರದಿಯಾಗಿರುವುದನ್ನು) ಓದಿ ನನಗೆ ತುಂಬಾ ದುಃಖವಾಯಿತು.

"ಸಂಸ್ಥಾನದ ಒಂದು ಭಾಗದಲ್ಲಿ ಕೂಡುವ ಸಭೆಯಲ್ಲಿ ಭಾಷಣ ಮಾಡಬಾರದೆಂದು

ಮ್ಯಾಜಿಸ್ಟ್ರೇಟರು ಹೊರಡಿಸಿದ ಆಜ್ಞೆಯನ್ನು ಶ್ರೀ ದಾಸಪ್ಪನವರು ದಿಟ್ಟತನದಿಂದ ಉಲ್ಲಂಘಿಸಿದರು ಮತ್ತು ಅಷ್ಟೇ ದಿಟ್ಟತನದಿಂದ, ನನ್ನ ಸಲಹೆಯ ಪ್ರಕಾರ ನಾಗೇಶ್ವರ ಅಯ್ಯರರ ವಿಚಾರಣೆಯನ್ನು ಬಹಿಷ್ಕರಿಸಿದರು. ಆ ಮಹಾಪರಾಧಗಳ ಸಲುವಾಗಿ ಅವರನ್ನು ಕಡೆಯತನಕ ವಕೀಲಿ ವೃತ್ತಿಯಿಂದ ಹೊರಗೆ ಹಾಕಲಾಗಿದೆ. ನ್ಯಾಯಾಧೀಶರ ತೀರ್ಪಿನಲ್ಲಿ ಏನಾದರೂ ಜೆಲೆಯಿದ್ದರೆ, ಶ್ರೀ ದಾಸಪ್ಪನವರು ಕಂಗಾಲ ಸ್ಥಿತಿಗೆ ಮುಟ್ಟುವರು. ಶ್ರೀ ದಾಸಪ್ಪನವರು ಶೀಲವಿಲ್ಲದ ಮನುಷ್ಯರೆಂದೂ ಅವರನ್ನು ಸಮಾಜದಿಂದ ದೂರವಿಡಬೇಕೆಂದೂ ನ್ಯಾಯಾಧೀಶರು ಅಭಿಪ್ರಾಯಪಟ್ಟಿರುವರು.

"ಶ್ರೀ ದಾಸಪ್ಪನವರು ನನಗೆ ಅಪರಿಚಿತರಲ್ಲ, ಅವರನ್ನು ನಾನು ಚೆನ್ನಾಗಿ ಬಲ್ಲೆ. ಅವರು ಶ್ರೀಮಂತರೂ ಸದ್ಗುಣಿಗಳೂ ಪ್ರಾಮಾಣಿಕರೂ ಎಂದು ನಾನು ತಿಳಿದಿದ್ದೇನೆ. ಅಹಿಂಸಾ ತತ್ವವನ್ನು ಅಕ್ಷರಶಃ ಪಾಲಿಸಲು ಅವರು ಶಕ್ತಿಮೀರಿ ಪ್ರಯತ್ನಿಸುತ್ತಿದ್ದಾರೆ. ಬ್ರಿಟಿಷ್ ಹಿಂದೂಸ್ಥಾನದಲ್ಲಿ ಅನೇಕ ದೇಶಭಕ್ತ ಜನರು ಏನು ಮಾಡಿರುವರೋ ಅದನ್ನೇ ಅವರು ಮಾಡಿದ್ದಾರೆ.

"ಇತ್ತೀಚೆಗೆ ಕೆಲವು ನ್ಯಾಯಾಧೀಶರು ತಮ್ಮ ವರ್ತನೆಯ ಬಗ್ಗೆ ಲಕ್ಷ ತೆಗೆದುಕೊಳ್ಳುವುದೇ ಇಲ್ಲ. ಅಡ್ವೋಕೇಟ್ ಭುಲಾಭಾಯಿ ಅವರು ಮುಂಬಯಿ ಹೈಕೋರ್ಟಿನ ಅಡ್ವೋಕೇಟ್ ಜನರಲ್‌ರಾಗಿದ್ದರು. ಅವರು ಕಾಯಿದೆಭಂಗ ಮಾಡಿದ್ದಾರೆ. ಅದರಂತೆ ಅಡ್ವೋಕೇಟ್ ಮುನಶಿಯವರು, ಸಿ.ರಾಜಗೋಪಾಲಾಚಾರ್ಯರು, ಕಾಯಿದೆಗಳನ್ನು ಮುರಿದಿದ್ದಾರೆ. ಅವರನ್ನು ಯಾರೂ ವಕೀಲಿ ವೃತ್ತಿಯಿಂದ ಹೊರಗೆ ಹಾಕಲಿಲ್ಲ. ಅಷ್ಟೇಕೆ ಅವರಲ್ಲಿ ಇಬ್ಬರು ತಮ್ಮ ತಮ್ಮ ಪ್ರಾಂತಗಳಲ್ಲಿ ಮಂತ್ರಿಗಳಾದರು. ಇನ್ನೂ ಎಷ್ಟೋ ಸಾರ್ವಜನಿಕ ವಿಚಾರಣೆಗಳನ್ನು ಜನರು ನಿರ್ಭಯವಾಗಿ ಬಹಿಷ್ಕರಿಸುತ್ತಾರೆ. ಆದರೆ ಹಾಗೆ ಬಹಿಷ್ಕರಿಸಿದವರ ಮರ್ಯಾದೆ ಮಾತ್ರ ಕಡಿಮೆಯಾಗಲಿಲ್ಲ. ಮರ್ಯಾದೆ ಕಡಿಮೆ ಮಾಡಲು ಯಾರೂ ಪ್ರಯತ್ನಿಸಲಿಲ್ಲ. ಆದರೆ ಈ ಮೈಸೂರಿನ ತೀರ್ಪಿನ ವಿಚಾರವೇ ಬೇರೆಯಾಗಿದೆ. ಈ ತೀರ್ಪನ್ನು ಕೊಡುವಾಗ ನ್ಯಾಯಾಧೀಶರು ತಮ್ಮ ಮೈಮರೆತಿದ್ದರೆಂದು ನನ್ನ ಅಭಿಪ್ರಾಯ. ಆದರೆ ಈ ತೀರ್ಪಿನಿಂದ ಶ್ರೀ ದಾಸಪ್ಪನವರಿಗೆ ಮಾತ್ರ ಏನೂ ನಷ್ಟವಾಗಿಲ್ಲ. ಅವರ ಕೀರ್ತಿಯು ಮತ್ತಷ್ಟು ಹೆಚ್ಚುವದು –ಅವರಲ್ಲಿ ಜನರಿಗಿದ್ದ ಆದರ ವಿಶ್ವಾಸಗಳು ಮತ್ತಷ್ಟು ಹೆಚ್ಚಾದವು. ಈ ತೀರ್ಪಿನಿಂದ ಪಕ್ಷಪಾತದಿಂದ ತುಂಬಿದ ಮೈಸೂರಿನ ನ್ಯಾಯಾಧೀಶರಿಗೇ ಹಾನಿಯಾಗಿದೆ.

**ನ್ಯಾಯಾಧೀಶರಿಗೂ ಮೇಲಿನವರಿದ್ದಾರೆ:**

ಇಂತಹ ನ್ಯಾಯಗಳು ಇದುವರೆಗೆ ಎಷ್ಟೋ ಆಗಿದೆ. ಕೇವಲ ಪಕ್ಷಾಂತರ ಮತ್ತೂ ದ್ವೇಷ ಬುದ್ಧಿಯಿಂದ ಮೈಮರೆತು ನಿರಪರಾಧಿಯೊಬ್ಬನನ್ನು ಶಿಕ್ಷಿಸಿದ ದರ್ಜಾನದ ಒಬ್ಬ ಮ್ಯಾಜಿಸ್ಟ್ರೇಟನ ತೀರ್ಪನ್ನು ಸುಪ್ರೀಮ್ ಕೋರ್ಟ್ ರದ್ದುಮಾಡಿದ್ದು ನನಗೆ ಗೊತ್ತಿದೆ. ಕೊನೆಗೆ ಆ ಮ್ಯಾಜಿಸ್ಟ್ರೇಟನನ್ನೇ ಕೆಲಸದಿಂದ ತೆಗೆಯಲಾಯಿತು. ಪಂಜಾಬಿನ ದಂಡಿನ ಕಾಯಿದೆ ಕಾಲದಲ್ಲಿಯೂ ನ್ಯಾಯಾಧೀಶರು ಹೀಗೆ ಮಾಡಿದರು. ಆಗ ಅವರನ್ನು ಕೆಲಸದಿಂದ ತೆಗೆಯಲಿಲ್ಲವೆಂಬುದು ನಿಜ. ಆದರೆ ಸಾಕಷ್ಟು ಆಧಾರಗಳಿಲ್ಲದಿದ್ದರೂ ಶಿಕ್ಷೆ ಕೊಟ್ಟ ಅವರು

ಕೊನೆಗೆ ಅಪಕೀರ್ತಿ ಪಡೆಯಬೇಕಾಯಿತು. ಮೈಸೂರಿನ ತೀರ್ಪು ಪಂಜಾಬಿನ ದಂಡಿನ ಕಾಲದ ತೀರ್ಪಿಗಿಂತಲೂ ಕೆಟ್ಟದಿದೆಯೆಂದು ನಾನು ತಿಳಿಯುತ್ತೇನೆ. ಆಗ ಜನರಲ್ಲಿ ಅಂಜಿಕೆಯಿತ್ತು. ಜನರು ಕೊಲೆ ಮೊದಲಾದವನ್ನು ಮಾಡಿದ್ದರು. ಎಷ್ಟೋ ಪ್ರಮುಖ ಜನರನ್ನು ದಂಡಿನ ಕಾಯಿದೆಯ ನ್ಯಾಯಸ್ಥಾನಗಳಲಿ ಗುರಿಮಾಡಲಾಗಿತ್ತು. ಮೈಸೂರಿನಲ್ಲಿ ಅಂತಹದೇನೂ ಆಗಿಲ್ಲ. ಆದರೂ ಮೈಸೂರಿನ ಮುಖ್ಯ ನ್ಯಾಯಾಧೀಶರು ಒಬ್ಬ ವ್ಯಕ್ತಿಯ ಗೌರವದ ಮೇಲೆ ಸ್ಥಾನ ಮಾನಗಳ ಮೇಲೆ ಹಲ್ಲೆ ಮಾಡಿದ್ದಾರೆ ; ನ್ಯಾಯಸ್ಥಾನ ವಿಚಾರಗೆಟ್ಟು ಮಾಡಿದ ಆರೋಪಗಳಿಗೆ ಯೋಗ್ಯ ಉತ್ತರ ಕೊಡಲು ಅಸಮರ್ಥನಾದ ವ್ಯಕ್ತಿಯ ಮೇಲೆ ಹರಿಹಾಯ್ದಿದ್ದಾರೆ. ಆದರೆ ನ್ಯಾಯಸ್ಥಾನದ ಕೃತಿಗಳನ್ನು ವಿಚಾರಿಸಲು, ವಿಮರ್ಶಿಸಲು ಸಮರ್ಥರಾದ ಮತ್ತು ವ್ಯಕ್ತಿಗಿಂತ ಹೆಚ್ಚಾಗಿ ಗುಣಕ್ಕೆ ಮಹತ್ವ ಕೊಡುವ ಸಾರ್ವಜನಿಕರು ಇರುವರೆಂಬುದನ್ನು, ಮೈಸೂರಿನ ನ್ಯಾಯಾಸ್ಥಾನದ, ಈ ಮಹಾಶಯರಂತೆ, ಕೆಲವು ನ್ಯಾಯಾಧೀಶರು ಆಗಾಗ ಮರೆಯುವದುಂಟು.

ಮೈಸೂರಿನ ಈ ತೀರ್ಪನ್ನು ಕೊಟ್ಟ ನ್ಯಾಯಾಧೀಶರ ಬಗ್ಗೆ ನಿಜವಾಗಿಯೂ ದುಃಖ ಮತ್ತು ಕನಿಕರವಾಗಿದೆ. ಯಾಕೆಂದರೆ ಇಂಥ ತೀರ್ಪನ್ನು ಕೊಟ್ಟದ್ದಕ್ಕಾಗಿ ಮುಂದೆ ಅವರೇ ಪಶ್ಚಾತ್ತಾಪ ಪಡುವರು. ಇನ್ನು ವಕೀಲಿವೃತ್ತಿಯಿಂದ ಹೊರಗೆ ಹಾಕಲ್ಪಟ್ಟ ಶ್ರೀ ದಾಸಪ್ಪ ಮತ್ತು ಅವರ ಸಹೋದ್ಯೋಗಿಗಳನ್ನು ನಾನು ಅಭಿನಂದಿಸುತ್ತೇನೆ. ಈ ಶಿಕ್ಷೆಯಲ್ಲಿಯೇ ಅವರು ಸುಖವನ್ನು ಪಡೆಯಲಿ. ಪಕ್ಷಪಾತದಿಂದ ತುಂಬಿ ತುಳುಕುವ ಮೈಸೂರಿನ ನ್ಯಾಯಾಧೀಶರ ಮುಂದೆ ಹೋಗಬೇಕಾದ ಪ್ರಸಂಗ ತಪ್ಪಿದ್ದು ಒಳ್ಳೆಯದೇ ಆಯಿತು. ಈ ತೀರ್ಪಿನಿಂದ ಅವರಿಗೆ ಬಡತನ ಬಂದರೆ ಅದರಿಂದ ದುಃಖ ಪಡಬೇಕಾದುದೇನೂ ಇಲ್ಲ. ಅನ್ಯಾಯದ ರಾಜ್ಯದಲ್ಲಿ ಶ್ರೀಮಂತಿಕೆಯೇ ಮಹಾಪರಾಧವೆಂದೂ ಬಡತನವು ಸೌಭಾಗ್ಯವೆಂದೂ ಥೋರೋ ಎಂಬುವರು ಹೇಳಿದ್ದಾರೆ. ಸತ್ಯಾಗ್ರಹಿಗಳಿಗೆ ಈ ಮಾತು ಅಕ್ಷರಶಃ ಅನ್ವಯಿಸುತ್ತದೆ. ಈ ವಕೀಲರು ತಮ್ಮ ಜೀವನಕ್ರಮವನ್ನೇ ಈಗ ಬದಲಾಯಿಸಿಕೊಳ್ಳಬಹುದು. ಅವರಿಗೆ ಈಗೊಳ್ಳೆ ಸಂಧಿ ಬಂದಿದೆ. ಇಂದು ನಡೆದಂತಹ ಅನ್ಯಾಯಗಳು ಇನ್ನು ಮುಂದೆ ಮೈಸೂರಿನಲ್ಲಿ ಸಂಭವಿಸದಂತೆ ಅವರು ಪ್ರಯತ್ನಿಸಲಿ. ಇಷ್ಟು ಉಗ್ರವಾದ ಟೀಕೆ ಮಾಡಿರುವದರಿಂದ ನನಗೆ ಸಂತೋಷವೇನೂ ಆಗಿಲ್ಲ. ಆದರೆ ಸತ್ಯದ ನಿಜವಾದ ಸೇವೆ ಮಾಡಬೇಕಾಗಿದ್ದರೆ. ಇಷ್ಟು ಟೀಕೆ ಮಾಡುವದು ಅತ್ಯಂತ ಅವಶ್ಯವಾಗಿತ್ತು.

* * *

# ಗಾಂಧೀಜಿ ಮತ್ತು ಜನರಲ್ ಕಾರಿಯಪ್ಪ

(ಲಾಸ್ಟ್ ಪೇಜ್, ಸಂಪುಟ ೨, ಪುಟ ೫೨೩-೫೨೫ರಿಂದ ಆಯ್ದುದು)

ಭಾರತೀಯ ಸೇನೆಯ ಜನರಲ್ ಕಾರಿಯಪ್ಪನವರು ಇಂಗ್ಲೆಂಡ್‌ನಲ್ಲಿ ನೀಡಿದ ಹೇಳಿಕೆಯೊಂದರಲ್ಲಿ ಸದ್ಯದ ಪರಿಸ್ಥಿತಿಯಲ್ಲಿ ಭಾರತಕ್ಕೆ ಅಹಿಂಸೆಯಿಂದ ಏನೂ ಉಪಯೋಗವಿಲ್ಲವೆಂದೂ, ಬಲಿಷ್ಠ ಸೇನೆಯೊಂದೇ ಭಾರತವನ್ನು ಜಗತ್ತಿನ ಮಹಾರಾಷ್ಟ್ರಗಳಲ್ಲಿ ಒಂದನ್ನಾಗಿ ಮಾಡಬಲ್ಲದೆಂದೂ ನುಡಿದಿದ್ದರು.

ಗಾಂಧೀಜಿ ತಮ್ಮ 'ಹರಿಜನ' ಪತ್ರಿಕೆಯಲ್ಲಿ ಶ್ರೀ ಕಾರಿಯಪ್ಪನವರ ಹೇಳಿಕೆಯನ್ನು ಪ್ರಸ್ತಾಪಿಸಿ ಟೀಕಿಸಿದರು. "ಜನರಲ್ ಕಾರಿಯಪ್ಪನವರಿಗಿಂತಲೂ ಉಚ್ಚ ಕೋಟಿಯ ಜನರಲ್‌ಗಳು ಸಹ, ಅಹಿಂಸೆಯಲ್ಲಿ ಹುದುಗಿರುವ ಮಹಾಶಕ್ತಿಯ ಬಗ್ಗೆ ಮಾತನಾಡಲು ತಮಗೆ ಹಕ್ಕಿಲ್ಲವೆಂದು ಸ್ಪಷ್ಟವಾಗಿಯೂ ವಿನಯ ವಿವೇಕಗಳಿಂದಲೂ ಒಪ್ಪಿಕೊಂಡಿದ್ದಾರೆ. ಅಣುಯುಗದಲ್ಲಿ ಅಮಿಶ್ರಿತ ಪರಿಶುದ್ಧ ಅಹಿಂಸಾ ಶಕ್ತಿಯೊಂದೇ ಹಿಂಸೆಯ ಎಲ್ಲ ತಂತ್ರಗಳನ್ನು ಒಟ್ಟಿಗೆ ಎದುರಿಸಿ ದಿಗ್ಭ್ರಮೆಗೊಳಿಸಬಲ್ಲದೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಯುದ್ಧ ವಿಜ್ಞಾನ ಮತ್ತು ಉದ್ಯಮಗಳು ತಮ್ಮ ಹುಟ್ಟು ನಾಡಿನಲ್ಲಿಯೇ ವಿಷಾದಕರವಾಗಿ ದಿವಾಳಿ ಎದ್ದಿರುವುದನ್ನು ಕಣ್ಣಾರೆ ನೋಡುತ್ತಿದ್ದೇವೆ. ಷೇರುಪೇಟೆಯ ಜೂಜಿನಲ್ಲಿ ದಿವಾಳಿ ಎದ್ದು ಹೋದವನೇ ಆ ಜೂಜನ್ನು ಹಾಡಿ ಹೊಗಳುತ್ತಾನೆಯೇ?"

ಇದನ್ನು ಸೇನೆಯ ಭಾಷೆಯಲ್ಲಿ "ರಾಕೆಟ್" ಎಂದು ಜನರಲ್ಲರೇ ಅನಂತರ ವಿವರಿಸಿದರು. ಆದರೆ ಅವರು ಅದನ್ನು ಕ್ರೀಡಾವೃತ್ತಿಯಿಂದಲೇ ಸ್ವೀಕರಿಸಿದರು. ಭಾರತಕ್ಕೆ ಮರಳಿದ ಮೇಲೆ ತಾವು ಪೂರ್ವವಲಯದ ಸೇನೆಯ ಆಧಿಪತ್ಯವನ್ನು ವಹಿಸುವ ಸಂದರ್ಭದಲ್ಲಿ ಶ್ರೀ ಕಾರಿಯಪ್ಪ ಗಾಂಧೀಜಿಯನ್ನು ಭೇಟಿ ಮಾಡಿದರು. ಇದು ಅವರಿಬ್ಬರ ಪ್ರಥಮ ಭೇಟಿಯಾಗಿತ್ತು. ಅಂದು ಗಾಂಧೀಜಿಗೆ ಮೌನದ ದಿನ. ಅವರು ನೂಲುತ್ತಿದ್ದರು. ಅವರು ಕೊಟ್ಟ ಕುರ್ಚಿಯ ಮೇಲೆ ಕುಳಿತುಕೊಳ್ಳಲು ನಿರಾಕರಿಸಿ ಜನರಲ್ಲರು ವಿನಯದಿಂದ ನೆಲದ ಮೇಲೆ ಕುಳಿತರು.

"ನಾನು ನಿಮ್ಮ ಆಶೀರ್ವಾದ ಪಡೆಯಲು ಬಂದಿದ್ದೇನೆ......" ಎಂದು ಅವರು ಗಾಂಧೀಜಿಗೆ ಹೇಳಿದರು.

ಗಾಂಧೀಜಿ ಒಂದು ತುಂಡು ಕಾಗದಲ್ಲಿ "ಅಹಿಂಸೆಯನ್ನು ಕುರಿತು ಕಳೆದ ತಿಂಗಳ ನಿಮ್ಮ ಲಂಡನ್ ಹೇಳಿಕೆಯ ಮೇಲೆ ನಾನು ನನ್ನ ಪತ್ರಿಕೆಯಲ್ಲಿ ಬರೆದುದನ್ನು ನೋಡಿರುವಿರಲ್ಲವೆ?" ಎಂದು ಬರೆದರು.

ಜನರಲ್ಲರು ನಸುನಗುತ್ತಾ ತಾವು ಅದನ್ನು ನೋಡಿರುವುದಾಗಿ ಹೇಳಿದರು. ಹಿಂದೆಂದೂ ಭೇಟಿಯಾಗದ ತನ್ನಂಥ ವ್ಯಕ್ತಿಯ ವಿಚಾರಗಳನ್ನು ಮಹಾತ್ಮರು ಇಷ್ಟು ಆಸಕ್ತಿಯಿಂದ ಗಮನಿಸಿದುದನ್ನು ಕಂಡು ಅದು ತನಗೆ ಸಂದ ದೊಡ್ಡ ಗೌರವ ಎಂದು ತಿಳಿದೆ ಎಂದರು.

ಮುಖ್ಯ ಚರ್ಚೆಯ ವಿಷಯವನ್ನು ಕುರಿತು ಅವರು "ನಾವು ಸೈನಿಕರು ಬಹು ದೂಷಿತ ಜನ .........ನೀವೂ ಸಹ ನಮ್ಮನ್ನು ತುಂಬ ಹಿಂಸಕ ಜಾತಿ ಎಂದೇ ತಿಳಿದಿದ್ದೀರಿ. ಜಗತ್ತಿನ ಜನಸಮುದಾಯಗಳಲೆಲ್ಲಾ ಯುದ್ಧಗಳನ್ನು ದ್ವೇಷಿಸುವವರು ಯಾರಾದರೂ ಇದ್ದರೆ ಅವರು ಸೈನಿಕರೇ. ಯುದ್ಧದಲ್ಲಿರುವ ಗಂಡಾಂತರಗಳು, ಬೀಭತ್ಸಗಳ ಕಾರಣದಿಂದಲ್ಲ, ಅಂತರರಾಷ್ಟ್ರೀಯ ವಿವಾದಗಳನ್ನು ಬಗೆಹರಿಸುವದರಲ್ಲಿ ಅವು ತೀರ ನಿರರ್ಥಕವೆಂದು ತಿಳಿದು ಅವನ್ನು ದ್ವೇಷಿಸುತ್ತೇವೆ. ಒಂದು ಯುದ್ಧ ಮತ್ತೊಂದಕ್ಕೆ ದಾರಿ ಮಾಡುತ್ತದೆ. ನಮಗೆ ಇತಿಹಾಸವೇ ಈ ವಿಷಯವನ್ನು ಕಲಿಸಿದೆ."

ಅಂತರ್ರಾಷ್ಟ್ರೀಯ ವಿವಾದಗಳನ್ನು ಬಗೆಹರಿಸಲು ಯುದ್ಧಗಳು ಕೇವಲ ನಿರರ್ಥಕವೆಂಬ ಹೇಳಿಕೆಗೆ ಇಂಥ ಉಚ್ಚ ಕಸಬುದಾರ ಸೈನಿಕನಿಂದ ಸಾಕ್ಷ್ಯ-ಪ್ರಮಾಣ ದೊರೆತುದು ಗಾಂಧೀಜಿಗೆ ಸ್ವಾಗತಾರ್ಹ ವಿಸ್ಮಯವನ್ನುಂಟುಮಾಡಿತು. ಯುದ್ಧಗಳಿಗೆ ಒಂದು ಪರಿಣಾಮಕಾರಿಯಾದ ಅಹಿಂಸಕ ವಿಕಲ್ಪವನ್ನು ಶೋಧಿಸುವ ಕಾರ್ಯವೇ ಉಭಯತ್ರರ ನಡುವೆ ಒಪ್ಪಿಗೆಯ ಅಂಶವಾಯಿತು. ಇದು ಗಾಂಧೀಜಿಗೆ ಅರ್ಧ ಯುದ್ಧ ಗೆದ್ದಂತೆಯೇ ಆಗಿತ್ತು.

ಜನರಲ್ಲರು ಮುಂದುವರಿಯುತ್ತಾ "ಪ್ರಜಾತಂತ್ರದಲ್ಲಿ ಸೈನಿಕರು ಯುದ್ಧವನ್ನು ಆರಂಭಿಸುವುದಿಲ್ಲ... ಅಂತರರಾಷ್ಟ್ರೀಯ ವಿವಾದಗಳಿಗೆ ಸಮಾಧಾನಕರ ಪರಿಹಾರ ಸಿಗದಿದ್ದಾಗ ರಾಷ್ಟ್ರೀಯ ಸರ್ಕಾರಗಳು ಯುದ್ಧ ಘೋಷಿಸುತ್ತವೆ.......ನಾವು ಅವರ ಆಜ್ಞೆಗಳನ್ನು ಪಾಲಿಸುತ್ತೇವೆ.....ಎಂದರೆ ಜನತೆಯ ಆಜ್ಞೆಗಳನ್ನು ಪಾಲಿಸಿದಂತಾಯಿತು. ಪ್ರಜಾತಂತ್ರದಲ್ಲಿ ಜನತೆಗೆ ಯುದ್ಧ ಬೇಡವಾದರೆ ಅವರು ನಮ್ಮನ್ನಲ್ಲ, ತಾವು ಅಧಿಕಾರ ಗದ್ದುಗೆಯಲ್ಲಿ ಕೂಡಿಸಿದ ಸರ್ಕಾರಗಳನ್ನು ದೂಷಿಸಬೇಕು....ತಮಗೆ ಬೇಡವಾದ ಸರ್ಕಾರವನ್ನು ಬದಲಿಸಿ ಯುದ್ಧಗಳಿಗೆ ತೊಡಗದ ಬೇರೆ ಒಂದು ಸರ್ಕಾರವನ್ನು ತಂದು ಕೂಡಿಸುವುದು ಜನಕ್ಕೆ ಸುಲಭವಾದ ಕೆಲಸ....ಆದ್ದರಿಂದ ನೋಡಿ, ನಾವು ನಿರ್ದೋಷಿಗಳು. ನಮ್ಮನ್ನೇಕೆ ದೂಷಿಸಬೇಕು?"

ತಾವು ಕೊಟ್ಟ ತುಂಡು ಕಾಗದವನ್ನು ಹಿಂತಿರುಗಿಸುವಂತೆ ಗಾಂಧೀಜಿ ಜನರಲ್ಲಿಗೆ ಕೈಸನ್ನೆ ಮಾಡಿದರು. ಅದರ ಮೇಲೆ "ಪುನಃ ಭೇಟಿಯಾದಾಗ ನಾನು ನಿಮ್ಮೊಡನೆ ಈ ವಿಷಯವನ್ನು ಕುರಿತು ಇನ್ನಷ್ಟು ಚರ್ಚೆ ಮಾಡಲಪೇಕ್ಷಿಸುತ್ತೇನೆ" ಎಂದು ಬರೆದರು.

ಎರಡು ದಿನಗಳ ನಂತರ ಇಬ್ಬರೂ ಭೇಟಿಯಾದರು. "ಅವರು ಹಸನ್ಮುಖಿಯಾಗಿದ್ದರು" ಎಂದು ಜನರಲ್ಲರು ಆ ಸಂದರ್ಭವನ್ನು ನೆನೆದು ಹೇಳುತ್ತಾರೆ.

"ಈ ಬಾರಿ ನಾನು ಸೈನಿಕ ಪೋಷಾಕಿನಲ್ಲಿದ್ದೆ. ನಾನು ಅವರೆದುರಿಗೆ ನಿಂತು ಸೈನಿಕ ವಂದನೆಗಳನ್ನು ಸಲ್ಲಿಸಿದೆ."

ಗಾಂಧೀಜಿ ಅವರ ಕಡೆ ತಿರುಗಿ ನಗುತ್ತಾ "ಹಾ, ನೀವು ಇಂದೂ ನಿಮ್ಮ ಬೂಟುಗಳನ್ನು ಹೊರಗೆ ತೆಗೆದಿಟ್ಟಿದ್ದೀರಿ. ಮೊನ್ನೆಯ ದಿನವೂ ನೀವು ಹಾಗೆ ತೆಗೆದಿಟ್ಟಿದ್ದಿರಿ" ಎಂದರು.

ತುಂಬಾ ಭಕ್ತಿಯಿಂದ "ನಿಮ್ಮಂಥ ದೈವೀಪುರುಷರನ್ನು ಕಾಣಲು ಬಂದಾಗ ನಾನು ಹಾಗೆ ಮಾಡುವುದು ಉಚಿತವೇ" ಎಂದು ಜನರಲ್ಲರು ನುಡಿದರು.

ಅಹಿಂಸೆಯ ಮೇಲಿನ ತಮ್ಮ ಚರ್ಚೆಯನ್ನು ಮುಂದುವರಿಸುತ್ತಾ ಜನರಲ್ಲರು "ನಿಮ್ಮ ತತ್ವಗಳ ಪ್ರತಿಯೊಂದು ಮಾತನ್ನೂ ಸೈನಿಕರಾದ ನಾವು ತಪ್ಪದೆ ಪಾಲಿಸುತ್ತೇವೆ. ಎಂದರೆ: ಪ್ರೇಮ, ಮಾನವತೆಯ ಬಗೆಗೆ ನಿಷ್ಠೆ, ಶಿಸ್ತು, ರಾಷ್ಟ್ರಸೇವೆಯಲ್ಲಿ ನಿಸ್ವಾರ್ಥವೃತ್ತಿ, ಪರಿಶ್ರಮದ ಬಗ್ಗೆ ಗೌರವಭಾವನೆ ಮತ್ತು ಅಹಿಂಸೆ. ನಾವು ಸೈನ್ಯವನ್ನು ಇಡುವುದಾದರೆ ಒಳ್ಳೆಯದನ್ನೇ ಇಡಬೇಕು. ಅವರಿಗೆ ನನ್ನದೇ ಆದ ರೀತಿಯಲ್ಲಿ ನಾನು ಅಹಿಂಸೆಯ ಅಗತ್ಯವನ್ನೂ ಅದರ ಮಹತ್ವವನ್ನೂ ತಿಳಿಸಬಯಸುವೆ. ತಾವು ಉತ್ತಮ ಸೈನಿಕರಾಗಿ ತಯಾರಾಗಬೇಕಾದ ಮುಖ್ಯ ಕರ್ತವ್ಯವನ್ನು ದಕ್ಷತೆಯಿಂದ ಮುಗಿಸಬೇಕಾದ ಹೊಣೆಯನ್ನು ಬದಿಗೊತ್ತಿ ಸೈನಿಕರೆಲ್ಲರಿಗೆ ಯಾವಾಗಲೂ ಅಹಿಂಸೆಯನ್ನೇ ಬೋಧಿಸುವುದರಲ್ಲಿ ತೊಡಗಿದ್ದರೆ ರಾಷ್ಟ್ರದ ಬಗೆಗಿರುವ ನನ್ನ ಹೊಣೆಯನ್ನು ನಾನು ನಿರ್ವಹಿಸಲಾರದವನಾಗುತ್ತೇನೆ. ಆದ್ದರಿಂದ ನಾನು ನಿಮ್ಮನ್ನು ಕೇಳುವುದಿಷ್ಟೆ. ನೀವು ನನಗೆ "ಮಗುವಿಗೆ ಅಗತ್ಯವಾದ ಜ್ಞಾನದ ಮಾರ್ಗದರ್ಶಿಕೆ"ಯನ್ನು ಕೊಡಿರಿ. ನಾನು ಇದನ್ನು ನಮ್ಮ ಸೇನೆಯ ಮುಂದೆ ಹೇಗೆ ಇಡಲಿ? ಎಂದರೆ ದಕ್ಷ ಕಸಬುದಾರ ಸೈನಿಕರಾಗುವಂತೆ ಶಿಕ್ಷಣ ಪಡೆಯಬೇಕಾದ ಅವರ ಹೊಣೆಗಾರಿಕೆಗೆ ಧಕ್ಕೆಯಾಗದಂತೆ ಅವರಲ್ಲಿ ಅಹಿಂಸಾವೃತ್ತಿಯನ್ನು ಹೇಗೆ ತುಂಬಲಿ? ಈ ಕಾರ್ಯದಲ್ಲಿ ನಾನಿನ್ನೂ ಶಿಶು. ನನಗೆ ನಿಮ್ಮ ಮಾರ್ಗದರ್ಶನ ಬೇಕು" ಎಂದರು.

ಗಾಂಧೀಜಿ ನಕ್ಕರು. ಅವರು ನೂಲುತ್ತಲೆ ಇದ್ದರು. ಒಂದು ನಿಮಿಷ ಮೌನವಾಗಿದ್ದರು. ಜನರಲ್ಲರ ಕಡೆ ನೋಡುತ್ತಾ "ಹೌದು,....ನೀವೆಲ್ಲ ಮಕ್ಕಳೇ. ನಾನೂ ಮಗುವೆ. ಆದರೆ ನಾನು ಈ ವಿಷಯದಲ್ಲಿ ನಿಮ್ಮೆಲ್ಲರಿಗಿಂತ ಹೆಚ್ಚು ಚಿಂತನಮಾಡಿರುವುದರಿಂದ ಹಿರಿಯ ಮಗು ಅಷ್ಟೆ. ನಿಮ್ಮ ಆಧಿಪತ್ಯದಲ್ಲಿರುವ ಸೈನ್ಯಕ್ಕೆ ಅಹಿಂಸೆಯನ್ನು ಹೇಗೆ ಬೋಧಿಸಬೇಕೆಂದು ನಿರ್ದಿಷ್ಟವಾದ, ವ್ಯಾವಹಾರಿಕ ರೂಪುರೇಷೆಗಳೊಂದಿಗೆ ತಿಳಿಸಲು ಕೇಳಿದ್ದೀರಿ."

ತಮ್ಮ ಕಣ್ಣುಗಳನ್ನು ಅರ್ಧಮುಚ್ಚಿ, ತಮ್ಮ ಮಾತನ್ನು ಒತ್ತಿ ಹೇಳಲು ಬಲಗೈಯನ್ನೆತ್ತಿ "ಈ ಪ್ರಶ್ನೆಯ ಉತ್ತರಕ್ಕಾಗಿ ನಾನಿನ್ನೂ ಕತ್ತಲಿನಲ್ಲಿ ತಡಕಾಡುತ್ತಿದ್ದೇನೆ. ನಾನು ಅದನ್ನು ಕಂಡುಹಿಡಿದು ನಿಮಗೆ ಕೊಡುವೆ" ಎಂದು ಗಾಂಧೀಜಿ ಹೇಳಿದರು.

ಉಚ್ಚ ಅನುಭವಿಕ ಸೈನಿಕರಾದ ಲಾರ್ಡ್ ವೇವಲ್, ಲಾರ್ಡ್ ಮೌಂಟ್ ಬೇಟನರೂ ಸಹ ಅಹಿಂಸೆಯ ಉಪಯೋಗದಲ್ಲಿ ತಮಗಿರುವ ವಿಶ್ವಾಸವನ್ನು ಹೇಗೆ ವ್ಯಕ್ತಪಡಿಸಿರುವರೆಂಬ

ವಿಷಯವನ್ನು ಅವರು ಪುನಃ ಸ್ಮರಿಸಿ ಹೇಳಿದರು. "ಹಿಂದೂ ಮುಸ್ಲಿಮರ ನಡುವಿನ ದ್ವೇಷವನ್ನು ಪರಿಹರಿಸಲು ನಾವು ಅನುಸರಿಸಿದ ಕಾರ್ಯ ವಿಧಾನಗಳನ್ನು ವೇವಲ್ಲರು ಮೆಚ್ಚಿದರು. "ನಮ್ಮ ಅಹಿಂಸೆ ಮತ್ತು ಶಾಂತವಾದ ಸಿದ್ಧಾಂತಗಳನ್ನು ಜಗತ್ತಿನ ಜನಾಂಗಗಳು ಅರಿಯುವರೆಂದೂ ಮತ್ತು ಅಂತರರಾಷ್ಟ್ರೀಯ ವಿವಾದಗಳನ್ನು ಪರಿಹರಿಸಿಕೊಳ್ಳುವಾಗ ಈ ತತ್ವಗಳನ್ನೇ ಅನುಷ್ಠಾನಕ್ಕೆ ತರುವರೆಂದೂ ಅವರಿಬ್ಬರೂ ಆಶಿಸುತ್ತಾರೆ." ಆದರೆ ಅದೇ ಹೊತ್ತಿಗೆ ಜನರಲ್ ಕಾರಿಯಪ್ಪನವರಂತೆಯೇ ಅವರೂ ಸಹ ಆತ್ಮರಕ್ಷಣೆಗೆ ಸಿದ್ಧರಾಗಿರಬೇಕೆಂದು ಹೇಳಿದ್ದರು.

ಬೀಳ್ಕೊಡುವಾಗ ಗಾಂಧೀಜಿ "ನಾನು ಈ ವಿಷಯದಲ್ಲಿ ಗಂಭೀರವಾಗಿ ಚಿಂತನ ಮಾಡುತ್ತೇನೆ. ಅದನ್ನು ನಿಮಗೆ ಶೀಘ್ರವೇ ತಿಳಿಸುತ್ತೇನೆ. ಒಟ್ಟಿನಲ್ಲಿ, ಈ ಪ್ರಮುಖ ವಿಷಯದಲ್ಲಿ ಇನ್ನಷ್ಟು ಚರ್ಚಿಸಲು ಅನುಕೂಲವಾಗುವಂತೆ ನಾನು ನಿಮ್ಮನ್ನು ಪದೇ ಪದೇ ಭೇಟಿ ಮಾಡಬೇಕೆನ್ನುತ್ತೇನೆ....ಸೇನೆಯಲ್ಲಿರುವ ಶಿಸ್ತನ್ನು ಮತ್ತು ಸ್ವಚ್ಛತೆ ಆರೋಗ್ಯಕ್ಕೆ ನೀವು ಕೊಡುವ ಪ್ರಾಧಾನ್ಯವನ್ನು ನಾನು ಅತ್ಯಂತ ಹೆಚ್ಚು ಪ್ರಶಂಸಿಸಿದ್ದೇನೆ. ಜನತೆಯನ್ನು ಕುರಿತು ಮಾತನಾಡುವಾಗ ಸೇನೆಯಲ್ಲಿರುವ ಈ ಗುಣಗಳನ್ನು ಅನುಸರಿಸುವಂತೆ ಅವರಿಗೆ ಹೇಳುವೆ" ಎಂದರು.

ಜನರಲ್ಲರು ೧೯೪೮ನೇ ಜನವರಿ ೧೮ನೇ ತಾರೀಖು ಗಾಂಧೀಜಿಯನ್ನು ಕಟ್ಟಕಡೆಯದಾಗಿ ಭೇಟಿಯಾದರು. ಅವರು ಪಶ್ಚಿಮ ವಲಯದ ಸೇನೆಯ ಆಧಿಪತ್ಯವನ್ನು ವಹಿಸಿಕೊಳ್ಳಲು ದೆಹಲಿಗೆ ಬಂದಿದ್ದರು (ಆಗ ಅದನ್ನು ದೆಹಲಿ ಪೂರ್ವ ಪಂಜಾಬ್-ಕಮಾಂಡ್ ಎಂದು ಕರೆಯಲಾಗುತ್ತಿತ್ತು.) ಆಗ ಆ ವಲಯಕ್ಕೆ ಜಮ್ಮು ಕಾಶ್ಮೀರದಲ್ಲಿ ಕಾರ್ಯಾಚರಣೆ ನಡೆಸುವ ಜವಾಬ್ದಾರಿಯನ್ನು ಕೊಡಲಾಗಿತ್ತು.

"ಇನ್ನು ಕೆಲವೇ ದಿನಗಳಲ್ಲಿ ಕಾಶ್ಮೀರಕ್ಕೆ ಹೋಗುವೆನು" ಎಂದರು.

"ಕಾಶ್ಮೀರ ಸಮಸ್ಯೆಯನ್ನು ಅಹಿಂಸಾತ್ಮಕವಾಗಿ ಪರಿಹರಿಸುವುದರಲ್ಲಿ ನೀವು ಯಶಸ್ವಿಯಾಗು ತ್ತೀರೆಂದು ಆಶಿಸುವೆ," ಎಂದರು ಗಾಂಧೀಜಿ. "ಕಾಶ್ಮೀರದಿಂದ ಹಿಂತಿರುಗಿದ ನಂತರ ಬಂದು ನೋಡಿ" ಎಂದರು.

ಜನರಲ್ಲರು "ಜ್ಞಾನಕ್ಕಾಗಿ ಮಗುವಿನ ಮಾರ್ಗದರ್ಶಿಕೆ"ಯನ್ನು ಪಡೆಯುವ ವೇಳೆಯನ್ನು ಬಹು ಆಸಕ್ತಿಯಿಂದ ಎದುರು ನೋಡುತ್ತಿದ್ದರು. ಭಾರತದ ಅಹಿಂಸಾತ್ಮಕ ಹೋರಾಟದ ಜನರಲ್ಲರಿಂದ ಭಾರತೀಯ ಸೇನೆಯ ಜನರಲ್ಲರು ಅಹಿಂಸೆಯ ಕಾರ್ಯವಿಧಾನದ ಬಗ್ಗೆ ಪ್ರಥಮೋಪದೇಶ ಪಡೆಯುವ ಮತ್ತು ಯುದ್ಧವು ಯಾವ ಸಮಸ್ಯೆಯನ್ನೂ ಪರಿಹರಿಸದೆಂದು ಒಪ್ಪಿಕೊಂಡಿರುವ ಅವರಿಬ್ಬರೂ ಅದಕ್ಕೊಂದು ಅಹಿಂಸಾತ್ಮಕ ಪರ್ಯಾಯವನ್ನು ಕಂಡು ಹಿಡಿಯಲು ಜೊತೆಗೂಡಿ ಕೆಲಸ ಮಾಡುವ ಭಾವೀ ಪ್ರಸಂಗವೇ ಮನೋಹರವಾದುದಾಗಿತ್ತು. ಆ ಉದ್ದೇಶಕ್ಕಾಗಿಯೇ ಗಾಂಧೀಜಿ, ಬಾದ್‌ಷಾಖಾನರೊಡನೆಯೂ, ಗಡಿನಾಡಿನ ಹೋರಾಟಗಾರ ಪಠಾಣರೊಡನೆಯೂ ಜೊತೆಗೂಡಿದ್ದರು. ಅದೂ ಸಹ ಎಂಥ ಯಶಸ್ವಿ ಪ್ರಯತ್ನವಾಗಿತ್ತು !

ಅಹಿಂಸಾ ತತ್ವವನ್ನೊಪ್ಪಿ ಅದರಂತೆ ನಡೆಯಲಪೇಕ್ಷಿಸುವ ದೇಶದಲ್ಲಿ ಸೇನೆಯ ಪಾತ್ರವೇನಿರಬೇಕು ಮತ್ತು ಅಹಿಂಸಾತ್ಮಕ ಕಾರ್ಯತಂತ್ರಗಳಿಂದ ಆ ದೇಶದ ಬಲ ಮತ್ತು ಪ್ರಭಾವವನ್ನು ಹೆಚ್ಚಿಸುವ ಬಗ್ಗೆ ಹೇಗೆಂಬ ವಿಷಯದಲ್ಲಿ ಅವರು ಖಚಿತ ಅಭಿಪ್ರಾಯಗಳನ್ನಿಟ್ಟಿದ್ದರು. ಆದರೆ ದೈವ ಬಗೆದದ್ದೇ ಬೇರೆ. ಜನರಲ್ಲರು ೧೯೪೮ರ ಜನವರಿ ೩೦ನೇ ತಾರೀಖು ಮಧ್ಯಾಹ್ನ ಕಾಶ್ಮೀರದಿಂದ ಮರಳಿ, ಮರುದಿನ ರಾಜಘಾಟಿನಲ್ಲಿ ಅವರ ಪಾರ್ಥಿವ ಶರೀರವನ್ನಷ್ಟೇ ನೋಡಿದರು.

* * *



ಬೆಳಗಾಂವ ಕಾಂಗ್ರೆಸ್ ೧೯೨೪
ಶ್ರೀ ಗಂಗಾಧರರಾವ ದೇಶಪಾಂಡೆ ಅವರು ಗಾಂಧೀಜಿ ಅವರನ್ನು ಖಾದಿ ನಿರ್ಮಿತವಾದ ಕುಟೀರ ವಿದ್ಯಾರಣ್ಯಾಶ್ರಮಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ. ಅವರ ಜೊತೆಗೆ ಮೌ. ಮಹಮದ ಅಲಿ ಇದ್ದಾರೆ.



ಬೆಳಗಾಂವ ಕಾಂಗ್ರೆಸ್ ಅಧಿವೇಶನ ಕಾಲಕ್ಕೆ ಸ್ವಯಂ ಸೇವಕರ ಶಿಬಿರದಲ್ಲಿ (೧೯೨೪)



ಬೆಳಗಾವಿ ಕಾಂಗ್ರೆಸ್ ೧೯೨೪
ಸ್ಟೇಶನದಿಂದ ಕಾಂಗ್ರೆಸ್ ಅಧ್ಯಕ್ಷ ಗಾಂಧೀಜಿ ಮೆರವಣಿಗೆಯಲ್ಲಿ ಬರುತ್ತಿದ್ದಾರೆ.



ಬೆಳಗಾವಿ ಕಾಂಗ್ರೆಸ್ ೧೯೨೪, ಗಾಂಧೀಜಿಯವರೊಂದಿಗೆ ಕಾಂಗ್ರೆಸ್ಸಿನ ಜನರಲ್ ಸೆಕ್ರೆಟರಿ
ವಿಜಾಪುರದ ಶ್ರೀ ಮಧ್ವರಾವ ಕೆಂಭಾವಿ ಅವರೊಂದಿಗೆ



ಬೆಳಗಾಂವ ಕಾಂಗ್ರೆಸ್ ೧೯೨೪
ಗಾಂಧೀಜಿ-ಶೌಕತ್‌ಅಲಿಯೊಂದಿಗೆ ಎ.ಐ.ಸಿ.ಸಿ. ಅಧಿವೇಶನಕ್ಕೆ ಹೋಗುವಾಗ



ಬೆಳಗಾಂವ ಕಾಂಗ್ರೆಸ್,
೧೯೨೪
ಶ್ರೀ ಮದನಮೋಹನ
ಮಾಲವಿಯಾ ಮತ್ತು
ಗಾಂಧೀಜಿ



ಬೆಳಗಾಂವ ಕಾಂಗ್ರೆಸ್
೧೯೨೪
ಗಾಂಧೀಜಿ ಸ್ವಯಂ
ಸೇವಕರಿಗೆ ಬಿಲ್ಲೆ
ಹಚ್ಚುತ್ತಿದ್ದಾರೆ



ಕಾಂಗ್ರೆಸ್ ಅಧಿವೇಶನದಲ್ಲಿ ಹಿಂದಿನ ಅಧ್ಯಕ್ಷರಾದ ಮಹಮ್ಮದಾಲಿಯವರು ಗಾಂಧೀಜಿಗೆ
ಅಧಿಕಾರ ವಹಿಸುತ್ತಿರುವುದು-೧೯೨೪



ಬೆಳಗಾಂವ ಕಾಂಗ್ರೆಸ್ ೧೯೨೪
ಅಧಿವೇಶನಕ್ಕೆ ಮೌ. ಶೌಕತ ಅಲಿ, ಶ್ರೀಮತಿ ಸರೋಜಿನಿದೇವಿ ಮತ್ತು
ಶ್ರೀ ಪುರುಷೋತ್ತಮದಾಸ ಟಂಡನ್ ಅವರೊಂದಿಗೆ ಗಾಂಧೀಜಿ ಹೋಗುವುದು



ಬೆಳಗಾಂವ ಕಾಂಗ್ರೆಸ್ ಅಧಿವೇಶನ ಕಾಲಕ್ಕೆ ಗಾಂಧೀಜಿ ಸ್ವಯಂ ಸೇವಕರನ್ನು
ಉದ್ದೇಶಿಸಿ ಭಾಷಣ ಮಾಡುತ್ತಿದ್ದಾರೆ–೧೯೨೪



ಬೆಳಗಾಂವ
ಕಾಂಗ್ರೆಸ್, ೧೯೨೪
ಮೀಟಿಂಗಿಗೆ
ಹೋಗುತ್ತಿರುವುದು



ಬೆಳಗಾಂವ
ಕಾಂಗ್ರೆಸ್ ೧೯೨೪
ಗಾಂಧೀಜಿ
ಎ.ಐ.ಸಿ.ಸಿ.
ಮಂಟಪದ
ಮುಂಭಾಗದಲ್ಲಿ



ಬೆಳಗಾಂವ
ಕಾಂಗ್ರೆಸ್
ಅಧಿವೇಶನ
ಕಾಲಕ್ಕೆ ಗಾಂಧೀಜಿ
ಮಿತ್ರರೊಂದಿಗೆ
ಸಾಯಂಕಾಲ
ತಿರುಗಾಡಲಿಕ್ಕೆ
ಹೋಗುತ್ತಿರುವದು–
೧೯೨೪



ಬೆಳಗಾಂವ
ಕಾಂಗ್ರೆಸ್–೧೯೨೪
ಕಾಂಗ್ರೆಸ್ ಅಧ್ಯಕ್ಷರಾದ
ಗಾಂಧೀಜಿಯನ್ನು
ಶ್ರೀ ಗಂಗಾಧರರಾವ
ದೇಶಪಾಂಡೆ
ಬೀಳ್ಕೊಳ್ಳುತ್ತಿದ್ದಾರೆ.



ಬೆಳಗಾಂವ್ ಕಾಂಗ್ರೆಸ್
ಅಧಿವೇಶನದಲ್ಲಿ ಬಹಿರಂಗ
ಸಭೆಯಲ್ಲಿ ಗಾಂಧೀಜಿ
ಭಾಷಣ ಮಾಡುತ್ತಿದ್ದಾರೆ
೧೯೨೪



ಬೆಳಗಾಂವ ಕಾಂಗ್ರೆಸ್
ಅಧಿವೇಶನ ಕಾಲಕ್ಕೆ
ಗಾಂಧೀಜಿ–ಆನಿಬೆಸಂಟರೊಂದಿಗೆ
೧೯೨೪



ಗಾಂಧೀಜಿ ನಂದೀಬೆಟ್ಟದಲ್ಲಿ (೧೯೨೭)



ಬೆಂಗಳೂರು (೧೯೨೭) ಗಾಂಧೀಜಿ



ಗಾಂಧೀಜಿಯವರು ಚಿಕ್ಕಮಗಳೂರಿನ ಸಾರ್ವಜನಿಕ ಸಭೆಯಲ್ಲಿ (೧೯೨೭)



ಗಾಂಧೀಜಿ
ನಂದೀಬೆಟ್ಟದಲ್ಲಿ
(೧೯೨೭)



ನಂದೀಬೆಟ್ಟದಲ್ಲಿದ್ದಾಗ
ಗಾಂಧೀಜಿ
(೧೯೨೭)



ಗಾಂಧೀಜಿ
ಬೆಂಗಳೂರಿಗೆ ಬಂದಾಗ



ಬೆಂಗಳೂರಿನ ಮಲ್ಲೇಶ್ವರಂ ಅಸೋಸಿಯೇಷನ್‌ನಲ್ಲಿ ಗಾಂಧೀಜಿ (೧೯೩೪)



ಬೆಂಗಳೂರಿನ ಮಲ್ಲೇಶ್ವರಂ ಅಸೋಸಿಯೇಷನ್‌ನಲ್ಲಿ ಗಾಂಧೀಜಿ (೧೯೩೪)



ಹರಿಜನ ಪ್ರವಾಸಕಾಲಕ್ಕೆ ಗಾಂಧೀಜಿಯವರು ಮಂಗಳೂರಿನ ಸಾರ್ವಜನಿಕ ಸಭೆಯಲ್ಲಿ – ೧೯೩೪



ಹರಿಜನ ಪ್ರವಾಸಕಾಲಕ್ಕೆ ಗಾಂಧೀಜಿ ತಗಡೂರಿನ ಸಾರ್ವಜನಿಕ ಸಭೆಯಲ್ಲಿ ೧೯೩೪



ಹರಿಜನ ಪ್ರವಾಸಕಾಲಕ್ಕೆ ಗಾಂಧೀಜಿಯವರು ಬದನವಾಳ ಖಾದಿ ಕೇಂದ್ರಕ್ಕೆ ಭೇಟಿ ಕೊಟ್ಟಾಗ–೧೯೩೪



ಹರಿಜನ ಪ್ರವಾಸ, ಬಳ್ಳಾರಿಯಲ್ಲಿ ಗಾಂಧೀಜಿ–೧೯೩೪. ವೇದಿಕೆಯಲ್ಲಿ ಶ್ರೀ ಭೀಮರಾವ ಬಲ್ಲೋಣ ಮತ್ತು ಗಂಗಾಧರರಾವ ದೇಶಪಾಂಡೆ ಇದ್ದಾರೆ.



ಹರಿಜನ ಪ್ರವಾಸ. ವಿಜಾಪುರದಲ್ಲಿ ಗಾಂಧೀಜಿ–೧೯೩೪



ಹರಿಜನ ಪ್ರವಾಸಕಾಲಕ್ಕೆ ಗಾಂಧೀಜಿಯವರು ಕಾರವಾರಕ್ಕೆ ಭೇಟಿ ಕೊಟ್ಟಾಗ–೧೯೩೪



ಹರಿಜನ ಪ್ರವಾಸಕಾಲಕ್ಕೆ ಗಾಂಧೀಜಿಯವರು ಸಿರಸಿಗೆ ಭೇಟಿ ಕೊಟ್ಟಾಗ–೧೯೩೪



ಹರಿಜನ ಪ್ರವಾಸ, ವಿಜಾಪುರದಲ್ಲಿ ಗಾಂಧೀಜಿ, ೧೯೩೪



ಬೆಂಗಳೂರು ಸರ್ ಸಿ.ವಿ. ರಾಮನ್ನರ
ಸಂಶೋಧನ ಕೇಂದ್ರಕ್ಕೆ
ಗಾಂಧೀಜಿ ಭೇಟಿಕೊಟ್ಟಾಗ–೧೯೩೬
ಗಾಂಧೀಜಿ ಜೊತೆಗೆ
ಸರ್ ಸಿ.ವಿ. ರಾಮನ್ ಮತ್ತು
ಮಹದೇವ ದೇಸಾಯಿ.



೧೯೩೭ನೇ ಇಸ್ವಿಯಲ್ಲಿ
ಗಾಂಧೀ ಸೇವಾ ಸಂಘ
ಸಮ್ಮೇಲನ ಕಾಲಕ್ಕೆ
ವಿಪರೀತ
ಮಳೆಯಾದ್ದರಿಂದ
ತಾತ್ಪೂರ್ತಿಕ
ಗುಡಿಸಲುಗಳು
ಬಿದ್ದುಹೋದುವು.
ಗಾಂಧೀಜಿಯವರು
ತಮ್ಮ ಗುಡಿಸಲು ಬಿಟ್ಟು
ಮಳೆಯಲ್ಲಿಯೇ
ಕುಮರಿ ಆಶ್ರಮಕ್ಕೆ
ನಡೆದು
ಹೋಗುತ್ತಿದ್ದಾರೆ.



ಕುಮರಿ ಆಶ್ರಮದಲ್ಲಿ ಗಾಂಧೀಜಿ ಹರಿಜನ ಕರಿಯಪ್ಪನೊಂದಿಗೆ–೧೯೩೭



ಹುದಲಿ ಸಮ್ಮೇಲನ ಕಾಲಕ್ಕೆ ಗಾಂಧೀಜಿ ತರುಣ ಸಂಘದ ಕಾರ್ಯಕರ್ತರೊಂದಿಗೆ ಯುವಕರ ಸಂಘಟನೆಯ ಬಗ್ಗೆ ಮಾತನಾಡುತ್ತಿದ್ದಾರೆ. ೧೯೩೭



೧೯೩೭, ಹುದಲಿ ಸಮ್ಮೇಲನದ ಕೊನೆಯ ದಿನ ಸಾರ್ವಜನಿಕ ಸಭೆ.
ಟೊಂಕದ ಮೇಲೆ ಕೈಯಿಟ್ಟಿರುವವರು ಶ್ರೀ ಗಂಗಾಧರರಾವ ದೇಶಪಾಂಡೆ ಅವರು



ಹುದಲಿ ೧೯೩೭ ಮೊದಲ ದಿನ ಹುದಲಿ ಗಾಂಧೀ ಸೇವಾ ಸಂಘ ಸಮ್ಮೇಲನ
ಕಾಲಕ್ಕೆ ಸದಸ್ಯರು ಶ್ರಮದಾನಕ್ಕೆ ಹೊರಟ ದೃಶ್ಯ



ಎರಡನೆಯ ದಿನ ಹುದಲಿ ಸಮ್ಮೇಲನ ಕಾಲಕ್ಕೆ ಶ್ರಮದಾನ-೧೯೩೭



ಹುದಲಿಯಲ್ಲಿ
ಗಾಂಧೀಜಿಯವರು
ವೈದ್ಯರೊಂದಿಗೆ
ಮಾತನಾಡುತ್ತಿದ್ದಾರೆ
(೧೯೩೭)



ಹುದಲಿ ಸಮ್ಮೇಳನ ಕಾಲಕ್ಕೆ ಗಾಂಧೀಜಿಯವರು ಸಾಯಂಕಾಲ ತಿರುಗಾಡಲಿಕ್ಕೆ
ಹೋಗುತ್ತಿದ್ದಾರೆ - ೧೯೩೭

